॥ ಶ್ರೀ ಗಣೇಶ ಶಾರದಾಗುರುಭ್ಯೋನಮಃ ॥

# ಮುನ್ನುಡಿ

---

ಮಾನವನು ಸಂಸಾರದಲ್ಲಿರುತ್ತಾ ಸಾಧನೆಯಲ್ಲಿ ಮುಂದುವರಿಯುವುದು ಮಂಗಳಕರ. ಸಾಧನೆಯು ಮನುಷ್ಯನ ನಿಜವಾದ ಶಕ್ತಿಯನ್ನು ತೋರಿಸುವುದು. ಅದರಲ್ಲಿ ಆತ್ಮಸಾಧನೆಯು ಬಹು ಕಷ್ಟದದಾರಿ. ಅದಕ್ಕೆ ಸದ್ಗುರುವೊಬ್ಬನು ಬೇಕು. ಅವನನ್ನು ನಾವೇ ಹುಡುಕಿಕೊಂಡು ಹೋಗಿ ಸೇವಿಸಬೇಕು. " ನಾನು ಜ್ಞಾನೋಪದೇಶ ಮಾಡುತ್ತೇನೆ " ಎಂದು ಬರುವವನು ಪ್ರಾಯಶಃ ಸದ್ಗುರುವೆನಿಸಲಾರನು. ಸದ್ಗುರುವು ತಾನೂ ಆತ್ಮಸಾಧನೆಗೆ ತೊಡಗಿರುವನು, ಅವನು ಮತ್ತೊಬ್ಬರಿಗೆ ) ಉಪದೇಶಿಸಲು ಹೊರಡುವುದಿಲ್ಲ. ಆದರೆ ನಿಜವಾದ ಆತ್ಮಸಾಧಕನಿಗೆ ಅಂತಹ ಸದ್ಗುರುವು ತಾನಾಗಿಯೇ ಕಣ್ಣಿಗೆ ಬೀಳುವನು. ಆತ್ಮಸಾಧನೆಯೆನ್ನುವುದು ಜ್ಞಾನಮಾರ್ಗ. ಅದು ವಸ್ತುತಃ ಬಹುಕಷ್ಟ. ಅದಕ್ಕಿಂತ ಸಂಸಾರಿಗೆ ಸುಲಭವಾದ ಸಾಧನೆಯೆಂದರೆ ಭಕ್ತಿಮಾರ್ಗ. ಭಕ್ತಿ ಅಷ್ಟು ಕಷ್ಟವಲ್ಲ. ಈ ಜಗತ್ತಿಗೆ ಕರ್ತನು ನೀನೊಬ್ಬನೇ. ನಾನು ನಿನ್ನ ಕೈಬೊಂಬೆ, ಎಲ್ಲವೂ ನಿನ್ನದು, ನನ್ನದೆನ್ನುವ ವಸ್ತು ಯಾವುದು ಇಲ್ಲ. ಎಂದು ಹೇಳುವ ಮನೋಧರ್ಮವೇ ಭಕ್ತಿ. ಜ್ಞಾನದ ಮುಖ್ಯಧ್ಯೇಯ ನಿರಾಕಾರಬ್ರಹ್ಮವಾದರೆ, ಭಕ್ತಿಯ ಮುಖ್ಯ ಉಪಾಸ್ಯದೇವತೆ ಸಾಕಾರಬ್ರಹ್ಮ. ಈ ಎರಡರ ಧ್ಯೇಯವೂ ಬ್ರಹ್ಮವೇ, ಅದರಲ್ಲಿ ಹೆಚ್ಚು, ಕಡಿಮೆ ಎಂಬ ತಾರತಮ್ಯವಿಲ್ಲ. ಸಾಕಾರಬ್ರಹ್ಮವನ್ನು ಪೂಜಿಸಿದವನಿಗೂ ನಿರಾಕಾರಬ್ರಹ್ಮಸಾಕ್ಷಾತ್ಕಾರವೇ ಫಲವೆಂದೇ ಸಕಲ ಪುರಾಣಗಳೂ ಹೇಳುತ್ತಿವೆ. ದೃಢವಾದ ಭಕ್ತಿಗೆ ದೇವರು ವಶವಾಗುವುದು ನಿಶ್ಚಯ. ಆದರೆ ಸಂಸಾರಿಯು ಅಂತಹ ನಿಶ್ಚಲಭಕ್ತಿಯನ್ನು ಸಾಧಿಸುವುದು ಕಷ್ಟವಲ್ಲವೇ ? ಎನ್ನಬಹುದು ; ಕಷ್ಟವಿಲ್ಲ. ಭಕ್ತಿಗೆ ಬಹಳ ಹೊತ್ತುಬೇಕಿಲ್ಲ. ಹೊರೆಹೊತ್ತುಕೊಂಡು ಹೋಗುತ್ತಿರುವವನು ಎದುರಿಗೆ ಬಂದ ದೇವರ ಉತ್ಸವವನ್ನು ಅರೆಗಳಿಗೆ ನೋಡಿ ಭಕ್ತಿಪರವಶನಾದರೇ ಸಾಕು. ಅವನಿಗೆ ಮುಕ್ತಿ ದೊರೆಯುವುದೆಂದು ಪೌರಾಣಿಕರ ಅಭಿಪ್ರಾಯ. ಅದರಂತೆ ಸಂಸಾರಿಯು ತನಗೆ ಸಿಕ್ಕಿದ ವಿರಾಮಕಾಲದಲ್ಲಿ ಒಂದೆರಡು ಕ್ಷಣಕಾಲ ದೇವರನ್ನು ಧ್ಯಾನಿಸಿದರೂ ಸಾಕು ; ಅಂತಹ ಭಕ್ತಿಪುರಸ್ಸರವಾದ ಆರಾಧನೆಯನ್ನೇ ವ್ರತವೆನ್ನುವರು. ವೃಜ್-ವರಣೇ ಎಂಬ ಧಾತುನಿಷ್ಪನ್ನವಾದ ವ್ರತಶಬ್ದವು ವರಾಪೇಕ್ಷೆಯಿಂದ ಮಾಡುವ ಕರ್ಮವೆಂಬ ಅರ್ಥವನ್ನು ಕೊಡುವುದು. ಸಂಸಾರಿಗೆ ಐಹಿಕ ಸುಖಾನುಭವಕ್ಕೆ ದೇವರ ವರ (ಅನುಗ್ರಹ) ಬೇಕು. (ಅದೇ ವರವೇ ಆಮುಷ್ಮಿಕಸುಖವನ್ನೂ ಕೊಟ್ಟೀತು.) ಈ ಅಭಿಪ್ರಾಯದಿಂದಲೇ ಶ್ರೀ ಭವಿಷ್ಯಮಹಾಪುರಾಣದ ಈ ಭಾಗದಲ್ಲಿ ಸೂರ್ಯವ್ರತವು ಬಹುವಾಗಿ ಪ್ರತಿಪಾದಿಸಲ್ಪಟ್ಟಿರುವುದು.

ಈ ನಾಲ್ಕನೆಯ ಸಂಪುಟದ ಮುದ್ರಣದಿಂದ ಈ ಪುರಾಣದ ಬ್ರಾಹ್ಮಪರ್ವವು ಸಮಾಪ್ತವಾಗುವುದು. ಇದಕ್ಕಿಂತ ಹಿಂದಿನ ಸಂಪುಟಗಳಲ್ಲಿ ಪ್ರಪಂಚಸೃಷ್ಟಿಕ್ರಮ, ತಿಥ್ಯಾದಿ ಕಾಲವಿಭಾಗಗಳು, ಪ್ರತಿಯೊಂದು ತಿಥಿವಿಷಯಕವಾದ ಕಲ್ಪಗಳು, ಆಯಾತಿಥಿ ಸಂಬಂಧವಾದ ವ್ರತ, ಪೂಜಾದಿಗಳು, ಇವನ್ನು ಸಾಮಾನ್ಯವಾಗಿ ವಿವರಿಸುತ್ತಾ ಸಪ್ತಮೀವ್ರತಕಲ್ಪವನ್ನು ವಿಸ್ತಾರವಾಗಿ ಈ ಪರ್ವ ಪೂರೈಸುವವರೆಗೂ ನಿರೂಪಿಸ ಲಾಗಿವೆ. ಸೂರ್ಯಮಹಿಮಾ ವಿವರಣೆಯ ಸಂದರ್ಭದಲ್ಲಿ ಸಾಂಬೋಪಾಖ್ಯಾನವು ಹಲವು ಅಧ್ಯಾಯಗಳಲ್ಲಿ ನಿರೂಪಿತವಾಗಿದೆ. ಅಲ್ಲದೆ ಸೂರ್ಯನ ವಿಶ್ವರೂಪದರ್ಶನ, ಸೂರ್ಯಾವತಾರ, ಅವನ ಸರ್ವದೇವಶ್ರೇಷ್ಠತೆ, ವ್ಯಾಸಭೀಷ್ಮರ ಸಂವಾದರೂಪದಿಂದ ಆ ವಿಚಾರವಲ್ಲಿ ಏಳಬಹುದಾದ ಪ್ರಶ್ನೆ, ಅದಕ್ಕೆ ಸಮಾಧಾನ, ವರ್ಣಾಶ್ರಮಧರ್ಮ ನಿರೂಪಣೆ, ಸೌರಧರ್ಮಗಳು, ಸೂರ್ಯವ್ರತ ಪ್ರಭೇದಗಳು, ಅವುಗಳನ್ನು ಆಚರಿಸು ವುದರ ಮೂಲಕ ಭಕ್ತಿಮಾರ್ಗದಿಂದ ಮೋಕ್ಷಸಂಪಾದನೆಯು ಸುಲಭವೆಂಬ ವಿಚಾರವು ಕರತಲಾಮಲಕದಂತೆ ಈ ಪುರಾಣದಲ್ಲಿ ವಿಶೇಷವಾಗಿ ನಿರೂಪಿತವಾಗಿದೆ. ಮಾನವನು ಇವನ್ನೆಲ್ಲಾ ತಿಳಿದು ವಿವೇಕಯುಕ್ತವಾದ ಮಾರ್ಗವನ್ನು ಅನುಸರಿಸಿ ಇಹಪರಗಳನ್ನು ಸಾಧಿಸಿಕೊಳ್ಳಲು ಸಹಾಯಕವಾಗಿದೆ.

ಇಂತಹ ಅಪೂರ್ವವಿಷಯಗರ್ಭಿತವೂ, ಅಮೋಘವೂ ಆದ ರಹಸ್ಯಗಳನ್ನೊಳ ಗೊಂಡ ಪುರಾಣಗಳ ಅರಿವು ತಮ್ಮ ಪ್ರಜಾಕೋಟಿಗೆಲ್ಲಾ ಲಭಿಸಲಿ; ಸರ್ವರೂ ಈಶಾನುಗ್ರಹಕ್ಕೆ ಪಾತ್ರರಾಗಲಿ ಎಂಬ ಪರಮೋದ್ದೇಶದಿಂದಲೂ, ದೇವತೋಪಾಸಕ ರಿಗೂ ಭಕ್ತರಿಗೂ ಪ್ರಯೋಜನವಾಗಲಿ ಎಂಬ ಆಕಾಂಕ್ಷೆಯಿಂದಲೂ ಈ ಗ್ರಂಥಗಳನ್ನು ಬೆಳಕಿಗೆ ತಂದು ಪ್ರಜೆಗಳ ಜ್ಞಾನಭಂಡಾರವನ್ನು ಅಭಿವೃದ್ಧಿಪಡಿಸುವುದರಲ್ಲಿ ಬದ್ಧಾದರ ರಾದ **ನಮ್ಮನ್ನಾಳುವ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ, ಮಹಾಪ್ರಭು ಗಳವರಿಗೂ** ಅವರ ಕುಟುಂಬಕ್ಕೂ, ಬಂಧುವರ್ಗಕ್ಕೂ ಜಗನ್ಮಾತೆಯೆನಿಸಿದ ಕುಲದೇವತೆಯಾದ ಶ್ರೀ ಚಾಮುಂಡಾಂಬೆಯು ಆಯುರಾರೋಗ್ಯೈಶ್ವರ್ಯಾದಿ ಸಕಲ ಸನ್ಮಂಗಳಗಳನ್ನೂ ಕರುಣಿಸಲೆಂದು ಅನನ್ಯಭಾವದಿಂದ ಪ್ರಾರ್ಥಿಸುತ್ತೇನೆ.

ಸರ್ವಜಿನ್ನಾಮಸಂವತ್ಸರದ
ಆಷಾಢ ಬಹುಳ ಷಷ್ಠೀ ಬುಧವಾರ,
೯—೭—೧೯೪೭.

ಸಜ್ಜನ ವಿಧೇಯ,
**ಬಿ. ಚೆನ್ನಕೇಶವಯ್ಯ,**
ಆಸ್ಥಾನ ವಿದ್ವಾನ್,



YADAVAGIRI, MYSORE - 570 020

ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ
ಚತುರ್ಥ ಸಂಪುಟದಲ್ಲಿನ

# ವಿಷಯಾನುಕ್ರಮಣಿಕೆ.

ಪುಟ ಸಂಖ್ಯೆ

ಪುಟ ಸಂಖ್ಯೆ

ಪುಟ ಸಂಖ್ಯೆ

**ಇತಿ ಪ್ರಥಮಂ ಬ್ರಾಹ್ಮಪರ್ವ ಸಮಾಪ್ತಂ.**



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಚತ್ವಾರಿಂಶದುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

**ಅಥ ಸಾಂಬೋ ಮಹಾತೇಜಾ ದೃಷ್ಟ್ವಾ ಚಕ್ರಂ ಪಿತುಃ ಕರೇ ।**
**ಜ್ವಾಲಾಮಾಲಾಕರಾಲಂ ತು ಮಹತಾ ತೇಜಸಾನ್ವಿತಂ ॥ ೧ ॥**

**ಪಪ್ರಚ್ಛ ಪಿತರಂ ಸಾಂಬೋ ಭಕ್ತಿಶ್ರದ್ಧಾಸಮನ್ವಿತಃ ।**
**ಕುತಸ್ತಾತ ತ್ವಯಾ ಪ್ರಾಪ್ತಂ ಚಕ್ರಮಾದಿತ್ಯಸನ್ನಿಭಂ ॥ ೨ ॥**

**ಕಿಮರ್ಥಂ ವಹತೇ ದೇವ ದಿವ್ಯಮಾಯುಧಮುತ್ತಮಂ ।**
**ಏತದಾಖ್ಯಾಹಿ ಮೇ ಸರ್ವಂ ಶ್ರೋತುಕಾಮಸ್ಯ ಕೌತುಕಾತ್ ॥ ೩ ॥**

---

## ನೂರನಲವತ್ತೆಂಟನೆಯ ಅಧ್ಯಾಯ

೧. ಬಳಿಕ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು "ಅಯ್ಯಾ ರಾಜನೇ! ಕೇಳು ತೇಜಸ್ವಿಯಾದ ಸಾಂಬನು, ಜ್ವಾಲಾಮಾಲಾ ವ್ಯಾಪ್ತವಾದುದೂ ಮಹಾತೇಜಸ್ಸಿನಿಂದ ಕೂಡಿದುದೂ, ಆದ ಚಕ್ರವು ತಂದೆಯಾದ ಕೃಷ್ಣನ ಕೈಯಲ್ಲಿರುವುದನ್ನು ನೋಡಿದನು.

೨. ಸಾಂಬನು ಭಕ್ತಿಶ್ರದ್ಧೆಗಳಿಂದ ಕೂಡಿ ತಂದೆಯನ್ನು ಕುರಿತು "ಓ ತಂದೆಯೇ! ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳ ಈ ಚಕ್ರವು ನಿನಗೆ ಎಲ್ಲಿಂದ ಬಂದಿತು?

೩. ಈ ಉತ್ತಮವಾದ ದಿವ್ಯಾಯುಧವು ಯಾವ ಕೆಲಸವನ್ನು ಮಾಡುವುದು? ಏತಕ್ಕಾಗಿ ಇದನ್ನು ಧರಿಸುವೆ? ಇದನ್ನು ಕೇಳಲಿಚ್ಛಿಸುವ ನನಗೆ ಎಲ್ಲವನ್ನೂ ಹೇಳು" ಎಂದು ಕೇಳಲಾಗಿ,

॥ ವಾಸುದೇವ ಉವಾಚ ॥

ಸಾಧುಸಾಧು ಮಹಾಬಾಹೋ ಸಾಧುಪೃಷ್ಟೋಽಸ್ಮ್ಯಹಂ ತ್ವಯಾ ।
ಶೃಣುಷ್ವೈಕಮನಾಃ ಪುತ್ರ ಚಕ್ರಸ್ಯ ವಿಧಿನಿರ್ಣಯಂ ॥ ೪ ॥

ದಿವ್ಯಂ ವರ್ಷಸಹಸ್ರಂ ತು ಭಾನುಮಾರಾಧ್ಯ ಶ್ರದ್ಧಯಾ ।
ಪ್ರಾಪ್ತಂ ಚಕ್ರಂ ಮಯಾ ತಸ್ಮಾದ್ಭಾಸ್ಕರಾಲ್ಲೋಕಪೂಜಿತಾತ್ ॥ ೫ ॥

ನಭೋಗಃ ಪಂಚಕಾರೂಢಃ ಸ್ಥಿತಃ ಸಾಕ್ಷಾದ್ದಿವಾಕರಃ ।
ಗ್ರಹಾಃ ಸೋಮಾದಯೋ ಯಸ್ಯ ಸಂಸ್ಥಿತಾ ನಾಭಿಮಂಡಲೇ ॥ ೬ ॥

ಆದಿತ್ಯಾ ದ್ವಾದಶಸಮಾ ಅರೇಷು ಕ್ರಮಶಸ್ತಥಾ ।
ಪ್ರೋಕ್ತಂ ಪಥಿಷು ತತ್ತ್ವಾನಿ ಪೃಥಿವ್ಯಾದೀನಿ ಯಾನಿ ವೈ ॥ ೭ ॥

ಏತೈಸ್ತತ್ತ್ವೈಃ ಪರಿವ್ಯಾಪ್ತಂ ಚಕ್ರಂ ಕಾಲಾತ್ಮಕಂ ಪರಂ ।
ಸಂಕ್ಷೇಪಾತ್ತೇ ಮಯಾಖ್ಯಾತಂ ದತ್ತಂ ಚಕ್ರಮಿವಾಪರಂ ॥ ೮ ॥

---

೪. ಕೃಷ್ಣನು ಸಾಂಬನನ್ನು ಕುರಿತು "ಎಲೈ ಮಹಾಬಾಹುವಾದ ಪುತ್ರನೇ ! ನೀನು ನನ್ನನ್ನು ಪ್ರಶ್ನೆಮಾಡಿದ ವಿಚಾರ ಸಾಧುವಾದುದೇ ಆಗಿದೆ. ಈ ಚಕ್ರಹ ವಿಧಿ ನಿರ್ಣಯುವನ್ನು ಹೇಳುವೆನು. ಒಂದೇ ಮನಸ್ಸಿನಿಂದ ಕೇಳು.

೫. ನಾನು ದೇವಮಾನದ ಸಹಸ್ರ ವರ್ಷಗಳವರೆಗೆ ಶ್ರದ್ಧೆಯಿಂದ ಸೂರ್ಯ ನನ್ನು ಆರಾಧಿಸಿ ಲೋಕಪೂಜಿತನಾದ ಆ ಭಾಸ್ಕರನಿಂದ ನಾನು ಈ ಚಕ್ರವನ್ನು ಪಡೆದೆನು.

೬. ಸೂರ್ಯನು ರಥಾರೂಢನಾಗಿ ಆಕಾಶಮಾರ್ಗದಲ್ಲಿ ಪ್ರಯಾಣಮಾಡುತ್ತಿರು ವನಷ್ಟೆ. ಅವನ ನಾಭಿಮಂಡಲದಲ್ಲಿ ಚಂದ್ರಾದಿಗ್ರಹಗಳು ಇರುತ್ತವೆ.

೭. ಚಕ್ರದ ಅಂಗಗಳಲ್ಲಿ ಎಂದರೆ ಆರೆಕಾಲುಗಳಲ್ಲಿ ಕ್ರಮವಾಗಿ ದ್ವಾದಶಾದಿ ತ್ಯರು ಇರುವರು. ರಥಮಾರ್ಗಗಳಲ್ಲಿ ಪೃಥಿವ್ಯಾದಿ ತತ್ವಗಳು ಇರುತ್ತವೆ

೮. ಈ ತತ್ವಗಳಿಂದ ವ್ಯಾಪ್ತವೂ, ಕಾಲಾತ್ಮಕವೂ ಆದ ಶ್ರೇಷ್ಠವಾದ ಈ ಚಕ್ರವು ನನಗೆ ದೊರೆಯಿತು. ಅದು ದೊರೆತ ವಿಚಾರವನ್ನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ. ಆ ಚಕ್ರವು ಸೂರ್ಯದೇವನಿಗೆ ಸದೃಶವಾಗಿ ಚಕ್ರದಂತೆ ಇದ್ದಿತು." ಎಂದು ಹೇಳಿದನು.

॥ ಸಾಂಬ ಉವಾಚ ॥

ಕಥಂ ಕಾಲಮಯಂ ದೇವ ಚಕ್ರಂ ಕಮಲಮುಚ್ಯತೇ ।
ಇದಂ ತಾವನ್ಮಮಾಚಕ್ಷ್ವ ಜ್ಞಾತುಮಿಚ್ಛಾಮಿ ತತ್ತ್ವತಃ ॥ ೯ ॥

॥ ವಾಸುದೇವ ಉವಾಚ ॥

ಕಮಲಂ ಹ್ಯೃತುಭಿಃ ಷಡ್ಭಿಃ ಷಡ್ದಲಂ ಚಾಕ್ಷಯಾಶ್ರಿತಂ ।
ಪುರುಷಾಧಿಷ್ಠಿತಂ ತದ್ಧಿ ತತ್ರ ಸಾಂಗೋ ರವಿಃ ಸ್ಥಿತಃ ॥ ೧೦ ॥

ಯಚ್ಚ ಕಾಲತ್ರಯಂ ಲೋಕೇ ತನ್ನಾಭಿತ್ರಯಮುಚ್ಯತೆ ।
ಮಾಸಾ ಅರಾ ಮಹಾಬಾಹೋ ಪಕ್ಷಾಶ್ಚ ಪ್ರಧಯಃ ಸ್ಮೃತಾಃ ॥ ೧೧ ॥

ನೇಮೀ ಚೈವ ಪರೇ ಪ್ರೋಕ್ತೇ ಅಯನೇ ದಕ್ಷಿಣೋತ್ತರೇ ।
ಪಥಿ ನಾಭಿಷು ಯೋಗೇ ಚ ಯೋಗಾಖ್ಯಾಸ್ತಪನಾದಿಭಿಃ ॥ ೧೨ ॥

---

೯. ಆಗ ಸಾಂಬನು ಕೃಷ್ಣನನ್ನು ಪುನಃ ಪ್ರಶ್ನೆಮಾಡಲು ಯತ್ನಿಸಿ "ಸ್ವಾಮೀ ಕಾಲಮಯವಾದ ಚಕ್ರವನ್ನು ಕಮಲವೆಂದು ಹೇಗೆ ಹೇಳುವರು ? ಈ ವಿಚಾರವನ್ನು ನನಗೆ ಹೇಳು. ಇದರ ತತ್ತ್ವವನ್ನು ನಾನು ತಿಳಿಯಲಿಚ್ಛಿಸುತ್ತೇನೆ" ಎಂದನು.

೧೦. ಆಗ ವಾಸುದೇವನು ಸಾಂಬನಿಗೆ ಅದರ ತತ್ತ್ವವನ್ನು ನಿರೂಪಿಸತೊಡಗಿ "ವತ್ಸಾ! ಆ ಚಕ್ರವು ಆರು ಋತುಗಳೆಂಬ ಆರು ದಳಗಳಿಂದ ಕೂಡಿದ್ದೂ, ಅಕ್ಷಯನಾದ ಪರಮಾತ್ಮನನ್ನು ಆಶ್ರಯಿಸಿದುದೂ, ಮತ್ತು ಪರಮಪುರುಷನಿಂದ ಅಧಿಷ್ಠಿತವಾದುದೂ ಆಗಿದೆ. ಅದರಲ್ಲಿ ರವಿಯು ಅಂಗದೇವತಾಸಹಿತನಾಗಿ ಇದ್ದಾನೆ.

೧೧. ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲ, ಎಂಬ ಕಾಲತ್ರಯವೇ ಅದರ ನಾಭಿತ್ರಯ. ದ್ವಾದಶಮಾಸಗಳೇ ಆ ಚಕ್ರದ ಆರೆಕಾಲುಗಳೂ, ಪಕ್ಷಗಳೇ ಪ್ರಧಿಗಳೂ ಆಗಿವೆ.

೧೨. ದಕ್ಷಿಣಾಯನೋತ್ತರಾಯನಗಳೇ ಚಕ್ರದ ನೇಮಿಗಳಾಗಿವೆ. ಚಕ್ರಮಾರ್ಗದಲ್ಲೂ, ನಾಭಿಗಳಲ್ಲೂ, ತಪನಾದಿಗಳ ಸಂಬಂಧವಿರುವ (ತಪನಾದಿ) (?) ಯೋಗಗಳುಂಟಾಗುವುವು.

ನಕ್ಷತ್ರಾಣಿ ಗ್ರಹಾಶ್ಚೈವ ಸದಾ ಚಾತ್ರ ಸ್ಥಿತಾ ಸ್ಮೃತಾಃ ।
ಏತೈರ್ವ್ಯಾಪ್ತಮಿದಂ ಚಕ್ರಂ ಸ್ಥೂಲಸೂಕ್ಷ್ಮಪ್ರಭೇದತಃ ॥ ೧೩ ॥

ಅತ್ರೋದ್ದಿಷ್ಟೇಷು ಕಾಲೇಷು ಯೇನೋದ್ದಿಷ್ಟಾ ಮಯಾ ತವ ।
ಯುಗಾದಿಕಲ್ಪಪರ್ಯಂತಾಸ್ತೇಽಪಿ ಚಾತ್ರ ಸ್ಥಿತಾಃ ಕ್ರಮಾತ್ ॥ ೧೪ ॥

ಯತ್ತೇ ಕಾಲಾತ್ಮಕಂ ಚಕ್ರಮಿದಂ ಸಂಕ್ಷೇಪತೋ ಮಯಾ ।
ಕಥಿತಂ ತದ್ವಿನಿಷ್ಕ್ರಾಂತಂ ಪ್ರದೀಪ್ತಾತ್ಸೂರ್ಯಮಂಡಲಾತ್ ॥ ೧೫ ॥

ಅಸುರಾಣಾಂ ವಧಾಯೇದಂ ಮಯಾ ಲಬ್ಧಂ ದಿವಾಕರಾತ್ ।
ಆರಾಧ್ಯ ತಪಸಾ ಸೂರ್ಯಂ ಪುರಾ ಕಲ್ಪೇ ಜಗದ್ಗುರುಂ ।
ಅತಃ ಸಂಪೂಜಯಾಮ್ಯೇನಂ ಗೃಹೈಸ್ತೈರ್ವೃತಂ ಸದಾ ॥ ೧೬ ॥

ಅರ್ಕಂ ಭಕ್ತೋ ಹಿ ಚಕ್ರಸ್ಥಂ ಯಃ ಪೂಜಯತಿ ಭಕ್ತಿಮಾನ್ ।
ತೇಜಸಾ ರವಿಸಂಕಾಶಃ ಪುಷ್ಪೋತ್ತರಪುರಂ ವ್ರಜೇತ್ ॥ ೧೭ ॥

---

೧೩. ಶಾಸ್ತ್ರಗಳಲ್ಲಿ ಉಕ್ತವಾದ ಯುಗ ಮೊದಲುಗೊಂಡು ಕಲ್ಪಪರ್ಯಂತವಾಗಿರುವ ಕಾಲಾವಯವಗಳಲ್ಲಿ ನಾನು ಇನ್ನೂ ಅನೇಕವನ್ನು ನಿನಗೆ ಹೇಳಿಲ್ಲ ಅವೆಲ್ಲವೂ ಈ ಚಕ್ರದಲ್ಲೇ ಕ್ರಮವಾಗಿ ಸೇರಿವೆ.

೧೪. ನಕ್ಷತ್ರಗಳೂ ಗ್ರಹಗಳೂ ಸದಾ ಇದರಲ್ಲಿ ಇರುವುವು. ಸ್ಥೂಲ ಸೂಕ್ಷ್ಮ ಎಂಬ ಪ್ರಭೇದಗಳಿಂದ ಕೂಡಿದ ಈ ಚಕ್ರವು, ಮೇಲೆ ಹೇಳಿದುವುಗಳಿಂದ ವ್ಯಾಪ್ತವಾಗಿದೆ.

೧೫. ನಾನು ಕಾಲಚಕ್ರದ ವಿಚಾರವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಇದು ಪ್ರಜ್ವಲಿಸುವ ಸೂರ್ಯಮಂಡಲದಿಂದ ಉತ್ಪನ್ನವಾಯಿತೆಂದು ಉಕ್ತವಾಗಿದೆ.

೧೬. ಪೂರ್ವದಲ್ಲಿ ಪ್ರಳಯಕಾಲದಲ್ಲಿ ಜಗದ್ಗುರುವಾದ ಸೂರ್ಯನನ್ನು ತಪಸ್ಸಿನಿಂದ ಆರಾಧಿಸಿ, ಅಸುರರನ್ನು ಸಂಹರಿಸುವುದಕ್ಕಾಗಿ ನಾನು ಇದನ್ನು ಸೂರ್ಯನಿಂದ ಪಡೆದೆನು.

೧೭. ಯಾವ ಭಕ್ತನು ಚಕ್ರದಲ್ಲಿರುವ ಸೂರ್ಯನನ್ನು ಭಕ್ತಿಯಿಂದ ಪೂಜಿಸುವನೋ, ಅವನು ಸೂರ್ಯನಿಗೆ ಸಮನಾದ ತೇಜೋವಂತನಾಗಿ, ಪುಷ್ಪೋತ್ತರಪುರಕ್ಕೆ ಹೋಗುತ್ತಾನೆ.

ತೇ೦ ಮತ್ಕುಲಾನಂದಂ ಮಿತ್ರಂ ಸಂಪೂಜಯಾಮ್ಯಹಂ ।
ಗ್ರಹೈಸ್ತತ್ತ್ವೈರ್ವೃತಂ ಭಕ್ತ್ಯಾ ಸ್ವಮಂತ್ರೈ ಸತತಂ ವಿಭುಂ ॥ ೧೮ ॥

ಸಪ್ತಮ್ಯಾಂ ಚಕ್ರಮಾಲಿಖ್ಯ ಯೇ ಯಜಂತಿ ದಿವಾಕರಂ ।
ರಕ್ತಚಂದನಪೂರ್ಣೇನ ಕುಂಕುಮೇನ ಸುಗಂಧಿನಾ ॥ ೧೯ ॥

ಪಿಷ್ಟಗಂಧಾದಿಭಿರ್ವಾಪಿ ರಕ್ತವರ್ಣವಿಮಿಶ್ರಕೈಃ ।
ರಕ್ತೈಶ್ಚ ಕಮಲೈಃ ಶುದ್ಧೈಃ ಕರವೀರೈಃ ಸುಗಂಧಿಭಿಃ ॥ ೨೦ ॥

ಅನ್ಯೈರ್ವಾ ಕುಸುಮೈರ್ವನ್ಯೈಃ ಪ್ರತ್ಯಗ್ರೈರ್ಜಂತುವರ್ಜಿತೈಃ ।
ಅಪರ್ಯುಷಿತನಿಶ್ಛಿದ್ರೈಃ ಶುಭಧಾನ್ಯೈರ್ದಲೈರಪಿ ॥ ೨೧ ॥

ಫಲೈಃಪಕ್ವೈರೋಷಧಿಭಿಸ್ತಥಾ ದೂರ್ವಾಂಕುರೈಃ ಕುಶೈಃ ।
ಧೂಪೈಶ್ಚ ವಿವಿಧೈರ್ಗಂಧೈಸ್ತಥಾ ವಸ್ತ್ರೈಶ್ಚ ಭೂಷಣೈಃ ॥ ೨೨ ॥

---

೧೮. ಆದುದರಿಂದ ನನ್ನ ಕುಲಕ್ಕೆ ಆನಂದವುಂಟುಮಾಡತಕ್ಕವನೂ, ಗ್ರಹಗಳಿಂದಲೂ ಪೃಥಿವ್ಯಾದಿ ತತ್ತ್ವಗಳಿಂದಲೂ ಕೂಡಿದ ವಿಭುವೂ, ಆದ ಸೂರ್ಯನನ್ನು ಸೌರ ಮಂತ್ರಗಳಿಂದ ಯಾವಾಗಲೂ ನಾನು ಆರಾಧಿಸುತ್ತೇನೆ.

೧೯. ಯಾರು ಸಪ್ತಮಿಯ ದಿನ ಚಕ್ರವನ್ನು ಬರೆದು ಅದರಲ್ಲಿ ಸೂರ್ಯನನ್ನು ಆವಾಹನ ಮಾಡಿ, ರಕ್ತಚಂದನಕ್ಕೆ ಸುವಾಸನೆಯಾದ ಕೇಸರಿ ಮುಂತಾದುವನ್ನು ಕೂಡಿಸಿ ರಕ್ತವರ್ಣಯುಕ್ತವಾಗಿ ಮಾಡಿದ,

೨೦-೨೧. ಅಷ್ಟಗಂಧ, ಪಟವಾಸ, ಬುಕ್ಕಿಹಿಟ್ಟು ಮೊದಲಾದುವು; ಶುದ್ಧವಾದ ಹೂವುಗಳು, ಸುವಾಸನೆಯಾದ ಕೆಂಪುಕಮಲಗಳು, ಹೊಸದಾಗಿ ಅರಳಿ ಹುಳು ಮೊದಲಾದುವು ಹೊಡೆದ ರಂಧ್ರಗಳಿಲ್ಲದೆ ಶುಭಕರವಾದ ಕಣಿಗಲೆಹೂ, ಇತರ ವನ ಪುಷ್ಪಗಳು ಇವುಗಳಿಂದ ಪೂಜಿಸಿ, ಪಕ್ವವಾದ ಹಣ್ಣುಗಳು, ಓಷಧಿಗಳು, ದೂರ್ವಾಂಕುರಗಳು, ದರ್ಭೆಗಳು,

೨೨. ಸುವಾಸನಾಯುಕ್ತಗಳಾದ ಬಗೆಬಗೆಯ ಧೂಪಹಾಕಿ, ಪಾನೀಯಗಳು, ಚೋಷ್ಯಗಳು (ಸೊರೆಯುತ್ತಾ ತಿನ್ನುವವಸ್ತು) ಲೇಹ್ಯಗಳು, ಇವುಗಳನ್ನು ಶಕ್ತ್ಯನುಸಾರ ನಿವೇದನಮಾಡಬೇಕು.

ಭಕ್ಷ್ಯೈರ್ಭೋಜ್ಯೈಶ್ಚ ಪೇಯೈಶ್ಚ ಚೋಷ್ಯಲೇಹ್ಯೈಸ್ವಶಕ್ತಿತಃ ।
ವಿತಾನಶೋಭಾನಿಕರೈಃ ಪಲಾಶೈರುಪಶೋಭಿತೈಃ ॥ ೨೩ ॥

ಛತ್ರಚಾಮರಘಂಟಾಭಿರ್ಭೂಷಣೈರ್ದರ್ಪಣಾದಿಭಿಃ ।
ನೃತ್ಯವಾದಿತ್ರಗೀತೈಶ್ಚ ವೇದೈಃ ಪುಣ್ಯಕಥಾಸ್ವನೈಃ ॥ ೨೪ ॥

ಸರ್ವತ್ರ ಜಯಘೋಷೈಶ್ಚ ಸಂಪೂರ್ಣೇ ಪೂಜಯಂತಿ ಯೇ ।
ಸಂಪೂರ್ಣಾನ್ ವಿವಿಧಾನ್ ಕಾಮಾನ್ ನಿರ್ವಿಘ್ನಾನ್ ಪ್ರಾಪ್ನುವಂತಿ ತೇ
॥ ೨೫ ॥

ಸ್ವಚಕ್ರಂ ಚಾಪಿ ನಿರ್ವಿಘ್ನಂ ವೃದ್ಧಿಮಾಯಾತಿ ಸುವ್ರತ ।
ಹನ್ಯತೇ ಪರಚಕ್ರಂ ಚ ಯತ್ರೇದಂ ಪೂಜ್ಯತೇ ಸಕೃತ್ ॥ ೨೬ ॥

ಸಂಕ್ರಾಂತೌ ಗ್ರಹಣೇ ಚಾಪಿ ಲಿಖಿತ್ವಾ ಯೋ ಜಪೇದಿದಂ ।
ಭವಂತಿ ನಿಯತಾಃ ಸಾಂಬ ತಸ್ಯ ಸಾನುಗ್ರಹಾಃ ಗ್ರಹಾಃ ॥ ೨೭ ॥

---

೨೪-೨೫. ಚಾಮರಗಳು, ಘಂಟೆಗಳು, ಆಭರಣಗಳು, ಕನ್ನಡಿ ಮೊದಲಾದ ಭೂಷಣಗಳು ಇವನ್ನು ಸಮರ್ಪಿಸಿ; ನೃತ್ಯ, ಗಾನ, ವಾದ್ಯಗಳು, ವೇದಘೋಷ, ಪುರಾಣವಾಚನ, ಸರ್ವತ್ರ ಜಯಘೋಷಗಳು, ಇವುಗಳ ಸಹಿತ ಪೂಜಿಸಬೇಕು. ಈ ಪ್ರಕಾರ ಪೂಜಿಸುವವರು ಯಾವ ವಿಘ್ನವೂ ಇಲ್ಲದೆ ತಮ್ಮ ನಾನಾ ಇಷ್ಟಾರ್ಥಗಳನ್ನೂ ಸಂಪೂರ್ಣವಾಗಿ ಹೊಂದುತ್ತಾರೆ.

೨೬. ಅಯ್ಯಾ ಸುವ್ರತನೇ ! ಹೀಗೆ ಒಂದು ಸಾರಿ ಪೂಜೆಯನ್ನು ನಡೆಯಿಸಿದ ಮಾತ್ರದಿಂದಲೇ ಆ ಸ್ಥಳದಲ್ಲಿ ನಿರ್ವಿಘ್ನವಾಗಿ ಸ್ವರಾಷ್ಟ್ರದ ವೃದ್ಧಿಯೂ ಪರರಾಷ್ಟ್ರದ ನಾಶವೂ ಉಂಟಾಗುವುದು.

೨೭. ಎಲೈ ಸಾಂಬನೇ! ಕೇಳು; ಸಂಕ್ರಮಣ ಗ್ರಹಣ ಮುಂತಾದ ಪರ್ವಕಾಲ ಗಳಲ್ಲಿ, ಯಾವನು ಈ ಚಕ್ರವನ್ನು ಬರೆದು ತ್ರಿಚಮಂತ್ರವನ್ನು ಜಪಿಸುವನೋ, ಅವ ನಿಗೆ ಎಲ್ಲ ಗ್ರಹಗಳ ಅನುಗ್ರಹವೂ ಉಂಟಾಗುವುದು.

**ರೋಗವಿಹೀನಸ್ತು ಸರ್ವದುಃಖ ವಿವರ್ಜಿತಃ ।**
**ಚಿರಂ ಜೀವತಿ ಧರ್ಮಾತ್ಮಾ ಸರ್ವೈಶ್ವರ್ಯಸಮನ್ವಿತಃ** ॥ ೨೮ ॥

**ಏಷ ವ್ವೈ ಕಥಿತೋ ವತ್ಸ ಚಕ್ರಯೋಗೇ ಮಯಾ ತವ ।**
**ಅರ್ಕಸ್ಯ ಸರ್ವಯಜ್ಞಾನಾಂ ಶ್ರೇಷ್ಠಃ ಸಿದ್ಧಿಪ್ರದೋ ಭೃಶಂ** ॥ ೨೯ ॥

**ಪುಣ್ಯೋ ಧರ್ಮ್ಯಸ್ತಥಾ ಪುಷ್ಟ್ಯಃ ಶತ್ರುಘ್ನಶ್ಚ ವಿಶೇಷತಃ ।**
**ಶ್ವೇತೋ ರಕ್ತೋಥ ಪೀತಶ್ಚ ಕೃಷ್ಣಶ್ಚಾಪಿ ವಿಭಾಗಶಃ** ॥ ೩೦ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾ**
**ಖ್ಯಾನೇ ಕಾಲ ಚಕ್ರವರ್ಣನಂ ನಾಮಾಷ್ಟಚತ್ವಾರಿಂಶದುತ್ತರ**
**ಶತತಮೋಽಧ್ಯಾಯಃ.**



---

೨೮. ಮತ್ತು ಅವನು ಯಾವ ರೋಗವೂ ಇಲ್ಲದೆ, ಯಾವ ದುಃಖಕ್ಕೂ ಗುರಿಯಾಗದೆ ಸಕಲೈಶ್ವರ್ಯಗಳಿಂದ ಕೂಡಿದವನಾಗಿ ಧರ್ಮಾತ್ಮನೆನಿಸಿಕೊಂಡು ಬಹುಕಾಲ ಬದುಕುವನು.

೨೯. ಅಯ್ಯಾ ವತ್ಸನೇ! ನಾನು ನಿನಗೆ ಸೂರ್ಯಚಕ್ರದ ವಿಚಾರವನ್ನು ಹೇಳಿ ಆಯಿತು. ಇದು ಸರ್ವಯಜ್ಞಗಳಲ್ಲಿಯೂ ಶ್ರೇಷ್ಠವೂ, ಅತ್ಯಂತ ಸಿದ್ಧಿಪ್ರದವೂ ಪುಣ್ಯಕರವೂ, ಧರ್ಮವನ್ನು ಮೀರದುದೂ, ಪುಷ್ಟಿಪ್ರದವೂ, ಶತ್ರುನಾಶಕರವೂ ಆಗಿದೆ.

೩೦. ಇದರ ಬೇರೆಬೇರೆ ಭಾಗಗಳಲ್ಲಿ ಬಿಳುಪು, ಕೆಂಪು, ಹಳದಿ, ಕಪ್ಪು ಎಂಬ ನಾನಾಬಣ್ಣಗಳನ್ನು ಉಳ್ಳದ್ದು ಆಗಿದೆ ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ
ಕಾಲಚಕ್ರವರ್ಣನೆಯೆಂಬ ನೂರನಲವತ್ತೆಂಟನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನಪಂಚಾಶದುತ್ತರಶತತಮೋಽಧ್ಯಾಯಃ

---

ಕಿಂ ಪ್ರಮಾಣಂ ಲಿಖೇಚ್ಚಕ್ರಂ ತತ್ರ ಪದ್ಮಂ ಚ ಕಿಂ ಭವೇತ್ ।
ನೇಮಿ ಪ್ರಧ್ಯರ ನಾಭೀನಾಂ ವಿಭಾಗಃ ಕ್ರಿಯತೇ ಕಥಂ ॥ ೧ ॥

॥ ವಾಸುದೇವ ಉವಾಚ ॥

ಚತುಃಷಷ್ಟ್ಯಂಗುಲಂ ಚಕ್ರಂ ಕೃತ್ವಾ ವೃತ್ತಂ ಪ್ರಮಾಣತಃ ।
ಅಷ್ಟಾಂಗುಲಾ ಭವೇನ್ನೇಮಿಃ ಸೇಯಂ ವಿಭವತಃ ಸದಾ ॥ ೨ ॥

ನಾಭಿಕ್ಷೇತ್ರಂ ತಥೈವ ಸ್ಯಾತ್ಪದ್ಮಂ ತತ್ರಿಗುಣಂ ಭವೇತ್ ।
ಅರಕ್ಷೇತ್ರ ಚ ಪದ್ಮಸ್ಯ ಕರ್ಣಿಕಾಕೇಸರಾಣಿ ಚ ॥ ೩ ॥

---

### ನೂರನಲವತ್ತೊಂಬತ್ತನೆಯ ಅಧ್ಯಾಯ

೧. ಸಾಂಬನು ಕೃಷ್ಣನನ್ನು ಕುರಿತು "ಚಕ್ರವನ್ನು ಯಾವ ಪ್ರಮಾಣದಲ್ಲಿ ಬರೆಯಬೇಕು? ಆ ಚಕ್ರದಲ್ಲಿ ಅಷ್ಟದಳ, ಷೋಡಶದಳ ಮೊದಲಾದ ಬಗೆಗಳಲ್ಲಿ ಯಾವ ಬಗೆಯು ಪದ್ಮವಿರಬೇಕು? ನೇಮಿ, ಪ್ರಧಿ, ಅರ, ನಾಭಿ ಇವುಗಳ ವಿಭಾಗವನ್ನು ಮಾಡುವುದು ?" ಹೇಗೆ ಎಂದನು.

೨. ಅದಕ್ಕೆ ವಾಸುದೇವನು ಈರೀತಿ ಹೇಳಿದನು—ಅರವತ್ತುನಾಲ್ಕು ಅಂಗುಲ ಪ್ರಮಾಣವುಳ್ಳ ದುಂಡಾದ ಚಕ್ರವನ್ನು ರಚಿಸಬೇಕು. ಎಲ್ಲಾ ಕಡೆಯೂ ಅದರ ನೇಮಿಯು ಎಂಟು ಅಂಗುಲ ವಿಸ್ತಾರವುಳ್ಳದ್ದಾಗಿರಬೇಕು.

೩. ಚಕ್ರನಾಭಿಯು ಅದೇ ಪ್ರಮಾಣವಿರಬೇಕು. ರಚಿಸುವ ಪದ್ಮವು ಅದರ ಮೂರರಷ್ಟಿರಬೇಕು. ಆ ಚಕ್ರದ ಅರೆಕಾಲುಗಳು ಸೇರುವ ಮಧ್ಯಸ್ಥಳವಾದ ಗುಂಬವೇ ಪದ್ಮದ ಕರ್ಣಿಕೆಯು ಮತ್ತು ಕೇಸರದ ಸ್ಥಾನಗಳು.

ಕೇಸರಸ್ಯ ಚ ಪಾದೇನ ಶೇಷಪತ್ರಾಣಿ ಕಲ್ಪಯೇತ್ ।
ಪತ್ರಸಂಧಿಶ್ಚ ಪಾದಾಂಗಂ ಕ್ರಮಾತ್ತತ್ರಾಪಿ ಭಿದ್ಯತೇ ॥ ೪ ॥

ಉನ್ನತಂ ಕಮಲಂ ತತ್ತು ಕುರ್ಯಾನ್ನಾಭ್ಯಾಂ ನಸಂಶಯಃ ।
ಆಕೀರ್ಣಾಃ ಸಂವಿಭಕ್ತಾಶ್ಚ ಕರ್ತವ್ಯಾಃ ಪ್ರಧಯಃ ಕ್ರಮಾತ್ ॥ ೫ ॥

ಅಂಗುಲಸ್ಥೂಲಮೂಲಂ ಸ್ಯಾದರಾಗ್ರಂ ತ್ರಿಗುಣಂ ತತಃ ।
ಭೂಮಿಃ ಪೀತಾ ಬಹಿರ್ಜ್ಞೇಯಾ ಕರ್ಣಿಕಾಕೇಸರಾಣಿ ಚ ॥ ೬ ॥

ಸಿತಂ ನಾಭಿಸ್ಥಲಂ ತತ್ರ ದ್ವಾರಾಣಿ ಪರಿಕಲ್ಪಯೇತ್ ।
ಹಸ್ತಮಾತ್ರಂ ಭವೇತ್ತಸ್ಯ ತನ್ಮಾನಂ ದ್ವಾರಸನ್ನಿಭಂ ॥ ೭ ॥

ಶೇಷಂ ರಕ್ತಂ ಸಮುದ್ದಿಷ್ಟಂ ಸಂಹತಾಃ ಪತ್ರಸಂಧಯಃ ।
ನಾಭಿನೇಮ್ಯಂತರೇ ಲೇಖಾಃ ಸಿತಾಶ್ಚಾಂಗುಲ ಮಾನತಃ ॥ ೮ ॥

---

೪. ಕಮಲದ ಕೇಸರದ ಪಾದದಿಂದ ಉಳಿದ ಎಸಳುಗಳನ್ನು ರಚಿಸಬೇಕು. ಎಸಳುಗಳು ಸೇರುವ ಸ್ಥಳವೂ, ಕೇಸರದ ಬುಡವೂ ಕ್ರಮವಾಗಿ ಭೇದಿಸಲ್ಪಡುವಂತೆ ಇರಬೇಕು. ನಾಭಿಪ್ರದೇಶವು ಉನ್ನತವಾಗಿರುವಂತೆ ಕಮಲವನ್ನು ರಚಿಸಬೇಕು.

೫. ಪ್ರಧಿಗಳು ಕ್ರಮವಾಗಿ ಪ್ರತ್ಯೇಕವಾಗಿ ಹರಡಿದಂತೆ ರಚಿಸಬೇಕು. ಆರೆ ಕಾಲುಗಳ ಬುಡವು ಸ್ಥೂಲವಾಗಿರುವ ಹಾಗಿರಬೇಕು ಎಂದರೆ ತುದಿಯ ಮೂರರಷ್ಟು ಗಾತ್ರವಿರಬೇಕು.

೬-೭. ಕರ್ಣಿಕಾ ಕೇಸರಗಳ ಹೊರಗಿನ ಬಣ್ಣವು ಹಳದಿಯಾಗಿರುವಂತೆಯೂ, ನಾಭಿಪ್ರದೇಶವು ಬಿಳಿಯಬಣ್ಣವಾಗಿರುವಂತೆಯೂ, ರಚಿಸಿ ದ್ವಾರಗಳನ್ನು ಕಲ್ಪಿಸಬೇಕು. ಅದರ ಅಳತೆಯು ಹಸ್ತಪ್ರಮಾಣವುಳ್ಳದ್ದಾಗಿಯೋ ಇಲ್ಲವೇ ದ್ವಾರದ ಅಳತೆಗೆ ಅನುರೂಪವಾಗಿಯೋ ಇರಬೇಕು. ಉಳಿದ ಭಾಗವೆಲ್ಲಾ ಕೆಂಪಾಗಿರಬೇಕೆಂದು ಹೇಳಿದೆ.

೮. ಎಸಳುಗಳ ಸಂಧಿಸ್ಥಳವು ಕೂಡಿಕೊಂಡಿರಬೇಕು. ನಾಭಿ ನೇಮಿ ಇವುಗಳ ಮಧ್ಯದಲ್ಲಿ ಒಂದಂಗುಲ ಪ್ರಮಾಣದ ಬಿಳಿಯರೇಖೆಗಳನ್ನು ಚಿತ್ರಿಸಬೇಕು. ಸುತ್ತಲೂ ಅಂದವಾಗುವಂತೆ ಬಿಳುಪು, ಕೆಂಪು, ಕಪ್ಪು ಈ ಬಣ್ಣಗಳನ್ನು ಅಲ್ಲಲ್ಲಿ ಹಚ್ಚಬೇಕು.

ಸಿತರಕ್ತಾಸಿತಾಭಿಶ್ಚ ಸಮಂತಾದುಪಶೋಭಿತಂ ।
ಕಪೋಲಂ ದ್ವಾರಪದ್ಮಂ ಚ ದ್ವಾರಕೋಣೇಪ್ರಕಲ್ಪಯೇತ್ ॥ ೯ ॥

ಚತುರ್ದ್ವಾರಂ ಭವೇದೇವಮ್ಯೆಂದ್ರದ್ವಾರಂ ಪ್ರಕಲ್ಪಯೇತ್ ।
ಅಪರಾಹ್ಣೇऽಥ ಪೂರ್ವಾಹ್ಣೇऽರುಣಮಾವಾಹಯೇತ್ಸದಾ ॥ ೧೦ ॥

ದ್ವಾರಾಣ್ಯೇತಾನಿ ಸಂವರ್ತ್ಯ ಯಥೋಕ್ತವಿಧಿನಾ ಯಜೇತ್ ।
ಯಥೋಕ್ತಾ ದೇವತಾಃ ಸರ್ವಾಃ ಸ್ವಮಂತ್ರೈರೇವ ಭಕ್ತಿತಃ ॥ ೧೧ ॥

ಚಕ್ರಮೇವಂ ಸಮುದ್ದಿಷ್ಟಂ ಯಜನಾರ್ಥಂ ಮಯಾ ತವ ।
ಯಜ್ಞೇನಾನೇನ ಸಂಬದ್ಧೋ ದೀಕ್ಷಿತಶ್ಚಾರ್ಕಮಂಡಲೇ ॥
ಇತ್ಥಂ ಮೇ ಭಾನುನಾ ಪೂರ್ವಮಿದಮುಕ್ತಂ ವರಾನನ ॥ ೧೨ ॥

॥ ಸಾಂಬ ಉವಾಚ ॥

ಕೇ ಮಂತ್ರಾಶ್ಚಕ್ರಯಜ್ಞೇऽಸ್ಮಿನ್ ದೇವತಾನಾಂ ಪ್ರಕೀರ್ತಿತಾಃ ।
ಯಜ್ಞಕ್ರಮಶ್ಚ ಕಃ ಪ್ರೋಕ್ತೋ ರೂಪಂ ಕಿಂ ಚ ಪೃಥಕ್ ಪೃಥಕ್ ॥ ೧೩ ॥

---

೯. ಕಪೋಲವನ್ನೂ ದ್ವಾರದಲ್ಲಿ ಬರೆಯಬೇಕಾದ ಪದ್ಮವನ್ನೂ ದ್ವಾರಕೋಣ ದಲ್ಲಿ ರಚಿಸಬೇಕು.

೧೦. ಅದಕ್ಕೆ ನಾಲ್ಕುದ್ವಾರಗಳಿರಬೇಕು. ಪೂರ್ವದಿಕ್ಕಿನ ದ್ವಾರದಲ್ಲಿ ಈಗ ಹೇಳಿದಂತೆ ಮಾಡಬೇಕು. ಅಪರಾಹ್ಣದಲ್ಲಿ ಪೂಜಿಸಲಿ, ಪೂರ್ವಾಹ್ಣದಲ್ಲಿ ಪೂಜಿಸಲಿ, ಸದಾ ಅರುಣನನ್ನು ಮೊದಲು ಆವಾಹನ ಮಾಡಬೇಕು.

೧೧. ಇದೇ ರೀತಿ ಮಿಕ್ಕದ್ವಾರಗಳಲ್ಲಿಯೂ ಕಲ್ಪಿಸಿ ಉಕ್ತವಿಧಿಯಿಂದ ಪೂಜಿಸಬೇಕು. ಉಕ್ತರಾದ ದೇವತೆಗಳನ್ನು ಆಯಾ ದೇವತೆಗಳ ಮಂತ್ರಪೂರ್ವಕವಾಗಿ ಆವಾಹನಮಾಡಿ, ಭಕ್ತಿಯುತನಾಗಿ ಪೂಜಿಸಬೇಕು.

೧೨. ಅಯ್ಯಾ ಶ್ರೇಷ್ಠವಾದ ಮುಖವುಳ್ಳವನೇ ! ನೀನು ಪೂಜಿಸುವುದಕ್ಕೋಸ್ಕರವಾಗಿ ರಚಿಸಬೇಕಾದ ಭಾಸ್ಕರಚಕ್ರಸ್ವರೂಪವನ್ನು ಹೀಗೆ ವಿವರಿಸಿದ್ದೇನೆ. ಈ ಯಜ್ಞದಲ್ಲಿ ನಿರತನಾಗಿ, ಸೂರ್ಯದೀಕ್ಷೆಯನ್ನು ವಹಿಸಿ ಪೂಜೆಮಾಡಬೇಕು. ಪೂರ್ವದಲ್ಲಿ ಸೂರ್ಯನೇ ಈ ಪ್ರಕಾರ ನನಗೆ ಹೇಳಿದ್ದನು ಎಂದನು.

೧೩. ಆಗ ಸಾಂಬನು ಕೃಷ್ಣನನ್ನು ಕುರಿತು " ಈ ಚಕ್ರಪೂಜಾ ಯಜ್ಞದಲ್ಲಿ ಯಾವ ದೇವತಾಮಂತ್ರಗಳನ್ನು ಪ್ರಯೋಗಿಸಬೇಕೆಂದು ಹೇಳಿದ್ದಾರೆ? ಯಜ್ಞ

॥ ವಾಸುದೇವ ಉವಾಚ ॥

**ಖಷೋಲ್ಕಂ ಹೃದಯಾಧ್ಯಕ್ಷಂ ಪೂರ್ವೋಕ್ತೇ ಕಮಲೇ ಯಜೇತ್ ।**
**ಕರ್ಣಿಕಾಯಾಂ ದಲೇಷ್ವೇವಮಂಗಾನಿ ಹೃದಯಾದಿ ಚ ॥ ೧೪ ॥**

**ನಾಮಮಂತ್ರಾಶ್ಚತುರ್ಥ್ಯಂತಾಸ್ತೇಷಾಂ ಪೂರ್ವೋಕ್ತಕೋಟಯಃ ।**
**ನಮಸ್ಕಾರಶ್ಚ ಸರ್ವತ್ರ ಏಷ ಏವ ವಿಧಿಃ ಸ್ಮೃತಃ ॥ ೧೫ ॥**

**ಸ್ವಾಹಾಂತಾ ಹೋಮಕಾಲೇ ಚ ಕರ್ಮಸ್ವನ್ಯೇಷು ತೇ ಪುನಃ ।**
**ಯಥಾ ಕರ್ಮಾವಸಾನಾಶ್ಚ ಪ್ರಯೋಕ್ತವ್ಯಾಃ ಸಮಾಸತಃ ॥ ೧೬ ॥**

**ಓಂ ಖಷೋಲ್ಕಾಯ ವಿದ್ಮಹೇ, ದಿವಾಕರಾಯ ಧೀಮಹೀ ।**
**ತನ್ನಂ ಸೂರ್ಯಃ ಪ್ರಚೋದಯಾತ್ ॥ ೧೭ ॥**

---

ಮಾಡುವ ಕ್ರಮವು ಯಾವುದೆಂದು ಹೇಳಿದೆ? ಯಜ್ಞಸ್ವರೂಪವು ಎಂಥದು ? ಇವನ್ನೆಲ್ಲಾ ಪ್ರತ್ಯೇಕಪ್ರತ್ಯೇಕವಾಗಿ ಹೇಳು" ಎಂದು ಕೇಳಿದನು.

೧೪. ಆಗ ವಾಸುದೇವನು ಉತ್ತರ ಹೇಳುವವನಾಗಿ "ಹೃದಯಾಧ್ಯಕ್ಷನಾದ ಖಷ್ಕೋಲ್ಕನನ್ನು ಪೂರ್ವೋಕ್ತಕಮಲದಲ್ಲಿ ಪೂಜಿಸಬೇಕು. ಕರ್ಣಿಕೆ, ದಳಗಳು ಇವುಗಳಲ್ಲಿ, ಹೀಗೆ ಹೃದಯಾದಿ ಅಂಗಗಳನ್ನು ವಿನ್ಯಾಸಮಾಡಿಕೊಳ್ಳಬೇಕು.

೧೫. ಚತುರ್ಥ್ಯಂತಗಳಾದ ನಾಮಗಳೊಡನೆ, ಮಂತ್ರದ ಕೋಟಿಗಳನ್ನು ಎಂದರೆ ಬೀಜ, ಶಕ್ತಿ, ಕೀಲಕ ಮುಂತಾದುವುಗಳನ್ನು ಸೇರಿಸಿ, ನ್ಯಾಸಮಾಡಿಕೊಳ್ಳಬೇಕು. ನಮಃ ಎಂಬ ನಮಸ್ಕಾರಸೂಚಕವಾದ ಶಬ್ದವು ಸರ್ವತ್ರ ಇರಬೇಕು. ಇದೇ ವಿಧಿಯೆಂದು ಉಕ್ತವಾಗಿದೆ.

೧೬. ಜಪಕಾಲದಲ್ಲಿ ನಮಃ ಎಂಬದು ಅಂತವಾಗಿರಬೇಕೆಂದು ಹೇಳಿತು. ಹೋಮಕಾಲಗಳಲ್ಲಿ ಸ್ವಾಹಾ ಎಂಬುದು ಅಂತವಾಗಿರುವ ಹಾಗೆ ವಿಂಗಡಿಸಿಕೊಂಡು ಹೇಳಿ, ಜಪ ಹೋಮಗಳನ್ನು ನಡೆಸಬೇಕು. ಜಪಕರ್ಮದ ಕೊನೆಯಲ್ಲಿಯೂ,ಹೋಮಕರ್ಮದ ಕೊನೆಯಲ್ಲಿಯೂ, ಈ ಎಲ್ಲ ಹೆಸರುಗಳನ್ನೂ ಕೂಡಿಸಿ ಸಮಾಸಪದ ಮಾಡಿ ಪ್ರಯೋಗಿಸಬೇಕು.

೧೭-೧೮. ಅಯ್ಯಾ ಮಹಾಬಾಹುವೇ! "ಖಷೋಲ್ಕಾಯ ವಿದ್ಮಹೇ ದಿವಾಕರಾಯ ಧೀಮಹೀ ತನ್ನಃ ಸೂರ್ಯಃಪ್ರಚೋದಯಾತ್" ಎಂಬ ಸೂರ್ಯಗಾಯತ್ರಿಯು

ಸಾವಿತ್ರೀ ಚ ಮಹಾಬಾಹೋ ಚತುರ್ವಿಂಶಾಕ್ಷರಾ ಮತಾ ।
ಸರ್ವತತ್ತ್ವ ಮಯೀ ಪುಣ್ಯಾ ಬ್ರಹ್ಮಗೋತ್ರಾರ್ಕವಲ್ಲಭಾ ॥ ೧೮ ॥

ಏವಂ ಮತ್ರಾಃ ಪ್ರಯೋಕ್ತವ್ಯಾಃ ಸರ್ವಕರ್ಮಸ್ವತಂದ್ರಿತೈಃ ।
ಅನ್ಯಥಾ ವಿಫಲಂ ಕರ್ಮ ಭವೇದಿಹ ಪರತ್ರ ಚ ॥ ೧೯ ॥

ತಸ್ಮಾತ್ಸರ್ವಪ್ರಯತ್ನೇನ ಮಂತ್ರಾನ್ ಜ್ಞಾತ್ವಾ ವಿಧಿಂ ತಥಾ ।
ಯಥಾವತ್ಕರ್ಮ ತತ್ಕೃತ್ವಾ ಸಾಧಯೇದೀಪ್ಸಿತಂ ಫಲಂ ॥ ೨೦ ॥

॥ ಸಾಂಬ ಉವಾಚ ॥

ಆದಿತ್ಯಮಂಡಲೇ ದೀಕ್ಷಾ ಕಸ್ಯ ಕಾರ್ಯಾ ಕಥಂ ಚ ಸಾ ।
ಕದಾ ಕೇನ ಕಿಮರ್ಥಂ ಚ ಕಥಯೇದಂ ಮಮಾಖಿಲಂ ॥ ೨೧ ॥

॥ ವಾಸುದೇವ ಉವಾಚ ॥

ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಕುಲೀನಂ ಶೂದ್ರಮೇವ ಚ ।
ಪುರುಷಂ ವಾ ಸ್ತ್ರಿಯಂ ವಾಪಿ ದೀಕ್ಷಯೇತ್ಸೂರ್ಯಮಂಡಲೇ ॥ ೨೨ ॥

---

ಇಪ್ಪತ್ನಾಲ್ಕು ಅಕ್ಷರವುಳದ್ದೆಂದು ತಿಳಿಯಬೇಕು. ಇದು ಸರ್ವತತ್ವಮಯವೂ, ಪುಣ್ಯಪ್ರದವೂ. ಬ್ರಹ್ಮಗೋತ್ರವುಳ್ಳದ್ದೂ, ಸೂರ್ಯನಿಗೆ ಅತ್ಯಂತ ಪ್ರಿಯವೂ, ಆಗಿದೆ.

೧೯. ಹೀಗೆ ತಾನು ಮಾಡುವ ಕರ್ಮಗಳು ಯಾವುದರಲ್ಲಿಯೂ ಆಲಸ್ಯಪಡದೆ ಮಂತ್ರಗಳ ಭಾಗಗಳನ್ನು ವಿಂಗಡಿಸಿ ಹೇಳಿಕೊಳ್ಳಬೇಕು. ಹಾಗೆ ಮಾಡದೇಹೋದರೆ ಇಹದಲ್ಲಿಯೂ ಫಲವಿಲ್ಲ, ಪರದಲ್ಲಿಯೂ ಫಲವಿಲ್ಲ.

೨೦. ಆದುದರಿಂದ ಸರ್ವಪ್ರಯತ್ನಗಳನ್ನೂ ಮಾಡಿ ಪ್ರಯೋಗವಿಧಿಯನ್ನೂ ಮಂತ್ರಗಳನ್ನೂ ತಿಳಿದುಕೊಂಡು, ಆ ಕರ್ಮವನ್ನು ಉಕ್ತರೀತಿಯಲ್ಲಿ ಮಾಡಿ, ಇಷ್ಟಾರ್ಥವನ್ನು ಸಾಧಿಸಿಕೊಳ್ಳಬೇಕು" ಎಂದು ಹೇಳಿದನು.

೨೧. ಆಗ ಸಾಂಬನು "ಆದಿತ್ಯಮಂಡಲದ ದೀಕ್ಷೆಯನ್ನು ಯಾರು ವಹಿಸಬೇಕು? ಮತ್ತು ವಹಿಸುವ ರೀತಿ ಹೇಗೆ ? ಯಾವಾಗ ವಹಿಸಬೇಕು? ಏತಕ್ಕೋಸ್ಕರ ಇದನ್ನು ಮಾಡಬೇಕು ? ಎಂಬುದೆಲ್ಲವನ್ನೂ ನನಗೆ ಹೇಳು" ಎಂದು ಕೇಳಿಕೊಂಡನು.

೨೨. ಆಗ ವಾಸುದೇವನು ಅದಕ್ಕೆ ಉತ್ತರವಾಗಿ " ಸತ್ಕುಲಪ್ರಸೂತರಾದ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಈ ಜನಗಳಲ್ಲಿ ಸ್ತ್ರೀಯರಾಗಲಿ, ಪುರುಷರಾಗಲಿ ಈ ಸೂರ್ಯದೀಕ್ಷೆಯನ್ನು ಮಾಡಬಹುದು.

ಭಕ್ತ್ಯೋಪಪನ್ನಶ್ಚ ಪ್ರಣಿಪತ್ಯ ಗುರುಂ ತಥಾ ।
೦ ದೀಕ್ಷಯೇದ್ವಿಪ್ರಃ ಕಲ್ಪಜ್ಞಃ ಸತ್ಯವಾಕ್ಛುಚಿಃ ॥ ೨೩ ॥

ಷಷ್ಠ್ಯಾಮಗ್ನಿಂ ಸಮಾಧಾಯ ಪೂರ್ವೋಕ್ತವಿಧಿನಾ ಕ್ರಮಾತ್ ।
ಸಂಪೂಜ್ಯಾರ್ಕಂ ತಥಾ ವಹ್ನೌ ಹುತ್ವಾ ವೈ ಹವಿಷಾ ರವಿಂ ॥ ೨೪ ॥

ಶಿಷ್ಯಂ ಸ್ನಾತಮಥಾಚಾಂತಂ ಖಷೋಲ್ಕಾಕೃತಿವಿಗ್ರಹಂ ।
ಸ್ವಾಂಗೈರಾಲಭ್ಯ ಚಾಂಗೇಷು ದರ್ಭವದ್ಭಿಸ್ತಥಾಕ್ಷತೈಃ ॥ ೨೫ ॥

ಪುಷ್ಪೈಃ ಸಂಪೂಜ್ಯ ಚಾಂಗಾನಿ ದೇಯಃ ಕಾರ್ಯೋ ಬಲಿಸ್ತಥಾ ।
ಆದಿತ್ಯೋ ವರುಣೋಽರ್ಕೋಽಗ್ನಿಃ ಸಾಧಿತೋ ಹೃದಯೇನ ಚ ॥ ೨೬ ॥

ಭವೇದ್ಘೃತಗುಡೈಃ ಕ್ಷೀರೈಸ್ತಂಡುಲೈಶ್ಚ ಪ್ರಮಾಣತಃ ।
ತ್ರಿಭಿರಂಜಲಿಭಿರ್ಹುತ್ವಾ ದೇವಾಯಾಗ್ನೌ ಹುತಂ ಪುನಃ ॥ ೨೭ ॥

---

೨೩. ಕಲ್ಪಜ್ಞನೂ, ಸತ್ಯವಾಕ್ಯನೂ, ಶುಚಿಯೂ, ಆದ ಬ್ರಾಹ್ಮಣನು ತಾನು ಭಕ್ತಿಯಿಂದ ಕೂಡಿದವನಾಗಿ ಗುರುನಮಸ್ಕಾರ ಮಾಡಬೇಕು. ಆ ಗುರುವು ಶಿಷ್ಯನಿಗೆ ಸ್ನಾನ, ಆಚಮನ ಇವುಗಳನ್ನು ಮಾಡಿಸಿ, ಅನಂತರ ಅವನನ್ನು ದೀಕ್ಷಾವಿಧಾನರತನನ್ನಾಗಿ ಮಾಡಿಸಬೇಕು.

೨೪. ಷಷ್ಠಿಯಲ್ಲಿ ಪೂರ್ವೋಕ್ತವಿಧಿಯಿಂದ ಕ್ರಮವಾಗಿ ಸೂರ್ಯನನ್ನು ಪೂಜೆ ಮಾಡಿಸಿ ಅಗ್ನಿಯನ್ನು ಪ್ರತಿಷ್ಠಿಸಿ ಉಕ್ತಮಂತ್ರಪೂರ್ವಕವಾಗಿ ಹವಿಸ್ಸಿನಿಂದ ಹೋಮ ಮಾಡಬೇಕು.

೨೫. ಮರುದಿನ ಸ್ನಾನವನ್ನೂ ಆಚಮನವನ್ನೂ ನೆರವೇರಿಸಿ ಶುದ್ಧನಾದ ಶಿಷ್ಯನಿಂದ ಖಷೋಲ್ಕವಿಗ್ರಹಕ್ಕೆ ದರ್ಭಸಹಿತವಾಗಿ ಅವನ ಅಂಗಸ್ಪರ್ಶಮಾಡಿಸಿ ಅಕ್ಷತೆಗಳಿಂದಲೂ ಪುಷ್ಪಗಳಿಂದಲೂ

೨೬. ಮೂರ್ತಿಯ ಅಂಗಗಳಿಗೆ ಪೂಜೆಮಾಡಿ ಬಲಿಪ್ರದಾನ ಮಾಡಬೇಕು. ಆದಿತ್ಯ, ವರುಣ, ಅರ್ಕ, ಅಗ್ನಿ ಇವರನ್ನು ಹೃದಯದಲ್ಲಿ ಧ್ಯಾನಮಾಡಬೇಕು.

೨೭. ಪ್ರಮಾಣಾನುಸಾರ ತುಪ್ಪ, ಬೆಲ್ಲ, ಹಾಲು ಇವುಗಳ ಮಿಶ್ರಣವನ್ನು, ಮೂರುಸಾರಿ ಬೊಗಸೆಯ ತುಂಬಾ ಹಿಡಿದು, ದೇವನನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡಬೇಕು.

ದತ್ವಾ ಶಿಷ್ಯಾಯ ಮುಕ್ತೈವಂ ಕೃತ್ವಾಂತೇ ದಂತಧಾವನಂ ।
ಕ್ಷೀರಂ ವೃಕ್ಷೋದ್ಭವಂ ತಸ್ಮೈ ದ್ವಾದಶಾಂಗುಲಸನ್ನಿಭಂ ॥ ೨೮ ॥

ದಂತಶ್ಲಿಷ್ಟೇಽಪನೀತೇ ಚ ತೇನ ಪ್ರಾಚ್ಯಾಂ ಕ್ಷಿಪೇತ್ತತಃ ।
ದಂತಧಾವನಮಾಸ್ಯಂ ಚ ತದಾತಸ್ಯೋಪರಿ ಕ್ಷಿಪೇತ್ ॥ ೨೯ ॥

ನೈರ್‍ತ್ರಾವರುಣಮೀಶಾನಂ ವಕ್ತ್ರಂ ಸೌಮ್ಯಸಮಾಶ್ರಿತಂ ।
ಪ್ರಶಸ್ತಂ ದಂತಕಾಷ್ಠಸ್ಯ ಮುಖಮನ್ಯತ್ರ ನಿಂದಿತಂ ॥ ೩೦ ॥

ಯಾಂ ದಿಶಂ ದಂತಕಾಷ್ಠಸ್ಯ ಮುಖಂ ಪಶ್ಯತಿ ತತ್ಪತಿಂ ।
ಅರ್ಚಯೇತ್ತೇನ ಶಾಂತಿಸ್ಯಾದಿತ್ಯುಕ್ತಂ ಭಾನುನಾ ಸ್ವಯಂ ॥ ೩೧ ॥

ಪುನಸ್ತದ್ವಚಸಂ ಶ್ರುತ್ವಾ ಅಂಗೈರಾಲಭ್ಯ ಚ ಕ್ರಮಾತ್ ।
ಸಂಪೂಜ್ಯ ಲೋಚನೇ ತತ್ರ ಸಂಚಿಂತ್ಯ ಪರಿಜಪ್ಯ ಚ ॥ ೩೨ ॥

---

೨೮-೨೯. ಹೀಗೆ ಹೋಮಮಾಡಿ ಮಿಕ್ಕದ್ದನ್ನು ಶಿಷ್ಯನಾದವನಿಗೆ ದಾನಕೊಟ್ಟು ಹೋಮಕಾರ್ಯವನ್ನು ನೆರವೇರಿಸಿ ಅನಂತರ ಹಲ್ಲನ್ನು ಉಜ್ಜಬೇಕು. ಹನ್ನೆರಡು ಅಂಗುಲ ಪ್ರಮಾಣವುಳ್ಳ ಕ್ಷೀರವೃಕ್ಷದ ಕಾಷ್ಠವನ್ನು ತೆಗೆದುಕೊಂಡು ಅದರಿಂದ ಹಲ್ಲಿಗೆ ಅಂಟಿರುವ ಕಶ್ಮಲವನ್ನೆಲ್ಲಾ ಉಜ್ಜಿದ ಮೇಲೆ ಕಾಷ್ಠವನ್ನು ಪೂರ್ವದಿಕ್ಕಿಗೆ ಎಸೆಯಬೇಕು.

೩೦. ಎರಡನೆಯಸಲ ಉಜ್ಜಿದ ಕಡ್ಡಿಯನ್ನು ಮೊದಲುಸಲ ಬಿಸುಟ ಕಡ್ಡಿಯ ಮೇಲೇ ಎಸೆಯಬೇಕು. ದಂತಧಾವನ ಕಾಷ್ಠವನ್ನೆಸೆಯುವುದಕ್ಕೆ ದಕ್ಷಿಣ, ಈಶಾನ್ಯ, ಆಗ್ನೇಯ, ಈ ದಿಕ್ಕುಗಳು ಪ್ರಶಸ್ತವಾದುವು. ಮಿಕ್ಕಕಡೆಗಳಿಗೆ ಅಧಿಮುಖವಾಗಿ ಕಾಷ್ಠ ಕ್ಷೇಪಣವು ನಿಂದಿತವು.

೩೧. ದಂತಧಾವನ ಕಾಷ್ಠದ ಮುಖಭಾಗವು ಯಾವ ದಿಕ್ಕಿಗೆ ಅಭಿಮುಖವಾಗಿ ಬೀಳುವುದೋ, ಆದಿಕ್ಪತಿಯನ್ನು ಪೂಜಿಸಬೇಕು. ಅದರಿಂದ ಶಾಂತಿಯುಂಟಾಗುವುದೆಂದು ಸೂರ್ಯನಿಂದಲೇ ಉಕ್ತವಾಗಿದೆ.

೩೨. ಪುನಃ ಯಥೋಕ್ತವಾದ ಆ ವಾಕ್ಯಶ್ರವಣಮಾಡಿ, ಕ್ರಮವಾಗಿ ಅಂಗಗಳನ್ನು ಸವರಿ, ಪೂಜಿಸಿ ಎರಡು ಕಣ್ಣುಗಳನ್ನು ಚೆನ್ನಾಗಿ ಮುಚ್ಚಿ ಧ್ಯಾನಿಸಿ ಜಪಿಸಬೇಕು.

ಶಯೀತ ಸ್ವಯಂ ಚಾಪಿ ವರಂ ಪ್ರಾರ್ಥ್ಯ ಸಮಾಹಿತಃ ।
ಕೃತ್ವಾ ಚ ಸಂಕಲ್ಪಂ ತಥಾ ಚೇಂದ್ರಿಯಸಂಯಮಂ ॥ ೩೩ ॥

ಆಚಮ್ಯ ಕೃತರಕ್ಷಸ್ತು ಕೃತದ್ರವ್ಯಾಧಿವಾಸನಃ ।
ಹೃದಯೇನ ನಮೇತ್ಪ್ರಾತಃ ಸ್ನಾತ್ವಾ ಹುತ್ವಾ ಹುತಾಶನಂ ॥ ೩೪ ॥

ಸ್ವಪ್ನಂ ಪೃಚ್ಛೇದ್ಯಥಾದೃಷ್ಟಂ ಶುಭಂ ಸಂಪಾದಯೇಚ್ಚ ತಂ ।
ಹೃದಯೇನಾಶುಭೇ ದೃಷ್ಟೇ ಶತಹೋಮಂ ಸಮಾಚರೇತ್ ॥ ೩೫ ॥

ಸ್ವಪ್ನೇ ಪಶ್ಯತಿ ಹರ್ಮ್ಯಾಣಿ ದೇವತಾನಾಂ ಹುತಾಶನಂ ।
ನದೀಯಾನಾನಿ ರಮ್ಯಾಣಿ ಉದ್ಯಾನೋಪವನಾನಿ ಚ ॥ ೩೬ ॥

ಪತ್ರಪುಷ್ಪಫಲಾಢ್ಯಾನಿ ಕಮಲಾನಿ ಚ ರಾಜತಂ ।
ಸಂಪಶ್ಯತಿ ಯದಿ ಸ್ವಪ್ನೇ ಬ್ರಾಹ್ಮಣಂ ವೇದಪಾರಗಂ ॥ ೩೭ ॥

---

೩೩. ಬಳಿಕ ಸಂಕಲ್ಪವನ್ನು ಮಾಡಿಸಿ, ಇಂದ್ರಿಯನಿಗ್ರಹಪೂರ್ವಕ ತನಗೆ ಇಷ್ಟವಾದ ವರವನ್ನು ಪ್ರಾರ್ಥಿಸಿಕೊಂಡು ಸ್ಥಿರಮನಸ್ಕನಾಗಿ ಮಲಗಿಕೊಳ್ಳಬೇಕು.

೩೪. ತತ್ಪೂರ್ವದಲ್ಲಿ ಆಚಮನ ಮಾಡಿಕೊಂಡು ರಕ್ಷಾಸೂತ್ರ (ಕಂಕಣ) ಧಾರಣವಾದ ಮೇಲೆ, ಧಾನ್ಯಾದಿದ್ರವ್ಯಗಳಲ್ಲಿ ಪ್ರತಿಮೆಯನ್ನು ಅಧಿವಾಸನ ಮಾಡಿಸಬೇಕು. ಪ್ರಾತಃಕಾಲ ಸ್ನಾನಸಂಧ್ಯಾದಿಗಳನ್ನು ಮಾಡಿ, ಅಗ್ನಿಪ್ರತಿಷ್ಠೆಮಾಡಿ, ಹೋಮವನ್ನು ನೆರವೇರಿಸಿ ಮನಸಾ ನಮಸ್ಕರಿಸಬೇಕು.

೩೫. ಆ ರಾತ್ರಿ, ಸ್ವಪ್ನ ಕಂಡರೆ ತಾನು ಕಂಡ ಸ್ವಪ್ನವಿಚಾರವನ್ನು ಕುರಿತು ತಿಳಿದವರ ಬಳಿಗೆ ಹೋಗಿ ಫಲವನ್ನು ಕೇಳಬೇಕು. ಒಂದು ವೇಳೆ ಅದು ಶುಭಕರವಾಗಿದ್ದರೆ ಶುಭವಾಗುವಂತೆ ಅವರಿಂದ ಆಶೀರ್ವಾದವನ್ನೂ ಪಡೆಯಬೇಕು.

೩೬. ಸ್ವಪ್ನವು ಅಶುಭವೆಂದು ತನ್ನ ಮನಸ್ಸಿಗೆ ಹೊಳೆದರೆ ಶಾಂತ್ಯರ್ಥವಾಗಿ ಉಕ್ತವಾದ ಹೋಮವನ್ನು ಶತಸಂಖ್ಯೆಯಲ್ಲಿ ಮಾಡಬೇಕು. ಸ್ವಪ್ನದಲ್ಲಿ ರಮ್ಯವಾದ ದೇವಾಲಯಗಳನ್ನೂ, ಅಗ್ನಿಯನ್ನೂ, ನದೀದಾಟುತ್ತಿರುವುದನ್ನೂ, ಪತ್ರ, ಪುಷ್ಪ, ಫಲಗಳಿಂದ ಕೂಡಿದುದೂ

೩೭-೩೮. ರಮ್ಯವೂ ಆದ ಉದ್ಯಾನವನ್ನೂ, ಕಮಲಗಳನ್ನೂ, ಬೆಳ್ಳಿಯನ್ನೂ, ವೇದಪಾರಂಗತರಾದ ವಿಪ್ರರನ್ನೂ, ಶೂರನಾದ ದೊರೆಯನ್ನೂ, ಧನಿಕರಾದ ಕ್ಷತ್ರಿಯ

ರಾಜಾನಂ ಶೌರ್ಯಸಂಪನ್ನಂ ಧನಾಢ್ಯಂ ಕ್ಷತ್ರಿಯೋತ್ತಮಂ ।
ಶುಶ್ರೂಷಣಪರಂ ಶೂದ್ರಂ ಯದಿ ತತ್ತ್ವಾರ್ಥಮಾದಿಶೇತ್ ॥ ೩೮ ॥

ಪ್ರಶಸ್ತಂ ಭಾಷಣಂ ಚೈವ ಯಥಾಸಂಭವತೋ ಮತಂ ।
ಏತೈಃ ಸ್ಪರ್ಶನಮೇತೇಷಾಂ ಶ್ರೇಷ್ಠಮಾರೋಹಣಂ ತಥಾ ॥ ೩೯ ॥

ವಾಹನಾನಿ ಪ್ರಶಸ್ತಾನಿ ಪ್ರಾಸಾದಂ ನಾವಮೇವ ಚ ।
ಪರ್ವತಂ ಚ ಸಮಾರುಹ್ಯ ವಿಫಲಾಂ ಭಾರ್ಗವೀಂ ಭಜೇತ್ ॥ ೪೦ ॥

ಪೀತ್ವಾ ಸುರಾಂ ಸಮುದ್ರಂ ಚ ದಧ್ಯಾಜ್ಯಂಕ್ಷೀರಮೇವ ಚ ।
ಸೋಮಂ ಮಾಸಂ ಹವಿರ್ಭುಕ್ತ್ವಾ ಕಾಶ್ಯಪೀಂ ಲಭತೇ ನರಃ ॥ ೪೧ ॥

ಲಬ್ಧ್ವಾ ವಸ್ತ್ರಾಣಿ ರತ್ನಾನಿ ವಿವಿಧಾಭರಣಾನಿ ಚ ।
ವಾಹನಾನಿ ಮಹೀಂ ಗಾಶ್ಚ ಧಾನ್ಯೋಪಕರಣಾನಿ ಚ ॥ ೪೨ ॥

---

ಜಾತಿಯುವನನ್ನೂ, ಶುಶ್ರೂಷಾಕಾರ್ಯಾಸಕ್ತನಾದ ಶೂದ್ರನನ್ನೂ ಸ್ವಪ್ನದಲ್ಲಿ ಕಂಡರೆ ಅದರ ತತ್ವವನ್ನೂ ಫಲವನ್ನೂ ತಿಳಿಯಬೇಕು.

೩೯. ಸ್ವಪ್ನಫಲವು ಅನುಕೂಲವಾಗಿದ್ದರೆ ಆಗಿನ ಸಂಭವಕ್ಕೆ ಅನುಸಾರವಾಗಿ ಪ್ರಶಸ್ತವಾದ ಭಾಷಣವು ಲಭಿಸುವುದು. ಯಾವ ಯಾವ ವಸ್ತುಗಳನ್ನು ಸ್ವಪ್ನದಲ್ಲಿ ಕಾಣುವನೋ ಅವುಗಳ ಸ್ಪರ್ಶವೂ, ಅವುಗಳನ್ನು ಆರೋಹಣ ಮಾಡುವುದೂ ಶ್ರೇಷ್ಠವಾದುದು.

೪೦. ಸ್ವಪ್ನದಲ್ಲಿ ಪ್ರಶಸ್ತವಾದ ವಾಹನಗಳು, ಉಪ್ಪರಿಗೆಮನೆ, ಹಡಗು, ಇವನ್ನು ಕಂಡರೂ; ಪರ್ವತಾರೋಹಣ ಮಾಡಿದಂತೆ ಕಂಡರೂ; ಆತನು ಹೆಚ್ಚಾದ ಸಂಪತ್ತನ್ನು ಹೊಂದುವನು.

೪೧. ಸುರಾ, ಸಮುದ್ರೋದಕ, ಮೊಸರು, ತುಪ್ಪ, ಹಾಲು, ಸೋಮಲತೆಯ ರಸ, ಇವನ್ನು ಕುಡಿದ ಹಾಗೂ; ಮಾಂಸ, ಹವಿಷ್ಯಾನ್ನ ಇವನ್ನು ಭೋಜನಮಾಡಿದ ಹಾಗೂ; ಕಂಡರೆ (ಕಾಶ್ಯಪಿ) ಭೂಮಿ ಲಾಭವನ್ನು ಹೊಂದುತ್ತಾನೆ.

೪೨. ವಸ್ತ್ರಗಳು, ರತ್ನಗಳು, ಬಗೆಬಗೆಯ ಒಡವೆಗಳು, ವಾಹನಗಳು, ಹೊಲ ಗದ್ದೆ ಮುಂತಾದುವು, ಗೋವುಗಳು, ಧಾನ್ಯಗಳು ಉಪಕರಣಗಳು.

ಸಮೃದ್ಧಿಮಾಪ್ನುಯಾತ್ಕಿಂಚಿತ್ಸ್ವಪ್ನಾನಾಂ ದರ್ಶನಂ ಶುಭಂ ।
ಶುಭಕರ್ಮಾನುಗಂ ಯಚ್ಚ ತತ್ಸರ್ವಂ ಶುಭಮುಚ್ಯತೇ ॥ ೪೩ ॥

ತಸ್ಮಾದನ್ಯದನಿಷ್ಟಂ ಸ್ಯಾತ್ತಸ್ಮಾದ್ಯುಕ್ತಾ ಪ್ರತಿಕ್ರಿಯಾ ।
ಚಕ್ರಮಾಲಿಖ್ಯ ಸಪ್ತಮ್ಯಾಂ ತತ್ರ ಸಂಪೂಜ್ಯ ಭಾಸ್ಕರಂ ॥ ೪೪ ॥

ತರ್ಪಯಿತ್ವಾ ದ್ವಿಜಾನ್ ಶಿಷ್ಟಾನಾನಮ್ಯ ಪೂರ್ವವದ್ಗುರುಂ ।
ಸೃಷ್ಟಿಕ್ರಮೇಣ ಭೃತ್ಯರ್ಥಂ ಮುಕ್ತ್ಯರ್ಥಂ ನಾನ್ಯಥಾ ಭವೇತ್ ॥ ೪೫ ॥

ದಿವಾಕರಂ ಸಮಾಲಭ್ಯ ಪುರುಷೋಽಥ ಯಥಾಕ್ರಮಂ ।
ಸರ್ವಗ್ರಹೇಷು ತತ್ತ್ವೇಷು ಯಥಾವತ್ತನ್ನಿಯೋಜಯೇತ್ ॥ ೪೬ ॥

ವಿಶುದ್ಧೇಷು ವಿಶುದ್ಧಂ ತಂ ಧ್ಯಾತ್ವಾ ಚಾದಿತ್ಯವತ್ಕ್ರಮಾತ್ ।
ನಿಯೋಜಯೇತ್ಪೃಥಿವ್ಯಾಶ್ಚ ತತಃ ಪ್ರಭೃತಿ ಸರ್ವಶಃ ॥ ೪೭ ॥

---

೪೩. ಇವೆಲ್ಲವನ್ನೂ ತಾನು ಹೊಂದಿದಂತೆ ಸ್ವಪ್ನ ಕಂಡರೆ, ಅವರಿಗೆ ಸರ್ವಸಮೃದ್ಧಿಯುಂಟಾಗುವುದು. ಪೂರ್ವಾರ್ಜಿತ ಕರ್ಮವು ಶುಭವಾಗಿದ್ದರೆ ಅದಕ್ಕನುಸಾರವಾಗಿ ಉಂಟಾದ ಸ್ವಪ್ನಗಳು ಶುಭಕರಗಳಾಗಿರುತ್ತವೆ.

೪೪. ಈ ಶುಭಕರ್ಮಾನುಸಾರ ಸುಸ್ವಪ್ನಗಳು ಸಂಭವಿಸದೆ ದುಷ್ಟವಾದ ಸ್ವಪ್ನಗಳಾದರೆ ಆ ದುಸ್ವಪ್ನ ದೋಷಪರಿಹಾರಕ್ಕಾಗಿ ಶಾಂತಿಮಾಡುವುದು ಯುಕ್ತವಾಗಿದೆ.

೪೫. ಸಪ್ತಮಿಯದಿನ ಸೂರ್ಯಚಕ್ರವನ್ನು ಚಿತ್ರಿಸಿ, ಆ ಚಕ್ರದಲ್ಲಿ ಸೂರ್ಯನನ್ನು ಪೂಜಿಸಿ, ಶಿಷ್ಟರಾದ ಬ್ರಾಹ್ಮಣರಿಗೆ ಸಂತರ್ಪಣೆ ಮಾಡಬೇಕು. ಬಳಿಕ ಪೂರ್ವದಂತೆ ಗುರುನಮಸ್ಕಾರ ಮಾಡಬೇಕು. ಹೀಗೆ ಮಾಡಿದರೆ ಸೃಷ್ಟಿಕ್ರಮದ ಜೀವನ ನಿರ್ವಹವೂ, ಮುಕ್ತಿಯೂ ಫಲವಾಗಿ ಲಭಿಸುವುವು.

೪೬. ಮಾನವನು ಸೂರ್ಯಚಕ್ರವನ್ನು ಪೂಜಿಸುವಾಗ, ಕ್ರಮದಿಂದ ಗಂಧಾದಿಗಳನ್ನು ಲೇಪನಮಾಡಿ, ಪೃಥಿವ್ಯಾದಿ ಸರ್ವತತ್ತ್ವಗಳಲ್ಲಿಯೂ, ಸಮಸ್ತಗ್ರಹಗಳಲ್ಲೂ ಇದು ಯಥಾವತ್ತಾಗಿ ಸಂಬಂಧಿಸಿದೆ ಎಂದು ಭಾವಿಸಬೇಕು.

೪೭. ಶುದ್ಧವಸ್ತುಗಳಲ್ಲೆಲ್ಲಾ ಪರಿಶುದ್ಧವಾದ ಆ ಚಕ್ರವನ್ನು ಸಾಕ್ಷಾತ್ ಆದಿತ್ಯನನ್ನೇ ಧ್ಯಾನಿಸುವಂತೆ ಧ್ಯಾನಿಸಿ, ಅನಂತರ ಅದನ್ನು ಪೃಥಿವ್ಯಾದಿ ಸರ್ವತತ್ತ್ವಗಳಿಂದ ಯುಕ್ತವಾದುದನ್ನಾಗಿ ಭಾವಿಸಬೇಕು.

ಆದಿತ್ಯಮಂಡಲೇ ಶುದ್ಧೇ ಸರ್ವಮುಕ್ತ್ವಂ ನಿಯೋಜಯೇತ್ ।
ಏವಂ ತು ಮನಸಾ ಧ್ಯಾತ್ವಾ ಜುಹುಯಾಚ್ಚ ಶತಂಶತಂ ॥ ೪೮ ॥

ಸರ್ವೈರ್ಮಂತ್ರೈಃ ಕ್ರಮಾದೇವಂ ದೀಕ್ಷಾ ಪ್ರೋಕ್ತಾ ವರಾಪರಾ ।
ಕೃತ್ವೈವ ಪುಷ್ಪಪಾತಂ ತು ತಸ್ಮಿನ್ನಾದಿತ್ಯಮಂಡಲೇ ॥ ೪೯ ॥

ಬದ್ಧ್ವಾಸ್ಯಮಂಜಲೌ ಪುಷ್ಪಂ ಕೃತ್ವಾ ದತ್ವಾ ಚ ಮಂತ್ರಿತಂ ।
ಕ್ಷಿಪೇದ್ವೈ ಕುಲಶುದ್ಧ್ಯರ್ಥಂ ನಾಮಾರ್ಥಂ ಚ ವಿಶೇಷತಃ ॥ ೫೦ ॥

ಯತ್ರ ತತ್ಪತಿತಂ ಪುಷ್ಪಂ ತಸ್ಯ ತತ್ಕುಲಮಾದಿಶೇತ್ ।
ನಾಮ ಚಾದಿತ್ಯ ಸಂಯುಕ್ತಮಿತ್ಯುಕ್ತಂ ಭಾನುನಾ ಸ್ವಯಂ ॥ ೫೧ ॥

ಸಂಪೂಜ್ಯ ಶ್ರಾವಯೇತ್ತತ್ರ ಸಮಯಾನರ್ಕಭಾಷಿತಾನ್ ।
ಪ್ರಾತಃ ಸಾಯಂ ಚ ಮಧ್ಯಾಹ್ನೇ ರವೇರಭಿಮುಖಸ್ಥಿತಃ ॥ ೫೨ ॥

---

೪೮. ಹಿಂದೆ ಹೇಳಿದ ಗ್ರಹಾದಿಗಳೆಲ್ಲವೂ ಶುದ್ಧವಾದ ಆದಿತ್ಯಚಕ್ರದಲ್ಲಿ ಸೇರಿರುವಂತೆ ಭಾವಿಸಬೇಕು. ಈ ಪ್ರಕಾರದಲ್ಲಿ ಅದನ್ನು ಮನಸ್ಸಿನಲ್ಲಿ ಧ್ಯಾನಮಾಡಿ, ಕ್ರಮವಾಗಿ ಅವುಗಳ ಮಂತ್ರಗಳಿಂದ ನೂರುನೂರು ಹೋಮಗಳನ್ನು ಮಾಡಬೇಕು.

೪೯. ಶ್ರೇಷ್ಠವಾದ ಸೂರ್ಯದೀಕ್ಷೆಯು ಈ ಪ್ರಕಾರ ಉಕ್ತವಾಗಿದೆ. ಆ ಸೂರ್ಯ ಮಂಡಲದಲ್ಲಿ ಪುಷ್ಪಾಂಜಲಿ ಸಮರ್ಪಣೆಮಾಡುವಾಗ ಬಾಯಿಗೆ ಬಟ್ಟೆಯನ್ನು ಕಟ್ಟಿ ಕೊಂಡಿರಬೇಕು.

೫೦. ಬೊಗಸೆಯಲ್ಲಿ ಹೂವನ್ನು ಹಿಡಿದುಕೊಂಡು ಅಭಿಮಂತ್ರಣ ಮಾಡಿ ತನ್ನ ವಂಶಕ್ಕೆ ಪರಿಶುದ್ಧತೆ, ಶನಗೆ ಪ್ರಖ್ಯಾತಿ, ಇವುಗಳನ್ನು ವಿಶೇಷತಃ ಪಡೆಯುವುದ ಕ್ಕಾಗಿ, ಸೂರ್ಯಮಂಡಲದ ಮೇಲೆ ಆ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

೫೧. ಯಾವನು ಸಮರ್ಪಿಸಿದ ಪುಷ್ಪವು ಆ ಮಂಡಲದ ಮೇಲೆ ಸರಿಯಾಗಿ ಬೀಳುವುದೋ, ಅವನಿಗೆ ಆ ಕುಲವನ್ನು ಹೇಳಬೇಕು. ಅವನ ಹೆಸರು ಸೂರ್ಯವಾಚಕ ವಾದ ಶಬ್ದದಿಂದ ಆದರೂ ಕೂಡಿದುದಾಗಿರಬಹುದು. ಹೀಗೆಂದು ಸೂರ್ಯನೇಹೇಳಿದ್ದಾನೆ.

೫೨. ಈ ಪ್ರಕಾರ ಸೂರ್ಯನನ್ನು ಪೂಜಿಸಿ, ಸೂರ್ಯನಿಂದ ಉಕ್ತವಾದ ಸಂಕೇತ ಗಳನ್ನೆಲ್ಲಾ ಶ್ರವಣಮಾಡಿಸಬೇಕು. ಸರ್ವದಾ ಪ್ರಾತಃ, ಮಧ್ಯಾಹ್ನ, ಸಾಯಾಹ್ನ,

ಉಪಸ್ಥಾನಂ ಸದಾ ಕುರ್ಯಾದರ್ಚನಂ ಚ ಸದಾ ನರಃ ।
ಅದೃಷ್ಟ್ವಾರ್ಕಂ ನ ಭೋಕ್ತವ್ಯಂ ದಿವಾರಾತ್ರೌ ಹುತಾಶನಂ ॥ ೫೩ ॥

ದೃಷ್ಟ್ವಾ ಭೋಕ್ತವ್ಯಮರ್ಕಾಖ್ಯಂ ನ ಭೋಕ್ತವ್ಯಂ ಕದಾಚನ ।
ನ ಚ ಪದ್ಭ್ಯಾಂ ಸ್ಪೃಶೇತ್ತದ್ವನ್ನಾಸನಂ ಪರಿವರ್ಜಯೇತ್ ॥ ೫೪ ॥

ನ ಲಂಘ್ಯಾ ಪ್ರತಿಮಾಚ್ಛಾಯಾ ನ ಲಂಘ್ಯಾಸ್ತಿಥಯಃ ಕ್ವಚಿತ್ ।
ನಕ್ಷತ್ರಾಣಿ ಗ್ರಹಾ ಯೋಗಾ ಮಾಸಾ ಮಾಸಾಧಿಪಾಶ್ಚ ಯೇ ॥ ೫೫ ॥

ಅಯನೇ ಋತವಃ ಪಕ್ಷೌ ತಥೈವ ದಿವಸಾನಿ ಚ ।
ಕಾಲಃ ಸಂವತ್ಸರಶ್ಚಾಪಿ ಯಃ ಕಶ್ಚಿತ್ಕಾಲ ಉಚ್ಯತೇ ॥ ೫೬ ॥

ಅಭಿವಂದ್ಯಃ ಸ ಸರ್ವೋऽಪಿ ನಮಸ್ಯಃ ಪೂಜ್ಯ ಏವ ಚ ।
ತಸ್ಮಾತ್ಕಾಲಾಧಿಪಃ ಸೂರ್ಯಃ ಸ್ವಯಂ ಕಾಲಶ್ಚ ಪಠ್ಯತೇ ॥ ೫೭ ॥

---

ಎಂಬ ಮೂರು ಸಂಧ್ಯೆಗಳಲ್ಲಿಯೂ ಸೂರ್ಯನಿಗೆ ಅಭಿಮುಖವಾಗಿ ನಿಂತು ಉಪಸ್ಥಾನವನ್ನೂ ಮತ್ತು ಸದಾ ಅರ್ಚನೆಯನ್ನೂ ಮಾಡಬೇಕು.

೫೩. ಹಗಲು ಸೂರ್ಯದರ್ಶನವಿಲ್ಲದೆ ಭೋಜನಮಾಡಬಾರದು. ರಾತ್ರಿ ಅಗ್ನಿ ದರ್ಶನವಿಲ್ಲದೆ ಭೋಜನಮಾಡಬಾರದು.

೫೪. ಸೂರ್ಯದರ್ಶನ ಮಾಡಿಯೇ ಭೋಜನಮಾಡಬೇಕೇ ವಿನಾ, ಅದಿಲ್ಲದೆ ಯಾವಾಗಲೂ ಮಾಡಬಾರದು. ಸೂರ್ಯಪೂಜಾಕಾಲದಲ್ಲಿ ಆಸನವನ್ನು ಪರಿತ್ಯಾಗ ಮಾಡಿ ಕಾಲುಗಳಿಂದ ಭೂಸ್ಪರ್ಶ ಮಾಡಬಾರದು.

೫೫-೫೭. ಪ್ರತಿಮೆಯ ಛಾಯೆಯನ್ನು ದಾಟಬಾರದು. ಮತ್ತು ಯಾವಾಗಲೂ ತಿಥಿಗಳನ್ನುಲ್ಲಂಘನಮಾಡಬಾರದು. ನಕ್ಷತ್ರಗಳು, ಗ್ರಹಗಳು, ಯೋಗಗಳು, ಮಾಸಗಳು, ಮಾಸಾಧಿಪತಿಗಳು, ದಕ್ಷಿಣೋತ್ತರಾಯನಗಳು, ಷಡೃತುಗಳು, ಮಾಸಗಳು, ಎರಡು ಪಕ್ಷಗಳು, ದಿವಸಗಳು, ಸಂವತ್ಸರ ಮುಂತಾಗಿ ಕಾಲ ಎಂದು ಹೇಳಿಸಿಕೊಳ್ಳುವ ಇವೆಲ್ಲಾ, ಸ್ತುತ್ಯಗಳೂ ನಮಸ್ಕಾರಯೋಗ್ಯಗಳೂ ಪೂಜಾಯೋಗ್ಯಗಳೂ ಆಗಿವೆ. ಆದುದರಿಂದ ಕಾಲಾಧಿಪನಾದ ಸೂರ್ಯನೂ ಸಹ ಕಾಲವೆಂದು ಹೇಳಲ್ಪಡುತ್ತಾನೆ.

ಜ್ಯೋತಿರ್ಗಣಸ್ಯ ಸರ್ವಸ್ಯ ಸ್ಥಾವರಾಸ್ಥಾವರಸ್ಯ ಚ ।
ಚೇತನಾಚೇತನಸ್ಯಾಪಿ ಸರ್ವಾತ್ಮಾ ಯಃ ಪ್ರಕೀರ್ತಿತಃ ॥ ೫೮ ॥

ಸ್ತುತ್ಯೋ ವಂದ್ಯಃ ಸದಾ ಪೂಜ್ಯಸ್ತ್ವಯಾಯಂ ಸರ್ವಥಾ ನೃಪ ।
ಮನಸಾ ಕರ್ಮಣಾ ವಾಚಾ ದೇವನಿಂದಾಂ ಪರಿತ್ಯಜೇತ್ ॥ ೫೯ ॥

ಪ್ರೇಷಯಿತ್ವಾ ಚ ನಿರ್ಮಾಲ್ಯಂ ತದಶ್ವೇಭ್ಯೋ ನಿವೇದಯೇತ್ ।
ಪ್ರಕ್ಷಾಲ್ಯ ಹಸ್ತೌ ಪಾದೌ ಚ ನಮಸ್ಕುರ್ಯಾದ್ದಿವಾಕರಂ ॥ ೬೦ ॥

ಇತ್ಯೇಷಾ ಪರಮಾ ದೀಕ್ಷಾ ತವ ಸಂಕ್ಷೇಪತೋ ಮಯಾ ।
ಭುಕ್ತಿಮುಕ್ತಿಕರೀ ಚಾಪಿ ಕಥಿತಾ ಪ್ರವಿಭಾಗತಃ ॥ ೬೧ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋಪಾಖ್ಯಾನೇ ಸೂರ್ಯದೀಕ್ಷಾವರ್ಣನಂ ನಾಮ ಏಕೋನಪಂಚಾಶದುತ್ತರ ಶತತಮೋಽಧ್ಯಾಯಃ.

---

೫೮. ಸಮಸ್ತವಾದ ಜ್ಯೋತಿರ್ಮಂಡಲಕ್ಕೂ, ಸಮಸ್ತವಾದ ಸ್ಥಾವರಜಂಗಮಗಳಿಗೂ, ಚೇತನ ಅಚೇತನ ವಸ್ತುಗಳಿಗೂ, ಸರ್ವಕ್ಕೂ ಆತ್ಮಸ್ವರೂಪನು ಆ ಸೂರ್ಯನೇ ಎಂದು ಉಕ್ತವಾಗಿದೆ.

೫೯. ಅಯ್ಯಾ ಶತಾನೀಕರಾಜನೇ! ಮನೋವಾಕ್ಕರ್ಮಗಳಿಂದ ನೀನು ಯಾವಾಗಲೂ ಇವನನ್ನು ಸ್ತೋತ್ರಮಾಡಬೇಕು. ವಂದಿಸಬೇಕು. ಪೂಜಿಸಬೇಕು. ಎಂದೂ ದೇವನಿಂದೆಯನ್ನು ಮಾಡಬಾರದು.

೬೦. ನಿರ್ಮಾಲ್ಯಗಳನ್ನು ಕೂಡಿಸಿ ಸೂರ್ಯನ ಕುದುರೆಗಳಿಗೆ ನಿವೇದನಮಾಡಬೇಕು. ಕೈಕಾಲುಗಳನ್ನು ತೊಳೆದುಕೊಂಡು ಸೂರ್ಯನಿಗೆ ನಮಸ್ಕಾರಮಾಡಬೇಕು.

೬೧. ಶ್ರೇಷ್ಠವಾದ ಸೂರ್ಯದೀಕ್ಷಾ ವಿಚಾರವನ್ನು ಹೀಗೆ ನಿನಗೆ ಸಂಕ್ಷೇಪವಾಗಿ ತಿಳಿಸಿದೇನೆ. ಇದು ಭುಕ್ತಿಯನ್ನೂ, ಮುಕ್ತಿಯನ್ನೂ, ಬೇರೆಬೇರೆಯಾಗಿ ಕೊಡತಕ್ಕದ್ದೆಂದು ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ ಸೂರ್ಯದೀಕ್ಷಾವರ್ಣನೆಯೆಂಬ ನೂರನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಶದುತ್ತರಶತತಮೋಽಧ್ಯಾಯಃ

॥ ವಾಸುದೇವ ಉವಾಚ ॥

ಅತಃಪರಂ ಪ್ರವಕ್ಷ್ಯಾಮಿ ಯಥಾಪೂಜ್ಯೋ ದಿವಾಕರಃ ।
ಸ್ಥಂಡಿಲೇ ಯದುಶಾರ್ದೂಲ ನಿಬೋಧೈಕಾಗ್ರಮಾನಸಃ ॥ ೧ ॥

ಮಂಡಲೈರಷ್ಟಭಿಃ ಕಾರ್ಯಂ ಚಕ್ರಂ ಕಾಲಾತ್ಮಕಂ ಶುಭಂ ।
ಮಧ್ಯೇ ಪದ್ಮಾಕೃತಂ ಚಕ್ರಮರೈರ್ದ್ವಾದಶಭಿರ್ಯುತಂ ॥ ೨ ॥

ತನ್ಮಧ್ಯೇಕಮಲಂ ಪ್ರೋಕ್ತಂ ಪತ್ರಾಷ್ಟಕಸಮನ್ವಿತಂ ।
ಸರ್ವಾತ್ಮಾ ಸಕಲೋ ದೇವಃ ಖಷೋಲ್ಕಃ ಕಿರಣೋಜ್ವಲಃ ॥ ೩ ॥

---

### ನೂರಐವತ್ತನೆಯ ಅಧ್ಯಾಯ

೧. ಕೃಷ್ಣನು ತನ್ನ ಮಾತನ್ನು ಮುಂದುವರಿಸಿ ಸಾಂಬನನ್ನು ಕುರಿತು " ಯದುಶ್ರೇಷ್ಠನೆ! ಗುಡಿಸಿ ಸಾರಿಸಿ ಪರಿಶುದ್ಧಮಾಡಿದ ನೆಲದಲ್ಲಿ ಸೂರ್ಯನನ್ನು ಪೂಜಿಸುವುದು ಹೇಗೆ ಎಂಬ ವಿಷಯವನ್ನು ಈಗ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು.

೨. ಸಂವತ್ಸರ, ಅಯನ, ಋತು, ಮಾಸ ಇವೇ ಮೊದಲಾದ ಎಂಟು ಗುಂಪಿನಿಂದ ಕೂಡಿದ ಕಾಲಾತ್ಮಕವಾದ ಚಕ್ರವನ್ನು ಕಲ್ಪಿಸಿ, ಮಧ್ಯದಲ್ಲಿ ಹನ್ನೆರಡು ಅರೆಕಾಲುಗಳುಳ್ಳದ್ದಾಗಿ ಪದ್ಮಾಕಾರವಾಗಿ ರಚಿಸಬೇಕು.

೩. ಈ ರೀತಿ ಮಧ್ಯದಲ್ಲಿ ರಚಿಸುವ ಪದ್ಮವು, ಅಷ್ಟದಳವುಳ್ಳದ್ದಾಗಿರಬೇಕು. ಅದರ ಮಧ್ಯದಲ್ಲಿ ಸರ್ವಾತ್ಮಕನೂ, ಕಲಾಸಹಿತನೂ, ಕಿರಣಗಳಿಂದ ಪ್ರಕಾಶಮಾನನೂ, ಖಷೋಲ್ಕನೆಂದು ಸಂಜ್ಞೆಯುಳ್ಳವನೂ ಆಗಿ

ಪೂಜನೀಯಃ ಸದಾ ಮಧ್ಯೇ ಸಹಸ್ರಕಿರಣಾಯುಧಃ ।
ಪ್ರಣವೇನ ಮಹಾಬಾಹೋ ಚತುರ್ಬಾಹುಸಮನ್ವಿತಃ ॥ ೪ ॥

ಅರುಣಂ ಪೂಜಯೇತ್ಪ್ರಾಜ್ಞಃ ಸದಾ ದೇವಾಗ್ರಜಂ ಶುಭಂ ।
ದಕ್ಷಿಣೇ ಪೂಜಯೇದ್ದೇವೀಂ ನಿಕ್ಷುಭಾಂ ಭಾಸ್ಕರಸ್ಯ ತು ॥ ೫ ॥

ರೇವತಂ ದಕ್ಷಿಣೇ ಪಾರ್ಶ್ವೇ ಉತ್ತರೇ ಪಿಂಗಲಂ ಸದಾ ।
ಸಂಜ್ಞಾಂ ಚ ಯದುಶಾರ್ದೂಲ ಶ್ರೇಯಸೇ ಸತತಂ ಬುಧಃ ॥ ೬ ॥

ಆಗ್ನೇಯ್ಯಾಂ ಲೇಖಕಂ ವೀರ ನೈಋತ್ಯಾಮಶ್ವಿನೌ ತಥಾ ।
ವಾಯವ್ಯಾಂ ಪೂಜಯೇದ್ದೇವಂ ಮನುಂ ವೈವಸ್ವತಂ ವಿಭುಂ ॥ ೭ ॥

ಐಶಾನ್ಯಾಂ ಪೂಜಯೇದ್ದೇವೀಂ ಯಮುನಾಂ ಲೋಕಪಾವನೀಂ ।
ದ್ವಿತೀಯಾವರಣೇ ವೀರ ಪೂರ್ವತಃ ಪೂಜಯೇದ್ವಿಯತ್ ॥ ೮ ॥

---

೪-೫. ಸಹಸ್ರ ಕಿರಣಾಯುಧನೂ, ಚತುರ್ಬಾಹುಗಳುಳ್ಳವನೂ ಆದ ಸೂರ್ಯನನ್ನು ಪ್ರಣವಪೂರ್ವಕವಾಗಿ ಪೂಜಿಸಬೇಕು. ಅಯ್ಯಾ ಯದುಕುಲ ಮಹಾಬಾಹುವೇ! ಪ್ರಾಜ್ಞನಾದವನು ದೇವತೆಗಳಲ್ಲಿ ಮೊದಲಿಗನೂ, ಶುಭಕರನೂ, ಆದ ಅರುಣನನ್ನು ಮುಂಭಾಗದಲ್ಲಿ ಪೂಜಿಸಬೇಕು. ಸೂರ್ಯನ ಬಲಗಡೆ ನಿಕ್ಷುಭಾದೇವಿಯನ್ನು ಪೂಜಿಸಬೇಕು.

೬. ದಕ್ಷಿಣದಲ್ಲಿ ರೇವತನನ್ನೂ, ಉತ್ತರದಲ್ಲಿ ಪಿಂಗಳನನ್ನೂ, ಮತ್ತು ಸಂಜ್ಞಾದೇವಿಯನ್ನೂ ಸ್ಥಾಪಿಸುವುದು ಪ್ರಾಜ್ಞನಾದವನಿಗೆ ಶ್ರೇಯಸ್ಕರವಾದುದು.

೭. ಆಗ್ನೇಯದಲ್ಲಿ ಲೇಖಕನನ್ನೂ ನೈಋತ್ಯದಲ್ಲಿ ಅಶ್ವಿನೀ ದೇವತೆಗಳನ್ನೂ ವಾಯುವ್ಯದಲ್ಲಿ ಮನ್ವಂತರಾಧಿಪನಾದ ವೈವಸ್ವತಮನುವನ್ನೂ ಸ್ಥಾಪಿಸಿ ಪೂಜಿಸಬೇಕು.

೮. ವೀರನೇ! ಕೇಳು ಈಶಾನ್ಯಯಲ್ಲಿ ಲೋಕಪಾವನೆಯಾದ ಯಮುನಾದೇವಿಯನ್ನು ಪೂಜಿಸಬೇಕು. ದ್ವಿತೀಯಾವರಣದಲ್ಲಿ ಪೂರ್ವದಿಕ್ಕಿನಲ್ಲಿ ಆಕಾಶವನ್ನೂ

**ದಕ್ಷಿಣೇ ಚ ತತೋ ದೇವೀಂ ಪಶ್ಚಿಮೇ ಗರುಡಂ ತಥಾ ।**
**ಉತ್ತರೇ ನಾಗರಾಜಾನಂ ಪುತ್ರವತಂ ಶುಭಂ　　　　॥ ೯ ॥**

**ಆಗ್ನೇಯ್ಯಾಂ ಪೂಜಯೇದ್ಧೇಲಿಂ ಪ್ರಹೇಲಿಂ ನೈಋತೇ ತಥಾ ।**
**ವಾಯುವ್ಯಾಮೂರ್ವಶೀಂ ದೇವೀ ಮೀಶಾನೇ ವಿನತಾಂ ತಥಾ　　॥ ೧೦ ॥**

**ತೃತೀಯಾವರಣೇ ಪೂರ್ವೇ ಪೂಜಯೇದ್ಗುರುಮಾದರಾತ್ ।**
**ಪಶ್ಚಿಮೇತ್ವರ್ಕಪುತ್ರಂ ತು ಉತ್ತರೇ ಧಿಷಣಂ ತಥಾ　　　॥ ೧೧ ॥**

**ಐಶಾನೇ ಶಶಿಪುತ್ರಂ ತು ಸೋಮಮಾಗ್ನೇಯಮಂಡಲೇ ।**
**ಪೂಜಯೇದ್ದಕ್ಷಿಣೇ ಭೌಮಂ ನೈಋತೇ ರಾಹುಮಾದರಾತ್　　॥ ೧೨ ॥**

**ವಾಯವ್ಯೇ ವಿಕಚಂ ವೀರ ಪೂಜಯೇತ್ಸತತಂ ಬುಧಃ ।**
**ಚತುರ್ಥಾವರಣೇ ದೇವಂ ಪೂಜಯೇಲ್ಲೇಖಮಾದರಾತ್　　　॥ ೧೩ ॥**

---

೯. ಅನಂತರ ದಕ್ಷಿಣದಲ್ಲಿ ಛಾಯಾದೇವಿಯನ್ನೂ, ಪಶ್ಚಿಮದಲ್ಲಿ ಗರುಡನನ್ನೂ, ಉತ್ತರದಲ್ಲಿ ನಾಗರಾಜನನ್ನೂ, ಮತ್ತು ಅವನ ಪುತ್ರನೂ ಶುಭಕರನೂ ಆದ ಐರಾವತನನ್ನೂ, ಪೂಜಿಸಬೇಕು.

೧೦. ಆಗ್ನೇಯದಲ್ಲಿ ಹೇಲಿಯನ್ನೂ, ನೈಋತ್ಯದಲ್ಲಿ ಪ್ರಹೇಲಿಯನ್ನೂ, ವಾಯುವ್ಯದಲ್ಲಿ ಊರ್ವಶೀದೇವಿಯನ್ನೂ, ಈಶಾನ್ಯದಲ್ಲಿ ವಿನತೆಯನ್ನೂ ಪೂಜಿಸಬೇಕು.

೧೧. ತೃತೀಯಾವರಣದಲ್ಲಿ ಪೂರ್ವದಿಕ್ಕಿನಲ್ಲಿ ದೈತ್ಯಗುರುವನ್ನೂ, ಪಶ್ಚಿಮದಿಕ್ಕಿನಲ್ಲಿ ಸೂರ್ಯಪುತ್ರನಾದ ಶನಿಯನ್ನೂ, ಉತ್ತರದಲ್ಲಿ ಬೃಹಸ್ಪತಿಯನ್ನೂ, ಪೂಜಿಸಬೇಕು.

೧೨. ಅಯ್ಯಾ ವೀರನೇ! ಪ್ರಾಜ್ಞನು ಈಶಾನ್ಯ ಮೂಲೆಯಲ್ಲಿ ಚಂದ್ರಪುತ್ರನಾದ ಬುಧನನ್ನೂ, ಆಗ್ನೇಯದಲ್ಲಿ ಚಂದ್ರನನ್ನೂ, ದಕ್ಷಿಣದಿಕ್ಕಿನಲ್ಲಿ ಕುಜನನ್ನೂ, ನೈಋತ್ಯಮೂಲೆಯಲ್ಲಿ ರಾಹುವನ್ನೂ, ವಾಯುವ್ಯದಲ್ಲಿ ಕೇತುವನ್ನೂ, ಯಾವಾಗಲೂ ಪೂಜಿಸಬೇಕು. ಕೇತುವಿಗೆ ಶಿರಸ್ಸು ಇಲ್ಲವಾದ್ದರಿಂದ ಅವನನ್ನು ವಿಕಚನೆನ್ನುವರು.

೧೩. ಚತುರ್ಥಾವರಣದಲ್ಲಿ ಪ್ರಾಚೀದಿಕ್ಕಿನಲ್ಲಿ ಲೇಖ (ಇಂದ್ರ) ದೇವನನ್ನು ಆದರದಿಂದ ಪೂಜಿಸಬೇಕು. ಆಗ್ನೇಯದಲ್ಲಿ ಶಾಂಡಲೀಪುತ್ರ ಅಗ್ನಿಯನ್ನೂ ದಕ್ಷಿಣದಲ್ಲಿ ದಕ್ಷಿಣಾಧಿಪ (ಯಮ) ನನ್ನೂ

ಆಗ್ನೇಯ್ಯಾಂ ಶಾಂಡಿಲೀಪುತ್ರಂ ದಕ್ಷಿಣೇ ದಕ್ಷಿಣಾಧಿಪಂ ।
ವಿರೂಪಾಕ್ಷಂ ನೈಋತೇ ಚ ಜಲೇಶಂ ಪಶ್ಚಿಮೇ ತಥಾ ॥ ೧೪ ॥

ವಾಯುದೇವಂ ಚ ವಾಯವ್ಯಾಂ ಸತತಂ ಪೂಜಯೇನ್ನರಃ ।
ಉತ್ತರೇ ಯಕ್ಷರಾಜಾನಂ ಕುಬೇರಂ ಪೂಜಯೇದ್ಬುಧಃ ॥ ೧೫ ॥

ಈಶಾನೇ ದೇವಮೀಶಾನಂ ಸತತಂ ಪೂಜಯೇದ್ಬುಧಃ ।
ಪಂಚಮೇ ಪೂಜಯೇದ್ವೀರ ಸದಾ ಸ್ವಾವರಣೇ ದ್ವಿಜಾಃ ॥ ೧೬ ॥

ಪೂರ್ವತಃ ಪರಮಾಂ ದೇವೀಂ ಮಹಾಶ್ವೇತಾಂ ಮಹಾಮತಿಃ ।
ಶ್ರಿಯಮೃದ್ಧಿಂ ವಿಭೂತಿಂ ಚ ಧೃತಿಂಚೈವೋನ್ನತಿಂ ತಥಾ ॥ ೧೭ ॥

ಪೃಥಿವೀಂ ಯದುಶಾರ್ದೂಲ ಮಹಾಕೀರ್ತಿಂ ತಥೈವ ಚ ।
ಇಂದ್ರಂ ವಿಷ್ಣುಂ ಚಾರ್ಯಮಣಂ ಭಗಂ ಪರ್ಜನ್ಯಮೇವ ಚ ॥ ೧೮ ॥

---

೧೪. ನೈಋತ್ಯದಲ್ಲಿ ವಿರೂಪಾಕ್ಷನಾದ (ನಿಋಋತಿ) ಯನ್ನೂ, ಪಶ್ಚಿಮದಲ್ಲಿ ವರುಣನನ್ನೂ, ವಾಯುವ್ಯದಲ್ಲಿ ವಾಯದೇವನನ್ನೂ ಯಾವಾಗಲೂ ಪೂಜಿಸಬೇಕು.

೧೫. ಉತ್ತರದಲ್ಲಿ ಯಕ್ಷರಾಜನಾದ ಕುಬೇರನನ್ನು ಪೂಜಿಸಬೇಕು. ಯಾವಾಗಲೂ ವಿದ್ವಾಂಸನು ಈಶಾನ್ಯಮೂಲೆಯಲ್ಲಿ ಈಶಾನನನ್ನು ಪೂಜಿಸಬೇಕು.

೧೬. ಅಯ್ಯಾ ವೀರನೇ! ಕೇಳು ಬ್ರಾಹ್ಮಣರು ಪಂಚಮಾವರಣದಲ್ಲಿ ಯಾವಾಗಲೂ ಅವನಲ್ಲಿರುವ ಶಕ್ತಿಯರನ್ನು ಪೂಜಿಸಬೇಕು. ಅವರ ಹೆಸರು ಈ ಮುಂದೆ ಸೂಚಿತವಾಗಿದೆ.

೧೭. ಯದುಶ್ರೇಷ್ಠನೇ! ಕೇಳು ಮಹಾಮತಿಯಾದ ಪೂರ್ವದಿಕ್ಕಿನಿಂದವನು ಆರಂಭಿಸಿ ಕ್ರಮವಾಗಿ ಎಂಟುದಿಕ್ಕುಗಳಲ್ಲಿಯೂ ಮಹಾಶ್ವೇತಾಮಹಾದೇವಿ, ಶ್ರೀ, ಋದ್ಧಿ, ವಿಭೂತಿ, ಧೃತಿ, ಉನ್ನತಿ, ಪೃಥಿವೀ, ಮಹಾಕೀರ್ತಿ, ಈ ಶಕ್ತಿಯರನ್ನು ಪೂಜಿಸಬೇಕು.

೧೮-೧೯. ಷಷ್ಠಾವರಣದಲ್ಲಿ ಜಾಜ್ವಲ್ಯಮಾನವಾದ ಕಿರಣವುಳ್ಳ ಇಂದ್ರ, ವಿಷ್ಣು, ಅರ್ಯಮಾ, ಭಗ, ಪರ್ಜನ್ಯ, ವಿವಸ್ವಾನ್, ತ್ವಷ್ಟಾ, ವರುಣ ಎಂಬ ಹೆಸರಿನ ದಿವಾಕರರನ್ನು ಪೂಜಿಸಬೇಕು.

ವಿವಸ್ವಂತಂ ತಥಾರ್ಕಂ ಚ ತ್ವಷ್ಟಾರಂ ಕಿರಣೋಜ್ವಲಂ ।
ಪೂಜಯೇದ್ವರುಣಂ ಷಷ್ಠೇ ಚೈವಮೇತಾನ್ ದಿವಾಕರಾನ್ ॥ ೧೯ ॥

ಶಿರೋ ನೇತ್ರೇ ತಥಾ ವರ್ಮ ಅಸ್ತ್ರಂ ಚ ಯದುಸತ್ತಮ ।
ಅರುಣಂ ಸರಥಂ ವೀರ ಸಪ್ತಮೇ ಪೂಜಯೇದ್ಬುಧಃ ॥ ೨೦ ॥

ತಥಾಶ್ವಾನ್ ಯದುಶಾರ್ದೂಲ ಸದಾಚಾವರಣೇ ಬುಧಃ ।
ಯಕ್ಷರಕ್ಷಾಂಸಿ ಗಂಧರ್ವಾನ್ ಮಾಸಾನ್ ಪಕ್ಷಾನಹಾನಿ ತು ॥ ೨೧ ॥

ಸಂವತ್ಸರಂ ತಥಾ ಪುತ್ರ ಹ್ಯೇತಾನ್ತ್ಸಂಪೂಜಯೇತ್ಪುರಾ ।
ಯ ಏವಂ ಪೂಜಯೇದ್ದೇವಂ ಭಾಸ್ಕರಂ ಸತತಂ ನರಃ ॥
ಸ ಗಚ್ಛೇತ್ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೨೨ ॥

( ॥ ಓಂ ಖಷೋಲ್ಕಾಯನಮಃ ॥ )

ಮೂಲಮಂತ್ರಾಕ್ಷರಾಣೀಹ ಚಾಂಗಾನಿ ಪರಿಚಕ್ಷತೇ ।
ಅನೇನ ವಿಧಿನಾ ಯಸ್ತು ಪೂಜಯೇತ್ಸತತಂ ರವಿಂ ॥ ೨೩ ॥

---

೨೦. ಎಲೈ ಯದುಶ್ರೇಷ್ಠನೇ! ಸಪ್ತಮಾವರಣದಲ್ಲಿ ಸೂರ್ಯನ ಶಿರಸ್ಸು, ಎರಡು ನೇತ್ರಗಳು, ಕವಚ, ಅಸ್ತ್ರಗಳು, ರಥಸಹಿತನಾದ ಅರುಣ ಮತ್ತು ರಥದ ಅಶ್ವಗಳು ಇವನ್ನು ಸದಾ ಪೂಜಿಸಬೇಕು.

೨೧. ಎಲೈ ಸುವ್ರತನೇ ! ಕೇಳು ಯಕ್ಷರು, ರಕ್ಷಸ್ಸುಗಳು, ಗಂಧರ್ವರು, ಮಾಸಗಳು, ಪಕ್ಷಗಳು, ದಿವಸಗಳು, ಸಂವತ್ಸರ, ಇವನ್ನು ಮೊದಲೇ ಪೂಜಿಸಬೇಕು.

೨೨. ಹೀಗೆ ಯಾವಾಗಲೂ ಭಾಸ್ಕರನನ್ನು ಪೂಜಿಸುವವನು ಶ್ರೇಷ್ಠವಾದ ಸ್ಥಾನವನ್ನು ಹೊಂದುವನು. ಅಲ್ಲಿ ಹೋದ ಮೇಲೆ ದುಃಖವನ್ನು ಅನುಭವಿಸ ಬೇಕಾಗಿಲ್ಲ.

೨೩. ಈ ಸಂದರ್ಭದಲ್ಲಿ " ಓಂ ಖಷೋಲ್ಕಾಯನಮಃ " ಈ ಮೂಲಮಂತ್ರದ ಅಕ್ಷರಗಳನ್ನೇ ಅಂಗಗಳೆಂದು ಹೇಳುತ್ತಾರೆ. ಯಾವನು ಈ ವಿಧಿಗೆ ಅನುಸಾರವಾಗಿ ಎರಡು ಸಪ್ತಮಿಯಲ್ಲೂ, ಸೂರ್ಯನನ್ನು ಪೂಜಿಸುವನೋ ಅವನು ಪರಮಪದ ವನ್ನೈದುವನು.

ನಿತ್ಯಮುಭಯಸಪ್ತಮ್ಯಾಂ ಸ ಗಚ್ಛೇತ್ಪರಮಂ ಪದಂ ।
ಇತ್ಯುಕ್ತ್ವಾ ಭಗವಾನ್ ದೇವೋ ಜಗಾಮಾಶು ಗೃಹಂ ರವಿಃ ॥ ೨೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಾಂಬೋ
ಪಾಖ್ಯಾನೇ ಆದಿತ್ಯಪೂಜಾ ವಿಧಿವರ್ಣನಂ ನಾಮ ಪಂಚಾಶ
ದುತ್ತರ ಶತತಮೋಽಧ್ಯಾಯಃ



---

೨೪. ಹೀಗೆ ಹೇಳಿ ಭಗವಂತನಾದ ಸೂರ್ಯದೇವನು ಶೀಘ್ರವಾಗಿ ತನ್ನ ನಿವಾಸಕ್ಕೆ ಹೋದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ
ಆದಿತ್ಯಪೂಜಾ ವಿಧಿವರ್ಣನವೆಂಬ ನೂರೈವತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕಪಂಚಾಶದುತ್ತರಶತತಮೋಽಧ್ಯಾಯಃ

॥ ಸೂತ ಉವಾಚ ॥

**ಅಥ ರಾಜಾ ಮಹಾತೇಜಾ ಶತಾನೀಕೋ ದ್ವಿಜೋತ್ತಮಂ ।**
**ಪ್ರಣಮ್ಯ ಶಿರಸಾ ಭಕ್ತ್ಯಾ ಸುಮಂತುಂ ವಾಕ್ಯಮಬ್ರವೀತ್ ॥ ೧ ॥**

**ಅಹೋ ದೇವಸ್ಯ ಮಾಹಾತ್ಮ್ಯಂ ಭಾಸ್ಕರಸ್ಯಾಮಿತೌಜಸಃ ।**
**ಕೀರ್ತಿತಂ ಭವತಾ ಮಹ್ಯಂ ಸರ್ವಪಾಪಪ್ರಣಾಶನಂ ॥ ೨ ॥**

**ತಸ್ಮಾನ್ನಾರ್ಕಸಮಂ ದೇವಂ ಲೋಕೇ ಪಶ್ಯಾಮಿ ಸುವ್ರತ ।**
**ನಚಾಪ್ಯಸ್ಯ ಸ್ಥಿತಾ ವಿಪ್ರ ಗತಿರ್ಲೋಕೇಷು ವಿದ್ಯತೇ ॥ ೩ ॥**

---

## ನೂರಐವತ್ತೊಂದನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಅನಂತರ ಮಹಾತೇಜಸ್ವಿಯಾದ ಶತಾನೀಕ ರಾಜನು ಬ್ರಾಹ್ಮಣಶ್ರೇಷ್ಠನಾದ ಸುಮಂತುವಿಗೆ ತಲೆಬಾಗಿ ನಮಿಸಿ, ಈ ಮಾತನ್ನು ಹೇಳಿದನು.

೨. ಅಮಿತ ಪರಾಕ್ರಮವುಳ್ಳ ಭಾಸ್ಕರದೇವನ, ಸರ್ವಪಾಪಪರಿಹಾರಕವಾದ ಮಹಾತ್ಮೆಯು, ಆಶ್ಚರ್ಯಕರವಾದುದು. ಅದನ್ನು ನೀವು ನನಗೆ ಹೇಳಿದಿರಿ.

೩. ಅಯ್ಯಾ ಮಹಾತ್ಮನಾದ ವಿಪ್ರನೇ! ಸೂರ್ಯನಿಗೆ ಸಮನಾದ ದೇವರು ಲೋಕದಲ್ಲಿ ಮತ್ತೆ ಯಾರೂ ಕಾಣುವುದಿಲ್ಲ. ಈ ಸೂರ್ಯನಿಗೆ ಪೂರ್ವದಲ್ಲಿ ತೇಜೋತಿಶಯದಿಂದ ದುಸ್ಸಹಜವಾಗಿದ್ದ ಸ್ಥಿತಿಯು ಈಗ ಇಲ್ಲ.

ಪ್ರವರ್ತತೇ ಜಗದ್ವಿಪ್ರ ಸರ್ಗಕಾಲೇ ದಿವಾಕರಃ ।
ಸ್ಥಿತೌ ಪಾಲಯತೇ ಚಾಪಿ ಕಲ್ಪಾಂತೇ ಸಂಹರೇತ್ಪುನಃ ॥ ೪ ॥

ಶ್ರುತ್ವೈವಂ ದೇವಮಾಹಾತ್ಮ್ಯಂ ಭಾಸ್ಕರಸ್ಯಾಮಿತೌಜಸಃ ।
ಕೀರ್ತಿತಂ ಭವತಾ ಮಹ್ಯಮಶ್ವಮೇಧಶತಾದ್ವರಂ ॥ ೫ ॥

ಕಿಂತು ಮೇ ಸಂಶಯೋ ಬ್ರಹ್ಮನ್ ಸುಮಹಾನ್ ಹೃದಿ ವರ್ತತೇ ।
ಕೇನೋಪಾಯೇನ ವಿಪ್ರೇಂದ್ರ ಮುಚ್ಯತೇ ಸಂಭವಾರ್ಣವಾತ್ ॥ ೬ ॥

ದಿವಾಕರಪ್ರಸಾದಾದ್ವೈ ಸುಪ್ರಸನ್ನಾದ್ವೃಷಧ್ವಜಾತ್ ।
ಕಥಂ ತುಷ್ಯೇತ್ಸದಾ ದೇವೋ ಧರ್ಮೇಣ ಕತರೇಣ ತು ॥ ೭ ॥

ಶ್ರುತಾ ಮೇ ಬಹವೋ ಧರ್ಮಾಃ ಶ್ರುತಿಸ್ಮೃತ್ಯುದಿತಾಸ್ತಥಾ ।
ವೈಷ್ಣವಾಃ ಶೈವಧರ್ಮಾಶ್ಚ ತಥಾ ಪೌರಾಣಿಕಾಃ ಶ್ರುತಾಃ ॥ ೮ ॥

---

೪. ಎಲೈ ವಿಪ್ರನೇ! ಸೃಷ್ಟಿಕಾಲದಲ್ಲಿ ಅವನಿಂದ ಜಗತ್ತು ಉತ್ಪತ್ತಿಯಾಗುತ್ತವೆ. ಸ್ಥಿತಿಕಾಲದಲ್ಲಿ ಅವನೇ ಅದನ್ನು ರಕ್ಷಿಸುತ್ತಾನೆ. ಪ್ರಳಯಕಾಲದಲ್ಲಿ ಅವನೇ ಪುನಃ ಸಂಹರಿಸುತ್ತಾನೆ.

೫. ಅಪರಿಮಿತ ಬಲವುಳ್ಳ ಭಾಸ್ಕರದೇವನ ಮಹಾತ್ಮೆಯನ್ನು ಕೇಳಿದುದಕ್ಕೆ ನೀನು ನನಗೆ ಇದು ಅಶ್ವಮೇಧಕ್ಕಿಂತ ಶ್ರೇಷ್ಠವಾದುದು ಎಂದು ಹೇಳಿದೆ.

೬-೭. ಎಲೈ ಬ್ರಾಹ್ಮಣನೇ! ನನ್ನ ಮನಸ್ಸಿನಲ್ಲಿ ದೊಡ್ಡ ಸಂಶಯವೊಂದಿದೆ. ಜನನ ಮರಣ ರೂಪವಾದ ಸಂಸಾರಸಮುದ್ರದಿಂದ ಮಾನವನು ಮುಕ್ತನಾಗಬೇಕಾದರೆ ಏನು ಉಪಾಯ? ದಿವಾಕರನ ಪ್ರಸಾದದಿಂದಲೋ? ಅಥವಾ ವೃಷಭಧ್ವಜನ ಪ್ರಸಾದದಿಂದಲೋ ? ಆ ಪರಮಾತ್ಮನು ಸಂತುಷ್ಟನಾಗುವ ಬಗೆ ಹೇಗೆ ? ಅವನನ್ನು ತುಷ್ಟಿಪಡಿಸಲು ಯಾವ ಧರ್ಮವನ್ನು ಆಚರಿಸಬೇಕು.

೮. ಶ್ರುತಿಸ್ಮೃತಿಗಳಲ್ಲಿ ಹೇಳಿದ ಅನೇಕ ಧರ್ಮಗಳನ್ನು ನಾನು ಕೇಳಿದ್ದೇನೆ. ವೈಷ್ಣವ, ಶೈವ, ಪೌರಾಣಿಕ ಮೊದಲಾದ ಬಹುಧರ್ಮಗಳನ್ನು ಶ್ರವಣಮಾಡಿದ್ದೇನೆ.

ಶ್ರೋತುಕಾಮೋಽಸ್ಮ್ಯಹಂ ವಿಪ್ರ ಸೌರಂಧರ್ಮಮನೂಪಮಂ ।
ಭಗವನ್ಸರ್ವಥನ್ಯಾಸ್ತೇ ಸೌರಧರ್ಮಪರಾಯಣಾಃ ॥ ೯ ॥

ಬ್ರೂಹಿ ಮೇ ದೇವದೇವಸ್ಯ ಭಾನೋರ್ಧರ್ಮಮನೂಪಮಂ ।
ಶೃಣ್ವತೋ ನಾಸ್ತಿ ಮೇ ತೃಪ್ತಿರಮೃತಸ್ಯೇವ ಮೇ ವಚಃ ॥ ೧೦ ॥

ಅಶ್ವಮೇಧಾದಯೋ ಯಜ್ಞಾ ಬಹುಸಂಭಾರವಿಸ್ತರಾಃ ।
ನ ಶಕ್ಯಾಸ್ತೇ ಯತಃ ಕರ್ತುಮಲ್ಪವಿತ್ತೈರ್ದ್ವಿಜಾತಿಭಿಃ ॥ ೧೧ ॥

ಸುಖೋಪಾಯಮತೋ ಬ್ರೂಹಿ ಧರ್ಮಕಾಮಾರ್ಥಸಾಧಕಂ ।
ಹಿತಾಯ ಸರ್ವಮರ್ತ್ಯಾನಾಂ ಸರ್ವಪಾಪಭಯಾಪಹಂ ॥ ೧೨ ॥

ಸೌರಧರ್ಮಪರಂ ಪುಣ್ಯಂ ಪವಿತ್ರಂ ಪಾಪನಾಶನಂ ।
ಶ್ರುತ್ವಾ ತು ವಚನಂ ರಾಜ್ಞೋ ವ್ಯಾಸಶಿಷ್ಯೋ ಮಹಾಮುನಿಃ ॥
ಪ್ರಣಮ್ಯ ಶಿರಸಾ ವ್ಯಾಸಮಿದಂ ವಚನಮಬ್ರವೀತ್ ॥ ೧೩ ॥

---

೯. ಈಗ ನಿರುಪಮವಾದ ಸೌರಧರ್ಮವನ್ನು ಕೇಳಲು ಅಪೇಕ್ಷೆಯುಳ್ಳವನಾಗಿದ್ದೇನೆ. ಎಲೈ ಪೂಜ್ಯನೇ! ಸೌರಧರ್ಮದಲ್ಲಿ ಅಸಕ್ತರಾದ ಜನರು ಮಿಕ್ಕ ಎಲ್ಲರಿಗಿಂತ ಧನ್ಯರೆನಿಸುವರು.

೧೦. ಆದುದರಿಂದ ದೇವದೇವನಾದ ಭಾನುಪೂಜೆಯ ಅಸದೃಶವಾದ ಧರ್ಮವನ್ನು ನನಗೆ ಹೇಳು. ಅಮೃತ ಪಾನಮಾಡುತ್ತಿರುವನಿಗೆ ಸಾಕೆಂಬ ತೃಪ್ತಿಯು ಹೇಗೆ ಉಂಟಾಗುವುದಿಲ್ಲವೋ ಹಾಗೆ ಸೌರಧರ್ಮವನ್ನು ಕೇಳುವುದರಲ್ಲಿ ನನಗೂ ತೃಪ್ತಿಯುಂಟಾಗುವುದಿಲ್ಲ.

೧೧. ಸ್ವಲ್ಪ ದ್ರವ್ಯಾನುಕೂಲವುಳ್ಳ ಬ್ರಾಹ್ಮಣರು, ಬಹುಸಂಭಾರಗಳಿಂದ ನಿರ್ವಹಿಸಬೇಕಾದ ಅಶ್ವಮೇಧ ಮೊದಲಾದ ಯಜ್ಞಗಳನ್ನು ಮಾಡಲು ಶಕ್ತರಲ್ಲ.

೧೨. ಆದುದರಿಂದ ಧರ್ಮ ಅರ್ಥ ಕಾಮಗಳನ್ನು ಸಂಪಾದಿಸಿಕೊಡತಕ್ಕ, ಮತ್ತು ಸರ್ವಪಾಪಭಯವನ್ನೂ ಹೋಗಲಾಡಿಸುವ ಸುಖೋಪಾಯವನ್ನು, ಸರ್ವ ಜನರ ಹಿತಕ್ಕಾಗಿ ಹೇಳು ಎಂದನು.

೧೩. ವ್ಯಾಸಶಿಷ್ಯನಾದ ಸುಮಂತು ಮಹಾಮುನಿಯು ದೊರೆಯ ಈಮಾತನ್ನು ಕೇಳಿ ಗುರುಗಳಾದ ವ್ಯಾಸರಿಗೆ ತಲೆಬಾಗಿ ನಮಿಸಿ ಈ ಪ್ರಕಾರ ಹೇಳತೊಡಗಿದನು.

॥ ಸುಮಂತುರುವಾಚ ॥

ಶ್ರೂಯತಾಮಭಿಧಾಸ್ಯಾಮಿ ಸುಖೋಪಾಯಂ ಮಹಾಮತೇ ।
ಪರಮಂ ಸರ್ವಧರ್ಮಾಣಾಂ ಸರ್ವಧರ್ಮಮನೂಪಮಂ ॥ ೧೪ ॥

ರವಿಣಾ ಕಥಿತಂ ಪೂರ್ವಮರುಣಾಯ ವಿಶಾಂಪತೇ ।
ಕೃಷ್ಣಸ್ಯ ಬ್ರಹ್ಮಣೋ ವೀರ ಶಂಕರಸ್ಯ ನ ವಿದ್ಯತೇ ॥ ೧೫ ॥

ಸಂಸಾರಾರ್ಣವಮಗ್ನಾನಾಂ ಸರ್ವೇಷಾಂ ಪ್ರಾಣಿನಾಮಯಂ ।
ಉದಿತಃ ಸೌರ ಧರ್ಮೋಽಯಂ ಹಿತಾಯ ಜಗತ ಸ್ಸದಾ ॥ ೧೬ ॥

ಯೈರಯಂ ಶಾಂತಹೃದಯೈಃ ಸೂರ್ಯಭಕ್ತೈರ್ಭಗಾರ್ಥಿಭಿಃ ।
ಸಂಸೇವ್ಯತೇ ಪರೋ ಧರ್ಮಸ್ತೇ ಸೌರಾ ನಾತ್ರ ಸಂಶಯಃ ॥ ೧೭ ॥

---

೧೪. ಆಗ ಸುಮಂತುಮುನಿವರ್ಯರು ಉತ್ತರಹೇಳುವರಾಗಿ ಅಯ್ಯಾ ಬುದ್ಧಿಶಾಲಿಯೆ! ಸುಖೋಪಾಯವನ್ನು ಹೇಳುತ್ತೇನೆ ಕೇಳು. ಅದು ಸರ್ವಧರ್ಮಗಳಲ್ಲೆಲ್ಲಾ ಶ್ರೇಷ್ಠವಾಗಿರತಕ್ಕದ್ದು ; ಸರ್ವಜನಗಳಿಗೂ ಆಚರಿಸುವುದಕ್ಕೆ ಯೋಗ್ಯವಾದುದು; ಮತ್ತು ಅಸದೃಶವಾದುದು.

೧೫. ಅಯ್ಯಾ ವೀರನಾದ ಮಾನವಾಧಿಪನೇ! ಹಿಂದೆ ರವಿಯು ಅರುಣನಿಗೆ ಹೇಳಿದ ಸ್ವಕೀಯವಾದ ಮಹಿಮೆಯ ರೀತಿಯಾದ ಮಹಿಮೆಯು ; ಕೃಷ್ಣನಿಗಾಗಲಿ, ಬ್ರಹ್ಮನಿಗಾಗಲಿ, ಶಂಕರನಿಗಾಗಲಿ ಇಲ್ಲ.

೧೬. ಸಂಸಾರಸಮುದ್ರದಲ್ಲಿ ಮುಳುಗಿದ ಸರ್ವಪ್ರಾಣಿಘಟಿತವಾದ ಈ ಜಗತ್ತಿಗೆ ಸದಾ ಹಿತವುಂಟಾಗುವುದಕ್ಕೋಸ್ಕರವೇ ಶ್ರೇಷ್ಠವಾದ ಈ ಸೌರಧರ್ಮವು ಉಕ್ತವಾಗಿದೆ

೧೭. ಶಾಂತಹೃದಯರೂ, ಕೀರ್ತಿಯನ್ನು ಅಪೇಕ್ಷಿಸುವವರೂ ಆಗಿ, ಶ್ರೇಷ್ಠವಾದ ಈ ಧರ್ಮವನ್ನು ಸೇವಿಸುವ ಸೂರ್ಯಭಕ್ತರೇ ಸೌರರು. ಈ ವಿಚಾರದಲ್ಲಿ ಸಂಶಯವಿಲ್ಲ.

ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ನಿತ್ಯಮೇವ ಚ ।
ಯೇ ಸ್ಮರಂತಿ ರವಿಂ ಭಕ್ತ್ಯಾ ತೇ ಧನ್ಯಾ ನಾತ್ರ ಸಂಶಯಃ ॥ ೧೮ ॥

ಸರ್ವಪಾಪೈರ್ವಿಮುಚ್ಯಂತೇ ಸಪ್ತಜನ್ಮಕೃತೈರಪಿ ।
ಸ್ತುವಂತಿ ಯೇ ಸದಾ ಭಾನುಂ ನ ತೇ ಪ್ರಾಕೃತಮಾನುಷಾಃ ॥
ಸ್ವರ್ಗಲೋಕಾತ್ಪರಿಭ್ರಷ್ಟಾಸ್ತೇ ಜ್ಞೇಯಾ ಭಾಸ್ಕರಾ ಭುವಿ ॥ ೧೯ ॥

ನಾನರ್ಕಃ ಸ್ಮರತೇರ್ಕಂ ವೈ ನಾನರ್ಕೋರ್ಕಂ ಸಮರ್ಚಯೇತ್ ।
ನಾನರ್ಕಃ ಕೀರ್ತಯೇದರ್ಕಂ ನಾನರ್ಕೋರ್ಕಮವಾಪ್ನುಯಾತ್ ॥೨೦॥

ಸೌರಧರ್ಮಸ್ಯ ಸಾರೋಽಯಂ ಸೂರ್ಯಭಕ್ತಿಃ ಸುನಿಶ್ಚಲಾ ।
ಷೋಡಶಾಂಗಾ ಚ ಸಾ ಪ್ರೋಕ್ತಾ ರವಿಣೇಹ ದಿವೌಕಸಾಂ ॥ ೨೧ ॥

---

೧೮. ಪ್ರಾತಃಕಾಲ ಒಂದೇಕಾಲದಲ್ಲೋ; ಪ್ರಾತಃ, ಸಾಯಂ ಎಂಬ ಎರಡು ಕಾಲಗಳಲ್ಲೋ, ಇಲ್ಲವೇ ಪ್ರಾತಃ, ಮಧ್ಯಾಹ್ನ, ಸಾಯಂ ಎಂಬ ಮೂರು ಕಾಲ ಗಳಲ್ಲೋ, ಅಥವಾ ನಿತ್ಯದಲ್ಲಿಯೋ, ಯಾರು ಸೂರ್ಯನನ್ನು ಸ್ಮರಿಸುವರೋ ಅವರೇ ಧನ್ಯರು. ಇದರಲ್ಲಿ ಸಂಶಯವಿಲ್ಲ.

೧೯. ಅಂಥವರು ಹಿಂದಿನ ಏಳುಜನ್ಮಗಳಲ್ಲಿ ಸಂಘಟಿಸಿದ ಪಾಪಯುಕ್ತರಾಗಿದ್ದರೂ, ಅವುಗಳಿಂದ ಸಹ ಮುಕ್ತರಾಗುತ್ತಾರೆ. ಯಾರು ಸದಾ ಸೂರ್ಯನನ್ನು ಸ್ತುತಿಸುತ್ತಾರೋ ಅವರು ಸಾಮಾನ್ಯ ಮನುಷ್ಯರಂತೆ ಇರುವುದಿಲ್ಲ. ಅವರು ಸ್ವರ್ಗಲೋಕದಲ್ಲಿ ಬಹುಕಾಲ ಇದ್ದು ಭೂಲೋಕಕ್ಕೆ ಬಂದಮೇಲೆ ಸೂರ್ಯನಂತೆ ಪ್ರಕಾಶಿಸುವರು.

೨೦. ಸೂರ್ಯಾಂಶವಿಲ್ಲದವರಿಗೆ ಸೂರ್ಯನನ್ನು ಸ್ಮರಿಸುವ ಬುದ್ಧಿ ಹುಟ್ಟುವುದಿಲ್ಲ; ಅವರು ಸೂರ್ಯನನ್ನು ಪೂಜಿಸುವುದೂ ಇಲ್ಲ. ಮತ್ತು ಸೂರ್ಯಚರಿತ್ರವನ್ನು ಕೀರ್ತನ ಮಾಡುವುದೂ ಇಲ್ಲ. ಅವರಿಗೆ ಅರ್ಕಸಾಯುಜ್ಯವೂ ಉಂಟಾಗುವುದಿಲ್ಲ.

೨೧. ಇದೇ ಸೌರಧರ್ಮದ ಸಾರ. ಸೂರ್ಯನಲ್ಲಿ ಮಾಡುವ ಭಕ್ತಿಯು ನಿಶ್ಚಲವಾದುದು. ಈ ಸೂರ್ಯಭಕ್ತಿಯು ಹದಿನಾರು ಅಂಗವುಳ್ಳದೆಂದು ಸೂರ್ಯನೇ ದೇವತೆಗಳಿಗೆ ಹೇಳಿದ್ದಾನೆ.

ಪ್ರಾತಃಸ್ನಾನಂ ಜಪೋ ಹೋಮಂ ತಥಾ ದೇವಾರ್ಚನಂ ನೃಪ ।
ದ್ವಿಜನಾಂ ಪೂಜನಂ ಭಕ್ತ್ಯಾ ಪೂಜಾಗೋಶ್ವತ್ಥಯೋಸ್ತಥಾ ॥ ೨೨ ॥

ಇತಿಹಾಸ ಪುರಾಣಾನಾಂ ಭಕ್ತಿಶ್ರದ್ಧಾ ಪುರಸ್ಕೃತಂ ।
ಶ್ರವಣಂ ರಾಜಶಾರ್ದೂಲ ವೇದಭ್ಯಾಸಸ್ತಥೈವ ಚ ॥ ೨೩ ॥

ಮದ್ಭಕ್ತ್ಯಾಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಂ ।
ಸ್ವಯಮಭ್ಯರ್ಚಯೇದ್ಭಕ್ತ್ಯಾ ಮಮಾಗ್ರೇ ವಾಚಕಂ ಪರಂ ॥ ೨೪ ॥

ಪುಸ್ತಕಸ್ಯ ಸದಾ ಶ್ರೇಷ್ಠ ಮಮಾತೀವಪ್ರಿಯಂ ಸುರಾಃ ।
ಮತ್ಕಥಾಶ್ರವಣೇ ನಿತ್ಯಂ ಸ್ವರನೇತ್ರಾಂಗವಿಕ್ರಿಯಾ ॥ ೨೫ ॥

---

೨೨. ಎಲೈ ರಾಜಶ್ರೇಷ್ಠನೇ! ನಿತ್ಯವೂ ಪ್ರಾತಃಸ್ನಾನ, ಜಪ, ಹೋಮ, ದೇವತಾರ್ಚನೆ, ಬ್ರಾಹ್ಮಣಪೂಜೆ, ಭಕ್ತಿಯಿಂದ ಗೋಪೂಜೆ, ಅಶ್ವತ್ಥಪೂಜೆ ಇವುಗಳನ್ನು ಮಾಡುವುದು.

೨೩. ಭಕ್ತಿಶ್ರದ್ಧೆಗಳಿಂದ ಇತಿಹಾಸ ಪುರಾಣಗಳನ್ನು ಶ್ರವಣಮಾಡುವುದು, ವೇದಾಭ್ಯಾಸ ಮಾಡುವುದು,

೨೪. ಸೂರ್ಯಭಕ್ತರಾದ ಜನರಲ್ಲಿ ಪ್ರೀತಿಯಿಡುವುದು, ಪೂಜೆಯನ್ನು ಸರಿ ಎಂದು ಒಪ್ಪಿಕೊಳ್ಳುವುದು, ನನ್ನ ಇದಿರಿನಲ್ಲಿ ಶ್ರೇಷ್ಠನಾದ ಪುರಾಣವಾಚಕನನ್ನು ಭಕ್ತಿಯಿಂದ ಪೂಜಿಸುವುದು.

೨೫. ಪುಸ್ತಕವಾಚನ, ಇವುಗಳು ಸದಾ ನನಗೆ ಅತಿಪ್ರಿಯವಾದುವು. ಎಲೈ ದೇವತೆಗಳೇ! ಯಾವಾಗಲೂ ನನ್ನ ಕಥಾಶ್ರವಣ ಮಾಡುವಾಗ ಭಕ್ತ್ಯತಿಶಯದಿಂದ ಸ್ವರದಲ್ಲಿ ಗದ್ಗದ, ಆನಂದದಿಂದ ನೇತ್ರನಿಮೀಲನ, ಭಕ್ತಿಪರವಶತೆಯಿಂದ ತಲೆದೂಗುವುದು ಇವುಗಳನ್ನು ಮಾಡುತ್ತಾ ಭಕ್ತಿಶ್ರದ್ಧೆಗಳಿಂದ ಕೂಡಿ ನನ್ನ ಸ್ಮರಣವನ್ನು ಯಾವಾಗಲೂ ಮಾಡುವುದು.

ಮಮಾನುಸ್ಮರಣಂ ನಿತ್ಯಂ ಭಕ್ತಿಶ್ರದ್ಧಾಪುರಸ್ಕೃತಂ ।
ಷೋಡಶಾಂಗಾ ಭಕ್ತಿರಿಯಂ ಯಸ್ಯಾಂ ಮ್ಲೇಚ್ಛೋಽಪಿ ವರ್ತತೇ ॥
ವಿಪ್ರೇಂದ್ರಃ ಸ ಮುನಿಃ ಶ್ರೀಮಾನ್ಸ ಜಾತ್ಯಃ ಸಚ ಪಂಡಿತಃ ॥ ೨೬ ॥

ನ ಮೇ ಪೃಥಕ್ಚತುರ್ವೇದಾ ಮದ್ಭಕ್ತಃ ಶ್ವಪಚೋಽಪಿ ಯಃ ।
ತಸ್ಮೈ ದೇಯಂ ತತೋ ಗ್ರಾಹ್ಯಂ ಸ ಚ ಪೂಜ್ಯೋ ಯಥಾಹ್ಯಹಮ್
॥ ೨೭ ॥

ಪತ್ರಂ ಪುಷ್ಪ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೨೮ ॥

ಯೋ ಮಾಂ ಸರ್ವಗತಂ ಪಶ್ಯೇತ್ ಸರ್ವಂ ಚ ಮಯಿ ಸಂಸ್ಥಿತಂ ।
ತಸ್ಯಾಹಮಾಸ್ಥಿತೋ ನಿತ್ಯಂ ಸ ಚ ನಿತ್ಯಂ ಮಯಿ ಸ್ಥಿತಃ ॥ ೨೯ ॥

ಅಷ್ಟಾದಶಾರ್ಧಕಕ್ಷಾಯಾಃ ಪರಂ ಚಾಷ್ಟಭಿರುದ್ಭವೈಃ ।
ರೋಧಯಿತ್ವಾ ಮಹಾಬಾಹೋ ತಥಾ ಜ್ಞಾನತರೇಣ ತು ॥ ೩೦ ॥

---

೨೬. ಇವೇ ಭಕ್ತಿಯ ಷೋಡಶಾಂಗಗಳು. ಈರೀತಿ ಭಕ್ತಿಯನ್ನು ಮಾಡಿದರೆ ಅವನು ಮ್ಲೇಚ್ಛನಾದರೂ ಬ್ರಾಹ್ಮಣಶ್ರೇಷ್ಠರಲ್ಲಿ ಮುನಿಸದೃಶನಾಗುವನು. ಅಲ್ಲದೆ ಶ್ರೀಮಂತನೂ ಪಂಡಿತನೂ ಆಗುವನು.

೨೭. ನನಗೆ ಚತುರ್ವೇದಗಳು ಪೃಥಕ್ಕಾಗಿಲ್ಲ. ಯಾವನು ಶ್ವಪಚನಂತೆ ಹೊರಗೆ ಕಾಣುತ್ತಿದ್ದರೂ, ನನ್ನ ಭಕ್ತನಾಗಿರುವನೋ ಅವನಿಗೇ ದಾನಮಾಡಬೇಕು. ಅವನಿಂದ ಪ್ರತಿಗ್ರಹಮಾಡಲೂ ಬಹುದು. ಅವನು ನನ್ನಂತೆಯೇ ಪೂಜ್ಯನೆನಿಸುವನು.

೨೮. ಪತ್ರ, ಪುಷ್ಪ, ಫಲ, ಜಲ ಇವುಗಳನ್ನು ಯಾವನು ಭಕ್ತಿಯಿಂದ ನನಗೆ ಕೊಡುತ್ತಾನೋ ಅವನ ವಿಷಯದಲ್ಲಿ ನಾನು ಅದೃಶ್ಯನಾಗುವುದಿಲ್ಲ. ಅವನೂ ನನಗೆ ಅಲಕ್ಷ್ಯನಲ್ಲ.

೨೯. ಯಾವನು ನನ್ನನ್ನು ಸರ್ವಗತನೆಂದೂ, ಸರ್ವವೂ ನನ್ನಲ್ಲಿರುವುದೆಂದೂ, ಕಾಣುವನೋ, ಅವನಲ್ಲಿ ನಾನು ಯಾವಾಗಲೂ ಇರುವೆನು. ನನ್ನಲ್ಲಿ ಅವನೂ ಯಾವಾಗಲೂ ಇದ್ದೇ ಇರುವನು.

೩೦. ಎಲೈ ಮಹಾಬಾಹುವೇ! ನವವಿಧ ಭಕ್ತಿಗಳಿಗಿಂತ ಅತೀತಗಳಾಗಿ ಉತ್ಪನ್ನಗಳಾದ, ಎಂಟು ಯೋಗಾಂಗಗಳಿಂದ ಪಡೆದ ದಿವ್ಯಜ್ಞಾನವೆಂಬದರ ಸಹಾಯ ಯಿಂದ ಸೂರ್ಯಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಯತ್ನಿಸಬೇಕು.

ದುರ್ಗಪಾಲಂ ವಿಜಿತ್ಯಾಶು ಭಾಸ್ಕರಾರ್ಥಂ ತು ದುರ್ಜಯಂ ।
ಜಿತ್ವಾ ಚ ಪುರರಾಜಾನಂ ಮಹಾತೇಜಮನೂಪಮಂ ॥ ೩೦ ॥

ಮನಸ್ಯಚಲಯಾ ಭಕ್ತ್ಯಾ ಯೋ ಮಾಂ ಧ್ಯಾಯತಿ ಮಾನವಃ ।
ಚಿಂತಯಾಮಿ ತಮೇವಾಹಮಾತ್ಮವತ್ಸತತಂ ನರಂ ॥ ೩೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ
ಸಪ್ತಮೀಕಲ್ಪೇ ಸಾಂಬೋಪಾಖ್ಯಾನೆ ಸೌರಧರ್ಮ
ವರ್ಣನಂನಾಮ ಏಕಕಂಚಾಶದುತ್ತರ
ಶತತಮೋಽಧ್ಯಾಯಃ.



---

೩೦. ದುರ್ಜಯವಾದ ಅರಿಷಡ್ವರ್ಗವೆಂಬ ದುರ್ಗಪಾಲನನ್ನು ಜಯಿಸಿದರೆ ಮಹಾತೇಜಸ್ವಿಯೂ, ಅಸದೃಶನೂ ಆದ ಪುರಾಧಿಪತಿಯನ್ನು ಜಾಗ್ರತೆ ಜಯಿಸಬಹುದಲ್ಲವೇ ?

೩೧. ಮನಸ್ಸಿನಿಂದಲೂ, ನಿಶ್ಚಲ ಭಕ್ತಿಯಿಂದಲೂ ಯಾವ ಮನುಷ್ಯನು ನನ್ನನ್ನು ಧ್ಯಾನಿಸುವನೋ ಅಂಥಾ ಮನುಷ್ಯನನ್ನು ನನಗೆ ಸಮಾನನೆಂದೇ ನಾನು ಯಾವಾಗಲೂ ಭಾವಿಸುತ್ತೇನೆ" ಎಂದು ಹೇಳಿದ್ದಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಾಂಬೋಪಾಖ್ಯಾನದಲ್ಲಿ
ಸೌರಧರ್ಮ ವರ್ಣನೆಯೆಂಬ ನೂರೈವತ್ತೊಂದನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಪಂಚಾಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಸೂರೇ ಚ ದುರ್ಲಭಾ ಭಕ್ತಿಃ ದುರ್ಲಭಂ ಸೂರಪೂಜನಂ ।
ಸೂರಾಯ ದುರ್ಲಭಂ ದಾನಂ ಸೂರಹೋಮಶ್ಚ ದುರ್ಲಭಃ ॥ ೧ ॥

ಸುದುರ್ಲಭಂ ರವೇರ್ಜ್ಞಾನಂ ತದಭ್ಯಾಸೋಽಪಿ ದುರ್ಲಭಃ ।
ಸುದುರ್ಲಭತರಂ ಜ್ಞೇಯಂ ಖಷೋಲ್ಕಜ್ಞಾನಮುತ್ತಮಂ ॥ ೨ ॥

---

## ನೂರಐವತ್ತೆರಡನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಸೂರ್ಯದೀಕ್ಷಾವಿಚಾರವನ್ನು ಮುಂದುವರಿಸುವರಾಗಿ ಶತಾನೀಕರಾಜನನ್ನು ಕುರಿತು “ಅಯ್ಯಾ! ಸೂರ್ಯನಲ್ಲಿ ಭಕ್ತಿಹುಟ್ಟುವುದೇ ಕಷ್ಟ; ಭಕ್ತಿಹುಟ್ಟಿದರೂ ಸೂರ್ಯನನ್ನು ವಿಧಿಪ್ರಕಾರ ಪೂಜಿಸುವುದು ದುರ್ಲಭ. ಸೂರ್ಯನನ್ನುದ್ದೇಶಿಸಿ ದಾನಮಾಡುವುದೂ, ಸೂರ್ಯಪ್ರೀತ್ಯರ್ಥವಾಗಿ ಹೋಮಮಾಡುವುದೂ ಸಹ ದುರ್ಲಭಗಳೇ ಸರಿ.

೨. ಸೂರ್ಯಸಂಬಂಧವಾದ ಜ್ಞಾನಪ್ರಾಪ್ತಿಯು ದುರ್ಲಭ. ಆ ಜ್ಞಾನಾಭ್ಯಾಸವು ಇನ್ನೂ ದುರ್ಲಭ. ಅತ್ಯುತ್ತಮವಾದ ಖಷೋಲ್ಕ ಜ್ಞಾನವಂತೂ ಅತಿದುರ್ಲಭವೆಂದು ತಿಳಿಯಬೇಕು.

ಸುದುರ್ಲಭತರಂ ಜ್ಞಾನಂ ಸದಾ ವೈ ಭಾಸ್ಕರಸ್ಯ ತು ।
ಪ್ರದಕ್ಷಿಣಾಂ ಚಕ್ರತುರ್ವೈ ಪಾದೌ ಭಕ್ತ್ಯಾಽರ್ಕಮಂದಿರೇ ॥ ೩ ॥

ತೌ ಕರೌ ಶ್ಲಾಘ್ಯತಾಂ ಪ್ರಾಪ್ತೌ ಯೌ ಪೂಜಾಂ ಚಕ್ರತೂ ರವೇಃ ॥
ಸೈವೈಕಾ ರಸನಾ ಧನ್ಯಾ ಸ್ತೋತ್ರಂ ಯಾ ಕುರುತೇ ರವೇಃ ॥ ೪ ॥

ತನ್ಮನಃ ಪುಣ್ಯತಾಂ ಪ್ರಾಪ್ತಂ ಯದ್ಧಿತ್ವಾ ವಿಷಯಂ ನೃಪ ।
ನಿಶ್ಚಲಾ ಚ ರವೇರ್ಲೀಲಾ ನಿರ್ಭೀಕಾ ಕ್ರೋಧವರ್ಜಿತಾ ॥ ೫ ॥

॥ ಶತಾನೀಕ ಉವಾಚ ॥

ಸೂರ್ಯಾರ್ಚನಂ ವಿಧಿಂ ಕುರ್ವನ್ ಶ್ರೋತುಮಿಚ್ಛಾಮಿ ತತ್ತ್ವತಃ ।
ತ್ವತ್ಪ್ರಸಾದಾದ್ದ್ವಿಜಶ್ರೇಷ್ಠ ಕೌತೂಹಲಮತೀವ ಮೇ ॥ ೬ ॥

ಯತ್ಪುಣ್ಯಂ ಸ್ಥಾಪಿತೇ ಸೂರ್ಯೇ ಕೃತೇ ಸೂರ್ಯಾಲಯೇ ಚ ಯತ್ ।
ಸಮ್ಮಾರ್ಜನೇ ಚ ಯತ್ಪುಣ್ಯಂ ಯತ್ಪುಣ್ಯಮುಪಲೇಪನೇ ॥ ೭ ॥

---

೩. ಸದಾ ಭಾಸ್ಕರನ ವಿಷಯವಾದ ಜ್ಞಾನವು ಅತ್ಯಂತ ದುರ್ಲಭ. ಭಕ್ತಿಯಿಂದ ಸೂರ್ಯಾಲಯದಲ್ಲಿ ಪ್ರದಕ್ಷಿಣ ಮಾಡುವ ಪಾದಗಳು ಸಾರ್ಥಕವೆನಿಸುವುವು.

೪. ಸೂರ್ಯನನ್ನು ಪೂಜೆಮಾಡುವ ಕೈಗಳೆರಡೂ ಶ್ಲಾಘ್ಯವೆನಿಸುವುವು. ಸೂರ್ಯನನ್ನು ಸ್ತುತಿಸುವ ನಾಲಗೆಯೇ ಧನ್ಯವಾದುದು.

೫. ನಿರ್ಭಯವಾಗಿಯೂ, ಕ್ರೋಧರಹಿತವಾಗಿಯೂ ಇರುತ್ತಾ, ವಿಷಯಾಪೇಕ್ಷೆಯನ್ನು ಬಿಟ್ಟ ಮನಸ್ಸೇ ಪುಣ್ಯತಮವಾದುದು, ಭಯರಹಿತವೂ, ಕ್ರೋಧವರ್ಜಿತವೂ ಆದ ಮನದಲ್ಲಿ, ಸೂರ್ಯಲೀಲೆಯು ಸ್ಥಿರವಾಗಿ ನೆಲಸಿರುವುದು ಎಂದನು.

೬. ಆಗ ಶತಾನೀಕರಾಜನು ಸುಮಂತುಮುನಿಗಳನ್ನು ಕುರಿತು " ಸ್ವಾಮಿ ದ್ವಿಜಶ್ರೇಷ್ಠರೇ! ನಿಮ್ಮ ಅನುಗ್ರಹದಿಂದ ಸೂರ್ಯಾರ್ಚನೆಯನ್ನು ಆಚರಿಸಬೇಕೆಂದಿರುವ ನಾನು, ಅದರ ವಿಧಿಯನ್ನು ಸಹಜಸ್ವರೂಪದಿಂದ ಕೇಳಬೇಕೆಂದು ಇಚ್ಛಿಸುತ್ತೇನೆ. ನನಗೆ ಆ ಕುತೂಹಲವು ಬಹಳವಾಗಿದೆ.

೭. ಸೂರ್ಯಪ್ರತಿಮಾ ಪ್ರತಿಷ್ಠೆಮಾಡುವುದು, ಸೂರ್ಯದೇವಾಲಯನ್ನು ಗುಡಿಸುವುದು, ಅದನ್ನು ಸಾರಿಸುವುದು, ಇವುಗಳಿಂದ ಯಾವ ಪುಣ್ಯಪ್ರಾಪ್ತಿಯಾಗುವುದು?

**ಸ್ಥಾನೇ ಕೃತೇ ಚ ಯತ್ಪುಣ್ಯಂ ತಥಾ ನಿರಾಜನೇ ಕೃತೇ ।**
**ನೀಲೌಷಧಿಪ್ರವಾಪೇನ ನೃತ್ಯಮಂಗಲವಾದಿತ್ರೈಃ ॥ ೮ ॥**

**ಅರ್ಘ್ಯದಾನೇನ ಯತ್ಪುಣ್ಯಂ ತೋಯಸ್ನಾನೇನ ಯದ್ಭವೇತ್ ।**
**ಪಂಚಾಮೃತಮಯಸ್ನಾನೇ ದಧಿಸ್ನಾನೇ ಚ ಯತ್ಫಲಂ ॥ ೯ ॥**

**ಚಕ್ರಾಭ್ಯಂಗೇ ಚ ಯತ್ಪ್ರೋಕ್ತಂ ವಜ್ರಸ್ನಾನೇ ಚ ಯತ್ಫಲಂ ।**
**ಮಧುಸ್ನಾನೇ ಪಯಸ್ನಾನೇ ಸ್ನಾನ ಇಕ್ಷುರಸಸ್ಯ ತು ॥ ೧೦ ॥**

**ಉದ್ವರ್ತನಂ ಶುಚಿಸ್ಥಾನೇ ಕುಶಪುಷ್ಪೋದಕೇನ ತು ॥**
**ಸುವರ್ಣರತ್ನತೋಯೈಶ್ಚ ಗಂಧಚಂದನವಾರಿಭಿಃ ॥ ೧೧ ॥**

**ಕರ್ಪೂರಾಗರುತೋಯೇನ ಸ್ವಚ್ಛತೋಯೇನ ಯತ್ಫಲಂ ।**
**ವಿಲೇಪನೈರ್ಯದ್ಗಂಧಾಢ್ಯೈರ್ವಿಲೇಪನಫಲಂ ಲಭೇತ್ ॥ ೧೨ ॥**

---

೮. ಪ್ರತಿಮೆಗೆ ಸ್ಥಾನಕಲ್ಪನೆ ಮಾಡುವುದು (ದೇವಾಲಯವನ್ನು ನಿರ್ಮಾಣ) ನೀರಾಜನ ಮಾಡುವುದು, ನೀಲೌಷಧಿಗಳನ್ನು ನಡುವುದು, ನೃತ್ಯಸೇವೆ, ಮಂಗಳ ವಾದ್ಯ ಬಾರಿಸುವುದು ಇವುಗಳಿಂದಲೂ.

೯-೧೧. ಅರ್ಘ್ಯಪ್ರದಾನಮಾಡುವುದು, ಜಲಸ್ನಾನಮಾಡಿಸುವುದು, ಪಂಚಾಮೃತಸ್ನಾನ, ಸೂರ್ಯಚಕ್ರಕ್ಕೆ ಅಭ್ಯಂಗಮಾಡಿಸುವುದು, ಘೃತಸ್ನಾನ; ಜೇನುತುಪ್ಪ, ಹಾಲು, ಕಬ್ಬಿನಹಾಲು ಇವುಗಳಿಂದ ಅಭಿಷೇಕಮಾಡುವುದು; ಪರಿಶುದ್ಧವಾದ ಸ್ಥಳದಲ್ಲಿ ಬೆಳೆದ ದರ್ಭೆಗಳಿಂದ ಉಜ್ಜಿ ಪುಷ್ಪೋದಕದಿಂದ ಸ್ನಾನಮಾಡಿಸುವುದು ; ಸುವರ್ಣೋದಕ, ರತ್ನೋದಕ, ರಕ್ತಚಂದನೋದಕ, ಗಂಧೋದಕ ಇವುಗಳಿಂದ ಸ್ನಾನ ಮಾಡಿಸುವುದು, ಇವುಗಳಿಂದಲೂ ಯಾವ ಪುಣ್ಯಬರುವುದು ?

೧೨. ಕರ್ಪೂರ, ಅಗಿಲು ಇವು ಮಿಶ್ರವಾದ ಉದಕಸ್ನಾನ ಮಾಡಿಸುವುದರಿಂದಲೂ, ಶುದ್ಧೋದಕಸ್ನಾನ ಮಾಡಿಸುವುದರಿಂದಲೂ, ಯಾವ ಪುಣ್ಯಲಭಿಸುವುದು ? ಸುವಾಸನಾಯುಕ್ತವಾದ ಯಾವ ಯಾವ ವಿಲೇಪನ ದ್ರವ್ಯಗಳಿಂದ ಲೇಪನಮಾಡಿದರೆ ಯಾವ ಯಾವ ಫಲ ಹೊಂದುವನು ?

ತಾಲಕಾಪತ್ರಪ್ರದಾನೇ ತು ಪ್ರದಾನೇ ಚಾಮರಸ್ಯ ತು ।
ರಕ್ತಪುಷ್ಪಾರ್ಚನೇ ಯಚ್ಚ ನಾಮಭಿಃ ಪೂಜನೇನ ಚ ॥ ೧೩ ॥

ಸುಮಾನಾಂ ಮಂಡಪೇ ಯಚ್ಚ ಪುಷ್ಪಮಾಲಾವಲಂಬನಾತ್ ।
ಪೂಜಾಭಕ್ತಿವಿಶೇಷೈಶ್ಚ ಗೃಹಮಾಲಾವಲಂಬನೇ ॥ ೧೪ ॥

ಪುಷ್ಪದಾಮವಿಶೇಷೇಣ ಧೂಪೈರ್ದೀಪೈಶ್ಚ ಯತ್ಫಲಂ ।
ವಸ್ತ್ರಾಲಂಕಾರದಾನೇ ತು ಪುಣ್ಯಶ್ರವಣಕೀರ್ತನೇ ॥ ೧೫ ॥

ಬ್ರಹ್ಮಶ್ರವಸ್ಯ ದಾನೇ ತು ಅವ್ಯಂಗಸ್ಯ ಚ ಗೋಪತೇ ।
ಮಗನಾಂ ತು ಪ್ರಸಾದಾರ್ಥಂ ಅಭಿವಾದನಪೂಜನೇ ॥ ೧೬ ॥

---

೧೩. ಉಪಚಾರದ ಪೂಜೆಗೆ ಬೇಕಾದ ಓಲೆಗರಿಯ ಬೀಸಣಿಗೆ ಮಾಡಿಸುವುದರಿಂದಲೂ, ಚಾಮರ ಮಾಡಿಸಿಕೊಡುವುದರಿಂದಲೂ, ಕೆಂಪುಹೂಗಳಿಂದ ಪೂಜಿಸುವುದರಿಂದಲೂ, ಸಹಸ್ರನಾಮಾರ್ಚನ ಮಾಡುವುದರಿಂದಲೂ ಯಾವ ಫಲ ಹೊಂದುವನು ?

೧೪. ಪುಷ್ಪಮಂಟಪದಲ್ಲಿ ಪುಷ್ಪಮಾಲೆಗಳನ್ನು ಇಳಿಯಬಿಡುವುದು, ಪೂಜಾರ್ಥವಾಗಿ ನಾನಾ ಅನುಲೇಪನಗಳನ್ನು ರಚಿಸುವುದು, ದೇವಾಲಯಗಳಲ್ಲಿ ಪುಷ್ಪಮಾಲೆಗಳನ್ನು ತೂಗುಹಾಕುವುದು, ಪುಷ್ಪಮಾಲಿಕೆಯನ್ನು ರಚಿಸಿಕೊಡುವುದು, ಧೂಪ ಸಮರ್ಪಣೆಮಾಡುವುದು.

೧೫. ಮತ್ತು ದೀಪವನ್ನು ಬೆಳಗುವುದು, ಸೂರ್ಯಪ್ರೀತ್ಯರ್ಥವಾಗಿ ಇತರರಿಗೆ ವಸ್ತ್ರಾಭರಣಗಳನ್ನು ದಾನಮಾಡುವುದು, ಪುಣ್ಯಕಥಾಶ್ರವಣ ಮಾಡಿಸುವುದು, ನಾಮಸಂಕೀರ್ತನೆ (ಭಜನೆ) ಮಾಡುವುದು, ಮುಂತಾದುವುಗಳಿಂದ ಯಾವ ಪುಣ್ಯ ಲಭಿಸುವುದು ?

೧೬ ಬ್ರಹ್ಮಶ್ರವವನ್ನೂ ಅವ್ಯಂಗವನ್ನೂ ಮಾಡಿಸಿ ದಾನಮಾಡುವುದರಿಂದ ಬರುವ ಪುಣ್ಯ ಯಾವುದು ? ಮಗರ ಅನುಗ್ರಹಸಂಪಾದನೆಗಾಗಿ ಅವರಿಗೆ ಅಭಿವಾದನ ಮಾಡುವುದು, ಮತ್ತು ವಾಚಕರನ್ನೂ ಅವರನ್ನೂ ಪೂಜಿಸುವುದು, ಇವುಗಳಿಂದ ಯಾವ ಪುಣ್ಯ ಬರುವುದು?

ವ್ಯೋಮಪೂಜಾಫಲಂ ಯಚ್ಚ ಅರುಣಸ್ಯ ಚ ಪೂಜನಂ ।
ತಥಾನ್ಯದಪಿ ಯತ್ಪ್ರೋಕ್ತಮಜ್ಞಾನಾಂ ಬುದ್ಧಯೇ ದ್ವಿಜ ॥ ೧೭ ॥

ತತ್ಸರ್ವಂ ಬ್ರೂಹಿ ಮೇ ಬ್ರಹ್ಮನ್ ಭಕ್ತೇ ತ್ವಮನುಕಂಪಯಾ ।

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸೂರಧರ್ಮೇಷು
ಪ್ರಶ್ನವರ್ಣನಂ ನಾಮ ದ್ವಿಪಂಚಾಶದುತ್ತರ ಶತತಮೋಽಧ್ಯಾಯಃ



---

೧೭. ವ್ಯೋಮಪೂಜೆ, ಅರುಣಪೂಜೆ, ಇವುಗಳಿಂದ ಬರುವ ಫಲವು ಯಾವುದು? ಈ ವಿಚಾರವು ತಿಳಿಯದವರಿಗೆ ತಿಳಿವಳಿಕೆಯುಂಟಾಗುವುದಕ್ಕೋಸ್ಕರವೂ ಭಕ್ತನಾದ ನನ್ನಲ್ಲಿ ಕೃಪೆಯಿಂದ ಇವುಗಳೆಲ್ಲವನ್ನೂ ಹೇಳು ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಸೂರಧರ್ಮದಲ್ಲಿ
ಪ್ರಶ್ನವರ್ಣನೆಯೆಂಬ ನೂರಐವತ್ತೆರಡನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಪಂಚಾಶದುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಸುಮತಿಶ್ಚ ರವೇರ್ಭಕ್ತಃ ಪಾಂಡವೇಯ ಮಹಾಮತೇ ।
ಅತಸ್ತೇ ನಿಖಿಲಂ ವಚ್ಮಿ ಶ್ರುಣುಷ್ವೈಕಮನಾ ನೃಪ ॥ ೧ ॥

ಕಲ್ಪಾದೌ ಸೃಜತೋ ವೀರಬ್ರಹ್ಮಣೋ ವಿವಿಧಾಃ ಪ್ರಜಾಃ ।
ಅಹಂಕಾರೋ ಮಹಾನಾಸೀನ್ನಾಸ್ತಿ ಲೋಕೇ ಮದುತ್ತಮಃ ॥ ೨ ॥

---

### ನೂರಐವತ್ತಮೂರನೆಯ ಅಧ್ಯಾಯ

೧. ಆಗ ಸುಮುಂತುಮುನಿವರ್ಯರು ಈ ಪ್ರಕಾರ ಉತ್ತರ ಹೇಳಿದರು. ಪಾಂಡು ವಂಶೀಯನೂ, ಮಹಾಮತಿಯೂ ಆದ ಶತಾನೀಕನೇ! ನೀನು ಸೂರ್ಯಭಕ್ತನೂ ಸುಮತಿಯೂ ಆಗಿದ್ದೀಯೆ. ಆದುದರಿಂದ ನಿನಗೆ ಎಲ್ಲವನ್ನೂ ಹೇಳುವೆನು. ಏಕಾಗ್ರ ಚಿತ್ತನಾಗಿ ಕೇಳಬೇಕು.

೨. ಅಯ್ಯಾ ವೀರನೇ! ಕೇಳು ಕಲ್ಪಾದಿಯಲ್ಲಿ ಬ್ರಹ್ಮನು ಬಗೆಬಗೆಯ ಪ್ರಜೆಗಳನ್ನೆಲ್ಲಾ ಸೃಷ್ಟಿಸುತ್ತ ಬರಲು, ಆಗ ಅವನಿಗೆ ಲೋಕದಲ್ಲಿ ತನಗಿಂತ ಉತ್ತಮನಾದ ಸೃಷ್ಟಿಕರ್ತನು ಯಾವನೂ ಇಲ್ಲ ಎಂಬ ಅಹಂಕಾರವು ಉತ್ಪನ್ನವಾಯಿತು.

**ತಥಾ ಪಾಲಯತೋ ವೀರ ಕೇಶವಸ್ಯ ಧರಾಪತೇ ।**
**ತಥಾ ಸಂಹರತೋ ಜಜ್ಞೇಽಹಂಕಾರಸ್ತ್ರ್ಯಂಬಕಸ್ಯ ಚ ॥ ೩ ॥**

**ಚಿಂತಯಂತೋಽಥ ತೇ ದೇವಾಃ ಮನಸ್ಯೇವ ನರಾಧಿಪ ।**
**ಮಿಥಸ್ತೇ ಸ್ಪರ್ಧಯಾ ಯುಕ್ತಾಃ ಪರಸ್ಪರವಿರೋಧಿನಃ ॥ ೪ ॥**

**ವಿವಾದಸ್ತು ಮಹಾನಾಸೀತ್ಪಂಕಜಾಂಬುನಗೌಕಸಾಂ ।**
**ಪರಸ್ಪರಂ ಮಹಾಬಾಹೋ ಮನಸಾಶ್ರಿತ್ಯ ಕೇವಲಂ ॥ ೫ ॥**

**ಅಹಂ ಕರ್ತಾ ವಿಕರ್ತಾಹಂ ಪಾಲಕೋಽಹಂ ಜಗತ್ಪ್ರಭುಃ ।**
**ಇತ್ಯಾಹ ಭಗವಾನ್ ಬ್ರಹ್ಮಾ ಕೃಷ್ಣಭೀಮೌ ಸಮರ್ಚಿತೌ ॥ ೬ ॥**

---

೩. ಹಾಗೆ ಸೃಷ್ಟವಾದ ಜಗತ್ತನ್ನು ಪಾಲನಮಾಡುತ್ತಿರುವ ಕೇಶವನಿಗೆ, (ವಿಷ್ಣುವಿಗೆ) "ನನ್ನ ಸಮಾನನಾದ ಪಾಲಕನು ಯಾವನೂ ಇಲ್ಲ" ವೆಂಬ ಅಹಂಕಾರ ವುಂಟಾಯಿತು. ಹಾಗೆ ಸೃಷ್ಟವೂ, ಪಾಲಿತವೂ ಆದ ಜಗತ್ತನ್ನು ಸಂಹರಿಸುತ್ತಿರುವ ರುದ್ರನಿಗೆ, "ನನ್ನಷ್ಟು ಸಮರ್ಥನಾದ ಸಂಹಾರಕರ್ತನೇ ಇಲ್ಲ" ವೆಂಬ ಅಹಂಕಾರ ವುಂಟಾಯಿತು.

೪. ಹೀಗೆ ಆ ಮೂವರು ದೇವತೆಗಳೂ, ಮನಸ್ಸಿನಲ್ಲಿ ಆಲೋಚಿಸುತ್ತಾ ಅವರು ಒಬ್ಬರಮೇಲೊಬ್ಬರು ಹುರುಡಿನಿಂದ ಕೂಡಿ ಪರಸ್ಪರ ವಿರುದ್ಧಾಭಿಪ್ರಾಯವುಳ್ಳವರಾಗ ಲಾಗಿ ದೊಡ್ಡದಾದ ವಿವಾದ ಹುಟ್ಟುವಂತಾಯಿತು.

೫. ಅಯ್ಯಾ ಮಹಾಬಾಹುವೇ! ಹೀಗೆ ಪಂಕಜನಿವಾಸಿಯಾದ ಬ್ರಹ್ಮ, ಅಂಬು ನಿವಾಸಿ (ಸಮುದ್ರಶಾಯಿ) ಯಾದ ವಿಷ್ಣು, ನಗ (ಕೈಲಾಸಪರ್ವತ) ನಿವಾಸಿಯಾದ ಶಿವ ಇವರಿಗೆ ನಾನು 'ಸೃಷ್ಟಿಕರ್ತನು', 'ನಾನು ಸ್ಥಿತಿಕರ್ತನು', 'ನಾನು ಲಯಕರ್ತನು' ಆದ್ದರಿಂದ ನಾನೇ ಜಗತ್ಪ್ರಭು" ಎಂಬ ಭಾವವು ಕೇವಲವಾಗಿ ಅವರವರ ಮನಸ್ಸಿನಲ್ಲಿ ಮೂಡಿತು.

೬. ಆಗ ಬ್ರಹ್ಮನು ಸಮರ್ಚಿತರಾದ (ಪೂಜಿತರಾದ) ವಿಷ್ಣು, ಶಿವ ಇವರನ್ನು ನೋಡಿ, ನಾನು "ಸೃಷ್ಟಿಕರ್ತ, ವಿಕರ್ತ, ಪಾಲಕ, ಮತ್ತು ಜಗತ್ಪ್ರಭು, ಎಲ್ಲವೂ ಆಗಿದ್ದೇನೆ" ಎಂದು ಹೇಳಿದನು.

ತಥೈತ್ಯ ಶಂಕರಃ ಕ್ರುದ್ಧಃ ಕಃ ಶಕ್ತೋ ಮದೃತೇ ಭುವಿ ।
ಸಂಹರ್ತುಂ ಜಗದೇತದ್ಧಿ ಸ್ರಷ್ಟುಂ ಪಾಲಯಿತುಂ ತಥಾ ॥ ೭ ॥

ನಾರಾಯಣೋಽಪ್ಯೇವಮೇವ ಮನಾಕ್ ಕ್ರೋಧಸಮನ್ವಿತಃ ।
ನಾಹಂ ಶಕ್ತೋ ಜಗದ್ಗೋಪ್ತುಂ ಸಂಹರ್ತುಂ ಸ್ರಷ್ಟುಮೇವ ಚ ॥ ೮ ॥

ಏವಂ ತೇಷಾಂ ಪ್ರವದತಾಂ ಕ್ರುದ್ಧಾನಾಂ ಚ ಪರಸ್ಪರಂ ।
ಸಮಾವಿಶತ್ತದಾಽಜ್ಞಾನಂ ತಮೋಮೋಹಾತ್ಮಕಂ ವಿಭೋ ॥ ೯ ॥

ತೇನ ಕ್ರಾಂತಧಿಯಸ್ಸರ್ವೇ ನ ಪಶ್ಯಂತಿ ಪರಸ್ಪರಂ ।
ಅತ್ಯರ್ಥಂ ಮೋಹಮಾಪನ್ನಾ ನ ಜಾನಂತೀಹ ಕಿಂಚನ ॥ ೧೦ ॥

ಅಪಶ್ಯಂತೋ ಮಿಥಸ್ತೇ ತು ನಿಷಣ್ಣಾಃ ಕ್ಷ್ಮಾತಲೇ ವಿಭೋ ।
ಆರಮಂತಿ ಹಿ ತೇ ಚಾನ್ಯೇ ಯೇ ದಿವಾಕರಮಾಶ್ರಿತಾಃ ॥ ೧೧ ॥

---

೭. ಆಗ ಶಂಕರನು ಕುಪಿತನಾಗಿ ಬಂದು "ಪ್ರಪಂಚದಲ್ಲಿ ನನ್ನನ್ನು ಬಿಟ್ಟರೆ ಜಗತ್ಪರಿಹಾರಕಾರ್ಯಕ್ಕೂ, ಸೃಷ್ಟಿಕಾರ್ಯ, ರಕ್ಷಣಕಾರ್ಯ ಇವಕ್ಕೂ, ಇನ್ನು ಯಾರು ತಾನೇ ಶಕ್ತರಿದ್ದಾರೆ?" ಎಂದು ಹೇಳಿದನು.

೮. ನಾರಾಯಣನೂ ಕೂಡ ಹೀಗೆಯೇ ಸ್ವಲ್ಪ ಕುಪಿತನಾಗಿ "ಆಹಾ ಜಗತ್ತನ್ನು ರಕ್ಷಿಸುವುದು, ಸಂಹರಿಸುವುದು, ಸೃಷ್ಟಿಸುವುದು ಈ ಕೆಲಸ ಮಾಡುವುದಕ್ಕೆ ನಾನು ಶಕ್ತನಲ್ಲವೇನು?" ಎಂದು ಹೇಳಿದನು.

೯. ಹೀಗೆ ಕ್ರೋಧವಶರಾಗಿ ಪರಸ್ಪರ ವಿವಾದ ಮಾಡುತ್ತಿರುವ ಬ್ರಹ್ಮ, ವಿಷ್ಣು, ರುದ್ರರಿಗೆ ಅಜ್ಞಾನಾತ್ಮಕವಾದ ಕತ್ತಲೆಯು ಹೃದಯವನ್ನು ಆವರಿಸಿತು.

೧೦. ಅದು ಬುದ್ಧಿಯನ್ನು ಆಕ್ರಮಿಸಿದುದರಿಂದ ಅವರು ಒಬ್ಬರನ್ನೊಬ್ಬರು ನೋಡುತ್ತಲೂ ಇರಲಿಲ್ಲ. ಹೀಗೆ ಅಜ್ಞಾನವು ಅತ್ಯಂತವಾಗಿ ಹೆಚ್ಚಿದುದರಿಂದ ಅವರು ಏನನ್ನು ತಿಳಿಯಲೂ ಶಕ್ತರಾಗದೆ ಹೋದರು.

೧೧. ಅಯ್ಯಾ ವಿಭುವೇ! ಕೇಳು; ಅವರು ಒಬ್ಬರು ಮತ್ತೊಬ್ಬರ ಮುಖಾವಲೋಕನವನ್ನು ಸಹ ಮಾಡದೆ ಭೂಮಿಯಲ್ಲಿ ಸುಮ್ಮನೇ ಕುಳಿತರು. ಸೂರ್ಯನನ್ನು ಆಶ್ರಯಿಸಿಕೊಂಡಿದ್ದ ಇತರರು ಹಾಯಾಗಿದ್ದರು.

ತಮಸಾ ಮೋಹಿತಾಃ ಸರ್ವೇ ನಿದ್ರಾವತ್ಯಾಕ್ರಾಂತಚೇತಸಃ ।
ಮನಾಕ್ ಜ್ಞಾನೇನ ಚಾಕ್ರಾಂತಾಃ ಕಿಂ ಕುರ್ಯಾಮೇತಿ ಚಿಂತಯಾ ॥ ೧೨ ॥

ಅಥ ಭೂತಾಧಿಪೋ ದೇವೋ ಗೋಶ್ರುತಾಭರಣೋಜ್ವಲಃ ।
ಚಂದ್ರಾರ್ಧಕೃತಶೋಭಸ್ತು ಜಾಹ್ನವ್ಯಾ ಚ ವಿರಾಜಿತಃ ॥ ೧೩ ॥

ಆರ್ತಿಮೇತ್ಯ ಪರಾಂ ವೀರ ಮೋಹಿತಸ್ತಮಸಾ ವಿಭೋ ।
ಅಪಶ್ಯನ್ನಬ್ರವೀದ್ದೇವಂ ಮಾಧವಂ ಭೂಧರಂ ಹರಿಂ ॥ ೧೪ ॥

॥ ಮಹಾದೇವ ಉವಾಚ ॥

ಕೃಷ್ಣ ಕೃಷ್ಣ ಮಹಾಬಾಹೋ ಕ್ವಗತಸ್ತ್ವಂ ಮಹಾಮತೇ ।
ಬ್ರಹ್ಮಾ ಚ ಕ್ವ ಗತೋ ವೀರ ನಾಹಂ ಪಶ್ಯಾಮಿ ವಾಂ ಕ್ವಚಿತ್ ॥ ೧೫ ॥

ಮೋಹೇನ ಮಹತಾರಂ ನ್ಯೆ ತಮಸಾ ಚ ವಿಮೋಹಿತಃ ।
ಕಿಂ ಕರೋಮಿ ಕ್ವ ಗಚ್ಛಾಮಿ ಕ್ವ ಚಾಹಮಧುನಾ ಸ್ಥಿತಃ ॥ ೧೬ ॥

---

೧೨. ಸ್ವಲ್ಪಹೊತ್ತು ನಿದ್ದೆಯಿಂದ ಆಕ್ರಮಿಸಲ್ಪಟ್ಟವರಂತೆ ಜಡಮನಸ್ಸುಳ್ಳವರಾಗಿಯೂ, ಇನ್ನು ಸ್ವಲ್ಪಹೊತ್ತು ಅಜ್ಞಾನದಿಂದ ಮೋಹಿತರಾಗಿಯೂ ಇರುತ್ತಾ, ಸ್ವಲ್ಪ ಜ್ಞಾನ ಬಂದಾಗ ಮುಂದೆ ಏನುಮಾಡುವುದು ? ಎಂಬ ಚಿಂತೆಯಿಂದ ಕೂಡಿದವರಾಗಿ ಇದ್ದರು.

೧೩. ಅಯ್ಯಾ ಶೂರನಾದ ರಾಜನೇ ! ಆಗ ಭೂತಾಧಿಪತಿಯೂ, ನಾಗಾಭರಣನೂ, ಚಂದ್ರಶೇಖರನೂ, ಗಂಗಾಧರನೂ ಆದ ಪರಮೇಶ್ವರನು

೧೪. ಹೀಗಾದುದಕ್ಕಾಗಿ ಮನೋವ್ಯಥೆಹೊಂದಿ ಅಜ್ಞಾನದಿಂದ ಮೋಹಿತನಾಗಿ ; ಮಾಧವನೂ, ಭೂಧರನೂ, ಹರಿಶಬ್ದವಾಚ್ಯನೂ ಆದ ಮಹಾವಿಷ್ಣುವನ್ನು ಕಾಣದೆ

೧೫. ಆ ಮಹಾದೇವನು ಈ ಪ್ರಕಾರ ಹೇಳಿದನು. "ಮಹಾಬುದ್ಧಿಶಾಲಿಯೂ, ಮಹಾಬಲಶಾಲಿಯೂ ಆದ ಕೃಷ್ಣಾ, ಕೃಷ್ಣಾ! ನೀನು ಎಲ್ಲಿ ಇದ್ದೀಯೆ? ಬ್ರಹ್ಮನು ಎಲ್ಲಿ ಹೋದನು ? ನೀವಿಬ್ಬರೂ ನನ್ನ ಕಣ್ಣಿಗೆ ಕಾಣುತ್ತಲೇ ಇಲ್ಲವಲ್ಲಾ ? "

೧೬. "ಮಹಾಅಜ್ಞಾನವೆಂಬ ಅಂಧಕಾರದಿಂದ ಮೋಹಿತನಾದ ನಾನು ಏನು ಮಾಡಲಿ? ಎಲ್ಲಿ ಹೋಗಲಿ? ಈಗ ನಾನು ಎಲ್ಲಿದ್ದೇನೆ ? "

ಕ್ಷ್ಮಾಭೃದ್ಧರಂ ಪೃಥಿವೀಂ ವೃಕ್ಷಾನ್ ದೇವಗಂಧರ್ವದಾನವಾನ್ ।
ವಿಪುಲಂ ಸಾಗರಂ ಸಿಂಧೂನ್ನಾಹಂ ಪಶ್ಯಾಮಿ ಕಿಂಚನ ॥ ೧೭ ॥

ಕೇನೋಪಾಯೇನ ಪಶ್ಯೇಯಂ ಜಗತ್‌ಸ್ಥಾವರಜಂಗಮಂ ।
ಬ್ರೂಹಿ ಮೇ ದೇವಶಾರ್ದೂಲ ವ್ರೀಡಾ ಮೇಽತೀವ ಜಾಯತೇ ॥ ೧೮ ॥

ಶಂಕರಸ್ಯ ವಚಃ ಶ್ರುತ್ವಾ ಹರಿರ್ವಚನಮಬ್ರವೀತ್ ।
ಶೋಕಗದ್ಗದಯಾ ವಾಚಾ ತಮಸಾ ಮೋಹಿತೋ ನೃಪ ॥ ೧೯ ॥

॥ ವಿಷ್ಣುರುವಾಚ ॥

ಭೀಮ ಭೀಮ ನ ಜಾನೇಽಹಂ ಕ್ವ ಭವಾನ್ವರ್ತತೇಽಧುನಾ ।
ಮಮಾಪಿ ಮೋಹಿತಂ ಚೇತಸ್ತಮಸಾತೀವ ಶಂಕರ ॥ ೨೦ ॥

ಕ್ವ ಗಚ್ಛಾಮಿ ಕ್ವ ತಿಷ್ಠಾಮಿ ಕಥಂ ತತ್ ಸ್ವಸ್ಥತಾಂ ವ್ರಜೇತ್ ।
ತಮಸಾ ಪೂರಿತಂ ಸರ್ವಂ ಜಗದ್ಧಿ ಪರಮೇಶ್ವರ ॥ ೨೧ ॥

---

೧೭. ಪರ್ವತ, ಭೂಮಿ, ವೃಕ್ಷಗಳು, ದೇವಗಂಧರ್ವದಾನವರು, ವಿಶಾಲವಾದ ಸಾಗರ, ಸಮುದ್ರಗಳು ಇವು ಯಾವುವನ್ನೂ ಕಾಣುತ್ತಲೇ ಇಲ್ಲವಲ್ಲ.

೧೮. ಸ್ಥಾವರ ಜಂಗಮಾತ್ಮಕವಾದ ಜಗತ್ತನ್ನು ಯಾವ ಉಪಾಯದಿಂದ ನೋಡಿಯೇನು? ಎಲೈ ದೇವಶ್ರೇಷ್ಠನೇ! ನನಗೆ ತುಂಬಾ ನಾಚಿಕೆಯಾಗುತ್ತಿದೆ. ನನಗೆ ಇದನ್ನು ದಯವಿಟ್ಟು ಹೇಳು" ಎಂದನು.

೧೯. ಎಲೈ ರಾಜನೇ! ಕೇಳು; ಶಂಕರನು ಹೇಳಿದ ಈ ಮಾತನ್ನು ಕೇಳಿ, ಹರಿಯು ಶೋಕದಿಂದ ಗದ್ಗದಧ್ವನಿಯುಳ್ಳವರಾಗಿ ಅಜ್ಞಾನದಿಂದ ಮೋಹಿತನಾಗಿ ಇದ್ದನು,

೨೦. ಆಗ ವಿಷ್ಣುವು ಪರಮೇಶ್ವರನನ್ನು ಕುರಿತು ಅಯ್ಯಾ ಭೀಮೇಶನೇ! ನೀನು ಈಗ ಎಲ್ಲಿರುವೆಯೋ ನನಗೆ ಕಾಣುವುದಿಲ್ಲ. ಶಂಕರಾ! ನನ್ನ ಮನಸ್ಸು ತಮಸ್ಸಿನಿಂದ ಬಹಳ ಮೋಹಿತವಾಗಿದೆ.

೨೧. ಪರಮೇಶ್ವರಾ! ನಾನು ಎಲ್ಲಿ ಹೋಗಲಿ? ಎಲ್ಲಿ ಇರಲಿ? ಏನುಮಾಡಿದರೆ ಇದು ಸ್ವಸ್ಥತೆಯನ್ನು ಹೊಂದೀತು? ಜಗತ್ತೆಲ್ಲವೂ ತಮಸ್ಸಿನಿಂದ ಆವೃತವಾಗಿದೆಯಲ್ಲಾ

ಯದ್ಯಸೌ ದೃಶ್ಯತೇ ದೇವಃ ಸುರಜ್ಯೇಷ್ಠೋಽಂಬುಜೋದ್ಭವಃ ।
ಪೃಚ್ಛಾವ ತಂ ಮಹಾತ್ಮಾನಂ ಯದಿ ತೇ ರೋಚತೇ ಹರ ॥ ೨೨ ॥

ಹಿತ್ವಾ ದರ್ಪಮಹಂಕಾರಂ ಸಮಮಾಸ್ಥಾಯ ಕೇವಲಂ ।
ಪದ್ಮಾಸನಂ ಪದ್ಮಯೋನಿಂ ಪದ್ಮಪತ್ರನಿಭೇಕ್ಷಣಂ ॥ ೨೩ ॥

ಇತ್ಯೇವಂ ಗದತೋ ವಾಕ್ಯಂ ವಿಷ್ಣೋರಮಿತತೇಜಸಃ ।
ಶ್ರುತ್ವೋವಾಚ ವಿಭುರ್ಬ್ರಹ್ಮಾ ಗಂಗಾಧರಮಹೀಧರೌ ॥ ೨೪ ॥

ಕೃಷ್ಣ ಕೃಷ್ಣ ಮಹಾಬಾಹೋ ಭೀಮ ಭೀಮ ಮಹಾಮತೇ ।
ಕ್ವ ಭವಂತೌ ಬ್ರೂಹಿ ಕಿಂ ಚ ಕಿಂ ಯುವಾಮೂಚಥುರ್ಮಿಥಃ ॥ ೨೫ ॥

ಮಮಾತೀವ ಮನೋಬುದ್ಧೀ ತಮಸೋವಶಮಾಗತೇ ।
ನ ಶೃಣೋಮಿ ನ ಪಶ್ಯಾಮಿ ನಿದ್ರಾಮೋಹವಶಂ ಗತಃ ॥ ೨೬ ॥

---

೨೨. "ಸುರಜ್ಯೇಷ್ಠನಾದ ಬ್ರಹ್ಮನು ದೃಷ್ಟಿಗೋಚರನಾಗಲಿ! ನಿನಗೂ ಸಮ್ಮತವಾಗಿದ್ದರೆ ಮಹಾತ್ಮನಾದ ಅವನನ್ನು ಕೇಳಬಹುದು.

೨೩. ಆತನೂ ದರ್ಪಾಹಂಕಾರಗಳನ್ನು ಬಿಟ್ಟು ಶಾಂತತೆಯನ್ನು ಹೊಂದಿದ್ದರೆ, ಪದ್ಮಾಸನನೂ, ಪದ್ಮೋದ್ಭವನೂ, ಪದ್ಮದಳಕ್ಕೆ ಸದೃಶವಾದ ಕಣ್ಣುಗಳುಳ್ಳವನೂ ಆದ ಬ್ರಹ್ಮನನ್ನು ಕೇಳೋಣ" ಎಂದು ಹೇಳಿದನು.

೨೪. ಹೀಗೆ ಹೇಳುತ್ತಿರುವ ಮಹಾತೇಜಸ್ವಿಯಾದ ವಿಷ್ಣುವಿನ ವಾಕ್ಯವನ್ನು ಕೇಳಿ, ಬ್ರಹ್ಮನು ಶಿವ ವಿಷ್ಣುಗಳನ್ನು ಕುರಿತು ಇಂತೆಂದನು.

೨೫. ಎಲೈ ಮಹಾಬಾಹುವಾದ ಕೃಷ್ಣ! ಎಲೈ ಬುದ್ಧಿಶಾಲಿಯಾದ ಭೀಮೇಶಾ! ನೀವಿಬ್ಬರೂ ಎಲ್ಲಿರುವಿರಿ? ನೀವು ಒಬ್ಬೊಬ್ಬರೂ ಏನು ಹೇಳುತ್ತಿರುವಿರಿ ?

೨೬. ನನ್ನ ಮನೋಬುದ್ಧಿಗಳು ಬಹುಮಟ್ಟಿಗೆ ಅಂಧಕಾರಾವೃತವಾಗಿವೆ. ನನಗೇನೂ ಕೇಳುವುದಿಲ್ಲ. ಕಣ್ಣಿಗೂ ಏನೂ ಕಾಣುವುದಿಲ್ಲ. ನಾನು ನಿದ್ರಾಮೋಹಗಳಿಗೆ ವಶನಾಗಿದ್ದೇನೆ.

ಅಹೋ ಬತ ಜಗತ್ಸರ್ವಂ ಸದೇವಾಸುರಮಾನುಷಂ ।
ತಮಸಾದ್ಯಾವೃತಂ ದೇವೌ ನ ಜಾನೇ ಕ್ವ ಗತಂ ಮಹಃ ॥ ೨೭ ॥

ಅಥ ತೇಷಾಂ ಪ್ರವದತಾಂ ಬ್ರಹ್ಮಾದೀನಾಂ ದಿವೌಕಸಾಂ ।
ದರ್ಪಕ್ರೋಧಭಯಾರ್ತಾನಾಂ ತಮಸಾಕಾಂತಚೇತಸಾಂ ॥ ೨೮ ॥

ತೇಷಾಂ ದರ್ಪಾಪಹಾರಾಯ ಪ್ರಬೋಧಾರ್ಥಂ ಚ ಗೋಪತೇಃ ।
ತೇಜೋರೂಪಂ ಸಮುದ್ಭೂತಮಸ್ಪೃಶ್ಯಂಗಮನೂಪಮಂ ॥ ೨೯ ॥

ಅಲಕ್ಷ್ಯಂ ಪಾಪತಮಸಾ ಮಹದ್ವ್ಯೋಮ ನರಾಧಿಪ ।
ಜ್ವಾಲಾಮಾಲಾವೃತಂ ವೀರ ಬಹುರೂಪಂ ಚ ಭಾಸತೇ ॥ ೩೦ ॥

ಶತಯೋಜನವಿಸ್ತೀರ್ಣಂ ಗತಮೂರ್ಧ್ವಂ ಭ್ರಮತ್ತಥಾ ।
ಗೋಮಧ್ಯತೋ ಮಹಾರಾಜ ಕರ್ಣಿಕೇವಾಂಬುಜಸ್ಯ ತು ॥ ೩೧ ॥

---

೨೭. "ಆಹಾ ಆಶ್ಚರ್ಯ! ದೇವತೆಗಳು, ಮನುಷ್ಯರು ಇವರಿಂದ ಕೂಡಿದ ಸಮಸ್ತ ಜಗತ್ತೂ ಈಗ ಕತ್ತಲೆಯಿಂದ ಆವರಿಸಲ್ಪಟ್ಟಿದೆಯಲ್ಲಾ! ಅಯ್ಯೋ ಬೆಳಕೆಲ್ಲಿ ಹೋಯಿತೋ ಕಾಣೆನಲ್ಲಾ! " ಎಂದು ಹೇಳುತ್ತಿದ್ದನು.

೨೮. ಹೀಗೆ ಮಾತಾಡುತ್ತಿರುವ ಆ ಬ್ರಹ್ಮಾದಿದೇವತೆಗಳಿಗೆ ದರ್ಪ, ಕ್ರೋಧ, ಭಯಗಳು, ಅವರ ಮನಸ್ಸುಗಳನ್ನು ಸಂಪೂರ್ಣವಾಗಿ ಆಕ್ರಮಿಸಿದ್ದುದರಿಂದ, ಕೇವಲ ತಮೋಮಯರಾಗಿದ್ದರು.

೨೯. ಆಗ ಅವರ ಈ ಬಗೆಯ ದರ್ಪವನ್ನು ಹೋಗಲಾಡಿಸಿ, ಎಚ್ಚರಗೊಳಿಸುವುದಕ್ಕಾಗಿ, ಅಸದೃಶವಾಗಿಯೂ, ಅಸ್ಪೃಶ್ಯಂಗಗಳುಳ್ಳದಾಗಿಯೂ ಇರುವ ಗೋಪತಿಯ ಒಂದು ತೇಜೋರೂಪ ಹುಟ್ಟಿತು.

೩೦. ಎಲೈ ನರಾಧಿಪನೇ! ಕೇಳು ; ಆ ಮಹಾವ್ಯೋಮವು, ಪಾಪತಮಸ್ಸುಗಳಿಗೆ ಈಕ್ಷಿಸಲು ಅಸಾಧ್ಯವಾಗಿ, ಜ್ವಾಲಾಮಾಲೆಗಳಿಂದ ಆವೃತವೂ, ಬಹುರೂಪವೂ, ಪ್ರಕಾಶಯುತವೂ ಆಗಿದ್ದಿತು.

೩೧. ಎಲೈ ಮಹಾರಾಜನೇ! ಅದು ನೂರುಯೋಜನದ ಅಳತೆಯುಷ್ಟು ಎತ್ತರಕ್ಕೆ ಹೋಗಿ, ಆದೊಂದು ರೀತಿ ಸುತ್ತುತ್ತಾ ಕಿರಣಮಧ್ಯಗತವಾದ ಕಮಲ ಕರ್ಣಿಕೆಯಂತೆ ಕಾಣುತ್ತಿದ್ದಿತು.

ಪ್ರಕಾಶಂ ತೇಜಸಾ ತಸ್ಯ ಜಗತ್ಸರ್ವಮಿದಂ ನೃಪ ।
ಪುಟೀಷ್ವಂತರ್ಯಥಾ ವೀರ ಅಂಬುಜಸ್ಯಾರ್ಕಭಿಃ ಸದಾ ॥ ೩೨ ॥

ದೃಷ್ಟ್ವಾ ಪರಸ್ಪರಂ ಸರ್ವೇ ಹುಂಕಾರಾದಿ ವಿಕಾರಿಣಃ ।
ತೇಜಸಾ ಮೋಹಿತಸ್ತಸ್ಯ ಜಗತ್ಸರ್ವಮಿದಂ ನೃಪ ॥ ೩೩ ॥

ತೇಜಸಾ ಮೋಹಿತಂ ತಸ್ಯ ಮಹದ್ವ್ಯೋಮ ನರಾಧಿಪ ।
ತತೋ ವಿಸ್ಮಯಮಾಪನ್ನಾ ದೃಷ್ಟ್ವಾಗೋಪತಯೋ ನೃಪ ॥ ೩೪ ॥

ಲೋಕಮಾನಾ ಮಹೋವ್ಯೋಮ್ನಿ ಮಿಥೋ ವಚನಮಬ್ರವೀತ್ ।
ಅಹೋ ತೇಜಃ ಸಮುದ್ಭೂತಮಸ್ಮಾಕಂ ಶ್ರೇಯಸೇ ನೃಪ ॥ ೩೫ ॥

---

೩೨. ಅಂಬುಜದ ದಳಗಳೊಳಭಾಗವು ಸೂರ್ಯಕಿರಣಗಳಿಂದ ಹೇಗೆ ವಿಕಾಸವಾಗುವುದೋ ಹಾಗೆ ಅವನ ತೇಜಸ್ಸಿನಿಂದ ಈ ಜಗತ್ತೆಲ್ಲವೂ ಪ್ರಕಾಶವಾಯಿತು.

೩೩. ಹಾಗೆ ಒಬ್ಬರನ್ನೊಬ್ಬರು ನೋಡಿ ಹುಂಕರಿಸುವ ಮನೋವಿಕಾರವುಳ್ಳವರಾಗಿದ್ದ ಅವರೆಲ್ಲಾ ಆ ದಿವ್ಯತೇಜಸ್ಸಿನಿಂದ ಮೋಹಿತರಾದರು. ಅಯ್ಯಾ ನರಾಧಿಪನೇ! ಅವನ ತೇಜಸ್ಸಿನಿಂದ ಮಹತ್ತತ್ತ್ವವೂ ಮೋಹಿತವಾಯ್ತು ಆಕಾಶತತ್ವವೂ ಮೋಹಿತವಾಯ್ತು ಈ ಜಗತ್ತೆಲ್ಲವೂ ಮೋಹಿತವಾಯಿತು.

೩೪. ಎಲೈ ರಾಜನೇ ! ಅನಂತರ ಅವರೆಲ್ಲರೂ ಆಶ್ಚರ್ಯಹೊಂದಿ ಆಕಾಶದಲ್ಲಿ ಕಿರಣಾಧಿಪತಿಯನ್ನು ಕಂಡು ಆತನ ತೇಜಸ್ಸನ್ನೇ ನೋಡುತ್ತಾ ಇದ್ದರು.

೩೫ ಅಯ್ಯಾ ನರಾಧಿಪನೇ! ಕೇಳು; ಅನಂತರ ಅವರು ಪರಸ್ಪರ "ಆಹಾ ಇದೇನು ? ನಮ್ಮ ಶ್ರೇಯಸ್ಸಿಗಾಗಿಯೂ, ಲೋಕಗಳಿಗೆಲ್ಲಾ ಪ್ರಕಾಶವುಂಟುಮಾಡುವುದಾಗಿಯೂ ಈ ತೇಜಸ್ಸು ಹುಟ್ಟಿರಬೇಕು. ಇದು ಏನಿರಬಹುದು ? ಚೆನ್ನಾಗಿ ನೋಡೋಣ" ಎಂದರು. ಇದರ ನಿಜಾಂಶವನ್ನು ತಿಳಿಯುವುದಕ್ಕಾಗಿ ಬ್ರಹ್ಮನು ಮೇಲಕ್ಕೆ ಸ್ವರ್ಗದಕಡೆಗೆ ಹೋದನು.

ಪ್ರಕಾಶಾಯ ಚ ಲೋಕಾನಾಂ ಸರ್ವೇ ಪಶ್ಯಾಮ ಕಿಂನ್ವಿದಂ ।
ಜ್ಞಾನಾಯೋರ್ಧ್ವಂ ಗತೋ ಬ್ರಹ್ಮಾ ಚಾಧಸ್ತಾತ್ತ್ರಿಪುರಾಂತಕಃ ॥ ೩೬ ॥

ತಿರ್ಯಗ್ಜಗಾಮ ದೇವೇಶಶ್ಚಕ್ರಾಂಬುಜಗದಾಧರಃ ।
ಅಲಬ್ಧ್ವಾ ತಸ್ಯ ತೇ ಸರ್ವೇ ಪ್ರಮಾಣಂ ಗೈರಿಕಾಧಿಪಾಃ ॥ ೩೭ ॥

ವಿಸ್ಮಯೋತ್ಫುಲ್ಲನಯನಾಃ ಸಮಾಗಮ್ಯ ಪರಸ್ಪರಂ ।
ಸರ್ವೇ ಕಂಜಾದಿಕಾ ದೇವ ಇದಂ ವಚನಮಬ್ರುವನ್ ॥ ೩೮ ॥

ಕೋಽಯಂ ಕಿಮಾತ್ಮಕಶ್ಚಾಯಂ ಕಿಮಿದಂ ತೇಜಸಾಂನಿಧಿಃ ।
ಅಹೋಽಸ್ಯ ದರ್ಶನಾತ್ಸರ್ವೇ ಸಂಜಾತಾ ಜ್ಞಾನಿನೋ ವಯಂ ॥ ೩೯ ॥

ತಸ್ಮಾತ್ಸರ್ವೇ ಪ್ರಣಮ್ಯೈನಂ ಸ್ತುವೀಮೋಽದ್ಭುತದರ್ಶನಂ ।
ಕೃತಾಂಜಲಿಪುಟಾಃಸರ್ವೇ ಚಾಸ್ತುವಂಸ್ತ್ರಿದಿವೌಕಸಃ ॥ ೪೦ ॥

---

೩೬. ತ್ರಿಪುರಾಂತಕನಾದ ಶಿವನು ಕೆಳಕ್ಕೆ ಪಾತಾಳದಕಡೆ ಹೋದನು ಶಂಖ ಚಕ್ರ, ಗದಾ, ಪದ್ಮಧರನಾದ ವಿಷ್ಣುವು ಭೂಲೋಕದಲ್ಲೇ ಎಲ್ಲೆಲ್ಲೋ ಹುಡುಕುತ್ತಾ ಓಡಾಡಿದನು.

೩೭. ಗೈರಿಕರಾಷ್ಟ್ರಾಧಿಪನೇ! ಕೇಳು, ಅವರೆಲ್ಲರಿಗೂ ಆ ತೇಜಸ್ಸಿನ ಮೂಲವೇ ಗೊತ್ತಾಗದೆ ಆಶ್ಚರ್ಯದಿಂದ ಕಣ್ಣನ್ನು ಅರಳಿಸಿದರು,

೩೮-೩೯. ಬಳಿಕ ಬ್ರಹ್ಮಾದಿದೇವತೆಗಳು ಒಬ್ಬರನ್ನೊಬ್ಬರು ಸಂಧಿಸಿ, “ಈ ತೇಜೋಮಯನು ಯಾರು? ಅವನ ಸ್ವರೂಪವೇನು? ಇದು ತೇಜಸ್ಸುಗಳ ನಿಧಿಯೋ! ಅಥವಾ ಇನ್ನೇನಾದರೂ ಬೇರೆಯೋ! ಆಹಾ ಇದನ್ನು ನೋಡಿದಮಾತ್ರಕ್ಕೇ ನಾವುಗಳೆಲ್ಲರೂ ಜ್ಞಾನಿಗಳಾದೆವು.

೪೦. ಆದುದರಿಂದ ಆಶ್ಚರ್ಯಕರವಾಗಿ ಕಾಣುವ ಈ ವ್ಯಕ್ತಿಯನ್ನು ನಮಸ್ಕರಿಸಿ ಸ್ತೋತ್ರಮಾಡೋಣ” ಎಂದು ಬ್ರಹ್ಮಾದಿದೇವತೆಗಳೆಲ್ಲರೂ ಕೈಮುಗಿದುಕೊಂಡು ಸ್ತೋತ್ರಮಾಡಿದರು.

**ಸ್ತುವತಾಮಪ್ಯಥೈತೇಷಾಂ ಸಹಸ್ರಕಿರಣೋ ರವಿಃ ।**
**ಆತ್ಮಾನಂ ದರ್ಶಯಾಮಾಸ ಕೃಪಯಾ ಪರಯಾ ವೃತಃ ॥ ೪೧ ॥**

**ಜ್ಞಾತ್ವಾ ಭಕ್ತಿಂ ಮಹಾಬಾಹೋ ಬ್ರಹ್ಮಾದೀನಾಂ ಮಹೋಪಮಾಂ ।**
**ಅಥ ತೇ ವ್ಯೋಮ್ನಿ ದೇವೇಶಂ ದದೃಶುಃ ಪರಮೇಶ್ವರಂ ॥ ೪೨ ॥**

**ಖಷೋಲ್ಕಂ ಲೋಕನಾಥೇಶಂ ಸಹಸ್ರಕಿರಣೋಜ್ವಲಂ ।**
**ಕೃತ್ತಿಕಾಭಿರಸಂಸ್ಪೃಷ್ಟಂ ಯದ್ವಾ ತತ್ಕಾರ್ತಿಕಾಸ್ಥಿತಿಂ ॥ ೪೩ ॥**

**ದುರ್ಜಯಂ ಕೃತ್ತಿಕಾನಾಂ ತು ತಥೈಕೇನ ವಿವರ್ಜಿತಂ ।**
**ತಥಾ ಹಸ್ತವಿಹೀನಂ ಚ ಸಪ್ತರ್ಷಿರಹಿತಂ ತಥಾ ॥ ೪೪ ॥**

**ವರ್ಷಾಬ್ದಾರಹಿತಂ ದೇವಂ ಸಪ್ತಸ್ವರವಿವರ್ಜಿತಂ ।**
**ಸಕಲಂ ನಿಷ್ಕಲಂ ಚೈವ ಸದೈಕಾಕಾರರೂಪಿಣಂ ॥ ೪೫ ॥**

---

೪೧. ಈ ಪ್ರಕಾರ ತನ್ನನ್ನು ಸ್ತುತಿಮಾಡುತ್ತಿರುವ ಬ್ರಹ್ಮಾದಿಗಳ ಅನುಪಮವಾದ ಭಕ್ತಿಯನ್ನು ಕಂಡು, ಸಹಸ್ರಕಿರಣನಾದ ಸೂರ್ಯನು, ಇವರಲ್ಲಿ ಕೃಪಾಪೂರ್ಣನಾಗಿ ತನ್ನ ನಿಜರೂಪದಿಂದ ಪ್ರತ್ಯಕ್ಷನಾದನು.

೪೨-೪೩. ಆಮೇಲೆ ಅವರು ಪರಮೇಶ್ವರಸ್ವರೂಪನೂ, ದೇವೇಶನೂ ಆದ ಸೂರ್ಯನನ್ನು, ಅಂತರಿಕ್ಷದಲ್ಲಿ ದರ್ಶನಮಾಡಿ ಖಷೋಲ್ಕಸಂಜ್ಞನೂ, ಲೋಕನಾಥರಿಗೆ ಈಶನೂ, ಸಹಸ್ರಕಿರಣಗಳಿಂದ ವಿರಾಜಮಾನನೂ, ಕೃತ್ತಿಕಾನಕ್ಷತ್ರ ಸಂಬಂಧವಿಲ್ಲದವನೂ ಆದ ಸೂರ್ಯನನ್ನೋ, ಅಥವಾ ಕೃತ್ತಿಕಾನಕ್ಷತ್ರಗತವಾದ ಸೂರ್ಯನನ್ನೋ ನೋಡಿದರು.

೪೪-೪೫. ಕೃತ್ತಿಕೆಗಳಿಗೆ ದುರ್ಜಯನಾದರೂ ಒಂದು ಕೃತ್ತಿಕೆಯಿಂದ ವಿವರ್ಜಿತನೂ, ಹಸ್ತವಿಹೀನನೂ, ಸಪ್ತರ್ಷಿಮಂಡಲವಿಲ್ಲದವನೂ, ವರ್ಷಾಬ್ದಾರಹಿತನೂ, ಸಪ್ತಸ್ವರವಿವರ್ಜಿತನೂ, (ಸಕಲನು) ಕಲೆಗಳಿಂದಾಗಬೇಕಾದ ಪ್ರಯೋಜನಹೊಂದಿದವನೂ, ನಿಷ್ಕಲನು ಕಲೆಗಳಿಂದಾಗುವ ಬಾಧಕಗಳಿಗೆ ಗುರಿಯಾಗದವನೂ. ಯಾವಾಗಲೂ ಏಕರೂಪವುಳ್ಳವನೂ ಆಗಿದ್ದರೂ ;

ತದ್ದೃಷ್ಟ್ವಾನೇಕಶಿರಸಮನೇಕಚರಣಂ ತಥಾ ।
ಅನೇಕೋದರಬಾಹ್ವಂಸಮನೇಕಾಭರಣಾನ್ವಿತಂ ॥ ೪೬ ॥

ಅನೇಕಾನನಮಕ್ಷೀಬಂ ಸಹಸ್ರಾಕ್ಷಮನೌಪಮಂ ।
ಅನೇಕ ವರ್ಣರೂಪಂ ಚ ಅನೇಕಮುಕುಟೋಜ್ವಲಂ ॥ ೪೭ ॥

ದೃಷ್ಟ್ವೈವಂ ದೇವದೇವಸ್ಯ ರೂಪಂ ಭಾನೋರ್ಮಹಾತ್ಮನಃ ।
ವಿಸ್ಮಯೋತ್ಫುಲ್ಲನಯನಾಸ್ತುಷ್ಟುವುಸ್ತೇ ದಿವಾಕರಂ ॥ ೪೮ ॥

ಕೃತಾಂಜಲಿಪುಟೋ ಭೂತ್ವಾ ಬ್ರಹ್ಮಾ ಸ್ತೋತುಂ ಪ್ರಚಕ್ರಮೇ ।
ಪ್ರಣಮ್ಯ ಶಿರಸಾ ಭಾನುಮಿದಂ ವಚನಮಬ್ರವೀತ್ ॥ ೪೯ ॥

॥ ಬ್ರಹ್ಮೋವಾಚ ॥

ನಮಸ್ತೇ ದೇವದೇವೇಶ ಸಹಸ್ರಕಿರಣೋಜ್ವಲ ।
ಲೋಕದೀಪ ನಮಸ್ತೇऽಸ್ತು ನಮಸ್ತೇ ಕೋಣವಲ್ಲಭ ॥ ೫೦ ॥

---

೪೬-೪೭. ಅದು ಅನೇಕ ಶಿರಸ್ಸುಗಳೂ, ಅನೇಕ ಪಾದಗಳೂ, ಅನೇಕ ಉದರಗಳೂ, ಅನೇಕ ಬಾಹುಗಳೂ, ಅನೇಕ ಹೆಗಲುಗಳೂ, ಅನೇಕ ಆಭರಣಗಳೂ ಉಳ್ಳುದಾಗಿ, ಅನೇಕ ಮುಖಗಳಿಂದ ಕೂಡಿದುದೂ, ಮದರಹಿತವಾದುದೂ, ಸಹಸ್ರನೇತ್ರವುಳ್ಳುದ್ದೂ, ಅಸದೃಶವಾದುದೂ, ಅನೇಕ ಬಣ್ಣಗಳುಳ್ಳುದೆಂದು ನಿರೂಪಿಸಲ್ಪಡುವುದೂ, ಅನೇಕ ಕಿರೀಟಗಳಿಂದ ಪ್ರಕಾಶಮಾನವಾದುದೂ ಆಗಿದ್ದಿತು.

೪೮. ಮಹಾತ್ಮನೂ, ದೇವದೇವನೂ ಆದ ಸೂರ್ಯನ, ಈ ಪ್ರಕಾರವಾದ ರೂಪವನ್ನು ನೋಡಿ, ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ, ಅವರು ಸೂರ್ಯನನ್ನು ಸ್ತುತಿಸಲು ತೊಡಗಿದರು.

೪೯. ಬ್ರಹ್ಮನು ಕಮಲದ ಮೊಗ್ಗಿನಂತೆ ಕೈಗಳನ್ನು ಜೋಡಿಸಿ ಮುಗಿದುಕೊಂಡು, ತಲೆಬಗ್ಗಿಸಿಕೊಂಡು ಸೂರ್ಯನಿಗೆ ನಮಿಸಿ ಈ ರೀತಿ ಸ್ತುತಿಸತೊಡಗಿದನು.

೫೦. ಬ್ರಹ್ಮನು ಹೇಳಿದ ಸ್ತೋತ್ರಾರ್ಥ. ಎಲೈ ಸಹಸ್ರಕಿರಣಗಳಿಂದ ಪ್ರಕಾಶಮಾನನೂ, ದೇವದೇವನೂ ಲೋಕಕ್ಕೆಲ್ಲಾ ದೀಪದಂತೆ ಇರುವವನೂ, (ಕೋಣ-ಶನಿ) ಶನಿಗೆ ಅಂತರಂಗಪ್ರಿಯನೂ,

ಭಾಸ್ಕರಾಯ ನಮೋ ನಿತ್ಯಂ ಖಷೋಲ್ಕಾಯ ನಮೋನಮಃ ।
ವಿಷ್ಣವೇ ಕಾಲಚಕ್ರಾಯ ಸೋಮಾಯಾಮಿತತೇಜಸೇ ॥ ೫೧ ॥

ನಮಸ್ತೇ ಪಂಚಕಾಲಾಯ ಇಂದ್ರಾಯ ವಸುರೇತಸೇ ।
ಖಗಾಯ ಲೋಕನಾಥಾಯ ಏಕಚಕ್ರರಥಾಯ ಚ ॥ ೫೨ ॥

ಜಗದ್ಧಿತಾಯ ದೇವಾಯ ಶಿವಾಯಾಮಿತತೇಜಸೇ ।
ತಮೋಘ್ನಾಯ ಸುರೂಪಾಯ ತೇಜಸಾಂ ನಿಧಯೇ ನಮಃ ॥ ೫೩ ॥

ಅರ್ಥಾಯ ಕಾಮರೂಪಾಯ ಧರ್ಮಾಯಾಮಿತತೇಜಸೇ ।
ಮೋಕ್ಷಾಯ ಮೋಕ್ಷರೂಪಾಯ ಸೂರ್ಯಾಯ ಚ ನಮೋನಮಃ ॥ ೫೪ ॥

ಕ್ರೋಧಲೋಭವಿಹೀನಾಯ ಲೋಕಾನಾಂ ಸ್ಥಿತಿಹೇತವೇ ।
ಶುಭಾಯ ಶುಭರೂಪಾಯ ಶುಭದಾಯ ಶುಭಾತ್ಮನೇ ॥ ೫೫ ॥

ಶಾಂತಾಯ ಶಾಂತರೂಪಾಯ ಶಾಂತಯೇಽಸ್ಮಾಸು ವೈ ನಮಃ ।
ನಮಸ್ತೇ ಬ್ರಹ್ಮರೂಪಾಯ ಬ್ರಾಹ್ಮಣಾಯ ನಮೋನಮಃ ॥ ೫೬ ॥

---

೫೧. ಭಾಸ್ಕರನೂ, ಖಷೋಲ್ಕಸಂಜ್ಞನೂ, ವಿಷ್ಣುವೂ, ಕಾಲಚಕ್ರಸ್ವರೂಪನೂ, ಅಮಿತತೇಜಸ್ವಿಯೂ, ಸೋಮಸ್ವರೂಪನೂ ಆದ ನಿನಗೆ ನಮಸ್ಕಾರ.

೫೨-೫೪. ಪಂಚಕಾಲಸ್ವರೂಪನೂ, ಇಂದ್ರಸ್ವರೂಪನೂ, ಹಿರಣ್ಯರೇತಸ್ಕನೂ, ಆಕಾಶಸಂಚಾರಿಯೂ, ಲೋಕನಾಥನೂ, ಒಂದೇಚಕ್ರದ ರಥವುಳ್ಳವನೂ, ಲೋಕಕ್ಕೆ ಹಿತಕರನಾದ ದೇವನೂ, ಮಂಗಳಕರನೂ, ಅಮಿತತೇಜಸ್ವಿಯೂ, ಕತ್ತಲೆಯನ್ನು ನಾಶಮಾಡತಕ್ಕವನೂ, ಸುರೂಪನೂ, ತೇಜಸ್ಸಿಗೆ ಆಶ್ರಯನೂ, ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳ ಸ್ವರೂಪನೂ, ಮೋಕ್ಷಪ್ರದನೂ ಆದ ಸೂರ್ಯದೇವನೇ! ನಿನಗೆ ನಮಸ್ಕಾರ.

೫೫. ಕೋಪ, ಲೋಭ ಇವುಗಳಿಲ್ಲದವನೂ, ಲೋಕದಸ್ಥಿತಿಗೆ ಕಾರಣನೂ, ಶುಭಕರನೂ, ಶುಭರೂಪನೂ, ಶುಭದಾಯಕನೂ, ಶುಭಾತ್ಮನೂ, ಆದ ನಿನಗೆ ನಮಸ್ಕಾರ.

೫೬. ನಮ್ಮ ವಿಷಯದಲ್ಲಿ ಶಾಂತನೂ, ಶಾಂತರೂಪನೂ, ಶಾಂತಿಪ್ರದನೂ ಆದ ನಿನಗೆ ನಮಸ್ಕಾರ. ಬ್ರಹ್ಮರೂಪನೂ, ಬ್ರಾಹ್ಮಣನೂ ಆದ ನಿನಗೆ ನಮಸ್ಕಾರ.

**ದೇವಾಯ ಬ್ರಹ್ಮರೂಪಾಯ ಬ್ರಹ್ಮಣೇ ಪರಮಾತ್ಮನೇ ।**
**ಬ್ರಹ್ಮಣೇ ಚ ಪ್ರಸಾದಂ ವೈ ಕುರು ದೇವ ಜಗತ್ಪತೇ ॥ ೫೭ ॥**

**ಏವಂ ಸ್ತುತ್ವಾ ರವಿಂ ಬ್ರಹ್ಮಾ ಶ್ರದ್ಧಯಾ ಪರಯಾ ವಿಭೋ ।**
**ತೂಷ್ಣೀಮಾಸೀನ್ಮಹಾಭಾಗ ಪ್ರಹೃಷ್ಟೇನಾಂತರಾತ್ಮನಾ ॥ ೫೮ ॥**

**ಬಹ್ಮಣೋಽನಂತರಂ ರುದ್ರಃ ಸ್ತೋತ್ರಂ ಚಕ್ರೇ ವಿಭಾವಸೋಃ ।**
**ತ್ರಿಪುರಾರಿರ್ಮಹಾತೇಜಾಃ ಪ್ರಣಮ್ಯ ಶಿರಸಾ ರವಿಂ ॥ ೫೯ ॥**

**॥ ಮಹಾದೇವ ಉವಾಚ ॥**

**ಜಯ ಭಾವ ಜಯಾಜೇಯ ಜಯ ಹಂಸ ದಿವಾಕರ ।**
**ಜಯ ಶಂಭೋ ಮಹಾಬಾಹೋ ಖಗಗೋಚರ ಭೂಧರ ॥ ೬೦ ॥**

**ಜಯ ಲೋಕಪ್ರದೀಪೇಶ ಜಯ ಭಾನೋ ಜಗತ್ಪತೇ ।**
**ಜಯ ಕಾಲ ಜಯಾನಂತ ಸಂವತ್ಸರ ಶುಭಾನನ ॥ ೬೧ ॥**

---

೫೭. ಬ್ರಹ್ಮದೇವಸ್ವರೂಪನೂ ಪರಬ್ರಹ್ಮನೂ, ಆದ ನಿನಗೆ ನಮಸ್ಕಾರ. ಎಲೈ ಜಗತ್ಪತಿಯಾದ ದೇವನೇ, ಬ್ರಹ್ಮನಾದ ನನ್ನಲ್ಲಿ ನೀನು ಅನುಗ್ರಹಮಾಡು."

೫೮. ಈ ಪ್ರಕಾರ ಬ್ರಹ್ಮನು ನಿರತಿಶಯವಾದ ಶ್ರದ್ಧೆಯಿಂದ ರವಿಯನ್ನು ಸ್ತುತಿಸಿ, ಪ್ರಹೃಷ್ಟವಾದ ಮನಸ್ಸಿನಿಂದ ಸುಮ್ಮನೆ ನಿಂತುಕೊಂಡನು.

೫೯. ಬ್ರಹ್ಮನು ಸ್ತುತಿಸಿ ಸುಮ್ಮನಾದ ಮೇಲೆ, ತ್ರಿಪುರಾದಿಯೂ, ಮಹಾತೇಜಸ್ವಿಯೂ ಆದ ರುದ್ರನು ಸೂರ್ಯನಿಗೆ ತಲೆಬಾಗಿ ನಮಿಸಿ ಅವನನ್ನು ಸ್ತೋತ್ರಮಾಡಿದನು.

೬೦. ಮಹಾದೇವನು ಸ್ತುತಿಮಾಡತೊಡಗಿ ಜಯದಭಾವನೆಯುಳ್ಳವನೇ! ಜಯಸ್ವರೂಪನೇ, ಜಯಿಸಲು ಅಸಾಧ್ಯನೇ, ಹಂಸಸಂಜ್ಞಕನೇ, ದಿವಾಕರನೇ! ನಿನಗೆ ಜಯವಾಗಲಿ. ಸುಖಪ್ರದನೇ! ಮಹಾಬಾಹುವೇ! ಖಗನೆಂದು ಗೋಚರನಾದವನೇ! ಭೂಧರನೇ, ನಿನಗೆ ಜಯವಾಗಲಿ.

೬೧. ಲೋಕಕ್ಕೆ ದೀಪಸ್ವರೂಪನಾದ ಒಡೆಯನೇ! ಭಾನುವೇ! ಜಗತ್ಪತಿಯೇ! ನಿನಗೆ ಜಯವಾಗಲಿ. ಕಾಲಸ್ವರೂಪನೇ, ಅನಂತನೇ, ನಾಶರಹಿತನೇ, ಸಂವತ್ಸರ ಸ್ವರೂಪನೇ, ಶುಭಾನನನೇ ನಿನಗೆ ಜಯವಾಗಲಿ.

ಜಯ ದೇವಾದಿತೇಃ ಪುತ್ರ ಕಶ್ಯಪಾನಂದವರ್ಧನ ।
ತಮೋಘ್ನ ಜಯ ಸಪ್ತೇಶ ಜಯ ಸಪ್ತಾಶ್ವವಾಹನ ॥ ೬೨ ॥

ಗ್ರಹೇಶ ಜಯ ಕಾಂತೀಶ ಜಯ ಕಾಲೇಶ ಶಂಕರ ।
ಅರ್ಥಕಾಮೇಶ ಧರ್ಮೇಶ ಜಯ ಮೋಕ್ಷೇಶ ಶರ್ಮದ ॥ ೬೩ ॥

ಜಯ ವೇದಾಂಗರೂಪಾಯ ಗ್ರಹರೂಪಾಯ ವೈ ನಮಃ ।
ಸತ್ಯಾಯ ಸತ್ಯರೂಪಾಯ ಸುರೂಪಾಯ ಶುಭಾಯ ಚ ॥ ೬೪ ॥

ಕ್ರೋಧಲೋಭವಿನಾಶಾಯ ಕಾಮನಾಶಾಯ ವೈ ಜಯ ।
ಕಲ್ಮಾಷಪಕ್ಷಿರೂಪಾಯ ಯತಿರೂಪಾಯ ಶಂಭವೇ ॥ ೬೫ ॥

ವಿಶ್ವಾಯ ವಿಶ್ವರೂಪಾಯ ವಿಶ್ವಕರ್ಮಾಯ ವೈ ನಮಃ ।
ಜಯೋಂಕಾರ ವಷಟ್ಕಾರ ಸ್ವಾಹಾಕಾರ ಸ್ವಧಾಮಯ ॥ ೬೬ ॥

---

೬೨. ಅದಿತಿಯ ಪುತ್ರನೂ, ಕಶ್ಯಪರಿಗೆ ಆನಂದವನ್ನು ಹೆಚ್ಚಿಸುವವನೂ, ಆದ ದೇವನೇ! ಅಂಧಕಾರವನ್ನು ಹೋಗಲಾಡಿಸುವವನೇ, ಸಪ್ತಕಿರಣಾಧಿಪತಿಯೇ, ಸುಖಕರನೇ, ಏಳುಕುದುರೆಗಳು ಎಳೆಯುವ ರಥವುಳ್ಳವನೇ ನಿನಗೆ ಜಯವಾಗಲಿ.

೬೩. ಗ್ರಹಗಳಿಗೆ ಅಧಿಪನಾದವನೇ, ಕಾಂತಿಗೆ ಒಡೆಯನೇ, ಕಾಲಾಧಿಪತಿಯೇ ಧರ್ಮಾರ್ಥಕಾಮಮೋಕ್ಷಗಳಿಗೆ ಅಧಿಪತಿಯೇ, ಸುಖದಾಯಕನೇ, ನಿನಗೆ ಜಯವಾಗಲಿ.

೬೪. ವೇದದ ಷಡಂಗಸ್ವರೂಪನೇ, ಸಮಸ್ತಗ್ರಹಸ್ವರೂಪನೇ, ನಿನಗೆ ನಮಸ್ಕಾರ. ಸತ್ಯನೂ, ಸತ್ಯಸ್ವರೂಪನೂ, ಸುರೂಪನೂ, ಶುಭನೂ, ಆದವನೇ!

೬೫. ಕಾಮಕ್ರೋಧಲೋಭಗಳನ್ನು ನಾಶಮಾಡತಕ್ಕವನೂ, ಕಲ್ಮಾಷರೂಪನೂ, ಪಕ್ಷಿರೂಪನೂ, ಯತಿಸ್ವರೂಪನೂ, ಶಂಭುಸ್ವರೂಪನೂ ಆದವನೇ! ನಿನಗೆ ನಮಸ್ಕಾರ.

೬೬. ವಿಶ್ವನೂ, ವಿಶ್ವಸ್ವರೂಪನೂ, ವಿಶ್ವಕರ್ಮನೂ, ಆದ ನಿನಗೆ ನಮಸ್ಕಾರ. ಓಂಕಾರ, ವಷಟ್ಕಾರ, ಸ್ವಾಹಾಕಾರ, ಸ್ವಧಾಕಾರ ಇವುಗಳ ಸ್ವರೂಪನಾದವನೇ!

**ಜಯಾಶ್ವಮೇಧರೂಪಾಯ ನಮೋಽರ್ಯಮ್ಣೇಽಗ್ನಿರೂಪಿಣೇ ।**
**ಸಂಸಾರಾರ್ಣವಶೋಷಾಯ ಮೋಕ್ಷದ್ವಾರಪ್ರದಾಯ ಚ ॥ ೬೭ ॥**

**ಸಂಸಾರಾರ್ಣವಮಗ್ನಸ್ಯ ಮಮ ದೇವ ಜಗತ್ಪತೇ ।**
**ಹಸ್ತಾವಲಂಬನೋ ದೇವ ಭವ ತ್ವಂ ಗೋಪತೇಽದ್ಭುತ ॥ ೬೮ ॥**

**ಈಶೋಽಪ್ಯೇವಮಹೀನಾಂಗಂ ಸ್ತುತ್ವಾ ಭಾನುಂ ಪ್ರಯತ್ನತಃ ।**
**ವಿರರಾಮ ಮಹಾರಾಜ ಪ್ರಣಮ್ಯ ಶಿರಸಾ ರವಿಂ ॥ ೬೯ ॥**

**ಅಥ ವಿಷ್ಣುರ್ಮಹಾತೇಜಾಃ ಕೃತಾಂಜಲಿಪುಟೋ ರವಿಂ ।**
**ಉವಾಚ ರಾಜಶಾರ್ದೂಲ ಭಕ್ತಿಶ್ರದ್ಧಾಸಮನ್ವಿತಃ ॥ ೭೦ ॥**

**॥ ವಿಷ್ಣುರುವಾಚ ॥**

**ನಮಾಮಿ ದೇವದೇವೇಶಂ ಭೂತಭಾವನಮವ್ಯಯಂ ।**
**ದಿವಾಕರಂ ರವಿಂ ಭಾನುಂ ಮಾರ್ತಂಡಂ ಭಾಸ್ಕರಂ ಭಗಂ ॥ ೭೧ ॥**

---

೬೭. ಅಶ್ವಮೇಧಯಜ್ಞರೂಪನೇ! ಅರ್ಯಮಸ್ವರೂಪನೇ! ಅಗ್ನಿಸ್ವರೂಪನೇ! ನಿನಗೆ ಜಯವಾಗಲಿ, ಸಂಸಾರಸಮುದ್ರವನ್ನು ಶೋಷಿಸತಕ್ಕವನೂ, ಮೋಕ್ಷಮಾರ್ಗವನ್ನು ಕೊಡತಕ್ಕವನೂ ಆದವನೇ, ನಿನಗೆ ನಮಸ್ಕಾರ,

೬೮. ಎಲೈ ಆಶ್ಚರ್ಯಕರನಾದ ಕಿರಣಾಧಿಪತಿಯೇ, ಜಗತ್ಪತಿಯಾದ ಸೂರ್ಯದೇವನೇ! ಸಂಸಾರಸಮುದ್ರದಲ್ಲಿ ಮುಳುಗಿರುವ ನನಗೆ ಹಸ್ತಾವಲಂಬನವನ್ನು ಕೊಡು" ಎಂದು ಪ್ರಾರ್ಥಿಸಿದನು.

೬೯. ಈಶ್ವರನು ಸಂಪೂರ್ಣಾಂಗನಾದ ಸೂರ್ಯನನ್ನು ಹೀಗೆ ಪ್ರಯತ್ನದಿಂದ ಸ್ತುತಿಸಿ ಸೂರ್ಯನಿಗೆ ತಲೆಬಾಗಿ ನಮಿಸಿ ಸುಮ್ಮನೇ ನಿಂತನು.

೭೦. ಅಯ್ಯಾ ಮಹಾರಾಜನೇ! ಕೇಳು ಅನಂತರ ಮಹಾತೇಜಸ್ವಿಯಾದ ವಿಷ್ಣುವು ಕೈಮುಗಿದುಕೊಂಡು ಸೂರ್ಯನಲ್ಲಿ ಭಕ್ತಿಶ್ರದ್ಧೆಯುಳ್ಳವನಾಗಿ ಸ್ತುತಿಸತೊಡಗಿದನು.

೭೧. ವಿಷ್ಣುವು ಮಾಡಿದ ಸ್ತೋತ್ರಾರ್ಥ ದೇವದೇವೇಶನೂ, ಭೂತಭಾವನನೂ, ನಾಶರಹಿತನೂ, ದಿವಾಕರನೂ, ರವಿಯೂ, ಭಾನುವೂ, ಮಾರ್ತಂಡನೂ, ಭಾಸ್ಕರನೂ, ಭಗಸಂಜ್ಞಕನೂ, ಆದ ಸೂರ್ಯನನ್ನು ನಮಿಸುವೆನು.

ಇದ್ರಂ ವಿಷ್ಣುಂ ಹರಿಂ ಹಂಸಮರ್ಕಂ ಲೋಕಗುರುಂ ವಿಭುಂ ।
ತ್ರಿನೇತ್ರಂ ತ್ರ್ಯಕ್ಷರಂ ತ್ರ್ಯಂಗಂ ತ್ರಿಮೂರ್ತಿಂ ತ್ರಿಗತಿಶ್ಶುಭಂ ॥ ೭೨ ॥

ಷಣ್ಮುಖಾಯ ನಮೋ ನಿತ್ಯಂ ತ್ರಿನೇತ್ರಾಯ ನಮೋನಮಃ ।
ಚತುರ್ವಿಂಶತಿಪಾದಾಯ ನಮೋ ದ್ವಾದಶಪಾಣಯೇ ॥ ೭೩ ॥

ನಮಸ್ತೇ ಭೂತಪತಯೇ ಲೋಕಾನಾಂ ಪತಯೇ ನಮಃ ।
ದೇವಾನಾಂ ಪತಯೇ ನಿತ್ಯಂ ವರ್ಣಾನಾಂ ಪತಯೇ ನಮಃ ॥ ೭೪ ॥

ತ್ವಂ ಬ್ರಹ್ಮಾ ತ್ವಂ ಜಗನ್ನಾಥೋ ರುದ್ರಸ್ತ್ವಂ ಚ ಪ್ರಜಾಪತಿಃ ।
ತ್ವಂ ಸೋಮಸ್ತ್ವಂ ತಥಾದಿತ್ಯಸ್ತ್ವಮೋಂಕಾರಕ ಏವ ಹಿ ॥ ೭೫ ॥

ಬೃಹಸ್ಪತಿರ್ಬುಧಸ್ತ್ವಂ ಹಿ ತ್ವಂ ಶುಕ್ರಸ್ತ್ವಂ ವಿಭಾವಸುಃ ।
ಯಮಸ್ತ್ವಂ ವರುಣಸ್ತ್ವಂಹಿ ನಮಸ್ತೇ ಕಶ್ಯಪಾತ್ಮಜ ॥ ೭೬ ॥

---

೭೨. ಇಂದ್ರಸಂಜ್ಞನೂ, ವಿಷ್ಣುವೂ, ಹರಿಯೂ, ಹಂಸನೂ, ಅರ್ಕನೂ, ಲೋಕಗುರುವೂ, ವಿಭುವೂ, ತ್ರಿನೇತ್ರನೂ, ತ್ರ್ಯಕ್ಷರನೂ, ತ್ರ್ಯಂಗನೂ, ತ್ರಿಮೂರ್ತಿಯೂ, ತ್ರಿಗತಿಯೂ ಶುಭಕರನೂ ಆದ ಸೂರ್ಯನನ್ನು ನಮಸ್ಕರಿಸುವೆನು.

೭೩. ಯಾವಾಗಲೂ ಷಣ್ಮುಖಗಳುಳ್ಳ ನಿನಗೆ ನಮಸ್ಕಾರ. ತ್ರಿನೇತ್ರನಾದ ಳಿನಗೆ ನಮಸ್ಕಾರ. ಇಪ್ಪತ್ತನಾಲ್ಕು ಪಾದಗಳೂ, ಹನ್ನೆರಡು ಕೈಗಳೂ ಉಳ್ಳ ನಿನಗೆ ನಮಸ್ಕಾರ.

೭೪. ಸಮಸ್ತಭೂತಗಳಿಗೂ ಅಧಿಪತಿಯಾದವನೇ! ಹದಿನಾಲ್ಕುಲೋಕಗಳಿಗೂ ಒಡೆಯನೇ! ನಿನಗೆ ನಮಸ್ಕಾರ. ದೇವತೆಗಳ ಒಡೆಯನೂ, ವರ್ಣಗಳ ಅಧಿಪತಿಯೂ, ಆದ ನಿನಗೆ ನಮಸ್ಕಾರ.

೭೫, ನೀನೇ ಬ್ರಹ್ಮ, ನೀನೇ ಜಗನ್ನಾಥ, ನೀನೇ ರುದ್ರ, ನೀನೇ ಪ್ರಜಾಪತಿ, ಸೋಮ, ಆದಿತ್ಯ, ಓಂಕಾರ ಎಲ್ಲವೂ ನೀನೇ.

೭೬. ಬೃಹಸ್ಪತಿ, ಬುಧ, ಶುಕ್ರ ಇವರ ಸ್ವರೂಪನೂ; ವಿಭಾವಸುಸಂಜ್ಞಕನೂ ಯಮ, ವರುಣರ ಸ್ವರೂಪನೂ, ಕಶ್ಯಪಪುತ್ರನೂ ಆದ ನಿನಗೆ ನಮಸ್ಕಾರ.

ತ್ವಯಾ ತತಮಿದಂ ಸರ್ವಂ ಜಗತ್ ಸ್ಥಾವರಜಂಗಮಂ ।
ತ್ವತ್ತ ಏವ ಸಮುತ್ಪನ್ನಂ ಸದೇವಾಸುರಮಾನುಷಂ ॥ ೭೭ ॥

ಬ್ರಹ್ಮಾ ಚಾಹಂ ಚ ರುದ್ರಶ್ಚ ಸಮುತ್ಪನ್ನಾ ಜಗತ್ಪತೇ ।
ಕಲ್ಪಾದೌ ತು ಪುರಾ ದೇವ ಸ್ಥಿತಯೇ ಜಗತೋನಘ ॥ ೭೮ ॥

ನಮಸ್ತೇ ವೇದರೂಪಾಯ ಅಹೋರೂಪಾಯ ವೈ ನಮಃ ।
ನಮಸ್ತೇ ಜ್ಞಾನರೂಪಾಯ ಯಜ್ಞಾಯ ಚ ನಮೋನಮಃ ॥ ೭೯ ॥

ಪ್ರಸೀದಾಸ್ಮಾಸು ದೇವೇಶ ಭೂತೇಶ ಕಿರಣೋಜ್ವಲ ।
ಸಂಸಾರಾರ್ಣವಮಗ್ನಾನಾಂ ಪ್ರಸಾದಂ ಕುರು ಗೋಪತೇ ॥
ವೇದಾಂಗಾಯ ನಮೋ ನಿತ್ಯಂ ನಮೋ ಯಜ್ಞಮಯಾಯ ಚ ॥ ೮೦ ॥

---

೭೭. ಸ್ಥಾವರಜಂಗಮಾತ್ಮಕವಾದ ಸರ್ವಪ್ರಪಂಚವೂ ನಿನ್ನಿಂದ ವ್ಯಾಪ್ತವಾಗಿದೆ. ದೇವತೆಗಳು, ಅಸುರರು, ಮನುಷ್ಯರು ಇವರುಗಳಿಂದ ಕೂಡಿದ ಸಮಸ್ತ ಜಗತ್ತೂ ನಿನ್ನಿಂದಲೇ ಹುಟ್ಟಿತು.

೭೮. ಎಲೈ ಜಗತ್ಪತಿಯೇ! ಪೂರ್ವದಲ್ಲಿ ಕಲ್ಪಪ್ರಾರಂಭದಲ್ಲಿ ಜಗತ್ತಿನ ಸ್ಥಿತಿಗಾಗಿ ಬ್ರಹ್ಮನೂ, ರುದ್ರನೂ, ನಾನೂ ಈ ಮೂವರೂ ನಿನ್ನಿಂದಲೇ ಹುಟ್ಟಿದೆವು.

೭೯. ವೇದರೂಪನೂ, ಅಹಸ್ಸಿನಸ್ವರೂಪನೂ, ಜ್ಞಾನರೂಪನೂ, ಯಜ್ಞರೂಪನೂ ಆದ ನಿನಗೆ ನಮಸ್ಕಾರ.

೮೦. ಕಿರಣಗಳಿಂದ ಪ್ರಕಾಶಮಾನನೂ, ಭೂತೇಶನೂ, ದೇವೇಶನೂ, ಆದ ಸ್ವಾಮಿಯೇ! ನನ್ನಲ್ಲಿ ಪ್ರಸನ್ನನಾಗು. ಎಲೈ ಗೋಪತಿಯೇ! ಸಂಸಾರಸಮುದ್ರದಲ್ಲಿ ಮುಳುಗಿರುವವರಿಗೆ ಅನುಗ್ರಹಮಾಡು. ವೇದವೇದಾಂಗ ಸ್ವರೂಪನೂ, ಯಜ್ಞಮಯನೂ ಆದ ನಿನಗೆ ನಮಸ್ಕಾರ ಎಂಬದಾಗಿ ಸ್ತುತಿಸಿದನು.

॥ ಸುಮಂತುರುವಾಚ ॥

ಸ್ತುತ್ವೇವಂ ಭಾಸ್ಕರಂ ಭಕ್ತ್ಯಾ ವಿಷ್ಣುರ್ಭರತಸತ್ತಮ ।
ಪ್ರದಧ್ಯೌ ನೃಪಶಾರ್ದೂಲ ರವಿಂ ತದ್ಗತಮಾನಸಃ ॥ ೮೧ ॥

ಏವಂ ತೇ ನರಶಾರ್ದೂಲ ದೇವಾ ಬ್ರಹ್ಮಾದಯೋऽನಘ ।
ಸ್ತುವಂತಿ ತಂ ಮಹಾತ್ಮಾನಂ ಸಹಸ್ರಕಿರಣಂ ರವಿಂ ॥ ೮೨ ॥

ಇತ್ಯೇವಂ ಸ್ತುವತಾಂ ತೇಷಾಂ ರವಿಂ ಭಕ್ತ್ಯಾ ಮಹಾತ್ಮನಾಂ ।
ಅಥ ತುಷ್ಟೋ ರವಿಸ್ತೇಷಾಂ ಬ್ರಹ್ಮಾದೀನಾಂ ಜಗತ್ಪತಿಃ ॥ ೮೩ ॥

ವಿಜ್ಞಾಯ ಭಕ್ತಿಂ ಪರಮಾಂ ಶ್ರದ್ಧಾಂ ಚ ಪರಮಾಂ ವಿಭುಃ ।
ಉವಾಚ ಸ ಮಹಾತೇಜಾಃ ಪ್ರಹೃಷ್ಟೇನಾಂತರಾತ್ಮನಾ ॥ ೮೪ ॥

---

೮೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಭರತಕುಲಶ್ರೇಷ್ಠನೇ! ವಿಷ್ಣುವು ಈ ಪ್ರಕಾರ ಸೂರ್ಯನನ್ನು ಸ್ತುತಿಸಿ, ಸೂರ್ಯನಲ್ಲೇ ಮನಸ್ಸಿಟ್ಟವನಾಗಿ ಅವನನ್ನು ಚೆನ್ನಾಗಿ ಧ್ಯಾನಮಾಡಿದರು.

೮೨. ಎಲೈ ನಿರ್ದುಷ್ಟನಾದ ರಾಜಶ್ರೇಷ್ಠನೇ! ಆ ಬ್ರಹ್ಮಾದಿದೇವತೆಗಳೆಲ್ಲರೂ ಮಹಾತ್ಮನೂ, ಸಹಸ್ರಕಿರಣನೂ ಆದ ರವಿಯನ್ನು, ಮೇಲೆ ಹೇಳಿದಂತೆ ಸ್ತೋತ್ರ ಮಾಡಿದರು.

೮೩. ಈ ರೀತಿ ಸೂರ್ಯನನ್ನು ಭಕ್ತಿಯಿಂದ ಸ್ತುತಿಸಿದ ಮಹಾತ್ಮರಾದ ಆ ಬ್ರಹ್ಮಾದಿಗಳ ವಿಷಯದಲ್ಲಿ ಮಹಾತೇಜಸ್ವಿಯೂ, ಜಗತ್ಪತಿಯೂ, ವಿಭುವೂ ಆದ ಸೂರ್ಯನು

೮೪. ಅವರ ಉತ್ಕೃಷ್ಟವಾದ ಭಕ್ತಿಯನ್ನೂ, ಪರಮಶ್ರದ್ಧೆಯನ್ನೂ ತಿಳಿದು, ಸಂತುಷ್ಟವಾದ ಮನಸ್ಸುಳ್ಳವನಾಗಿ ತೇಜೋಮಯನಾದ ಆ ಗ್ರಹಾಧಿಪನು ತನ್ನ ತೇಜಸ್ಸಿನಿಂದ ದಿಕ್ಕುಗಳನ್ನೆಲ್ಲಾ ಪ್ರಕಾಶಪಡಿಸುತ್ತಾ ಆಕಾಶಮಧ್ಯಕ್ಕೆ ಬಂದು ನಿಂತನು.

ಗ್ರಹೇಶೋ ವ್ಯೋಮ ಚಾರೂಢಸ್ತೇಜಸಾ ಪ್ರಜ್ವಲನ್ವಿಶಃ ।
ಬ್ರಹ್ಮಾಣಂ ವಿಷ್ಣುಮೀಶಾನಮಾಮಂತ್ರ್ಯ ತಾನ್ವಿಶಾಂಪತೇ ॥ ೮೫ ॥

ದೃಷ್ಟ್ವಾತಾನ್ ಪ್ರಣತಾನ್ ಸರ್ವಾನ್ ಶಿರೋಭಿರವನಿಂ ಗತಾನ್ ।
ತುಷ್ಟೋಽಸ್ಮಿ ತೇ ಸುರಜ್ಯೇಷ್ಠ ಚತುರ್ಮುಖ ಜಗತ್ಪತೇ ॥
ವರಂ ವರಯ ಭದ್ರಂ ತೇ ಮನಸಾ ತ್ವಂ ಯಮಿಚ್ಛಸಿ ॥ ೮೬ ॥

ಶ್ರುತ್ವಾ ತು ವಚನಂ ಭಾನೋರ್ಬ್ರಹ್ಮಾ ಲೋಕಗುರುರ್ನೃಪ ।
ನನಾಮ ಶಿರಸಾ ಭೂಮಾವುವಾಚ ಸ ಕೃತಾಂಜಲಿಃ ॥ ೮೭ ॥

॥ ಬ್ರಹ್ಮೋವಾಚ ॥

ಕೃತಕೃತ್ಯೋಽಸ್ಮಿ ದೇವೇಶ ಪೂತಶ್ಚಾಸ್ಮಿ ಖಗಾಧಿಪ ।
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಗತೋಽಸ್ಮಿ ಪರಮಾಂ ಗತಿಂ ॥
ಸಹಸ್ರಕಿರಣೈರ್ಯನ್ಮೇ ಭವಾನ್ದರ್ಶನಮಾಗತಃ ॥ ೮೮ ॥

---

೮೫. ಎಲೈ ರಾಜನೇ! ಕೇಳು, ಆಗ ಸೂರ್ಯನು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಸಂಬೋಧಿಸಲಾಗಿ ಅವರೆಲ್ಲ ನೆಲದಲ್ಲಿ ತಲೆಯನ್ನಿಟ್ಟು ನಮಿಸಿದರು. ಅದನ್ನು ನೋಡಿ ಬಳಿಕ ಬ್ರಹ್ಮನನ್ನು ಕುರಿತು

೮೬. "ಅಯ್ಯಾ ಲೋಕೇಶನೂ, ಚತುರ್ಮುಖನೂ, ಸುರಜ್ಯೇಷ್ಠನೂ ಆದ ಬ್ರಹ್ಮನೇ! ನಿನ್ನಲ್ಲಿ ನಾನು ಪ್ರಸನ್ನನಾಗಿದ್ದೇನೆ. ನಿನಗೆ ಇಷ್ಟವಾದ ವರವನ್ನು ಕೇಳು" ಎಂದನು.

೮೭. ಆಗ ಲೋಕಗುರುವಾದ ಬ್ರಹ್ಮನು ಸೂರ್ಯನ ಈ ಮಾತನ್ನು ಕೇಳಿ ಶಿರಸ್ಸು ಭೂಮಿಗೆ ಸೋಕುವಂತೆ ನಮಸ್ಕರಿಸಿದನು. ಮತ್ತು ಕೈಮುಗಿದುಕೊಂಡು ಈ ರೀತಿ ಹೇಳಿದನು.

೮೮. ಎಲೈ ದೇವೇಶನಾದ ಖಗಾಧಿಪನೇ! ನಾನು ಕೃತಾರ್ಥನೂ, ಪೂತನೂ ಆದೆನು. ನಿನ್ನ ಅನುಗ್ರಹಹೊಂದಿ ಧನ್ಯನಾಗಿ ಉತ್ಕೃಷ್ಟಗತಿಯನ್ನು ಹೊಂದಿದೇನೆ.

ಅಪಶ್ಯತಶ್ಚ ದೇವೇಶ ಮೂಢಮಾಸೀನ್ಮನೋ ಮಮ ।
ಭಗವನ್ತ್ಸಂಪ್ರಸೀದ ತ್ವಂ ಮಮೋಪರಿ ವಿಭಾವಸೋ ॥ ೮೯ ॥

ಪ್ರಯಚ್ಛ ತ್ವಂ ಬಲಂ ಭಕ್ತಿಮಾತ್ಮನೋ ಮಮ ಗೋಪತೇ ॥ ೯೦ ॥

ಗತ್ವಾ ಶಿರೋಭಿರವನಿಮಷ್ಟಾಂಗೈಃ ಪತಿತಸ್ಯ ಚ ।
ಭಕ್ತ್ಯಾ ವಿಜ್ಞಪ್ತಿಮಾಕರ್ಣ್ಯ ಪ್ರಸಾದಂ ಕುರು ಗೋಪತೇ ॥ ೯೧ ॥

ಬ್ರಹ್ಮಣೋ ವಚನಂ ಶ್ರುತ್ವಾ ಪೂಷಾ ದೇವೋ ಜಗತ್ಪತಿಃ ।
ತಥೇತ್ಯಾಹ ಮಹಾರಾಜ ವಿರಂಚಿಂ ಪ್ರಶ್ರಯಾನ್ವಿತಂ ॥ ೯೨ ॥

ಬ್ರಹ್ಮಣೇ ಚ ವರಂ ದತ್ವಾ ರಾಜನ್ದೇವೋ ದಿವಾಕರಃ ।
ಉವಾಚ ತ್ರ್ಯಂಬಕಂ ದೇವಂ ಶಶಾಂಕಕೃತಶೇಖರಂ ॥ ೯೩ ॥

ವರಂ ವರಯ ಭೂತೇಶ ಭೂಭೃಜ್ಜಾದಯಿತಾನಘ ।
ಯಮಿಚ್ಛಸಿ ಮಹಾದೇವ ದದೇಽಹಂ ತದಶೇಷತಃ ॥ ೯೪ ॥

---

೮೯-೯೦. ಸಹಸ್ರಕಿರಣಗಳಿಂದ ಕೂಡಿದ ನೀನು ದರ್ಶನ ಕೊಟ್ಟುದೇ ನನ್ನ ಪುಣ್ಯ. ನಿನ್ನನ್ನು ನೋಡದೆ ಇದ್ದಾಗ ನನ್ನ ಮನಸ್ಸು ಮೂಢವಾಗಿತ್ತು. ಎಲೈ ವಿಭಾವಸುವೇ! ಭಗವಂತನೇ! ನೀನು ನನ್ನಲ್ಲಿ ಸಂಪೂರ್ಣವಾಗಿ ಪ್ರಸನ್ನನಾಗು.

೯೧. ನೀನು ನನಗೆ ಬಲವನ್ನೂ, ನಿನ್ನಲ್ಲಿ ಭಕ್ತಿಯನ್ನೂ ಕೊಡು. ತಲೆಯನ್ನು ನೆಲಕ್ಕೆ ಬಗ್ಗಿಸಿ ಸಾಷ್ಟಾಂಗಪ್ರಣಾಮ ಮಾಡಿರುವೆನು. ಎಲೈ ಗೋಪತಿಯೇ! ನನ್ನ ವಿಜ್ಞಾಪನೆಯನ್ನು ಕೇಳಿ ನನ್ನಲ್ಲಿ ಅನುಗ್ರಹಮಾಡು ಎಂದನು.

೯೨. ಅಯ್ಯಾ ಮಹಾರಾಜನೇ! ಕೇಳು, ಬ್ರಹ್ಮನು ಹೇಳಿದ ಮಾತನ್ನು ಕೇಳಿ ಜಗತ್ಪತಿಯಾದ ಸೂರ್ಯನು, ನಮ್ರತೆಯಿಂದ ಕೂಡಿದ ಆ ಬ್ರಹ್ಮನನ್ನು ಕುರಿತು, "ಹಾಗೆಯೇ ಆಗಲಿ" ಎಂದನು.

೯೩-೯೪. ಎಲೈ ರಾಜನೇ! ಕೇಳು ಸೂರ್ಯನು ಬ್ರಹ್ಮನಿಗೆ ಈರೀತಿ ವರವನ್ನು ಕೊಟ್ಟು, ಚಂದ್ರಶೇಖರನಾದ ರುದ್ರದೇವನನ್ನು ಕುರಿತು "ಎಲೈ ಪಾರ್ವತೀಪ್ರಿಯನೂ, ನಿರ್ದೋಷಿಯೂ ಆದ ಶಿವನೇ! ಮಹಾದೇವನೇ! ನಿನಗೆ ಇಷ್ಟವಾದ ವರವನ್ನು ಕೇಳಿಕೋ ನೀನು ಏನನ್ನು ಅಪೇಕ್ಷಿಸುತ್ತಿಯೋ ಅದನ್ನು ಸಂಪೂರ್ಣವಾಗಿ ಕೊಡುತ್ತೇನೆ" ಎಂದನು.

ಭಾಸ್ಕರಸ್ಯ ವಚಃ ಶ್ರುತ್ವಾ ಈಶ್ವರಸ್ತ್ರಿಪುರಾಂತಕಃ ।
ಗತ್ವಾ ತು ಶಿರಸಾ ಭೂಮೌ ಪ್ರಣಮ್ಯೋವಾಚ ಭಾಸ್ಕರಂ ॥ ೯೫ ॥

॥ ಮಹಾದೇವ ಉವಾಚ ॥

ಪುಣ್ಯೋಽಹಂ ಪುಣ್ಯಕರ್ಮಾಽಹಂ ನಾಸ್ತಿ ಧನ್ಯತರೋ ಮಮ ।
ಗತೋಽಹಂ ಪರಮಾಂ ಸಿದ್ಧಿಂ ಗತಶ್ಚ ಪರಮಾಂ ಗತಿಂ ॥ ೯೬ ॥

ನಾಪ್ರಾಪ್ಯಮಸ್ತಿ ದೇವೇಶ ನಾಸಾಧ್ಯಂ ಮಮ ಕಿಂಚನ ।
ಯಸ್ಯ ಮೇ ಭಗವಾನ್ ದೇವಃ ಪ್ರಸಾದಪ್ರವಣಃ ಸ್ಥಿತಃ ॥ ೯೭ ॥

ತ್ವಯಾ ತತಮಿದಂ ಸರ್ವಂ ಜಗತ್‌ಸ್ಥಾವರಜಂಗಮಂ ।
ತ್ವತ್ತ ಏವ ಸಮುತ್ಪನ್ನಂ ಲಯಂ ಚ ತ್ವಯಿ ಯಾಸ್ಯತಿ ॥ ೯೮ ॥

ಯದಿ ತುಷ್ಟೋ ಮಮ ವಿಭೋ ಅನುಗ್ರಾಹ್ಯೋಽಸ್ಮಿ ತೇ ಯದಿ ।
ಅಚಲಾಂ ದೇಹಿ ಮೇ ಭಕ್ತಿಮಾತ್ಮನಶ್ಚರಣಂ ನಯ ॥ ೯೯ ॥

---

೯೫. ತ್ರಿಪುರಾಂತಕನಾದ ರುದ್ರನು ಸೂರ್ಯನು ಹೇಳಿದ ಈ ಮಾತನ್ನು ಕೇಳಿ, ತಲೆಯನ್ನು ಬಾಗಿಸಿ ನಮಸ್ಕರಿಸಿ, ಸೂರ್ಯನನ್ನು ಕುರಿತು ಹೇಳತೊಡಗಿದನು.

೯೬. ಓ ಸ್ವಾಮಿಯೇ "ನಾನೇ ಪುಣ್ಯಶಾಲಿಯು, ನಾನೇ ಪುಣ್ಯಕರ್ಮನು, ನನಗಿಂತ ಧನ್ಯನು ಬೇರೆ ಯಾರೂ ಇಲ್ಲ, ನಾನು ಪರಮಸಿದ್ಧಿಯನ್ನೂ ಪರಮಗತಿಯನ್ನೂ ಹೊಂದಿದಂತಾಯಿತು."

೯೭. "ಎಲೈ ದೇವೇಶನೇ! ನಾನು ಏನನ್ನೂ ಹೊಂದಬೇಕಾಗಿಲ್ಲ. ಭಗವಂತನಾದ ನೀನು ನನಗೆ ಅನುಗ್ರಹಮಾಡಲುದ್ಯೋಗಿಸಿರುತ್ತೀಯಾಗಿ ನನಗೆ ಸಾಧ್ಯವಾಗದುದು ಯಾವುದೂ ಇಲ್ಲ."

೯೮. "ಸ್ಥಾವರಜಂಗಮಾತ್ಮಕವಾದ ಈ ಜಗತ್ತೆಲ್ಲವೂ ನಿನ್ನಿಂದ ವ್ಯಾಪ್ತವಾಗಿದೆ. ನಿನ್ನಿಂದಲೇ ಹುಟ್ಟಿದೆ, ನಿನ್ನಲ್ಲೇ ಲಯ ಹೊಂದುವುದು.

೯೯. ಎಲೈ ವಿಭುವೇ! ನೀನು ನನ್ನಲ್ಲಿ ಸಂಪೂರ್ಣಸಂತುಷ್ಟನಾಗಿ ನಾನು ನಿನ್ನ ಅನುಗ್ರಹಕ್ಕೆ ಪಾತ್ರನೆಂದು ತೋರಿದರೆ ನನಗೆ ನಿಶ್ಚಲವಾದ ಭಕ್ತಿಯನ್ನು ಕೊಡು. ಸ್ವಾಮಿ! ನಿನ್ನ ಪಾದದಲ್ಲಿ ನನ್ನನ್ನು ಸೇರಿಸು."

ವ್ಯೋಮಕೇಶವಚಃ ಶ್ರುತ್ವಾ ಪೂಷಾ ದೇವೋ ದಿವಾಕರಃ ।
ತಥೇತ್ಯಾಹ ಹರಂ ವೀರ ತತೋ ಹರಿಮುವಾಚ ಹ ॥ ೧೦೦ ॥

ನಾರಾಯಣ ಮಹಾಬಾಹೋ ವರಂ ವರಯ ಗೋಧರ ।
ಪರಿತುಷ್ಟೋಽಸ್ಮಿ ತೇ ದೇವ ಯಮಿಚ್ಛಸಿ ಮಹಾಬಲ ॥ ೧೦೧ ॥

ಶ್ರುತ್ವಾ ತು ಭಾಸ್ಕರವಚಃ ಕಂದರ್ಪಜನಕೋ ಹರಿಃ ।
ಉವಾಚ ಪರಯಾ ಭಕ್ತ್ಯಾ ನತ್ವಾ ಚ ಶಿರಸಾ ರವಿಂ ॥ ೧೦೨ ॥

॥ ನಾರಾಯಣ ಉವಾಚ ॥

ಜಯ ದೇವ ಜಗನ್ನಾಥ ಜಯ ದೇವ ಗುರೋ ರವೇ ।
ಪ್ರಸೀದ ಮಮ ದೇವೇಶ ಭಕ್ತಿಂ ಯಚ್ಛಾತ್ಮನೋ ರವೇ ॥ ೧೦೩ ॥

ಯೇನಾಹಂ ಸರ್ವದೇವಾನಾಮುತ್ತಮಃ ಸ್ಯಾಂ ಜಗತ್ಪತೇ ।
ಅಜೇಯಶ್ಚ ತಥಾ ದೇವ ದೈತ್ಯದಾನವರಕ್ಷಸಾಂ ॥ ೧೦೪ ॥

---

೧೦೦. ರುದ್ರನ ಮಾತನ್ನು ಕೇಳಿ ದಿವಾಕರನಾದ ಸೂರ್ಯದೇವನು "ಹಾಗೆಯೇ ಆಗಲಿ" ಎಂದು ಪರಮೇಶ್ವರನಿಗೆ ಹೇಳಿ ಅನಂತರದಲ್ಲಿ ಹರಿಯನ್ನು ಕುರಿತು ಇಂತೆಂದನು.

೧೦೧. "ಮಹಾಬಾಹುವಾದ ಎಲೈ ನಾರಾಯಣನೇ! ಗೋಪಾಲನೇ! ನಿನ್ನಲ್ಲಿ ನಾನು ಸಂತುಷ್ಟನಾಗಿದ್ದೇನೆ. ಎಲೈ ಮಹಾಬಲಶಾಲಿಯೇ! ನಿನಗೆ ಯಾವ ವರ ಬೇಕೋ ಅದನ್ನು ಕೇಳು" ಎಂದು ಹೇಳಿದನು.

೧೦೨. ಮಾರಜನಕನಾದ ನಾರಾಯಣನು ಸೂರ್ಯನ ಈ ಮಾತನ್ನು ಕೇಳಿ ಪರಮಭಕ್ತಿಯಿಂದ ಸೂರ್ಯನಿಗೆ ತಲೆವಾಗಿ ನಮಸ್ಕರಿಸಿ

೧೦೩. "ಜಗನ್ನಾಥಾ, ದೇವದೇವಾ, ಸರ್ವೋತ್ಕೃಷ್ಟನಾಗಿ ಜಯಿಸು. ಎಲೈ ಗುರುವಾದ ರವಿಯೇ! ಜಯಿಸು. ಸರ್ವೋತ್ಕೃಷ್ಟನಾಗು, ಎಲೈ ದೇವೇಶನೇ! ನನಗೆ ಪ್ರಸನ್ನನಾಗು. ಎಲೈ ರವಿಯೇ, ನಿನ್ನಲ್ಲಿ ಭಕ್ತಿಯನ್ನು ಕೊಡು" ಎಂಬದಾಗಿ ಹೇಳಿದನು

೧೦೪. ಓ ಜಗತ್ಪತಿಯೇ! ಆ ನಿನ್ನ ಅನುಗ್ರಹವಾದರೆ ನಾನು ಸರ್ವದೇವತೆಗಳಲ್ಲೂ ಉತ್ತಮನಾದೇನು. ಮತ್ತು ನಿನ್ನ ಭಕ್ತಿಯಿಂದ ನನ್ನ ಬಲಹೆಚ್ಚಿ, ದಾನವರಿಗೂ ರಾಕ್ಷಸರಿಗೂ ನಾನು ಜಯಿಸಲು ಅಶಕ್ಯನಾಗುವೆನು.

ತ್ವದ್ಭಕ್ತ್ಯಾ ಬೃಂಹಿತಬಲಸ್ತೇಜಸಾ ಮಹತಾನ್ವಿತಃ ।
ತತೋ ಮಯಾ ಮಹತ್ಕರ್ಮ ಕರ್ತವ್ಯಂ ತವ ಶಾಸನಾತ್ ॥ ೧೦೫ ॥

ಪ್ರಜಾನಾಂ ಪಾಲನಂ ದೇವ ದೇವಾನಾಂ ಚ ಗ್ರಹಾಧಿಪ ।
ವರ್ಣಾನಾಮಾಶ್ರಮಾಣಾಂ ಚ ವರ್ಣಧರ್ಮಸ್ಯ ವಾ ವಿಭೋ ॥ ೧೦೬ ॥

ದುಷ್ಟದೈತ್ಯವಿನಾಶಾಯ ಲೋಕಾನಾಂ ಪಾಲನಾಯ ಚ ।
ಸೃಷ್ಟೋಽಹಂ ಭವತಾ ಪೂರ್ವಂ ಕಲ್ಪಾದೌ ಚ ಕೃತೋಽನಘ ॥ ೧೦೭ ॥

ಯಸ್ಯ ರುಷ್ಟೋ ಭವಾನ್ ಸ್ಯಾದ್ವೈ ಕಥಂಚಿತ್ಪುರುಷಸ್ಯ ತು ।
ವ್ಯಾಧಿರ್ದುಃಖಮನಾರೋಗ್ಯಂ ದಾರಿದ್ರ್ಯಂ ಸಂತತಿಕ್ಷಯಃ ॥ ೧೦೮ ॥

ತಸ್ಯೈತಾನಿ ಭವಂತೀಹ ಆಧಯೋ ವಿವಿಧಾಸ್ತಥಾ ।
ತಸ್ಮಾತ್ತ್ವಂ ಚ ತತೋ ದೇವ ಸಂಸ್ತವ್ಯಃ ಸತತಂ ಬುಧೈಃ ॥ ೧೦೯ ॥

---

೧೦೫. ಮತ್ತು ನಾನು ಮಹಾತೇಜಸ್ಸಿನಿಂದ ಕೂಡಿದವನಾಗುತ್ತೇನೆ. ಅನಂತರದಲ್ಲಿ ನಿನ್ನ ಆಜ್ಞೆಯಿಂದ ನಾನು ಪ್ರಜೆಗಳ ಮತ್ತು ದೇವತೆಗಳ ರಕ್ಷಣೆಯನ್ನೂ

೧೦೬-೧೦೭. ಅಲ್ಲದೆ ವರ್ಣಗಳ ಮತ್ತು ಆಶ್ರಮಗಳ ಧರ್ಮರಕ್ಷಣೆ ಎಂಬ ದೊಡ್ಡ ಕಾರ್ಯವನ್ನು ಮಾಡಬೇಕಾಗಿದೆ. ಹಿಂದೆ ಕಲ್ಪಾದಿಯಲ್ಲಿ ನೀನು ನನ್ನನ್ನು ಸೃಷ್ಟಿಮಾಡಿ ದುಷ್ಟ ದೈತ್ಯರನ್ನು ನಾಶಮಾಡುವುದಕ್ಕೂ, ಜನಗಳನ್ನು ಪಾಲನ ಮಾಡುವುದಕ್ಕೂ ನಿಯಮಿಸಿದೆ.

೧೦೮. ನೀನು ಯಾರ ವಿಷಯದಲ್ಲಿ ಕೋಪಿಸಿಕೊಳ್ಳುವೆಯೋ, ಅವರಿಗೆ ವ್ಯಾಧಿ ದುಃಖ, ಅನಾರೋಗ್ಯ, ದಾರಿದ್ರ್ಯ, ಸಂತತಿಕ್ಷಯ, ಬಗೆಬಗೆಯ ಮನೋವ್ಯಥೆಗಳು ಇವೆಲ್ಲಾ ಉಂಟಾಗುತ್ತವೆ.

೧೦೯. ಆದುದರಿಂದ ಎಲೈ ದೇವನೇ! ನಿನ್ನನ್ನು ವಿದ್ವಾಂಸರು ಯಾವಾಗಲೂ ಸ್ತೋತ್ರಮಾಡುವರು. ನೀನು ಆ ಸ್ತೋತ್ರಕ್ಕೆ ಅರ್ಹನಾಗಿದ್ದೀ.

**ಏವಂ ತ್ವಾಂ ಗೋಪತೇ ದೇವ ಭಕ್ತಿಶ್ರದ್ಧಾಸಮನ್ವಿತಃ ।**
**ಅಹಮರ್ಚಿತುಮಿಚ್ಛಾಮಿ ತಸ್ಮಾನ್ಮಯಿ ಕೃಪಾಂ ಕುರು ॥ ೧೧೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ಸೂರ್ಯತೇಜೋವರ್ಣನಂ ನಾಮ ತ್ರಿಪಂಚಾಶದುತ್ತರ ಶತತಮೋಽಧ್ಯಾಯಃ.**



---

೧೧೦. ಆದುದರಿಂದ ಎಲೈ ದೇವನೇ ! ಗೋಪತಿಯೇ ! ಹೀಗೆ ನಾನೂ ಭಕ್ತಿ ಶ್ರದ್ಧೆಗಳಿಂದ ಕೂಡಿ ನಿನ್ನನ್ನು ಪೂಜಿಸಲಿಚ್ಛಿಸುತ್ತೇನೆ. ಆದುದರಿಂದ ನನ್ನಲ್ಲಿ ದಯೆ ತೋರಿಸು.”

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ಸೂರ್ಯತೇಜೋವರ್ಣನೆಯೆಂಬ ನೂರಐವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಪಂಚಾಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಶ್ರುತ್ವಾ ತು ವಚನಂ ಭಾನುಃ ವಿಷ್ಣೋರಮಿತತೇಜಸಃ ।
ಉವಾಚ ಕುರುಶಾರ್ದೂಲ ಆದಿತ್ಯಃ ಕೃಪಯಾನ್ವಿತಃ ॥ ೧ ॥

॥ ಆದಿತ್ಯ ಉವಾಚ ॥

ಕೃಷ್ಣ ಕೃಷ್ಣ ಮಹಾಬಾಹೋ ಶೃಣು ಮೇ ಪರಮಂ ವಚಃ ।
ಯದರ್ಥಂ ಪ್ರಾರ್ಥಿತಃ ಕೃಷ್ಣ ತತ್ಸರ್ವಂ ತೇ ಭವಿಷ್ಯತಿ ॥ ೨ ॥

ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ ।
ಅಜೇಯಸ್ತ್ವಂ ಮಹಾಬಾಹೋ ಭವಿಷ್ಯಸಿ ನ ಸಂಶಯಃ ॥ ೩ ॥

---

## ನೂರಐವತ್ತನಾಲ್ಕನೆಯ ಅಧ್ಯಾಯ

೧. ಆಗ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು "ಅಯ್ಯಾ ಕುರುವಂಶಶ್ರೇಷ್ಠನೇ! ಕೇಳು; ಅಮಿತಪರಾಕ್ರಮಿಯಾದ ವಿಷ್ಣುವಿನ ಮಾತನ್ನು ಕೇಳಿ ಸೂರ್ಯನು ದಯೆಯಿಂದ ಕೂಡಿ ಈ ರೀತಿ ಹೇಳಿದನು.

೨-೩. "ಅಯ್ಯಾ ಮಹಾಬಾಹುವಾದ ಕೃಷ್ಣಾ ಕೃಷ್ಣಾ! ಶ್ರೇಷ್ಠವಾದ ನನ್ನ ಮಾತನ್ನು ಕೇಳು. ನೀನು ಯಾವುದಕ್ಕೋಸ್ಕರ ನನ್ನನ್ನು ಪ್ರಾರ್ಥಿಸಿದೆಯೋ ಅದೆಲ್ಲವೂ ನಿನಗೆ ಸಿದ್ಧಿಯಾಗಲಿ. ದೇವತೆಗಳು, ದಾನವರು, ಯಕ್ಷರು, ಗಂಧರ್ವರು, ಉರಗರು, ರಾಕ್ಷಸರು ಇವರುಗಳಿಗೆಲ್ಲಾ ನೀನು ಜಯಿಸಲು ಅಸಾಧ್ಯನಾಗುವೆ. ಇದರಲ್ಲಿ ಸಂಶಯವಿಲ್ಲ.

ಜಗತ್ಪಾಲಯಿತುಂ ಸರ್ವಂ ಸಮರ್ಥಶ್ಚ ಭವಿಷ್ಯಸಿ ।
ಅಚಲಾ ತವ ಭಕ್ತಿಶ್ಚ ಭವಿಷ್ಯತಿ ಮಮೋಪರಿ ॥ ೪ ॥

ಬ್ರಹ್ಮಾಪಿ ಸತತಂ ಶಕ್ತೋ ಜಗತ್ಸ್ರಷ್ಟುಂ ಭವಿಷ್ಯತಿ ।
ಸಂಹರ್ತುಂ ಶಂಕರಶ್ಚಾಪಿ ಮತ್ಪ್ರಸಾದಾದ್ಭವಿಷ್ಯತಿ ॥ ೫ ॥

ಭವಂತೋ ಮತ್ಪ್ರಸಾದೇನ ಜ್ಞಾನಿನಾಮುತ್ತಮಂ ಪದಂ ।
ಗಮಿಷ್ಯಂತಿ ನ ಸಂದೇಹೋ ಮಮ ಪೂಜಾಪ್ರಭಾವತಃ ॥ ೬ ॥

ರವೇರ್ವಚನಮಾಕರ್ಣ್ಯ ಗೋಶ್ರುತಾಭರಣೋ ವಿಭುಂ ।
ಉವಾಚ ಗೋಪತಿರ್ಗೋಗೋ ಗೋಪತಿಂ ಗೋವೃಷಧ್ವಜಃ ॥ ೭ ॥

ತ್ವಾಮಾರಾಧ್ಯ ಭವಿಷ್ಯಾಮೋ ವಯಂ ಸರ್ವೇ ಸುರೇಶ್ವರಾಃ ।
ಕಥಮಾರಾಧಯಾಮೋ ಹಿ ಭವಂತಂ ಶ್ರದ್ಧಯಾನ್ವಿತಾಃ ।
ಶ್ರೇಯಸೇ ಸತತಂ ದೇವ ಬ್ರೂಹಿ ನಸ್ತತ್ತ್ವಮಾತ್ಮನಃ ॥ ೮ ॥

---

೪. "ಸಮಸ್ತ ಜಗತ್ತನ್ನು ರಕ್ಷಿಸುವುದಕ್ಕೂ, ನೀನು ಸಮರ್ಥನಾಗುವೆ. ನಿನಗೆ ನನ್ನಲ್ಲಿ ನಿಶ್ಚಲವಾದ ಭಕ್ತಿಯುಂಟಾಗುವುದು."

೫. "ಬ್ರಹ್ಮನೂ ಕೂಡ ಯಾವಾಗಲೂ ಲೋಕವನ್ನು ಸೃಷ್ಟಿಮಾಡುವುದಕ್ಕೆ ಶಕ್ತನಾಗುವನು. ನನ್ನ ಅನುಗ್ರಹದಿಂದ ಶಂಕರನೂ ಕೂಡ ಎಲ್ಲವನ್ನು ಸಂಹರಿಸಲು ಶಕ್ತನಾಗುವನು."

೬. "ನೀವು ಮೂವರೂ ನನ್ನ ಅನುಗ್ರಹದಿಂದಲೂ, ಪೂಜಾಪ್ರಭಾವದಿಂದಲೂ ಜ್ಞಾನಿಗಳಲ್ಲಿ ಉತ್ತಮ ಪದವಿಯನ್ನು ಹೊಂದುವಿರಿ. ಇದಕ್ಕೆ ಸಂಶಯವಿಲ್ಲ" ಎಂದನು.

೭. ಸರ್ಪಾಭರಣನೂ, ವೃಷಭಕ್ಕೆ ಅಧಿಪತಿಯೂ, ವೃಷಭದ ಮೇಲೆ ಕುಳಿತು ಸಂಚರಿಸತಕ್ಕವನೂ, ಮತ್ತು ವೃಷಭಧ್ವಜನೂ, ಆದ ಮಹೇಶ್ವರನು; ಕಿರಣಾಧಿಪನೂ, ವಿಭುವೂ ಆದ ಆ ಸೂರ್ಯನ ಮಾತನ್ನು ಕೇಳಿ, ಅವನನ್ನು ಕುರಿತು ಹೇಳತೊಡಗಿದನು.

೮. "ಎಲೈ ದೇವಾ! ನಿನ್ನನ್ನು ಆರಾಧನೆಮಾಡಿ ನಾವೆಲ್ಲರೂ ದೇವಶ್ರೇಷ್ಠರೆನಿಸುತ್ತೇವೆ. ಶ್ರದ್ಧೆಯಿಂದ ಕೂಡಿದವರಾಗಿ ನಿನ್ನನ್ನು ಸರ್ವದಾ ಹೇಗೆ ಆರಾಧಿಸಬೇಕೆಂಬುದನ್ನೂ, ನಮ್ಮ ಶ್ರೇಯಸ್ಸಿಗಾಗಿ ನಿನ್ನ ತತ್ತ್ವರಹಸ್ಯವನ್ನೂ ನಮಗೆ ಹೇಳು."

ಭವತೋ ಹಿ ನ ಪಶ್ಯಾಮೋ ಮೂರ್ತಿಂ ಪರಮಪೂಜಿತಂ ।
ಪಶ್ಯಾಮಃ ಕೇವಲಂ ತೇಜೋ ಹ್ಯಬ್ಧೇಸ್ತೋಯಮಿವೋಜ್ಝಿತಂ ॥ ೯ ॥

ಜ್ವಾಲಾಮಾಲಾಕುಲಂ ಸರ್ವಮನೇಕಾ ಕೃತಿಚಾದ್ಭುತಂ ।
ನ ಚಾಕಾರ ವಿಹೀನಂ ತು ಚೇತಸೋ ಲಂಬನಂ ಭವೇತ್ ॥ ೧೦ ॥

ಆಲಂಬನಾವೃತೇ ದೇವ ನ ಚಿತ್ತರಮಣಂ ಕ್ವಚಿತ್ ।
ಚೇತಸೋಽರಮಣೇ ಭಕ್ತಿರ್ನ ಪುಂಸಾಂ ಜಾಯತೇ ಕ್ವಚಿತ್ ॥ ೧೧ ॥

ಭಕ್ತಿಂ ವಿನಾ ಪೂಜಯಿತುಂ ನ ಶಕ್ಯಂತೇ ದಿವೌಕಸಃ ।
ತತ್ಪೂಜನೇ ಹಿ ಪ್ರಾಪ್ಯಂತೇ ದೇವ ಧರ್ಮಾದಯೋ ನರೈಃ ॥ ೧೨ ॥

ತಸ್ಮಾದ್ದರ್ಶಯ ತಾಂ ಮೂರ್ತಿಂ ತಾತ್ಮನೋ ಯಾ ಪರಾ ಮತಾ ।
ಯೇನ ತ್ವಾಂ ಪೂಜಯಿತ್ವಾ ತು ವಯಂ ಸಿದ್ಧಿಂ ಭಜಾಮಹೇ ॥ ೧೩ ॥

---

೯-೧೧. "ಸಮುದ್ರದಿಂದ ತೆಗೆದ ನೀರಿನಲ್ಲಿ ನೀರಿನಸ್ವರೂಪ ಮಾತ್ರ ಕಾಣಿಸುವುದೇ ವಿನಾ, ಅದು ಯಾವ ಪ್ರಕಾರದಿಂದ ಸಮುದ್ರಕ್ಕೆ ಬಂದುದು ಎಂಬ ಪ್ರಕಾರ ವಿಶೇಷವು ಮಾತ್ರ ಕಾಣುವುದಿಲ್ಲ. ಅದರಂತೆಯೇ ನಿನ್ನ ತೇಜಸ್ಸು ಮಾತ್ರ ಕಾಣಿಸುತ್ತದೆಯೇ ಹೊರತು ಉತ್ಕೃಷ್ಟವಾದ ರೀತಿಯಲ್ಲಿ ಪೂಜಿತವಾಗತಕ್ಕ ನಿನ್ನ ಮೂರ್ತಿಯು ನಮಗೆ ಕಾಣಿಸುವುದಿಲ್ಲ. ಆಕಾರವಿಹೀನವಾದ ವಸ್ತು, ಮನಸ್ಸಿಗೆ ಸ್ಫುಟವಾಗಿ ಗೋಚರವಾಗುವುದಿಲ್ಲ. ನಿನ್ನ ರೂಪವೆಲ್ಲಾ ಜ್ವಾಲಾಮಾಲೆಯಿಂದ ವ್ಯಾಪ್ತವಾಗಿಯೂ, ಅನೇಕ ಆಕೃತಿಗಳುಳ್ಳದ್ದಾಗಿಯೂ, ಆಶ್ಚರ್ಯಕರವಾಗಿಯೂ ಇರುವುದು. ಅದು ಮನಸ್ಸಿಗೆ ಒಂದು ಆಲಂಬನ ಸಿಕ್ಕದಂತಿರುವುದರಿಂದ ಚಿತ್ತಕ್ಕೆ ಸಂತೋಷವುಂಟಾಗಲಾರದು. ಮನಸ್ಸಿಗೆ ಸಂತೋಷವುಂಟಾಗದುದರಿಂದ ಮಾನವರಿಗೆ ಅದರಲ್ಲಿ ಭಕ್ತಿಯೂ ಉತ್ಪನ್ನವಾಗುವುದಿಲ್ಲ."

೧೨. "ಭಕ್ತಿಹುಟ್ಟದಿದ್ದರೆ, ದೇವರನ್ನು ಪೂಜಿಸುವುದಕ್ಕೇ ಮನಸ್ಸು ಬರುವುದಿಲ್ಲ. ಎಲೈ ದೇವನೇ! ನಿನ್ನನ್ನು ಪೂಜೆಮಾಡುವುದರಿಂದ ಮನುಷ್ಯರಿಗೆ ಧರ್ಮಾರ್ಥಕಾಮ ಮೋಕ್ಷಗಳು ಲಭ್ಯವಾಗುತ್ತವೆ."

೧೩. ಯಾವ ಮೂರ್ತಿಯು ಉತ್ಕೃಷ್ಟವೆಂದು ನೀನು ಭಾವಿಸುವೆಯೋ ಅಂತಹ ಮೂರ್ತಿಯನ್ನು ನಮಗೆ ತೋರಿಸು. ನೀನು ತೋರಿಸಿದ ನಿನ್ನ ಮೂರ್ತಿಯನ್ನು ಪೂಜಿಸಿ, ನಾವೂ ಸಿದ್ಧಿಯನ್ನು ಪಡೆಯುವೆವು" ಎಂದರು

॥ ಸೂರ್ಯ ಉವಾಚ ॥

ಸಾಧು ಸಾಧು ಮಹಾದೇವ ಸಾಧುಪೃಷ್ಟೋऽಸ್ಮಿ ಸುವ್ರತ ।
ಶೃಣು ಚೈಕಮನಾಃ ಕೃತ್ಸ್ನಂ ಗದತೋ ಮಮ ಮಾನದ ॥ ೧೪ ॥

ಚತುರ್ಮೂರ್ತಿರಹಂ ದೇವ ಜಗದ್ವ್ಯಾಪ್ಯ ವ್ಯವಸ್ಥಿತಃ ।
ಶ್ರೇಯಸೇ ಸರ್ವಲೋಕಾನಾದಿಮಧ್ಯಾಂತಕೃತ್ಸದಾ ॥ ೧೫ ॥

ಆದ್ಯಾ ಮೇ ರಾಜಸೀ ಮೂರ್ತಿರ್ಬ್ರಹ್ಮೇತಿ ಪರಿಕೀರ್ತಿತಾ ।
ಸೃಷ್ಟಿಂ ಕರೋತಿ ಸಾ ನಿತ್ಯಂ ಕಲ್ಪಾದೌ ಜಗತಾಂ ವಿಭೋ ॥ ೧೬ ॥

ದ್ವಿತೀಯಾ ಸಾತ್ವಿಕೀ ಪ್ರೋಕ್ತಾ ಯಾ ಪರಾ ಪರಿಕೀರ್ತಿತಾ ।
ಜಗತ್ಪಾ ಪಾಲಯೇನ್ನಿತ್ಯಂ ದುಷ್ಟದೈತ್ಯವಿನಾಶಿನೀ ॥ ೧೭ ॥

ತೃತೀಯಾ ತಾಮಸೀ ಜ್ಞೇಯಾ ಈಶೇತಿ ಪರಿಕೀರ್ತಿತಾ ।
ತ್ರೈಲೋಕ್ಯಂ ಸಂಹರೇತ್ಸಾ ತು ಕಲ್ಪಾಂತೇ ಶೂಲಧಾರಿಣೇ ॥ ೧೮ ॥

---

೧೪-೧೫. ಆಗ ರುದ್ರನನ್ನು ಕುರಿತು ಸೂರ್ಯನು ಹೇಳುತ್ತಾನೆ—"ಎಲೈ ಮಾನದನೆನಿಸಿದ (ದುಷ್ಟರಗರ್ವ ಖಂಡನಮಾಡುವ) ರುದ್ರನೇ! ಒಂದೇ ಮನಸ್ಸಿನಿಂದ ನಾನು ಹೇಳುವುದನ್ನು ಕೇಳು. ಸರ್ವಲೋಕಗಳಿಗೂ ಆದಿಮಧ್ಯಾಂತಗಳನ್ನು (ಸೃಷ್ಟಿಸ್ಥಿತಿ ಪ್ರಳಯಗಳನ್ನು) ಉಂಟುಮಾಡುವವನಾಗಿಯೂ, ಸರ್ವಲೋಕಗಳ ಶ್ರೇಯಸ್ಸಿಗಾಗಿ ಚತುರ್ಮೂರ್ತಿಗಳ ರೂಪವುಳ್ಳವನಾಗಿಯೂ ಜಗತ್ತನ್ನೆಲ್ಲಾ ವ್ಯಾಪಿಸಿಕೊಂಡು ಇದ್ದೇನೆ.

೧೬. ರಜೋಗುಣಪ್ರಧಾನವಾದ ನನ್ನ ಮೊದಲನೆಯ ಮೂರ್ತಿಯು, ಬ್ರಹ್ಮ ಎಂದು ಉಕ್ತವಾಗಿದೆ. ಅಯ್ಯಾ ವಿಭುವೇ! ಅದು ಕಲ್ಪಾರಂಭದಲ್ಲಿ ಜಗತ್ತುಗಳನ್ನು ಸೃಷ್ಟಿಮಾಡುತ್ತದೆ

೧೭. ಪರಾ ಎಂದು ಹೇಳಿಸಿಕೊಳ್ಳುವನನ್ನು ಎರಡನೆಯ ಮೂರ್ತಿಯು ಸಾತ್ವಿಕೀ (ಸತ್ವಗುಣಪ್ರಧಾನ) ಎಂದು ಹೇಳಲ್ಪಟ್ಟಿದೆ. ಇದು ದುಷ್ಟದೈತ್ಯರನ್ನು ನಿಗ್ರಹಮಾಡುತ್ತಾ ಯಾವಾಗಲೂ ಜಗತ್ತನ್ನು ಸಂರಕ್ಷಿಸುತ್ತದೆ.

೧೮. ಈಶಾ ಎಂದು ಹೇಳಿಸಿಕೊಳ್ಳುವ ಮೂರನೆಯ ಮೂರ್ತಿಯನ್ನು ತಾಮಸೀ (ತಮೋಗುಣಪ್ರಧಾನವಾದದ್ದು) ಎಂಬದಾಗಿ ತಿಳಿಯಬೇಕು. ತ್ರಿಶೂಲವನ್ನು ಧರಿಸಿದ ಆ ಮೂರ್ತಿಯು ಕಲ್ಪಾಂತದಲ್ಲಿ ಮೂರುಲೋಕಗಳನ್ನೂ ಸಂಹಾರಮಾಡತಕ್ಕದ್ದಾಗಿರುವುದು.

ಚತುರ್ಥೀ ತು ಗುಣೈರ್ಹೀನಾ ಸತ್ತ್ವಾದಿಭಿರನುತ್ತಮಾ ।
ಸಾ ಚಾ ಶಕ್ಯಾ ಕ್ವಚಿದ್ರಷ್ಟುಂ ಸ್ಥಿತಾ ಸಾ ಚಾಭವತ್ಸದಾ ॥ ೧೯

ತಯಾ ತತಮಿದಂ ಸರ್ವಂ ಯಚ್ಚೋದ್ಗೀಥಂ ತು ಮೇ ಗತಿಃ ।
ನಿಷ್ಕಲಾ ಸಕಲಾ ಸಾ ತು ಸುರೂಪಾ ರೂಪವರ್ಜಿತಾ ॥ ೨೦

ಅಂತರ್ಗತಾ ಚ ಲೋಕಾನಾಂ ನ ಚ ಕರ್ಮಫಲಂ ಗತಾ ।
ತಿಷ್ಠಮಾನಾಪ್ಯಲಿಪ್ತಾ ಸಾ ಪದ್ಮಪತ್ರಮಿವಾಂಭಸಾ ॥ ೨೧

ಅಸ್ಪೃಷ್ಟಾ ಚ ಸದಾ ಷಡ್ಭಿಃ ಸಪ್ತಾತೀತ್ಯ ವ್ಯವಸ್ಥಿತಾ ।
ಚತುಸ್ಥಾನಾ ಚ ಸಾ ಷಡ್ಭ್ಯಸ್ತುರೀಯಾಖ್ಯಾ ಸುಪೂಜಿತಾ ॥ ೨೨ ।

ನ ಸಾ ಸ್ಪ್ರಷ್ಟುಂ ತ್ವಯಾ ಶಕ್ತ್ಯಾ ಹರಿಣಾ ಬ್ರಹ್ಮಣಾ ನ ಚ ।
ಮಾಮನಾರಾಧ್ಯ ಭೂತೇಶ ವ್ಯೋಮರೂಪಂ ಕದಾಚನ ॥ ೨೩ ।

---

೧೯. ಸತ್ತ್ವಾದಿಗುಣದಿಂದ ರಹಿತವಾಗಿ ನಿರ್ಗುಣವೆನಿಸಿದ ಸರ್ವೋತ್ತಮವಾದ ನಾಲ್ಕನೆಯ ಮೂರ್ತಿಯು ಎಲ್ಲಿಯೂ ನೋಡಲು ಸಾಧ್ಯವಿಲ್ಲದುದೂ ಯಾವಾಗಲೂ ನೋಡಲು ಅಶಕ್ಯವೂ ಆಗಿದೆ.

೨೦. ಬ್ರಹ್ಮಾಂಡವೆಲ್ಲವೂ ಅದರಿಂದ ವ್ಯಾಪ್ತವಾದುದು. ಉದ್ಗೀಥವೆಂದು ಹೇಳಲ್ಪಡುವುದೇ ನನ್ನ ಪ್ರಾಪ್ಯಸ್ಥಾನ. ನಿಷ್ಕಲವಾದ ಮೂರ್ತಿಯು, ರೂಪವಿಲ್ಲದುದು. ಸಕಲಾ ಎಂದರೆ ಕಲಾಸಹಿತವಾದ ಮೂರ್ತಿಯು ಸುರೂಪವುಳ್ಳದು, ಮತ್ತು ಲೋಕಗಳ ಅಂತಃಪ್ರವಿಷ್ಟವಾದುದು. ಆದರೆ ಕರ್ಮಫಲಕ್ಕೆ ಗುರಿಯಾಗತಕ್ಕದ್ದಲ್ಲ.

೨೧. ತಾವರೆಯ ಎಲೆಯ ಮೇಲೆ ನೀರು ಇದ್ದರೂ, ಅದು ಆ ಎಲೆಗೆ ಅಂಟದೆ ಇರುವಂತೆ, ಇದು ಪ್ರಪಂಚದಲ್ಲಿ ಇರುತ್ತಿದ್ದರೂ ಕರ್ಮಫಲಕ್ಕೆ ಸಂಬಂಧಪಡತಕ್ಕದ್ದಲ್ಲ.

೨೨. ಆದ ಕಾರಣ ಅದು ಯಾವಾಗಲೂ ಆರರಿಂದ ಸ್ಪೃಷ್ಟವಾದುದೂ ಕಾಮ ಕ್ರೋಧಾದಿ ಅರಿಷಡ್ವರ್ಗದ ಸೋಂಕು ಇಲ್ಲದುದೂ ಏಳನ್ನು ಅತಿಕ್ರಮಿಸಿರತಕ್ಕದ್ದೂ (ಸಪ್ತವ್ಯಸನಗಳಿಗೆ ಸಿಕ್ಕದುದೂ); ಧರ್ಮಾದಿಯಾದ ಚತುಸ್ಥಾನಗಳುಳ್ಳದ್ದೂ ಮತ್ತು ಅದನ್ನು ಧರಿಸಿರತಕ್ಕದ್ದು, ಷಡ್ಗುಣೈಶ್ವರ್ಯಯುಕ್ತವಾದ್ದೂ ತುರೀಯ ಎಂಬ ಹೆಸರುಳ್ಳದ್ದೂ ಚೆನ್ನಾಗಿ ಪೂಜಿಸಲ್ಪಡತಕ್ಕದ್ದೂ ಆಗಿದೆ.

೨೩. ಎಲೈ ಭೂತೇಶನೇ! ವ್ಯೋಮರೂಪವಾದ ನನ್ನನ್ನು ಆರಾಧಿಸದೆ ಸೃಷ್ಟ್ಯಾದಿಗಳನ್ನು ಮಾಡಲು ನೀನು ಎಂದೂ ಶಕ್ತನಾಗಲಾರೆ. ಹರಿಯೂ ಬ್ರಹ್ಮನೂ ಸಹ (ವ್ಯೋಮವನ್ನು ಪೂಜಿಸದೆ) ಅವರವರ ಕಾರ್ಯಗಳನ್ನು ಮಾಡಲೂ ಸಾಧ್ಯವಿಲ್ಲ.

ಯದೇತದ್ಭವತಾಂ ದೇವ ಪ್ರಬೋಧಾರ್ಥಮುಪಸ್ಥಿತಂ ।
ಅಹಂಕಾರವಿಮೂಢಾನಾಂ ತಮಸಾ ಚ ತ್ರಿಲೋಚನ ॥ ೨೪ ॥

ಪ್ರಕಾಶಾಯ ಚ ಲೋಕಾನಾಂ ಜ್ವಾಲಾಮಾಲಾಸಮಾಕುಲಂ ।
ಕರ್ಣಿಕೇವ ಸ್ಥಿತಂ ದೇವ ಭೂಪದ್ಮಸ್ಯಾಖಿಲಸ್ಯ ಚ ॥ ೨೫ ॥

ಯಸ್ಯ ಸಂದರ್ಶನಾದೇವ ಯೂಯಂ ಸರ್ವೇ ಪ್ರಬೋಧಿತಾಃ ।
ಪ್ರಕಾಶಮಭಜಂವದ್ವಾಪಿ ಜಗತ್ಸರ್ವಮಥಾರ್ಚಿಭಿಃ ॥ ೨೬ ॥

ತಸ್ಮಾದಾರಾಧಯಸ್ವೈನಾಮಸ್ಪೃಷ್ಟಾಂ ಗಗನೋಪಮಾಂ ।
ಮನ್ಮೂರ್ತಿಂ ಯೇನ ತಾಂ ದಿವ್ಯಾಂ ದ್ರಕ್ಷ್ಯಸಿ ತ್ವಂ ತ್ರಿಲೋಚನ ॥ ೨೭ ॥

ಯತ್ತ್ವಾದ್ಯಮಿಾಕ್ಷರಂ ಜಜ್ಞೇ ತದ್ವ್ಯೋಮ ಪರಿಕೀರ್ತಿತಂ ।
ಕಲ್ಪಾಂತೇ ಹ್ಯತ್ರ ವೈ ವ್ಯೋಮ್ನಿ ಲೀಯಂತೇ ಸರ್ವದೇವತಾಃ ॥ ೨೮ ॥

---

೨೪-೨೬. ತ್ರಿನೇತ್ರನಾದ ಎಲೈ ದೇವನೇ! ಅಹಂಕಾರದಿಂದಲೂ, ತಮದಿಂದಲೂ ಮೋಹಿತರಾಗಿದ್ದ (ಭ್ರಾಂತರಾಗಿದ್ದ) ನಿಮ್ಮನ್ನು ಎಚ್ಚರಗೊಳಿಸುವುದಕ್ಕಾಗಿಯೂ, ಲೋಕಗಳಿಗೆ ಬೆಳಕನ್ನುಂಟುಮಾಡುವುದಕ್ಕಾಗಿಯೂ, ಅದು ಜ್ವಾಲಾಮಾಲೆಗಳಿಂದ ಕೂಡಿದುದಾಯಿತು. ಸಮಸ್ತಲೋಕವೆಂಬ ಕಮಲಕ್ಕೆ ಕರ್ಣಿಕೆಯಂತೆ ಇರುವ, ಅದರ ದರ್ಶನದಿಂದಲೇ ನೀವೆಲ್ಲಾ ಎಚ್ಚರ ಹೊಂದಿದಿರಿ. ಸರ್ವಜಗತ್ತೂ ತೇಜಸ್ಸುಗಳಿಂದ ಪ್ರಕಾಶವಾಯಿತು.

೨೭. ಸ್ಪರ್ಶಮಾಡಲಸಾಧ್ಯವೂ ಗಗನಸದೃಶವೂ ದಿವ್ಯವೂ ಆದ, ನನ್ನ ಮೂರ್ತಿಯನ್ನು ನನ್ನ ಅನುಗ್ರಹದಿಂದ ಕಾಣುತ್ತಿದ್ದೀಯಷ್ಟೆ. ಅದನ್ನೇ ಆರಾಧಿಸು."

೨೮. ವ್ಯಾಪಕವಾದ ಯಾವುದು ಪ್ರಥಮಸೃಷ್ಟವಾದ ವಸ್ತುವೋ, ಅದು ವ್ಯೋಮವೆಂದು ಕೀರ್ತಿತವಾಗಿದೆ. ಪ್ರಳಯಕಾಲದಲ್ಲಿ ಈ ವ್ಯೋಮದ (ಸರ್ವೇಂದ್ರಿಯಗಳಲ್ಲಿ) ಸರ್ವದೇವತೆಗಳೂ, ಲೀನವಾಗುತ್ತಾರೆ."

ದಕ್ಷಿಣೇ ಲೀಯತೇ ಬ್ರಹ್ಮಾ ವಾಮೇ ತಸ್ಯ ಜನಾರ್ದನಃ ।
ತ್ವಂ ಸದಾ ಕಚದೇಶೇ ತು ಲೀಯಸೇ ತ್ರಿಪುರಾಂತಕ ॥ ೨೯ ॥

ಗಾಯತ್ರೀ ಲೀಯತೇ ತಸ್ಯ ಹೃದಯೇ ಲೋಕಮಾತರಃ ।
ಲೀಯಂತೇ ಮೂರ್ಧ್ನಿ ವೈ ವೇದಾಃ ಸಷಡಂಗ ಪದಕ್ರಮಾಃ ॥ ೩೦ ॥

ಜಠರೇ ಲೀಯತೇ ಸರ್ವಂ ಜಗತ್ಸ್ಥಾವರಜಂಗಮಂ ।
ಪುನರುತ್ಪದ್ಯತೇ ಹ್ಯಸ್ಮಾದ್ಬ್ರಹ್ಮಾದ್ಯಂ ಸಚರಾಚರಂ ॥ ೩೧ ॥

ಆಕಾಶಂ ವ್ಯೋಮ ಇತ್ಯಾಹುಃ ಪೃಥಿವೀ ನಿಕ್ಷುಭಾ ಮತಾ ।
ಭೂತಶ್ರೇಯೋಽಹಮಾಕಾಶೋ ನಿಕ್ಷುಭಾ ದಯಿತಾ ಮಮ ॥ ೩೨ ॥

ಮಯಾ ನಿಕ್ಷುಭಯಾ ಸರ್ವಂ ಜಗದ್ವ್ಯಾಪ್ತಂ ತ್ರಿಲೋಚನ ।
ತಸ್ಮಾದಾರಾಧಯ ವ್ಯೋಮ ತ್ವಂ ಬ್ರಹ್ಮಾ ಕೇಶವಸ್ತಥಾ ॥ ೩೩ ॥

---

೨೯. ಅಯ್ಯಾ ತ್ರಿಪುರಾಂತಕನೇ! ಅದರ ಬಲಭಾಗದಲ್ಲಿ ಬ್ರಹ್ಮನೂ, ಎಡದಲ್ಲಿ ವಿಷ್ಣುವೂ ಲೀನವಾಗುವರು. ಕಚಸ್ಥಾನದಲ್ಲಿ (ಶಿರಸ್ಸಿನಲ್ಲಿ) ನೀನು ಲೀನನಾಗುತ್ತೀಯೆ."

೩೦. ಅದರ ಹೃದಯದಲ್ಲಿ ಗಾಯತ್ರಿಯು ಲೀನಳಾಗುವಳು. ಶಿರಸ್ಸಿನಲ್ಲಿ ಬ್ರಾಹ್ಮ್ಯಾದಿ ಸಪ್ತಮಾತೃಗಳೂ, ಅಂಗ, ಪದ, ಕ್ರಮ ಇವುಗಳಿಂದ ಕೂಡಿದ ವೇದಗಳೂ ಲೀನವಾಗುವುವು. ಜಠರದಲ್ಲಿ ಸ್ಥಾವರಜಂಗಮಾತ್ಮಕವಾದ ಸಮಸ್ತ ಪ್ರಪಂಚವೂ ಲೀನವಾಗುವುದು. ಬ್ರಹ್ಮ ಮೊದಲುಗೊಂಡು, ಚರಾಚರವಾದ ಸಮಸ್ತ ಪ್ರಪಂಚವೂ, ಕಲ್ಪಾದಿಯಲ್ಲಿ ಪುನಃ ಇದರಿಂದಲೇ ಉತ್ಪನ್ನವಾಗುತ್ತದೆ."

೩೧. ಈ ಆಕಶಾವನ್ನೇ ವ್ಯೋಮವೆಂದು ಹೇಳುವರು. ಪೃಥಿವಿಯನ್ನು ನಿಕ್ಷುಭಾ ಎಂದು ಕರೆಯುತ್ತಾರೆ. ಭೂತಗಳಲ್ಲಿ ಆಕಾಶವು ಶ್ರೇಷ್ಠವಾದುದೆನಿಸಿದೆ ಆ ಆಕಾಶವೇ ನಾನು. ನಿಕ್ಷುಭೆಯು ನನ್ನ ಪತ್ನಿ."

೩೨. ಅಯ್ಯಾ ತ್ರಿಲೋಚನನೇ! ನಾನೂ ನಿಕ್ಷುಭೆಯೂ, ಜಗತ್ತನ್ನೆಲ್ಲಾ ಆವರಿಸಿಕೊಂಡಿದ್ದೇವೆ. ಆದುದರಿಂದ ನೀನೂ, ಬ್ರಹ್ಮನೂ, ವಿಷ್ಣುವೂ, ಸಹ ವ್ಯೋಮವನ್ನು ಆರಾಧಿಸಿ."

ತನ್ಮೇ ರೂಪಂ ಮಹದ್ವ್ಯೋಮ ಪೂಜಯಿತ್ವಾ ತ್ರಿಲೋಚನ ।
ದಿವ್ಯಂ ವರ್ಷಸಹಸ್ರಂ ಹಿ ಗಿರೌ ತ್ವಂ ಗಂಧಮಾದನೇ ॥
ತತೋ ಯಾಸ್ಯಸಿ ಸಂಸಿದ್ಧಿಂ ಷಡಂಗಾಂ ಪರಮಾಂ ಶುಭಾಂ ॥ ೩೪ ॥

ಕಲಾಪಗ್ರಾಮಮಾಶ್ರಿತ್ಯ ಶಂಖಚಕ್ರಗದಾಧರಃ ।
ಆರಾಧಯತು ಮಾಂ ಭಕ್ತ್ಯಾ ವ್ಯೋಮರೂಪಂ ಜನಾರ್ದನಃ ॥ ೩೫ ॥

ಅಂತರಿಕ್ಷಗತಂ ತೀರ್ಥಂ ಪುಷ್ಕರಂ ಲೋಕಪಾವನಂ ।
ತತ್ರ ಗತ್ವಾ ವಿರಂಚೋ ಮೇ ವ್ಯೋಮರೂಪಂ ಸದಾಽರ್ಚತು ॥ ೩೬ ॥

ಏವಂ ಮಾಂ ಸತತಂ ಯೂಯಂ ಸಮಾರಾಧ್ಯ ಜಗತ್ಪತಿಂ ।
ಸಮಾನಾಂ ಚ ಸುದಿವ್ಯಾನಾಂ ಸಹಸ್ರತ್ರಯಮಾದರಾತ್ ॥ ೩೭ ॥

ತತೋ ದ್ರಕ್ಷ್ಯಥ ಮೇ ಮೂರ್ತಿಂ ಪರಮಾಂ ಯಾಂ ವಿದುರ್ಬುಧಾಃ ।
ಕದಂಬಗೋಲಕಾಕಾರಾಂ ರಶ್ಮಿಮಾಲಾಕುಲಾಂ ಪರಾಂ ॥ ೩೮ ॥

---

೩೪. ಅಯ್ಯಾ ತ್ರಿಲೋಚನನೇ! ಆ ನನ್ನ ವ್ಯೋಮವೆಂಬ ಮಹಾರೂಪವನ್ನು ಪೂಜಿಸುತ್ತಾ, ನೀನು ದೇವಮಾನದ ಸಹಸ್ರ ವರ್ಷದವರೆಗೂ, ಗಂಧಮಾದನವೆಂಬ ಪರ್ವತದಲ್ಲಿ ವಾಸಿಸು, ಆಮೇಲೆ ಷಡಂಗ ಯುಕ್ತವೂ, ಶ್ರೇಷ್ಠವೂ, ಶುಭಕರವೂ ಆದ, ಅದರ ದರ್ಶನರೂಪವಾದ ಸಿದ್ಧಿಯನ್ನು ಹೊಂದುವೆ.

೩೫. ಶಂಖ ಚಕ್ರಗದಾಧರನಾದ ಜನಾರ್ದನನು ಕಲಾಪಗ್ರಾಮವನ್ನು ಆಶ್ರಯಿಸಿ, ಭಕ್ತಿಯಿಂದ ವ್ಯೋಮರೂಪನಾದ ನನ್ನನ್ನು ಆರಾಧಿಸಲಿ.

೩೬. ಲೋಕವನ್ನು ಪರಿಶುದ್ಧಿಮಾಡುವ ಪುಷ್ಕರವೆಂಬ ತೀರ್ಥವು ಆಕಾಶದಲ್ಲಿದೆ. ಬ್ರಹ್ಮನು ಅಲ್ಲಿಗೆ ಹೋಗಿ ವ್ಯೋಮರೂಪನಾದ ನನ್ನನ್ನು ಸದಾ ಪೂಜಿಸಲಿ.

೩೭–೩೮. ನೀವೆಲ್ಲರೂ ಹೀಗೆ ದೇವಮಾನದ ಮೂರು ಸಹಸ್ರ ವರ್ಷಪರ್ಯಂತ ಆದರದಿಂದ ನನ್ನನ್ನು ಪೂಜಿಸಿರಿ. ಅನಂತರ ಜ್ಞಾನಿಗಳಿಗೆ ಗೋಚರವಾಗುವಂಥ ನನ್ನ ಪರಮಮೂರ್ತಿಯನ್ನು ಎಂದರೆ ಕದಂಬ ಮುಕುಳದ ಆಕಾರವುಳ್ಳದ್ದೂ, ಕಿರಣ ಮಾಲೆಗಳಿಂದ ವ್ಯಾಪ್ತವಾಗಿ ಶ್ರೇಷ್ಠವೆನಿಸಿದುದೂ, ಆದ ನನ್ನ ಮೂರ್ತಿಯನ್ನು ಕಾಣುವಿರಿ" ಎಂದನು.

ಅಥ ನಾರಾಯಣೋದೇವಃ ಪ್ರಣಮ್ಯ ಶಿರಸಾ ರವಿಂ ।

॥ ವಿಷ್ಣುರುವಾಚ ॥

ಯದಿ ತೇ ಪರಮಂ ರೂಪಂ ಮತಂ ವ್ಯೋಮ ಹ್ಯನೂಪಮಂ ।
ತಮಾರಾಧ್ಯ ವಯಂ ಸರ್ವೇ ಯಾಸ್ಯಾಮಃ ಸಿದ್ಧಿಮುತ್ತಮಾಂ ॥ ೪೦ ॥

ಕೀದೃಗ್ವ್ಯೋಮ ತ್ವಹಂ ಬ್ರಹ್ಮಾ ಹರಶ್ಚ ತ್ರಿಪುರಾಂತಕಃ ।
ಆರಾಧಯಾಮಹೇ ದೇವ ಭಕ್ತ್ಯಾ ಶ್ರೆಯೋರ್ಥಮಾತ್ಮನಃ ॥ ೪೧ ॥

ಯೇನ ಸಿದ್ಧಿಂ ಗಮಿಷ್ಯಾಮಸ್ತಮಾರಾಧ್ಯ ದಿವಾಕರಂ ।
ತಸ್ಮಾನ್ನೋ ಲಕ್ಷಣಂ ಬ್ರೂಹಿ ವ್ಯೋಮ್ನಃ ಪರಮಪೂಜಿತ ॥ ೪೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸೌರಧರ್ಮೇ ತ್ರ್ಯಯ್ಯುಪಾಖ್ಯಾನೇ ಚತುಃ ಪಂಚಾಶದುತ್ತರ
ಶತತಮೋಽಧ್ಯಾಯಃ.

---

೩೯. ಅನಂತರ ವಿಷ್ಣುವು ಸೂರ್ಯನಿಗೆ ತಲೆಬಾಗಿ ನಮಿಸಿ, ಕೈಮುಗಿದುಕೊಂಡು ಈ ಮಾತನ್ನು ಹೇಳಿದನು.

೪೦. ವಿಷ್ಣುವು ಸೂರ್ಯದೇವನನ್ನು "ಕುರಿತು ದೇವಾ! ಅಸದೃಶವಾದ ನಿನ್ನ ವ್ಯೋಮರೂಪವೇ ಶ್ರೇಷ್ಠವಾದುದೆಂದು ನಿನಗೆ ಅಭಿಮತವಾದರೆ ಆ ರೂಪವನ್ನೇ ನಾವೆಲ್ಲರೂ ಆರಾಧನೆಮಾಡಿ ಉತ್ತಮವಾದ ಸಿದ್ಧಿಯನ್ನು ಹೊಂದುವೆವು."

೪೧. "ಎಲೈ ಪರಮ ಪೂಜ್ಯನೇ! ನಾನೂ, ಬ್ರಹ್ಮನೂ, ತ್ರಿಪುರಾಂತಕನಾದ ಹರನೂ ಸಹ, ಆ ವ್ಯೋಮನನ್ನು ಪೂಜಿಸಿ ಸಿದ್ಧಿಯನ್ನು ಹೊಂದಬೇಕಾಗಿರುವ ಕಾರಣ, ನಮ್ಮ ಶ್ರೇಯಸ್ಸಿಗಾಗಿ ಎಂತಹ ವ್ಯೋಮವನ್ನು ಭಕ್ತಿಯಿಂದ ಆರಾಧನೆ ಮಾಡಬೇಕೋ ಆ ವ್ಯೋಮದ ಲಕ್ಷಣವನ್ನು ನಮಗೆ ಹೇಳು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ
ತ್ರ್ಯಯ್ಯುಪ್ಯಾಖ್ಯಾನವೆಂಬ ನೂರಐವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಪಂಚಾಶದುತ್ತರಶತತಮೋಽಧ್ಯಾಯಃ

---

॥ ಆದಿತ್ಯ ಉವಾಚ ॥

ಸಾಧು ಸಾಧು ಸುರಶ್ರೇಷ್ಠ ಸಾಧು ಪೃಷ್ಟೋಽಸ್ಮಿ ಭೂಧರ ।
ಶೃಣುಷ್ವೈಕಮನಾಃ ಕೃಷ್ಣ ಗದತೋ ನಿಖಿಲಂ ಮಮ ॥ ೧ ॥

ಆರಾಧಯತ್ವಯಂ ದೇವೋ ಮಮರೂಪಮನೂಪಮಂ ।
ಚತುಷ್ಕೋಣಂ ಪರಂ ವ್ಯೋಮ ಅದ್ಭುತಂ ಗೈರಿಕೋಜ್ವಲಂ ॥ ೨ ॥

ತ್ವಮಾರಾಧಯ ಚಕ್ರಾಂಕಂ ಶಂಕರೋ ವೃತ್ತಮರ್ಚತು ।
ಶಬ್ದಾದೌ ಸತತಂ ಬ್ರಹ್ಮ ಸಾಗರಾದೌ ತ್ರಿಲೋಚನಃ ॥ ೩ ॥

---

### ನೂರಐವತ್ತಐದನೆಯ ಅಧ್ಯಾಯ

೧. ಸೂರ್ಯನು ಹೇಳುತ್ತಾನೆ—ಎಲೈ ದೇವಶ್ರೇಷ್ಠನಾದ ಭೂಧರನೇ! ನೀನು ನನ್ನನ್ನು ಕೇಳಿದೆ. ಎಲೈ ಕೃಷ್ಣನೇ! ನಾನು ಹೇಳುತ್ತಿರುವುದೆಲ್ಲವನ್ನೂ ಒಂದೇ ಮನಸ್ಸಿನಿಂದ ಕೇಳು.

೨. ಈ ಬ್ರಹ್ಮದೇವನು ಆರಾಧಿಸಬೇಕಾದ ಅಸದೃಶವಾದ ನನ್ನ ರೂಪವು ನಾಲ್ಕು ಕೋಣಾಕೃತಿಯಾಗಿಯೂ ಗೈರಿಕ ಧಾತುಗಳಿಂದ ಪ್ರಕಾಶವೂ ಆದ ಉತ್ಕೃಷ್ಟವಾದ ವ್ಯೋಮವಾಗಿರಲಿ.

೩. ಚಕ್ರ ಸ್ವರೂಪವುಳ್ಳ ವ್ಯೋಮವನ್ನು ನೀನು ಪೂಜಿಸು. ತ್ರಿಲೋಚನನಾದ ಶಂಕರನು ಶಬ್ದ, ಸಾಗರಾದಿಗಳಲ್ಲೂ ಬ್ರಹ್ಮವನ್ನು ಆದರದಿಂದ ಯಾವಾಗಲೂ ಚಿಂತಿಸುತ್ತಾ ವೃತ್ತಾಕಾರವಾದ ವ್ಯೋಮವನ್ನು ಪೂಜಿಸಲಿ.

ಮಧ್ಯಾಹ್ನೇ ತ್ವಂ ಸದಾ ದೇವ ಭಕ್ತ್ಯಾ ಮಾಮರ್ಚಯಸ್ವ ವೈ ।
ಯಥೇಷ್ಟಮೃಭವಃ ಸರ್ವೇ ಭಕ್ತ್ಯಾ ಮಾಂ ಪೂಜಯಂತು ವೈ ॥ ೪ ॥

ತತೋ ಬ್ರಹ್ಮಾದಯೋ ದೇವಾ ಶ್ರುತ್ವಾ ವಾಕ್ಯಂ ವಿಭಾವಸೋಃ ।
ಪ್ರಣಮ್ಯ ಶಿರಸಾ ಸರ್ವ ಇದಂ ವಚನಮಬ್ರುವನ್ ॥ ೫ ॥

ಧನ್ಯಾ ದೇವ ವಯಂ ಸರ್ವೇ ಕೃತಕೃತ್ಯಾಸ್ತಥೈವ ಚ ।
ಅಸ್ಮಾಭಿರ್ಭಗವಾನ್ಸ್ಪೃಷ್ಟಸ್ತೇಜಸಾ ಪ್ರಜ್ವಲಂತಿ ಚ ॥ ೬ ॥

ಸಂಭೂತಾ ಜ್ಞಾನಿನಃ ಸರ್ವೇ ಭವತೋ ದರ್ಶನಾದ್ವಯಂ ।
ತಮೋ ಮೋಹಸ್ತಥಾ ತಂದ್ರಾ ಸರ್ವಮೇಕಪದೇ ಗತಂ ॥ ೭ ॥

ವಯಂ ತ್ವನ್ಮೂರ್ತಯಃ ಸರ್ವೇ ತೇಜಸಾ ತವ ಸಂವೃತಾಃ ।
ಉತ್ಪತ್ತಿಸ್ಥಿತಿನಾಶಾಯ ಲೋಕಾನಾಂ ತವ ಶಾಸನಾತ್ ॥ ೮ ॥

---

೪. ಎಲೈ ದೇವನೇ! ಮಧ್ಯಾಹ್ನ ಕಾಲದಲ್ಲಿ ನೀನು ಭಕ್ತಿಯಿಂದ ನನ್ನನ್ನು ಪೂಜಿಸು. ಋಭುಗಳೆಲ್ಲರೂ ಇಚ್ಛಾನುಸಾರವಾಗಿ ಭಕ್ತಿಯಿಂದ ನನ್ನನ್ನು ಪೂಜಿಸಲಿ. ಎಂದು ಹೇಳಿದನು.

೫. ಸೂರ್ಯನು ಹೇಳಿದ ಮಾತನ್ನು ಕೇಳಿದ ಅನಂತರದಲ್ಲಿ ಬ್ರಹ್ಮಾದಿದೇವತೆಗಳೆಲ್ಲರೂ ತಲೆಬಾಗಿ ಈ ಮುಂದಿನ ಮಾತನ್ನು ಹೇಳಿದರು.

೬. ಎಲೈ ದೇವತೇಜಸ್ಸಿನಿಂದ ಪ್ರಜ್ವಲಿಸುತ್ತಿವ ಭಗವಂತನಾದ ನೀನು ನಮ್ಮ ಪ್ರಾರ್ಥನೆಯನ್ನು ಕೇಳಿದೆ. ಆದುದರಿಂದ ನಾವೆಲ್ಲರೂ ಧನ್ಯರೂ ಕೃತಾರ್ಥರೂ ಆದೆವು

೭. "ನಾವೆಲ್ಲರೂ ನಿನ್ನ ದರ್ಶನದಿಂದ ಜ್ಞಾನಿಗಳಾದೆವು. ನಮ್ಮ ತಮಸ್ಸು, ಮೋಹ, ಆಲಸ್ಯ, ಇವೆಲ್ಲವೂ ಒಟ್ಟಿಗೆ ನಷ್ಟವಾದುವು.

೮. ನಾವು ಎಲ್ಲರೂ ನಿನ್ನ ಸ್ವರೂಪವುಳ್ಳವರು, ನಿನ್ನ ತೇಜಸ್ಸಿನಿಂದ ಸಂವೃತರಾಗಿ ಇದ್ದೇವೆ. ನಿನ್ನ ಆಜ್ಞೆಯಿಂದ ಲೋಕಗಳ ಉತ್ಪತ್ತಿ, ಸ್ಥಿತಿ, ನಾಶ ಈ ಕಾರ್ಯಗಳನ್ನು ನೆರವೇರಿಸಲು ಸಿದ್ಧರಾಗಿದ್ದೇವೆ.

ಸ್ಥಿತಾಃ ಸರ್ವೇ ಸುರಜ್ಯೇಷ್ಠ ಲೋಕಪಾಲಾಶ್ಚ ಕೃತ್ಸ್ನಶಃ ।
ಅಧುನಾ ಸಾಧಯಾಮೇಹ ವ್ಯೋಮ್ನಃ ಪೂಜಾಂ ವ್ರಜಾಮಹೇ ॥ ೯ ॥

ಇತ್ಥಂ ತೇಷಾಂ ವಚಃ ಶ್ರುತ್ವಾ ಭಾಸ್ಕರೋ ವಾರಿತಸ್ಕರಃ ।
ಉವಾಚ ಬ್ರಹ್ಮವಿಷ್ಣ್ವೀಶಾನ್ ಸಾಮಪೂರ್ವಮಿದಂ ವಚಃ ॥ ೧೦ ॥

॥ ಆದಿತ್ಯ ಉವಾಚ ॥

ಏವಮೇತನ್ನ ಸಂದೇಹೋ ಯಥಾ ವದತ ಸುವ್ರತಾಃ ।
ಯೂಯಂ ಮನ್ಮೂರ್ತಯಃ ಸರ್ವೇ ಯುಷ್ಮಾಕ ಮಹಮೇವ ಹಿ ॥ ೧೧ ॥

ಯದೇತದ್ದರ್ಶನಂ ದೇವಾಃ ಪ್ರಮಾಣಂ ಚ ಯದುತ್ತಮಂ ।
ಜ್ವಾಲಾಮಾಲಾಕುಲಂ ಶುಭ್ರಂ ಶಾಂಡಿಲೇಯಮಿವೋರ್ಜಿತಂ ॥ ೧೨ ॥

ಯುಷ್ಮಾಭಿರ್ದೇವಶಾರ್ದೂಲ ಬುಧ್ಯತಾಂ ತಸ್ಯ ಕಾರಣಂ ।
ಅಹಂಕಾರವಿಮೂಢಾನಾಂ ಮಿಥಃ ಕಲಹಿನಾಂ ತಥಾ ॥ ೧೩ ॥

---

೯. ಮತ್ತು ನಿನ್ನ ಮಾತಿನಂತೆ ಈಗವ್ಯೋಮಪೂಜೆಯನ್ನೂ ಸಾಧಿಸುತ್ತೇವೆ. ಅಪ್ಪಣೆಯಾದರೆ ಸುರಜ್ಯೇಷ್ಠನೂ, ನಾವೂ ಮತ್ತು ಲೋಕಪಾಲಕರೂ ಎಲ್ಲರೂ ಈಗ ಹೋಗುತ್ತೇವೆ" ಎಂದರು.

೧೦. ಜಲಶೋಷಕನಾದ ಸೂರ್ಯನು ಹೀಗೆ ಅವರು ಹೇಳಿದ ಮಾತನ್ನು ಕೇಳಿ ಆ ಬ್ರಹ್ಮ ವಿಷ್ಣು ರುದ್ರರನ್ನು ಕುರಿತು ಒಳ್ಳೆಯ ಮಾತಿನಿಂದ ಹೇಳಲು ತೊಡಗಿ.

೧೧. ಸೂರ್ಯನು ಬ್ರಹ್ಮಾದಿಗಳನ್ನು ಕುರಿತು—"ಎಲೈ ಸುವ್ರತರೇ! ನೀವು ಹೇಳಿದ ಹಾಗೆಯೇ ಮಾಡಿ, ನೀವೆಲ್ಲರೂ ನನ್ನ ಸ್ವರೂಪವುಳ್ಳವರು. ನಾನೂ ನಿಮ್ಮ ಸ್ವರೂಪವುಳ್ಳವನು. ಇದರಲ್ಲಿ ಸಂಶಯವಿಲ್ಲ"

೧೨-೧೩. "ಎಲೈ ದೇವಶ್ರೇಷ್ಠರೇ! ಈ ದಿವ್ಯ ದರ್ಶನವೂ ಇದರ ಉತ್ತಮ ಪ್ರಮಾಣವೂ, ಶುಭ್ರವೂ ಆದ ಜ್ವಾಲಾಮಾಲಿಗಳಿಂದ ವ್ಯಾಪ್ತವಾಗಿ ಪ್ರಜ್ವಲಿಸುವ ಅಗ್ನಿಯಂತೆ ಇರುವುದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳಿ."

ಪ್ರಬೋಧಾರ್ಥಂ ಹಿ ಯುಷ್ಮಾಕಂ ತಮಸೋ ನಾಶನಾಯ ಚ ।
ಪ್ರವರ್ತನಾಯ ಸರ್ವೇಷಾಂ ಕರ್ಮಣಾಂ ಚ ಪ್ರದರ್ಶಿತಂ ॥ ೧೪ ॥

ತಸ್ಮಾದೇವಂ ವಿದಿತ್ವಾ ತು ನಾಹಂಕಾರಃ ಕದಾಚನ ।
ಕರ್ತವ್ಯೋ ಭೂತಿಮಿಚ್ಛದ್ಭಿಃ ಸತತಂ ದೇವಸತ್ತಮಾಃ ॥ ೧೫ ॥

ಮಾನಂ ದರ್ಪಮಹಂಕಾರಂ ಪೂರ್ವಂ ತ್ಯಕ್ತ್ವಾ ಸುದೂರತಃ ।
ಆರಾಧಯತ ಮಾಂ ಭಕ್ತ್ಯಾ ಸತತಂ ಶ್ರದ್ಧಯಾನ್ವಿತಾಃ ॥ ೧೬ ॥

ತತೋ ದ್ರಕ್ಷ್ಯಥ ಮೇ ರೂಪಂ ಸಕಲಂ ನಿಷ್ಕಲಂ ಚ ಯತ್ ।
ಯಸ್ಯ ಸಂದರ್ಶನಾದೇವ ಸರ್ವೇ ಸಿದ್ಧಿಮವಾಪ್ಸ್ಯಥ ॥ ೧೭ ॥

ಏವಮುಕ್ತ್ವಾ ಮಹಾರಾಜ ಸಹಸ್ರಕಿರಣೋ ವಿಭುಃ ।
ಜಗಾಮಾದರ್ಶನಂ ತೇಷಾಂ ಪಶ್ಯತಾಮೇವ ಭಾರತ ॥ ೧೮ ॥

---

೧೪. "ಅಹಂಕಾರದಿಂದ ಮೂಢರಾಗಿ ಪರಸ್ಪರ ಜಗಳವಾಡುತ್ತಿದ್ದ ನಿಮಗೆ ತಿಳುವಳಿಕೆಯುಂಟುಮಾಡುವುದಕ್ಕೂ, ನಿಮ್ಮ ಅಜ್ಞಾನ ನಾಶವಾಗುವುದಕ್ಕೂ, ಎಲ್ಲಾ ಕರ್ಮಗಳನ್ನು ನಡೆಸುವುದಕ್ಕೂ ಸಹ, ನನ್ನ ಈ ರೂಪವನ್ನು ತೋರ್ಪಡಿಸಿದೆನು."

೧೫. "ಎಲೈ ದೇವತೆಗಳಿರಾ! ನೀವು ಸಂಪತ್ತನ್ನು ಅಪೇಕ್ಷಿಸುವವರಾಗಿದ್ದರೆ ಇದನ್ನು ತಿಳಿದುಕೊಂಡು ಯಾವಾಗಲೂ ಅಹಂಕಾರವನ್ನು ಮಾಡಬಾರದು."

೧೬. "ಅಭಿಮಾನ, ದರ್ಪ, ಅಹಂಕಾರ ಇವುಗಳನ್ನು ಈ ಕೂಡಲೇ ದೂರ ಮಾಡಿ, ಯಾವಾಗಲೂ ಶ್ರದ್ಧೆಯಿಂದ ಕೂಡಿ ನನ್ನನ್ನು ಆರಾಧಿಸಿ."

೧೭. "ಅನಂತರದಲ್ಲಿ ಸಕಲವೂ ನಿಷ್ಕಲವೂ ಆದ ನನ್ನ ರೂಪವನ್ನು ಕಾಣುವಿರಿ. ಅದನ್ನು ನೋಡುವುದರಿಂದ ಎಲ್ಲರೂ ಸಿದ್ಧಿಯನ್ನು ಹೊಂದುವಿರಿ." ಎಂದನು.

೧೮-೨೦. ಎಲೈ ಭರತವಂಶದ ಮಹಾರಾಜನೇ! ಕೇಳು, ಸಹಸ್ರ ಕಿರಣನಾದ ಸ್ವಾಮಿಯು ಹೀಗೆ ಹೇಳುತ್ತಿರುವಾಗಲೇ ಕಣ್ಮರೆಯಾದನು. ಆಮೇಲೆ ಆ

**ಅಥ ತೇ ವಿಸ್ಮಿತಾಃ ಸರ್ವೇ ಬ್ರಹ್ಮವಿಷ್ಣು ಪಿನಾಕಿನಃ ।**
**ತೇಜಸಾ ತಸ್ಯ ದೇವಸ್ಯ ಭಾಸ್ಕರಸ್ಯ ಮಹೌಜಸಃ ॥ ೧೯ ॥**

**ಪರಸ್ಪರಮಥೋಚುಸ್ತೇ ವಿಸ್ಮಯೇನ ತಥಾ ನೃಪ ।**
**ಮಹಾತ್ಮಾಽಯಮಹೋದೇವೋಽದಿತಿಪುತ್ರೋ ದಿವಸ್ಪತಿಃ ॥ ೨೦ ॥**

**ಬೃಹದ್ಭಾನುರ್ಮಹಾತೇಜಾ ಲೋಕದೀಪೋ ವಿಭಾವಸುಃ ।**
**ಯೇನ ಸರ್ವೇ ವಯಂ ತ್ರಾತಾ ನಿಘ್ನತಾ ವಿಪುಲಂ ತಮಃ ॥ ೨೧ ॥**

**ಆರಾಧಯಾಮ ತಂ ಸರ್ವೇ ಗತ್ವಾ ಸ್ಥಾನಾನಿ ಕೃತ್ಸ್ನಶಃ ।**
**ಯೇನ ಸರ್ವೇ ವಯಂ ತಸ್ಯ ಪ್ರಸಾದಾತ್ಸಿದ್ಧಿಮಾಪ್ನುಮಃ ॥ ೨೨ ॥**

**ತದ್ವ್ಯೋಮ ಪೂಜಯಿತ್ವಾ ತು ಪರಯಾ ಶ್ರದ್ಧಯಾ ವಿಭೋಃ ।**
**ಆಮಂತ್ರ್ಯ ತೇ ಮಿಥಃ ಸರ್ವೇ ಗತಾಃ ಪೂಜಾರ್ಥಮಾದರಾತ್ ॥ ೨೩ ॥**

---

ಬ್ರಹ್ಮ, ವಿಷ್ಣು, ರುದ್ರ, ಇವರೆಲ್ಲರೂ ಮಹಾ ಉಜ್ವಲತೆಯುಳ್ಳ ಸೂರ್ಯದೇವನ ದಿವ್ಯ ತೇಜಸ್ಸಿಗೆ ಆಶ್ಚರ್ಯಪಟ್ಟವರಾಗಿ ಅವರು ಆಶ್ಚರ್ಯದಿಂದ ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುವವರಾಗಿ ಅದಿತಿಪುತ್ರನಾದ ದಿವಸ್ಪತಿಯು, ತೇಜಸ್ವಿಯಾದ ದೇವನಾಗಿಯೂ, ಮಹಾತ್ಮನಾಗಿಯೂ ಇದ್ದಾನೆ.

೨೧, ಬೃಹದ್ಭಾನುವೂ, ಮಹಾ ತೇಜಸ್ವಿಯೂ, ಲೋಕಪ್ರಕಾಶಕನೂ, ವಿಭಾವಸುವೂ ಆದ ಅವನು, ಮಹಾತಮಸ್ಸನ್ನು ನಾಶಮಾಡುತ್ತಿರುವನು. ಅವನಿಂದ ನಾವೆಲ್ಲರೂ ರಕ್ಷಿತರಾಗಿದ್ದೇವೆ.

೨೨. "ಇನ್ನು ನಾವೆಲ್ಲರೂ ನಮ್ಮ ಸ್ಥಾನಗಳಿಗೆ ಹೋಗಿ ಅವನನ್ನು ವಿಶೇಷವಾಗಿ ಆರಾಧಿಸೋಣ. ಮತ್ತು ಅವನ ಅನುಗ್ರಹದಿಂದ ಸಿದ್ಧಿಯನ್ನು ಪಡೆಯೋಣ'' ಎಂದು ಹೇಳಿಕೊಂಡರು.

೨೩. ಅಯ್ಯಾ ವಿಭುವೇ! ಕೇಳು; ಬಳಿಕ ಅವರು ಉತ್ಕೃಷ್ಟವಾದ ಶ್ರದ್ಧೆಯಿಂದ ಕೂಡಿ "ನಾನು ಮಾಡುವ ವ್ಯೋಮಪೂಜೆಗೆ ನೀವು ದಯೆಯಿಟ್ಟು ಬರಬೇಕು" ಎಂದು ಒಬ್ಬರನ್ನೊಬ್ಬರು ಆದರದಿಂದ ಆಹ್ವಾನಿಸಿ ಪೂಜೆಗೋಸ್ಕರ ಹೊರಟುಹೋದರು.

ಜಗಾಮ ಪುಷ್ಕರಂ ಬ್ರಹ್ಮಾ ಶಾಲಗ್ರಾಮಂ ಜನಾರ್ದನಃ ।
ವೃಷಧ್ವಜೋ ಗತೋ ವೀರ ಪರ್ವತಂ ಗಂಧಮಾದನಂ ॥ ೨೪ ॥

ತ್ಯಕ್ತ್ವಾ ಮಾನಮಹಂಕಾರಂ ಕುರ್ವಂತಸ್ತಪ ಉತ್ತಮಂ ।
ಆರಾಧಯಂತಿ ತಂ ದೇವಂ ಭಾಸ್ಕರಂ ವಾರಿತಸ್ಕರಂ ॥ ೨೫ ॥

ವ್ಯೋಮ ಕೃತ್ವಾ ಚತುಷ್ಕೋಣಂ ಬ್ರಹ್ಮಾ ನಿತ್ಯಮಪೂಜಯತ್ ।
ಚಕ್ರಾಂಕಿತಂ ಹರಿರ್ನಿತ್ಯಂ ಸಮ್ಯಗ್ವ್ಯೋಮತ್ವಪೂಜಯತ್ ॥ ೨೬ ॥

ಹರೋऽಪಿ ಸತತಂ ವೀರ ತೇಜಸಾ ವಹ್ನಿಸನ್ನಿಭಂ ।
ಅಪೂಜಯತ್ಸದಾ ವೃತ್ತಂ ವ್ಯೋಮ ಭಕ್ತ್ಯಾ ಸಮನ್ವಿತಃ ॥ ೨೭ ॥

ದಿವ್ಯವರ್ಷಸಹಸ್ರಾಂತೇ ಪೂಜಯಂತೋ ದಿವಾಕರಂ ।
ಗಂಧಮಾಲ್ಯೋಪಹಾರೈಸ್ತು ನೃತ್ಯಗೀತಪ್ರವಾದಿತೈಃ ॥ ೨೮ ॥

---

೨೪. ಅವರುಗಳಲ್ಲಿ ಬ್ರಹ್ಮನು ಪುಷ್ಕರಕ್ಷೇತ್ರಕ್ಕೂ, ವಿಷ್ಣುವು ಸಾಲಿಗ್ರಾಮಕ್ಕೂ, ವೃಷಭಧ್ವಜನಾದ ಶಿವನು ಗಂಧಮಾದನ ಪರ್ವತಕ್ಕೂ, ಹೋದರು

೨೫. ಅವರುಗಳು ಅಭಿಮಾನವನ್ನೂ, ಅಹಂಕಾರವನ್ನೂ, ಬಿಟ್ಟು ಉತ್ತಮವಾದ ತಪಸ್ಸನ್ನು ಮಾಡುತ್ತಾ, ದೇವೇಶನೂ ಜಲಶೋಷಕನೂ ಆಗಿರುವ ಭಾಸ್ಕರನನ್ನು ಆರಾಧಿಸತೊಡಗಿದರು.

೨೬. ಬ್ರಹ್ಮನು ಚತುಷ್ಕೋಣಾಕೃತಿಯಾದ ವ್ಯೋಮವನ್ನು ರಚಿಸಿ, ನಿತ್ಯವೂ ಪೂಜಿಸುತ್ತಿದ್ದನು, ಹರಿಯು ಚಕ್ರರೂಪವಾದ ವ್ಯೋಮವನ್ನು ರಚಿಸಿ, ಚೆನ್ನಾಗಿ ಪೂಜಿಸುತ್ತಾ ಇದ್ದನು.

೨೭. ಹರನು ವೃತ್ತಾಕಾರವಾದ ವ್ಯೋಮವನ್ನು ರಚಿಸಿ, ಅಗ್ನಿಸದೃಶವಾದ ತೇಜಸ್ಸುಳ್ಳ ಅದನ್ನು ಭಕ್ತಿಪೂರ್ವಕವಾಗಿ ನಿತ್ಯವೂ ಪೂಜಿಸುತ್ತಿದ್ದನು.

೨೮-೨೯. ಹೀಗೆ ಅವರು ದೇವಮಾನದ ಸಹಸ್ರವರ್ಷದ ಕೊನೆಯವರೆಗೂ ಗಂಧ, ಮಾಲ್ಯ, ಉಪಹಾರ ಇವುಗಳನ್ನು ಸಮರ್ಪಣೆಮಾಡುತ್ತಾ ನೃತ್ಯ ಗೀತವಾದ್ಯಾ

**ಅತೋಷಯನ್ಮಹಾತ್ಮಾನಂ ಕುರ್ವಾಣಸ್ತಪ ಉತ್ತಮಂ ।**
**ಭಕ್ತ್ಯಾಽಚಲೇನ ಮನಸಾ ವಿವಸ್ವಂತಮನುತ್ತಮಂ ॥ ೨೯ ॥**

**ಅಥ ತೇಷಾಂ ಮಹಾರಾಜ ಪ್ರಸನ್ನೋ ಭುವನಾಧಿಪಃ ।**
**ದರ್ಶಯಾಮಾಸ ಲೋಕಾತ್ಮಾ ಯುಗಪದ್ವೈ ವಿಭಾವಸುಃ ॥ ೩೦ ॥**

**ಹೃಷ್ಟಾತ್ಮಾ ಚ ಮಹಾತೇಜಾಶ್ಚತುರ್ಧಾ ಯೋಗತೋಽನಘ ।**
**ಗತ್ವೈಕೇನ ಸುರಜ್ಯೇಷ್ಠಂ ಸೋಽಬ್ರವೀತ್ಪರಮಂ ವಚಃ ॥ ೩೧ ॥**

**ಅನ್ಯೇನ ಶಂಕರಂ ಮನ್ಯೇ ಅನ್ಯೇನ ಗರುಡಧ್ವಜಂ ।**
**ಸ ತತಾಪ ತಥಾನ್ಯೇನ ರಥಾರೂಢೋ ದಿವಂ ಸದಾ ॥ ೩೨ ॥**

**ಏವಂ ಯೋಗಬಲಾದ್ಭಾನುಃ ಕೃತವಾನ್ಮಹದದ್ಭುತಂ ।**
**ಉಗ್ರೇ ತಪಸಿ ವರ್ತಂತಂ ದೃಷ್ಟ್ವಾ ಚೈನಂ ಚತುರ್ಮುಖಂ ॥ ೩೩ ॥**

---

ದಿಗಳ ಸಮೇತ ಭಕ್ತಿಯಿಂದಲೂ, ನಿಶ್ಚಲವಾದ ಮನಸ್ಸಿನಿಂದಲೂ ದಿವಾಕರನನ್ನು ಪೂಜಿಸಿದರು. ಅಲ್ಲದೆ ಉತ್ತಮವಾದ ತಪಸ್ಸನ್ನೂ ಮಾಡುತ್ತಾ, ಮಹಾತ್ಮನೂ ಸರ್ವೋತ್ತಮನೂ ಆದ ಸೂರ್ಯನನ್ನು ಸಂತೋಷಪಡಿಸಿದರು.

೩೦-೩೧. ನಿರ್ದೋಷಿಯಾದ ಎಲೈ ಮಹಾರಾಜನೇ ! ಕೇಳು ; ಲೋಕಾಧಿಪತಿಯೂ, ಪ್ರಸನ್ನನೂ, ಲೋಕಾತ್ಮನೂ, ಮಹಾತೇಜಸ್ವಿಯೂ ಆದ ವಿಭಾವಸುವು (ಸೂರ್ಯನು) ಹರ್ಷಗೊಂಡ ಮನಸ್ಸುಳ್ಳವನೂ, ಪ್ರಸನ್ನನೂ ಆಗಿ; ತಪಸ್ಸನ್ನು ಮಾಡುತ್ತಿದ್ದ ಆ ಮೂವರಿಗೂ ಏಕಕಾಲದಲ್ಲಿ ಕಾಣಿಸಿಕೊಳ್ಳುವ ಉದ್ದೇಶದಿಂದ ಕೂಡಿದವನಾಗಿ, ತಾನು ಯೋಗಶಕ್ತಿಯಿಂದ ತನ್ನನ್ನು ನಾಲ್ಕು ಪ್ರಕಾರವಾಗಿ ಪರಿಣಮಿಸಿಕೊಂಡನು.

೩೨. ಒಂದು ರೂಪಿನಿಂದ ಬ್ರಹ್ಮನ ಸಮೀಪಕ್ಕೂ, ಇನ್ನೊಂದು ರೂಪದಿಂದ ಶಂಕರನ ಬಳಿಗೂ, ಮತ್ತೊಂದು ರೂಪಿನಿಂದ ವಿಷ್ಣುವಿನ ಹತ್ತಿರಕ್ಕೂ. ಹೀಗೆ ಮೂವರಿಗೂ ಏಕಕಾಲದಲ್ಲಿ ಕಾಣಿಸಿಕೊಂಡನು.

೩೩. ಇನ್ನೊಂದಾದ ನಾಲ್ಕನೆಯರೂಪದಿಂದ ಅಂತರಿಕ್ಷದಲ್ಲಿ ರಥಾರೂಢನಾಗಿ ಯಾವಾಗಲೂ ತಪಿಸುತ್ತಿದ್ದನು. ಹೀಗೆ ಸೂರ್ಯನು ತನ್ನ ಯೋಗಬಲದಿಂದ ಮಹಾದ್ಭುತಕಾರ್ಯವನ್ನು ಕೈಕೊಂಡು ಒಂದು ಘೋರವಾದ ತಪಸ್ಸಿನಲ್ಲಿ ನಿರತನಾಗಿದ್ದ ಚತುರ್ಮುಖಬ್ರಹ್ಮನನ್ನು ನೋಡಿದನು.

ಪೂಜಯಂತಂ ಮಹದ್ವ್ಯೋಮ ಭೂಗತೈರ್ಮುಖಪಂಕಜೈಃ ।
ಉವಾಚ ತಂ ಮಹಾರಾಜ ಭಾಸ್ಕರಶ್ಚತುರಾನನಂ ॥ ೩೪ ॥

ಪಶ್ಯ ಪಶ್ಯ ಸುರಶ್ರೇಷ್ಠ ವರದಂ ಮಾಮುಪಾಗತಂ ।
ಶ್ರುತ್ವೈವಂ ವಚನಂ ಭಾನೋರ್ವಿರಂಚಿಸ್ತಮುದೈಕ್ಷತ ॥ ೩೫ ॥

ದೃಷ್ಟ್ವಾ ಜಗಾಮ ಪ್ರಣತೋ ಹ್ಯವನಿಂ ಮುಖಪಂಕಜೈಃ ।
ಹರ್ಷಾದುತ್ಫುಲ್ಲನಯನಃ ಪುನರುತ್ಥಾಯ ಭಾಸ್ಕರಂ ।
ಉವಾಚ ಪರಮಂ ವಾಕ್ಯಂ ಕೃತಾಂಜಲಿಪುಟಃ ಸ್ಥಿತಃ ॥ ೩೬ ॥

॥ ಬ್ರಹ್ಮೋವಾಚ ॥

ನಮಸ್ತೇ ದೇವ ದೇವೇಶ ನಮಸ್ತೇ ತಿಮಿರಾಪಹ ।
ನಮಸ್ತೇ ಭೂತಭವ್ಯೇಶ ಭೂತಾದೇ ಭೂತಭಾವನ ॥ ೩೭ ॥

---

೩೪. ಅವನು ಕಮಲದಂತಿರುವ ನಾಲ್ಕುಮುಖಗಳನ್ನೂ ಭೂಮಿಗೆ ಸೋಕಿಸಿ (ದೀರ್ಘವಾಗಿ ನಮಸ್ಕರಿಸಿ) ಮಹಾವ್ಯೋಮವನ್ನು ಪೂಜಿಸುತಿದ್ದನು. ಅಂತಹ ಬ್ರಹ್ಮನನ್ನು ಕುರಿತು ಸೂರ್ಯನು ಮಾತನಾಡಿಸುವವನಾಗಿ

೩೫. "ಎಲೈ ಸುರಜ್ಯೇಷ್ಠನಾದ ಬ್ರಹ್ಮನೇ! ವರಕೊಡುವುದಕ್ಕಾಗಿ ಬಂದಿರುವ ನನ್ನನ್ನು ನೋಡು. ನನ್ನನ್ನು ನೋಡು" ಎಂದನು. ಸೂರ್ಯನು ಹೀಗೆ ಹೇಳುತ್ತಿರುವುದನ್ನು ಕೇಳಿ ಬ್ರಹ್ಮನು ತಲೆಯೆತ್ತಿ ಅವನನ್ನು ನೋಡಿದನು.

೩೬. ಹಾಗೆ ನೋಡಿ ತನ್ನ ಮುಖಕಮಲವನ್ನು ಭೂಮಿಗೆ ಸೋಕಿಸಿ ಸಾಷ್ಟಾಂಗವಾಗಿ ನಮಿಸಿ, ಸಂತೋಷದಿಂದ ಅರಳಿದ ಕಣ್ಣುಳ್ಳವನಾಗಿ ಪುನಃ ಎದ್ದು ಸೂರ್ಯನನ್ನು ಕುರಿತು ಕೈಮುಗಿದುಕೊಂಡು ಬ್ರಹ್ಮನು ಶ್ರೇಷ್ಠವಾದ ಈ ಮಾತನ್ನು ಹೇಳತೊಡಗಿದನು.

೩೭-೩೮. "ದೇವದೇವೇಶನೇ! ನಮಸ್ಕಾರ. ಅಂಧಕಾರ ನಾಶಕನೇ! ನಮಸ್ಕಾರ. ಭೂತಭವ್ಯಗಳಿಗೆ ಅಧಿಪನಾದವನೇ! ನಿನಗೆ ನಮಸ್ಕಾರ. ಭೂತಗಳಿಗೆ ಆದಿ

ಪ್ರಸಾದಂ ಕುರು ಮೇ ದೇವ ಪ್ರಸನ್ನೋಽಥ ದಿವಾಕರಃ ।
ಗತಿರನ್ಯಾ ನ ಮೇ ದೇವ ವಿದ್ಯತೇ ತ್ವದೃತೇ ವಿಭೋ ॥ ೩೮ ॥

॥ ಆದಿತ್ಯ ಉವಾಚ ॥

ಏವಮೇವ ಯಥಾತ್ಥ ತ್ವಂ ನಾಸ್ತಿ ತತ್ರ ವಿಚಾರಣಾ ।
ತ್ವಂ ಮೇ ಪ್ರಥಮಜಃ ಪುತ್ರಃ ಸಂಭೂತಃ ಕಾರಣಾತ್ಪುರಾ ॥ ೩೯ ॥

ವರಂ ವರಯ ಭದ್ರಂ ತೇ ವರದೋಽಸ್ಮಿ ತವಾಗ್ರತಃ ।
ಯಮಿಚ್ಛಸಿ ಸುರಜ್ಯೇಷ್ಠ ಮಾ ತ್ವಂ ಶಂಕಾಂ ಕುರು ಪ್ರಭೋ ॥ ೪೦ ॥

॥ ಬ್ರಹ್ಮೋವಾಚ ॥

ಯದಿ ಮೇ ಭಗವಾಂಸ್ತುಷ್ಟೋ ದದಾಸಿ ವರಮುತ್ತಮಂ ।
ಕರ್ತುಂ ಶಕ್ನೋಮಿ ಸೃಷ್ಟಿಂ ಚ ಪ್ರಸಾದಾತ್ತವ ಗೋಪತೇ ।
ಕೃತಾಕೃತಾ ಹಿ ಮೇ ದೇವ ಸೃಷ್ಟಿಶ್ಚೇಹ ಪ್ರಸಿದ್ಧ್ಯತಿ ॥ ೪೧ ॥

---

ಯಾದವನೇ, ಭೂತಗಳಿಗೆ ಸ್ಥಿತಿಯನ್ನುಂಟುಮಾಡುವವನೇ! ನಿನಗೆ ನಮಸ್ಕಾರ. ನನ್ನಲ್ಲಿ ಅನುಗ್ರಹಮಾಡು." ಎಂಬದಾಗಿ ಸ್ತುತಿಸಿದ ಮೇಲೆ ಸೂರ್ಯದೇವನು ಪ್ರಸನ್ನನಾದನು. ಆಗ ಮತ್ತೆ "ವಿಭುವೇ! ನಿನ್ನನ್ನು ಬಿಟ್ಟರೆ ನನಗೆ ಗತ್ಯಂತರವಿಲ್ಲ" ಎಂದನು.

೩೯. ಆಗ ಸೂರ್ಯನು ಬ್ರಹ್ಮನನ್ನು ಕುರಿತು "ಅಯ್ಯಾ ಸುರಜ್ಯೇಷ್ಠನೇ! ನೀನು ಹೇಳಿದುದು ಯಥಾರ್ಥ. ಆ ವಿಷಯದಲ್ಲಿ ವಿಚಾರಮಾಡಬೇಕಾದುದೇ ಇಲ್ಲ. ಪೂರ್ವದಲ್ಲಿ ಕಾರಣಾಂತರದಿಂದ ನೀನು ನನಗೆ ಮೊದಲನೆಯ ಮಗನಾದೆ. ಈಗ ನಿನ್ನ ಮುಂದೆ ಬಂದು ವರ ಕೊಡುವುದಕ್ಕೆ ಸಿದ್ಧನಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನಗೆ ಬೇಕಾದ ವರವನ್ನು ಕೇಳು. ಸಂದೇಹಪಡಬೇಡ" ಎಂದನು.

೪೧. ಆಗ ಬ್ರಹ್ಮನು ಸೂರ್ಯನನ್ನು ಕುರಿತು " ಎಲೈ ಭಗವಂತನೇ ! ನೀನು ಸಂತೋಷವಾಗಿ ವರ ಕೊಡುವುದಾದರೆ ನಿನ್ನ ಅನುಗ್ರಹದಿಂದ ನಾನು ಸೃಷ್ಟಿಮಾಡಲು ಶಕ್ತನಾಗುತ್ತೇನೆ. ಹಾಗೆ ಮಾಡಿದ ಸೃಷ್ಟಿಯೂ ಈ ಲೋಕದಲ್ಲಿ ಪ್ರಸಿದ್ಧಿಯಾಗುತ್ತದೆ" ಎಂದನು.

॥ ಆದಿತ್ಯ ಉವಾಚ ॥

ನ ಪುತ್ರತ್ವಮಹಂ ಪ್ರಾಪ್ತಸ್ತವ ದೇವ ಚತುರ್ಮುಖ ।
ತವಾನ್ವಯೇ ಗಮಿಷ್ಯಾಮಿ ಪುತ್ರತ್ವಂ ಹಿ ಮರೀಚಯೇ ॥ ೪೨ ॥

ತತೋ ಯಾಸ್ಯತಿ ತೇ ಸಿದ್ಧಿಂ ಕೃತ್ಸ್ನಾ ಸೃಷ್ಟಿಶ್ಚತುರ್ಮುಖ ।
ಭವಿತೈವಂ ನ ಸಂದೇಹೋ ಮತ್ಪ್ರಸಾದಾಜ್ಜಗತ್ಪತೇ ॥ ೪೩ ॥

ಏವಮುಕ್ತೋ ವಿರಂಚಿಸ್ತು ರವಿಣಾ ಪ್ರಥಿವೀಪತೇ ।
ತಂ ನ್ವೈ ವ್ಯೋಮಂ ವಿವಸ್ವಂತಂ ಲೋಕನಾಥಂ ಜಗತ್ಪತಿಂ ॥ ೪೪ ॥

ಪುನರಾಹ ಸುರಜ್ಯೇಷ್ಠಃ ಪ್ರಣಮ್ಯ ಶಿರಸಾ ರವಿಂ ।
ಕ್ವ ಮೇ ವಾಸೋ ಜಗನ್ನಾಥ ಭವಿಷ್ಯತಿ ದಿವಸ್ಪತೇ ॥ ೪೫ ॥

॥ ಆದಿತ್ಯ ಉವಾಚ ॥

ಯನ್ಮೇ ರೂಪಂ ಮಹದ್ವ್ಯೋಮ ಪೃಷ್ಠಶೃಂಗಮನುತ್ತಮಂ ।
ತತ್ರ ದೇವಕದಂಬೈಸ್ತು ಭವಾನ್ನಿತ್ಯಂ ನಿವತ್ಸ್ಯತಿ ॥ ೪೬ ॥

---

೪೨-೪೩. ಆದಿತ್ಯನು ಮುಂದುವರಿಸಿ ಹೇಳುತ್ತಾ "ಎಲೈ ಚತುರ್ಮುಖ ಬ್ರಹ್ಮನೇ ! ನಾನು ನಿನಗೆ ಮಗನಾಗುವುದಿಲ್ಲ. ನಿನ್ನ ವಂಶದಲ್ಲಿ ಜನಿಸಿದ ಮರೀಚಿಗೆ ಮಗನಾಗುವೆನು. ಆಗ ನಿನ್ನ ಸಮಸ್ತ ಸೃಷ್ಟಿಯೂ ಸಿದ್ಧಿ ಹೊಂದುವುದು. ಓ ಜಗತ್ಪತಿಯೇ! ನನ್ನ ಅನುಗ್ರಹದಿಂದ ಹೀಗೆ ಆಗುವುದು. ಇದರಲ್ಲಿ ಸಂಶಯವಿಲ್ಲ" ಎಂದನು.

೪೪. ಎಲೈ ರಾಜನೇ ! ಕೇಳು ; ಸೂರ್ಯನು ಈ ರೀತಿ ಹೇಳಲಾಗಿ ಬ್ರಹ್ಮನು ಜಗತ್ಪತಿಯೂ, ಲೋಕನಾಥನೂ, ವಿವಸ್ವಂತನೂ, ವ್ಯೋಮಸ್ವರೂಪನೂ, ಆದ ಸೂರ್ಯನಿಗೆ ಶಿರಬಾಗಿ ನಮಸ್ಕರಿಸಿ ಮತ್ತೆ ಹೇಳಿದನು.

೪೫. ಓ ದಿವಸ್ಪತಿಯೇ! ಜಗನ್ನಾಥನೇ! ನಾನು ಎಲ್ಲಿ ವಾಸಿಸಬೇಕು?ಎಂದನು.

೪೬. ಆಗ ಆದಿತ್ಯನು ಬ್ರಹ್ಮನನ್ನು ಕುರಿತು "ನನ್ನ ಸ್ವರೂಪವಾದ ಈ ಮಹಾ ವ್ಯೋಮದ ಹಿಂಭಾಗದ ಸರ್ವೋತ್ತಮವಾದ ಶೃಂಗದಲ್ಲಿ ದೇವಸಮೂಹದೊಡನೆ ನೀನು ಯಾವಾಗಲೂ ವಾಸಿಸು."

ಇಂದ್ರಃ ಪೂರ್ವದಿಶೋ ಭಾಗೇ ಆಗ್ನೇಯ್ಯಾಂ ಶಾಂಡಿಲೀಸುತಃ ।
ದಕ್ಷಿಣಸ್ಯಾಂ ಯಮೋ ನಿತ್ಯಂ ನೈಋತ್ಯಾಮಥ ನಿರ್ಋತಿಃ ॥ ೪೭ ॥

ಪಶ್ಚಿಮಾಯಾಂ ತು ವರುಣೋ ವಾಯವ್ಯಾಂ ತು ಸದಾಗತಿಃ ।
ಉತ್ತರೇ ತು ದಿಶೋ ಭಾಗೇ ನಿವಸೇದ್ಧನದಸ್ತತಃ ॥ ೪೮ ॥

ಐಶಾನ್ಯಾಂ ಶಂಕರೋ ದೇವೋ ಮಧ್ಯೇ ತ್ವಂ ವಿಷ್ಣುನಾ ಸಹ ।
ಶ್ರುತ್ವೈವಂ ವಚನಂ ಭಾನೋರ್ವೇಧಾ ಪ್ರೀತ್ಯಾತಮಬ್ರವೀತ್ ॥ ೪೯ ॥

ಕೃತಕೃತ್ಯಂ ತಥಾತ್ಮಾನಂ ಮನ್ಯತೇ ಚ ನರಾಧಿಪ ।
ಚಕಾರ ಚ ತಥಾ ಸರ್ವಂ ಭಾಸ್ಕರೋಕ್ತಮಶೇಷತಃ ॥ ೫೦ ॥

ಸ ಚ ಸಿದ್ಧಿಂ ಗತೋ ವೀರ ಪ್ರಸಾದಾದ್ಭಾಸ್ಕರಸ್ಯ ತು ।
ಆದಿತ್ಯೋಽಪಿ ವರಂ ದತ್ವಾ ಬ್ರಹ್ಮಣ್ಯೋ ಬ್ರಹ್ಮಣೇಽನಘ ॥ ೫೧ ॥

---

೪೭. " ಆ ಶಿಖರದ ಪೂರ್ವದಿಕ್ಕಿನಲ್ಲಿ ಇಂದ್ರನೂ, ಆಗ್ನೇಯದಲ್ಲಿ ಶಾಂಡಿಲೀ ಸುತನಾದ ಅಗ್ನಿಯೂ, ದಕ್ಷಿಣದಲ್ಲಿ ಯಮನೂ, ನೈಋತ್ಯದಲ್ಲಿ ನಿಋಋತಿಯೂ,"

೪೮. " ಪಶ್ಚಿಮದಲ್ಲಿ ವರುಣನೂ, ವಾಯವ್ಯದಿಕ್ಕಿನಲ್ಲಿ ವಾಯುವೂ, ಉತ್ತರ ದಲ್ಲಿ ಕುಬೇರನೂ, ಈಶಾನ್ಯದಲ್ಲಿ ಈಶ್ವರನೂ ಇರುವರು."

೪೯. ಮಧ್ಯದಲ್ಲಿ ವಿಷ್ಣುಸಮೇತನಾದ ನೀನೂ ಇರು " ಎಂದು ಹೇಳಿದನು. ಸೂರ್ಯನು ಈಪ್ರಕಾರ ಹೇಳಿದ ಮಾತನ್ನು ಕೇಳಿ, ಬ್ರಹ್ಮನು ಪ್ರೀತಿಯಿಂದ ಅವನನ್ನು ಕುರಿತು ಹೇಳತೊಡಗಿದನು.

೫೦. ಅಯ್ಯಾ ರಾಜನೇ ! ಕೇಳು ; ಆಗ ಬ್ರಹ್ಮನು ನಾನು " ಕೃತಾರ್ಥನಾದೆ ನೆಂದು " ವಿಜ್ಞಾಪಿಸಿದನು. ಮತ್ತು ಸೂರ್ಯನು ಹೇಳಿದುದೆಲ್ಲವನ್ನೂ ಅವನು ಹೇಳಿದ ಹಾಗೆಯೇ ಸಮಗ್ರವಾಗಿ ಮಾಡಿದನು.

೫೧-೫೨. ಅಯ್ಯಾ ಪಾಪರಹಿತನೇ! ಈ ರೀತಿ ಅವನು ಭಾಸ್ಕರನ ಅನುಗ್ರಹ ದಿಂದ ಸಿದ್ಧಿಹೊಂದಿದನು. ಬ್ರಹ್ಮಣ್ಯನಾದ ಆದಿತ್ಯನು ಬ್ರಹ್ಮನಿಗೆ ಹೀಗೆ ವರವನ್ನು

ಜಗಾಮ ಸಹ ದೇವೇನ ಪರ್ವತಂ ಗಂಧಮಾದನಂ ।
ದದರ್ಶ ತತ್ರ ಭೂತೇಶಂ ತಪಸ್ತೀವ್ರಂ ಸಮಾಶ್ರಿತಂ ॥ ೩೨ ॥

ಕಪರ್ದಿನಂ ಶೂಲಧರಂ ಚಂದ್ರಾರ್ಧಕೃತಶೇಖರಂ ।
ಪೂಜಯಂತಂ ಪರಂ ವ್ಯೋಮ ಸುವ್ರತಂ ತೇಜಸಾನ್ವಿತಂ ॥ ೩೩ ॥

ಗಂಧಮಾಲ್ಯೋಪಹಾರೈಶ್ಚ ನೃತ್ಯಗೀತಪ್ರವಾದಿತೈಃ ।
ಮುಖವಾದ್ಯೈಶ್ಚ ಬಹ್ವೀಭಿಃ ಪ್ರಣವಸ್ತೋತ್ರಗೀತಿಭಿಃ ॥ ೩೪ ॥

ಸಂಪೂಜ್ಯೈವಂ ಮಹದ್ವ್ಯೋಮ ಜಗಾಮ ಶಿರಸಾ ಮಹೀಂ ।
ದೃಷ್ಟ್ವೈವಂ ಪೂಜಯಂತಂ ಚ ಭಾಸ್ಕರಸ್ತ್ರಿಪುರಾಂತಕಂ ॥
ತುಷ್ಟೋऽವೋಚನ್ಮಹಾತೇಜಾ ಗೋಶ್ರುತಾಭರಣಂ ಹರಂ ॥ ೩೫ ॥

ಭೀಮ ತುಷ್ಟೋऽಸ್ಮಿ ತೇ ವತ್ಸ ವರಂ ಮತ್ತೋ ವೃಣುಷ್ವ ವೈ ।
ತವಾಂತಿಕಮಹಂ ಪ್ರಾಪ್ತೋ ವರದೋ ಭೂಭೃದಾಲಯ ॥ ೩೬ ॥

---

ಕೊಟ್ಟು ದೇವತೆಗಳೊಡನೆ ಹೊರಟು, ಶಿವನು ತಪಸ್ಸುಮಾಡುತ್ತಿದ್ದ ಗಂಧಮಾದನ ಪರ್ವತಕ್ಕೆ ಬಂದನು.

೩೩. ಅಲ್ಲಿ ಶ್ರೇಷ್ಠವಾದ ವ್ಯೋಮವನ್ನು ಪೂಜಿಸುತ್ತಾ, ತೀವ್ರವಾಗಿ ತಪಸ್ಸು ಮಾಡುತ್ತಿರುವನೂ. ಸುವ್ರತನೂ, ತೇಜಸ್ವಿಯೂ, ಭೂತೇಶನೂ, ಚಂದ್ರಶೇಖರನೂ, ಶೂಲಧರನೂ, ಕಪರ್ದಿಯೂ ಆದ ಶಿವನನ್ನು ಕಂಡನು.

೩೪. ಆಗ ಶಿವನು ಗಂಧಪುಷ್ಪ, ನೈವೇದ್ಯ ಮೊದಲಾದುವನ್ನು ಸಮರ್ಪಿಸಿ ನೃತ್ಯ, ಗೀತ, ವಾದ್ಯವಾದನಗಳಿಂದಲೂ, ಅನೇಕ ಸ್ತೋತ್ರ, ಗೀತ (ಗಾನ) ಪ್ರಣವ ಇವುಗಳಿಂದಲೂ ಮಹತ್ತಾದ ವ್ಯೋಮವನ್ನು ಪೂಜಿಸಿ, ತಲೆಯನ್ನು ನೆಲದ ಮೇಲೆ ಚಾಚಿ ನಮಸ್ಕರಿಸುತ್ತಿದ್ದನು.

೩೫. ಮಹಾತೇಜಸ್ವಿಯಾದ ಆ ಭಾಸ್ಕರನು, ಹೀಗೆ ಪೂಜಿಸುತ್ತಿರುವ ಸರ್ಪ ಭೂಷಣನೂ. ತ್ರಿಪುರಾಂತಕನೂ ಆದ ಹರನನ್ನು ನೋಡಿ, ಸಂತುಷ್ಟನಾಗಿ ಹೇಳಿದನು

೩೬. "ಕೈಲಾಸವಾಸಿಯೂ, ವತ್ಸನೂ ಆದ ಎಲೈ ಭೀಮೇಶನೇ! ವರಕೊಡು ವುದಕ್ಕೋಸ್ಕರ ನಾನು ನಿನ್ನ ಬಳಿಗೆ ಬಂದಿದ್ದೇನೆ. ನಿನ್ನ ಆರಾಧನೆಯಿಂದ ಸಂತುಷ್ಟ ನಾದೆನು. ಬೇಕಾದ ವರವನ್ನು ಕೇಳಿಕೋ" ಎಂದನು.

ಶ್ರುತ್ವೈವಂ ವಚನಂ ಭಾನೋರ್ಮಹಾದೇವೋ ಮಹೀಪತೇ ।
ದದರ್ಶ ಲೋಕನಾಥಂ ತಂ ಪ್ರಜ್ವಲಂತಮನುತ್ತಮಂ ॥ ೫೭ ॥

ಉವಾಚ ಪ್ರಣತೋ ಭೂತ್ವಾ ಅಷ್ಟಾಂಗೈರ್ಭೂತಲಂ ಗತಃ ।
ನಮೋ ನಮಸ್ತೇ ದೇವೇಶ ಪ್ರಭಾಕರ ದಿವಾಕರ ॥
ಶುಭಾಲಯ ಶುಭಾಧಾರ ವಿಕರ್ತನ ಶುಭಾನನ ॥ ೫೮ ॥

ಪ್ರಸಾದಂ ಕುರು ದೇವೇಶ ಪ್ರಸನ್ನಸ್ತ್ವಂ ವಿಕರ್ತನ ।
ಸಂಸಾರಾರ್ಣವಮಗ್ನಸ್ಯ ಭವ ಪೋತೋ ಜಗತ್ಪತೇ ॥ ೫೯ ॥

ತವಾಂಗಸಂಭವೋ ದೇವ ಪುತ್ರೋಽಹಂ ವಲ್ಲಭಸ್ತವ ।
ಯತ್ಕರೋತಿ ಮಹಾದೇವ ಪಿತಾ ಪುತ್ರಸ್ಯ ತತ್ಕುರು ॥ ೬೦ ॥

॥ ಆದಿತ್ಯ ಉವಾಚ ॥

ಏವಮೇತನ್ನ ಸಂದೇಹೋ ಯಥಾ ವದಸಿ ಶಂಕರಂ ।
ಲಲಾಟಾತ್ತ್ವಂ ಸಮುತ್ಪನ್ನಃ ಪುತ್ರಃ ಪುತ್ರವತಾಂ ವರ ॥ ೬೧ ॥

---

೫೭. ಸೂರ್ಯನ ಈ ಮಾತನ್ನು ಕೇಳಿ ಮಹಾದೇವನು ಕತ್ತೆತ್ತಿ ನೋಡಿ,ಪ್ರಜ್ವಲಿಸುತ್ತಿರುವವನೂ, ಸರ್ವೋತ್ತಮನೂ, ಲೋಕನಾಥನೂ, ಆದ ಆ ಸೂರ್ಯನನ್ನು ಕಂಡನು.

೫೮-೫೯. ಕೂಡಲೆ ಅಷ್ಟಾಂಗಗಳನ್ನು ಭೂಮಿಗೆ ಸೋಕಿಸಿ ನಮಸ್ಕಾರ ಮಾಡಿ ಹೇಳಿದನು. "ಓ ದೇವೇಶನೇ! ಪ್ರಭಾಕರನೇ, ದಿವಾಕರನೇ ನಿನಗೆ ನಮಸ್ಕಾರ, ಶುಭವಾದ ವಾಸಸ್ಥಾನವುಳ್ಳವನೇ! ಶುಭಗಳಿಗೆ ಆಧಾರನೇ! ವಿಕರ್ತನನೇ! ಶುಭಕರವಾದ ಮುಖವುಳ್ಳವನೇ! ದೇವೇಶನಾದ ವಿಕರ್ತನನೇ! ಪ್ರಸನ್ನನಾಗಿ ನೀನು ನನ್ನನ್ನು ಅನುಗ್ರಹಮಾಡು. ಓ ಜಗತ್ಪತಿಯೇ! ಸಂಸಾರಸಮುದ್ರದಲ್ಲಿ ಮುಳುಗಿರುವ ನನಗೆ ಹರಿಗೋಲಾಗು. (ದಾಟುವ ಸಾಧನನಾಗು.) ನಾನು ನಿನ್ನ ಅಂಗಸಂಭವನಾದ ಪುತ್ರನೂ, ಪ್ರಿಯನೂ ಆಗಿದ್ದೇನೆ. ತಂದೆಯು ಮಗನಾದವನಿಗೆ ಏನೇನುಮಾಡಬಹುದೋ ಅದನ್ನೆಲ್ಲಾ ನೀನೂ ನನಗೆ ಮಾಡು" ಎಂದನು.

೬೧. ಆಗ ಆದಿತ್ಯನು ಶಂಕರನನ್ನು ಕುರಿತು "ಪುತ್ರವಂತರಲ್ಲಿ ಶ್ರೇಷ್ಠನಾದ ಶಂಕರನೇ! ನೀನು ಹೇಳಿದುದೆಲ್ಲಾ ಸರಿ. ಸಂಶಯವಿಲ್ಲ. ನೀನು ನನ್ನ ಹಣೆಯಿಂದ ಹುಟ್ಟಿದ ಪುತ್ರನಾಗಿದ್ದೀ.

ವರಂ ವರಯ ಭದ್ರಂ ತೇ ಮನಸಾ ತ್ವಂ ಯದಿಚ್ಛಸಿ ।
ಅದೇಯಂ ಚಾಪಿ ತೇ ದಾಸ್ಯೇ ತ್ರಿಪುರಾಂತಕ ಶಂಕರ ॥ ೬೨ ॥

॥ ಮಹಾದೇವ ಉವಾಚ ॥

ಯದಿ ತುಷ್ಟೋಽಸಿ ಮೇ ದೇವ ಅನುಗ್ರಾಹ್ಯೋಽಸ್ಮಿ ತೇ ಯದಿ ।
ಪ್ರಯಚ್ಛ ಮೇ ವರಂ ಭಾನೋ ದೇಹಿ ಭಕ್ತಿಂ ಮಮಾಚಲಾಂ ॥ ೬೩ ॥

ದೇವದಾನವಗಂಧರ್ವಯಕ್ಷರಕ್ಷೋಗಣಾಂಸ್ತಥಾ ।
ನಿರ್ಜಿತ್ಯಾಹಂ ಯಥಾ ದೇವ ಯುಗಾಂತೇ ಸಂಹರೇ ಪ್ರಜಾಂ ॥ ೬೪ ॥

ತಥಾ ಪ್ರಯಚ್ಛ ಮೇ ದೇವ ಸ್ಥಾನಂ ಚ ಪರಮಂ ವಿಭೋ ।
ಯೇನಾಹಂ ಹೇತಿಸರ್ವಂ ಚ ಜಯ ದೇವ ಜಗತ್ಪ್ರಭೋ ॥ ೬೫ ॥

---

೬೨. "ಓ ತ್ರಿಪುರಾಂತಕಾ! ಶಂಕರಾ! ನಿನ್ನ ಮನಸ್ಸಿಗೆ ಬೇಕಾದ ವರಗಳನ್ನು ಕೇಳು. ಸಾಮಾನ್ಯವಾಗಿ ಕೊಡುವುದಕ್ಕೆ ಸಾಧ್ಯವಾಗದುದಾದರೂ, ಅದನ್ನೂ ಸಹ ನಿನಗೆ ಕೊಟ್ಟುಬಿಡುತ್ತೇನೆ" ಎಂದನು.

೬೩. ಆಗ ಮಹಾದೇವನು ಸೂರ್ಯನನ್ನು ಕುರಿತು " ಸೂರ್ಯದೇವಾ! ನೀನು ಸಂತುಷ್ಟನಾಗಿದ್ದು ನನ್ನಲ್ಲಿ ನೀನು ಅನುಗ್ರಹಮಾಡುವವನಾದರೆ, ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿಯಿರುವಂತೆ ವರವನ್ನು ಕೊಡು."

೬೪. ದೇವರು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪನ್ನಗರು, ಇವರನ್ನೆಲ್ಲಾ ಆಕ್ರಮಿಸಿ ಪ್ರಳಯಕಾಲದಲ್ಲಿ ಪ್ರಾಣಿಗಳನ್ನೆಲ್ಲಾ ಸಂಹರಿಸುವಂತೆ ವರವನ್ನು ಕೊಡು."

೬೫. ಓವಿಭುವೇ! ಹೀಗೆ ನನಗೆ ವರವನ್ನು ಕೊಡುವುದಲ್ಲದೆ ವಾಸಕ್ಕೆ ಶ್ರೇಷ್ಠವಾದ ಸ್ಥಾನವನ್ನೂ ಕೊಡು, ಎಲೈ ಜಗತ್ಪ್ರಭುವಾದ ದೇವನೇ! ಹೀಗೆ ನೀನು ವರ ಕೊಟ್ಟರೆ ಸಮಸ್ತಆಯುಧಧಾರಿಗಳನ್ನೂ ಗೆಲ್ಲುವೆನು" ಎಂದನು.

॥ ಆದಿತ್ಯ ಉವಾಚ ॥
ದೇವದಾನವಗಂಧರ್ವಯಕ್ಷರಾಕ್ಷಸಪನ್ನಗಾನ್ ।
ಹರಿಷ್ಯಸಿ ಜಗಚ್ಚಾಪಿ ಯುಗಾಂತೇ ತ್ರಿಪುರಾಂತಕ ॥ ೬೬ ॥

ಯದೇತತ್ಪೂಜಿತಂ ನಿತ್ಯಂ ಮದ್ರೂಪಂ ವ್ಯೋಮ ಚೋತ್ತಮಂ ।
ಏತತ್ತ್ರಿಶೂಲಂ ಪರಮಂ ತವ ಶಸ್ತ್ರಂ ಭವಿಷ್ಯತಿ ॥
ಈಶಾನೇ ಚ ತಥಾ ಭಾಗೇ ವ್ಯೋಮ್ನೋ ವಾಸೋ ಭವಿಷ್ಯತಿ ॥ ೬೭ ॥

॥ ಮಹಾದೇವ ಉವಾಚ ॥
ಏವಂ ಭವತು ಮೇ ದೇವ ಯಃ ಪ್ರಸಾದಸ್ತ್ವಯಾ ಕೃತಃ ।
ಕೃತ ಕೃತ್ಯೋಽಸ್ಮಿ ದೇವೇಶ ಯನ್ಮೇ ದೇವೋ ವರಪ್ರದಃ ॥ ೬೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸೌರಧರ್ಮ ನಿರೂಪಣಂ ನಾಮ ಪಂಚಪಂಚಾಶದುತ್ತರ ಶತತಮೋಽಧ್ಯಾಯಃ.

---

೬೬. ಆಗ ಆದಿತ್ಯನು ಶಂಕರನನ್ನು ಕುರಿತು "ಅಯ್ಯಾ ತ್ರಿಪುರಾಂತಕಾ! ದೇವರು, ದಾನವರು, ಗಂಧರ್ವರು, ಯಕ್ಷರು, ರಾಕ್ಷಸರು, ಪನ್ನಗರು ಇವರುಗಳನ್ನೂ ಮತ್ತು ಸಮಸ್ತ ಜಗತ್ತನ್ನೂ ಪ್ರಳಯಕಾಲದಲ್ಲಿ ನಾಶಮಾಡುತ್ತೀಯೆ.

೬೭. ವ್ಯೋಮಾತ್ಮಕವಾದ ನನ್ನ ರೂಪವನ್ನು ನೀನು ಪೂಜಿಸಿದ ಕಾರಣ, ಈ ಶ್ರೇಷ್ಠವಾದ ತ್ರಿಶೂಲವೇ ನಿನಗೆ ಆಯುಧವಾಗಲಿ. ವ್ಯೋಮದ ಈಶಾನ್ಯಭಾಗವು ನಿನ್ನ ವಾಸಸ್ಥಾನವಾಗುವುದು" ಎಂದನು.

೬೮. ಬಳಿಕ ಮಹಾದೇವನು ಆದಿತ್ಯನನ್ನು ಕುರಿತು "ಎಲೈ ದೇವಾ! ನೀನು ಅನುಗ್ರಹಿಸಿದಂತೆಯೇ ಆಗಲಿ. ಎಲೈ ದೇವೇಶಾ! ಸ್ವಾಮಿಯಾದ ನೀನು ನನಗೆ ವರ ಕೊಟ್ಟಿದ್ದರಿಂದ ನಾನು ಕೃತಾರ್ಥನಾದೆನು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೌರಧರ್ಮ ನಿರೂಪಣವೆಂಬ ನೂರಐವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ಪಂಚಾಶದುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಥಂ ದತ್ವಾ ವರಂ ಭಾನುರೀಶ್ವರಾಯ ವಿಶಾಂಪತೇ ।
ಶಾಲಗ್ರಾಮಂ ಜಗಾಮಾಶು ವರಂ ದಾತುಂ ಹರೇರ್ನೃಪ ॥ ೧ ॥

ದದರ್ಶ ಸ ಹರಿಂ ತತ್ರ ತಪಂತಂ ಪರಮಂ ತಪಃ ।
ಕೃಷ್ಣಾಜಿನಧರಂ ಶಾಂತಂ ಪ್ರಜ್ವಲಂತಂ ಸ್ವತೇಜಸಾ ॥ ೨ ॥

ಪೂಜಯಂತಂ ಮಹದ್ವ್ಯೋಮ ಚಕ್ರಾಕಾರಮನೂಪಮಂ ।
ಗಂಧಮಾಲ್ಯೋಪಹಾರೈಶ್ಚ ನೃತ್ಯಗೀತಪ್ರವಾದಿತೈಃ ॥ ೩ ॥

---

### ನೂರಐವತ್ತಾರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು "ಎಲೈ ರಾಜನೇ! ಸೂರ್ಯನು ಹೀಗೆ ಈಶ್ವರನಿಗೆ ವರವನ್ನು ಕೊಟ್ಟಾದಮೇಲೆ, ನಾರಾಯಣನಿಗೆ ವರವನ್ನು ಕೊಡುವುವಕ್ಕಾಗಿ, ಸಾಲಗ್ರಾಮಕ್ಕೆ ಜಾಗ್ರತೆಯಾಗಿ ಹೋದನು.

೨. ಅಲ್ಲಿ ಉತ್ಕೃಷ್ಟವಾಗಿ ತಪಸ್ಸುಮಾಡುತ್ತಿರುವ ಹರಿಯನ್ನು ಕಂಡನು. ಅವನು ಕೃಷ್ಣಾಜಿನವನ್ನು ಧರಿಸಿ ಶಾಂತನಾಗಿ ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು.

೩. ಮತ್ತು ಚಕ್ರಾಕೃತಿಯುಳ್ಳ ಮಹಾವ್ಯೋಮವನ್ನು ಪೂಜಿಸುತ್ತಿದ್ದನು. ಅದು ಅಸದೃಶವಾಗಿದ್ದಿತು. ಗಂಧಮಾಲ್ಯೋಪಹಾರಗಳಿಂದಲೂ, ನೃತ್ಯಗಾನಗಳ ವೈಭವದಿಂದಲೂ ಪೂಜೆ ನಡೆಯುತ್ತಿತ್ತು.

ಏವಂ ಸಂಪೂಜ್ಯ ತದ್ವ್ಯೋಮ ಭಕ್ತಿ ಶ್ರದ್ಧಾಸಮನ್ವಿತಃ ।
ಜಗಾಮ ಶಿರಸಾ ಭೂಮಿಂ ಹೃದಿ ಧ್ಯಾಯನ್ ದಿವಾಕರಂ ॥ ೪ ॥

ವಿಷ್ಣುಂ ತಂ ಪ್ರಣತಂ ದೃಷ್ಟ್ವಾ ತುಷ್ಟೋ ದೇವೋ ವಿಭಾವಸುಃ ।
ಉವಾಚ ವಿಷ್ಣುಮಾಮಂತ್ರ್ಯ ಪಶ್ಯ ಮಾಮಾಗತಂ ಹರೇ ॥ ೫ ॥

ತದ್ವಾಕ್ಯಂ ಕೇಶವಃ ಶ್ರುತ್ವಾ ಶಿರಸಾ ಚ ಮಹೀಂ ಗತಃ ।
ನಮಸ್ತೇ ಸರ್ವದೇವೇಶ ನಮಸ್ತೇ ಗಗನೇಚರ ॥ ೬ ॥

ಜಗತ್ಪತೇ ನಮಸ್ತೇಽಸ್ತು ಗ್ರಹಾಣಾಂ ಪತಯೇ ನಮಃ ।
ದಾರಿದ್ರ್ಯವ್ಯಾಧಿದುಃಖಘ್ನ ನಮಸ್ತೇ ಭವನಾಶನ ॥ ೭ ॥

ಆದಿತ್ಯಾರ್ಕ ರವೇ ಭಾನೋ ಭಗ ಪೂರ್ಣ ದಿವಾಕರ ।
ನಮಸ್ತೇ ಸರ್ವತತ್ವಜ್ಞ ಸರ್ವಪಾಪವಿವರ್ಜಿತ ॥ ೮ ॥

---

೪. ಹೀಗೆ ಭಕ್ತಿಶ್ರದ್ಧೆಗಳಿಂದ ಕೂಡಿ, ಆ ವ್ಯೋಮದೇವತೆಗೆ ಚೆನ್ನಾಗಿ ಪೂಜೆ ಮಾಡಿ, ಮನಸ್ಸಿನಲ್ಲಿ ದಿವಾಕರನನ್ನು ಧ್ಯಾನಮಾಡುತ್ತಾ, ಸಾಷ್ಟಾಂಗವಾಗಿ ನಮಸ್ಕಾರ ಮಾಡುತ್ತಿದ್ದನು.

೫. ಸೂರ್ಯದೇವನು ಹೀಗೆ ನಮಸ್ಕರಿಸುತ್ತಿದ್ದ ವಿಷ್ಣುವನ್ನು ನೋಡಿ ಸಂತುಷ್ಟನಾಗಿ, ಅವನನ್ನು ಕುರಿತು "ಎಲೈ ಹರಿಯೇ! ಇಗೋ ನಾನು ಬಂದಿದ್ದೇನೆ; ನೋಡು." ಎಂದನು.

೬. ಆಗ ಕೇಶವನು ಆ ಮಾತನ್ನು ಕೇಳಿ ತಲೆಯನ್ನು ಭೂಮಿಗೆ ಮುಟ್ಟಿಸಿ ನಮಸ್ಕರಿಸಿ "ಎಲೈ ಸರ್ವದೇವೇಶನೇ! ನಿನಗೆ ನಮಸ್ಕಾರ. ಎಲೈ ಆಕಾಶಸಂಚಾರಿಯೇ ನಿನಗೆ ನಮಸ್ಕಾರ."

೭. "ಎಲೈ ಜಗತ್ಪತಿಯೇ! ನಿನಗೆ ನಮಸ್ಕಾರ. ಗ್ರಹಾಧಿಪತಿಯೇ! ನಿನಗೆ ನಮಸ್ಕಾರ. ದಾರಿದ್ರ್ಯ, ವ್ಯಾಧಿ ಇವುಗಳ ದುಃಖಗಳನ್ನು ಹೋಗಲಾಡಿಸುವವನೇ! ಸಂಸಾರನಾಶಕನೇ! ನಿನಗೆ ನಮಸ್ಕಾರ."

೮. "ಓ ಆದಿತ್ಯನೇ, ಅರ್ಕನೇ, ರವಿಯೇ, ಭಾನುವೇ, ಭಗನೇ, ಪೂರ್ಣನೇ, ದಿವಾಕರನೇ, ಸರ್ವತತ್ವಜ್ಞನೇ, ಸರ್ವಪಾಪವಿವರ್ಜಿತನೇ ನಿನಗೆ ನಮಸ್ಕಾರ."

ಪ್ರಸೀದ ಮೇ ಜಗನ್ನಾಥ ಹಂಸಾನಘ ದಿವಸ್ಪತೇ ।
ಸಂಸಾರಾರ್ಣವಮಗ್ನಾನ್ನಃ ತ್ರಾಹಿ ದೇವ ವೃಷಧ್ವಜ ॥ ೯ ॥

ಪುತ್ರೋಽಹಂ ತವ ದೇವೇಶ ದ್ವಿತೀಯೋ ಬ್ರಾಹ್ಮಣೋಽನಘ ।
ಪಿತೇವ ಪುತ್ರಸ್ಯ ರವೇ ದೇಹಿ ಕಾಮಾನ್ ಜಗತ್ಪತೇ ॥ ೧೦ ॥

ವಿಷ್ಣೋರ್ವಚನಮಾಕರ್ಣ್ಯ ಹರ್ಷಂ ಪ್ರಾಪ್ಯ ದಿವಾಕರಃ ।
ಉವಾಚ ಕುರುಶಾರ್ದೂಲ ಹರ್ಷಗದ್ಗದಯಾ ಗಿರಾ ॥ ೧೧ ॥

ಸಾಧು ಕೃಷ್ಣ ಮಹಾಬಾಹೋ ತುಷ್ಟೋಽಹಂ ತವ ಕೇಶವ ।
ನಿಶಮ್ಯ ತೇ ಪರಾಂ ಭಕ್ತಿಂ ಶ್ರದ್ಧಾಂ ಚ ಪುರುಷೋತ್ತಮ ॥ ೧೨ ॥

ವರಂ ವರಯ ತಸ್ಮಾತ್ತ್ವಂ ವತ್ಸ ಯಂ ಮನಸೇಚ್ಛಸಿ ।
ವರದೋಽಹಮನುಪ್ರಾಪ್ತೋ ಭಕ್ತ್ಯಾಕ್ರಾಂತಸ್ತವಾನಘ ॥ ೧೩ ॥

---

೯. ಓ ಜಗನ್ನಾಥನೇ, ಹಂಸನೇ ಪ್ರಸನ್ನನಾಗು. ಎಲೈ ಧರ್ಮಧ್ವಜನಾದ ದೇವನೇ! ಸಂಸಾರ ಸಮುದ್ರದಲ್ಲಿ ಮುಳುಗಿದ ನನ್ನನ್ನು ರಕ್ಷಿಸು."

೧೦. "ಎಲೈ ದೇವೇಶನೇ; ನಾನು ನಿನ್ನ ಎರಡನೆಯ ಮಗ, ಬ್ರಾಹ್ಮಣನು. ಜಗತ್ಪತಿಯಾದ ರವಿಯೇ! ತಂದೆಯು ಮಗನ ಇಷ್ಟವನ್ನು ಹೇಗೆ ಸಲ್ಲಿಸುವನೋ ಹಾಗೆ ನೀನು ನನಗೆ ಇಷ್ಟಾರ್ಥಗಳನ್ನು ಕೊಡು" ಎಂದನು.

೧೧. ಅಯ್ಯಾ ಕುರುಶ್ರೇಷ್ಠನೇ! ಕೇಳು. ವಿಷ್ಣುವಿನ ಈ ವಚನವನ್ನು ಕೇಳಿ, ಸೂರ್ಯನು ಸಂತೋಷವನ್ನು ಹೊಂದಿ, ಹರ್ಷಗದ್ಗದವಾದ ವಾಣಿಯಿಂದ ಹೇಳ ತೊಡಗಿದನು.

೧೨. "ಅಯ್ಯಾ ಮಹಾಬಾಹುವೂ, ಪುರುಷೋತ್ತಮನೂ ಆದ ಕೇಶವಾ! ಕೃಷ್ಣಾ! ನಿನ್ನ ಉತ್ತಮವಾದ ಭಕ್ತಿಯನ್ನೂ, ಶ್ರದ್ಧೆಯನ್ನೂ ನೋಡಿ ನಿನ್ನ ವಿಷಯ ದಲ್ಲಿ ನಾನು ಸಂತುಷ್ಟನಾಗಿದ್ದೇನೆ."

೧೩. "ವತ್ಸಾ! ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಕೇಳು. ಎಲೈ ನಿರ್ದೋಷಿಯೇ! ನಿನ್ನ ಭಕ್ತಿಗೆ ವಶನಾದ ನಾನು ನಿನಗೆ ವರವನ್ನು ಕೊಡುವುದಕ್ಕಾಗಿ ಬಂದಿದ್ದೇನೆ" ಎಂದನು.

ನಿಶಮ್ಯ ವಚನಂ ಭಾನೋರ್ವಿಷ್ಣುರ್ಭಕ್ತ್ಯಾ ಸಮನ್ವಿತಃ ।
ಕೃತಾಂಜಲಿಪುಟೋ ಭೂತ್ವಾ ಇದಂ ವಚನಮಬ್ರವೀತ್ ॥ ೧೪ ॥

ಕೃತಕೃತ್ಯೋಽಸ್ಮಿ ದೇವೇಶ ನಾಸ್ತಿ ಧನ್ಯತರೋ ಮಮ ।
ಯಸ್ಯ ಮೇ ಭಗವಾಂಸ್ತುಷ್ಟೋ ವರದಸ್ತ್ವಾಗತಃ ಸ್ವಯಂ ॥ ೧೫ ॥

ಯದಿ ತುಷ್ಟೋ ಮಮ ವಿಭುರ್ಭಕ್ತ್ಯಾ ಪ್ರೀತೋ ಮಯಾ ಯದಿ ।
ಪ್ರಯಚ್ಛತ್ವಚಲಾಂ ಭಕ್ತಿಂ ಯಥಾ ಶತ್ರುಂ ಪರಾಜಯೇ ।
ತಥಾ ಮಮ ವರಂ ದೇಹಿ ಸರ್ವಾರಾತಿವಿನಾಶನಂ ॥ ೧೬ ॥

ಮಮ ಸ್ಥಾನಂ ಚ ಪರಮಂ ಸರ್ವಲೋಕನಮಸ್ಕೃತಂ ।
ಲೋಕಾನಾಂ ಪಾಲನೇ ಯುಕ್ತಿಂ ಬಲಂ ವೀರ್ಯಂ ಯಶಃ ಸುಖಂ ॥ ೧೭ ॥

ಏವಮುಕ್ತೋ ರವಿರ್ಭಕ್ತ್ಯಾ ವಿಷ್ಣುನಾ ವಾಕ್ಯಮುತ್ತಮಂ ।
ಉವಾಚ ಕುರುಶಾರ್ದೂಲ ಜಗತ್ಸನ್ನಾದಯನ್ನಿವ ॥ ೧೮ ॥

---

೧೪. ವಿಷ್ಣುವು ಭಾನುವಿನ ಈ ಮಾತನ್ನು ಕೇಳಿ, ಭಕ್ತಿಯಿಂದ ಕೂಡಿ ಕೈಮುಗಿದುಕೊಂಡು “ ಎಲೈ ದೇವಾ! ನಾನು ಕೃತಾರ್ಥನಾದೆನು.”

೧೫. “ಎಲೈ ಭಗವಂತನೇ! ನೀನು ಸಂತುಷ್ಟನಾಗಿ ನನಗೆ ವರಕೊಡುವುದಕ್ಕೆ ಸಾಕ್ಷಾತ್ತಾಗಿ ಬಂದಿದ್ದೀಯೆ. ನನಗಿಂತಲೂ ಪುಣ್ಯಶಾಲಿಗಳು ಉಂಟೆ ?”

೧೬. “ಸ್ವಾಮಿಯಾದ ನೀನು ನನ್ನಲ್ಲಿ ಸಂತುಷ್ಟನಾಗಿ, ನನ್ನ ಭಕ್ತಿಯಿಂದ ನಿಜವಾಗಿ ವಶೀಕೃತನಾಗಿದ್ದರೆ, ನಾನು ಸಮಸ್ತ ಶತ್ರುಗಳನ್ನೂ ಸೋಲಿಸುವ ಹಾಗೆ ವರಕೊಡು. ಮತ್ತು ನಿನ್ನಲ್ಲಿ ಅಚಲವಾದ ಭಕ್ತಿಯನ್ನು ಕೊಡು.”

೧೭. “ನನಗೆ ಸರ್ವಲೋಕ ನಮಸ್ಕೃತವೂ, ಶ್ರೇಷ್ಠವೂ ಆದ ಒಂದು ಸ್ಥಾನವನ್ನು ಕೊಡು. ಲೋಕವನ್ನು ರಕ್ಷಿಸುವ ಕಾರ್ಯಕ್ಕೆ ಬೇಕಾದ ಯುಕ್ತಿಯನ್ನೂ, ಬಲವನ್ನೂ, ವೀರ್ಯವನ್ನೂ, ಯಶಸ್ಸನ್ನೂ, ಸುಖವನ್ನೂ ಕೊಡು” ಎಂದು ಕೇಳಿಕೊಂಡನು.

೧೮. ಅಯ್ಯಾ ಕುರುವಂಶಶ್ರೇಷ್ಠನೇ! ಕೇಳು; ವಿಷ್ಣುವು ಭಕ್ತಿಯಿಂದ ಸೂರ್ಯನಿಗೆ ಹೀಗೆ ಹೇಳಲು, ಸೂರ್ಯನು ಜಗತ್ತನ್ನೇ ತುಂಬಿಸುವಂತಹ ಧ್ವನಿಯಿಂದ ಕೂಡಿ,

ಸಾಧು ಸಾಧು ಮಹಾಬಾಹೋ ಬ್ರಹ್ಮಣಸ್ತ್ವಂ ಜಘನ್ಯಜಃ ।
ಹರಸ್ಯ ಅಗ್ರಜಶ್ಚಾಪಿ ಸರ್ವದೇವನಮಸ್ಕೃತಃ ॥ ೧೯ ॥

ಭಕ್ತಶ್ಚಾಪಿ ಮಮಾತ್ಯಂತಂ ಬ್ರಹ್ಮಣ್ಯಶ್ಚ ಸದಾನಘ ।
ತಸ್ಮಾತ್ತ್ವಾಚಲಾ ಭಕ್ತಿರ್ಭವಿಷ್ಯತಿ ಮಮೋಪರಿ ॥ ೨೦ ॥

ಏತದೇವ ಮಹದ್ವ್ಯೋಮ ಚಕ್ರಂ ತೇ ಪ್ರಭವಿಷ್ಯತಿ ।
ಸರ್ವಾಯುಧವರಂ ವೀರ ಸರ್ವಾರಾತಿವಿನಾಶನಂ ।
ತಥಾ ಸ್ಥಾನಂ ಚ ಪರಮಂ ಸರ್ವಲೋಕನಮಸ್ಕೃತಂ ॥ ೨೧ ॥

ಇತ್ಥಂ ಭಾನೋರ್ವರಂ ಪ್ರಾಪ್ಯ ಹರಿರ್ದೇವೋ ಜಗತ್ಪತಿಃ ।
ಮಹಾಪ್ರಸಾದ ಇತ್ಯುಕ್ತ್ವಾ ಜಗಾಮ ಶಿರಸಾ ಮಹೀಂ ॥ ೨೨ ॥

ಭಾಸ್ಕರೋಽಪಿ ವರಂ ದತ್ವಾ ಕೇಶವಾಯಾಮಿತೌಜಸೇ ।
ಜಗಾಮಾಶು ಮಹಾರಾಜ ಸ್ವಪುರಂ ವಿಬುಧಾಧಿಪಃ ॥ ೨೩ ॥

---

೧೯. "ಎಲೈ ಮಹಾಬಲಶಾಲಿಯೇ! ಶಹಬಾಸ್, ಸರ್ವದೇವ ನಮಸ್ಕೃತನಾದ ನೀನು ಬ್ರಹ್ಮನಿಗೆ ತಮ್ಮನೂ ಹರನಿಗೆ ಅಣ್ಣನೂ, ಆಗಿರುವೆ.

೨೦. "ಎಲೈ ನಿರ್ದೋಷಿಯೇ! ನೀನು ನನಗೆ ಅತ್ಯಂತ ಭಕ್ತನೂ, ಬ್ರಹ್ಮಣ್ಯನೂ ಆಗಿದ್ದೀಯೆ. ಆದುದರಿಂದ ನನ್ನಲ್ಲಿ ನಿನಗೆ ನಿಶ್ಚಲವಾದ ಭಕ್ತಿಯುಂಟಾಗುವುದು."

೨೧. "ಈ ಮಹಾವ್ಯೋಮವೇ ನಿನಗೆ ಚಕ್ರಾಯುಧವಾಗಿ ಪರಿಣಮಿಸುವುದು. ಎಲೈ ವೀರನೇ! ಇದು ಸಮಸ್ತ ಆಯುಧಗಳಲ್ಲಿ ಶ್ರೇಷ್ಠವಾಗಿಯೂ, ಸರ್ವಶತ್ರು ವಿನಾಶಕವಾಗಿಯೂ ಇರುವುದು. ಹಾಗೂ ನಿನಗೆ ಸರ್ವಲೋಕ ನಮಸ್ಕೃತವೂ, ಶ್ರೇಷ್ಠವೂ ಆದ ಸ್ಥಾನವುಂಟಾಗುವುದು" ಎಂಬದಾಗಿ ಶ್ರೇಷ್ಠವಾದ ಮಾತನ್ನಾಡಿದನು.

೨೨. ಭಾನುವಿನಿಂದ ವರವನ್ನು ಪಡೆದು, ಜಗತ್ಪತಿಯಾದ ವಿಷ್ಣುವು "ಮಹಾಪ್ರಸಾದ" ಎಂಬದಾಗಿ ಹೇಳಿ ತಲೆಯನ್ನು ನೆಲದಲ್ಲಿಟ್ಟು ಸೂರ್ಯನಿಗೆ ನಮಿಸಿದನು.

೨೩-೨೪. ವಿಬುಧಾಧಿಪನಾದ ಸೂರ್ಯನು, ಅಮಿತಪರಾಕ್ರಮಿಯಾದ ಕೇಶವನಿಗೆ, ಲೋಕವನ್ನು ಪಾಲಿಸುವ ಶಕ್ತಿ, ಬಲ, ವೀರ್ಯ, ಯಶಸ್ಸು, ಸುಖ ಇವನ್ನೂ,

ಲೋಕಾನಾಂ ಪಾಲನೇ ಶಕ್ತಿಂ ಬಲಂ ವೀರ್ಯಂ ಯಶಃ ಸುಖಂ ।
ದತ್ವಾ ಕೃಷ್ಣಾಯ ದೇವೇಶಸ್ತಥಾನ್ಯದಪಿ ಕಾಂಕ್ಷಿತಂ ॥ ೨೪ ॥

ಏವಂ ಬ್ರಹ್ಮಾದಯೋ ದೇವಾ ಪೂಜಯಿತ್ವಾ ದಿವಾಕರಂ ।
ಶಕ್ತಿಮಂತೋ ಬಭೂವುಸ್ತೇ ಸರ್ಗಾದೀನಾಂ ಪ್ರವರ್ತನೇ ॥ ೨೫ ॥

ಇತಿ ತೇ ಕಥಿತಂ ಪುಣ್ಯಮಾಖ್ಯಾನಂ ಪಾಪನಾಶನಂ ।
ತ್ರಿದೈವತ್ಯಮುಪಾಖ್ಯಾನಂ ತ್ರೈಸುರಂ ಲೋಕಪೂಜಿತಂ ॥ ೨೬ ॥

ಸ್ತೋತ್ರತ್ರಯಸಮಾಯುಕ್ತಂ ಧರ್ಮಕಾಮಾರ್ಥಸಾಧನಂ ।
ಧರ್ಮ್ಯಂ ಸ್ವರ್ಗ್ಯಂ ತಥಾ ಪುಣ್ಯ ಮಾರೋಗ್ಯಧನಧಾನ್ಯದಂ ॥ ೨೭ ॥

ಯ ಇದಂ ಶೃಣುಯಾನ್ನಿತ್ಯಂ ಪಠೇತ್ ಸ್ತೋತ್ರತ್ರಯಂ ಚ ಯಃ ।
ಸೋಽಗ್ನೇಯಂ ಯಾನಮಾರೂಢೋ ಯಾತಿ ಭಾನೋಃ ಪರಂ ಪದಂ
॥ ೨೮ ॥

---

ಅವನಿಗೆ ಇಷ್ಟವಾದ ಇನ್ನೂ ಇತರ ವರಗಳನ್ನೂ ಕೊಟ್ಟು, ತಾನು ಜಾಗ್ರತೆ ತನ್ನ ನಿವಾಸಕ್ಕೆ ಹೋದನು.

೨೫. ಹೀಗೆ ಬ್ರಹ್ಮ, ವಿಷ್ಣು, ಶಂಕರ ಮೊದಲಾದ ದೇವತೆಗಳು ಸೂರ್ಯನನ್ನು ಪೂಜಿಸಿ, ಅವನಿಂದ ವರಪಡೆದು ಸೃಷ್ಟಿ ಮೊದಲಾದುವನ್ನು ಮಾಡುವುದಕ್ಕೆ ಶಕ್ತರಾದರು.

೨೬–೨೭. ಹೀಗೆ ಪಾಪನಾಶಕವಾದುದೂ; ಸ್ತೋತ್ರತ್ರಯದಿಂದ ಕೂಡಿದುದೂ; ಧರ್ಮ, ಕಾಮ, ಅರ್ಥಗಳಿಗೆ ಸಾಧಕವಾದುದೂ; ಧರ್ಮವನ್ನು ಮೀರದುದೂ, ಸ್ವರ್ಗಪ್ರದವಾದುದೂ, ಪುಣ್ಯಕರವಾದುದೂ, ಆರೋಗ್ಯ, ಧನ ಧಾನ್ಯ ಇವುಗಳನ್ನು ಕೊಡತಕ್ಕುದೂ, ಲೋಕಪೂಜಿತವಾದುದೂ, ತ್ರಿಮೂರ್ತಿಗಳಿಗೆ ಸಂಬಂಧಪಟ್ಟುದೂ ಆದ, ತ್ರೈಸುರವೆಂಬ ಈ ಉಪಾಖ್ಯಾನವನ್ನು ನಿನಗೆ ಹೇಳಿದ್ದೇನೆ.

೨೮. ಈ ಸ್ತೋತ್ರತ್ರಯವನ್ನು ಯಾವನು ಪಠನಮಾಡುವನೋ, ಯಾವನು ಶ್ರವಣಮಾಡುವನೋ, ಅವನು ಆಗ್ನೇಯವೆಂಬ ಯಾನವನ್ನು ಏರಿಕೊಂಡು ಶ್ರೇಷ್ಠವಾದ ಸೂರ್ಯಲೋಕಕ್ಕೆ ಹೋಗುವನು.

ಅಪುತ್ರೋ ಲಭತೇ ಪುತ್ರಮಧನೋ ಧನಮಶ್ನುತೇ ।
ವಿದ್ಯಾರ್ಥೀ ಲಭತೇ ವಿದ್ಯಾಂ ಪ್ರಸಾದಾದ್ಭಾಸ್ಕರಸ್ಯ ತು ।
ತೇಜಸಾ ರವಿಸಂಕಾಶಃ ಪ್ರಭಯಾ ಪೃಶ್ನಿ ಸನ್ನಿಭಃ ॥ ೨೯ ॥

ಮೋದತೇ ಸುಚಿರಂ ಕಾಲಂ ಜ್ಞಾನಿನಾಮುತ್ತಮೋ ಭವೇತ್ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೌರಧರ್ಮೇ ತ್ರ್ಯೈಸುರೋಪಾಖ್ಯಾನ ವರ್ಣನಂ ನಾಮ
ಷಟ್‌ಪಂಚಾಶದುತ್ತರ ಶತತಮೋಽಧ್ಯಾಯಃ.



೨೯. ಸೂರ್ಯನು ಪ್ರಸನ್ನನಾದರೆ ಪುತ್ರಹೀನನು ಪುತ್ರನನ್ನೂ, ಧನಹೀನನು ಧನವನ್ನೂ ವಿದ್ಯಾಹೀನನು ವಿದ್ಯೆಯನ್ನೂ ಹೊಂದುತ್ತಾನೆ.

೩೦. ಅಲ್ಲದೆ ಅವನು ತೇಜಸ್ಸಿನಿಂದ ಕೂಡಿ ಸೂರ್ಯನಿಗೆ ಸಮನಾಗಿ ಹೊಳೆಯುವನು. ಪ್ರಭೆಯಿಂದ ಕೂಡಿ ಪೃಶ್ನಿಗೆ (ಅಲ್ಪತನುವಿಗೆ) ಸಮನಾಗಿ ಬಹುಕಾಲದ ವರೆಗೆ ಸಂತೋಷದಿಂದಿದ್ದು ಜ್ಞಾನಿಗಳಲ್ಲೆಲ್ಲಾ ಉತ್ತಮನಾಗುವನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸೌರಧರ್ಮದಲ್ಲಿ ತ್ರ್ಯೈಸುರೋಪಾಖ್ಯಾನವೆಂಬ ನೂರೈವತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಏತನ್ಮೇ ಕೌತುಕಂ ಬ್ರಹ್ಮನ್ ಯದ್ವರಂ ಬ್ರಹ್ಮಣೇ ರವಿಃ ।
ದತ್ತವಾಂಸ್ತವ ಪುತ್ರತ್ವಮನ್ವಯೇ ಕಶ್ಯಪಸ್ಯ ತು ॥ ೧ ॥

ಯಾಸ್ಯಾಮಿ ದ್ವಿಜಶಾರ್ದೂಲ ಪ್ರಸನ್ನತಿಮಿರಾಪಹಃ ।
ಏತನ್ಮೇ ಮಹದಾಶ್ಚರ್ಯಂ ಶಂಸ ಭೂಮಿಂ ಕಥಂ ವ್ರಜೇತ್ ॥ ೨ ॥

ದೇವಾದೀನಾಂ ಪ್ರಣೇತಾ ಯೋ ಯೋ ಭುವಿ ಪ್ರಸವೋ ವಿಭುಃ ।
ಸ ಕಥಂ ಭೂತಲೇ ವ್ಯೋಮ ಜನ್ಮಭಾವಂ ಗಮಿಷ್ಯತಿ ॥ ೩ ॥

---

## ನೂರಐವತ್ತೇಳನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿಗಳನ್ನು ಕೇಳುತ್ತಾನೆ—ಎಲೈ ಬ್ರಾಹ್ಮಣೋತ್ತಮನಾದ ಸುಮಂತುವೇ! ಸೂರ್ಯನು ಬ್ರಹ್ಮನ ಸಂಗಡ "ನಿನ್ನ ವಂಶದಲ್ಲಿ ಕಶ್ಯಪನ ಪುತ್ರನಾಗಿ ಜನಿಸುವೆ"ನೆಂದು ವರವನ್ನು ಕೊಟ್ಟುದು ನನಗೆ ಆಶ್ಚರ್ಯವಾಗಿದೆ.

೨. "ಎಲೈ ಬ್ರಾಹ್ಮಣಶ್ರೇಷ್ಠನೇ! ತಮೋನಾಶಕನೂ, ಬ್ರಹ್ಮನಿಗೆ ಅನುಗ್ರಹವನ್ನು ಮಾಡತಕ್ಕವನೂ, ಆದ ಸೂರ್ಯನು ಭೂಮಿಗೆ ಹೇಗೆ ಬರುವನು ? ಮಹದಾಶ್ಚರ್ಯಕರವಾದ ಇದನ್ನು ನನಗೆ ಹೇಳು. ತಿಳಿದುಕೊಳ್ಳುತ್ತೇನೆ."

೩. "ಯಾವನು ದೇವಾದಿಗಳಿಗೆ ಆದ್ಯಪ್ರೇರಕನೋ, ಯಾವನು ಭೂಲೋಕದಲ್ಲಿ ಸೃಷ್ಟಿಗೆ ಕಾರಣನೋ, ಅಂಥ ವ್ಯೋಮರೂಪನು ಭೂಮಿಯಲ್ಲಿ ಹೇಗೆ ಜನ್ಮವನ್ನು ಹೊಂದುತ್ತಾನೆ ?

ಕಿಮರ್ಥಂ ದಿವ್ಯಮಾತ್ಮಾನಂ ಜನ್ಮನೇ ಸ ನಿಯೋಕ್ಷ್ಯತಿ ।
ಯಶ್ಚಕ್ರಂ ವರ್ತಯತ್ಯೇಕೋ ಬ್ರಹ್ಮಾದೀನಾಂ ಮನೋರಮಂ ॥ ೪ ॥

ಸ ಜನ್ಮನಿ ಕಥಂ ಪುಣ್ಯಾಂ ಬುದ್ಧಿಂ ಚಕ್ರೇ ವಿದಾಂವರ ।
ಗೋಪಾಯನಂ ಯತ್ಕುರುತೇ ಜಗತಃ ಸರ್ವದಾ ಹಿತಂ ॥ ೫ ॥

ಗೋಭಿಃ ಪಾಲಯತೇ ಕೃತ್ಸ್ನಮಾತ್ಮನೋ ಯಃ ಸ್ವಯಂ ರವಿಃ ।
ಮಹಾಭೂತಾನಿ ಭೂತಾತ್ಮಾ ಯಶ್ಚಕಾರ ದಧಾರ ಚ ॥ ೬ ॥

ಅಗರ್ಭಃ ಸ ಕಥಂ ಗರ್ಭಮುದರೇ ಕಾಂಕ್ಷತೇ ವಿಭುಃ ।
ಯೇನ ಗೋಭಿಃ ಸಮಾಕ್ರಾಂತಾ ವಿಪ್ರ ಲೋಕಾಶ್ಚತುರ್ದಶ ॥ ೭ ॥

ಸ್ಥಾಪಿತಾ ಜಗತೋ ಮಾರ್ಗಾಸ್ತ್ರಿವರ್ಗಪ್ರವರಾಸ್ತ್ರಯಃ ।
ಯೋऽಂತ ಕಾಲೇ ಜಗತ್ಪೀತ್ವಾ ಕೃತ್ವಾ ವಜ್ರಮಯಂ ವಪುಃ ॥ ೮ ॥

---

೪. "ಅಯ್ಯಾ ಜ್ಞಾನಿಶ್ರೇಷ್ಠನೇ! ಬ್ರಹ್ಮಾದಿದೇವತೆಗಳ ಸಮೂಹವನ್ನು ತಾನೊಬ್ಬನೇ ಅವರವರ ಕಾರ್ಯದಲ್ಲಿ ಮನೋಹರವಾಗಿ ವರ್ತಿಸುವಂತೆ ಮಾಡಲು ಅರ್ಹನಾಗಿ, ದೇವಲೋಕದಲ್ಲಿರಬೇಕಾದ ತನ್ನ ದೇಹವನ್ನು, ಅವನು ಭೂಮಿಯಲ್ಲಿ ಜನಿಸುವುದಕ್ಕೆ ಏತಕ್ಕೆ ನಿಯೋಗಮಾಡುತ್ತಾನೆ?"

೫. "ಜಗತ್ತಿಗೆ ಸರ್ವದಾಹಿತವಾಗುವಂತೆ ತನ್ನ ಕಿರಣದಿಂದ ಸ್ವಂತವಾಗಿ ಪಾಲನವಮಾಡುವ ಪುಣ್ಯಕರವಾದ ಬುದ್ಧಿಯುಳ್ಳವನು ಜನ್ಮವೆತ್ತುವುದಕ್ಕೆ ಹೇಗೆ ಸಮ್ಮತಿಪಟ್ಟನು?"

೬. "ಸೂರ್ಯನು ತಾನೇ ತನ್ನ ಕಿರಣಗಳಿಂದ ಸಮಸ್ತವಾದ ಜಗತ್ತನ್ನೂ ಪಾಲನಮಾಡುವನು. ಭೂತಾತ್ಮನಾದ ಆ ಸೂರ್ಯನು ಮಹಾಭೂತಗಳನ್ನು ಸೃಷ್ಟಿ ಮಾಡಿಯೂ ಧರಿಸಿಯೂ ಇರುವನು."

೭. "ಅಯ್ಯಾ ವಿಪ್ರನೇ! ಹೀಗೆ ಯಾವ ಗರ್ಭಕ್ಕೂ ಸಂಬಂಧಪಡದ ಆ ವಿಭುವು ಇನ್ನೊಬ್ಬರ ಉದರದಲ್ಲಿ ಗರ್ಭಗತನಾಗಿರುವುದಕ್ಕೆ ಹೇಗೆ ಅಪೇಕ್ಷಿಸಿದನು. ತನ್ನ ಕಿರಣಗಳಿಂದ ಹದಿನಾಲ್ಕು ಲೋಕಗಳನ್ನು ಕೂಡ ಆಕ್ರಮಿಸುತ್ತಿರತಕ್ಕವನು.

೮-೯. ತ್ರಿವರ್ಗ ಸಾಧನೆಗೆ ಶ್ರೇಷ್ಠಗಳಾಗಿರುವ ಮೂರುಮಾರ್ಗಗಳನ್ನೂ, ಜಗತ್ತನ್ನೂ ಸ್ಥಾಪಿಸುವವನೂ, ಪ್ರಳಯಕಾಲದಲ್ಲಿ ವಜ್ರಮಯವಾದ ಶರೀರವನ್ನು

ಲೋಕಮೇಕಾರ್ಣವಂ ಚಕ್ರೇ ದೃಶ್ಯತೇ ಸ್ವೇನ ಕರ್ಮಣಾ ।
ಯಃ ಪುರಾಣೇ ಪುರಾಣಾತ್ಮಾ ತೇಜಸಾಂ ರೂಪಮಾಶ್ರಿತಃ ॥ ೯ ॥

ಅಪಿ ಸೃಷ್ಟ್ವಾ ದ್ವಿಜಶ್ರೇಷ್ಠ ಯಃ ಸಸರ್ಜ ವಸುಂಧರಾಂ ।
ಚಕಾರ ಚ ಪುರಾ ಯಶ್ಚ ತ್ರೈಲೋಕ್ಯಮಿದಮವ್ಯಯಃ ॥ ೧೦ ॥

ದದೌ ಕೃತ್ವಾ ವಸುಮತೀಂ ಸುರಾಣಾಂ ಸುರಸತ್ತಮಃ ।
ಯಃ ಸ್ಥಿತೋಽಹ್ಯನಲಂ ಪೀತ್ವಾ ಸಂವತ್ಸರಮಯಶ್ಚ ಯಃ ॥ ೧೧ ॥

ಪಾತಾಲಸ್ಥೋಽರ್ಣವರಸಂ ಮಧ್ಯತೋಽಯಮಯಂ ಹವಿಃ ।
ಸಹಸ್ರಶಿರಸಂ ದೇವಂ ಸಹಸ್ರಾಕ್ಷಂ ಸಹಸ್ರಗುಂ ।
ಸಹಸ್ರಚರಣಂ ಬ್ರಹ್ಮನ್ ಯಮಾಹುರ್ವೈ ಯುಗೇ ಯುಗೇ ॥ ೧೨ ॥

ಮುಖಾದ್ಯಸ್ಯ ಸಮುತ್ಪನ್ನೋ ವೇಧಾ ಲೋಕಪಿತಾಮಹಃ ।
ಹರಿಶ್ಚ ವಕ್ಷಸೋ ಯಸ್ಯ ಲಲಾಟಾದ್ಯಸ್ಯ ಶಂಕರಃ ॥ ೧೩ ॥

---

ಮಾಡಿಕೊಂಡು ಜಗತ್ತನ್ನು ನಾಶಮಾಡುವವನೂ, ಆದ ಈ ಸೂರ್ಯನು ತನ್ನ ವ್ಯಾಪಾರದಿಂದ ಲೋಕಗಳನ್ನೆಲ್ಲಾ ಕೇವಲ ಜಲಮಯವಾಗಿ ಮಾಡಿ, ಅತಿ ಪುರಾಣಪುರುಷನಾದ ತಾನು ಮಾತ್ರ, ತೇಜೋರೂಪವಾಗಿ ಕಾಣಿಸಿಕೊಳ್ಳುತ್ತಾ ಇರುವನು.

೧೦. ಅಲ್ಲದೆ ಭೂಮಿಯನ್ನು ಮೊದಲು ಸೃಷ್ಟಿಸಿ ಅನಂತರ ನಾಶರಹಿತನಾದ ಈ ಪುರುಷನು ಮೂರುಲೋಕಗಳನ್ನೂ ನಿರ್ಮಿಸಿದನು.

೧೧. ದೇವಶ್ರೇಷ್ಠನಾದ ಇವನು, ಹಾಗೆ ನಿರ್ಮಿಸಿದ ಭೂಮಿಯನ್ನು ದೇವತೆಗಳಿಗೆ ಕೊಟ್ಟನು. ತಾನು ಅಗ್ನಿಯನ್ನು ಪಾನಮಾಡಿ ಅಗ್ನಿಗರ್ಭನಾಗಿ ಸಂವತ್ಸರಸ್ವರೂಪನಾಗಿರುವನು.

೧೨. ಅಲ್ಲದೆ ಪಾತಾಳದಲ್ಲಿದ್ದ (ಸಮುದ್ರ ರಸವನ್ನು) ಅಮೃತವನ್ನು ಪಾನಮಾಡುವನು. ಮಧ್ಯಲೋಕದಲ್ಲಿ ಕೊಡುವ ಹವಿಸ್ಸನ್ನೂ ಸಹ ಪಾನಮಾಡುವನು. ಈ ದೇವನು ಪ್ರತಿಯುಗದಲ್ಲಿಯೂ ಸಾವಿರತಲೆಗಳುಳ್ಳವನು, ಸಾವಿರನೇತ್ರಗಳುಳ್ಳವನು, ಸಹಸ್ರಕಿರಣಗಳುಳ್ಳವನು, ಸಹಸ್ರಚರಣಗಳುಳ್ಳವನು ಆಗುವನು ಎಂದು ಹೇಳುವರು

೧೩. ಈ ಮಹಾಪುರುಷನ ಮುಖದಲ್ಲಿ ಲೋಕಪಿತಾಮಹನಾದ ಬ್ರಹ್ಮನೂ, ವೃಕ್ಷಸ್ಥಳದಲ್ಲಿ ವಿಷ್ಣುವೂ, ಹಣೆಯಲ್ಲಿ ಶಂಕರನೂ ಹುಟ್ಟಿದರು. ಈ ಮಹಾಪುರುಷನು

ಯೇನ ತೇ ನಿಹತಾ ದೈತ್ಯಾ ಮಂದೇಹಾ ನಾಮ ನಾಮತಃ ।
ಬ್ರಹ್ಮಾದೀನಾಂ ದುರಾಧರ್ಷೋ ಯಃ ಸದಾ ವಿಘ್ನನಾಶನಃ ॥ ೧೪ ॥

ಸರ್ವದೇವಮಯಂ ಕೃತ್ವಾ ಸರ್ವಾಯುಧಧರಂ ವಪುಃ ।
ಏಕಚಕ್ರರಥಾರೂಢೋ ಗರುಡಾಗ್ರಜಸಾರಥಿಃ ॥ ೧೫ ॥

ಕರೋತಿ ಯೋ ಜಗತ್ಸರ್ವಂ ಸಹ ದಾನವರಾಕ್ಷಸಂ ।
ಪ್ರಕಾಶತಮಮಸ್ಪೃಷ್ಟಂ ವಪುರ್ಯಸ್ಯ ಸದಾ ದ್ವಿಜ ॥ ೧೬ ॥

ಪೂರ್ವಾಂ ದಿಶಂ ಗತೋ ನಿತ್ಯಂ ಉದಯಾಚಲಮಾಕ್ರಮಂ ।
ನಾಶಯೇದ್ಯಸ್ತು ಸತತಂ ತಮೋ ಲೋಕಸ್ಯ ಶಾಂತಯೇ ॥ ೧೭ ॥

ನಾಶಯಿತ್ವಾ ತಮೋ ಯಸ್ತು ಕ್ರಿಯಾಃ ಸರ್ವಾ ಪ್ರವರ್ತಯೇತ್ ।
ಯೋಕ್ತ್ರಾಣಿ ದಕ್ಷಿಣಾದೀಕ್ಷ್ಯ ಮುಸಲೋಲೂಖಲಾನಿ ಚ ॥ ೧೮ ॥

---

ಮಂದೇಹರೆಂದು ಪ್ರಸಿದ್ಧರಾದ ದೈತ್ಯರನ್ನು ನಾಶಮಾಡುವವನೂ, ಯಾವಾಗಲೂ ಜನರ ವಿಘ್ನಗಳನ್ನು ನಾಶಮಾಡುವವನೂ, ಬ್ರಹ್ಮಾದಿಗಳಿಗೂ ಗೋಚರಿಸಲಸಾಧ್ಯನೂ ಆಗಿದ್ದಾನೆ.

೧೪-೧೫. ಸಮಸ್ತ ಆಯುಧಗಳನ್ನೂ ಧರಿಸಿ, ಸಮಸ್ತ ದೇವಮಯನಾಗಿರುವ ಈ ಮಹಾಪುರುಷನು ಒಂದೇ ಚಕ್ರದ ರಥವನ್ನೇರಿ ಅರುಣನನ್ನು ಸಾರಥಿಯನ್ನಾಗಿ ಮಾಡಿಕೊಂಡಿರುವವನು,

೧೬. ದಾನವರು ರಾಕ್ಷಸರು ಇವರಿಂದ ಕೂಡಿದ ಸಮಸ್ತ ಜಗತ್ತನ್ನೂ ಇವನು ಪ್ರಕಾಶಗೊಳಿಸುವವನು, ಆದರೆ ಇವನ ಶರೀರ ಮಾತ್ರ ಇನ್ನೊಬ್ಬರ ತೇಜಸ್ಸಿನ ಸ್ಪರ್ಶ ಹೊಂದುವುದಲ್ಲ.

೧೭. ಯಾವಾಗಲೂ ಪೂರ್ವದಿಕ್ಕಿನಲ್ಲಿರುವ ಉದಯಾಚಲವನ್ನೇರಿ ಕತ್ತಲೆಯನ್ನು ನಾಶಪಡಿಸಿ, ಲೋಕಕ್ಕೆ ಶಾಂತಿಕೊಡತಕ್ಕವನೂ, ತಮಸ್ಸನ್ನು ನಾಶಮಾಡಿ, ಯಾವಾಗಲೂ ಸರ್ವಕಾರ್ಯಗಳನ್ನೂ ನಡೆಸುಯಿವವನೂ ಆಗಿದ್ದಾನೆ.

೧೮-೧೯. ದಕ್ಷಿಣಾಗ್ನಿಗೆ ಸಂಬಂಧಿಸಿದ ಕರ್ಮಗಳಲ್ಲಿ ಉಪಯೋಗಿಸಲ್ಪಡುವ ಮುಸಲ ಉಲೂಖಲಗಳನ್ನೂ ಗಾರ್ಹಪತ್ಯವಿಧಿಯಲ್ಲಿ ಹೇಳಿರುವಂತೆ ಅದಕ್ಕೆ ಅನು

ಗಾರ್ಹಪತ್ಯೇನ ವಿಧಿನಾ ತದ್ವದ್ಧಾರ್ಯೇಣ ಕರ್ಮಣಾ ।
ಅಗ್ನಿಮಾಹವನೀಂ ಚೈವ ವೇದೀಂ ಚೈವ ಕುಶಂ ಸ್ರುಚಂ ।
ಪ್ರೋಕ್ಷಣೀಯವ್ರತಂ ಚೈವ ಅವಭೃಥಂ ತಥೈವ ಚ ॥ ೧೯ ॥

ಸರ್ವಾನಿಮಾಂಶ್ಚ ಯಶ್ಚಕ್ರೇ ಹವ್ಯಭಾಗಪ್ರದಾನ್ಮುಖೇ ।
ಹವ್ಯಾದಾಂಶ್ಚ ಸುರಾನ್ಯಜ್ಞೇ ಕವ್ಯಾದಾಂಶ್ಚ ಪಿತೄನಪಿ ॥ ೨೦ ॥

ಭಾಗಾರ್ಥೇ ಮಧು ಧಾಸಾಯ ಚಕ್ರೇ ಯೋ ಯಜ್ಞಕರ್ಮಣಿ ।
ಪೂಷಾಣಂ ಚ ಸುತಂ ಸೋಮಂ ಪವಿತ್ರಾಮರಣೀಮಪಿ ॥ ೨೧ ॥

ಯಜ್ಞೀಯಾನಿ ಚ ದ್ರವ್ಯಾಣಿ ಯಜ್ಞಾಂಶ್ಚಾಪಿ ಸ ಋತ್ವಿಜಃ ।
ಸದಸ್ಯಾನ್ಯಜಮಾನಾಂಶ್ಚ ಮೇಧಾವಿನಸ್ತಥೋತ್ತಮಾನ್ ॥ ೨೨ ॥

ವಿಬಭಾಜ ಪುರಾ ಸರ್ವಂ ಪಾರಮೇಷ್ಠ್ಯೇನ ಕರ್ಮಣಾ ।
ಯುಗಾನುರೂಪಂ ಯಃ ಕೃತ್ವಾ ಲೋಕಾನನುವರಂ ಕ್ರಮಾತ್ ॥ ೨೩ ॥

---

ಗುಣವಾದ ಕರ್ಮಗಳನ್ನೂ, ಆವಹವನೀಯಾಗ್ನಿಯನ್ನೂ, ವೇದಿ, ಕುಶ, ಸ್ರುಕ್ ಇವನ್ನೂ, ಪ್ರೋಕ್ಷಣೀಯ ವ್ರತವನ್ನೂ, ಅವಭೃಥವನ್ನೂ ಸಹ ಸೃಜಿಸಿದನು. ಇವು ಹವಿರ್ಭಾಗವನ್ನು ಸಮರ್ಪಿಸಲು ಸಹಕಾರಿಗಳಾಗಿವೆ.

೨೦. ಹವ್ಯಭಾಗಪ್ರದವಾದ ಇವೆಲ್ಲವನ್ನೂ ಯಜ್ಞದಲ್ಲಿ ಹವ್ಯವನ್ನು ಭುಜಿಸುವ ದೇವತೆಗಳನ್ನೂ, ಕವ್ಯಭೋಜಿಗಳಾದ ಪಿತೃಗಳನ್ನೂ ಮುಖದಲ್ಲಿ ಸೃಷ್ಟಿಸಿದನು.

೨೧. ಮತ್ತು ಸೋಮಯಾಗದಲ್ಲಿ ದೇವತೆಗಳ ಯಜ್ಞಭಾಗಕ್ಕಾಗಿ, ಸೋಮ ರಸರೂಪವಾದ ಮಧುವನ್ನೂ, ಪೂಷನೆಂಬ ದೇವತೆಯನ್ನೂ, ಪರಿಶುದ್ಧವಾದ ಅರಣಿ ಯನ್ನೂ ಕೂಡ ಸೃಷ್ಟಿಸಿದನು.

೨೨. ಯಜ್ಞಕ್ಕೆ ಬೇಕಾದ ದ್ರವ್ಯಗಳನ್ನೂ, ಋತ್ವಿಕ್ಕುಗಳಿಂದ ಕೂಡಿದ ಯಜ್ಞಗಳನ್ನೂ, ಸದಸ್ಯರನ್ನೂ, ಯಜಮಾನರನ್ನೂ, ಹಾಗೂ ಉತ್ತಮರಾದ ಮೇಧಾವಿಗಳನ್ನೂ ಸೃಷ್ಟಿಸಿದನು.

೨೩. ಪಾರಮೇಷ್ಠ್ಯಕರ್ಮದಿಂದ ಎಂದರೆ ಬ್ರಹ್ಮನಿಗೆ ಸಂಬಂಧಪಟ್ಟ ವ್ಯಾಪಾರ ವನ್ನು ಅನುಸರಿಸಿ, ಎಲ್ಲವನ್ನೂ ವಿಭಾಗಮಾಡಿದನು. ಪೂರ್ವದಲ್ಲಿ ಆಯಾಯ ಯುಗಗಳಿಗೆ ತಕ್ಕಂತೆ ಕ್ರಮವಾಗಿ ಎಲ್ಲಾ ಲೋಕಗಳನ್ನೂ ಸೃಜಿಸಿದನು.

ಕ್ಷಣಾನ್ ಕಲಾಶ್ಚ ಕಾಷ್ಠಾಶ್ಚ ಕಾಲವೈಕಲ್ಯಮೇವ ಚ ।
ಮುಹೂರ್ತಾಸ್ತಿಥಯೋ ಮಾಸಾಃ ಪಕ್ಷಾಃ ಸಂವತ್ಸರಾಸ್ತಥಾ ॥ ೨೪ ॥

ಋತವಃ ಕಾಲಯೋಗಾಶ್ಚ ಪ್ರಮಾಣಂ ವಿವಿಧಂ ನೃಷು ।
ಆಯುಃ ಕ್ಷೇತ್ರಾದ್ಯಪಚಯೋಪಚಯಾಂಶ್ಚೈವಯೋಽಕರೋತ್ ॥ ೨೫ ॥

ಸೃಷ್ಟ್ವಾ ಲೋಕಾಸ್ತ್ರಯೋಽನಂತಾ ಯೇನ ಜ್ಞಾನೇನ ವರ್ತ್ಮನಾ ।
ಸರ್ವಭೂತಗಣಾಃ ಸೃಷ್ಟಾಃ ಸರ್ವಭೂತಾತ್ಮನಾ ಸದಾ ॥ ೨೬ ॥

ಪ್ರಣಾಮತ್ರಯಪೂರ್ವೇಣ ಯೋಗೇನ ರಮತೇ ಚ ಯಃ ।
ಯೋ ಗತಾಗತಿಪೋತೇನ ತ್ರಾತಾಸ್ತಿ ಜಗದೀಶ್ವರಃ ॥ ೨೭ ॥

ಯೋ ಗತಿರ್ವೃಷಯುಕ್ತಾನಾಂ ಗತಿರ್ಯೋಽಪಾಪಕರ್ಮಣಾಂ ।
ಚಾತುರ್ವರ್ಣ್ಯಪ್ರಭಾವಸ್ಯ ವಪುರ್ಹೋತ್ರಸ್ಯ ರಕ್ಷಿತಾ ॥ ೨೮ ॥

---

೨೪. ಕ್ಷಣಗಳು, ಕಲೆಗಳು, ಕಾಷ್ಠಗಳು, ಕಾಲವೈಕಲ್ಯಗಳು, (ತಿಥಿಗಳ ವೃದ್ಧಿ ಕ್ಷಯಗಳು) ಮುಹೂರ್ತಗಳು, ತಿಥಿಗಳು, ಮಾಸಗಳು, ಪಕ್ಷಗಳು ಮತ್ತು ಸಂವತ್ಸರಗಳು ಇವುಗಳನ್ನೂ

೨೫. ತಿಥಿಗಳು, ಕಾಲಯೋಗಗಳು, ಇವುಗಳ ಬಗೆಬಗೆಯಾದ ಪ್ರಮಾಣ ಇವುಗಳನ್ನೂ ಮನುಷ್ಯರಲ್ಲಿ ಆಯುಸ್ಸು, ಕ್ಷೇತ್ರ ಇವುಗಳ ವೃದ್ಧಿಕ್ಷಯಗಳನ್ನೂ ಸೃಜಿಸಿದನು.

೨೬. ಸರ್ವಭೂತಾತ್ಮನಾದ ಅವನು ಅನಂತಗಳಾದ ಜ್ಞಾನಮಾರ್ಗದಿಂದ, ತ್ರಿಲೋಕಗಳನ್ನೂ ಎಲ್ಲಾ ಪ್ರಾಣಿಗಳ ಗುಂಪುಗಳನ್ನೂ, ಸೃಷ್ಟಿಮಾಡಿದನು.

೨೭. ಅವನು ಪ್ರಣಾಮತ್ರಯಪೂರ್ವಕವಾದ ಯೋಗದಿಂದ ಸಂತೋಷಪಡುವವನೂ, ಜಗದೀಶ್ವರನೆನಿಸಿ ಗತಾಗತಿರೂಪವಾದ ಯಾನಪಾತ್ರದಿಂದ ರಕ್ಷಕನೂ ಆಗಿರುವನು.

೨೮. ಮತ್ತು ಪುಣ್ಯಶಾಲಿಗಳಿಗೂ ಪಾಪರಹಿತರಿಗೂ, ಗತಿಯೆನಿಸಿರುವನೂ, ಚಾತುರ್ವರ್ಣ್ಯದ ಪ್ರಭಾವರೂಪವಾದ ಹೋತ್ರದಶರೀರವೂ ರಕ್ಷಕನೂ ಎನಿಸಿರುವನು.

**ಧಾತುರ್ವೈದ್ಯಸ್ಯ ಯೋ ವೇತ್ತಾ ಚತುರಾಶ್ರಮಸಂಶ್ರಯಃ ।**
**ದಿಗಂಬರಾನುಭೂತಶ್ಚ ವಾಯುರ್ವಾಯುವಿಭಾವನಃ ॥ ೨೯ ॥**

**ಅಗ್ನೀಷೋಮಾತ್ಮಕಂ ಜ್ಯೋತಿರ್ಯೋಗೀಶಃ ಕ್ಷಣದಾಂತಕಃ ।**
**ಯಃ ಪರಂ ಶ್ರೂಯತೇ ಜ್ಯೋತಿರ್ಯಃ ಪರಂ ಶ್ರೂಯತೇ ತಪಃ ॥ ೩೦ ॥**

**ಯಃ ಪರಂ ಪರಮಂ ಪ್ರಾಹುಃ ಪರಮಾತ್ಮಾನಮಚ್ಯುತಂ ।**
**ಬ್ರಹ್ಮಾದಿಭಿಃ ಸ್ತುತೋ ದೇವೋ ಯಶ್ಚ ದೈತ್ಯಾಂತಕೃದ್ವಿಭುಃ ॥ ೩೧ ॥**

**ಯುಗಾಂತೇಷ್ವಂತಕೋ ಯಸ್ತು ಯಶ್ಚ ಲೋಕಾಂತಕೋತ್ತಮಃ ।**
**ಸೇತುರ್ಯೋ ಲೋಕಸೇತೂನಾಂ ಮಧ್ಯೋ ಯೋ ಮಧ್ಯಕರ್ಮಣಾಂ ॥ ೩೨ ॥**

**ವೇತ್ತಾ ಯೋ ವೇದವಿದುಷಾಂ ಪ್ರಭುರ್ಯಃ ಪ್ರಭವಿಷ್ಣುನಾಂ ।**
**ಸೌಮ್ಯಭೂತಸ್ತು ಸೌಮ್ಯಾನಾಂ ಅಗ್ನಿಭೂತೋಽಗ್ನಿವರ್ಚಸಾಂ ॥ ೩೩ ॥**

---

೨೯. ಧಾತುವೈದ್ಯವನ್ನು ಬಲ್ಲವನೂ, ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮಗಳಿಗೆ ಆಶ್ರಯನೂ, ದಿಕ್ಕುಗಳನ್ನು ಆವರಿಸಿಕೊಂಡು ಅನುಭವಕ್ಕೆ ಗೋಚರನೂ, ವಾಯುರೂಪನಾಗಿ ವಾಯುವನ್ನು ಸೃಷ್ಟಿಮಾಡುವವನೂ ಆಗಿರುವನು.

೩೦. ಅಗ್ನಿ ಮತ್ತು ಸೋಮ ಎಂಬ ತೇಜೋರೂಪಗಳುಳ್ಳ ಯೋಗೀಶನೆನಿಸಿರುವನು. ಅಂಧಕಾರನಾಶಕವಾದ ಉತ್ತಮ ಜ್ಯೋತಿಯೆನಿಸುವನು. ಮತ್ತು ಉತ್ತಮ ತಪಸ್ಸು ಎನಿಸುವನು.

೩೧. ಹೀಗೆ ಶ್ರೇಷ್ಠವಾದ ತೇಜಸ್ಸು ಎಂದು ಹೇಳಿಸಿಕೊಳ್ಳುವ ಇವನನ್ನು, ಪರಮಪುರುಷ, ಪರಾತ್ಪರ, ಪರಮಾತ್ಮ, ನಾಶರಹಿತ ಎಂದು ಹೇಳುವರು. ಈ ಮಹಾನುಭಾವನು ರಾಕ್ಷಸರನ್ನು ಧ್ವಂಸಮಾಡುತ್ತಾ ಬ್ರಹ್ಮಾದಿಗಳ ಸ್ತೋತ್ರಕ್ಕೂ ಪಾತ್ರನೆನಿಸಿಕೊಳ್ಳುವನು.

೩೨. ಇವನು ಪ್ರಳಯುಗಳಲ್ಲಿ ಯಮುಸ್ವರೂಪನೂ, ಲೋಕನಾಶಕರಲ್ಲಿ ಉತ್ತಮನೂ, ಲೋಕದಲ್ಲಿರುವ ಸೇತುಗಳಿಗೆ ಸೇತುಸ್ವರೂಪನೂ, ಮಧ್ಯಮಕರ್ಮವನ್ನು ಆಚರಿಸುವವರಲ್ಲಿ ಮಧ್ಯಮಸ್ವರೂಪನೂ ಆಗಿ ಕಾಣುವನು.

೩೩. ವೇದಜ್ಞರಲ್ಲಿ ಪ್ರಾಜ್ಞನೂ, ಪ್ರಭವಿಷ್ಣುಗಳಲ್ಲಿ ಪ್ರಭುವೂ, ಸೌಮ್ಯರಲ್ಲಿ ಸೌಮ್ಯನೂ, ಅಗ್ನಿವರ್ಚಸ್ಸುಳ್ಳವರಲ್ಲಿ ಅಗ್ನಿಯೂ, ಎನಿಸುವನು.

ಮಾನುಷಾಣಾಂ ಮನೋಭೂತಸ್ತಪೋಭೂತಸ್ತಪಸ್ವಿನಾಂ ।
ವಿನಯೋ ನಯವೃತ್ತೀನಾಂ ತೇಜಸ್ತೇಜಸ್ವಿನಾಮಪಿ ॥ ೩೪ ॥

ವಿಗ್ರಹೋ ವಿಗ್ರಹಾಣಾಂ ಚ ಗತಿರ್ಗತಿಮತಾಮಪಿ ।
ಆಕಾಶಪ್ರಸವೋ ವಾಯುರ್ವಾಯೋಃ ಪ್ರಾಣೋ ಹುತಾಶನಃ ।
ದೇವಾಹುತಿಪ್ರದಾನೋದ್ಯತ್ಪ್ರಾಣಾಗ್ನಿಸ್ತಮನಾಶನಃ ॥ ೩೫ ॥

ರಸಾದ್ಧಿ ಶೋಣಿತಂ ಭವತಿ ಶೋಣಿತಾನ್ಮಾಂಸಮುಚ್ಯತೇ ।
ಮಾಂಸಾನ್ಮಜ್ಜಾವಸೋ ಜನ್ಮಮಜ್ಜಾತೋಸ್ಥೀನಿ ಜನ್ಮತಃ ॥ ೩೬ ॥

ಅಸ್ಥಿಮಜ್ಜಃ ಸಮುಭವತ್ತತೋ ವೈ ಶುಕ್ರಮಾದಿಶೇತ್ ।
ಶುಕ್ರಾದ್ಗರ್ಭಃ ಸಮುಭವದ್ರಸಮೂಲೇನ ಕರ್ಮಣಾ ।
ತತ್ರಾಪಃ ಪ್ರಥಮೋಭಾಗಃ ಸ ಸೌಮ್ಯೋ ರಾಶಿರುಚ್ಯತೇ ॥ ೩೭ ॥

---

೩೪. ಮನುಷ್ಯರಲ್ಲಿ ಮನಸ್ವರೂಪನಾಗಿರುವನು. ತಪಸ್ವಿಗಳಲ್ಲಿ ತಪೋರೂಪನಾಗಿಯೂ ಇರುವನು. ನಯವಾದ ಮಾರ್ಗದಿಂದ ನಡೆಯುವರಲ್ಲಿ ವಿನಯಸ್ವರೂಪನೂ ತೇಜಸ್ವಿಗಳಲ್ಲಿ ತೇಜೋರೂಪನೂ, ವಿಗ್ರಹಗಳಲ್ಲಿ ವಿಗ್ರಹರೂಪನೂ, ಗತಿವಂತರಲ್ಲಿ ಗತಿರೂಪನೂ ಆಗಿರುವನು.

೩೫. ಆಕಾಶದಿಂದ ಹುಟ್ಟಿದವುಗಳಲ್ಲಿ ವಾಯುರೂಪನೂ, ಆ ವಾಯುಗಳಲ್ಲಿ ಪ್ರಾಣವಾಯುಸ್ವರೂಪನೂ ಅಗ್ನಿಗಳಲ್ಲಿ ದೇವತೆಗಳಿಗೆ ಆಹುತಿಪ್ರದವಾದ ಪ್ರಾಣಾಗ್ನಿರೂಪನೂ, ಅಂಧಕಾರನಾಶಕನೂ ಆಗಿರುವನು.

೩೬. ರಸದಿಂದ ಶೋಣಿತವೂ, ಶೋಣಿತದಿಂದ ಮಾಂಸವೂ, ಮಾಂಸದಿಂದ ಮಜ್ಜಾವಸೆ ಇವುಗಳೂ, ಮಜ್ಜಾಧಾತುಗಳಿಂದ ಅಸ್ಥಿಗಳೂ ಉಂಟಾಗುವುವು.

೩೭. ಅಸ್ಥಿಯಿಂದ ರೇತಸ್ಸು, ಈ ರೇತಸ್ಸಿನಿಂದ ಗರ್ಭವು ಏರ್ಪಟ್ಟಿತು. ಈ ಗರ್ಭಕ್ಕೆ ರಸವೇ ಮೂಲವಾಯಿತು. ಅದರಲ್ಲಿ ಜಲವು ಪ್ರಥಮಭಾಗವೆಂದೂ, ಅದು ಸೌಮ್ಯರಾಶಿಯೆಂದೂ ಹೇಳಬೇಕು.

ತತಃ ಕ್ಷ್ಮಾಸಂಭವೋ ಜ್ಞೇಯೋ ದ್ವಿತೀಯೋ ರಾಶಿರುಚ್ಯತೇ ।
ಶುಕ್ರಂ ಸೋಮಾತ್ಮಕಂ ವಿದ್ಯಾದಾತ್ಮರೂಪಂ ತದಾತ್ಮಕಂ ॥ ೩೮ ॥

ಭವೋ ರಸಾತ್ಮಕಸ್ತೇಷಾಂ ವೀರ್ಯಂ ಚ ಶಶಿ ಪಾವಕಂ ।
ಕಫವರ್ಗೇ ಭವೇಚ್ಛುಕ್ರಂ ಪಿತ್ತವರ್ಗೇ ಚ ಶೋಣಿತಂ ॥ ೩೯ ॥

ಕಫಸ್ಯ ಪೃಥಿವೀಸ್ಥಾನಂ ಪಿತ್ತಂ ನಾಭೌ ಪ್ರತಿಷ್ಠಿತಂ ।
ದೇವಸ್ಯ ಮಧ್ಯ ಹೃದಯಂ ಸ್ಥಾನಂ ತು ಮನಸಃ ಸ್ಮೃತಂ ।
ನಾಭಿಕೋಷ್ಠಾಂತರಸ್ಥಂ ಯತ್ತತ್ರ ದೇವೋ ದಿವಾಕರಃ ॥ ೪೦ ॥

ಮನಃ ಪ್ರಜಾಪತಿರ್ಜ್ಞೇಯಃ ಕಫಃ ಸೋಮೋ ವಿಭಾವ್ಯತೇ ।
ಪಿತ್ತಮಗ್ನಿಃ ಸ್ಮೃತೋ ಯಸ್ಮಾದಗ್ನೀಷೋಮಾತ್ಮಕಂ ಜಗತ್ ॥ ೪೧ ॥

ಏವಂ ಪ್ರವರ್ತಿತೇ ಗರ್ಭೇ ವರ್ಧಿತೇಂಬುದಸನ್ನಿಭೇ ।
ವಾಯುಃ ಪ್ರವೇಶಂ ಸಂಚಕ್ರೇ ಸಂಗತಃ ಪರಮಾತ್ಮನಾ ॥ ೪೨ ॥

---

೩೮. ಆ ಜಲದಿಂದ ಪೃಥಿವಿಯು ಉತ್ಪನ್ನವಾಯಿತೆಂದು ತಿಳಿಯಬೇಕು. ಅದು ದ್ವಿತೀಯರಾಶಿಯೆನಿಸುವುದು. ಶುಕ್ರವು ಸೋಮಾತ್ಮಕವೆಂದು ತಿಳಿಯಬೇಕು. ಮತ್ತು ಆತ್ಮಸ್ವರೂಪವೆಂದೂ ತಿಳಿಯಬೇಕು.

೩೯. ಅವುಗಳ ಉತ್ಪತ್ತಿಯೂ ರಸಾತ್ಮಕವೇ ಆಗಿದೆ, ವೀರ್ಯವು ಚಂದ್ರಾಗ್ನಿರೂಪವಾದುದು. ಶುಕ್ರವು ಕಫವರ್ಗದಲ್ಲಿರುವುದು. ಶೋಣಿತವು ಪಿತ್ತವರ್ಗದಲ್ಲಿರುವುದು.

೪೦. ಪೃಥಿವಿಯು ಕಫಕದ ಸ್ಥಾನವು. ನಾಭಿಯಲ್ಲಿ ಪಿತ್ತವು ಪ್ರತಿಷ್ಠಿತವಾಗಿದೆ. ಸ್ವಾಮಿಯ ಹೃದಯಮಧ್ಯವು ಮನಸ್ಸಿನ ಸ್ಥಾನವೆಂದು ತಿಳಿಯಬೇಕು. ನಾಭಿಕೋಷ್ಠಾಂತರದಲ್ಲಿ ಸೂರ್ಯದೇವನಿದ್ದಾನೆ.

೪೧. ಮನಸ್ಸನ್ನು ಪ್ರಜಾಪತಿಯೆಂದೂ, ಕಫವನ್ನು ಸೋಮನೆಂದೂ, ಪಿತ್ತವನ್ನು ಅಗ್ನಿಯೆಂದೂ ತಿಳಿಯಬೇಕು. ಆದುದರಿಂದ ಜಗತ್ತೇ ಅಗ್ನೀಷೋಮಾತ್ಮಕವಾಗುವುದು.

೪೨. ಶುಕ್ರಶೋಣಿತಗಳಾದ ಹೀಗೆ ಏರ್ಪಟ್ಟ ಗರ್ಭವು ಬೆಳೆದು ಮೇಘಸಮಾನವಾಗಿ ಪರಿಣಮಿಸಲು ವಾಯುವು ಪರಮಾತ್ಮನಿಂದೊಡಗೂಡಿ ಅಲ್ಲಿ ಪ್ರವೇಶ ಮಾಡುತ್ತಾನೆ.

ತತೋಽಂಗಾನಿ ಸೃಜಂಸ್ತಾನಿ ಬಿಭರ್ತಿ ಪರಿವರ್ತಯನ್ ।
ಪ್ರಾಣೋಽಪಾನಃ ಸಮಾನಶ್ಚ ಉದಾನ ವ್ಯಾನ ಏವ ಚ ॥ ೪೩ ॥

ಪ್ರಾಣೋಽಸ್ಯ ಪ್ರಥಮೋ ಸ್ಥಾನೇ ವರ್ತಯನ್ ಪರಿವರ್ತತೇ ।
ಅಪಾನಂ ಪಶ್ಚಿಮೋ ಕಾಯ ಉದಾನೋರ್ಧ್ವಂ ಶರೀರಗಃ ।
ವ್ಯಾನೋಽಥ ವ್ಯಾಪಕೋ ದೇಹೇ ಸಮಾನಃ ಸಂನಿವರ್ತತೇ ॥ ೪೪ ॥

ಭೂತಾವಾಪ್ತಿಸ್ತತಸ್ತಸ್ಯ ಜಾಯತೇಂದ್ರಿಯ ಗೋಚರಾ ।
ಪೃಥಿವೀ ವಾಯುರಾಕಾಶ ಆಪೋ ಜ್ಯೋತಿಶ್ಚ ಪಂಚಮಃ ॥ ೪೫ ॥

ತಸ್ಯೇಂದ್ರಿಯಾಣಿ ಪಿಷ್ಟಾನಿ ಸ್ವಂಸ್ವಂ ಯೋಗಂ ಪ್ರಚಕ್ರಮುಃ ।
ಪಾರ್ಥಿವಂ ದೇಹಮಾಹುಸ್ತು ಪ್ರಾಣಾತ್ಮಾನಂ ಚ ಮಾರುತಂ ॥ ೪೬ ॥

---

೪೩. ಅನಂತರ ಪ್ರಾಣಾಪಾನ, ಸಮಾನ, ಉದಾನ, ವ್ಯಾನ ಎಂಬ ಅದರ ಒಳಭಾಗಗಳನ್ನು ಸೃಷ್ಟಿಮಾಡುತ್ತಾ ಬದಲಾಯಿಸುತ್ತಾ ಪೋಷಿಸುತ್ತಾನೆ.

೪೪. ಪ್ರಾಣವಾಯುವು ಅದರ ಮೊದಲನೆಯ ಸ್ಥಾನವಾದ ಹೃದಯದಲ್ಲಿ ಇರುತ್ತದೆ. ಶರೀರದ ಪಶ್ಚಿಮದ್ವಾರದಲ್ಲಿ ಹೊರಟ ವಾಯು ಅಪಾನವಾಯುವೆನಿಸುತ್ತದೆ. ವಾಯುವು ಶರೀರದ ಊರ್ಧ್ವಭಾಗದ ಕಂಠದಿಂದ ಹೊರಟಾಗ ಉದಾನ ಸಂಜ್ಞೆಯನ್ನು ಪಡೆಯುತ್ತದೆ. ವ್ಯಾನವಾಯುವು ದೇಹದಲ್ಲಿ ಸರ್ವತ್ರವ್ಯಾಪಕವಾಗಿರುತ್ತದೆ. ಸಮಾನವಾಯುವು (ನಾಭೀಸ್ಥಾನದಲ್ಲಿ) ಮಧ್ಯದೇಹದಲ್ಲಿ ಚೆನ್ನಾಗಿರುತ್ತದೆ.

೪೫. ಪೃಥಿವೀ, ಅಪ್, ತೇಜ, ವಾಯು, ಆಕಾಶ ಎಂಬ ಪಂಚಭೂತಗಳ ವ್ಯಾಪ್ತಿಯೇ ದೇಹವಾಗಿ ಅನಂತರದಲ್ಲಿ ಅದನ್ನು ಧರಿಸದವನ ಇಂದ್ರಿಯಗಳಿಗೆ ಗೋಚರವಾಗುತ್ತದೆ.

೪೬. ಆ ಪ್ರಾಣಿಯ ಇಂದ್ರಿಯಗಳು ತಮ್ಮ ತಮ್ಮ ವ್ಯಾಪಾರ ಮಾಡುವ ಹಾಗೆ ಪ್ರೇರಿಸಲ್ಪಟ್ಟು ತಮ್ಮ ತಮ್ಮ ಕಾರ್ಯಗಳನ್ನು ಪಕ್ರಮಿಸುತ್ತವೆ. ಪೃಥ್ವೀಮಯವಾದ ಪಿಂಡವನ್ನೇ ದೇಹವೆಂದು ಹೇಳುತ್ತಾರೆ. ಅದು ವಾಯುವಿನೊಡಗೂಡಿದರೆ ಪ್ರಾಣಿ ಎನಿಸುತ್ತದೆ.

ನಿದ್ರಾ ಹ್ಯಾಕಾಶಯೋನಿಶ್ಚ ಜಲಾಶ್ರಯೇ ಪ್ರವರ್ತತೇ ।
ಜ್ಯೋತಿಶ್ಚಕ್ಷುಷಿ ತಜ್ಜನ್ಯ ತದಂಶಸ್ತಾಮಸಃ ಸ್ಮೃತಃ ॥ ೪೭ ॥

ಗ್ರಾಮಾಶ್ಚ ವಿಷಯಾಶ್ಚೈವ ಯಸ್ಯ ವೀರ್ಯಂ ಪ್ರವರ್ತಿತಂ ।
ಏವಂ ಯಃ ಸೃಜತೇ ಲೋಕಾನ್ ಸದೇವಾಸುರಮಾನವಾನ್ ॥ ೪೮ ॥

ಸ ಕಥಂ ದೇವದೇವೇಶೋ ಗರ್ಭಮೇಷ್ಯತಿ ಚಾಂಶುಮಾನ್ ।
ಯಥೋದರಮದಿತ್ಯಾಸ್ತು ಯಃ ಸ್ವಯಂ ಚಾವಿಶತ್ಪುರಾ ॥ ೪೯ ॥

ಏವಂ ಮೇ ಸಂಶಯೋ ಬ್ರಹ್ಮನ್ ಏಷ ಮೇ ವಿಸ್ಮಯೋ ಮಹಾನ್ ।
ಕಥಂ ರವಿರ್ಯಯೌ ಗರ್ಭಭಾವಂ ದ್ವಿಜವರೇತಿ ಮೇ ॥ ೫೦ ॥

ಆಶ್ಚರ್ಯಂ ಪರಮಂ ಪೃಚ್ಛೇ ತ್ವಾಮಹಂ ಭಾಸ್ಕರಸ್ಯ ವೈ ।
ಭಾನೋರುತ್ಪತ್ತಿಮಾಶ್ಚರ್ಯಂ ಹೃದಿ ಮೇ ಪರಿವರ್ತತೇ ॥ ೫೧ ॥

---

೪೭. ಆಕಾಶ ತತ್ವದಲ್ಲಿ ಹುಟ್ಟಿದ ನಿದ್ರೆಯು, ಜಲಾಶ್ರಯವಾದ ಶರೀರದಲ್ಲಿ ಪ್ರವರ್ತಿಸುವುದು. ತೇಜಸ್ಸೆಂಬುದು ಕಾಂತಿ. ಅದು ಕಣ್ಣಿನಲ್ಲಿ ಉತ್ಪತ್ತಿಯಾಗುವುದು. ಆ ತೇಜಸ್ಸಿನ ಪರಮಾಂಶವೇ ತಮಸ್ಸು ಎನಿಸಿದೆ.

೪೮-೫೧ ಹೀಗೆ ವೀರ್ಯಜನಕವಾದ ಇಂದ್ರಿಯ ಸಮೂಹಗಳೂ, ಆ ಇಂದ್ರಿಯ ವಿಷಯಗಳೂ ಕೂಡ ಕಾರ್ಯದಲ್ಲಿ ಪ್ರವರ್ತಿತಗಳಾಗುವುವು. ಈ ರೀತಿಯಾಗಿ ದೇವತೆಗಳು, ರಾಕ್ಷಸರು, ಮನುಷ್ಯರು ಇವರೆಲ್ಲರಿಂದ ಸಹಿತವಾದ ಎಲ್ಲ ಲೋಕಗಳನ್ನೂ ಸೃಷ್ಟಿ ಮಾಡಬಲ್ಲ ದೇವದೇವೇಶನಾದ ಸೂರ್ಯನು ತಾನು ಬೇರೆಯವರ ಗರ್ಭಸ್ಥನಾಗುವುದು ಹೇಗೆ? ಪೂರ್ವದಲ್ಲಿ ಇವನು ಅದಿತಿಯ ಉದರದಲ್ಲಿ ತಾನಾಗಿ ಹೇಗೆ ಪ್ರವೇಶಿಸಲು ಒಪ್ಪಿದನು. ನನಗೆ ಈ ವಿಚಾರದಲ್ಲಿ ಸಂದೇಹವಾಗಿರುವುದಲ್ಲದೆ, ಇದು ಹೇಗೆ ಆಯಿತು ಎಂಬದಾಗಿ ಅತ್ಯಂತ ಆಶ್ಚರ್ಯಕರವೂ ಆಗಿದೆ. ಅಯ್ಯಾ ದ್ವಿಜಶ್ರೇಷ್ಠನೇ! ಸೂರ್ಯನು ಗರ್ಭಸ್ವರೂಪವನ್ನು ಹೇಗೆ ಹೊಂದಿದನು ಎಂಬ ಪರಮಾಶ್ಚರ್ಯಕರವಾದ ಈ ವಿಚಾರವನ್ನು ಕುರಿತು ನಿನ್ನನ್ನು ನಾನು ಪ್ರಶ್ನೆ ಮಾಡುತ್ತೇನೆ. ಸೂರ್ಯನ ಆಶ್ಚರ್ಯಕರವಾದ ಈ ಉತ್ಪತ್ತಿವಿಚಾರವನ್ನು ಕೇಳಿ ನನ್ನ ಮನಸ್ಸಿಗೆ ಹೇಗೆಹೇಗೋ ಆಗಿದೆ. ಎಲೈ ಮಹರ್ಷಿಯೇ! ಈ ಆಶ್ಚರ್ಯಕ

ಏತದಾಶ್ಚರ್ಯಮಾಖ್ಯಾನಂ ಕಥಯ ತ್ವಂ ಮಹಾಮುನೇ ।
ಸಮಾಖ್ಯಾಹಿ ಬಲಂ ವೀರ್ಯಂ ಭಾನೋರಮಿತತೇಜಸಃ ॥ ೫೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇ ಪರ್ವಣಿ ಸೂರ್ಯಾವತಾರ
ಕಥಾ ಪ್ರಸ್ತಾವವರ್ಣನಂ ನಾಮ ಸಪ್ತಪಂಚಾಶದುತ್ತರ
ಶತತಮೋಽಧ್ಯಾಯಃ.



---

ರವಾದ ಆಖ್ಯಾನವನ್ನೂ ಹೇಳು. ಅಮಿತತೇಜಸ್ವಿಯಾದ ಭಾನುವಿನ ಬಲಪರಾಕ್ರಮ ಮೊದಲಾದುವುಗಳನ್ನೆಲ್ಲಾ ಹೇಳು ಎಂದನು.''

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೂರ್ಯಾವತಾರ ಕಥಾ
ಪ್ರಸ್ತಾವ ವರ್ಣನವೆಂಬ ನೂರಐವತ್ತೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಪಂಚಾಶದುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಪ್ರಶ್ನಭಾರೋ ಮಹಾಂಸ್ತಾತ ತ್ವಯೋಕ್ತೋ ರಶ್ಮಿಮಾಲಿನಿ ।
ಯಥಾಶಕ್ತಿ ತು ವಕ್ಷ್ಯಾಮಿ ಶ್ರೂಯತಾಂ ಭಾನವಂ ಯಶಃ ॥ ೧ ॥

ಭಾನೋಃ ಪ್ರಭಾವಶ್ರವಣೇ ಯಸ್ಯ ತೇ ಮತಿರುತ್ಥಿತಾ ।
ಹಂತ ಭಾನೋಃ ಪ್ರವೃತ್ತಿಂ ಚ ಶೃಣು ದಿವ್ಯಾಂ ಮಯೋರಿತಾಂ ॥ ೨ ॥

ಸಹಸ್ರಾಸ್ಯಂ ಸಹಸ್ರಾಕ್ಷಂ ಸಹಸ್ರಕಿರಣಂ ಚ ಯಂ ।
ಸಹಸ್ರಶಿರಸಂ ದೇವಂ ಸಹಸ್ರಕರಮವ್ಯಯಂ ॥ ೩ ॥

---

## ನೂರಐವತ್ತೆಂಟನೆಯ ಅಧ್ಯಾಯ

೧ ಬಳಿಕ ಸುಮಂತುಮುನಿವರ್ಯರು ಮುಂದುವರಿಸಿ ಹೇಳತೊಡಗಿ, ಅಯ್ಯಾ ರಾಜನೇ ! ಸೂರ್ಯನವಿಷಯದಲ್ಲಿ ನೀನು ಕೇಳಿದ ಪ್ರಶ್ನಭಾಗವು ದೊಡ್ಡದು. ಪ್ರಾಣಿಗಳು ವಸ್ತುತಃ ಇರುವಂತೆ ಮಾಡುವ ಸೂರ್ಯನ ಕೀರ್ತಿಯ ವಿಚಾರವು ಹೇರಳವಾಗಿದೆ ಅದನ್ನೆಲ್ಲಾ ಹೇಳಲು ಸಾಧ್ಯವಿಲ್ಲ. ಆದರೂ ನನಗೆ ಶಕ್ತಿಯಿದ್ದಷ್ಟುಮಟ್ಟಿಗೆ ಹೇಳುತ್ತೇನೆ.

೨. ಸೂರ್ಯನ ಪ್ರಭಾವವನ್ನು ಕೇಳುವುದರಲ್ಲಿ ನಿನಗೆ ಬುದ್ಧಿಯು ಹುಟ್ಟಿದುದು ಸಂತೋಷ. ಸೂರ್ಯನ ದಿವ್ಯವಾದ ಉತ್ಪತ್ತಿವಿಚಾರವಾಗಿ ನಾನು ಹೇಳುವುದನ್ನು ಗಮನವಿಟ್ಟು ಕೇಳು.

೩. ಆ ಸೂರ್ಯನಿಗೆ ಸಹಸ್ರಮುಖಗಳು, ಸಹಸ್ರನೇತ್ರಗಳು, ಸಹಸ್ರಕಿರಣಗಳು ಮತ್ತು ಸಹಸ್ರಕೈಗಳು ಇರುವುವೆಂದೂ, ಮತ್ತು ಅವನು ನಾಶರಹಿತನೆಂದೂ ಶಾಶ್ವತನೆಂದೂ ಹೇಳುವರು.

ಸಹಸ್ರಜಿಹ್ವಂ ಭಾಸ್ವಂತಂ ಸಹಸ್ರಮುಕುಟಂ ಪ್ರಭುಂ ।
ಸಹಸ್ರದಂ ಸಹಸ್ರಾರಿಂ ಸಹಸ್ರಭುಜಮವ್ಯಯಂ ॥ ೪ ॥

ಸವನಂ ಭವನಂ ಚೈವ ಹವ್ಯಂ ಹೋತಾರಮೇವ ಚ ।
ಪಾತ್ರಾಣಿ ಸುಪ್ರಯುಕ್ತಾನಿ ವೇದದೀಕ್ಷಿತಮೃಕ್ಪ್ರಭುಂ ॥ ೫ ॥

ಶ್ರೋತ್ರಿಯಂ ಶೂರ್ಪಮುಸಲಂ ಪ್ರೋಕ್ಷಣಂ ದಕ್ಷಿಣಾಯನಂ ।
ಅಧ್ವರ್ಯುಂ ಸಾಮಗಂ ವಿಪ್ರಂ ಸದಸ್ಯಂ ಸದನಂ ತಥಾ ॥ ೬ ॥

ಯೂಪಂ ಸಮಿತ್ಸ್ರುವಂ ದರ್ವೀಂ ಮುಸಲೋಲೂಖಲಾನಿಚ ।
ಪ್ರಾಗ್ವಂಶಂ ಜಯಭೂತಿಂ ಚ ಹೋತಾರಂ ಚಯನಂ ಚ ಯತ್ ॥ ೭ ॥

---

೪. ಅಲ್ಲದೆ ಅವನನ್ನು ಸಹಸ್ರಜಿಹ್ವನೆಂದೂ, ಪ್ರಕಾಶಮಾನವಾದ ಸಾವಿರಾರು ಕಿರೀಟವುಳ್ಳವನೆಂದೂ, ಭಕ್ತರ ಸಹಸ್ರಾರು ಅಭೀಷ್ಟಗಳನ್ನು ಕೊಡತಕ್ಕವನೆಂದೂ, ಸಾವಿರಾರು ದ್ವೇಷಿಗಳನ್ನು ನಿಗ್ರಹಮಾಡುವ ಅನೇಕ ಭುಜಗಳುಳ್ಳವನೆಂದೂ ಮತ್ತು ನಾಶರಹಿತನೆಂದೂ ಹೇಳುವರು.

೫. ಇವನೇ ಲೋಕಗಳನ್ನು ಸೃಷ್ಟಿಸತಕ್ಕವನು, ರಕ್ಷಕನು, ಹೋಮದ್ರವ್ಯ ಸ್ವರೂಪನು, ಹೋಮಮಾಡತಕ್ಕವನು, ಸರಿಯಾಗಿ ಪಾತ್ರಾಸಾಧನ ಮಾಡಿದ ಸ್ರುಕ್ ಸ್ರುವಾದಿ ಪಾತ್ರಸ್ವರೂಪನು, ವೇದದೀಕ್ಷಿತನು, ಋಗ್ವೇದದಲ್ಲಿ ಸಮರ್ಥನು, ಶ್ರೋತ್ರಿಯನಾದ ಹೋತಾರನು ಎಂಬದಾಗಿ ಹೊಗಳಿಸಿಕೊಳ್ಳುವನು.

೬-೭. ಮತ್ತು ಮೊರ, ಒನಕೆ, ಪ್ರೋಕ್ಷಣಪಾತ್ರಗಳು ಮುಂತಾದ ಸಾಧನ ದ್ರವ್ಯಗಳು ದಕ್ಷಿಣಾರ್ಹನಾದ ಅಧ್ವರ್ಯುವನ್ನು (ಯಜುರ್ವೇದ ಕಾರ್ಯಸಮರ್ಥನು) ಸಾಮವೇತ್ತನಾದ ಉದ್ಗಾತೃವು, ಸದಸ್ಯನಾದ ವಿಪ್ರನು, ಹಾಗೆಯೇ ಸದನನು, (ಬ್ರಹ್ಮತ್ವಕ್ಕೆ ಕುಳಿತುಕೊಳ್ಳತಕ್ಕ ಬ್ರಹ್ಮ) ಯೂಪಸ್ತಂಭ, ಸಮಿತ್ತು, ಸ್ರುವಪಾತ್ರ, ದರ್ವೀ, ಒನಕೆ, ಒರಳು, ಪತ್ನೀಶಾಲೆ, ಜಯಭೂತಿ, ಹೋತಾರನಾದ ಋಗ್ವೇದಿ, ಚಯನವೆಂಬ ವೇದಿಕಾರಚನೆ ಎಲ್ಲವೂ ಇವನೇ ಎಂದು ಹೇಳುತ್ತಾರೆ.

**ರಹಸ್ಯಾನಿ ಪ್ರಮಾಣಾನಿ ಸ್ಥಾವರಾಣಿ ಚರಾಣಿ ಚ ।**
**ಪ್ರತಿಷ್ಠಿತಾನಿ ದಾರ್ಢ್ಯಂ ಚ ಸ್ಥಂಡಿಲಾನಿ ಕುಶಾಂಸ್ತಥಾ ॥ ೮ ॥**

**ಮಂತ್ರಯಜ್ಞವಹಂ ವಹ್ನಿಭಾಗಂ ಭಾರ್ಗವಮೇವ ಚ ।**
**ಅಗ್ರೇಭುಜೀ ಸೋಮಭುಜಾಂ ಯಜ್ಞ ತ್ರಿಷು ಉದಾಹೃತಃ ॥ ೯ ॥**

**ಆಯುರ್ವೇದವಿದೋ ವಿಪ್ರಾ ಯಜಂತೇ ಶಾಶ್ವತಂ ವಿಭುಂ ।**
**ತಸ್ಯ ಭಾನೋಃ ಸುರೇಶಸ್ಯ ವೀರ ಚಂದನಮಾಲಿನಃ ॥ ೧೦ ॥**

**ಪ್ರಾದುರ್ಭಾವಸಹಸ್ರಾಣಿ ಸಮತೀತಾನ್ಯನೇಕಶಃ ।**
**ಭೂಯಶ್ಚೈವ ಭವಿಷ್ಯಂತಿ ವಿನಶ್ಯಂತಿ ದಿನೇದಿನೇ ॥ ೧೧ ॥**

---

೮. ಯಜ್ಞಶಾಲೆಯ ಪ್ರದೇಶದಲ್ಲಿ ಎಷ್ಟು ಸ್ಥಾವರಜಂಗಮ ಪ್ರಾಣಿಗಳು ನಷ್ಟವಾಗಬಹುದು. ಅವುಗಳ ನಾಶಜನ್ಯವಾದ ದೋಷಪರಿಹಾರಕ್ಕೆ ಈ ಯಜ್ಞ ಮಾಡಿದುದರಿಂದ ಬರುವ ಪುಣ್ಯವು ತಕ್ಕ ಪ್ರಮಾಣದಲ್ಲಿಯೇ ಎಂಬುದನ್ನೂ ಯೋಚಿಸಬೇಕು ಮತ್ತು ಯಜ್ಞಭೂಮಿಯ ದೃಢತ್ವ ಎಷ್ಟುಮಟ್ಟಿಗೆ ಇದೆ; ಎಂಬುದನ್ನೂ ನೋಡಿಕೊಂಡು ಸ್ಥಂಡಿಲ ರಚನೆಯನ್ನು ಮಾಡಬೇಕು. ಆ ಸಮಾರಂಭಕ್ಕೆ ಬೇಕಾಗುವ ಕುಶಗಳನ್ನು ಸಿದ್ಧಮಾಡಿಕೊಳ್ಳಬೇಕು

೯-೧೦. ಅಯ್ಯಾ ವೀರನೇ! ಯಜ್ಞದಲ್ಲಿ ಮಂತ್ರಪೂತವಾದ ವಹ್ನಿಭಾಗವನ್ನುಳ್ಳವನು, ಭೃಗುಸಂಬಂಧವಾದ ವಹ್ನಿಭಾಗವುಳ್ಳವನು, ಸೋಮಪಾನ ಮಾಡುವವರಲ್ಲಿ ಮೊದಲನೆಯವನು, ಮೂರುವೇದಗಳನ್ನೂ ತಿಳಿದುಕೊಂಡಿರತಕ್ಕವನು, ಆಯುರ್ವೇದವನ್ನು ತಿಳಿದವನು ಇವರೆಲ್ಲರೂ ಶಾಶ್ವತವಾಗಿ ಪರಮೇಶ್ವರನನ್ನು ಸೇವಿಸುವರು.

೧೧. ದೇವತೆಗಳಿಗೆ ಒಡೆಯನೂ, ಚಂದನಧಾರಿಯೂ, ಶಾಶ್ವತನೂ ಆದ ಸೂರ್ಯನಿಗೆ, ಬಹುಸಂಖ್ಯೆಯಾದ ಎಂದರೆ ಸಹಸ್ರಾರು ಭಾವಗಳುಂಟೆಂದು ಹೇಳುವರು. ಅವುಗಳಲ್ಲಿ ಕೆಲವು ಹಿಂದೆ ನಡೆದಿವೆ, ಕೆಲವು ಈಗ ನಡೆಯುತ್ತಿವೆ. ಇನ್ನೂ ಕೆಲವು ಮುಂದೆ ನಡೆಯುವುವು.

ಯತ್ಪೃಚ್ಛಸಿ ಮಹಾರಾಜ ಪುಣ್ಯಾಂ ದಿವ್ಯಾಂ ಕಥಾಂ ಶುಭಾಂ ।
ಯದರ್ಥಂ ಭಗವಾನ್ ಭಾನುಃ ಕಶ್ಯಪಸ್ಯ ಸುತೋಽಭವತ್ ॥ ೧೨ ॥

ತಾಮಹಂ ಸಂಪ್ರವಕ್ಷ್ಯಾಮಿ ಶೃಣು ಸರ್ವಮಶೇಷತಃ ।
ಹಿತಾರ್ಥಂ ಸರ್ವಮರ್ತ್ಯಾನಾಂ ಲೋಕಾನಾಂ ಪ್ರಭವಾಯ ಚ ॥ ೧೩ ॥

ಬಹುಶಃ ಸರ್ವಭೂತಾತ್ಮಾ ಸ್ವಯಂ ಸಮಭಿಜಾಯತೇ ।
ತಥಾ ಸಮಭವದ್ದೇವಃ ಕಶ್ಯಪಸ್ಯಾದಿತೇಃ ಸುತಃ ॥ ೧೪ ॥

ತುಷ್ಟೋ ದತ್ವಾ ವರಂ ವೀರ ವಿರಂಚಸ್ಯ ಮಹಾತ್ಮನಃ ।
ಯಂ ಯಂ ಜನಯತೇ ಪುತ್ರಮದಿತಿಃ ಕಶ್ಯಪಾದ್ವಿಭೋ ॥ ೧೫ ॥

ಸ ಸಯಾತಿ ವಿನಾಶಂ ವೈ ತತ್ಕ್ಷಣಾದೇವ ಭಾರತ ।
ದೃಷ್ಟ್ವಾ ಸುತಾನ್ನಶ್ಯಮಾನಾನ್ ಪುತ್ರಶೋಕಾನ್ವಿತಾಽದಿತಿಃ ॥ ೧೬ ॥

---

೧೨. ಎಲೈ ಮಹಾರಾಜನೇ! ಭಗವಂತನಾದ ಸೂರ್ಯನು ಏತಕ್ಕೋಸ್ಕರ ಕಶ್ಯಪನ ಮಗನಾಗಿ ಹುಟ್ಟಿದನು ಎಂಬ ದಿವ್ಯವೂ, ಪುಣ್ಯಕರವೂ, ಶುಭಕರವೂ ಆದ ಕಥೆಯನ್ನು ಹೇಳೆಂದು ಪ್ರಶ್ನಿಸಿದೆಯಷ್ಟೆ ಆ ಕಥೆಯನ್ನೆಲ್ಲಾ ನಾನು ನಿನಗೆ ಸಮಗ್ರವಾಗಿ ಹೇಳುತ್ತೇನೆ. ನೀನು ಗಮನವಿಟ್ಟು ಕೇಳು.

೧೩-೧೫. ಸಮಸ್ತಮಾನವರಿಗೆ ಹಿತವುಂಟುಮಾಡುವುದಕ್ಕಾಗಿಯೂ, ಲೋಕಗಳ ಉತ್ಪತ್ತಿಗೋಸ್ಕರವಾಗಿಯೂ ಸರ್ವಭೂತಾತ್ಮನಾದ ರವಿಯು ತಾನೇ ಅನೇಕಸಾರಿ ಹುಟ್ಟುವುದುಂಟು. ಅಯ್ಯಾ ವೀರನೇ ! ಮಹಾತ್ಮನಾದ ಬ್ರಹ್ಮನ ತಪಸ್ಸಿಗೆ ಸಂತುಷ್ಟನಾಗಿ ವರವನ್ನು ಕೊಟ್ಟಂತೆ, ಆ ಸೂರ್ಯನು ಅದೇ ರೀತಿಯಲ್ಲಿ ಕಶ್ಯಪ, ಅದಿತಿ, ಇವರಿಗೆ ಪುತ್ರನಾದನು. ಕಶ್ಯಪರಿಗೆ ಅದಿತಿಯೆಂಬ ಪತ್ನಿಯಿದ್ದಳು. ಪೂರ್ವದಲ್ಲಿ ಅದಿತಿಯು ತನ್ನ ಪತಿಯಾದ ಕಶ್ಯಪರಿಂದ ಗರ್ಭವನ್ನು ಧರಿಸಿ ಮಗುವನ್ನು ಪ್ರಸವಿಸಿದಳು.

೧೬. ಎಲೈ ಭಾರತನೇ! ಪ್ರಸವಿಸಿದ ಉತ್ತರಕ್ಷಣದಲ್ಲಿಯೇ ಆ ಮಗುವು ಮೃತಿಹೊಂದುತ್ತಲಿದ್ದಿತು. ಪ್ರತಿಸಾರಿಯೂ ಈ ರೀತಿ ಆಗುವುದನ್ನು ನೋಡಿ ಅದಿತಿಗೆ ಮಹಾದುಃಖವುಂಟಾಯಿತು.

**ಜಗಾಮ ಕಶ್ಯಪಾಭ್ಯಾಶೇ ಶೋಕವ್ಯಾಕುಲಿತೇಕ್ಷಣಾ ।**
**ಸ್ಯಾಪಶ್ಯತ್ತಂ ಚ ಮಾರೀಚಂ ಮುನಿಂ ದೀಪ್ತಂ ತಪೋನಿಧಿಂ ॥ ೧೭ ॥**

**ಆದ್ಯಂ ದೇವಗುರುಂ ವಿಪ್ರಂ ದಿವ್ಯಂ ತ್ರಿಷವಣಾಂಬುಭಿಃ ।**
**ತೇಜಸಾ ವಹ್ನಿಸಂಕಾಶಂ ಸೌರಂ ವೃಕಸಮುಪ್ರಭಂ ॥ ೧೮ ॥**

**ನ್ಯಸ್ತ ದಂಡಶ್ರಿಯಾ ಯುಕ್ತಂ ಬದ್ಧಕೃಷ್ಣಾಜಿನಾಂಬರಂ ।**
**ವಲ್ಕಲಾಜಿನಸಂವೀತಂ ಪ್ರದೀಪ್ತಂ ಬ್ರಹ್ಮವರ್ಚಸಾ ॥ ೧೯ ॥**

**ಹುತಾಶಮಿವ ದೀಪ್ಯಂತಂ ತಪಂತಮಿವ ಭಾಸ್ಕರಂ ।**
**ಅಥಾದಿತಿಶ್ಚ ದೃಷ್ಟ್ವೈವಂ ಭರ್ತಾರಮಮಿತೌಜಸಂ ॥ ೨೦ ॥**

**ಶೋಕಗದ್ಗದಯಾ ವಾಚಾ ಇದಂ ವಚನಮಬ್ರವೀತ್ ।**
**ಕಿಮರ್ಥಂ ಭಗವಾನ್ ದೇವೋ ನಿರುದ್ಯೋಗಸ್ತು ತಿಷ್ಠತಿ ॥ ೨೧ ॥**

---

೧೭. ಪುತ್ರಶೋಕದಿಂದ ವ್ಯಾಕುಲಿತಳಾಗಿ, ಆಕೆ ಕಶ್ಯಪರ ಸಮೀಪಕ್ಕೆ ಬಂದಳು. ತೇಜಸ್ವಿಯೂ, ತಪೋನಿಧಿಯೂ ಆದ ಕಶ್ಯಪರು ಸುಮ್ಮನೆ ಕುಳಿತಿರುವುದನ್ನು ಅವಳು ಕಂಡಳು.

೧೮-೧೯. ಆದ್ಯನೂ, ದೇವಗುರುವೂ, ವಿಪ್ರೋತ್ತಮನೂ ಆದ ಕಶ್ಯಪನು ತ್ರಿಷವಣ ಕರ್ಮವನ್ನು ನೆರವೇರಿಸಿ, ಪ್ರಕಾಶಮಾನನೂ, ತೇಜಸ್ಸಿನಿಂದ ಅಗ್ನಿಗೆ ಸಮಾನನೂ, ವೃಕವೆಂಬ ಸೂರ್ಯಕಿರಣಕ್ಕೆ ಸಮಾನವಾದ ಕಾಂತಿಯುಳ್ಳವನೂ ಆಗಿದ್ದನು. ಸೂರ್ಯಭಕ್ತನಾದ ಇವನು, ಪಾರ್ಶ್ವದಲ್ಲಿಟ್ಟುಕೊಂಡಿದ್ದ ಯೋಗದಂಡವು ಇವನ ಕಾಂತಿಯನ್ನು ಮತ್ತೂ ಹೆಚ್ಚಿಸುತ್ತಿದ್ದಿತು. ಕೃಷ್ಣಾಜಿನವನ್ನು ಧರಿಸಿ ನಾರುಮಡಿಯನ್ನು ಹೊದೆದಿದ್ದರೂ ಕೂಡ ಇವನಲ್ಲಿ ಬ್ರಹ್ಮವರ್ಚಸ್ಸು ಬೆಳಗುತ್ತಿದ್ದಿತು.

೨೦. ಆ ಸಮಯದಲ್ಲಿ ಕಶ್ಯಪನು ಪ್ರಜ್ವಲಿಸುವ ಅಗ್ನಿಯಂತೆಯೂ, ಪ್ರಕಾಶಿಸುವ ಸೂರ್ಯನತೆಯೂ ಕಾಣುತ್ತಿದ್ದನು. ಈ ರೀತಿ ಮಹಾಬಲಶಾಲಿಯೂ, ತನ್ನ ಪತಿಯೂ ಆದ ಕಶ್ಯಪನನ್ನು ಅದಿತಿಯು ಕಂಡಳು.

೨೧. ಒಡನೆ ದುಃಖದಿಂದ ಗದ್ಗದವಾದ ಕಂಠದಿಂದ ಕೂಡಿದವಳಾಗಿ, ಈ ಮಾತನ್ನು ಹೇಳಿದಳು. "ನನಗೆ ಹುಟ್ಟಿದ ಹುಟ್ಟಿದ ಮಕ್ಕಳೆಲ್ಲವೂ ಹುಟ್ಟಿದಕೂಡಲೇ ಸತ್ತುಹೋಗುತ್ತಿದೆ. ಪೂಜ್ಯರಾದ ತಾವು ಏಕೆ ಸುಮ್ಮನಿದ್ದೀರಿ?" ಎಂದು ಕೇಳಿದಳು.

ಜಾತೋ ಜಾತೋ ಹಿ ಮೇ ಪುತ್ರಃ ಸದ್ಯ ಏವ ವಿನಶ್ಯತಿ ।
ಶ್ರುತ್ವಾ ತು ವಚನಂ ತಸ್ಯಾಃ ಕಶ್ಯಪೋ ಮುನಿಸತ್ತಮಃ ॥ ೨೨ ॥

ಚಕಾರ ಗಮನೇ ಬುದ್ಧಿಂ ಬ್ರಹ್ಮಲೋಕಂ ಪ್ರತಿಪ್ರಭೋ ।
ಸ ಗತ್ವಾ ಬ್ರಹ್ಮಭವನಂ ನಾನಾಭಾವಸಮನ್ವಿತಂ ॥ ೨೩ ॥

ತದ್ವಾಕ್ಯಮುಕ್ತಂ ತಂ ಸರ್ವಂ ಯದುಕ್ತಂ ತಸ್ಯ ಜಾಯಯಾ ।
ಕಶ್ಯಪಸ್ಯ ವಚಃ ಶ್ರುತ್ವಾ ಕಂಜಜೋ ವಾಕ್ಯಮಬ್ರವೀತ್ ॥ ೨೪ ॥

ಪುತ್ರ ಗಚ್ಛಾವ ಸದನಂ ಭಾನೋಃ ಪರಮದುರ್ಲಭಂ ।
ಇತ್ಯುಕ್ತ್ವಾ ಯಾನಮಾರುಹ್ಯ ಆಗ್ನೇಯಂ ಪದ್ಮಸಂಭವಃ ॥ ೨೫ ॥

ವೇಧಾ ಜಗಾಮ ಭವನಮಾದಿತ್ಯಸ್ಯ ಮಹಾತ್ಮನಃ ।
ಅದಿತಿಃ ಕಶ್ಯಪೋ ಬ್ರಹ್ಮಾ ಜಗ್ಮುರ್ವಿಪುಲಮಾಶ್ರಿತಾಃ ॥ ೨೬ ॥

---

೨೨. ಪ್ರಭುವೆನಿಸಿದ ಋಷಿಶ್ರೇಷ್ಠನಾದ ಕಶ್ಯಪನು, ಆಕೆಯ ಮಾತನ್ನು ಕೇಳಿ ಮನಸ್ಸಿನಲ್ಲಿ ವಿಚಾರಪರನಾಗಿ ತಾನು ಬ್ರಹ್ಮಲೋಕಕ್ಕೆ ಹೋಗಬೇಕೆಂದು ಮನಸ್ಸು ಮಾಡಿದನು.

೨೩. ಹೀಗೆ ನಿಶ್ಚಯಿಸಿದ ಆ ಕಶ್ಯಪಮಹರ್ಷಿಗಳು ಕೂಡಲೇ ಹೊರಟು ನಾನಾಭಾವ (ಪದಾರ್ಥ) ಗಳಿಂದ ಕೂಡಿರುವ ಆ ಬ್ರಹ್ಮಲೋಕಕ್ಕೆ ಹೋದರು.

೨೪. ಈ ಪ್ರಕಾರ ಹೋಗಿ ಬ್ರಹ್ಮಭವನವನ್ನು ಸೇರಿ ವಿಭುವನ್ನು ಸಂದರ್ಶಿಸಿ, ತನ್ನ ಹೆಂಡತಿಯು ತನ್ನ ಸಂಗಡ ಹೇಳಿದ ವಿಚಾರವನ್ನೆಲ್ಲಾ ಬ್ರಹ್ಮನ ಸಂಗಡ ಹೇಳಿ ಕೊಂಡನು. ಆಗ ಬ್ರಹ್ಮನು ಕಶ್ಯಪನ ಮಾತನ್ನು ಕೇಳಿ ಇಂತೆಂದನು.

೨೫. ಪುತ್ರ ಕಶ್ಯಪ! ನಿನ್ನ ಪತ್ನಿಯಾದ ಅದಿತಿಯು ಸಮೇತ ಪರಮದುರ್ಲಭವಾದ ಭಾನುಲೋಕಕ್ಕೆ ಹೋಗೋಣ ನಡೆ ಎಂದು ಹೇಳಿದನು. ಪದ್ಮಸಂಭವನಾದ ಬ್ರಹ್ಮನು ಕೂಡಲೆ

೨೬. ಆಗ್ನೇಯವೆಂಬ ಯಾನವನ್ನೇರಿ ಆದಿತ್ಯನಿರುವ ಸ್ಥಾನವನ್ನು ಕುರಿತು ಹೊರಟನು. ಜೊತೆಯಲ್ಲಿ ಅದಿತಿಯೂ, ಕಶ್ಯಪನೂ ಹೊರಟರು. ಆ ದಂಪತಿಗಳೂ, ಬ್ರಹ್ಮನೂ, ವಿಸ್ತಾರವಾದ ಆಕಾಶಮಾರ್ಗದಲ್ಲಿ ಸಾಗಿದರು.

**ತೇ ಮುಹೂರ್ತೇನ ಸಂಪ್ರಾಪ್ತಾಸ್ಸೂರ್ಯಲೋಕಂ ಸುವರ್ಚಸಂ ।**
**ದಿವ್ಯಕಾಮಗಮೈರ್ಯಾನೈರ್ಯಥಾರ್ಹಂ ಕುರುನಂದನ ॥ ೨೭ ॥**

**ಅದಿತ್ಯಂ ಪ್ರಷ್ಟುಮಿಚ್ಛಂತಿ ತೇಜಸಾಂ ರಾಶಿಮುತ್ತಮಂ ।**
**ಗಚ್ಛಂತಸ್ತೇ ಚ ವಿಸ್ತೀರ್ಣಮಾದಿತ್ಯಸ್ಯ ಪರಾಂ ಸಭಾಂ ॥ ೨೮ ॥**

**ಷಟ್ಪದೋದ್ಗೀತನಿನದಾಂ ಸಾಮಗೈಸ್ತು ಸಮೀರಿತಾಂ ।**
**ಕ್ರತವೋ ಬಹ್ವೃಚಮುಖಾಃ ಪ್ರೋಕ್ತಾಃ ಪುಣ್ಯಪದಕ್ಷರಾಃ ॥ ೨೯ ॥**

**ತುಷ್ಟುವುಃ ಪುರುಷವ್ಯಾಘ್ರಂ ವಿತತೇಷು ಚ ಕರ್ಮಸು ।**
**ಯಜ್ಞಸಂಧೌ ವೇದವಿದಾಂ ಪದಕ್ರಮವಿದಾಂ ತಥಾ ॥ ೩೦ ॥**

**ಘೋಷೇಣ ಪರಮರ್ಷೀಣಾಂ ಸರ್ವಂ ತತ್ರ ನಿನಾದಿತಂ ।**
**ಯಜ್ಞಸಂಸ್ಥಾನವಿದ್ಭಿಶ್ಚ ಶಿಕ್ಷಾವಿದ್ಭಿಸ್ತಥಾ ದ್ವಿಜೈಃ ॥ ೩೧ ॥**

---

೨೭. ಅಯ್ಯಾ ಕುರುನಂದನನೇ! ಶ್ರೇಷ್ಠವಾದುವೂ, ಇಚ್ಛಾನುಸಾರವಾಗಿ ಬೇಕಾದಸ್ಥಳಕ್ಕೆ ಹೋಗಬಲ್ಲುದೂ ಆದ ಯಾನದಿಂದ, ಅವರು ಒಂದು ಕ್ಷಣದೊಳಗಾಗಿ ಕಾಂತಿಯುಕ್ತವಾದ ಸೂರ್ಯಲೋಕವನ್ನು ಸೇರಿದರು.

೨೮. ಅವರು ವಿಸ್ತೃತವೂ, ಭ್ರಮರಧ್ವನಿ ಸದೃಶವಾದ ಉದ್ಗೀತವೆಂಬ ಸಾಮಗಾನದಿಂದ ಕೂಡಿದುದೂ, ಆದ ಆದಿತ್ಯನ ಸಭೆಯನ್ನು ಸೇರಿ, ತೇಜೋರಾಶಿಯೂ, ಉತ್ತಮನೂ ಆಗಿರುದ ಆದಿತ್ಯನನ್ನು ಕುರಿತು ಅದಿತಿಯ ಪುತ್ರಪ್ರಾಪ್ತಿಗೆ ಕಾರಣವನ್ನು ಕೇಳಬೇಕೆಂದು ಇಚ್ಛಿಸಿದರು.

೨೯. ಪುಣ್ಯಕರವಾದ ಅಕ್ಷರಯುಕ್ತರೆಂದು ಹೇಳಲ್ಪಡುವ ಋಗ್ವೇದಿಗಳು ಮೊದಲಾದ ಯಜ್ಞಕರ್ತೃಗಳು, ವಿಸ್ತಾರವಾಗಿ ತಾವು ಮಾಡುವ ಕರ್ಮಗಳಲ್ಲಿ ಪ್ರಧಾನಪುರುಷನಾದ ಸೂರ್ಯನನ್ನು ಸ್ತುತಿಸಿದರು.

೩೦–೩೧. ಪದ, ಕ್ರಮ, ಜಟೆ ಇವುಗಳ ಸಮೇತ, ವೇದವನ್ನು ತಿಳಿದವರಾದ ಮಹರ್ಷಿಗಳ ಯಜ್ಞದ ವಿಚ್ಛಿತ್ತಿಯ ಕಾಲದ ವೇದಘೋಷದಿಂದ, ಅಲ್ಲಿ ಎಲ್ಲ ಕಡೆಯೂ ಶಬ್ದಮಯವಾಗಿದ್ದಿತು. ಅಲ್ಲಿದ್ದ ವಿಪ್ರರು ಯಜ್ಞಸಂಸ್ಥೆಯನ್ನು ತಿಳಿದವರೂ ಮತ್ತು ಯಾಜ್ಞಿಕಶಿಕ್ಷೆಯನ್ನು ತಿಳಿದವರೂ ಆಗಿದ್ದರು.

ಅಷ್ಟಾದಶಪುರಾಣಜ್ಞೈಃ ಸರ್ವವಿದ್ಯಾವಿಶಾರದೈಃ ।
ಮೀಮಾಂಸಾಹೇತುವಾದಜ್ಞೈಃ ಸರ್ವವಾದವಿಶಾರದೈಃ ॥ ೩೨ ॥

ಲೋಕಾಯತಿಕಮುಖ್ಯೈಶ್ಚ ತುಷ್ಟುವುಃ ಸೂರ್ಯಮೀರಿತಂ ।
ತತ್ರ ತತ್ರ ಚ ವಿಪ್ರೇಂದ್ರಾನ್ ನಿಯತಾಞ್ಛಂಸಿತವ್ರತಾನ್ ॥ ೩೩ ॥

ಜಪ ಹೋಮಪರಾನ್ ಯೋಗ್ಯಾನ್ ದದೃಶುಃ ಕಶ್ಯಪಾದಯಃ ।
ತಸ್ಯಾಂ ಸಭಾಯಾಮಾಸ್ತೇ ಸ ರಶ್ಮಿಮಾಲೀ ದಿವಾಕರಃ ॥ ೩೪ ॥

ಸುರಾಸುರಗುರುಃ ಶ್ರೀಮಾನ್ ಶುಶುಭೇ ವೀರ ಮಾಯಯಾ ।
ಉಪಾಸತೇ ಚ ತತ್ರೈವ ಪ್ರಜಾನಾಂ ಪತಿಮೀಶ್ವರಂ ॥ ೩೫ ॥

ದಕ್ಷಃ ಪ್ರಚೇತಾಃ ಪುಲಹೋ ಮರೀಚಿಶ್ಚ ದ್ವಿಜೋತ್ತಮಃ ।
ಭೃಗುರತ್ರಿರ್ವಸಿಷ್ಠಶ್ಚ ಗೌತಮೋ ನಾರದಸ್ತಥಾ ॥ ೩೬ ॥

---

೩೨-೩೩. ಅಲ್ಲದೆ ಹದಿನೆಂಟು ಪುರಾಣಗಳನ್ನು ತಿಳಿದವರು, ಸಮಸ್ತವಿದ್ಯೆಗಳಲ್ಲಿ ವಿಶಾರದರು ಮೀಮಾಂಸಾ ಶಾಸ್ತ್ರವನ್ನು ಬಲ್ಲವರು, ಹೇತುವಾದ (ತರ್ಕಶಾಸ್ತ್ರ) ವನ್ನು ತಿಳಿದವರು, ಸಮಸ್ತ ವಾದಗಳಲ್ಲಿ ನಿಪುಣರು, ಲೋಕಾಯತಮತದವರು ಇವರುಗಳೆಲ್ಲರೂ ಅಲ್ಲಿ ಸೂರ್ಯನನ್ನು ಸ್ತುತಿಸುತ್ತಿದ್ದರು. ಇಂಥ ಸೂರ್ಯನನ್ನು ಅದಿತಿ, ಕಶ್ಯಪ. ಬ್ರಹ್ಮ ಇವರೂ ಸಹ ಸ್ತುತಿಸಿದರು.

೩೪. ಕಶ್ಯಪಾದಿಗಳು ಅಲ್ಲಿ ಸೂರ್ಯಸಭೆಯಲ್ಲಿ ನಿಯಮಶಾಲಿಗಳೂ, ಶ್ಲಾಘ್ಯವಾದ ವ್ರತಾಚರಣೆಯುಳ್ಳವರೂ, ಜಪ, ಹೋಮಗಳಲ್ಲಿ ತತ್ಪರರೂ, ಮತ್ತು ಯೋಗ್ಯರೂ ಆದ ಬಹುಮಂದಿ ಬ್ರಾಹ್ಮಣೋತ್ತಮರನ್ನು ಕಂಡರು. ಇಂತಹ ಸಭೆಯಲ್ಲಿ ಕಿರಣಮಾಲಿಯಾದ ಸೂರ್ಯದೇವನು ಶೋಭಿಸುತ್ತಿದ್ದನು.

೩೫. ಅಯ್ಯಾ ವೀರನೇ ! ಅವನು ಸುರಾಸುರರಿಗೆ ಗುರುವೂ. ಶ್ರೀಮಂತನೂ ಮಾಯಾವರಣದಿಂದ ಕೂಡಿದವನೂ ಆಗಿ ಪ್ರಕಾಶಿಸುತ್ತಿದ್ದನು.

೩೬ ಪ್ರಜೆಗಳಿಗೆಲ್ಲಾ ಪತಿಯೂ, ಈಶ್ವರನೂ ಆದ ಸೂರ್ಯನನ್ನು ; ದಕ್ಷ, ಪ್ರಚೇತ, ಪುಲಹ, ದ್ವಿಜೋತ್ತಮನಾದ ಮರೀಚ, ಭೃಗು. ಅತ್ರಿ, ವಸಿಷ್ಠ, ಗೌತಮ, ನಾರದ ಎಂಬ ದೇವರ್ಷಿಗಳು ಸೇರಿ ಸೇವಿಸುತ್ತಿದ್ದರು.

ದಿವ್ಯಾ ಆತ್ಮಾಂತರಿಕ್ಷಂ ಚ ವಾಯುಸ್ತೇಜೋ ಜಲಂ ಮಹೀ ।
ಶಬ್ದಃ ಸ್ಪರ್ಶಃ ಸ್ವರೂಪಂ ಚ ರಸಗಂಧೌ ತಥೈವ ಚ ॥ ೩೭ ॥

ಪ್ರಕೃತಿಶ್ಚ ವಿಕಾರಾಶ್ಚ ಯಚ್ಚಾನ್ಯತ್ಕಾರಣಂ ಮಹತ್ ।
ಸಾಂಗೋಪಾಂಗಾಶ್ಚ ಚತ್ವಾರೋ ವೇದಾಸ್ತೇ ಲೋಕಪಾಲಕಾಃ ॥ ೩೮ ॥

ಲವಾಶ್ಚ ಋತವಶ್ಚೈವ ಸಂಕಲ್ಪಪ್ರಣವೌ ತಥಾ ।
ಏತೇ ಚಾನ್ಯೇ ಚ ಬಹವೋ ಭಾನುಮಂತಮುಪಾಸತೇ ॥ ೩೯ ॥

ಅರ್ಥೋ ಧರ್ಮಶ್ಚ ಕಾಮಶ್ಚ ಮೋಕ್ಷಶ್ಚ ಸವಿಶೇಷತಃ ।
ದ್ವೇಷೋ ಹರ್ಷಶ್ಚ ಮೋಹಶ್ಚ ಮತ್ಸರೋ ಮಾನ ಏವ ಚ ॥ ೪೦ ॥

ವೃಕೋ ವಿಷ್ಣುಸುತಃ ಪುತ್ರಃ ಪುಷ್ಪಜೋ ಧಿಷಣಸ್ತಥಾ ।
ಮಾಹೇಶ್ವರಸ್ತಥಾ ಸೌರೋ ವಿಟಪೋ ವಿಕಚಸ್ತಥಾ ॥ ೪೧ ॥

---

೩೭. ಮತ್ತು ಆತ್ಮನೂ, ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಈ ಭೂತಗಳೂ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಭೂತಗಣಗಳೂ ಸಹ ಸೇವಿಸುತ್ತಿದ್ದವು.

೩೮. ಪ್ರಕೃತಿಯೂ, ವಿಕಾರಗಳೂ, ಮತ್ತು ಇತರ ಮಹಾಕಾರಣಗಳೂ, ಅಂಗಗಳು, ಉಪಾಂಗಗಳು ಸಹಿತವಾದ ನಾಲ್ಕು ವೇದಗಳೂ, ಲೋಕಪಾಲಕರೂ; ಸಹ ಸೇವೆ ಮಾಡುತ್ತಿದ್ದರು.

೩೯. ಅಲ್ಲದೆ ಲವಗಳೆಂಬ ಕಾಲವಿಶೇಷಗಳೂ, ಋತುಗಳೂ, ಸಂಕಲ್ಪ, ಪ್ರಣವ, ಇವುಗಳೂ ಮತ್ತು ಅಲ್ಲಿದ್ದ ಇತರ ಅನೇಕ ವ್ಯಕ್ತಿಗಳೂ ಎಲ್ಲವೂ ಸೇರಿ ಸೂರ್ಯನನ್ನು ಸೇವಿಸುತ್ತಿದ್ದುವು.

೪೦. ಆ ಸೂರ್ಯಸಭೆಯಲ್ಲಿ ವಿಶೇಷ ವಿಧಾನಗಳಿಂದ ಕೂಡಿದ ಧರ್ಮ, ಅರ್ಥ ಕಾಮ, ಮೋಕ್ಷ ಇವುಗಳೂ; ದ್ವೇಷ, ಹರ್ಷ, ಮೋಹ, ಮತ್ಸರ, ಮಾನ ಇವುಗಳೂ; ಅಲ್ಲಿ ಇದ್ದುವು.

೪೧. ಮತ್ತು ವೃಕ, ವಿಷ್ಣುಸುತ, ಕುಮಾರ, ಪುಷ್ಪಜ, ಗುರು, ಮಾಹೇಶ್ವರ, ಸೌರ, ವಿಟಪ, ವಿಕಚ ಮತ್ತು

ಮಾರುತೋ ವಿಶ್ವಕರ್ಮಾ ಚ ಅಶ್ವಿನಾವನ್ಯವಾಹನೌ ।
ಏವಮುಕ್ತೈಸ್ಸ್ವವಚನೈರ್ಭಾನುನಾ ಪ್ರಭವಿಷ್ಣುನಾ ॥ ೪೨ ॥

ಜಗಾಮ ಕಶ್ಯಪೋ ವೀರ ಸಹಾದಿತ್ಯಾ ಸ್ವಮಾಶ್ರಮಂ ।
ಅದಿತಿರ್ದೇವಮಾತಾ ಚ ತಂ ಗರ್ಭಂ ನಿದಧೇ ಸ್ವಯಂ ॥ ೪೩ ॥

ಭೂತಾತ್ಮಾನಂ ಮಹಾತ್ಮಾನಂ ದಿವ್ಯಂ ವರ್ಷಸಹಸ್ರಕಂ ।
ಪೂರ್ಣೇ ವರ್ಷಸಹಸ್ರೇ ತು ಪ್ರವೃತ್ತೋ ಗರ್ಭ ಉತ್ತಮಃ ॥ ೪೪ ॥

ಸುರಾಣಾಂ ಶರಣಂ ದೇವಾಶ್ಚಾಸುರಾಣಾಂ ವಿನಾಶನಃ ।
ಗರ್ಭಸ್ಥೇನ ತು ತೇನೈವ ಪರಿತ್ರಾತಸ್ಸುತಸ್ತಥಾ ॥ ೪೫ ॥

ಆದದಾನೇ ತು ತೇಜಾಂಸಿ ತ್ರೈಲೋಕ್ಯಸ್ಯ ಸುಖಾವಹೇ ।
ತಸ್ಮಿನ್ ಜಾತೇ ತು ದೇವೇಶೇ ತ್ರೈಲೋಕ್ಯಸ್ಯ ನರಾಧಿಪ ॥ ೪೬ ॥

---

೪೨. ಮಾರುತ, ವಿಶ್ವಕರ್ಮ, ದೇವವೈದ್ಯರಾದ ಅಶ್ವಿನೀ ದೇವತೆಗಳು, ಇವರುಗಳೆಲ್ಲರ ಮಧ್ಯದಲ್ಲಿದ್ದ ಪ್ರಭುವಾದ ಭಾನುವು, ಅವರನ್ನು ಕುರಿತು "ಮುಂದೆ ನಾನು ನಿಮ್ಮಲ್ಲಿ ಅವತರಿಸುವೆ" ಎಂದು ಒಳ್ಳೆಯ ಮಾತನ್ನು ಹೇಳಿದನು.

೪೩. ಅಯ್ಯಾ ವೀರನೇ! ಕೇಳು, ಆಗ ಸೂರ್ಯನ ಈ ದಿವ್ಯವಾಣಿಯನ್ನು ಕೇಳಿ, ಅದಿತಿಯೊಡಗೂಡಿದ ಕಶ್ಯಪನು ಅಲ್ಲಿಂದ ಹೊರಟು ತನ್ನ ಆಶ್ರಮಕ್ಕೆ ಬಂದನು. ಅನಂತರ ಕೆಲವು ದಿನಗಳಲ್ಲಿ ದೇವಮಾತೆಯಾದ ಅದಿತಿಯು ಭೂತಗಳ ಸ್ವರೂಪವುಳ್ಳದ್ದೂ, ಮಹಾಮಹಿಮೆಯುಳ್ಳದ್ದೂ ಆದ ಮಹಾಗರ್ಭವನ್ನು ಧಾರಣೆಮಾಡಿದಳು.

೪೪. ಬಳಿಕ ಸಹಸ್ರವರ್ಷಗಳು ಪೂರ್ಣವಾಗುವ ಪರ್ಯಂತ ಆ ಗರ್ಭವು ಉತ್ತಮರೀತಿಯಲ್ಲಿ ವೃದ್ಧಿಯಾಯಿತು.

೪೫. ದೇವತೆಗಳಿಗೆ ರಕ್ಷಕನೂ, ರಾಕ್ಷಸರಿಗೆ ವಿನಾಶಕನೂ, ಆದ ಸೂರ್ಯನು ತಾನೇ ಆ ಗರ್ಭದಲ್ಲಿದ್ದುದರಿಂದ ಆ ಗರ್ಭಸ್ಥವಾದ ಶಿಶುವು ಸುರಕ್ಷಿತವಾಯಿತು.

೪೬-೪೭. ಅಯ್ಯಾ ನರಾಧಿಪನೇ! ಕೇಳು, ಸೂರ್ಯದೇವನು ತ್ರಿಲೋಕಗಳಿಗೂ ಪ್ರಕಾಶವನ್ನು ಕೊಡುವುದಕ್ಕೂ ಆಶ್ರಯನು. ಮತ್ತು ಲೋಕಕ್ಕೆಲ್ಲಾ ಹಿತವನ್ನು

**ಪ್ರಹತ್ಯ ದೈತ್ಯಸಂಘಾಂಶ್ಚ ಸುರಾಣಾಂ ನಾದವರ್ಧನೇ ।**
**ಅಭವತ್ಪರಮಾನಂದಃ ಸರ್ವೇಷಾಂ ತತ್ರ ತಸ್ಥುಷಾಂ ॥ ೪೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು ಸೂರ್ಯೋತ್ಪತ್ತಿರ್ನಾಮ ಅಷ್ಟಪಂಚಾಶದುಪರಿ ಶತತಮೋಽಧ್ಯಾಯಃ.**



ಉಂಟುಮಾಡತಕ್ಕವನು. ಈ ಸೂರ್ಯದೇವನು ಜನಿಸುತ್ತಲೇ ಇನ್ನು ದೈತ್ಯರನ್ನು ಘಾತಿಸಬಹುದು ಎಂಬುದಾಗಿ ಹರ್ಷಧ್ವನಿಯನ್ನು ಮಾಡಿದರು. ಇದರಿಂದ ಅಲ್ಲಿ ರುವ ಎಲ್ಲರಿಗೂ ಪರಮಾನಂದವಾಯಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೌರಧರ್ಮದಲ್ಲಿ ಸೂರ್ಯೋತ್ಪತ್ತಿಯೆಂಬ ನೂರಐವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ದಕ್ಷಃ ಪ್ರಜಾಪತಿಶ್ಚೈವ ನಮಸ್ಕಾರಂ ಚಕಾರ ಹ ।
ವಿದ್ಯೋತಮಾನೋ ವಪುಷಾ ಸರ್ವಾಭರಣಭೂಷಿತಃ ॥ ೧ ॥

ಉಪಾತಿಷ್ಠತ ದೇವೇಶಂ ಭಾನುಂ ಚರ್ಷಿಗಣೈಸ್ಸಹ ।
ತತೋ ಗಂಧರ್ವಮುಖ್ಯೇಷು ಪ್ರಣದತ್ಸು ವಿಹಾಯಸಿ ।
ಬಹುಭಿಸ್ಸಹ ಗಂಧರ್ವೈಃ ಪ್ರಗಾಯತ್ಸು ಮಹೀಪತೇ ॥ ೨ ॥

ಏವಂ ತೇ ದೇವಗಂಧರ್ವಾ ಉಪಾಗಾಯಂತ ಭಕ್ತಿತಃ
ಉತ್ಪನ್ನಂ ದ್ವಾದಶಾತ್ಮಾನಂ ಭಾಸ್ಕರಂ ವಾರಿತಸ್ಕರಂ ॥ ೩ ॥

---

## ನೂರಐವತ್ತೊಂಭತ್ತನೆಯ ಅಧ್ಯಾಯ

೧. ಬಳಿಕ ಸುಮಂತುಮುನಿವರ್ಯರು ಮುಂದಿನ ಕಥಾಂಶವನ್ನು ಹೇಳತೊಡಗಿ ಎಲೈ ರಾಜನೇ! ಕೇಳು; ಹೀಗೆ ಅದಿತಿಯಲ್ಲಿ ಪುತ್ರಜನನವಾಗುತ್ತಲೆ, ದಕ್ಷಪ್ರಜಾಪತಿಯು ಸರ್ವಾಭರಣಭೂಷಿತನಾಗಿ ಶರೀರಕಾಂತಿಯಿಂದ ಪ್ರಕಾಶಿಸುತ್ತಾ, ಋಷಿಗಳ ಸಮೂಹದಿಂದ ಕೂಡಿ, ದೇವೇಶನಾದ ಶಿಶುರೂಪ ಭಾನುವಿಗೆ ನಮಸ್ಕರಿಸಿದನು.

೨-೩. ಅಯ್ಯಾ ರಾಜನೇ! ಕೇಳು; ಅನಂತರ ಅಂತರಿಕ್ಷದಲ್ಲಿ ದೇವತೆಗಳೂ, ಪ್ರಮುಖರಾದ ಕೆಲವು ಗಂಧರ್ವರೂ, ಹರ್ಷಧ್ವನಿ ಮಾಡುತ್ತಿದ್ದರು. ಅನೇಕ ಗಂಧರ್ವರು ಸಮೂಹವಾಗಿ ಗಾನಮಾಡುತ್ತ ಇದ್ದರು. ಈ ಪ್ರಕಾರ ಆ ದೇವತೆಗಳೂ, ಗಂಧರ್ವರೂ ಸಹ; ಆ ಗರ್ಭದಲ್ಲಿ ಉತ್ಪನ್ನನಾದವನು ಜಲಶೋಷಕನೂ, ದ್ವಾದಶಾತ್ಮಸ್ವರೂಪನೂ ಆದ ಭಾಸ್ಕರನೆಂದೇ ತಿಳಿದು ಭಕ್ತಿಯುತರಾಗಿ ಗಾನಮಾಡುತ್ತಿದ್ದರು.

ಇಂದ್ರೋ ವಿವಸ್ವಾನ್ ಪೂಷಾ ಚ ತ್ವಷ್ಟಾ ಚ ಸವಿತಾ ತಥಾ ।
ಭಗೋಽಂಶುಮಾನರ್ಯಮಾರ್ಕಃ ಪೃಶ್ನಿರ್ಮಾರ್ತಂಡ ಏವ ಚ ।
ಇತ್ಯೇಕಾದಶ ಏವೈತೇ ದ್ವಾದಶೋ ವಿಷ್ಣುರುಚ್ಯತೇ ॥ ೪ ॥

ಏವಂ ದ್ವಾದಶಧಾ ಜಾತಮಂಶುಮಂತಂ ಮಹಾದ್ಭುತಂ ।
ಸ್ತುವಂತಿ ದೇವತಾಸ್ಸರ್ವಾ ಗತಾಶ್ಚ ತರಸಾ ಮಹೀಂ ॥ ೫ ॥

ಮೃಗವ್ಯಾಧಶ್ಚ ಶರ್ವಶ್ಚ ಮೃಗಾಂಕಾಂಕೋ ಮಹಾಯಶಾಃ ।
ಅಜೈಕಪಾದಹಿರ್ಬುಧ್ನ್ಯಃ ಪೀತಃ ಕಾಚಃ ಪರಂತಪಃ ॥ ೬ ॥

ದಮನಶ್ಚೇಶ್ವರಶ್ಚೈವ ಕಪಾಲೀ ಚ ವಿಶಾಂಪತೇ ।
ಸ್ಥಾಣುರ್ಭಗಶ್ಚ ಭಗವಾನ್ ರುದ್ರಾಶ್ಚೈತೇಽವತಸ್ಥಿರೇ ॥ ೭ ॥

ಅಶ್ವಿನೌ ವಸವಶ್ಚಾಷ್ಟೌ ಗರುಡಶ್ಚ ಮಹಾಬಲಃ ।
ವಿಶ್ವೇದೇವಾಶ್ಚ ಸಂಧ್ಯಾಶ್ಚ ತಸ್ಥುಃ ಪ್ರಾಂಜಲಯೋ ನೃಪ ॥ ೮ ॥

---

೪-೫. ಇಂದ್ರ, ವಿವಸ್ವಾನ್, ಪೂಷಾ, ತ್ವಷ್ಟಾ, ಸವಿತೃ, ಭಗ, ಅಂಶುಮಾನ್, ಅರ್ಯಮಾ, ಅರ್ಕ, ಪೃಶ್ನಿ, ಮಾರ್ತಂಡ ಎಂಬ ಹನ್ನೊಂದು ಮಂದಿಯಲ್ಲದೆ ಹನ್ನೆರಡನೆಯವನಾದ ವಿಷ್ಣು ಎಂಬುವನೂ ಸೇರಿ, ಈ ರೀತಿ ಹನ್ನೆರಡು ರೂಪಗಳುಳ್ಳವನಾದರೂ, ಮಹಾಶ್ಚರ್ಯಕರನಾಗಿ ಈ ರೀತಿ ಹುಟ್ಟಿದ ಸೂರ್ಯನನ್ನು, ಎಲ್ಲ ದೇವತೆಗಳೂ ಶಿರಸ್ಸು ನೆಲಕ್ಕೆ ಸೋಂಕುವಂತೆ ಬಾಗಿ ನಮಸ್ಕರಿಸಿ ಸ್ತೋತ್ರಮಾಡುತ್ತಿದ್ದರು.

೬=೭. ಮಹಾಶಯನೂ, ಮೃಗವ್ಯಾಧನೂ, ಶರ್ವನೂ ಎನಿಸಿದ ಚಂದ್ರಶೇಖರಸ್ವರೂಪರಾದ ಅಜ, ಏಕಪಾತ್, ಅಹಿರ್ಬುಧ್ನ್ಯ, ಪೀತ, ಕಾಚ, ಪರಂತಪ, ದಮನ, ಈಶ್ವರ, ಕಪಾಲಿ, ಸ್ಥಾಣು ಮತ್ತು ಷಡ್ಗುಣೈಶ್ವರ್ಯಯುಕ್ತನಾದ ಭಗ, ಈ ಹನ್ನೊಂದುಮಂದಿ ರುದ್ರರೂ ಅಲ್ಲಿ ಬಂದಿದ್ದರು.

೮. ಅಶ್ವಿನೀದೇವತೆಗಳು, ಅಷ್ಟವಸುಗಳು, ಮಹಾಬಲನಾದ ಗರುಡ, ವಿಶ್ವೇದೇವರು, ಸಾಧ್ಯರು ಇವರೆಲ್ಲಾ ಅಂಜಲಿಬದ್ಧರಾಗಿ ಕೈಮುಗಿದು ನಿಂತಿದ್ದರು.

ನಾಗರಾಜೋ ಮಹಾರಾಜ ವಾಸುಕಿಃ ಪ್ರಾಂಜಲಿಃ ಸ್ಥಿತಃ ।
ಅನ್ಯೇ ಚ ಬಹವೋ ನಾಗಾಃ ರಾಕ್ಷಸಾಶ್ಚ ಮಹಾಬಲಾಃ ॥ ೯ ॥

ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಗರುಡಶ್ಚ ಮಹಾಬಲಃ ।
ಅರುಣಶ್ಚಾರುಣಿಶ್ಚೈವ ತತ್ರ ಪ್ರಾಂಜಲಯಃ ಸ್ಥಿತಾಃ ॥ ೧೦ ॥

ಪಿತಾಮಹಶ್ಚ ಭಗವಾನ್ ಸ್ವಯಮಾಗತ್ಯ ಲೋಕಕೃತ್ ।
ಪ್ರಾಹ ದೇವಗುರುಃ ಶ್ರೀಮಾನ್ ಸುರೈಃ ಸರ್ವಮಹರ್ಷಿಭಿಃ ॥ ೧೧ ॥

ಯಸ್ಮಾತ್ಪ್ರೇಕ್ಷಯತೇ ಸರ್ವಂ ಪ್ರಭವಿಷ್ಣುಸ್ಸನಾತನಃ ।
ತಸ್ಮಾಲ್ಲೋಕೇಶ್ವರಃ ಶ್ರೀಮಾನ್ ವಿವಸ್ವಾಂಶ್ಚ ಭವತ್ವಿತಿ ॥ ೧೨ ॥

ದೇವದಾನವಯಕ್ಷಾಣಾಂ ಗಂಧರ್ವೋರಗರಕ್ಷಸಾಂ ।
ಯಸ್ಮಾದಯಮಾದಿದೇವಸ್ತಸ್ಮಾದಾದಿತ್ಯ ಏವ ಹಿ ॥ ೧೩ ॥

---

೯. ಎಲೈ ಮಹಾರಾಜನೇ ! ಕೇಳು, ನಾಗರಾಜನಾದ ವಾಸುಕಿಯೂ, ಇತರ ಅನೇಕ ನಾಗರು, ಮತ್ತು ಮಹಾಬಲರಾದ ರಾಕ್ಷಸರು, ಅಂಜಲಿಬದ್ಧರಾಗಿ ನಿಂತಿದ್ದರು.

೧೦. ಅಲ್ಲದೆ ತಾರ್ಕ್ಷ್ಯ, ಅರಿಷ್ಟನೇಮಿ, ಮಹಾಬಲಶಾಲಿಯಾದ ಗರುಡ, ಅರುಣ, ಆರುಣಿ ಇವರೆಲ್ಲರೂ ಅಲ್ಲಿ ಕೈಮುಗಿದುಕೊಂಡು ನಿಂತಿದ್ದರು.

೧೧. ಲೋಕಕರ್ತನೂ, ಭಗವಂತನೂ ಆದ ಪಿತಾಮಹನು, ದೇವತೆಗಳೊಡನೆಯೂ, ಸಮಸ್ತ ಮಹರ್ಷಿಗಳೊಡನೆಯೂ ಅಲ್ಲಿಗೆ ಬಂದನು. ಆಗ ದೇವಗುರುವಾದ ಬೃಹಸ್ಪತ್ಯಾಚಾರ್ಯನು ಅವರೆಲ್ಲರನ್ನೂ ಕುರಿತು ಹೇಳಲಾರಂಭಿಸಿದನು.

೧೨. " ಓ ದೇವಾದಿಗಳೇ ! ಕೇಳಿ, ಪುರಾತನನಾದ ಪ್ರಭುವಾಗಿದ್ದುಕೊಂಡು ಸರ್ವರಿಗೂ ಎಲ್ಲವೂ ಗೋಚರವಾಗುವಂತೆ ಮಾಡುತ್ತಾನೆಯಾದಕಾರಣದಿಂದ ಲೋಕೇಶನೂ, ಶ್ರೀಮಂತನೂ ಆದ ಇವನಿಗೆ ವಿವಸ್ವಾನ್ ಎಂಬ ಹೆಸರು ಪ್ರಸಿದ್ಧವಾಗಲಿ.

೧೩. ದೇವತೆಗಳು, ದಾನವರು, ಯಕ್ಷರು, ಗಂಧರ್ವರು, ಉರಗರು, ರಾಕ್ಷಸರು ಇವರೆಲ್ಲರಿಗೂ ಇವನು ಆದಿದೇವನು. (ಮೊದಲು ಹುಟ್ಟಿದವನು.) ಆದಕಾರಣದಿಂದ ಇವನು ಆದಿತ್ಯನೆನಿಸಲಿ.

ಏವಮುಕ್ತ್ವಾ ತು ಭಗವಾನ್ ಸಾರ್ಧಂ ದೇವರ್ಷಿಭಿಃ ಪ್ರಭುಃ ।
ನಮಸ್ಕೃತ್ವಾ ಸುಸಂಪೂಜ್ಯ ಯಯೌ ತತ್ಸದನಂ ಪ್ರತಿ ॥ ೧೪ ॥

ಯಾ ಗತಿರ್ಯಜ್ಞಶೀಲಾನಾಂ ಯಾ ಗತಿಃ ಪುಣ್ಯಕರ್ಮಿಣಾಂ ।
ಯಾ ಗತಿಃ ಸಿದ್ಧಯೋಗಾನಾಂ ಯಾ ಗತಿಶ್ಚ ಮಹಾತ್ಮನಾಂ ॥ ೧೫ ॥

ಯಸ್ಯಾಷ್ಟಗುಣಮೈಶ್ವರ್ಯಂ ಸಮಭೂದ್ದೇವಸತ್ತಮಂ ।
ಯಂ ಪ್ರಾಪ್ಯ ಶಾಶ್ವತಂ ವಿಪ್ರಾ ನಾವರ್ತಂತೇ ಭವಾರ್ಣವೇ ॥ ೧೬ ॥

ವಾಲಖಿಲ್ಯಾದಯೋ ಯೇ ಚ ಸರ್ವಾಶ್ರಮನಿವಾಸಿನಃ ।
ಸೇವಂತೇ ಯಂ ಯತಾತ್ಮಾನೋ ದುಶ್ಚರಂ ವ್ರತಮಾಸ್ಥಿತಾಃ ॥ ೧೭ ॥

ಯೋಽನಂತ ಇವ ನಾಗೇಷು ಯಸ್ಯ ತೇ ಸರ್ವಯೋಗಿನಃ ।
ಸಹಸ್ರಮೂರ್ಧಾ ರಕ್ತಾಕ್ಷಃ ಶೇಷಾದಿಭಿರನುತ್ತಮೈಃ ॥ ೧೮ ॥

---

೧೪. ಹೀಗೆಂಬದಾಗಿ ಬೃಹಸ್ಪತಿಯು ಹೇಳಲು, ಪ್ರಭುವೂ ಭಗವಂತನೂ ಆದ ಬ್ರಹ್ಮನು, ದೇವರ್ಷಿಗಳೊಡಗೂಡಿ ಆ ದೇವನನ್ನು ಚೆನ್ನಾಗಿ ಪೂಜಿಸಿ ನಮಸ್ಕರಿಸಿ, ತನ್ನ ನಿವಾಸವನ್ನು ಕುರಿತು ಸಾಗಿದನು.

೧೫. ಬಳಿಕ ಬೃಹಸ್ಪತ್ಯಾಚಾರ್ಯನು ತನ್ನ ಭಾಷಣವನ್ನು ಮುಂದುವರಿಸುವನಾಗಿ "ಯಜ್ಞಶೀಲನಿಗೆ ಪ್ರಾಪ್ಯನೂ, ಪುಣ್ಯಕರ್ಮ ಮಾಡಿದವರಿಗೆ ಮಾತ್ರ ಪ್ರಾಪ್ಯನೂ, ಯೋಗಸಿದ್ಧಿ ಹೊಂದಿದವರಿಗೆ ಪ್ರಾಪ್ಯನೂ, ಮಹಾತ್ಮರಿಗೆ ಪ್ರಾಪ್ಯನೂ, ಆದ ಮಹಾ ಮಹಿಮನೇ ಇವನು."

೧೬. "ಎಲ್ಲ ದೇವಶ್ರೇಷ್ಠನಾದಂಥ ಇವನಿಗೆ ಅಷ್ಟಗುಣವಾದ ಐಶ್ವರ್ಯವಿದೆ. ಶಾಶ್ವತನಾದ ಇವನನ್ನು ಸೇರಿದವರು ಸಂಸಾರಸಮುದ್ರಕ್ಕೆ ಹಿಂದಿರುಗುವುದಿಲ್ಲ.

೧೭. ಬ್ರಹ್ಮಚರ್ಯಾದಿ ಸರ್ವಾಶ್ರಮಗಳಲ್ಲೂ ವಾಸಿಸುವ ವಾಲಖಿಲ್ಯಾದಿ ಬ್ರಾಹ್ಮಣರು, ನಿಗ್ರಹೀತಮನಸ್ಕರಾಗಿ ಮಹಾನಿಯಮದಿಂದ ಇವನನ್ನು ಸೇವಿಸುವರು.

೧೮. ಇವನು ನಾಗರಲ್ಲಿ ಅನಂತನ ಹಾಗೆ ಶ್ರೇಷ್ಠನಾಗಿ ಇರುವನು. ಯೋಗಿಗಳು ಸರ್ವರೂ ಇವನಿಗೆ ಸಂಬಂಧಿಸಿದವರು. ಸಹಸ್ರ ಶಿರಸ್ಸುಗಳು, ಕೆಂಪಾದ ನೇತ್ರಗಳೂ ಉಳ್ಳವನಾಗಿ, ಇವನು ಸುಖಾಪೇಕ್ಷೆಯುಳ್ಳ ಸರ್ವೋತ್ತಮರಾದ ಶೇಷಾದಿಗಳಿಂದ ಪೂಜಿಸಲ್ಪಡುತ್ತಾನೆ.

ಯೋ ಯಜ್ಞ ಇತಿ ವಿಪ್ರೇಂದ್ರೈರಿಜ್ಯತೇ ಸುಖಮಿಪ್ಸುಭಿಃ ।
ಸರ್ವೇ ಚ ಯಂ ಯತಪ್ರಾಣಾ ಧ್ಯಾಯಂತಿ ಬ್ರಹ್ಮರೂಪಿಣಂ ॥ ೧೯ ॥

ಯಂ ವೇದವಿದೋ ಗಾಯಂತಿ ವೇತ್ತಾರಂ ಜ್ಞಾನದಾಯಿನಂ ।
ತಂ ಪುತ್ರಂ ದ್ವಾದಶಾತ್ಮಾನಂ ಕಶ್ಯಪಃ ಪ್ರಾಪ್ಯ ಸತ್ತಮಂ ॥ ೨೦ ॥

ಮುದಂ ಲೇಭೇ ಸಹಾದಿತ್ಯಾ ಸುಖಂ ಚ ಪರಮಂ ವಿಭೋ ।
ಲೋಕಶ್ಚ ಮುಮುದೇ ಸರ್ವೋ ರಾಕ್ಷಸಾ ಭಯಮಾಪ್ನುವನ್ ॥ ೨೧ ॥

ಮಧುಪಿಂಗಲೋ ಮಹಾಬಾಹುಃ ಕಂಬುಗ್ರೀವೋ ಹಸನ್ನಿವ ।
ಇಂಗುದೀಬದ್ಧಮುಕುಟೋ ದಿಶಃ ಪ್ರಜ್ವಲಯನ್ನಿವ ॥ ೨೨ ॥

---

೧೯. " ಯೋಗಿಗಳು ಸರ್ವರೂ ಶ್ವಾಸನಿಗ್ರಹಮಾಡಿಕೊಂಡು ಬ್ರಹ್ಮರೂಪನೆಂದು ಇವನನ್ನು ಧ್ಯಾನಿಸುವರು. ಸುಖಾರ್ಥಿಗಳಾದ ಬ್ರಾಹ್ಮಣಶ್ರೇಷ್ಠರು ಇವನನ್ನು ಯಜ್ಞರೂಪನೆಂಬದಾಗಿ ಪೂಜಿಸುತ್ತಾರೆ.

೨೦. " ವೇದವನ್ನು ಬಲ್ಲವರು ಇವನನ್ನೇ ಗಾನಮಾಡುತ್ತಾರೆ. ಜ್ಞಾತೃವೂ, ಜ್ಞಾನದಾಯಕನೂ, ದ್ವಾದಶಾತ್ಮನೂ ಆದ ಇವನನ್ನು, ಕಶ್ಯಪನು ತನ್ನ ಪುಣ್ಯದಿಂದ ಶ್ರೇಷ್ಠಪುತ್ರನನ್ನಾಗಿ ಪಡೆದಿದ್ದಾನೆ.

೨೧. " ಹೀಗೆ ಪಡೆದುದರಿಂದ ಅದಿತಿಯೊಡನೆ ಕೂಡಿ ಸಂತೋಷವನ್ನೂ, ಶ್ರೇಷ್ಠವಾದ ಸುಖವನ್ನೂ ಹೊಂದಿದನು. ಸಮಸ್ತಲೋಕವೂ ಸಂತೋಷಹೊಂದಿತು. ಆದರೆ ರಾಕ್ಷಸರು ಮಾತ್ರ ಭಯವನ್ನು ಹೊಂದಿದರು " ಎಂದು ವಿಸ್ತಾರವಾಗಿ ವಿವರಿಸಿದನು.

೨೨. ಶಂಖದಂತೆ ಕೊರಳುಳ್ಳವನೂ, ಮಹಾಬಾಹುವೂ, ಮಹಾತೇಜಸ್ವಿಯೂ ಮಧುವಿನಂತೆ ಪಿಂಗಳವರ್ಣನೂ, ನಗೆಯಿಂದ ಕೂಡಿದವನೂ, ಆಗಿ ಇಂಗುದೀಲತೆಯಿಂದ ಜಟೆಯನ್ನು ಕಿರೀಟಾಕೃತಿಯಾಗಿ ಕಟ್ಟಿಕೊಂಡ ಆದಿತ್ಯರೂಪೀ ಕುಮಾರನು ದಿಕ್ಕುಗಳನ್ನೆಲ್ಲಾ ಪ್ರಕಾಶಪಡಿಸುವವನಾಗಿ ಮಾತಾಡಲು ತೊಡಗಿ

**ಸ ಉವಾಚ ಮಹಾತೇಜಾಃ ಕಶ್ಯಪಂ ಚರ್ಷಿಸತ್ತಮಂ ।**
**ಏಷೋऽಹಂ ತವ ಪುತ್ರತ್ವಂ ಗತೋ ಗರ್ಭಸ್ಯ ಸಿದ್ಧಯೇ　　॥ ೨೩ ॥**

**ದತ್ವಾ ವರಂ ಪುರಾ ವಿಪ್ರ ವಿರಂಚಸ್ಯ ಮಹಾತ್ಮನಃ ।**
**ತಸ್ಮಾತ್ತ್ವಮೃಷಿಶಾರ್ದೂಲ ಕುರುಸೃಷ್ಟಿಮನೂಪಮಂ　　॥ ೨೪ ॥**

**ಏವಮಾರಾಧ್ಯ ದೇವೇಶಂ ಬ್ರಹ್ಮಾ ಸೃಷ್ಟಿಮವಾಪ್ತವಾನ್ ।**
**ಆರಾಧ್ಯ ಕಶ್ಯಪಶ್ಚಾಪಿ ಭಾಸ್ಕರಂ ಸುತಮಾಪ್ತವಾನ್　　॥ ೨೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಉಭಯಸಪ್ತಮೀ ಮಾಹಾತ್ಮ್ಯೇ ಸೂರ್ಯಾವತಾರ ವರ್ಣನಂ ನಾಮ ಏಕೋನಷಷ್ಟ್ಯುತ್ತರ ಶತತಮೋऽಧ್ಯಾಯಃ.**



---

೨೩. ಋಷಿಗಳಲ್ಲಿ ಅತಿಶ್ರೇಷ್ಠನಾದ ಕಶ್ಯಪನನ್ನು ಕುರಿತು "ನಾನು ನಿನ್ನ ಪತ್ನಿಯ ಗರ್ಭಸಿದ್ಧಿಗೋಸ್ಕರ ನಿನ್ನ ಪುತ್ರನಾಗಿ ಅವಿರ್ಭವಿಸಿದ್ದೇನೆ" ಎಂದು ಹೇಳಿದನು.

೨೪. ಎಲೈ ಋಷಿಶ್ರೇಷ್ಠನಾದ ವಿಪ್ರನೇ! ಕೇಳು; ಪೂರ್ವದಲ್ಲಿ ಮಹಾತ್ಮನಾದ ವಿರಂಚನಿಗೆ ಸೂರ್ಯನು ವರವನ್ನು ಕೊಟ್ಟು ದಿವ್ಯವಾಗಿ ಸೃಷ್ಟಿಮಾಡು" ಎಂದು ಹೇಳಿದ್ದನು.

೨೫. ಅದರಂತೆ ಬ್ರಹ್ಮನು ದೇವೇಶನನ್ನು ಆರಾಧನಮಾಡಿ ಸೃಷ್ಟಿಶಕ್ತಿಯನ್ನು ಹೊಂದಿದನು. ಕಶ್ಯಪನೂ ಸೂರ್ಯನನ್ನಾರಾಧಿಸಿ ಸೂರ್ಯನನ್ನು ಪುತ್ರನನ್ನಾಗಿ ಪಡೆದುಕೊಂಡನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಉಭಯ ಸಪ್ತಮೀ ಮಹಾತ್ಮೆಯಲ್ಲಿ ಸೂರ್ಯಾವತಾರ ವರ್ಣನವೆಂಬ ನೂರಐವತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಅಹೋ ದೇವಸ್ಯ ಚರಿತಂ ಭಾಸ್ಕರಸ್ಯ ತ್ವಯೋದಿತಂ ।
ಬ್ರಹ್ಮಾದಯೋಽಪಿ ಯಂ ನಿತ್ಯಂ ಪೂಜಯಂತಿ ವಿಧಾನತಃ ॥ ೧ ॥

ಬ್ರಹ್ಮಾ ವಿಷ್ಣುಃ ಸುರಾ ಬ್ರಹ್ಮಂಸ್ತಮಾರಾಧ್ಯ ದಿವಾಕರಂ ।
ದದೃಶುಃ ತಸ್ಯ ಕಿಂಭೂತಂ ರೂಪಂ ಯತ್ತನ್ಮಹಾದ್ಭುತಂ ॥ ೨ ॥

॥ ಸುಮಂತುರುವಾಚ ॥

ಆರಾಧ್ಯ ದೇವಮೀಶಾನಂ ಭಾಸ್ಕರಂ ಸೂತಿಕಾರಕಂ ।
ಕವಿಷ್ಣೂ ಕುರುಶಾರ್ದೂಲ ಜಗ್ಮತುಸ್ತೌ ಹಿಮಾಚಲಂ ॥ ೩ ॥

---

## ನೂರಅರವತ್ತನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು—ಸ್ವಾಮಿ! ಬ್ರಹ್ಮಾದಿಗಳು ಯಾವಾಗಲೂ ವಿಧಿ ವಿಧಾನದಿಂದ ಪೂಜಿಸುವ ಸೂರ್ಯದೇವನ ವಿಷಯವಾಗಿ ನೀನು ಹೇಳಿದ ಚರಿತವು ಆಶ್ಚರ್ಯಕರವಾಗಿದೆ.

೨. ಎಲೈ ಬ್ರಾಹ್ಮಣಶ್ರೇಷ್ಠನೇ! ಬ್ರಹ್ಮನೂ, ವಿಷ್ಣುವೂ, ದೇವತೆಗಳೂ ಆ ದಿವಾಕರನನ್ನು ಪೂಜಿಸಿ ಅವನ ರೂಪವನ್ನು ನೋಡಿದರಷ್ಟೆ. ಅದು ಮಹಾ ಅದ್ಭುತವಾಗಿದ್ದಿತಲ್ಲವೇ ? ಎಂದು ಪ್ರಶ್ನೆಮಾಡಿದನು.

೩. ಆಗ ಸುಮಂತುಮುನಿವರ್ಯರು ಆತನಿಗೆ ಈರೀತಿ ಉತ್ತರ ಹೇಳುತ್ತಾರೆ— ಈಶಾನನೂ (ಲೋಕೇಶನೂ) ಸೃಷ್ಟಿಕರ್ತನೂ ಆದ ಆ ದಿವಾಕರನನ್ನು ಆರಾಧಿಸಿ, ಆ ಬ್ರಹ್ಮ ವಿಷ್ಣು ಇವರುಗಳೂ, ದೇವತೆಗಳೂ ಹಿಮಾಚಲಕ್ಕೆ ಹೋದರು.

ಗೋಪತೇರಂತಿಕಂ ವೀರಂ ಪ್ರಹೃಷ್ಟೌ ವಿಭುದರ್ಶನೇ ।
ಕುಂದೇಂದು ಸನ್ನಿಭಂ ದ್ರಷ್ಟುಂ ಕಂಜಜಶ್ಚಾಚ್ಯುತಶ್ಚ ತೌ ॥ ೪ ॥

ದದೃಶತುರ್ಮಹಾತ್ಮಾನಂ ಚಂದ್ರಾರ್ಧಕೃತಶೇಖರಂ ।
ಪೂಜಯಂತಂ ವಿವಸ್ವಂತಂ ಭಾಸ್ಕರಂ ವೀರವನ್ನೃಪ ॥ ೫ ॥

ಅಚ್ಯೋಚತುರ್ಮಹಾತ್ಮಾನಂ ಕ ವಿಷ್ಣೂ ತಂ ತ್ರಿಲೋಚನಂ ।
ಭೋ ಭೋ ಭೀಮ ಸುರಜ್ಯೇಷ್ಠ ಪಶ್ಯಾವಾಮಿಹ ಚಾಗತೌ ॥ ೬ ॥

ಶ್ರುತ್ವೋವಾಚ ತಯೋರ್ವಾಕ್ಯಂ ಕಂಜಜಸ್ಯಾಚ್ಯುತಸ್ಯ ಚ ।
ಪ್ರಣಮ್ಯ ಶಿರಸಾ ಭೂಮೌ ಕೃತ್ವಾ ಪೂಜಾಂ ವಿಧಾನತಃ ॥ ೭ ॥

ಉವಾಚ ಮಧುರಂ ವಾಕ್ಯಂ ಶಿಕ್ಷಾಕ್ಷರಸಮನ್ವಿತಂ ।
ಹರ್ಷಗದ್ಗದಯಾ ವಾಚಾ ದಿಶಿಸ್ಸನ್ನಾದಯನ್ನಿವ ॥ ೮ ॥

---

೪. ಆ ಬ್ರಹ್ಮನೂ, ವಿಷ್ಣುವೂ; ಮಲ್ಲಿಯಹೂ, ಚಂದ್ರ ಇವರಿಗೆ ಸದೃಶವಾದ ಶುಭ್ರಕಾಂತಿಯುಳ್ಳ ಪರಮೇಶ್ವರನ ವ್ಯೋಮಪೂಜೆಯ ದರ್ಶನಮಾಡುವುದಕ್ಕಾಗಿ ಸಂತೋಷದಿಂದ ಹೊರಟರು.

೫. ಮಹಾತ್ಮನೂ, ಚಂದ್ರಶೇಖರನೂ ಆದ ತ್ರಿಲೋಚನನೂ ಕೂಡ, ಸರ್ವ ವ್ಯಾಪಿಯೂ ಭಾಸ್ಕರನೂ ಎನಿಸಿದ ಸೂರ್ಯನನ್ನು, ಅಲ್ಲಿ ಪೂಜಿಸುತ್ತಿರುವುದನ್ನು ಕಂಡರು.

೬. ಅವರು ಹಾಗೆ ಪೂಜೆಮಾಡುತ್ತಾ ಕುಳಿತಿರುವ ಶಿವನನ್ನು ಕುರಿತು "ಅಯ್ಯಾ ದೇವಜ್ಯೇಷ್ಠನಾದ ಭೀಮನೇ! ನಾವು ಬಂದಿದ್ದೇವೆ ಇಲ್ಲಿನೋಡು" ಎಂದರು.

೭. ಬ್ರಹ್ಮನ ಮತ್ತು ವಿಷ್ಣುವಿನ ಆ ಮಾತನ್ನು ಕೇಳಿ ಶಿವನು ವಿಧಿವಿಧಾನ ದಂತೆ ಇವರನ್ನು ಪೂಜಿಸಿ ತಲೆಬಗ್ಗಿ ನಮಿಸಿ ಮಾತಾಡಲು ಉದ್ಯುಕ್ತನಾಗಿ

೮. ಬಳಿಕ ಶಿಕ್ಷಾಕ್ಷರಗಳಿಂದ ಕೂಡಿದ ಮಧುರವಾಕ್ಯವನ್ನು, ಸಂತೋಷದಿಂದ ಗದ್ಗದವಾದ ಧ್ವನಿಗೂಡಿ ದಿಕ್ಕುಗಳಲ್ಲಿ ಪ್ರತಿಧ್ವನಿಯಾಗುವಂತೆ, ಈ ಪ್ರಕಾರ ಹೇಳಿದನು.

ಕಿಮಾರಾಧ್ಯ ರವಿಂ ಪ್ರಾಪ್ತೌ ಸರ್ವದೇವವರಂ ವಿಭುಂ ।
ಕಥ್ಯತಾಂ ನಿಖಿಲಂ ದೇವೌ ಪರಮಂ ಕೌತುಕಂ ಮಮ ॥ ೯ ॥

ದೃಷ್ಟವನ್ತೌ ಪರಂ ಕಿಂಚಿದ್ರೂಪಂ ದೇವಸ್ಯ ಶಂಕರಂ ।
ಅವ್ಯಯಸ್ಯಾಪ್ರಮೇಯಸ್ಯ ಭಾನೋರಮಿತತೇಜಸಃ ॥ ೧೦ ॥

ನಿಶಮ್ಯ ವಚನಂ ವೀರ ಶಂಕರಸ್ಯ ಮಹಾತ್ಮನಃ ।
ಊಚತುಸ್ತೌ ಮಹಾತ್ಮಾನೌ ಕವಿಷ್ಣೂ ದೇವಸತ್ತಮೌ ॥ ೧೧ ॥

ನ ತತ್ಪಶ್ಯಾವಹೇ ರೂಪಂ ಯತ್ತತ್ಪರಮಮುದ್ಭುತಂ ।
ಆರಾಧಯಿತುಮೇವಾಪಿ ಹ್ಯಾಗತೌ ತೇಽಂತಿಕಂ ಚ ತತ್ ॥ ೧೨ ॥

ತಸ್ಮಾದಾರಾಧಯಾವೋ ಹಿ ಏಕೀಭೂಯ ವಿಭಾವಸುಂ ।
ಗತ್ವೋದಯಗಿರಿಂ ಪುಣ್ಯಂ ಪರ್ವತಂ ಕನಕೋಜ್ವಲಂ ॥ ೧೩ ॥

---

೯. ಎಲೈ ಮಹಾಬಾಹುವೇ ! ಸರ್ವಶ್ರೇಷ್ಠನಾದ ರವಿಯನ್ನು ಸೇವಿಸಿ, ನೀವು ಏನನ್ನು ಪಡೆದುಕೊಂಡಿರಿ ? ಎಲ್ಲವನ್ನೂ ಹೇಳಿ. ನನಗೆ ತುಂಬಾ ಕುತೂಹಲವುಂಟಾಗಿದೆ. ''

೧೦. " ನಾಶರಹಿತನೂ, ಮಹಿಮೆಯನ್ನು ತಿಳಿಯಲು ಅಸಾಧ್ಯನೂ, ಅಪರಿಮಿತ ತೇಜಸ್ಸುಳ್ಳವನೂ, ಆಗಿರುವ ಸೂರ್ಯದೇವನ ಸುಖಕರವಾದ ಮತ್ತು ಉತ್ಕೃಷ್ಟವಾದ ರೂಪವನ್ನು ಸ್ವಲ್ಪಮಟ್ಟಿಗಾದರೂ ನೀವು ನೋಡಿದಿರಾ? ಎಂದು ಕೇಳಿದನು."

೧೧. ಅಯ್ಯಾ ವೀರನೇ ! ಕೇಳು, ಮಹಾತ್ಮರೂ, ದೇವಶ್ರೇಷ್ಠರೂ ಆದ ಆ ಬ್ರಹ್ಮ, ವಿಷ್ಣು ಇವರಿಬ್ಬರೂ ಮಹಾತ್ಮನಾದ ಶಿವನ ಈ ಮಾತನ್ನು ಕೇಳಿ ಮುಂದೆ ಹೇಳುವಂತೆ ಮಾತನಾಡತೊಡಗಿದರು.

೧೨. " ನಾವಿಬ್ಬರೂ ಶ್ರೇಷ್ಠವೂ, ಅದ್ಭುತವೂ ಆದ ಯಾವ ರೂಪವನ್ನು ಆರಾಧನ ಮಾಡಲು ನಿನ್ನ ಸಮೀಪಕ್ಕೆ ಬಂದೆವೋ ಆ ರೂಪ ಕಾಣುವುದಿಲ್ಲ."

೧೩. " ಆದುದರಿಂದ ಎಲ್ಲರೂ ಒಟ್ಟಿಗೆ ಸುವರ್ಣದಂತೆ ತೇಜೋಮಯವೂ ಪುಣ್ಯಕರವೂ ಆದ ಉದಯಗಿರಿ ಎಂಬ ಪರ್ವತಕ್ಕೆ ಹೋಗಿ ಅಲ್ಲಿ ಆ ಸೂರ್ಯದೇವನನ್ನು ಆರಾಧಿಸೋಣ " ಎಂದರು.

ಶ್ರುತ್ವಾ ತು ವಚನಂ ವೀರ ಕಂಜಜಾಚ್ಯುತಯೋರ್ಹರಃ ।
ತಥೇತ್ಯಾಹ ಮಹಾಬಾಹೋ ಹರ್ಷಾದುತ್ಫುಲ್ಲಲೋಚನಃ　　॥ ೧೪ ॥

ಅಥ ತೇ ರಾಜಶಾರ್ದೂಲ ವಿವಿಗೋಗತಯೋ ನೃಪ ।
ಜಗ್ಮುಸ್ತಂ ಪರ್ವತಶ್ರೇಷ್ಠಮುದಯಾಚಲಮಾಶು ವೈ　　॥ ೧೫ ॥

ತಮಾಸಾದ್ಯ ನಗಂ ಪುಣ್ಯಂ ಶೃಂಗೈಸ್ತ್ರಿಭಿರಲಂಕೃತಂ ।
ನಾನಾಧಾತುಪಿನದ್ಧಾಂಗಂ ನಾನಾಧಾತುವಿಭೂಷಿತಂ　　॥ ೧೬ ॥

ಆರಾಧನಾಯ ವಿಧಿವತ್ ಯತ್ನಂ ಚಕ್ರುರ್ವಿಭಾವಸೋಃ ।
ಸ್ತುವಂತಸ್ತೇ ಸಮರ್ಚಂತೋ ಧ್ಯಾಯಂತಶ್ಚ ವಿಭಾವಸುಂ　　॥ ೧೭ ॥

ದಿವ್ಯವರ್ಷಸಹಸ್ರಾಂತೇ ತಪಂತಂ ಸಂಸ್ಥಿತಾ ನಗೇ ।
ಪದ್ಮಾಸನಗತೋ ಬ್ರಹ್ಮಾ ಧ್ಯಾಯಮಾನೋ ದಿವಾಕರಂ　　॥ ೧೮ ॥

---

೧೪. ಅಯ್ಯಾ ಮಹಾಬಾಹುವೇ! ಕೇಳು ; ಬ್ರಹ್ಮ, ವಿಷ್ಣುಗಳು ಹೇಳಿದ ಈ ಮಾತನ್ನು ಕೇಳಿ, ಸಂತೋಷದಿಂದ ಕಣ್ಣುಗಳರಳಲಾಗಿ ಪರಮೇಶ್ವರನು " ಹಾಗೆಯೇ ಆಗಲಿ " ಎಂದು ನುಡಿದನು.

೧೫. ಎಲೈ ರಾಜಶ್ರೇಷ್ಠನೇ! ಕೇಳು ; ಆ ಮೇಲೆ ಗರುಡಧ್ವಜ, ಹಂಸಧ್ವಜ ವೃಷಭಧ್ವಜ ಇವರು ಮೂವರೂ ಪರ್ವತಶ್ರೇಷ್ಠವಾದ ಉದಯಾಚಲಕ್ಕೆ ಜಾಗ್ರತೆಯಾಗಿ ಹೋದರು.

೧೬. ಮೂರುಶಿಖರಗಳಿಂದ ಶೋಭಿಸುವುದೂ ನಾನಾಧಾತುವಸ್ತುಗಳಿಂದ ಕೂಡಿದುದೂ, ನಾನಾವರ್ಣಗಳಿಂದ ಅಲಂಕೃತವಾದುದೂ, ಪುಣ್ಯಕರವೆನಿಸಿರುವುದೂ, ಆದ ಆ ಪರ್ವತವನ್ನು ಸೇರಿ ಅಲ್ಲಿ ಶಾಸ್ತ್ರೋಕ್ತವಾಗಿ ಸೂರ್ಯಾರಾಧನೆ ಮಾಡಲು ಯತ್ನಿಸಿದರು.

೧೭. ಅವರು ಸೂರ್ಯನನ್ನು ಸ್ತುತಿಸುತ್ತಲೂ, ಪೂಜಿಸುತ್ತಲೂ, ಧ್ಯಾನ ಮಾಡುತ್ತಲೂ, ದೇವಮಾನದ ಸಹಸ್ರವರ್ಷಗಳವರೆಗೂ ಆ ಪರ್ವತದಲ್ಲಿ ತಪಸ್ಸು ಮಾಡಿಕೊಂಡಿದ್ದರು.

೧೮. ಅವರಲ್ಲಿ ಬ್ರಹ್ಮನು ಪದ್ಮಾಸನ ಹಾಕಿಕೊಂಡು ಕುಳಿತು, ಸೂರ್ಯದೇವನನ್ನು ಧ್ಯಾನಿಸುತ್ತಾ ಇದ್ದನು. ತ್ರಿಲೋಚನನಾದ ರುದ್ರನು ಕೈಗಳನ್ನು ಮೇಲಕ್ಕೆ ಎತ್ತಿಕೊಂಡಿದ್ದನು.

ಸ್ಥಾಣುವತ್ಸಂಸ್ಥಿತೋ ಭೂಮಾವೂರ್ಧ್ವಬಾಹುಸ್ತ್ರಿಲೋಚನಃ ।
ಪಂಚಾಗ್ನಿಂ ಭಜಮಾನಸ್ತು ಸ್ಥಿತೋ ವಿಷ್ಣುರವಾಕ್ಶಿರಾಃ ॥ ೧೯ ॥

ಏವಂ ವರ್ಷಸಹಸ್ರಾಂತೇ ತಪಶ್ಚಕ್ರುಸ್ಸುದಾರುಣಂ ।
ಆರಾಧಯಂತೋ ವಿಧಿವದ್ಗೋಪತಿಂ ಪುತ್ರಮಾಲಿನಂ ॥ ೨೦ ॥

ಅಥ ಬ್ರಹ್ಮೇಶವಿಷ್ಣೂನಾಂ ಕುರ್ವತಾಂ ತಪ ಉತ್ತಮಂ ।
ತುತೋಷ ಭಗವಾನ್ ಭಾನುರುವಾಚ ಚ ಮಹೀಪತೇ ॥ ೨೧ ॥

ಬ್ರಹ್ಮನ್ ಶಂಭೋ ಹರೇ ಬ್ರೂತ ಮತ್ತಃ ಕಿಮಭಿವಾಂಛಥ ।
ತುಷ್ಟೋಽಹಂ ಭವತಾಂ ದಾತುಮಿಹಾಯಾತೋ ವರಂ ಸ್ವಯಂ ॥ ೨೨ ॥

॥ ಸುಮಂತುರುವಾಚ ॥

ನಿಶಮ್ಯ ವಚನಂ ಭಾನೋಃ ಶಾಂತಂ ಹೃದ್ಯಂ ಮನೋರಮಂ ।
ಪ್ರಣಮ್ಯ ವಿಷ್ಣುಬ್ರಹ್ಮೇಶಾ ಇದಂ ವಚನಮಬ್ರುವನ್ ॥ ೨೩ ॥

---

೧೯. ಮತ್ತು ನೆಲದಮೇಲೆ ಸ್ಥಾಣು(ಮೋಟಾದ ಮರದಂತೆ)ವಿನಂತೆ ನಿಂತನು. ವಿಷ್ಣುವು ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಾ ತಲೆಕೆಳಗಾಗಿ ನಿಂತನು.

೨೦. ಪುತ್ರಮಾಲಿನಿಯೂ, ಗೋಪತಿಯೂ ಆದ ಸೂರ್ಯನನ್ನು ಅವರು ವಿಧಿವತ್ತಾಗಿ ಆರಾಧಿಸುತ್ತಾ ಸಹಸ್ರವರ್ಷಗಳ ಪರ್ಯಂತ ಹೀಗೆ ಅತಿ ಕಠೋರವಾದ ತಪಸ್ಸನ್ನು ಮಾಡಿದರು.

೨೧. ಎಲೈ ರಾಜನೇ! ಬ್ರಹ್ಮ, ವಿಷ್ಣು, ಈಶ ಇವರು ಹೀಗೆ ಉತ್ತಮವಾದ ತಪಸ್ಸನ್ನು ಮಾಡುತ್ತಿರಲು, ಭಗವಂತನಾದ ಸೂರ್ಯನು ಸಂತುಷ್ಟನಾಗಿ ಹೀಗೆಂದು ಹೇಳಿದನು.

೨೨. " ಓ ಬ್ರಹ್ಮ, ವಿಷ್ಣು, ಮಹೇಶ್ವರರೇ! ನನ್ನಿಂದ ನೀವು ಏನನ್ನು ಅಪೇಕ್ಷಿಸುವಿರಿ? ಎಂಬುದನ್ನು ಹೇಳಿ, ನಿಮ್ಮ ತಪಸ್ಸಿಗೆ ಸಂತುಷ್ಟನಾದ ನಾನು ನಿಮಗೆ ವರ ಕೊಡಲು ಸಾಕ್ಷಾತ್ತಾಗಿ ಬಂದಿದ್ದೇನೆ " ಎಂದನು.

೨೩. ಸುಮಂತುಮುನಿವರ್ಯರು ತಮ್ಮ ಮಾತನ್ನು ಮುಂದುವರಿಸಿ ಹೇಳುತ್ತಾರೆ, ಶಾಂತಿಪ್ರದವೂ, ಹೃದಯಕ್ಕೆ ಹಿತವೂ, ಮನಸ್ಸನ್ನು ವಿನೋದಪಡಿಸುವುದೂ ಆದ ಸೂರ್ಯನ ಈ ಮಾತನ್ನು ಕೇಳಿ, ವಿಷ್ಣು, ಬ್ರಹ್ಮ, ಈಶ್ವರ ಇವರು ನಮಸ್ಕರಿಸಿ ಹೀಗೆಂದರು.

ಕೃತಕೃತ್ಯಾ ವಯಂ ಸರ್ವೇ ಪ್ರಸಾದಾತ್ತವ ಗೋಪತೇ ।
ತ್ವಾಮಾರಾಧ್ಯ ಪುರಾ ದೇವ ತ್ವತ್ತಃ ಪ್ರಾಪ್ಯ ವರಂ ಶುಭಾಂ ॥ ೨೪ ॥

ಉತ್ಪತ್ತಿಸ್ಥಿತಿನಾಶೇಷು ವಯಂ ಸರ್ವೇ ದಿವಾಕರ ।
ಸಂಭೂಯೇಹ ಸಮರ್ಥಾ ವೈ ತ್ವತ್ಪ್ರಸಾದಾನ್ನ ಸಂಶಯಃ ॥ ೨೫ ॥

ಕಿಂತ್ವೇವಂ ದೇವದೇವೇಶ ವರಮಿಚ್ಛಾಮಹೇ ವಿಭೋ ।
ಯತ್ತೇ ಪರಮಕಂ ರೂಪಂ ದುರ್ಲಭಂ ದುರ್ದೃಶಂ ತಥಾ ॥ ೨೬ ॥

ತಸ್ಮಾದಸ್ಮಾಜ್ಜಗನ್ನಾಥ ರೂಪಂ ದರ್ಶಯ ತೇಽಚ್ಯುತಂ ।
ಸರ್ವದೇವಮಯಂ ಯತ್ತೇ ತತ್ತ್ವಯೋಕ್ತಂ ಪುರಾನಘ ॥ ೨೭ ॥

ತೇಷಾಂ ತದ್ವಚನಂ ಶ್ರುತ್ವಾ ಬ್ರಹ್ಮವಿಷ್ಣ್ವೀಶಭಾಷಿತಂ ।
ದರ್ಶಯಾಮಾಸ ತದ್ರೂಪಮದ್ಭುತಂ ಲೋಕಪೂಜಿತಂ ॥ ೨೮ ॥

---

೨೪-೨೫. ಎಲೈ ಕಿರಣಾಧಿಪತಿಯೇ! ನಿನ್ನ ಅನುಗ್ರಹದಿಂದ ನಾವೆಲ್ಲರೂ ಧನ್ಯರಾದೆವು. ಎಲೈ ಸೂರ್ಯದೇವನೇ! ಪೂರ್ವದಲ್ಲಿ ನಾವೆಲ್ಲರೂ ಒಟ್ಟಿಗೆ ಸೇರಿ ನಿನ್ನನ್ನು ಆರಾಧಿಸಿ, ನಿನ್ನಿಂದ ಶುಭಕರವಾದ ವರವನ್ನು ಹೊಂದಿದ್ದೆವು. ಆದರಿಂದ ಸೃಷ್ಟಿಸ್ಥಿತಿಲಯ ಕಾರ್ಯಗಳಲ್ಲಿ ಸಮರ್ಥರಾಗಿ ಕೃತಕೃತ್ಯರೆನಿಸಿದ್ದೇವೆ. ಇದರಲ್ಲಿ ಸಂಶಯವಿಲ್ಲ.

೨೬. ಎಲೈ ದೇವದೇವೇಶನಾದ ವಿಭುವೇ! ಆದರೆ ಒಂದು ವಿಚಾರವಿದೆ ; ಶ್ರೇಷ್ಠವಾಗಿಯೂ, ದುರ್ಲಭವಾಗಿಯೂ ಇರುವ ಈ ನಿನ್ನ ರೂಪವು ನಮಗೆ ನೋಡುವುದಕ್ಕೆ ಅಸಾಧ್ಯವಾಗಿದೆ.

೨೭ ಎಲೈ ಜಗನ್ನಾಥನೇ! ಆ ಕಾರಣದಿಂದ ಈ ರೂಪಕ್ಕಿಂತ ಬೇರೆಯೆನಿಸಿ, ಶಾಶ್ವತವೂ, ನಾಶರಹಿತವೂ ಆದ ನಿನ್ನ ಸೌಮ್ಯರೂಪವನ್ನು ಪ್ರಕಾಶಪಡಿಸು. ನಾವು ಈ ಒಂದುವರವನ್ನು ಕೇಳಿಕೊಳ್ಳುತ್ತೇವೆ. ಎಲೈ ಅನಘನೇ! ಸರ್ವದೇವಮಯುವೆಂದು ಪೂರ್ವದಲ್ಲಿ ನೀನು ಯಾವುದನ್ನು ಹೇಳಿದ್ದೆಯೋ ಆ ರೂಪವನ್ನು ನಮಗೆ ತೋರಿಸು " ಎಂದರು.

೨೮. ಬ್ರಹ್ಮ, ವಿಷ್ಣು, ಈಶ್ವರ ಇವರು ಹೇಳಿದ ಮಾತನ್ನು ಕೇಳಿ ಸೂರ್ಯದೇವನು ಆಶ್ಚರ್ಯಕರವೂ, ಲೋಕಪೂಜಿತವೂ ಆದ ಆ ರೂಪವನ್ನು ತೋರಿದನು.

**ಅನೇಕವಸ್ತ್ರಶಿರಸಮನೇಕಾದ್ಭುತದರ್ಶನಂ ।**
**ಸರ್ವದೇವಮಯಂ ದಿವ್ಯಂ ಸರ್ವಲೋಕಮಯಂ ತಥಾ ॥ ೨೯ ॥**

**ಭೂಃ ಪಾದೌ ದ್ಯೌಃ ಶಿರಶ್ಚಾಪಿ ಸೂರ್ಯೇಂದೂ ಲೋಚನೇ ಮತೇ ।**
**ಪಾದಾಂಗುಲ್ಯಃ ಪಿಶಾಚಾಶ್ಚ ಹಸ್ತಾಂಗುಲ್ಯಶ್ಚ ಗುಹ್ಯಕಾಃ ॥ ೩೦ ॥**

**ವಿಶ್ವೇದೇವಾಸ್ತಸ್ಯ ಜಂಘೇ ಜಾನುನೀ ಚ ಸುರೋತ್ತಮೌ ।**
**ಯಕ್ಷಾ ಕುಕ್ಷೌ ತು ಸಂಲೀನಾಃ ಕೇಶಾಶ್ಚಾಪ್ಸರಸಾಂ ಗಣಾಃ ॥ ೩೧ ॥**

**ದೃಷ್ಟಿರ್ಧೃಷ್ಟ್ಯಶ್ಚ ವಿಪುಲಾಃ ಕೇಶಾ ವೀರಾಂಶವಃ ಸ್ಮೃತಾಃ ।**
**ತಾರಕಾ ರೋಮಕೂಪಾಣಿ ರೋಮಾಣಿ ಚ ಮಹರ್ಷಯಃ ॥ ೩೨ ॥**

**ಬಾಹವೋ ವಿದಿಶಸ್ತಸ್ಯ ದಿಶಃ ಶ್ರೋತ್ರೇ ನರಾಧಿಪ ।**
**ಅಶ್ವಿನೌ ಶ್ರವಣೇ ಚಾಸ್ಯ ನಾಸಾ ವಾಯುರ್ಮಹಾಬಲಃ ॥ ೩೩ ॥**

---

೨೯. ಆ ಮೂರ್ತಿಯುಅನೇಕ ಮುಖಗಳು, ಅನೇಕ ತಲೆಗಳು, ಉಳ್ಳದ್ದೂ ಅನೇಕ ಬಗೆಯಾಗಿ ಆಶ್ಚರ್ಯಕರವಾದ ನೋಟವುಳ್ಳದ್ದೂ, ಸರ್ವದೇವಮಯವೂ, ಸರ್ವಲೋಕಮಯವೂ ಆಗಿದ್ದಿತು.

೩೦. ಮತ್ತು ಭೂಮಿಯೇ ಪಾದಗಳಾಗಿಯೂ,ಅಂತರಿಕ್ಷವೇ ಶಿರಸ್ಸಾಗಿಯೂ, ಸೂರ್ಯಚಂದ್ರರೇ ಕಣ್ಣುಗಳಾಗಿಯೂ, ಪಿಶಾಚರೇ ಕಾಲುಬೆರಳುಗಳಾಗಿಯೂ, ಗುಹ್ಯಕರೇ ಕೈಬೆರಳುಗಳಾಗಿಯೂ ಇದ್ದಿತು.

೩೧. ವಿಶ್ವೇದೇವರು ಮೊಳಕಾಲಾಗಿಯೂ, ಸುರೋತ್ತಮರು ಮಂಡಿಗಳಾಗಿಯೂ,ಯಕ್ಷರು ಕುಕ್ಷಿಸ್ಥರಾಗಿಯೂ,ಅಪ್ಸರಸಮೂಹಗಳೇ ಕೇಶಗಳಾಗಿಯೂ ಇದ್ದಿತು.

೩೨. ಸಹಿಸಲು ಅಸಾಧ್ಯವಾದ ಕಿರಣಗಳೇ ದೃಷ್ಟಿಯೂ, ಸಾಮಾನ್ಯ ಕಿರಣಗಳೇ ವಿಸ್ತಾರವಾದ ಕೇಶಗಳೂ ಆಗಿದ್ದುವು. ನಕ್ಷತ್ರಗಳೇ ರೋಮಕೂಪಗಳು, ಮಹರ್ಷಿಗಳೇ ಅವನ ರೋಮಗಳೂ ಆಗಿದ್ದರು.

೩೩. ವಿದಿಕ್ಕುಗಳೇ ಅನೇಕ ಬಾಹುಗಳು, ದಿಕ್ಕುಗಳೇ ಎರಡುಕಿವಿಗಳು, ಅಶ್ವಿನೀದೇವತೆಗಳೇ ಶ್ರವಣಶಕ್ತಿಗಳೂ ಆಗಿದ್ದುವು

ಪ್ರಸಾದಶ್ಚ ಕ್ಷಮಾ ಚೈವ ಮನೋಧರ್ಮಾಸ್ತಥೈವ ಚ ।
ಸತ್ಯಮಸ್ಯಾ ಭವದ್ವಾಣೀ ಜಿಹ್ವಾ ದೇವೀ ಸರಸ್ವತೀ ॥ ೩೪ ॥

ಗ್ರೀವಾದಿತಿರ್ಮಹಾದೇವೀ ತಾಲೂ ರುದ್ರಶ್ಚ ವೀರ್ಯವಾನ್ ।
ದ್ವಾರಂ ಸ್ವರ್ಗಸ್ಯ ನಾಭಿರ್ವೈ ಮಿತ್ರಸ್ತ್ವಷ್ಟಾ ಪಿಚಂಡಕಃ ॥ ೩೫ ॥

ಮುಖಂ ವೈಶ್ವಾನರಶ್ಚಾಸ್ಯ ವೃಷಣೌ ಚ ಭಗಸ್ತಥಾ ।
ಹೃದಯಂ ಭಗವಾನ್ ಬ್ರಹ್ಮಾ ಹ್ಯುದರಂ ಕಶ್ಯಪೋ ಮುನಿಃ ॥ ೩೬ ॥

ಪೃಷ್ಠೇಽಸ್ಯ ವಸವೋ ದೇವಾಃ ಮರುತಸ್ಸರ್ವಸಂಧಿಷು ।
ಸರ್ವಚ್ಛಂದಾಂಸಿ ದಶನಾ ಜ್ಯೋತೀಂಷಿ ವಿಮಲಾ ಪ್ರಭಾ ॥ ೩೭ ॥

ಪ್ರಾಣೋ ರುದ್ರೋ ಮಹಾದೇವಃ ಕುಕ್ಷೌ ಚಾಸ್ಯ ಮಹಾರ್ಣವಾಃ
ಉದರೇ ಚಾಸ್ಯ ಗಂಧರ್ವಾ ಭುಜಂಗಾಶ್ಚ ಮಹಾಬಲಾಃ ॥ ೩೮ ॥

---

೩೪. ಮಹಾಬಲನಾದ ವಾಯುವು ಮೂಗಾಗಿಯೂ, ಅನುಗ್ರಹ, ಸಹನೆ ಇವು ಅವನ ಮನೋಧರ್ಮಗಳಾಗಿಯೂ, ಸತ್ಯವೆಂಬುದು (ವಾಣಿ) ವಾಕ್ಕಾಗಿಯೂ, ಸರಸ್ವತಿಯು ನಾಲಗೆಯಾಗಿಯೂ ಇದ್ದುವು.

೩೫. ಮಹಾದೇವಿಯಾದ ದಿತಿಯು ಕಂಠ, ವೀರ್ಯವಂತನಾದ ರುದ್ರನು ದವಡೆ, ಸ್ವರ್ಗದ್ವಾರವು ನಾಭಿ, ಮಿತ್ರ, ತ್ವಷ್ಟೃ ಇವರುಗಳು ಪಿಚಂಡಕ (ಎಂದರೆ ಕಿಬ್ಬೊಟ್ಟೆ) ಇವುಗಳಲ್ಲಿ ಆಶ್ರಯಿಸಿದ್ದರು.

೩೬. ಅಗ್ನಿಯು ಅವನ ಮುಖ, ಭಗನು ವೃಷಣಗಳು, ಭಗವಂತನಾದ ಬ್ರಹ್ಮನು ಹೃದಯ, ಕಶ್ಯಪಮಹರ್ಷಿಯು ಉದರ ಈ ರೀತಿಯಾಗಿಯೂ

೩೭. ಅಷ್ಟವಸುಗಳು ಅವನ ಪೃಷ್ಟದೇಶ, ಮರುತ್ತುಗಳು ಸಮಸ್ತ ಸಂಧಿಸ್ಥಾನಗಳು, ಛಂದಸ್ಸುಗಳು ಹಲ್ಲುಗಳು, ಜ್ಯೋತಿರ್ಮಯ ವಸ್ತುಗಳ ಶುದ್ಧವಾದ ದೇಹಕಾಂತಿ ಈ ಪ್ರಕಾರ ಆಗಿದ್ದುವು.

೩೮. ಮಹಾದೇವನಾದ ರುದ್ರನೇ ಪ್ರಾಣಸ್ಥಾನದಲ್ಲಿದ್ದನು. ಮಹಾಸಮುದ್ರಗಳೇಕುಕ್ಷಿಯಲ್ಲಿದ್ದುವು. ಮಹಾಬಲವಾದ ಭುಜಂಗಗಳೂ ಗಂಧರ್ವರೂ ಉದರದಲ್ಲಿದ್ದರು

ಲಕ್ಷ್ಮೀರ್ಮೇಧಾ ಧೃತಿಃ ಕಾಂತಿಸ್ಸರ್ವಾ ವಿದ್ಯಾಶ್ಚ ವೈ ಕಟೌ ।
ಲಲಾಟಮಸ್ಯ ಪರಮಂ ವಯಃಸ್ಥಾನಂ ಪರಾತ್ಮನಃ ॥ ೩೯ ॥

ಸರ್ವಜ್ಯೋತೀಂಷಿ ಜಾನೀಹಿ ತಪಶ್ಚಕ್ರೇಶ್ಚ ದೇವರಾಟ್ ।
ತದೇತದಾದಿದೇವಸ್ಯ ತನೌ ಹ್ಯಾಹುರ್ಮಹಾತ್ಮನಃ ॥ ೪೦ ॥

ತನೌ ಕುಕ್ಷೌ ಚ ವೇದಾಶ್ಚ ತೇಷ್ವೌ ಚಾಸ್ಯ ಮುಖಾಃ ಸ್ಮೃತಾಃ ।
ಯಷ್ಟವ್ಯಪಶುಬಂಧಾಶ್ಚ ದ್ವಿಜಾನಾಂ ವೇಷ್ಟಿತಾನಿ ಚ ॥ ೪೧ ॥

ಸರ್ವದೇವಮಯಂ ದೃಷ್ಟ್ವಾ ರೂಪಮರ್ಕಸ್ಯ ತೇ ನೃಪ ।
ಬ್ರಹ್ಮಾ ಹರೋ ಹರಿರ್ದೇವಾಃ ಪರಂ ವಿಸ್ಮಯಮಾಗತಾಃ ॥ ೪೨ ॥

ಪ್ರಣಮ್ಯ ಶಿರಸಾ ದೇವಂ ವೇಪಮಾನಾ ಧರಾಂ ಗತಾಃ ।
ಭಯಗದ್ಗದಯಾ ವಾಚಾ ಇದಂ ವಚನಮಬ್ರುವನ್ ॥ ೪೩ ॥

---

೩೯. ಲಕ್ಷ್ಮೀ, ಮೇಧಾ, ಕಾಂತಿ, ಧೃತಿ, ಸಮಸ್ತ ವಿದ್ಯೆಗಳು, ಎಲ್ಲವೂ ಸೊಂಟದಲ್ಲಿ ವಯಸ್ಥಾನವು ಪೂಜ್ಯಾತ್ಮನಾದ ಅವನ ಹಣೆಯಲ್ಲಿ, ಈಪ್ರಕಾರ ಆಶ್ರಯಿಸಿದ್ದುವು.

೪೦ ಅಯ್ಯಾ ದೇವಸ್ವರೂಪನಾದ ರಾಜನೇ! ಕೇಳು ; ಜ್ಯೋತಿರ್ಮಯವಾದ ವಸ್ತುಗಳೆಲ್ಲವೂ ಇವನಲ್ಲಿ ತಪಿಸುವ ಶಕ್ತಿಸಮೂಹವಾಗಿದ್ದುವು. ಆದಿದೇವನಾದ ಈ ಮಹಾತ್ಮನ ಶರೀರದಲ್ಲಿ ಇವೆಲ್ಲವೂ ಇದ್ದುವು.

೪೧. ಶರೀರದಲ್ಲಿ ಮತ್ತು ಹೊಟ್ಟೆಯಲ್ಲಿ ವೇದಗಳೂ, ಎಂಟು ಮಹಾ ಯಜ್ಞಗಳೂ ಇದ್ದುವು. ಅಲ್ಲದೆ ಯಜ್ಞಮಾಡಬೇಕಾಗಿರುವ ಭಾಗಗಳೂ, ಪಶುಬಂಧಗಳೂ, ಋತ್ವಿಕ್ಕುಗಳಾದ ಬ್ರಾಹ್ಮಣರಿಗೆ ಕೊಡುವ ಶಿರೋವೇಷ್ಟನಗಳೂ, ಇವೆಲ್ಲವೂ ಇದ್ದುವು.

೪೨. ಅಯ್ಯಾ ನೃಪನೇ! ಅರ್ಕನ ಸರ್ವದೇವಮಯವಾದ ಈ ರೂಪವನ್ನು ನೋಡಿ ಬ್ರಹ್ಮ, ವಿಷ್ಣು, ರುದ್ರ ಇವರುಗಳೂ, ಇತರ ದೇವತೆಗಳೂ ಅತ್ಯಾಶ್ಚರ್ಯ ಹೊಂದಿದರು.

೪೩. ಅವರು ಆ ರೂಪವನ್ನು ನೋಡಿದ ಕೂಡಲೇ ನಡುಗುತ್ತಾ, ಶಿರಸ್ಸನ್ನು ನೆಲಕ್ಕೆ ಸೋಕಿಸಿ ದೇವನಿಗೆ ನಮಸ್ಕರಿಸಿದರು. ಮತ್ತು ಭೀತಿಯಿಂದ ಕೂಡಿದ ಗದ್ಗದ ಧ್ವನಿಯುಳ್ಳವರಾಗಿ ಈ ಮಾತನ್ನು ಹೇಳಿದರು.

ಸಮೀಕ್ಷ್ಯ ರೂಪಂ ತೇ ದೇವ ಭೀಮಂ ಜ್ವಾಲಾಸಮಾಕುಲಂ ।
ಅನೇಕಮುಖಬಾಹೂರುಚರಣಂ ಚಕಿತಾ ವಯಂ ॥ ೪೪ ॥

ದಿಗ್ಭ್ರಾಂತಂ ಹೃತಮಸ್ಮಾಕಂ ತತ್ಪ್ರಸೀದ ಜಗತ್ಪತೇ ।
ಉಪಸಂಹರ ವಿಶ್ವಾತ್ಮನ್ ದ್ರಷ್ಟುಂ ಶಕ್ತಾ ನ ತೇ ವಯಂ ॥ ೪೫ ॥

ಇತಿ ತೇಷಾಂ ವಚಃ ಶ್ರುತ್ವಾ ದೇವದೇವೋ ದಿವಾಕರಃ ।
ಪ್ರಸನ್ನೋ ಭಗವಾನಾಹ ವಚಸ್ತಾನ್ಪ್ರಹಸನ್ನಿದಂ ॥ ೪೬ ॥

॥ ಆದಿತ್ಯ ಉವಾಚ ॥

ಯದೇತತ್ಪರಮಂ ಪುಣ್ಯಮದ್ಭುತಂ ಲೋಕಭಾವನಂ ।
ದೃಷ್ಟಂ ಭವದ್ಭಿರ್ದೇವೇಂದ್ರಾ ಮಮ ಸರ್ವಜಗನ್ಮಯಂ ॥ ೪೭ ॥

ಏತನ್ಮಯಾ ಪ್ರಸನ್ನೇನ ಯುಷ್ಮಾಕಂ ಶ್ರೇಯಸೇಽನಘಾಃ ।
ದರ್ಶಿತಂ ಪೂಜಿತೇನೇಹ ಯೋಗಿನಾಂ ಯನ್ಮಹಾಲಯಂ ॥ ೪೮ ॥

---

೪೪ "ಎಲೈ ದೇವ! ಭಯಂಕರವಾದ ಜ್ವಾಲಾಮಾಲೆಗಳಿಂದ ವ್ಯಾಪ್ತವಾದುದೂ ಅನೇಕ ಮುಖಗಳೂ, ಬಾಹುಗಳೂ, ತೊಡೆಗಳೂ, ಕಾಲುಗಳೂ ಉಳ್ಳದ್ದಾಗಿರುವ ನಿನ್ನ ರೂಪವನ್ನು ನೋಡಿ ನಾವು ಚಕಿತರಾಗಿದ್ದೇವೆ. ಮತ್ತು ದಿಗ್ಭ್ರಾಂತರಾಗಿದ್ದೇವೆ.

೪೫. ನಮಗೆ ದಿಕ್ಕುಗಳ ಪರಿಜ್ಞಾನವೇ ಶೂನ್ಯವಾಗಿಹೋಗಿದೆ. ಓ ಜಗತ್ಪತಿಯೇ! ನೀನು ಪ್ರಸನ್ನನಾಗು. ನಿನ್ನ ರೂಪವನ್ನು ನೋಡಲು ನಾವು ಶಕ್ತರಾಗಿಲ್ಲ. ಆದುದರಿಂದ ನಿನ್ನ ರೂಪನ್ನು ಸಂಕೋಚಮಾಡಿಕೊ " ಎಂದರು.

೪೬. ಅವರುಗಳು ಹೀಗೆ ಹೇಳಿದುದನ್ನು ಕೇಳಿ ದೇವದೇವನೂ,ಭಗವಂತನೂ ಆದ ದಿವಾಕರನು ಪ್ರಸನ್ನನಾಗಿ ನಗುತ್ತಾ ಅವರನ್ನು ಕುರಿತು ಹೇಳತೊಡಗಿ

೪೭. "ಓ ದೇವಾಧಿಪತಿಗಳೇ! ಪರಮ ಪುಣ್ಯಪ್ರದವೂ, ಅದ್ಭುತವೂ, ಜಗತ್ಕಾರ್ಯಗಳಿಗೆ ನೆರವಾಗುವುದೂ, ಜಗನ್ಮಯವೂ ಆದ ನನ್ನ ರೂಪವನ್ನು ನೀವು ಈಗ ನೋಡಿದಿರಿ,"

೪೮. "ಎಲೈ ನಿರ್ದೋಷಿಗಳೇ! ಪ್ರಸನ್ನನಾದ ನಾನು ನಿಮ್ಮ ಶ್ರೇಯಸ್ಸಿಗೋಸ್ಕರ ಈ ರೂಪವನ್ನು ನಿಮಗೆ ತೋರಿಸಿದೆನು. ಯೋಗಿಗಳಿಗೆ ಪ್ರಾಪ್ಯವಾದ ಮಹಾಸ್ಥಾನವೆನಿಸಿದ ಇದನ್ನು ತೋರಿಸಿದೇನೆ " ಎಂದನು.

॥ ಬ್ರಹ್ಮೇಶಾಚ್ಯುತಾ ಊಚುಃ ॥

ಏವಮೇತನ್ನ ಸಂದೇಹೋ ಯಥಾತ್ಥ ತ್ವಂ ದಿವಸ್ಪತೇ ।
ಯೋಗಿನಾಮಪಿ ದೇವೇಶ ದರ್ಶನಂ ಹ್ಯಸ್ಯ ದುರ್ಲಭಂ ॥ ೪೯ ॥

ತ್ವಾಮಾರಾಧ್ಯ ಜಗನ್ನಾಥಂ ನಾಪ್ರಾಪ್ಯಮಿಹ ವಿದ್ಯತೇ ।
ತಸ್ಮಾತ್ಪೂಜ್ಯತಮೋ ಲೋಕೇ ನಾನ್ಯೋ ದೇವೇಷು ವಿದ್ಯತೇ ॥ ೫೦ ॥

ಏವಮುಕ್ತ್ವಾಽದಿತೇಃ ಪುತ್ರೋ ಜಗಾಮಾದರ್ಶನಂ ರವಿಃ ।
ಬ್ರಹ್ಮಾದಯೋಽಪಿ ತೇ ಹರ್ಷಂ ಪ್ರಾಪುರ್ದೇವಸ್ಯ ದರ್ಶನಾತ್ ॥ ೫೧ ॥

ಏವಂ ಬ್ರಹ್ಮಾದಯೋ ದೇವಾಃ ಪೂಜಯಿತ್ವಾ ದಿವಾಕರಂ ।
ಗತಾಸ್ತೇ ಪರಮಾಂ ಸಿದ್ಧಿಂ ಗಂಧರ್ವಾ ಋಷಯಸ್ತಥಾ ॥ ೫೨ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇಷು ಬ್ರಹ್ಮಾದೀನಾಂ ಸೂರ್ಯರೂಪದರ್ಶನ ವರ್ಣನಂ ನಾಮ ಷಷ್ಟ್ಯುತ್ತರ ಶತತಮೋಽಧ್ಯಾಯಃ.**

---

೪೯. ಆಗ ಬ್ರಹ್ಮ, ಶಿವ, ವಿಷ್ಣುಗಳು ಅವನನ್ನು ಕುರಿತು “ ಎಲೈ ದಿವಸ್ಪತಿಯೇ ! ನೀನು ಹೇಳಿದುದು ಸರಿ. ಎಲೈ ದೇವೇಶನೇ! ಈ ನಿನ್ನ ದರ್ಶನವು ಯೋಗಿಗಳಿಗೂ ಸಹ ದುರ್ಲಭವು.

೫೦. “ಜಗತ್ಪತಿಯಾದ ನಿನ್ನನ್ನು ಆರಾಧಿಸಿದಮೇಲೆ ಹೊಂದಲಸಾಧ್ಯವಾದುದು ಈ ಲೋಕದಲ್ಲೇ ಯಾವುದೂ ಇಲ್ಲ. ಅದರಂತೆಯೇ ಈ ಲೋಕದಲ್ಲಿ ನಿನಗಿಂತಲೂ ಪೂಜ್ಯತಮನು ದೇವತೆಗಳಲ್ಲಿ ಯಾರೂ ಇಲ್ಲ ” ಎಂದರು.

೫೧. ಅವರು ಹೀಗೆ ಹೇಳಿದನಂತರ ಅದಿತಿಪುತ್ರನಾದ ಸೂರ್ಯನು ಅಂತರ್ಧಾನ ಹೊಂದಿದನು. ಬ್ರಹ್ಮಾದಿಗಳಿಗೂ ಕೂಡ ದೇವನ ದರ್ಶನದಿಂದ ಅತಿಯಾದ ಸಂತೋಷವಾಯಿತು.

೫೨. ಹೀಗೆ ಬ್ರಹ್ಮಾದಿದೇವತೆಗಳು ಸೂರ್ಯನನ್ನು ಪೂಜಿಸಿ ಪರಮಸಿದ್ಧಿಯನ್ನು ಪಡೆದರು. ಗಂಧರ್ವರೂ, ಋಷಿಗಳೂ ಹಾಗೆಯೇ ಸಿದ್ಧಿಯನ್ನು ಹೊಂದಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ಬ್ರಹ್ಮ ಮೊದಲಾದವರಿಗೆ ಸೂರ್ಯನ ರೂಪದರ್ಶನದ ವರ್ಣನೆಯೆಂಬ ನೂರಅರವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕಷಷ್ಟ್ಯುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಏವಮೇತದ್ಯಥಾತ್ಥ ತ್ವಂ ಭಾಸ್ಕರೋ ದೈವತಂ ಪರಂ ।
ನಾಸ್ತ್ಯಾದಿತ್ಯಸಮೋ ದೇವೋ ನಾಸ್ತ್ಯಾದಿತ್ಯಸಮಾ ಗತಿಃ ॥ ೧ ॥

ಆದಿತ್ಯಮೂಲಮಖಿಲಂ ತ್ರೈಲೋಕ್ಯಂ ನಾತ್ರ ಸಂಶಯಃ ।
ಭವತ್ಯಸ್ಮಾಜ್ಜಗತ್ಸರ್ವಂ ಸದೇವಾಸುರಮಾನುಷಂ ॥ ೨ ॥

ರುದ್ರೇಂದ್ರೋಪೇಂದ್ರಕೇಂದ್ರಾಣಾಂ ವಿಪ್ರೇಂದ್ರ ತ್ರಿದಿವೌಕಸಾಂ ।
ದ್ಯುತಿರ್ದ್ಯುತಿಮತಾಂ ಕೃತ್ಸ್ನಾ ತೇಜೋ ಯತ್ಸಾರ್ವಲೌಕಿಕಂ ॥ ೩ ॥

---

## ನೂರಅರವತ್ತೊಂದನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು—ಸ್ವಾಮಿಾ! ಸೂರ್ಯನು ಉತ್ಕೃಷ್ಟವಾದ ದೇವತೆಯೆಂಬದಾಗಿ ನೀವು ಹೇಳಿದಿರಿ. ಇದು ವಾಸ್ತವ. ಸೂರ್ಯನಿಗೆ ಸಮನಾದ ದೇವನೂ ಇಲ್ಲ. ಸೂರ್ಯದೇವನಿಗೆ ಸಮಾನವಾದ ಪ್ರಾಪ್ಯ ಸ್ಥಾನವೂ ಇಲ್ಲ.

೨. ಸಮಗ್ರವಾದ ಮೂರುಲೋಕಗಳಿಗೂ ಆದಿತ್ಯನೇ ಮೂಲ. ಇದರಲ್ಲಿ ಸಂಶಯವಿಲ್ಲ. ದೇವತೆಗಳು, ಅಸುರರು, ಮಾನವರು ಇವರಿಂದ ಕೂಡಿದ ಸಮಸ್ತಜಗತ್ತೂ ಈ ಸೂರ್ಯದೇವನಿಂದ ಹುಟ್ಟುತ್ತದೆ.

೩. ಅಯ್ಯಾ ವಿಪ್ರಶ್ರೇಷ್ಠನೇ! ರುದ್ರ, ಇಂದ್ರ, ಉಪೇಂದ್ರಕ ಇಂದ್ರರು ಮತ್ತು ದ್ಯುತಿಮಂತರಾದ ದೇವತೆಗಳು, ಇವರುಗಳಿಗೆ ಸಮಗ್ರವಾದ ಕಾಂತಿಪ್ರದನೂ, ಸರ್ವಲೋಕಕ್ಕೂ ಪ್ರಸರಿಸುವ ತೇಜಸ್ಸ್ವರೂಪನೂ ಇವನೇ ಆಗಿದಾನೆ.

ಸರ್ವಾತ್ಮಾ ಸರ್ವಲೋಕೇಶೋ ಮಹಾದೇವಃ ಪ್ರಜಾಪತಿಃ ।
ಸೂರ್ಯ ಏವ ತ್ರಿಲೋಕಸ್ಯ ಮೂಲಂ ಪರಮದೈವತಂ ॥ ೪ ॥

ತತಸ್ಸಂಜಾಯತೇ ಸರ್ವಂ ತತ್ರೈವ ಪ್ರವಿಲೀಯತೇ ।
ಭಾವಾಭಾವೌ ಹಿ ಲೋಕಾನಾಂ ಆದಿತ್ಯಾನ್ನಿಸ್ಸೃತೌ ಪುರಾ ॥ ೫ ॥

ಜಗಜ್ಜ್ಯೇಷ್ಠೋ ಗ್ರಹೋ ವಿಪ್ರ ಪ್ರದೀಪ್ತಃ ಪ್ರಭವೋ ರವಿಃ ।
ತತ್ರ ಗಚ್ಛಂತಿ ನಿಧನಂ ಜಾಯಂತೇ ಚ ಪುನಃ ಪುನಃ ॥ ೬ ॥

ಕ್ಷಣಾ ಮುಹೂರ್ತಾ ದಿವಸಾ ರಾತ್ರಿಪಕ್ಷಾಶ್ಚ ಕೃತ್ಸ್ನಶಃ ।
ಮಾಸಾಃ ಸಂವತ್ಸರಾಶ್ಚೈವ ಋತವಶ್ಚ ಯುಗಾನಿ ಚ ॥ ೭ ॥

ಸ ಏಷ ಕಾಲಶ್ಚಾಗ್ನಿಶ್ಚ ದ್ವಾದಶಾತ್ಮಾ ಪ್ರಜಾಪತಿಃ ।
ಪ್ರಭಾಸಯತಿ ವಿಪ್ರೇಂದ್ರ ತ್ರೈಲೋಕ್ಯಂ ಸಚರಾಚರಂ ॥ ೮ ॥

---

೪. ಸರ್ವಾತ್ಮನೂ, ಸರ್ವಲೋಕೇಶನೂ, ಮಹಾದೇವನೂ, ಪ್ರಜಾಪತಿಯೂ ಆದ ಸೂರ್ಯನೇ, ತ್ರಿಲೋಕಗಳಿಗೂ ಮೂಲಭೂತನೆನಿಸಿದ ಶ್ರೇಷ್ಠನಾದ ದೇವನಾಗಿದ್ದಾನೆ.

೫. ಸರ್ವವೂ ಅವನಿಂದಲೇ ಹುಟ್ಟುತ್ತವೆ. ಅವನಲ್ಲಿಯೇ ಎಲ್ಲವೂ ಲಯ ಹೊಂದುತ್ತವೆ. ಲೋಕಗಳ ಭಾವ (ಉತ್ಪತ್ತಿ) ಅಭಾವ (ನಾಶ) ಇವು ಪೂರ್ವದಲ್ಲಿ ಸೂರ್ಯನಿಂದಲೇ ಉಂಟಾದುವು.

೬-೭. ಎಲೈ ಬ್ರಾಹ್ಮಣನೇ ! ಸೂರ್ಯನು ಲೋಕದಲ್ಲಿ ಹಿರಿದಾದ ಗ್ರಹವೆನಿಸುವನು. ಅವನೇ ಪ್ರಕಾಶಜನಕನು. ಕ್ಷಣಗಳು, ಮುಹೂರ್ತಗಳು, (ದಿವಸಗಳು) ಹಗಲುಗಳು, ರಾತ್ರಿಗಳು, ಪಕ್ಷಗಳು, ಮಾಸಗಳು, ಋತುಗಳು, ಸಂವತ್ಸರಗಳು, ಯುಗಗಳು ಇವುಗಳೆಲ್ಲವೂ ಅವನಲ್ಲಿಯೇ ಲಯಹೊಂದುತ್ತವೆ. ಅಲ್ಲದೆ ಮತ್ತೆ ಹುಟ್ಟುತ್ತವೆ.

೮. ಎಲೈ ವಿಪ್ರೇಂದ್ರನೇ! ಕಾಲಾತ್ಮನೂ, ಅಗ್ನಿಸ್ವರೂಪನೂ, ದ್ವಾದಶಾತ್ಮನೂ ಪ್ರಜಾಪತಿಯೂ ಆದ ಈ ಸೂರ್ಯನು, ಚರಾಚರಸಹಿತವಾದ ಮೂರುಲೋಕಗಳಿಗೂ ಪ್ರಕಾಶಕೊಡುತ್ತಾನೆ.

**ತಸ್ಮಾದಸ್ಯ ದ್ವಿಜಶ್ರೇಷ್ಠ ಪೂಜನೇ ಯತ್ಫಲಂ ಭವೇತ್**
**ತನ್ಮೇ ಬ್ರೂಹಿ ಪ್ರಯತ್ನೇನ ಪ್ರಸಾದಪ್ರವಣೋ ಭವ ॥ ೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ಸೂರ್ಯಪೂಜಾಫಲ ಪ್ರಶ್ನ ವರ್ಣನಂ ನಾಮ ಏಕ ಷಷ್ಟ್ಯುತ್ತರ ಶತತಮೋಽಧ್ಯಾಯಃ.**



---

೯. ಆದುದರಿಂದ ಅಯ್ಯಾ ದ್ವಿಜಶ್ರೇಷ್ಠನೇ! ಪ್ರಯತ್ನಪಟ್ಟು ಈ ಸೂರ್ಯನನ್ನು ಪೂಜಿಸುವುದರಿಂದ ಪ್ರಾಪ್ತಿಯಾಗುವ ಫಲವನ್ನು ನನಗೆ ಹೇಳು. ಪ್ರಸಾದಾಭಿಮುಖನಾಗು, (ಪ್ರಸನ್ನನಾಗು) " ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೌರಧರ್ಮದಲ್ಲಿ ಸೂರ್ಯಪೂಜಾಫಲದ ವರ್ಣನೆಯೆಂಬ ನೂರಅರವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಭಾನುಂ ಪ್ರತಿಷ್ಠಾಪ್ಯ ನರಃ ಸರ್ವದೇವಮಯಂ ವಿಭುಂ ।
ಪ್ರಾಪ್ನೋತ್ಯಮರತಾಂ ವೀರ ತೇಜಸಾ ರವಿಸನ್ನಿಭಃ ॥ ೧ ॥

ಯೋ ಭಾನುಂ ದ್ವೇಷ್ಟಿ ಸಮ್ಮೋಹಾತ್ಸರ್ವದೇವನಮಸ್ಕೃತಂ ।
ನರೋ ನರಕಗಾಮೀ ಸ್ಯಾತ್ ತಸ್ಯ ಸಂಭಾಷಣಾದಪಿ ॥ ೨ ॥

ಭಾನುಮಿಷ್ಟಂ ಪ್ರತಿಷ್ಠಾಪ್ಯ ಸರ್ವಯತ್ನೈರ್ವಿಧಾನತಃ ।
ಯತ್ಪುಣ್ಯಫಲಮಾಪ್ನೋತಿ ತದ್ವೈಕಾಗ್ರಮನಾಃ ಶೃಣು ॥ ೩ ॥

---

### ನೂರಅರವತ್ತೆರಡನೆಯ ಅಧ್ಯಾಯ

೧. ಸುಮಂತುಮುನಿವರ್ಯರು ತಾವು ಹೇಳುತ್ತಿದ್ದ ವಿಚಾರವನ್ನು ಮುಂದುವರಿಸಿ ಹೇಳುತ್ತಾ, ಎಲೈ ವೀರನಾದ ಶತಾನೀಕರಾಜನೇ! ಸರ್ವದೇವಮಯನೂ,ವಿಭುವೂ ಆದ ಸೂರ್ಯನನ್ನು ಪ್ರತಿಷ್ಠೆಮಾಡಿದ ಮಾನವನು, ಸೂರ್ಯನಿಗೆ ಸಮಾನವಾದ ತೇಜಸ್ವಿಯಾಗಿ ಅಮರತ್ವ (ಮರಣವಿಲ್ಲದಿರುವಿಕೆ) ವನ್ನು ಹೊಂದುತ್ತಾನೆ.

೨. ಸರ್ವದೇವ ನಮಸ್ಕೃತನಾದ ಸೂರ್ಯನನ್ನು ಅಜ್ಞಾನದಿಂದ ದ್ವೇಷಿಸುವಂಥವನೊಡನೆ, ಸಂಭಾಷಣೆ ಮಾಡಿದರೂ ಕೂಡ ನರಕಪ್ರಾಪ್ತಿಯಾಗುವುದು.

೩. ಪೂಜ್ಯವಾದ ಭಾನುಪ್ರತಿಮೆಯನ್ನು, ಸರ್ವಪ್ರಯತ್ನಗಳಿಂದಲೂ ಶಾಸ್ತ್ರೋಕ್ತವಾಗಿ ಪ್ರತಿಷ್ಠೆಮಾಡಿದವನು ಹೊಂದುವ ಫಲವನ್ನು ಹೇಳುವೆನು. ಏಕಾಗ್ರಚಿತ್ತದಿಂದ ಕೇಳು.

**ಸರ್ವಯಜ್ಞತಪೋದಾನತೀರ್ಥದೇವೇಷು ಯತ್ಫಲಂ ।**
**ತತ್ಫಲಂ ಕೋಟಿಗುಣಿತಂ ಸ್ಥಾಪ್ಯ ಭಾನುಂ ಲಭೇನ್ನರಃ ॥ ೪ ॥**

**ಯೋ ಭಾನುಂ ಸ್ಥಾಪಯೇದ್ಭಕ್ತ್ಯಾ ವಿಧಿಪೂರ್ವಂ ನರಾಧಿಪ ।**
**ಸರ್ವಾಂಗಮುದಿತಂ ಪುಣ್ಯಂ ಲಭೇತ್ಕೋಟಿಗುಣಂ ನರಃ ॥ ೫ ॥**

**ಮಾತೃಜಾನ್ಪಿತೃಜಾಂಶ್ಚೈವ ಯತ್ರ ಚೋದ್ವಹತೇ ಸ್ತ್ರಿಯಂ ।**
**ಕುಲತ್ರಯಂ ಸಮುದ್ಧೃತ್ಯ ಶಕ್ರಲೋಕೇ ಮಹೀಯತೇ ॥ ೬ ॥**

**ಭುಕ್ತ್ವಾ ತು ವಿಪುಲಾನ್ ಭೋಗಾನ್ ಪ್ರಲಯೇ ಸಮುಪಸ್ಥಿತೇ ।**
**ಜ್ಞಾನಯೋಗಂ ಸಮಾಸಾದ್ಯ ತತ್ರೈವ ಪ್ರವಿಮುಚ್ಯತೇ ॥ ೭ ॥**

**ಅಥವಾ ರಾಜ್ಯಮಾಕಾಂಕ್ಷೇಜ್ಜಾಯತೇ ಸಂಭವಾಂತರೇ ।**
**ಸಪ್ತದ್ವೀಪಸಮುದ್ರಾಯಾಃ ಕ್ಷಿತೇರಧಿಪತಿರ್ಭವೇತ್ ॥ ೮ ॥**

---

೪. ನಾನಾಯಜ್ಞಗಳನ್ನು ಮಾಡುವುದು, ತಪಸ್ಸುಮಾಡುವುದು, ದಾನಕೊಡುವುದು, ಪುಣ್ಯತೀರ್ಥಗಳನ್ನು ಮತ್ತು ದೇವತೆಗಳನ್ನು ಸೇವಿಸುವುದು, ಇವುಗಳಿಂದ ಉಂಟಾಗುವ ಫಲದ ಕೋಟಿಯಷ್ಟು ಹೆಚ್ಚು ಫಲವು, ಮನುಷ್ಯನಿಗೆ ಸೂರ್ಯಬಿಂಬ ಸ್ಥಾಪನೆಯಿಂದ ಉಂಟಾಗುವುದು.

೫. ಅಯ್ಯಾ ನರಾಧಿಪನೇ! ಕೇಳು; ಸಾಮಾನ್ಯವಾದ ಬಿಂಬಪ್ರತಿಷ್ಠೆಮಾಡುವುದಕ್ಕಿಂತ ಭಕ್ತಿಯಿಂದ ವಿಧಿವತ್ತಾಗಿ ಭಾನುಬಿಂಬವನ್ನು ಸ್ಥಾಪನೆಮಾಡಿದರೆ ಅದರ ಕೋಟಿ ಪಾಲು ಹೆಚ್ಚಿನ ಪುಣ್ಯವನ್ನು ಸಂಪೂರ್ಣವಾಗಿ ಹೊಂದುವನೆಂದು ಉಕ್ತವಾಗಿದೆ.

೬. ಅವನು, ತನ್ನ ಮಾತೃವಂಶ, ಪಿತೃವಂಶ, ತಾನು ಮದುವೆಯಾಗುವ ಸ್ತ್ರೀಯ ವಂಶ, ಎಂದರೆ ಶ್ವಶುರವಂಶ, ಈ ಮೂರು ಕುಲಗಳನ್ನೂ ಉದ್ಧಾರಮಾಡಿ, ಇಂದ್ರಲೋಕದಲ್ಲಿ ಪೂಜ್ಯನಾಗುವನು,

೭. ಅಲ್ಲದೆ ಬೇಕಾದ ಹಾಗೆ ದಿವ್ಯಭೋಗಗಳನ್ನು ಅನುಭವಿಸಿ, ಕಲ್ಪಾಂತದಲ್ಲಿ ಜ್ಞಾನಯೋಗವನ್ನು ಪಡೆದು, ಆ ಜನ್ಮದಲ್ಲಿಯೇ ಅವನು ಮುಕ್ತಿಯನ್ನೂ ಹೊಂದುತ್ತಾನೆ.

೮. ಒಂದು ವೇಳೆ ಅವನಿಗೆ ರಾಜ್ಯದಾಶೆ ಇದ್ದರೆ, ಇನ್ನೊಂದು ಜನ್ಮವನ್ನೆತ್ತುತ್ತಾನೆ. ಹೀಗೆ ಜನ್ಮವೆತ್ತಿದಾಗ ಸಪ್ತದ್ವೀಪಗಳು, ಸಪ್ತಸಮುದ್ರಗಳು ಇವುಗಳಿಂದ ಕೂಡಿದ (ಅಖಂಡವಾದ) ಭೂಮಿಗೆ ಅಧಿಪತಿಯಾಗುತ್ತಾನೆ.

ಯಃ ಕೃತ್ವಾ ಪಾರ್ಥಿವಂ ವ್ಯೋಮ್ನಿ ಅರ್ಚಯೇತ್ಸರ್ವದೇವಕಂ ।
ಸಮೂಲಮಖಿಲಂ ತೇನ ತ್ರೈಲೋಕ್ಯಂ ಪೂಜಿತಂ ಭವೇತ್ ॥ ೯ ॥

ಇಹೈವ ಧನವಾಞ್ಛ್ರೀಮಾನ್ ಸೋಂತೇsರ್ಕತ್ವಮವಾಪ್ನುಯಾತ್ ।
ತ್ರಿಸಂಧ್ಯಂ ಕೀರ್ತಯೇದ್ವ್ಯೋಮ ಕೃತ್ವಾ ಬಿಂಬಂ ತು ಪಾರ್ಥಿವಂ ॥೧೦॥

ಶತೈಕಾದಶಕಂ ಯಾವತ್ತಸ್ಯ ಪುಣ್ಯಫಲಂ ಶೃಣು ।
ಅನೇನ ಸಹ ದೇಹೇನ ಭಾಸ್ವಾಂತ್ಸಂತಿಷ್ಠತೇ ಕ್ಷಿತೌ ॥ ೧೧ ॥

ಪಾಪಹಾ ಸರ್ವಮರ್ತ್ಯಾನಾಂ ದರ್ಶನಾತ್ಸ್ಪರ್ಶನಾದಪಿ ।
ಉದ್ಧಾರಯೇಚ್ಚ ಸಂಸ್ಥಾಪ್ಯ ಕುಲಾನಾಮೇಕವಿಂಶತಿಂ ॥ ೧೨ ॥

---

೯. ಸರ್ವದೇವಾತ್ಮಕನಾದ ರವಿಬಿಂಬವನ್ನು ಮಣ್ಣಿನಿಂದ ರಚಿಸಿ ವ್ಯೋಮ ಮಂಡಲದಲ್ಲಿ ಅನುಪ್ರವಿಷ್ಟನಾದಂತೆ ಭಾವಿಸಿ, ಅರ್ಚನೆಮಾಡಿದವನು ಮೂರುಲೋಕಗಳನ್ನೂ ಸಮೂಲವಾಗಿ ಪೂಜಿಸಿದಂತೆಯೇ ಆಗುವುದು.

೧೦. ಆತನು ಇಹಲೋಕದಲ್ಲಿ ಧನವಂತನೂ, ಶ್ರೀಮಂತನೂ, ಆಗಿ ಕೊನೆಯಲ್ಲಿ ಸೂರ್ಯಸಾಯುಜ್ಯವನ್ನು ಹೊಂದುತ್ತಾನೆ. ಮಣ್ಣಿನಿಂದ ಪಾರ್ಥಿವಸೂರ್ಯಮಂಡಲವನ್ನು ರಚಿಸಿ, ಅದರಲ್ಲಿ ಮೂರು ಸಂಧ್ಯಾಕಾಲಗಳಲ್ಲಿಯೂ ವ್ಯೋಮದೇವತೆಯನ್ನು ಆವಾಹಿಸಿ ಕೀರ್ತನಮಾಡಬೇಕು.

೧೧. ಹೀಗೆ ನೂರಹನ್ನೊಂದು ಸಲ ಮಾಡಿದರೆ, ಅದರಂತೆ ಲಭ್ಯವಾಗುವ ಪುಣ್ಯಫಲವನ್ನು ಕೇಳು, ಈ ದೇಹದಿಂದಲೇ ಯುಕ್ತನಾಗಿದ್ದರೂ ಭೂಮಿಯಲ್ಲಿ ಸೂರ್ಯನಂತೆ ಮಹಾಪ್ರಕಾಶಮಾನನಾಗಿರುತ್ತಾನೆ.

೧೨. ಮತ್ತು ಅವನು ದರ್ಶನದಿಂದಲೇ ಜನಸಾಮಾನ್ಯವ ಪಾಪವನ್ನು ಹೋಗಲಾಡಿಸುವಷ್ಟು ಮಹಿಮೆಯುಳ್ಳವನಾಗಿ, ತನ್ನ ಹಿಂದಿನವರು ಹತ್ತು ತಲೆ, ಮುಂದಿನವರು ಹತ್ತು ತಲೆ, ಮತ್ತು ತಾನು, ಹೀಗೆ ಇಪ್ಪತ್ತೊಂದು ತಲೆ ಮಾರಿನವರನ್ನು ನರಕದಿಂದ ಉದ್ಧರಿಸಿ ನಿಲ್ಲಿಸುವನು.

**ಗೀರ್ವಾಣೈಃ ಸಹಿತೋ ನಿತ್ಯಂ ಮೋದತೇ ದಿವಿ ಸೂರವತ್ ।**
**ಯೋಽಪಿ ಪಿಷ್ಟಮಯಂ ವ್ಯೋಮ ಸರ್ವಗಂಧೋಪಶೋಭಿತಂ ॥ ೧೩ ॥**

**ಕುಸುಮೈಃ ಸುಸುಗಂಧೈಶ್ಚ ಫಲೈಶ್ಚ ವಿವಿಧೈರ್ನೃಪ ।**
**ಭಕ್ಷ್ಯಲೇಹ್ಯರಸೈಶ್ಚೈವ ಘೃತದೀಪೈರಲಂಕೃತೈಃ ॥ ೧೪ ॥**

**ನಾನಾರತ್ನಸಮಾಯುಕ್ತಂ ನಾನಾಗಂಧಸಮನ್ವಿತಂ ।**
**ತಸ್ಯ ದಕ್ಷಿಣಪಾರ್ಶ್ವೇ ತು ವಿನ್ಯಸೇದಗುರುಂ ಬುಧಃ ॥ ೧೫ ॥**

**ದದ್ಯಾದ್ವೈ ಪಶ್ಚಿಮೇ ಭಾಗೇ ಶ್ರೀಖಂಡಂ ಚಂದನಂ ಶುಭಂ**
**ಉತ್ತರೇ ಚಂದನಂ ದದ್ಯಾದ್ರಕ್ತಂ ದದ್ಯಾಚ್ಚ ಪೂರ್ವತಃ ॥ ೧೬ ॥**

**ಏವಂ ವಿತ್ತಾನುಸಾರೇಣ ಕೃತ್ವಾ ವಿಭವವಿಸ್ತರಂ ।**
**ಕೃಷ್ಣಪಕ್ಷೇ ತು ಸಪ್ತಮ್ಯಾಂ ಭಾಸ್ಕರಸ್ಯ ನಿವೇದಯೇತ್ ॥ ೧೭ ॥**

---

೧೩-೧೬. ಅಲ್ಲದೆ ಆತನು ದೇವತೆಗಳೊಳಗೂಡಿ ಆಕಾಶದಲ್ಲಿ ಸೂರ್ಯನಂತೆ, ಯಾವಾಗಲೂ ಸಂತೋಷಪಡುತ್ತಾನೆ. ಅಯ್ಯಾ ರಾಜನೇ! ಪೂಜೆಮಾಡುವವನು ಸರ್ವಸುಗಂಧಯುಕ್ತವಾದ ಹಿಟ್ಟಿನಿಂದ ವ್ಯೋಮವನ್ನು ರಚಿಸಿ, ಬಳಿಕ ಸುವಾಸನೆಯಾದ ಪುಷ್ಪಗಳಿಂದ ಪೂಜಿಸಿ, ನಾನಾ ಬಗೆಯಾದ ಫಲಗಳನ್ನೂ ರಸವತ್ತಾದ ಭಕ್ಷ್ಯ ಲೇಹ್ಯ ಮುಂತಾದುವುಗಳನ್ನೂ ನಿವೇದಿಸಬೇಕು. ತುಪ್ಪದ ದೀಪಗಳನ್ನೂ ಹತ್ತಿಸಿ, ಸಮರ್ಪಿಸಿ, ಅಲಂಕರಿಸಬೇಕು. ವಿದ್ವಾಂಸನಾದವನು ಆ ವ್ಯೋಮವನ್ನು ನಾನಾ ರತ್ನಗಳಿಂದ ಅಲಂಕಾರ ಮಾಡಿ, ಅನೇಕ ಸುಗಂಧಗಳನ್ನು ಲೇಪಿಸಿ, ಅದರ ಬಲಭಾಗದಲ್ಲಿ ಅಗುರು ಧೂಪವನ್ನು ಇಡಬೇಕು; ಮತ್ತು ಆ ವ್ಯೋಮದ ಪಶ್ಚಿಮ ಭಾಗದಲ್ಲಿ ಶುಭಕರವಾದ ಶ್ರೀಗಂಧವನ್ನೂ, ಉತ್ತರಭಾಗದಲ್ಲಿಯೂ, ಪೂರ್ವಭಾಗದಲ್ಲಿಯೂ ಸಹ ರಕ್ತಚಂದನವನ್ನೂ, ಹಚ್ಚಬೇಕು.

೧೭. ಭಕ್ತನು ತನಗೆ ಇರುವ ಸಂಪತ್ತಿನ ಅನುಕೂಲ್ಯಕ್ಕೆ ತಕ್ಕ ಹಾಗೆ ತುಂಬಾ ವೈಭವಯುಕ್ತವಾಗಿರುವಂತೆ ಪೂಜೆಮಾಡಬೇಕು. ಕೃಷ್ಣಪಕ್ಷದ ಸಪ್ತಮಿಯ ದಿನ ಇವನ್ನೆಲ್ಲಾ ಸೂರ್ಯನಿಗೆ ಸಮರ್ಪಿಸಬೇಕು.

ಸಕೃದೇವ ತು ಯಃ ಕುರ್ಯಾದ್ವ್ಯೋಮ್ನೋ ಭರತಸತ್ತಮ ।
ಯತ್ಫಲಂ ಹಿ ಭವೇತ್ತಸ್ಯ ತನ್ಮೇ ನಿಗದತಃ ಶೃಣು ॥ ೧೮ ॥

ಸರ್ವಪಾಪವಿನಿರ್ಮುಕ್ತಃ ಸರ್ವದುಃಖವಿವರ್ಜಿತಃ ।
ನಿಷ್ಕಲಃ ಸರ್ವಗೋ ಭೂತ್ವಾ ಪ್ರವಿಶೇತ್ಪರಮವ್ಯಯಂ ।
ತೇಜಸಾ ರವಿಸಂಕಾಶಃ ಪ್ರಭಯಾ ರವಿಸನ್ನಿಭಃ ॥ ೧೯ ॥

ಪಾಂಸುನಾ ಕ್ರೀಡಮಾನೋ ಯಃ ಕುರ್ಯಾದ್ವ್ಯೋಮ ಹ್ಯಯತ್ನತಃ ।
ಸ ರಾಜಾ ಭವತೇ ರಾಜನ್ ಪರ್ವತೇಷು ಸಮಂತತಃ ॥ ೨೦ ॥

ಸರ್ವೇಷಾಮೇವ ಪಾತ್ರಾಣಾಂ ಪರಂ ಪಾತ್ರಂ ವಿಭಾವಸುಃ ।
ಏತತ್ಸಂತಾರಯೇದ್ಯಸ್ಮಾದತೀವ ನರಕಾರ್ಣವಾತ್ ॥ ೨೧ ॥

---

೧೮. ಅಯ್ಯಾ ಭರತಕುಲಶ್ರೇಷ್ಠನೇ! ಈ ವ್ಯೋಮವನ್ನು ಒಂದೇ ಆವೃತ್ತಿ ಪೂಜಿಸಿದರೂ ಉಂಟಾಗುವ ಫಲವೆಷ್ಟೆಂಬುದನ್ನು ನಾನು ನಿನಗೆ ತಿಳಿಸುವೆನು; ಕೇಳು.

೧೯. ವ್ಯೋಮವನ್ನು ಒಂದು ಬಾರಿ ಪೂಜಿಸಿದ ಮಾತ್ರಕ್ಕೆ ಪುರುಷನು ತನ್ನ ಸಮಸ್ತ ಪಾಪಗಳನ್ನೂ ಕಳೆದುಕೊಂಡು ಸಕಲ ದುಃಖಗಳಿಂದಲೂ ಬಿಡುಗಡೆಹೊಂದಿ, ಕಲಂಕ ರಹಿತನಾಗಿ, ಸರ್ವವ್ಯಾಪಕನೆನಿಸಿ, ನಾಶರಹಿತವೂ ಪರಬ್ರಹ್ಮ ಸ್ವರೂಪವೂ ಆದ ಸೂರ್ಯದೇವನಲ್ಲಿ, ಐಕ್ಯನಾಗುತ್ತಾನೆ.

೨೦. ಎಲೈ ರಾಜನೇ! ವ್ಯೋಮಾರ್ಚನೆ ಮಾಡಿದ ಪುರುಷನು ಸೂರ್ಯಸಮನಾದ ತೇಜೋವಂತನೂ, ಸೂರ್ಯಸಮನಾದ ಪ್ರಭೆಯುಳ್ಳವನೂ ಆಗುವನು. ಅಯ್ಯಾ ದೊರೆಯೇ! ಕೇಳು; ಧೂಳಿನಲ್ಲಿ ಆಟವಾಡುತ್ತಾ,ಪ್ರಯತ್ನ ವಿಲ್ಲದೆ ಇದ್ದರೂ ತಾನಾಗಿಯೇ ವ್ಯೋಮಾಕೃತಿಯನ್ನು ರಚಿಸುವವನು, ಸುತ್ತಮುತ್ತಲಿನ ಪರ್ವತ ಪ್ರಾಂತಗಳಿಗೆಲ್ಲಾ ರಾಜನಾಗಿ ಶೋಭಿಸುವನು.

೨೧. ಎಲ್ಲಾ ಪಾತ್ರಗಳಲ್ಲಿಯೂ ಸೂರ್ಯನು ಶ್ರೇಷ್ಠವಾದ ಪಾತ್ರನು. ಈ ಸತ್ಪಾತ್ರನಿಗೆ ಮಾಡಿದ ಸೇವೆಯು ಮಾನವನನ್ನು ಸಮುದ್ರದಂತೆ ಅಪಾರವಾದ ನರಕದಿಂದ ಸಂಪೂರ್ಣವಾಗಿ ಪಾರುಮಾಡುತ್ತದೆ.

ತಸ್ಯ ಪಾತ್ರಸ್ಯ ಮಾಹಾತ್ಮ್ಯಂ ಧ್ರುವಮಕ್ಷಯಮಾದಿಶೇತ್ ।
ತಸ್ಮಾತ್ತಸ್ಮೈ ಸದಾ ದೇಯಮಪ್ರಮೇಯಫಲಾರ್ಥಿಭಿಃ ॥ ೨೨ ॥

ರವೌ ದತ್ತಂ ಹುತಂ ಜಪ್ತಂ ಬಲಿಂ ಪೂಜಾಂ ನಿವೇದಯೇತ್ ।
ಅನಂತಫಲಮಾದಿಷ್ಟಂ ಬ್ರಹ್ಮಾದಿಸುರಸತ್ತಮೈಃ ॥ ೨೩ ॥

ಭಕ್ತ್ಯಾ ವಿತ್ತಾನುಸಾರೇಣ ಯಃ ಕುರ್ಯಾದಾಲಯಂ ರವೇಃ
ಸೋಽಽಗ್ನೇಯಂ ಯಾನಮಾರುಹ್ಯ ಮೋದತೇ ಸಹಭಾನುನಾ ॥ ೨೪ ॥

ಮಹಾವಿಭವಸಾರೋಽಪಿ ಯಃ ಕುರ್ಯಾದ್ಭಕ್ತಿವರ್ಜಿತಂ ।
ಅಲ್ಪೇ ಮಹತಿ ವಾ ತುಲ್ಯಂ ಫಲಮಾಢ್ಯದರಿದ್ರಯೋಃ ॥ ೨೫ ॥

---

೨೨. ಅಂಥ (ವ್ಯಕ್ತಿಯ) ಮಹಿಮೆಯು ಶಾಶ್ವತವೆಂಬದಾಗಿಯೂ, ನಾಶರಹಿತ ವೆಂಬದಾಗಿಯೂ, ತಿಳಿಯಬೇಕು. ಆದುದರಿಂದ ಅಪರಿಮಿತವಾದ ಫಲವನ್ನು ಅಪೇಕ್ಷಿಸುವವರು, ಅಂಥ ಸೂರ್ಯದೇವನಿಗೆ ಪೂಜಾದಿಗಳನ್ನು ಮಾಡಿ, ಬಲಿಯನ್ನು ಸಮರ್ಪಿಸಬೇಕು.

೨೩. ತಾನು ಮಾಡುವ ದಾನ, ತಾನು ಮಾಡುವ ಜಪ, ಮತ್ತು ಆಚರಿಸುವ ಹೋಮ, ಬಲಿದಾನ, ಮತ್ತು ಪೂಜೆ, ಇವೆಲ್ಲವನ್ನೂ ಸೂರ್ಯಪ್ರೀತ್ಯರ್ಥವಾಗಿ ಸಮರ್ಪಿಸಬೇಕು. (ನಾನು ಮಾಡಿದ ಎಲ್ಲಾ ಕರ್ಮಗಳೂ, ಎಲೈ ಸೂರ್ಯದೇವನೇ! ನಿನಗೆ ಸಮರ್ಪಣೆಯಾಗಲಿ ಎಂದು ಹೇಳಬೇಕು) ಇದು ಅನಂತ ಫಲದಾಯಕವಾದುದೆಂದು ಬ್ರಹ್ಮಾದಿ ದೇವತೆಗಳೂ, ಮತ್ತು ಇಂದ್ರಾದಿ ದೇವತೆಗಳೂ, ಸಹ ಹೇಳಿರುವರು.

೨೪. ತನ್ನ ದ್ರವ್ಯ ಸಂಪತ್ತಿಗನುಸಾರವಾಗಿ ಭಕ್ತಿಯಿಂದ ಸೂರ್ಯ ದೇವಾಲಯವನ್ನು ರಚಿಸುವ ಮಾನವನು ಆಗ್ನೇಯವೆಂಬ ವಿಮಾನವನ್ನು ಏರಿ ಸೂರ್ಯನ ಲೋಕಕ್ಕೆ ಹೋಗಿ, ಅವನೊಡನೆ ಹರ್ಷದಿಂದ ಇರುವನು.

೨೫. ನಿಜವಾದ ಭಕ್ತಿಯಿಲ್ಲದೆ ಆಡಂಬರಕ್ಕಾಗಿ. ಹೆಚ್ಚು ಧನ ವ್ಯಯಮಾಡಿ ಪೂಜಿಸಿದ ಧನಿಕನು, ಎಷ್ಟು ಫಲವನ್ನು ಹೊಂದುವನೋ; ವಿಶೇಷ ವ್ಯಯಮಾಡದೆ ಇದ್ದರೂ ನಿಜವಾದ ಭಕ್ತಿಯಿಂದ ಸಾಮಾನ್ಯವಾಗಿ ಪೂಜಿಸಿದ ಬಡವನೂ, ಅಷ್ಟೇ ಫಲವನ್ನು ಹೊಂದುವನು.

ವಿತ್ತಶಾಠ್ಯೇನ ಯಃ ಕುರ್ಯಾದ್ವಿತ್ತವಾನಪಿ ಮಾನವಃ ।
ಅಸೌ ನ ಫಲಮಾಪ್ನೋತಿ ಪ್ರಲೋಭಾಕ್ರಾಂತ ಮಾನಸಃ ॥ ೨೬ ॥

ತಸ್ಮಾತ್ತೃತೀಯಂ ವಿತ್ತಸ್ಯ ಜೀವನಾಯ ಪ್ರಕಲ್ಪಯೇತ್ ।
ಭಾಗದ್ವಯಂ ಚ ಧರ್ಮಾರ್ಥೇ ಅನಿತ್ಯಂ ಜೀವನಂ ಯತಃ ॥ ೨೭ ॥

ಭಕ್ತ್ಯಾ ಪ್ರಚೋದಿತಂ ಕುರ್ಯಾದಲ್ಪವಿತ್ತೋಽಪಿ ಮಾನವಃ ।
ಮಹಾವಿಭವಸಾರೋಽಪಿ ನ ಕುರ್ಯಾದ್ಭಕ್ತಿವರ್ಜಿತಃ ॥ ೨೮ ॥

ಸರ್ವಸ್ವಮಪಿ ಯೋ ದದ್ಯಾದರ್ಕೇ ಭಕ್ತಿವಿವರ್ಜಿತಃ ।
ನ ತೇನ ಧರ್ಮಭಾಗೀ ಸ್ಯಾದ್ಭಕ್ತಿರೇವಾತ್ರ ಕಾರಣಂ ॥ ೨೯ ॥

ನ ತಪೋಭಿರ್ವಿಭೋರುಗ್ರೈರ್ನಚ ಸರ್ವೈರ್ಮಹಾಮಖೈಃ ।
ಗಚ್ಛೇದೇಕಂ ಪುರಂ ದಿವ್ಯಮರ್ಕೇ ಭಕ್ತಿಯುತೋ ನೃಪ ॥ ೩೦ ॥

---

೨೬. ಯಾವ ಮನುಷ್ಯನು ದ್ರವ್ಯದ ಅನುಕೂಲವಿದ್ದರೂ, ಲೋಭಯುಕ್ತವಾದ ಮನಸ್ಸುಳ್ಳವನಾಗಿ, ಕೃಪಣತೆಮಾಡಿ ಪೂಜಿಸುವನೋ, ಅವನು ಆ ಪೂಜೆಗೆ ಲಭ್ಯವಾಗತಕ್ಕಷ್ಟು ಫಲವನ್ನು ಹೊಂದುವುದಿಲ್ಲ.

೨೭. ಆದುದರಿಂದ ತನಗಿರುವ ಆದಾಯದ ಮೂರರಲ್ಲೊಂದು ಪಾಲನ್ನು ಜೀವನಕ್ಕಾಗಿ ಇಟ್ಟುಕೊಂಡು, ಉಳಿದ ಎರಡು ಪಾಲನ್ನು ಧರ್ಮಕ್ಕಾಗಿ ಉಪಯೋಗಿಸಬೇಕು. ಏಕೆಂದರೆ ಜೀವಿತವು ಅಶಾಶ್ವತವಾದುದು.

೨೮. ಮನುಷ್ಯನು ತನಗೆ ದ್ರವ್ಯಾನುಕೂಲ ಸ್ವಲ್ಪವೇ ಇದ್ದಾಗ್ಯೂ ಭಕ್ತಿ ಪ್ರೇರಿತನಾಗಿ ಯಥಾಶಕ್ತಿ ಆರಾಧಿಸಬೇಕು. ಮಹಾ ಧನಿಕನಾದರೂ ಭಕ್ತಿಯಿಲ್ಲದೆ ಇದ್ದರೆ ಪೂಜಿಸಬಾರದು.

೨೯. ಭಕ್ತಿಯಿಲ್ಲದವನು ತನ್ನ ಸರ್ವಸ್ವವನ್ನೂ ಸೂರ್ಯನಿಗೆ ಸಮರ್ಪಿಸಿದರೂ ಅವನು ಧರ್ಮಭಾಗಿಯಾಗುವುದಿಲ್ಲ. ಏತಕ್ಕೆಂದರೆ ಪುಣ್ಯಪ್ರಾಪ್ತಿಗೆ ಭಕ್ತಿಪೂರ್ವಕವಾದ ಅರ್ಚನೆಯೇ ಮುಖ್ಯಸಾಧನ. ಈ ವಿಚಾರವನ್ನು ಸರ್ವರೂ ತಿಳಿಯಬೇಕು.

೩೦. ಅಯ್ಯಾ ರಾಜನೇ! ವಿಭುವಾದ ಸೂರ್ಯನಲ್ಲಿ ಭಕ್ತಿಯುಳ್ಳವನೇ ದೇವಲೋಕಕ್ಕೆ ಹೋಗುವನೇ ಹೊರತು, ಸೂರ್ಯನಲ್ಲಿ ಭಕ್ತಿಯಿಲ್ಲದವನು ಉಗ್ರ

ರುಚಿರಂ ಶುಭಶೈಲೋತ್ಥಂ ಕುರ್ಯಾದ್ಯಸ್ತು ರವೇರ್ಗೃಹಂ ।
ತ್ರಿಸಪ್ತಕುಲಸಂಯುಕ್ತಃ ಸೂರ್ಯಲೋಕಮವಾಪ್ನುಯಾತ್ ॥ ೩೧ ॥

ಯನ್ಮಯಾ ಕೋಟಿಗುಣಿತಂ ಕೃತಂ ಸ್ಯಾದಿಷ್ಟಕಾಮಯಂ ।
ದ್ವಿಪರಾರ್ಧಗುಣಂ ಪುಣ್ಯಂ ಶೈಲಜೇಪಿ ವಿದುರ್ಬುಧಾಃ ॥ ೩೨ ॥

ಮೃಚ್ಛೈಲೇನ ಸಮಂ ಜ್ಞೇಯಂ ಪುಣ್ಯಮಾಢ್ಯದರಿದ್ರಯೋಃ ।
ಯತ್ರ ತತ್ರ ಗತಃ ಕುರ್ಯಾದ್ಭಕ್ತ್ಯಾ ಪುಣ್ಯಂ ಭಗಾಲಯಂ ॥ ೩೩ ॥

ಶೈಲೋತ್ಥಮಿಷ್ಟಕಾಭಿರ್ವಾ ದೃಢಂ ದಾರುಮಯಂ ಶುಭಂ ।
ಸ ಗಚ್ಛೇತ್ಪರಮಂ ಸ್ಥಾನಂ ಭಾನೋರಮಿತತೇಜಸಃ ।
ಗೈರಿಕಂ ಯಾನಮಾರುಹ್ಯ ಯಃ ಕುರ್ಯಾದ್ಧೃತಭೂಷಣಃ ॥ ೩೪ ॥

---

ತಪಸ್ಸು ಮಾಡಿದುದರಿಂದಾಗಲಿ, ಭಕ್ತಿಯಿಲ್ಲದೆ ಮಹಾಯಜ್ಞ ಮಾಡಿದುದರಿಂದಾಗಲಿ ದೇವಲೋಕಕ್ಕೆ ಹೋಗಲಾರನು.

೩೧. ಕಾಂತಿಯುಕ್ತವೂ, ಮನೋಹರವೂ ಆಗುವಂತೆ, ಒಳ್ಳೆಯ ಕಲ್ಲುಗಳಿಂದ ಯಾವನು ಸೂರ್ಯ ದೇವಾಲಯವನ್ನು ಕಟ್ಟಿಸುವನೋ, ಅವನು ಇಪ್ಪತ್ತೊಂದು ತಲೆಮಾರಿನವರೊಡನೆ ಸೂರ್ಯಲೋಕಕ್ಕೆ ಹೋಗುವನು.

೩೨. ಕೋಟಿ ಸಂಖ್ಯೆಯುಳ್ಳ ಕೇವಲ ಇಟ್ಟಿಗೆಯಿಂದ ದೇವಾಲಯವನ್ನು ನಿರ್ಮಿಸಿದರೆ, ಬರುವ ಫಲವು ಒಂದು ಭಾಗವಾದರೆ, ಆ ದೇವಾಲಯವನ್ನು ಕಲ್ಲಿನಿಂದ ಕಟ್ಟಿಸಿದರೆ, ಅದರ ಎರಡರಷ್ಟು ಪುಣ್ಯವು ಲಭಿಸುವುದೆಂದು ವಿದ್ವಾಂಸರು ಹೇಳುವರು.

೩೩. ಹಣವಂತನು ತಾನು ಹೋದ ಸ್ಥಳದಲ್ಲಿ, ಪುಣ್ಯಕರವಾದ ಸೂರ್ಯ ದೇವಾಲಯವನ್ನು ಕಲ್ಲಿನಿಂದ ಕಟ್ಟಿಸಿದರೆ ಎಷ್ಟು ಪುಣ್ಯ ಲಭಿಸುವುದೋ, ದರಿದ್ರನು ಮಣ್ಣಿನಿಂದ ಕಟ್ಟಿಸಿದರೂ, ಅಷ್ಟೇ ಪುಣ್ಯವು ಲಭಿಸುವುದು.

೩೪. ಕಲ್ಲಿನಿಂದಾಗಲಿ, ಇಟ್ಟಿಗೆಗಳಿಂದಾಗಲಿ, ಶುಭಕರವಾದ ಮರಗಳಿಂದಾಗಲಿ, ದೃಢವಾಗಿರುವಂತೆ ತೇಜೋನಿಧಿಯಾದ ಸೂರ್ಯದೇವನ ದೇವಾಲಯವನ್ನು ಕಟ್ಟಿಸುವ ಮಾನವನು, ಆಭರಣಗಳಿಂದಲಂಕೃತನಾಗಿ ಗೈರಿಕಯಾನವನ್ನೇರಿ ಸೂರ್ಯ ಲೋಕಕ್ಕೆ ಹೋಗುವನು.

ಕ್ರೀಡಮಾನೋಽಪಿ ಯಃ ಕುರ್ಯಾದ್ಬಾಲಭಾವೇಽರ್ಕಮಂದಿರಂ ।
ಸೋಽರ್ಕಲೋಕಮವಾಪ್ನೋತಿ ವಿಮಾನವರಮಾಸ್ಥಿತಃ ॥ ೩೫ ॥

ಪುಷ್ಪಮಾಲಾಕುಲಂ ದಿವ್ಯಂ ಧೂಪಗಂಧಾದಿವಾಸಿತಂ ।
ಅಪ್ಸರೋಗಣಸಂಕೀರ್ಣಂ ಸರ್ವಕಾಮಸುಖಪ್ರದಂ ॥ ೩೬ ॥

ತತ್ರ ರೂಢೋ ಮಹಾರಾಜ ವತ್ಸರಂ ವೃಂದಮುತ್ತಮಂ ।
ಉಷಿತ್ವಾ ಭಾಸ್ಕರಪುರೇ ಪೂಜ್ಯಮಾನಸ್ತು ದೈವತೈಃ ॥ ೩೭ ॥

ಕ್ರಮಾದಾಗತ್ಯ ಲೋಕೇಽಸ್ಮಿನ್ರಾಜಾ ಭವತಿ ಧಾರ್ಮಿಕಃ ।
ಧರ್ಮಾರ್ಥಕಾಮಸಂಪನ್ನೋ ಯಶಸಾ ಚ ನರಾಧಿಪ ॥ ೩೮ ॥

---

೩೫. ಹುಡುಗನಾಗಿರುವಾಗ ಆಟಕ್ಕಾಗಿ ಸೂರ್ಯಗೃಹವನ್ನು ಮಾಡಿದರೂ ಅವನು ಉತ್ತಮವಾದ ವಿಮಾನವನ್ನೇರಿ ಸೂರ್ಯಲೋಕವನ್ನು ಸೇರುವನು.

೩೬. ಅಯ್ಯಾ ಮಹಾರಾಜನೇ! ಸೂರ್ಯಗೃಹವನ್ನು ನಿರ್ಮಾಣಮಾಡಿದವನು ಹೂಮಾಲೆಗಳಿಂದ ವ್ಯಾಪ್ತವಾದುದೂ, ದಿವ್ಯವಾದ ಗಂಧ ಧೂಪ ಮುಂತಾದ ದ್ರವ್ಯಗಳಿಂದ ಸುವಾಸನಾಯುಕ್ತವಾದುದೂ, ಅಪ್ಸರ ಸ್ತ್ರೀಸಮೂದಿಂದ ಕೂಡಿದುದೂ, ಸರ್ವ ಕಾಮಸುಖಗಳನ್ನು ಕೊಡುವಂಥದೂ ಆದ, ಶ್ರೇಷ್ಠ ವಿಮಾನದಲ್ಲಿ ಕುಳಿತು ಸೂರ್ಯಲೋಕವನ್ನು ಸೇರುತ್ತಾನೆ.

೩೭-೩೮. ಅನಂತರ ಆ ಸೂರ್ಯ ಲೋಕದಲ್ಲಿ ದೇವತೆಗಳಿಂದ ಪೂಜೆ ಹೊಂದುತ್ತಾ ಒಂದು ಸಂವತ್ಸರ ವೃಂದದವರೆಗೆ(ಎಂದರೆ ಪ್ರಭವಾದಿ ಅಕ್ಷಯಪರ್ಯಂತವಿರುವ ಅರವತ್ತು ಸಂವತ್ಸರವೂ ಒಂದು ಬಾರಿ ಕಳೆಯುವವರೆಗೆ) ವಾಸಮಾಡುತ್ತಾನೆ. ಸ್ವಲ್ಪಕಾಲದ ತರುವಾಯ (ಕಾಲಕ್ರಮದಲ್ಲಿ) ಭೂಲೋಕದಲ್ಲಿ ಜನಿಸಿ ಧಾರ್ಮಿಕನಾದ ರಾಜನಾಗುತ್ತಾನೆ. ಆಗ ಈ ಲೋಕದಲ್ಲಿ ಧರ್ಮ ಅರ್ಥ ಕಾಮ ಎಂಬ ತ್ರಿವರ್ಗ ಸಂಪತ್ತನ್ನೂ ಪಡೆದು ತನ್ನ ಕೀರ್ತಿಯಿಂದ ಲೋಕವನ್ನೆಲ್ಲಾ ಪ್ರಕಾಶಪಡಿಸುತ್ತಾ ರಾಜ್ಯವಾಳುವನು.

**ಪಶ್ಯನ್ ಪರಿಹರನ್ ಜಂತೂನ್ ಮಾರ್ಜನ್ಯಾ ಮೃದುಸೂಕ್ಷ್ಮಯಾ ।**
**ಶನೈಃ ಸಮ್ಮಾರ್ಜನಂ ಕುರ್ವಂಶ್ಚಾಂದ್ರಾಯಣಫಲಂ ಲಭೇತ್ ॥ ೩೯ ॥**

**ಪುತ್ರಾರ್ಥಂ ದೇಹಜೀರ್ಣಾಯಾ ವಂಧ್ಯಾಯಾಶ್ಚ ವಿಶೇಷತಃ ।**
**ರೋಗಾರ್ತಾನಾಂ ಚ ಭೂತಾನಾಮಾರೋಗ್ಯಾರ್ಥಂ ಪ್ರಪೂಜಯೇತ್ ॥ ೪೦ ॥**

**ಗೃಹೀತ್ವಾ ಗೋಮಯಂ ಸ್ವಚ್ಛಂ ಸ್ಥಾನೇ ಚ ಪತಿತಂ ಶುಭೇ ।**
**ಉಪರ್ಯುಪರಿ ಸಂತ್ಯಜ್ಯ ಪ್ರತ್ಯಗ್ರಂ ಜಂತುವರ್ಜಿತಂ ॥ ೪೧ ॥**

**ವಸ್ತ್ರಪೂತಂ ಗೋಮಯೇನ ಯಃ ಕುರ್ಯಾದುಪಲೇಪನಂ ।**
**ಪಶ್ಯೇತ್ತು ಸುಖಿತಾನ್ ಜಂತೂಂಶ್ಚಾಂದ್ರಾಯಣಶತಂ ಲಭೇತ್ ॥ ೪೨ ॥**

---

೩೯. ದೇವಾಲಯದಲ್ಲಿ ಸಣ್ಣ ಸಣ್ಣ ಇರುವೆ ಮೊದಲಾದ ಪ್ರಾಣಿಗಳು ಹರಿದಾಡುತ್ತಿರುವುದನ್ನು ನೋಡಿ ಅವುಗಳಿಗೆ ತೊಂದರೆಯಾಗದಂತೆ ಮೃದುವಾಗಿಯೂ ಸೂಕ್ಷ್ಮವಾಗಿಯೂ ನೆಲವನ್ನು ಗುಡಿಸುವವನು, ಚಾಂದ್ರಾಯಣ ವ್ರತವನ್ನು ಆಚರಿಸಿದರೆ ಉಂಟಾಗುವಷ್ಟು ಫಲವನ್ನು ಪಡೆಯುವನು.

೪೦. ಪುತ್ರನನ್ನು ಪಡೆಯಲು ಆಶಿಸುವವಳೂ, ದೇಹ ಗಳಿತವಾದವಳೂ, ಬಂಜೆಯಾದವಳೂ, ತನ್ನ ಇಷ್ಟಪ್ರಾಪ್ತಿಗೋಸ್ಕರ ಸೂರ್ಯದೇವನನ್ನು ಪೂಜಿಸಬೇಕು. ಮತ್ತು ರೋಗಪೀಡಿತಗಳಾದ ಪ್ರಾಣಿಗಳು ತಮಗೆ ರೋಗನಿವೃತ್ತಿಯಾಗಿ ಆರೋಗ್ಯವಾಗುವುದಕ್ಕೋಸ್ಕರ ಈ ರೀತಿ ವಿಶೇಷವಾಗಿ ಸೇವೆಮಾಡಿ ಪೂಜಿಸಬೇಕು.

೪೧. ಶುಭಕರವಾದ ಸ್ಥಳದಲ್ಲಿ ಬಿದ್ದಿರುವುದೂ, ಹುಳುಗಳಿಲ್ಲದೆ ಹೊಸದಾಗಿರುವುದೂ, ಆದ ನಿರ್ಮಲವಾದ ಗೋಮಯವನ್ನು ತೆಗೆದುಕೊಂಡು, ಅದರ ಮೇಲಿನ ಭಾಗವನ್ನು ತೆಗೆದು, ಉಳಿದ ಸಗಣಿಯಿಂದ ಸಾರಿಸಬೇಕು.

೪೨. ಗೋಮಯ ಹಾಕಿ ವಸ್ತ್ರಪೂತವಾನ ಜಲದಿಂದ ನೆಲವನ್ನು ಸಾರಿಸುವಾಗ ಆ ನೆಲದಲ್ಲಿರುವ ಜಂತುಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಹೀಗೆ ಮಾಡಿದರೆ ಅವನು ನೂರು ಚಾಂದ್ರಾಯಣ ವ್ರತ ಮಾಡಿದಷ್ಟು ಫಲವನ್ನು ಹೊಂದುತ್ತಾನೆ.

ಯಃ ಕುರ್ಯಾತ್ಸರ್ವಕಾರ್ಯಾಣಿ ವಸ್ತ್ರಪೂತೇನ ವಾರಿಣಾ ।
ಸ ಮುನಿಃ ಸ ಮಹಾಸಾಧುಃ ಸ ಗಚ್ಛೇತ್ಪರಮಾಂ ಗತಿಂ ॥ ೪೩ ॥

ಕ್ಷರಂತಿ ಸರ್ವದಾನಾನಿ ಯಜ್ಞಹೋಮಬಲಿಕ್ರಿಯಾಃ ।
ಅಕ್ಷರಂ ತು ಮಹಾದಾನಂ ಸುಖದಂ ಸರ್ವದೇಹಿನಾಂ ॥ ೪೪ ॥

ನೈರಂತರ್ಯೇಣ ಯಃ ಕುರ್ಯಾತ್ಪಕ್ಷಂ ಸಂಮಾರ್ಜನಾರ್ಚನಂ ।
ವರ್ಷಾಣೇಕಂ ಶತಂ ದಿವ್ಯಂ ಸುರಲೋಕೇ ಮಹೀಯತೇ ॥ ೪೫ ॥

ತಸ್ಯಾಂತೇ ಚ ಚತುರ್ವೇದಸುರೂಪಃ ಪ್ರಿಯದರ್ಶನಃ ।
ಆದ್ಯಃ ಸರ್ವಗುಣೋಪೇತೋ ರಾಜಾ ಭವತಿ ಧಾರ್ಮಿಕಃ ॥ ೪೬ ॥

ಸಂಪರ್ಕೇಣಾಪಿ ಯಃ ಕುರ್ಯಾನ್ನರಃ ಕರ್ಮ ಭಗಾಲಯೇ ।
ಸೋಽಪಿ ಸೌಮನಸಂ ಗತ್ವಾ ಪುರಂ ಕ್ರೀಡತಿ ನಿತ್ಯಶಃ ॥ ೪೭ ॥

---

೪೩. ಯಾವನು ಬಟ್ಟೆಯಿಂದ ಶೋಧಿಸಿದ ನೀರಿನಿಂದ ದೇವಾಲಯದ ಎಲ್ಲಾ ಕೆಲಸಗಳನ್ನೂ ಮಾಡುವನೋ ಅವನೇ ಮಹರ್ಷಿ, ಅವನೇ ಮಹಾಸಾಧು; ಅವನು ಶ್ರೇಷ್ಠವಾದ ಸದ್ಗತಿಯನ್ನು ಹೊಂದುವನು.

೪೪. ದಾನ, ಯಜ್ಞ, ಹೋಮ, ಬಲಿಕರ್ಮ, ಇವುಗಳೆಲ್ಲಾ ಎಂದಾದರೂ ನಾಶ ಹೊಂದಬಹುದು. ಸಕಲ ಪ್ರಾಣಿಗಳಿಗೂ ಯಾವಾಗಲೂ ಸುಖವನ್ನುಂಟುಮಾಡುವುದೆಂಬುದು, ಎಂದೆಂದಿಗೂ ನಾಶಹೊಂದದೆ ಇರುವ ಮಹಾದಾನವೆನಿಸುವುದು.

೪೫. ಯಾವನು ಒಂದು ಪಕ್ಷದವರೆಗೆ ಎಡಬಿಡದೆ ಪ್ರತಿದಿನವೂ ದೇವಾಲಯವನ್ನು ಗುಡಿಸುವನೋ, ಅವನು ದೇವಮಾನದ ನೂರು ವರ್ಷಗಳವರೆಗೆ, ದೇವಲೋಕದಲ್ಲಿ ಪೂಜ್ಯನಾಗಿ ಮೆರೆಯುವನು.

೪೬. ಆ ಜನ್ಮ ಮುಗಿದು ಮುಂದಿನ ಜನ್ಮದಲ್ಲಿ ಚತುರ್ವೇದ ಘೋಷಣ ನಿರತನೂ, ಸರ್ವಗುಣಗಳಿಂದ ಕೂಡಿದವನೂ, ಆದ್ಯನೂ, ಸುರೂಪನೂ, ಪ್ರಿಯದರ್ಶನನೂ, ಧರ್ಮಿಷ್ಠನೂ ಆದ ರಾಜನಾಗುತ್ತಾನೆ.

೪೭. ತನಗೆ ಉದ್ದೇಶವಿಲ್ಲದಿದ್ದರೂ ಸೂರ್ಯಾಲಯದಲ್ಲಿರುವವರ ಸಂಪರ್ಕದಿಂದಲಾದರೂ, ಈ ಕರ್ಮವನ್ನು ಮಾಡಿದರೆ, ಅವನೂ ಸಹ ದೇವಲೋಕಕ್ಕೆ ಹೋಗಿ ಅಲ್ಲಿ ಅನವರತವೂ ವಿಹರಿಸುವನು.

ತಾವದ್ಭ್ರಮಂತಿ ಸಂಸಾರೇ ದುಃಖಶೋಕಪರಿಪ್ಲುತಾಃ ।
ನ ಭಜಂತಿ ರವಿಂ ಭಕ್ತ್ಯಾ ಯಾವತ್ಸರ್ವೇಽಪಿ ದೇಹಿನಃ ॥ ೪೮

ಸಮಾಸಕ್ತಂ ತಥಾ ಚಿತ್ತಂ ಜಂತೋರ್ವಿಷಯಗೋಚರೇ ।
ಯದ್ಯರ್ಕೋ ನ ಭವದ್ದೇವಃ ಕೋ ಮುಂಚೇದೇವ ಬಂಧನಾತ್ ॥ ೪೯ ॥

ಯಃ ಕುರ್ಯಾತ್ಕುಟ್ಟಿಮಾಂ ಭೂಮಿಂ ದರ್ಪಣೋದರಸನ್ನಿಭಾಂ ।
ನಾನಾವರ್ಣವಿಚಿತ್ರಾಂ ಚ ವಿಚಿತ್ರಕುಸುಮೋಜ್ವಲಾಂ ॥ ೫೦ ॥

ಕ್ವಚಿತ್ಕಲಶವಿನ್ಯಸ್ತಾಂ ಪಂಕಜೈರುಪಶೋಭಿತಾಂ ।
ರಮ್ಯಾಂ ಮನೋರಮಾಂ ಸೌಮ್ಯಾಮರ್ಕಾಯತನಸಂಸದಿ ॥ ೫೧ ॥

ಯಾವದ್ದಂಡಾ ಭವೇದ್ಭೂಮಿಃ ಸಮಂತಾಚ್ಚ ಸುಶೋಭನಾ ।
ತಾವದ್ಯುಗಸಹಸ್ರಾಣಿ ಸೂರಲೋಕೇ ಮಹೀಯತೇ ॥ ೫೨ ॥

---

೪೮. ಯಾವ ಪ್ರಾಣಿಯೇ ಆಗಲಿ ದುಃಖಪೂರ್ಣವಾದ ಸಂಸಾರದಲ್ಲಿ ತೊಳಲುತ್ತಿದ್ದರೆ ಆ ಕಷ್ಟವು ಸೂರ್ಯನನ್ನು ಭಕ್ತಿಯಿಂದ ಪೂಜಿಸುವ ಪರ್ಯಂತ ಖಂಡಿತವಾಗಿಯೂ ತಪ್ಪುವುದಿಲ್ಲವೆಂದು ತಿಳಿಯಬೇಕು.

೪೯. ವಿಷಯಾಸಕ್ತಿಪೂರ್ಣವಾದ ಮನಸ್ಸುಳ್ಳ ಯಾವನೇ ಆಗಲಿ ಸೂರ್ಯನನ್ನು ಭಜಿಸದೆ ಇದ್ದರೇ ಅವನನ್ನು ಈ ಭವಬಂಧನದಿಂದ ಬಿಡಿಸಿ ಕಾಪಾಡುವವರು ಮತ್ತಾರು ? (ಯಾರೂ ಇಲ್ಲವೆಂದು ತಿಳಿಯಬೇಕು.)

೫೦. ಸೂರ್ಯದೇವಾಲಯದಲ್ಲಿ ಕನ್ನಡಿಯಂತೆ ಹೊಳೆಯುವ ನಿಬದ್ಧ ಭೂಮಿಯನ್ನು ಮಾಡಿಸಿ, ಅದರಲ್ಲಿ ಅನೇಕ ಬಣ್ಣಗಳಿಂದ ಚಿತ್ರ ವಿಚಿತ್ರವಾಗಿ ರಚಿಸಬೇಕು. ಅನೇಕ ಹೂಗಳ ಚಿತ್ರವನ್ನೂ ಬರೆಯಿಸಬೇಕು.

೫೧. ಉತ್ಸವಸಭಾಮಂದಿರವನ್ನು ಕೆಲವು ಕಡೆ ಕಲಶಾಕಾರವಾದ ರೇಖೆಗಳಿಂದ ಯುಕ್ತವಾಗಿಸುವಂತೆಯೂ, ಕೆಲವು ಕಡೆ ತಾವರೆ ಹೂಗಳಿಂದ ಅಲಂಕೃತವಾಗಿರುವಂತೆಯೂ ಮಾಡಿ, ಸಭಾಂಗಣವೆಲ್ಲಾ, ಸುಂದರವೂ, ಮನೋವಿನೋದಕರವೂ ಸೌಮ್ಯವೂ ಆಗುವಂತೆ ರಚಿಸಬೇಕು.

೫೨. ಆ ಸೂರ್ಯದೇವಾಲಯದ ಸುಂದರವಾದ ಸಭಾಮಂಟಪದ ಅಂಗಳವು, ಎಷ್ಟು ದಂಡ ಪ್ರಮಾಣವಿರುವುದೋ ಅಷ್ಟು ಯುಗಗಳವರೆಗೆ ಆ ಅಂಗಳವನ್ನು

ಕಾರಯೇಚ್ಚಿತ್ರಶಾಸ್ತ್ರಜ್ಞೈಶ್ಚಿತ್ರಕರ್ಮಾರ್ಕಮಂದಿರೇ ।
ವಿಚಿತ್ರಂ ಯಾನಮಾರುಹ್ಯ ಚಿತ್ರಭಾನೋರ್ಗೃಹಂ ವ್ರಜೇತ್ ॥ ೫೩ ॥

ಯಾವತ್ಸ ದೇವರೂಪಾಣಿ ಗ್ರಹರೂಪಾಣಿ ಲೇಖಯೇತ್ ।
ತಾವದ್ಯುಗಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೫೪ ॥

ಏವಂ ಭೂಮೌ ಸಮಂತಾಚ್ಚ ಯಃ ಕುರ್ಯಾದರ್ಕಮಂದಿರಂ ।
ಆರಾಮಾವಸಥಾದೀನಾಂ ಲಭೇದಾಮೂಲ್ಯಕಂ ಫಲಂ ॥ ೫೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೌರಧರ್ಮವರ್ಣನಂ ನಾಮ ದ್ವಿಷಷ್ಟ್ಯುತ್ತರ
ಶತತಮೋಽಧ್ಯಾಯಃ.

---

ನಿರ್ಮಿಸಿದ ಯಜಮಾನನು, ಸೂರ್ಯಲೋಕದಲ್ಲಿ ಎಲ್ಲರಿಂದಲೂ ಪೂಜೆ ಹೊಂದುತ್ತಾ ಪ್ರಕಾಶಿಸುವನು.

೫೩. ದೇವಾಲಯ ಕರ್ತೃವು ಚಿತ್ರಕಲೆಯಲ್ಲಿ ನಿಪುಣರಾದ ಶಿಲ್ಪಿಗಳಿಂದ ಸೂರ್ಯದೇವಾಲಯದಲ್ಲಿ ಚಿತ್ರಗಳನ್ನು ಸುಂದರವಾಗಿ ಬರೆಯಿಸಬೇಕು. ಹೀಗೆ ಮಾಡಿದರೆ ವಿಚಿತ್ರವಾದ ವಿಮಾನವನ್ನೇರಿಕೊಂಡು ಚಿತ್ರಭಾನುವಿನ ಲೋಕವನ್ನು ಸೇರುವನು.

೫೪. ಇವನು ಎಷ್ಟೆಷ್ಟು ದೇವತಾಕೃತಿಗಳನ್ನೂ, ಎಷ್ಟು ಗ್ರಹಗಳ ಆಕೃತಿಗಳನ್ನೂ ಬರೆಯಿಸುವನೋ, ಅಷ್ಟಷ್ಟು ಸಹಸ್ರ ಯುಗಪರ್ಯಂತ ಸ್ವರ್ಗಲೋಕದಲ್ಲಿ ಪೂಜಿತನಾಗುತ್ತಾನೆ.

೫೫. ಈ ರೀತಿ ಲೋಕದಲ್ಲಿ ಸೂರ್ಯದೇವಾಲಯವನ್ನು ನಿರ್ಮಿಸಿ ಅದರ ಸುತ್ತಲೂ ಉದ್ಯಾನ ಮಂಟಪ ಮೊದಲಾದುವುಗಳನ್ನು ನಿರ್ಮಿಸಿದ ಪುರುಷನು, ಬೆಲೆ ಕಟ್ಟಲು ಸಾಧ್ಯವಿಲ್ಲದಷ್ಟು ಪುಣ್ಯಫಲವನ್ನು ಹೊಂದುವನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೌರಧರ್ಮ ವರ್ಣನೆಯೆಂಬ ನೂರಅರವತ್ತೆರಡನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಭಾಸ್ಕರಸ್ಯ ಮಹಾಬಾಹೋ ಭಾನೋರಮಿತತೇಜಸಃ ।
ಸ್ನಾನಕಾಲೇ ಪ್ರಕುರ್ವೀತ ಜಯಶಬ್ದಾದಿಮಂಗಲಂ ॥ ೧ ॥

ಪದ್ಮಸ್ವಸ್ತಿಕಶಂಖಂ ತು ಶ್ರೀವತ್ಸಂ ದ್ವಿಜಸತ್ತಮ ।
ಹೇಮರೂಪಾದಿಪಾತ್ರೇಷು ಕಲ್ಪಿತಂ ಗೋಮಯಾದಿಭಿಃ ॥ ೨ ॥

ನಾನಾವರ್ಣಕಸಂಯುಕ್ತೈರಕ್ಷತೈಸ್ತಿಲತಂಡುಲೈಃ ।
ಸ್ವಚ್ಛೋದಕೈಃ ಸುಸಂಮಿಶ್ರೈರ್ಯಥಾಶೋಭಂ ಪ್ರಪೂರಿತೈಃ ॥ ೩ ॥

---

## ನೂರಅರವತ್ತಮೂರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಮುಂದುವರಿಸಿ ಹೇಳುವರಾಗಿ—ಎಲೈ ಮಹಾಬಾಹುವೇ! ಅಮಿತ ತೇಜಶ್ಶಾಲಿಯಾದ ಸೂರ್ಯನ ಸ್ನಾನಕಾಲದಲ್ಲಿ ಜಯಶಬ್ದ ಮೊದಲಾದ ಮಂಗಳ ಧ್ವನಿಯನ್ನು ಮಾಡುತ್ತಿರಬೇಕು.

ಅಯ್ಯಾ ದ್ವಿಜಶ್ರೇಷ್ಠನೇ! ಪದ್ಮ, ಸ್ವಸ್ತಿಕ, ಶಂಖ, ಶ್ರೀವತ್ಸ, ಈ ಆಕೃತಿಗಳಾಗಿ ಚಿನ್ನ ಬೆಳ್ಳಿ ಮುಂತಾದುದರಿಂದ ಮಾಡಿದ ಪಾತ್ರೆಗಳಲ್ಲಿ ಗೋಮಯವೇ ಮೊದಲಾದ ಪಂಚಗವ್ಯ ವಸ್ತುಗಳನ್ನು ಇರಿಸಿಕೊಳ್ಳಬೇಕು.

೩. ಬಣ್ಣಬಣ್ಣದ ತಿಲಾಕ್ಷತೆ, ಯವಾಕ್ಷತೆಗಳು, ಶುದ್ಧವಾದ ನೀರು, ಇವುಗಳನ್ನೆಲ್ಲಾ, ಕಾಂತಿಯುಕ್ತವಾಗುವಂತೆ ಬೆಳಗಿದ ಪಾತ್ರೆಗಳಲ್ಲಿಯೂ, ಕಲಶಗಳಲ್ಲಿಯೂ, ತುಂಬಿ ಇಟ್ಟುಕೊಳ್ಳಬೇಕು.

ದ್ರವ್ಯಪೀಠಪ್ರದೀಪೈಶ್ಚ ಭೂತಾಶ್ವತ್ಥಾದಿಪಲ್ಲವೈಃ ।
ಔಷಧೀಭಿಶ್ಚ ಮೇಧ್ಯಾಭಿಃ ಸರ್ವಬೀಜೈರ್ಯವಾದಿಭಿಃ ॥ ೪ ॥

ಷಷ್ಠಿ ಸಪ್ತಮ್ಯಾದಿ ದಿನೇಷ್ವನ್ಯೇಷು ಚ ವಿಶೇಷತಃ ।
ಶಂಖಭೇರ್ಯಾದಿಭಿಃ ಕುರ್ಯಾದ್ವಾದ್ಯಘೋಷಂ ಸುಶೋಭನಂ ॥ ೫ ॥

ತ್ರಿಸಂಧ್ಯಂ ವೇದನಿರ್ಘೋಷಂ ಕುರ್ವೀತ ಫಲಮುತ್ತಮಂ ।
ಕುರ್ಯಾನ್ನೀರಾಜನಂ ಚೈವ ಶಂಖವಾದಿತ್ರಮಂಗಲೈಃ ॥ ೬ ॥

ಯಾವನ್ನೀರಾಜನಂ ಕುರ್ಯಾತ್ಸರ್ವಂ ಚ ವಿಧಿವದ್ರವೇಃ ।
ತಾವದ್ಯುಗಸಹಸ್ರಾಣಿ ಸೂರಲೋಕೇ ಮಹೀಯತೇ ॥ ೭ ॥

ಕಪಿಲಾಪಂಚಗವ್ಯೇನ ಕುಶವಾರಿಯುತೇನ ವೈ ।
ಸ್ನಾಪಯೇನ್ಮಂತ್ರಪೂತೇನ ಬ್ರಹ್ಮಸ್ನಾನಂ ಹಿ ತತ್ಸ್ಮೃತಂ ॥ ೮ ॥

---

೪. ಮತ್ತು ತಾರೆ, ಅರಳಿ ಮೊದಲಾದ ವೃಕ್ಷಗಳ ಪಲ್ಲವಗಳು. ಪರಿಶುದ್ಧವಾದ ಓಷಧಿಗಳು ಯವವೇ ಮೊದಲಾದ ಸಕಲ ಧಾನ್ಯಗಳು, ಸಕಲ ಪೂಜಾದ್ರವ್ಯಗಳು, ಇವುಗಳನ್ನು ಸಿದ್ಧಮಾಡಿಡಬೇಕು. ದೀಪದ ಕಂಬಗಳಲ್ಲಿ ದೀಪ ಹತ್ತಿಸಿ ಅದನ್ನೂ ಪೂಜಾ ಸಾಮಗ್ರಿಗಳನ್ನೂ ಪೂಜಾಸ್ಥಳದಲ್ಲಿ ತಂದಿರಿಸಬೇಕು.

೫. ಷಷ್ಠೀ, ಸಪ್ತಮೀ ಮೊದಲಾದ ದಿನಗಳಲ್ಲಿಯೋ, ಅಥವಾ ತನಗೆ ಅನುಕೂಲವಾದ ಅನ್ಯದಿನಗಳಲ್ಲಿಯೋ, ಈ ಕಾರ್ಯ ನಡೆಯಿಸುವಾಗ ಶಂಖ, ಭೇರಿ ಮೊದಲಾದವುಗಳಿಂದ ಮಂಗಳವಾದ್ಯಘೋಷವನ್ನು ಮಾಡಿಸಬೇಕು.

೬. ಪ್ರಾತಃಕಾಲ ಮಧ್ಯಾಹ್ನಕಾಲ ಮತ್ತು ಸಾಯಂಕಾಲವೆಂಬ ಮೂರು ಸಂಧ್ಯಾಕಾಲಗಳಲ್ಲಿ ವೇದಘೋಷವನ್ನೂ ನಡೆಯಿಸಬೇಕು.

೭. ಶಂಖಧ್ವನಿಯೇ ಮೊದಲಾದ ಮಂಗಳವಾದ್ಯಗಳು ಮೊಳಗುತ್ತಿರಲು, ಎಷ್ಟು ಘಳಿಗೆಕಾಲ ಸೂರ್ಯನಿಗೆ ನಾನಾಪ್ರಕಾರದ ನೀರಾಜನವನ್ನು ವಿಧಿವತ್ತಾಗಿಮಾಡುವನೋ, ಅಷ್ಟು ಸಹಸ್ರಯುಗಗಳವರೆಗೆ ಸೂರ್ಯಲೋಕದಲ್ಲಿ ದೇವತೆಗಳಿಂದ ಪೂಜೆಯನ್ನು ಹೊಂದುತ್ತಾ ಶೋಭಿಸುವನು.

೮. ಮಂತ್ರಪೂತವೂ, ಕುಶೋದಕಯುಕ್ತವೂ ಆದ, ಕಪಿಲಾಗೋಮೂತ್ರಾದಿ ಪಂಚಗವ್ಯಸಾಮಗ್ರಿಗಳಿಂದ ಅಭಿಷೇಕಮಾಡಬೇಕು. ಇದನ್ನು ಬ್ರಹ್ಮಸ್ನಾನವೆಂದು ಹೇಳುವರು.

ಯಸ್ತ್ವೇಕಮಪಿ ಸರ್ವೇಬ್ದೇ ಬ್ರಹ್ಮಸ್ನಾನಂ ಪ್ರಯಚ್ಛತಿ ।
ಸ ಮುಕ್ತಃ ಸರ್ವಪಾಪೈಸ್ತು ಸೂರ್ಯಲೋಕೇ ಮಹೀಯತೇ ॥ ೯ ॥

ಕಪಿಲಾಪಂಚಗವ್ಯೇನ ದಧಿಕ್ಷೀರಯುತೇನ ಚ ।
ಸ್ನಾನಂ ದಶಗುಣಂ ಜ್ಞೇಯಂ ಮಹತ್ಪುಣ್ಯಂ ನರಾಧಿಪ ॥ ೧೦ ॥

ಋಭವೋ ವೀರಮುದ್ದಿಶ್ಯ ದೇಹಶುದ್ಧಿಂ ಚ ಶಾಶ್ವತೀಂ ।
ಕಪಿಲಾಮಾಹರೇನ್ನಿತ್ಯಂ ಮುನಿದೇವಾಂಶನಿರ್ಮಿತಾಂ ॥ ೧೧ ॥

ಕಾಪಿಲಂ ಯಃ ಪಿಬೇಚ್ಛೂದ್ರೋ ದೇವಕಾರ್ಯಾರ್ಥನಿರ್ಮಿತಂ ।
ಸ ಪಚ್ಯತೇ ಮಹಾಘೋರೇ ಸುಚಿರಂ ನರಕಾರ್ಣವೇ ॥ ೧೨ ॥

ವರ್ಷಕೋಟಿಸಹಸ್ರೇಣ ಯತ್ಪಾಪಂ ಸಮುಪಾರ್ಜಿತಂ ।
ಘೃತಾಭ್ಯಂಗೇನ ಸೂರ್ಯಸ್ಯ ದಹೇತ್ಸರ್ವಂ ನ ಸಂಶಯಃ ॥ ೧೩ ॥

---

೯. ವರ್ಷದ ಯಾವಕಾಲದಲ್ಲಿಯಾದರೂ ಸರಿ, ಅಂತು ವರ್ಷಕ್ಕೆ ಒಂದುಸಲವಾದರೂ, ಸ್ವಾಮಿಗೆ ಈ ಬ್ರಹ್ಮಸ್ನಾನವನ್ನು ಮಾಡಿಸುವವನು, ಸಕಲಪಾಪಗಳಿಂದಲೂ ಮುಕ್ತನಾಗಿ ಸೂರ್ಯಲೋಕದಲ್ಲಿ ಪೂಜ್ಯನಾಗುತ್ತಾನೆ

೧೦. ಅಯ್ಯಾ ನರಾಧಿಪನೇ! ಕಪಿಲವರ್ಣದ ಗೋವಿನ ಪಂಚಗವ್ಯಕ್ಕೆ ಇತರ ಗೋವುಗಳ ಮೊಸರು, ಹಾಲು, ಇವನ್ನೂ ಬೆರಸಿ ಸ್ನಾನಮಾಡಿಸುವುದು ವಿಶೇಷ ಪುಣ್ಯಕರ. ಹೀಗೆ ಮಾಡಿದರೆ ಸಾಮಾನ್ಯ ಸ್ನಾನಮಾಡಿಸುವುದರ ಹತ್ತರಷ್ಟು ಪುಣ್ಯ ಬರುತ್ತದೆಂದು ತಿಳಿಯಬೇಕು.

೧೧. ಸೂರ್ಯಪ್ರತಿಮೆಗೆ ಶಾಶ್ವತವಾಗಿ ಪಾರಿಶುಧ್ಯತೆಯಾಗಬೇಕಾದರೆ ಮುನಿಗಳು, ದೇವತೆಗಳು ಮುಂತಾದವರ ಅಂಶದಿಂದ ನಿರ್ಮಿತವಾದ ಕಪಿಲಾಹಸುವಿನ ಪಂಚಗವ್ಯವನ್ನೇ ಬೇಕಾದ ದಿವಸವೆಲ್ಲಾ ತರಬೇಕು.

೧೨. ದೇವಕಾರ್ಯಕ್ಕಾಗಿಯೇ ನಿರ್ಮಾಣವಾಗಿರುವ ಕಪಿಲಾಹಸುವಿನ ಹಾಲು ಮುಂತಾದುವನ್ನು ಶೂದ್ರನು ಪಾನಮಾಡಿದರೆ ಮಹಾಭಯಂಕರವಾದ ನರಕಸಮುದ್ರದಲ್ಲಿ ಮುಳುಗಿ ಬಹುಕಾಲದವರೆಗೆ ನರಳುತ್ತಾನೆ.

೧೩. ಸೂರ್ಯನಿಗೆ ಘೃತಾಭ್ಯಂಗಮಾಡಿಸಿದರೆ ಆ ಮನುಷ್ಯನಿಗೆ ಸಾವಿರಕೋಟಿ ವರ್ಷಗಳಿಂದ ಸಂಚಿತವಾಗಿ ಬಂದ ಪಾಪಗಳೆಲ್ಲವೂ ದಹಿಸಿಹೋಗುತ್ತವೆ. ಇದರಲ್ಲಿ ಸಂಶಯವಿಲ್ಲ.

ಕಲ್ಪಕೋಟಿಸಹಸ್ರೈಸ್ತು ಯತ್ಪಾಪಂ ಸಮುಪಾರ್ಜಿತಂ ।
ವಜ್ರಸ್ನಾನೇನ ತತ್ಸರ್ವಂ ದಹತ್ಯಗ್ನಿರಿವೇಂಧನಂ ॥ ೧೪ ॥

ಸಪ್ತಮ್ಯಾಂ ಚ ಕೃತಸ್ನಾನೋ ಯಜೇತ್ಸೂರ್ಯಂ ಸಕೃನ್ನರಃ ।
ಕುಲಾನ್ಯುದ್ಧೃತ್ಯ ಸಪ್ತೇಹ ಸೂರ್ಯಲೋಕೇ ಮಹೀಯತೇ ।
ವಸುಹೇಮಾದಿಯುಕ್ತಂ ಚ ಕ್ಷೀರಸ್ನಾನಸ್ಯ ತತ್ಸಮಂ ॥ ೧೫ ॥

ಸಕೃದಾಢಕೇನ ಪಯಸಾ ಯೋ ಭಾನುಂ ಸ್ನಾಪಯೇನ್ನರಃ ।
ರಾಜತೇನ ವಿಮಾನೇನ ಸೋಽರ್ಕಲೋಕೇ ಮಹೀಯತೇ ॥ ೧೬ ॥

ಸ್ನಾಪ್ಯ ದಧ್ನಾ ಸಕೃದ್ಭಾನುಂ ಸತ್ರಿಲೋಕೇ ಮಹೀಯತೇ ।
ಮಧುನಾ ಸ್ನಾಪಯಿತ್ವಾ ತಂ ಶುಕ್ರಲೋಕೇ ಮಹೀಯತೇ ॥ ೧೭ ॥

---

೧೪. ಸೂರ್ಯನಿಗೆ ಮಾಡಿಸಿದ ಘೃತಸ್ನಾನವು, ಮನುಷ್ಯನಿಗೆ ಸಹಸ್ರಕೋಟಿ ಕಲ್ಪಗಳಿಂದ ಅನುಸರಿಸಿ ಬಂದ ಪಾಪವೆಲ್ಲವನ್ನೂ, ಅಗ್ನಿಯು ಸವುದೆಯನ್ನು ಉರಿಸಿ ನಾಶಮಾಡುವಂತೆ ಸುಟ್ಟುಬಿಡುವುದು.

೧೫. ಸಪ್ತಮಿಯದಿನ ಸ್ನಾನಮಾಡಿ ಒಂದಾವೃತ್ತಿ ಸೂರ್ಯಾರ್ಚನೆ ಮಾಡಿದವನು, ಏಳುತಲೆಮಾರುಗಳವರೆಗಿನ ತನ್ನ ಸಂಬಂಧಿಗಳನ್ನು ಈ ಲೋಕದಲ್ಲಿ ಉದ್ಧಾರಮಾಡಿ, ಅವರನ್ನೂ ಸೂರ್ಯಲೋಕಕ್ಕೆ ಒಯ್ದು, ತಾನೂ ಅವರೊಡನೆ ಸೂರ್ಯನ ಜೊತೆಯಲ್ಲಿಯೇ ಪೂಜಿತನಾಗುತ್ತಾನೆ.

೧೬. ರತ್ನದಿಂದ ಕೂಡಿದ ಉದಕಸ್ನಾನವೂ, ಸುವರ್ಣೋದಕಸ್ನಾನವೂ, ಕ್ಷೀರಾಭಿಷೇಕಕ್ಕೆ ಸಮನಾಗಿ ಫಲಕೊಡುವುದು. ಯಾವನು ಒಂದು ಕೊಳಗ ಹಾಲನ್ನು ಒಂದೇಸಲ ಸ್ನಾನಮಾಡಿಸುವನೋ, ಅವನು ಬೆಳ್ಳಿಯ ವಿಮಾನವನ್ನೇರಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ದೇವತೆಗಳಿಂದ ಪೂಜಿತನಾಗುತ್ತಾನೆ.

೧೭. ಒಂದು ಕೊಳಗ ಮೊಸರಿನಿಂದ ಒಂದೇಸಲ ಸೂರ್ಯನಿಗೆ ಅಭಿಷೇಕಮಾಡಿಸಿದವನು ಯಜ್ಞಕರ್ತರು ವಾಸಿಸುವಲೋಕದಲ್ಲಿ ಪೂಜ್ಯನಾಗುತ್ತಾನೆ. ಹೀಗೆಯೇ ಜೇನುತುಪ್ಪದಿಂದ ಸ್ನಾನಮಾಡಿಸಿದವನು ಶುಕ್ರಲೋಕದಲ್ಲಿ ಪೂಜಿತನಾಗುತ್ತಾನೆ.

ಉದ್ವರ್ತ್ಯ ಶಾಲಿಪಿಷ್ಟೇನ ವಾಯುಲೋಕೇಷು ಪೂಜ್ಯತೇ ।
ಸ್ನಾನಮಿಕ್ಷುರಸೇನೇಹ ಯಃ ಸೂರ್ಯೇ ಸಕೃದಾಚರೇತ್ ॥
ಸ ಗೋಪತಿಪುರಂ ಗಚ್ಛೇತ್ಸರ್ವಕಾಮಸಮನ್ವಿತಃ ॥ ೧೮ ॥

ಫಲೋದಕೇನ ಯೋ ಭಾನುಂ ಸಕೃತ್ಸ್ನಾಪಯತೇ ನರಃ ।
ಉತ್ಸೃಜ್ಯ ಪಾಪಕಲಿಲಂ ಪಿತೃಲೋಕೇ ಮಹೀಯತೇ ॥ ೧೯ ॥

ಶ್ರೀಖಂಡವಾರಿಣಾ ಸ್ನಾಪ್ಯ ಸಕೃದ್ಭಾನುಂ ನರಾಧಿಪ ।
ಚಂದ್ರಾಂಶುನಿರ್ಮಲಃ ಶ್ರೀಮಾಂಶ್ಚರೇದಾತ್ರೇಯಮಂದಿರೇ ॥ ೨೦ ॥

ವಸ್ತ್ರಪೂತೇನ ತೋಯೇನ ಯದ್ಯರ್ಕಂ ಸ್ನಪಯೇತ್ಸಕೃತ್ ।
ಸ ಸರ್ವಕಾಮತೃಪ್ತಾತ್ಮಾ ರಾಕಾಧಿಪಪುರಂ ವ್ರಜೇತ್ ॥ ೨೧ ॥

---

೧೮. ಸೂರ್ಯಪ್ರತಿಮೆಯನ್ನು ಅಕ್ಕಿಯಹಿಟ್ಟಿನಿಂದ ಉಜ್ಜಿ ತೊಳೆದವನು, ವಾಯುಲೋಕದಲ್ಲಿ ಪೂಜಿತನಾಗುತ್ತಾನೆ. ಕಬ್ಬಿನಹಾಲಿನಿಂದ ಸೂರ್ಯನಿಗೆ ಒಂದು ಸಲವಾದರೂ ಸ್ನಾನಮಾಡಿಸಿದವನು, ತನ್ನ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದಿ, ಕಿರಣಾಧಿಪನಾದ ಸೂರ್ಯನ ಪಟ್ಟಣಕ್ಕೆ ಹೋಗಿ ಅಲ್ಲಿ ಸನ್ಮಾನಹೊಂದಿ ಪ್ರಕಾಶಿಸುವನು.

೧೯. ಫಲೋದಕದಿಂದ ಸೂರ್ಯನಿಗೆ ಸ್ನಾನಮಾಡಿಸುವ ಮನುಷ್ಯನು, ತನಗೆ ಸಂಭವಿಸಿದ್ದ ಪಾಪವನ್ನು ಕಳೆದುಕೊಂಡು ಪಿತೃಲೋಕದಲ್ಲಿ ಪೂಜಿತನಾಗುತ್ತಾನೆ.

೨೦. ಎಲೈ ರಾಜನೇ ! ಒಂದಾವರ್ತಿ ಶ್ರೀಗಂಧೋದಕದಿಂದ ಸೂರ್ಯನಿಗೆ ಸ್ನಾನಮಾಡಿಸಿದರೆ, ಅವನು ಚಂದ್ರಕಿರಣದಂತೆ ನಿರ್ಮಲನೂ, ಶ್ರೀಮಂತನೂ ಆಗಿ (ಆತ್ರೇಯಗೃಹ) ಚಂದ್ರಲೋಕದಲ್ಲಿ ಚರಿಸುವನು.

೨೧. ನೀರನ್ನು ಬಟ್ಟೆಯಿಂದ ಶೋಧಿಸಿ ಅದರಿಂದ ಒಂದುಸಲ ಸೂರ್ಯನಿಗೆ ಅಭಿಷೇಕಮಾಡಿದವನು, ತನ್ನ ಸಕಲೇಷ್ಟಾರ್ಥಗಳನ್ನೂ ಪಡೆದು ಮನಸ್ತೃಪ್ತಿ ಹೊಂದಿ ಚಂದ್ರನ ಪಟ್ಟಣದಲ್ಲಿ ವಾಸಮಾಡುವನು.

ಆಪೋಹಿಷ್ಠೇತಿ ಜಪ್ಯೇನ ಗಂಗಾತೋಯೇನ ಭಾರತ ।
ಗೈರಿಕೇಣ ವಿಮಾನೇನ ಬ್ರಹ್ಮಲೋಕೇ ಮಹೀಯತೇ ॥ ೨೨ ॥

ಕರ್ಪೂರಾಗುರುತೋಯೇನ ಯೋಽರ್ಕಂ ಸ್ನಾಪಯತೇ ಸಕೃತ್ ।
ಸ್ನಾಪ್ಯ ಭಾನುಂ ಸಕೃನ್ಮಂತ್ರೈಃ ಸಪ್ತಮ್ಯಾಂ ಸಮುಪೋಷಿತಃ ॥
ಉತ್ತಾರ್ಯ ಸ ಕುಲಾನ್ಯೇಕವಿಂಶತಿಂ ರವಿಮಾವ್ರಜೇತ್ ॥ ೨೩ ॥

ಪಿತೄನುದ್ದಿಶ್ಯ ಯೋ ಭಾನುಂ ಸ್ನಪಯೇಚ್ಛೀತವಾರಿಣಾ ।
ತೃಪ್ತಾಃ ಸ್ವರ್ಗಂ ವ್ರಜಂತ್ಯಾಶು ಪಿತರೋ ನರಕಾದಪಿ ॥ ೨೪ ॥

ಭಾನುಂ ಶೀತಾಂಬುನಾ ಸ್ನಾಪ್ಯ ಧಾರೋಷ್ಣಪಯಸಾ ಸಹ ।
ಸ್ನಾಪ್ಯ ಪಶ್ಚಾದ್ವ್ರತೇನೇಶಮಗ್ನಿಲೋಕೇ ಮಹೀಯತೇ ॥ ೨೫ ॥

---

೨೨. "ಆಪೋಹಿಷ್ಠಾ" ಎಂಬ ಮಂತ್ರಪೂರ್ವಕವಾಗಿ ಗಂಗಾಜಲದಿಂದ ಸೂರ್ಯನಿಗೆ ಅಭಿಷೇಕಮಾಡುವವನು, ಗೈರಿಕವರ್ಣಶೋಭಿತವಾದ ವಿಮಾನದಲ್ಲಿ ಕುಳಿತು ಬ್ರಹ್ಮಲೋಕಕ್ಕೆ ತೆರಳಿ, ಅಲ್ಲಿ ಎಲ್ಲರಿಂದಲೂ ಪೂಜಿತನಾಗುತ್ತಾನೆ.

೨೩. ಕರ್ಪೂರ, ಅಗುರು ಇವುಗಳನ್ನು ಮಿಶ್ರಮಾಡಿದ ಜಲದಿಂದ ಸೂರ್ಯನಿಗೆ ಮಂತ್ರಪೂರ್ವಕವಾಗಿ ಒಂದುಸಲ ಸಪ್ತಮಿತಿಥಿಯಲ್ಲಿ ಸ್ನಾನಮಾಡಿಸಿ, ತಾನೂ ಉಪವಾಸಮಾಡಿದರೆ ತನ್ನ ಇಪ್ಪತ್ತೊಂದು ಕುಲಗಳನ್ನೂ ನರಕದಿಂದ ಉದ್ಧಾರ ಮಾಡಿಸಿ, ಕೊನೆಗೆ ಸೂರ್ಯಲೋಕವನ್ನು ಸೇರುವನು.

೨೪. ಪಿತೃಗಳಿಗೆ ಪುಣ್ಯಲೋಕ ಪ್ರಾಪ್ತಿಯನ್ನುದ್ದೇಶಿಸಿ, ಯಾವನು ಶೀತೋದಕದಿಂದ ಸೂರ್ಯನಿಗೆ ಸ್ನಾನಮಾಡಿಸುತ್ತಾನೋ, ಅವನ ಪಿತೃಗಳು ತೃಪ್ತರಾಗಿ ನರಕದಿಂದ ಪಾರಾಗಿ ಸ್ವರ್ಗಕ್ಕೆ ತೆರಳುವರು.

೨೫. ಆಗತಾನೇ ಹಾಲು ಕರೆದು ಸ್ವಲ್ಪಬಿಸಿಯಾಗಿರುವ ನೊರೆಹಾಲನ್ನು ಸೂರ್ಯನಿಗೆ ಮೊದಲು ಅಭಿಷೇಕಮಾಡಿ, ಅನಂತರ ತಣ್ಣೀರಿನಿಂದ ಯಾರು ಸ್ನಾನಮಾಡಿಸುವರೋ, ಅವರು ಸರ್ವಸಮರ್ಥನಾದ ಸೂರ್ಯದೇವನ ಅನುಗ್ರಹದಿಂದ ಅಗ್ನಿಲೋಕವನ್ನು ಸೇರಿ ಅಲ್ಲಿ ಪೂಜಿತರಾಗುವರು.

**ಏತತ್ಸ್ನಾನತ್ರಯಂ ಕೃತ್ವಾ ಪೂಜಯಿತ್ವಾ ತು ಭಾರತ ।**
**ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥ ೨೬ ॥**

**ಮೃತ್ಕುಂಭಾತ್ತಾಮ್ರಕುಂಭೈಸ್ತು ಸ್ನಾನಂ ಶತಗುಣಂ ಭವೇತ್ ।**
**ರೌಪ್ಯೈಃ ಪಾದೋತ್ತರಂ ಪುಣ್ಯಂ ದರ್ಶನಾತ್ಸ್ಪರ್ಶನಂ ಪರಂ ॥**
**ಸ್ಪರ್ಶನಾದರ್ಚನಂ ಶ್ರೇಷ್ಠಂ ಘೃತಸ್ನಾನಮತಃಪರಂ ॥ ೨೭ ॥**

**ಇಹಾಮುತ್ರ ಕೃತಂ ಪಾಪಂ ಘೃತಸ್ನಾನೇನ ನಶ್ಯತಿ ।**
**ಸಪ್ತಜನ್ಮಕೃತಂ ಪಾಪಂ ಪುರಾಣಶ್ರವಣೇನ ತು ॥ ೨೮ ॥**

**ದಶಾಪರಾಧಾಂಸ್ತೋಯೇನ ಕ್ಷೀರೇಣ ತು ಶತಂ ಕ್ಷಮೇತ್ ।**
**ಸಹಸ್ರಂ ಕ್ಷಮತೇ ದಧ್ನಾ ಘೃತೇನಾಪ್ಯಯುತಂ ಕ್ಷಮೇತ್ ॥ ೨೯ ॥**

---

೨೬. ಎಲೈ ಭರತವಂಶಸಂಭೂತನೇ! ಈ ಹಿಂದೆ ಹೇಳಿದ ಮೂರುಬಗೆಯ ಸ್ನಾನಗಳನ್ನು ಮಾಡಿಸಿ ಪೂಜೆಮಾಡಿದ ಮನುಷ್ಯನು ಸಾವಿರ ಅಶ್ವಮೇಧಯಾಗಗಳ ಫಲವನ್ನು ಹೊಂದುತ್ತಾನೆ.

೨೭. ಮಣ್ಣಿನ ಗಡಿಗೆಗಳಲ್ಲಿ ನೀರುತಂದು ಅಭಿಷೇಕ ಮಾಡಿಸುವುದರಿಂದುಂಟಾಗುವ ಪುಣ್ಯಕ್ಕಿಂತ, ತಾಮ್ರದ ಕೊಡಗಳಿಂದ ನೀರು ತಂದು ಅದರಿಂದ ಸೂರ್ಯದೇವನಿಗೆ ಸ್ನಾನಮಾಡಿಸುವುದರಿಂದ ಉಂಟಾಗುವ ಪುಣ್ಯವು ನೂರುಭಾಗ ಹೆಚ್ಚುವುದು. ಬೆಳ್ಳಿಯಕೊಡದ ನೀರಿನಿಂದ ಸ್ನಾನಮಾಡಿಸಿದರೆ ತಾಮ್ರಕಲಶೋದಕ ಸ್ನಾನಮಾಡಿಸಿದುದಕ್ಕಿಂತಲೂ ಒಂದೂಕಾಲು ಭಾಗ ಹೆಚ್ಚುಫಲ ಕೊಡುವುದು. ದೇವರನ್ನು ಸುಮ್ಮನೇ ಸ್ಪರ್ಶಮಾಡಿ ಧ್ಯಾನಮಾಡುವುದಕ್ಕಿಂತಲೂ ಕ್ರಮವಾಗಿ ಪೂಜೆಯನ್ನು ಮಾಡಿದರೆ ಇನ್ನೂ ಶ್ರೇಷ್ಠ. ಇದಕ್ಕಿಂತ ಘೃತಸ್ನಾನವನ್ನು ಮಾಡಿಸಿದರೆ ಇನ್ನೂ ಉತ್ಕೃಷ್ಟಫಲವಾಗುವುದು.

೨೮. ಸೂರ್ಯದೇವನಿಗೆ ಘೃತಸ್ನಾನ ಮಾಡಿಸುವುದರಿಂದ ಇಹಲೋಕದಲ್ಲಿ ಮಾಡಿದ ಪಾಪಗಳೆಲ್ಲವೂ ನಾಶವಾಗುವುದಲ್ಲದೆ, ಪರಲೋಕದಲ್ಲಿ ಸಂಭವಿಸಿದ್ದರೆ ಅದೂ ನಾಶವಾಗುವುದು. ಸೂರ್ಯಸಂಬಂಧವಾದ ಪುರಾಣಶ್ರವಣದಿಂದ ಏಳುಜನ್ಮಗಳಲ್ಲಿ ಮಾಡಿದ್ದ ಪಾಪಗಳೆಲ್ಲವೂ ನಾಶವಾಗುವುವು.

೨೯. ಸೂರ್ಯನಿಗೆ ಕೇವಲ ಶುದ್ಧೋದಕದಿಂದ ಅಭಿಷೇಕಮಾಡಿದರೆ ಅವರ ಹತ್ತು ಅಪರಾಧಗಳನ್ನು ಕ್ಷಮಿಸುವನು. ಕ್ಷೀರಾಭಿಷೇಕಮಾಡಿದುದರಿಂದ ನೂರು

ನೈರಂತರ್ಯೇಣ ಯೋ ಮಾಸಂ ಘೃತಸ್ನಾನಂ ಸಮಾಚರೇತ್ ।
ಏಕವಿಂಶತಿಕುಲಾನೀಹ ನಯೇತ್ಸೂರ್ಯಸ್ಯ ಮಂದಿರಂ ॥ ೩೦ ॥

ಸ್ನಾನಂ ಫಲಶತಂ ಜ್ಞೇಯಮಭ್ಯಂಗಃ ಪಂಚವಿಂಶತಿಃ ।
ಫಲಾನಾಂ ದ್ವಿಸಹಸ್ರೇಣ ಮಹಾಸ್ನಾನಮಿತಿ ಶ್ರುತಿಃ ॥ ೩೧ ॥

ಘೃತಾಭ್ಯಂಗಂ ಘೃತಸ್ನಾನಂ ಭಾನೋಃ ಕುರ್ಯಾದ್ದ್ವಿಜೋತ್ತಮ ।
ಯಶ್ಚ ಗೋಧೂಮಚೂರ್ಣೈಸ್ತು ಕಷಾಯೈರ್ದರ್ಭಸಂಮಿತೈಃ ॥ ೩೨ ॥

ದಶಧೇನುಸಹಸ್ರಾಣಿ ಯದ್ದತ್ವಾ ಲಭತೇ ಫಲಂ ।
ತತ್ಫಲಂ ಲಭತೇ ಸರ್ವಮರ್ಕಸ್ಯೋದ್ವರ್ತನೇ ಕೃತೇ ॥ ೩೩ ॥

---

ತಪ್ಪುಗಳನ್ನು ಕ್ಷಮಿಸುವನು. ಮೊಸರಿನಿಂದ ಅಭಿಷೇಕಮಾಡಿದರೆ ಸಹಸ್ರಅಪರಾಧಗಳನ್ನೂ ಘೃತಸ್ನಾನದಿಂದ ಹತ್ತುಸಹಸ್ರ ತಪ್ಪುಗಳನ್ನೂ ಕ್ಷಮಿಸುವನು.

೩೦. ಒಂದು ತಿಂಗಳಕಾಲ ಯಾವನು ಭಾನುವಿಗೆ ಎಡಬಿಡದೆ ಘೃತಸ್ನಾನ ಮಾಡಿಸುವನೋ ಅವನು ಇಪ್ಪತ್ತೊಂದುತಲೆಮಾರಿನವರನ್ನು ಸೂರ್ಯಲೋಕಕ್ಕೆ ಸೇರಿಸುವನು.

೩೧. ಸೂರ್ಯನಿಗೆ ಸ್ನಾನಮಾಡಿಸುವುದರಿಂದ ಒಂದುನೂರು ಫಲಗಳುಂಟಾದರೆ ಅಭ್ಯಂಗಮಾಡಿಸುವುದರಿಂದ ಇಪ್ಪತ್ತೈದುನೂರು ಫಲಗಳುಂಟಾಗುವುವು. ಮಹಾಸ್ನಾನಮಾಡಿಸುವುದರಿಂದ ಎರಡುಸಾವಿರ ನೂರುಗಳಷ್ಟು ಫಲಗಳು ಲಭಿಸುವುದೆಂದು ಶ್ರುತಿಯಲ್ಲಿ ಹೇಳಿದೆ.

೩೨. ಎಲೈದ್ವಿಜೋತ್ತಮನೇ! ಘೃತಾಭ್ಯಂಗಘೃತಸ್ನಾನಗಳನ್ನು ಮಾಡಿಸುವಾಗ, ಗೋಧಿಯರವೆಯಿಂದಲೂ, ದರ್ಭೆಯಿಂದ ಕೂಡಿದ ಕಷಾಯರಸಗಳಿಂದಲೂ ಸಮೇತ ಸೂರ್ಯದೇವನಿಗೆ ಅಭಿಷೇಕಮಾಡಿಸಬೇಕು.

೩೩. ಅವುಗಳಿಂದ ಸೂರ್ಯಪ್ರತಿಮೆಯ ದೇಹವನ್ನು ಉದ್ವರ್ತನಮಾಡಿದರೆಹತ್ತು ಸಾವಿರ ಗೋವುಗಳದಾನದಿಂದ ಬರುವಷ್ಟು ಫಲವು ಸಮಗ್ರವಾಗಿ ಉಂಟಾಗುವುದು.

**ಅರ್ಘ್ಯಂ ಪುಷ್ಪಫಲೋಪೇತಂ ಯಸ್ತ್ವರ್ಕಾಯ ನಿವೇದಯೇತ್ ।**
**ಸ ಪೂಜ್ಯಃ ಸರ್ವಲೋಕೇಷು ಅರ್ಕವನ್ಮೋದತೇ ದಿವಿ ॥ ೩೪ ॥**

**ಗಂಧತೋಯೇನ ಸಂಮಿಶ್ರಮುದಕಾದ್ದ್ವಾದಶೋತ್ತರಂ ।**
**ಪಂಚಗವ್ಯಸಮಾಯುಕ್ತಮರ್ಘ್ಯಂ ಶತಗುಣಂ ನೃಪ ॥ ೩೫ ॥**

**ಯೋಷ್ಟಾಂಗಗರ್ಭಮಾಪೂರ್ಯ ಭಾನೋರ್ಮೂರ್ಧ್ನಿ ನಿವೇದಯೇತ್ ।**
**ದಶವರ್ಷಸಹಸ್ರಾಣಿ ರಮತೇ ಚಾರ್ಕಮಂದಿರೇ ॥ ೩೬ ॥**

**ಆಪಃ ಕ್ಷೀರಂ ಕುಶಾಗ್ರಾಣಿ ಘೃತಂ ದಧಿ ತಥಾ ಮಧು ।**
**ರಕ್ತಾನಿ ಕರವೀರಾಣಿ ತಥಾ ರಕ್ತಂ ಚ ಚಂದನಂ ॥ ೩೭ ॥**

**ಅಷ್ಟಾಂಗ ಏಷ ಅರ್ಘ್ಯೋ ವೈ ಬ್ರಹ್ಮಣಾ ಪರಿಕೀರ್ತಿತಂ ।**
**ಸತತಂ ಪ್ರೀತಿಜನನೋ ಭಾಸ್ಕರಸ್ಯ ನರಾಧಿಪ ॥ ೩೮ ॥**

---

೩೪. ಪುಷ್ಪ ಫಲ ಇವು ಸಮೇತವಾಗಿ ಅರ್ಘ್ಯವನ್ನು ಸೂರ್ಯನಿಗೆ ಸಮರ್ಪಿಸುವವನು, ಸರ್ವಲೋಕಗಳಲ್ಲೂ ಪೂಜ್ಯನಾಗಿ ಅಂತರಿಕ್ಷದಲ್ಲಿರುವ ಸೂರ್ಯನಂತೆ ಸ್ವರ್ಗದಲ್ಲಿ ಸಂತೋಷಪಡುವನು.

೩೫. ಅಯ್ಯಾ ಪ್ರಭುವೇ! ಕೇಳು; ಗಂಧೋದಕಮಿಶ್ರವಾದ ಅರ್ಘ್ಯವು ಕೇವಲ ನೀರಿನಿಂದ ಕೊಡುವ ಅರ್ಘ್ಯಕ್ಕಿಂತ ಹನ್ನೆರಡುಪಾಲು ಶ್ರೇಷ್ಠವಾದುದು. ಪಂಚಗವ್ಯಮಿಶ್ರವಾದ ಅರ್ಘ್ಯವು ನೂರುಪಾಲು ಶ್ರೇಷ್ಠವಾದುದೆಂದು ತಿಳಿಯಬೇಕು.

೩೬. ಯಾವನು ಯಥೋಕ್ತವಾದ ಎಂಟುಪದಾರ್ಥಗಳನ್ನು ಕೂಡಿಸಿದ ಕಲಶ ಜಲದಿಂದ ಅರ್ಘ್ಯವನ್ನು ಸೂರ್ಯನ ತಲೆಯಮೇಲೆ ನಿವೇದಿಸುವನೋ, ಅವನು ಹತ್ತು ಸಾವಿರ ವರ್ಷಗಳವರೆಗೆ ಸೂರ್ಯಲೋಕದಲ್ಲಿ ವಿಹರಿಸುತ್ತಾ ಆನಂದಪಡುತ್ತಾನೆ.

೩೭-೩೮. ಜಲ, ಕ್ಷೀರ, ಕುಶಾಗ್ರಗಳು, ತುಪ್ಪ, ಮೊಸರು, ಮತ್ತು ಜೇನು ತುಪ್ಪ, ಕೆಂಪುಕಣಿಗಲೆ ಹೂಗಳು, ರಕ್ತಚಂದನ ಈ ಎಂಟುವಸ್ತುಗಳೂ ಸೇರಿದರೆ ಅಷ್ಟಾಂಗ ಅರ್ಘ್ಯವೆಂದು ಬ್ರಹ್ಮನೇ ಹೇಳಿದಾನೆ. ಎಲೈ ರಾಜನೇ! ಕೇಳು; ಈ ಅರ್ಘ್ಯವು ಸೂರ್ಯನಿಗೆ ಸದಾ ಪ್ರೀತಿಕರವಾದುದು.

ಧಾತುರ್ವೈಣವಪಾತ್ರೇಣ ದತ್ತೇsರ್ಘ್ಯೇ ಯತ್ಫಲಂ ಭವೇತ್ ।
ತಸ್ಮಾಚ್ಛತಗುಣಂ ಪುಣ್ಯಂ ಮೃತ್ಪಾತ್ರೇಣ ನರಾಧಿಪ ॥ ೩೯ ॥

ತಾಮ್ರಾರ್ಘ್ಯಪಾತ್ರದಾನೇನ ಪುಣ್ಯಂ ಶತಗುಣಂ ಮತಂ ।
ಪಾಲಾಶಪದ್ಮಪತ್ರಾಭ್ಯಾಂ ತಾಮ್ರಪಾತ್ರೇ ಫಲಂ ಲಭೇತ್ ॥ ೪೦ ॥

ರೌಪ್ಯಪಾತ್ರೇಣ ವಿಜ್ಞೇಯಂ ಲಕ್ಷಾರ್ಘ್ಯಂ ನಾತ್ರ ಸಂಶಯಃ ।
ಸುವರ್ಣಪಾತ್ರೇ ವಿನ್ಯಸ್ತಮರ್ಘ್ಯಂ ಕೋಟಿಗುಣಂ ಭವೇತ್ ॥ ೪೧ ॥

ಏವಂ ಸ್ನಾನಾರ್ಘ್ಯನೈವೇದ್ಯಬಲಿಧೂಪಾದಿಷು ಕ್ರಮಾತ್ ।
ಪಾತ್ರಾಂತರವಿಶೇಷೇಣ ತತ್ಫಲಂ ತೂತ್ತರೋತ್ತರಂ ॥ ೪೨ ॥

ತಾಮ್ರಪಾತ್ರಪ್ರದಾನೇನ ಯತ್ಪುಣ್ಯಂ ವೇದಪಾರಗೇ ।
ರೌಪ್ಯಪಾತ್ರಪ್ರದಾನೇನ ತಸ್ಮಾಚ್ಛತಗುಣಂ ರವೌ ॥ ೪೩ ॥

---

೩೯. ಸೂರ್ಯನಿಗೆ ಬಿದಿರಿನ ಪಾತ್ರೆಯಿಂದ ಅರ್ಘ್ಯಕೊಡುವುದಕ್ಕಿಂತ ಮಣ್ಣಿನ ಪಾತ್ರೆಯಿಂದ ಅರ್ಘ್ಯಕೊಡುವುದು ನೂರರಷ್ಟು ಅಧಿಕ ಫಲದಾಯಕವೆಂದು ತಿಳಿಯಬೇಕು.

೪೦. ಮಣ್ಣಿನಪಾತ್ರೆಗಿಂತ ತಾಮ್ರದಪಾತ್ರೆಯಲ್ಲಿ ಅರ್ಘ್ಯಕೊಟ್ಟರೆ, ಅದರ ನೂರರಷ್ಟು ಫಲವುಂಟು, ಮುತ್ತುಗದೆಲೆ, ತಾವರೆಎಲೆ ಇವುಗಳಿಂದ ಕೊಟ್ಟ ಅರ್ಘ್ಯವು, ತಾಮ್ರಪಾತ್ರೆಯಿಂದ ಅರ್ಘ್ಯವನ್ನು ಕೊಟ್ಟಷ್ಟೇ ಫಲವನ್ನುಂಟುಮಾಡುವುದು.

೪೧. ಬೆಳ್ಳಿಯಪಾತ್ರೆಯಿಂದ ಅರ್ಘ್ಯಕೊಟ್ಟರೆ ಲಕ್ಷದಷ್ಟು ಫಲವಾಗುವುದು ಇದರಲ್ಲಿ ಸಂಶಯವಿಲ್ಲ. ಸುವರ್ಣಪಾತ್ರೆಯಿಂದ ಕೊಟ್ಟ ಅರ್ಘ್ಯವು ಕೋಟಿಪಾಲು ಹೆಚ್ಚುಫಲವಾಗುವುದು.

೪೨. ಹೀಗೆ ಸ್ನಾನ, ಅರ್ಘ್ಯ, ನೈವೇದ್ಯ, ಬಲಿ, ಧೂಪ ಮೊದಲಾದುವುಗಳಲ್ಲಿ, ಕ್ರಮವಾಗಿ ಅದಕ್ಕೆ ಉಪಯೋಗಿಸುವ ಬೇರೆಬೇರೆ ಪಾತ್ರೆಗಳಿಗೆ ತಕ್ಕಂತೆ,ಅದರ ಫಲವು ಉತ್ತರೋತ್ತರ ಹೆಚ್ಚಾಗುವುದು.

೪೩. ಸೂರ್ಯಪ್ರೀತಿಗಾಗಿ ವೇದಪಾರಂಗತನಿಗೆ ತಾಮ್ರದಪಾತ್ರೆಯನ್ನು ದಾನ ಮಾಡುವುದರಿಂದ ಬರುವ ಪುಣ್ಯಕ್ಕಿಂತ ಬೆಳ್ಳಿಯಪಾತ್ರೆಯನ್ನು ದಾನಮಾಡುವುದರಿಂದ ಅದರ ನೂರರಷ್ಟು ಪುಣ್ಯವು ಬರುವುದು.

**ಫಲಂ ಕೋಟಿಸುವರ್ಣಸ್ಯ ಯೋ ದದ್ಯಾದ್ವೇದಪಾರಗೇ ।**
**ಸೂರ್ಯಾಯ ರೂಪ್ಯಪಾತ್ರೇಷು ಭವೇತ್ಪುಣ್ಯಂ ತತೋಽಧಿಕಂ ॥ ೪೪ ॥**

**ಸುವರ್ಣಪಾತ್ರಂ ಯೋ ದದ್ಯಾದ್ಭಾಸ್ಕರಾಯ ಮಹೀಪತೇ ।**
**ನ ಶಕ್ಯಂ ತಸ್ಯ ತದ್ವಕ್ತುಂ ಪುಣ್ಯಂ ಪಾತ್ರವಿಶೇಷತಃ ॥ ೪೫ ॥**

**ತುಲ್ಯಮೇವ ಫಲಂ ಪ್ರೋಕ್ತಂ ಸರ್ವಮಾಢ್ಯದರಿದ್ರಯೋಃ ।**
**ತಯೋರಭ್ಯಧಿಕಂ ತಸ್ಯ ಯಸ್ತ್ವರ್ಕೇ ಭಾವನಾಧಿಕಃ ॥ ೪೬ ॥**

**ವಿಭವೇ ಸತಿ ಯೋ ಮೋಹಾನ್ನ ಕುರ್ಯಾದ್ವಿಧಿವಿಸ್ತರಂ ।**
**ನೈವ ತತ್ಫಲಮಾಪ್ನೋತಿ ಪ್ರಲೋಭಾಕ್ರಾಂತಮಾನಸಃ ॥ ೪೭ ॥**

**ತಸ್ಮಾನ್ಮಂತ್ರೈಃ ಫಲೈಸ್ತೋಯೈಶ್ಚಂದನಾದ್ಯೈಶ್ಚ ಯತ್ನತಃ ।**
**ತದನಂತಫಲಂ ಜ್ಞೇಯಂ ಭಕ್ತಿರೇವಾತ್ರ ಕಾರಣಂ ॥ ೪೮ ॥**

---

೪೪. ವೇದಪಾರಂಗತನಾದ ವಿಪ್ರೋತ್ತಮನಿಗೆ ಬೆಳ್ಳಿಯಪಾತ್ರೆಯಲ್ಲಿ ಸುವರ್ಣ ನಾಣ್ಯಗಳನ್ನಿಟ್ಟು ದಾನಮಾಡಿದರೆ ಅದಕ್ಕಿಂತಲೂ ಕೋಟಿಪಾಲು ಹೆಚ್ಚು ಫಲಬರುವುದೆಂದು ತಿಳಿಯಬೇಕು.

೪೫. ಎಲೈ ರಾಜನೇ! ಕೇಳು; ವೇದಾಭ್ಯಾಸ ಮಾಡಿದ ವಿಪ್ರನಿಗೆ ಸೂರ್ಯ ಪ್ರೀತ್ಯರ್ಥವಾಗಿ ಚಿನ್ನದ ಪಾತ್ರೆಯನ್ನು ದಾನಮಾಡಿದರೆ ಅದರಿಂದ ಅವನ ಪುಣ್ಯವು ಇಷ್ಟೆಂದು ಹೇಳಲು ಶಕ್ಯವಿಲ್ಲ (ದಷ್ಟು ಅಪರಿಮಿತವಾಗುವುದು.)

೪೬. ಧನಿಕ, ದರಿದ್ರ ಇವರಿಬ್ಬರಿಗೂ ದಾನದ ಫಲವು ಸಮಾನವಾದದ್ದೆಂದು ಹೇಳಿದ್ದರೂ, ಅವರಿಬ್ಬರಲ್ಲಿ ಯಾರಿಗೆ ಸೂರ್ಯನಲ್ಲಿ ಶ್ರೇಷ್ಠವಾದ ಭಾವನೆಯಿರುವುದೋ ಅವನಿಗೆ ಫಲವು ಅಧಿಕವೆಂದು ತಿಳಿಯಬೇಕು.

೪೭. ಐಶ್ವರ್ಯವಿದ್ದರೂ ಯಾವನು, ವೈಭವದಿಂದ ಪೂಜೆಮಾಡುವುದಿಲ್ಲವೋ ಅವನ ಮನಸ್ಸು ಲೋಭಯುಕ್ತವಾದ್ದರಿಂದ ಅವನಿಗೆ ಪೂಜಾಫಲವು ಪೂರ್ಣವಾಗಿ ಲಭಿಸುವುದಿಲ್ಲ.

೪೮. ಆದುದರಿಂದ ಅನುಕೂಲವಿದ್ದ ಮಟ್ಟಿನಲ್ಲಿಯೇ, ಫಲಗಳನ್ನು ತಂದು ಮಂತ್ರಗಳು ಮತ್ತು ಜಲ ಇವುಗಳಿಂದಲೇ ಆದಷ್ಟು ಸೇವೆಮಾಡಿದರೆ, ಅದೇ ಅನಂತ ಫಲಪ್ರದವೆನಿಸುವುದು. ಪೂಜೆಗೆ ಭಕ್ತಿಯೇ ಮುಖ್ಯವಾಗಿರಬೇಕಾದುದು ಎಂದು ತಿಳಿಯಬೇಕು.

ವರ್ಷಕೋಟಿಶತಂ ದಿವ್ಯಂ ಸೂರ್ಯಲೋಕೇ ಮಹೀಯತೇ ।
ಗಂಧಾನುಲೇಪನಂ ಪುಣ್ಯಂ ದ್ವಿಗುಣಂ ಚಂದನಸ್ಯ ತು ॥ ೪೯ ॥

ಗಂಧಾಚ್ಚತುರ್ಗುಣಂ ಜ್ಞೇಯಂ ಪುಷ್ಪಮಷ್ಟಗುಣಂ ನೃಪ ।
ಕೃಷ್ಣಾಗುರುವಿಶೇಷೇಣ ದ್ವಿಗುಣಂ ಫಲಮಾದಿಶೇತ್ ॥ ೫೦ ॥

ತಸ್ಮಾಚ್ಛತಗುಣಂ ಪುಣ್ಯಂ ಕುಂಕುಮಸ್ಯ ವಿಧೀಯತೇ ।
ಚಂದನಾಗುರುಕರ್ಪೂರೈಃ ಶ್ಲಕ್ಷ್ಣಪಿಷ್ಟೈಃ ಸುಕುಂಕುಮೈಃ ॥
ಭಾನುಂ ಪರ್ಯಾಪ್ತಮಾಲಿಪ್ಯ ಕಲ್ಪಕೋಟಿಂ ವಸೇದ್ದಿವಿ ॥ ೫೧ ॥

ಸ ದಿವ್ಯೈತ್ಸುರವೃಂದೇನ ಪುಣ್ಯಗಂಧೈಃ ಪ್ರಲೇಪಿತಃ ।
ದಶವರ್ಷಸಹಸ್ರಾಣಿ ವೀರ ಮಿತ್ರಪುರೇ ವಸೇತ್ ॥ ೫೨ ॥

---

೪೯. ಹೀಗೆ ಭಕ್ತಿಯಿಂದ ಪೂಜಿಸಿದವನು, ದೇವಮಾನದ ನೂರುಕೋಟಿವರ್ಷಗಳವರೆಗೆ, ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ. ಸುಮ್ಮನೆ ಪೂಜೆಮಾಡುವುದಕ್ಕಿಂತ ಶ್ರೀಗಂಧವನ್ನು ಲೇಪಿಸಿ ಪೂಜೆಮಾಡುವುದು, ಎರಡರಷ್ಟು ಫಲವನ್ನು ಕೊಡುವುದು. ಚಂದನಗಂಧಲೇಪನದಿಂದ ನಾಲ್ಕರಷ್ಟು ಫಲವುಂಟು.

೫೦-೫೧. ಕೆಂಪುಹೂವನ್ನು ಪೂಜೆಮಾಡುವುದರಿಂದ ಎಂಟರಷ್ಟು ಪುಣ್ಯವುಂಟಾಗುವುದೆಂದೂ, ಕೃಷ್ಣಾಗರುವಿನ ಚಕ್ಕೆಯನ್ನು ತೆಯ್ದು ತೆಗೆದ ಗಂಧಲೇಪನದಿಂದ ಹದಿನಾರರಷ್ಟು ಫಲವುಂಟೆಂದೂ ಹೇಳಿದೆ. ಕುಂಕುಮಕೇಸರಿಯನ್ನು ಲೇಪನಮಾಡುವುದರಿಂದ ಇದರ ನೂರರಷ್ಟು ಫಲವುಂಟಾಗುವುದು. ಚಂದನ, ಅಗಿಲು, ಪಚ್ಚಕರ್ಪೂರ, ಕೇಸರಿ, ಬುಕ್ಕೀಹಿಟ್ಟು ಇವುಗಳಿಂದ ಸೂರ್ಯಪ್ರತಿಮೆಗೆ ಸಮೃದ್ಧಿಯಾಗಿ ಲೇಪನಮಾಡಿದವನಿಗೆ ಒಂದುಕೋಟಿಕಲ್ಪ ಕಾಲದವರೆಗೆ ಸ್ವರ್ಗಲೋಕದ ವಾಸವು ಲಭಿಸುವುದು.

೫೨. ಸೂರ್ಯನಿಗೆ ಉತ್ತಮವಾದ ಗಂಧವನ್ನು ಲೇಪನಮಾಡಿದವರು ದೇವಲೋಕಕ್ಕೆ ಹೋಗಿ, ಅಲ್ಲಿ ತಾವೂ ದಿವ್ಯಗಂಧಗಳಿಂದ ಲೇಪನಮಾಡಿಕೊಂಡವರಾಗಿ ದೇವತೆಗಳೊಡನೆ ವಿಹರಿಸುತ್ತಾ, ಹತ್ತುಸಾವಿರ ವರ್ಷಗಳವರೆಗೆ ಸೂರ್ಯಲೋಕದಲ್ಲಿ ವಾಸಿಸುವರು.

ನಿವೇದ್ಯಾರ್ಕಾಯ ಭಕ್ತ್ಯಾ ತು ತಾಲವೃಂತಂ ನರಾಧಿಪ ।
ದಶವರ್ಷಸಹಸ್ರಾಣಿ ವೀರಲೋಕೇ ಮಹೀಯತೇ ॥ ೩೩ ॥

ಮಾಯೂರಂ ವ್ಯಜನಂ ದತ್ವಾ ಸೂರ್ಯಾಯಾತೀವಶೋಭನಂ ।
ವರ್ಷಕೋಟಿಶತಂ ಪೂರ್ಣಂ ಪ್ರಭಂಜನಪುರೇ ವಸೇತ್ ॥ ೩೪ ॥

ಪುಷ್ಪೈರರಣ್ಯಸಂಭೂತೈಃ ಪತ್ರೈರ್ವಾ ಗಿರಿಸಂಭವೈಃ ।
ಅಪರ್ಯುಷಿತನಿಶ್ಛಿದ್ರೈಃ ಪ್ರೋಕ್ಷಿತೈರ್ಜಂತುವರ್ಜಿತೈಃ ॥ ೩೫ ॥

ಆತ್ಮಾರಾಮಭವೈಶ್ಚೈವ ಪುಷ್ಪೈಃ ಸಂಪೂಜಯೇದ್ರವಿಂ ।
ಜಾತೀಪುಷ್ಪವಿಶೇಷೇಣ ಭವೇತ್ಪುಣ್ಯಂ ತತೋಽಧಿಕಂ ॥ ೩೬ ॥

---

೩೩. ಎಲೈ ವೀರನೇ! ಸೂರ್ಯಪ್ರೀತ್ಯರ್ಥವಾಗಿ ಭಕ್ತಿಯಿಂದ ಬೀಸಣಿಗೆಯನ್ನು ಸಮರ್ಪಿಸಿದವನು, ಹತ್ತುಸಾವಿರ ವರ್ಷಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೩೪. ಸೂರ್ಯಸೇವೆಗೆ ಅತಿ ಶೋಭಾಯಮಾನವಾದ ನವಿಲುಗರಿಯ ಬೀಸಣಿಗೆಯನ್ನು ಕೊಡುವವನು, ನೂರುಕೋಟಿ ವರ್ಷಗಳವರೆಗೆ ಪೂರ್ಣವಾಗಿ ವಾಯುಲೋಕದಲ್ಲಿ ವಾಸಮಾಡುವನು.

೩೫. ಕಾಡಿನಲ್ಲಿ ಬೆಳೆದ ಹೂಗಳಿಂದಲೂ, ಬೆಟ್ಟದಲ್ಲಿ ಬೆಳೆದ ಪತ್ರಗಳಿಂದಲೂ ಸೂರ್ಯನನ್ನು ಪೂಜಿಸಬಹುದು. ಆದರೆ ಕೊಳೆಯದೆಯೂ, ಹುಳು ಕೊರೆದು ರಂಧ್ರ ಬೀಳದೆಯೂ, ಬಾಡದೆಯೂ, ಇರುವೆ ಮುಂತಾದ ಪ್ರಾಣಿಗಳು ಮುತ್ತದೆಯೂ, ಇರುವ ಹೂಗಳನ್ನೇ ಆರಿಸಿ ತಂದು ಅವುಗಳಿಂದ ಪೂಜೆಮಾಡಬೇಕು.

೩೬. ತನ್ನ ತೋಟದಲ್ಲಿ ಬೆಳೆದ ಹೂಗಳಿಂದಲೇ ಸೂರ್ಯನನ್ನು ಪೂಜಿಸಬೇಕು. ಜಾಜಿಯಹೂವು ಪುಷ್ಪ ಶ್ರೇಷ್ಠವೆನಿಸಿ ಸೌಗಂಧ್ಯಾದಿ ವಿಶೇಷಗುಣಯುಕ್ತವಾಗಿರುವುದರಿಂದ, ಆ ಹೂವುಗಳನ್ನು ಪೂಜಿಸಿದರೆ ಸಾಮಾನ್ಯಪುಷ್ಪವನ್ನು ಪೂಜಿಸಿದ್ದಕ್ಕಿಂತ ಹೆಚ್ಚಿನ ಪುಣ್ಯವು ಲಭಿಸುವುದು.

ತಪಶ್ಶೀಲಗುಣೋಪೇತ ಇತಿಹಾಸವಿದಿ ದ್ವಿಜೇ ।
ದತ್ವಾ ದಶಸುವರ್ಣಸ್ಯ ನಿಷ್ಕಾನ್ ಯಲ್ಲಭತೇ ಫಲಂ ॥ ೫೭ ॥

ಕರವೀರಸ್ಯ ಕುಸುಮಮರ್ಕಾಯ ವಿನಿವೇದಯೇತ್ ।
ಲಭತೇ ತತ್ಫಲಂ ವೀರ ಯಥಾಹ ಭಗವಾನ್ ರವಿಃ ॥ ೫೮ ॥

ಏವಂ ಪುಷ್ಪವಿಶೇಷೇಣ ಫಲಂ ತದಧಿಕಂ ಭವೇತ್ ।
ಜ್ಞೇಯಂ ಪುಣ್ಯಂ ರಸಜ್ಞೇನ ಯಥಾ ಸ್ಯಾತ್ತನ್ನಿಬೋಧ ಮೇ ।
ಸದಾ ಪುಷ್ಪಸಹಸ್ರೇಭ್ಯಃ ಕರವೀರಂ ವಿಶಿಷ್ಯತೇ ।
ಬಿಲ್ವಪತ್ರಸಹಸ್ರೇಭ್ಯಃ ಪದ್ಮಮೇಕಂ ನರಾಧಿಪ ॥ ೫೯ ॥

ಪದ್ಮಪುಷ್ಪಸಹಸ್ರೇಭ್ಯೋ ಬಕಪುಷ್ಪಂ ವಿಶಿಷ್ಯತೇ ।
ಬಕಪುಷ್ಪಸಹಸ್ರೇಭ್ಯಃ ಮುದ್ಗರಂ ಪರಮುಚ್ಯತೇ ॥ ೬೦ ॥

---

೫೭. ತಪಸ್ಸು, ಸುಶೀಲ, ಸದ್ಗುಣ ಇವುಗಳಿಂದ ಕೂಡಿದವನೂ, ಇತಿಹಾಸವನ್ನು ತಿಳಿದವನೂ ಆದ ಬ್ರಾಹ್ಮಣನಿಗೆ, ಹತ್ತುಸುವರ್ಣ ನಾಣ್ಯಗಳನ್ನು ದಾನಮಾಡಿದ್ದರಿಂದ ಬರುವಷ್ಟು ಫಲವು, ಈ ಶ್ರೇಷ್ಠವಾದ ಹೂವನ್ನು ಸಮರ್ಪಣೆಮಾಡುವುದರಿಂದಲೇ ಉಂಟಾಗುವುದು.

೫೮. ಅಯ್ಯಾ ವೀರನೇ! ಸೂರ್ಯನಿಗೆ ಕಣಿಗಲೇಹೂವನ್ನು ಮುಖ್ಯವಾಗಿ ಸಮರ್ಪಿಸಬೇಕು. ಹೀಗೆ ಮಾಡಿದರೆ ಫಲವು ಪೂರ್ಣವಾಗಿ ಬರುವುದೆಂದು ಸೂರ್ಯನೇ ಹೇಳಿದ್ದಾನೆ.

೫೯. ಈ ರೀತಿಯಾಗಿ ಪುಷ್ಪಗಳಲ್ಲಿರುವ ಗುಣವಿಶೇಷವನ್ನನುಸರಿಸಿ ಅಧಿಕವಾದ ಫಲವುಂಟೆಂದು ತಿಳಿಯಬೇಕು. ರಸಜ್ಞನಾದವನು ಇದನ್ನು ಪುಣ್ಯವೆಂಬದಾಗಿ ಹೇಗೆ ತಿಳಿಯುವನೋ ಅದನ್ನು ಹೇಳುತ್ತೇನೆ ಕೇಳು. ಯಾವ ಕಾಲದಲ್ಲಿಯೇ ಆಗಲಿ ಇತರ ಸಾವಿರಾರು ಹೂಗಳಿಂದ ಪೂಜಿಸುವುದಕ್ಕಿಂತ ಒಂದು ಕಣಿಗಲೇ ಹೂವೇ ಶ್ರೇಷ್ಠವಾಗಿರುತ್ತದೆ. ಸಾವಿರ ಬಿಲ್ವಪತ್ರೆಗಳಿಗಿಂತಲೂ ಒಂದು ತಾವರೇ ಹೂವನ್ನು ಪೂಜಿಸುವುದು ಶ್ರೇಷ್ಠವಾದುದು.

೬೦. ಸಹಸ್ರ ಪದ್ಮಪುಷ್ಪಗಳಿಗಿಂತಲೂ ಒಂದು ಬಕಪುಷ್ಪವು ಪೂಜೆಗೆ ಶ್ರೇಷ್ಠವಾದುದು ಸಾವಿರ ಬಕಪುಷ್ಪಗಳಿಗಿಂತಲೂ ಒಂದು ಮುದ್ಗರಪುಷ್ಪವು ಶ್ರೇಷ್ಠವೆನಿಸುವುದು.

ಮುದ್ಗಪುಷ್ಪಸಹಸ್ರೇಭ್ಯಃ ಶಮೀಪುಷ್ಪಂ ವಿಶಿಷ್ಯತೇ ।
ಶಮೀಪುಷ್ಪಸಹಸ್ರೇಭ್ಯಃ ನೃಪ ನಿಲೋತ್ಪಲಂ ಪರಂ ॥ ೬೧ ॥

ಸರ್ವಾಸಾಂ ಪುಷ್ಪಜಾತೀನಾಂ ಪ್ರವರಂ ನೀಲಮುತ್ಪಲಂ ।
ರಕ್ತೋತ್ಪಲಸಹಸ್ರೇಣ ನೀಲೋತ್ಪಲಶತೇನ ಚ ॥
ರಕ್ತೈಶ್ಚ ಕರವೀರೈಶ್ಚ ಯಸ್ತು ಪೂಜಯತೇ ರವಿಂ ॥ ೬೨ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ವಸೇದರ್ಕಪುರೇ ಶ್ರೀಮಾನ್ಸೂರ್ಯತುಲ್ಯಪರಾಕ್ರಮಃ ॥ ೬೩ ॥

ಶೇಷಾಣಾಂ ಪುಷ್ಪಜಾತೀನಾಂ ಯತ್ಫಲಂ ಪರಿಕೀರ್ತಿತಂ ।
ತತ್ಫಲಸ್ಯಾನುಸಾರೇಣ ಸೂರ್ಯಲೋಕೇ ಮಹೀಯತೇ ॥ ೬೪ ॥

---

೬೧. ಸಾವಿರಾರು ಮುದ್ಗರಪುಷ್ಪಗಳಿಗಿಂತ ಒಂದು ಶಮೀಪುಷ್ಪವು ಶ್ರೇಷ್ಠವೆನಿಸುವುದು. ಅಯ್ಯಾ ರಾಜನೇ ! ಕೇಳು; ಸಾವಿರಾರು ಶಮೀಪುಷ್ಪಗಳಿಗಿಂತ ಒಂದು ಕನ್ನೈದಿಲೆಹೂವು ಶ್ರೇಷ್ಠವು. ಹೀಗೆ ಎಲ್ಲಾ ಪುಷ್ಪಜಾತಿಗಳಿಗಿಂತಲೂ ನೀಲೋತ್ಪಲ ಪುಷ್ಪವು (ಕನ್ನೈದಿಲೆಹೂ) ಅತ್ಯಂತ ಶ್ರೇಷ್ಠವೆನಿಸುವುದು.

೬೨. ಸಾವಿರ ಕೆಂಪುನೈದಿಲೆಗಳು, ನೂರುಕನ್ನೈದಿಲೆಗಳು, ಲಕ್ಷ ಕೆಂಪು ಕಣಿಗಲೇಹೂಗಳು, ಇವುಗಳಿಂದ ಸೂರ್ಯನನ್ನು ಪೂಜಿಸುವವನು, ಅಮೋಘ ಫಲ ಭಾಗಿಯಾಗುವನು.

೬೩. ಹಾಗೆ ಪೂಜಿಸಿದವನು ಒಂದುಸಾವಿರದ ನೂರುಕೋಟಿ ವರ್ಷಗಳ ವರೆಗೂ ಶ್ರೀಮಂತನೂ ಸೂರ್ಯನಿಗೆ ಸಮಾನವಾದ ಪರಾಕ್ರಮವುಳ್ಳವನೂ ಆಗಿ ಸೂರ್ಯಲೋಕದಲ್ಲಿಯೇ ವಾಸಿಸುವನು.

೬೪. ಹೀಗೆ ಮಿಕ್ಕ ಪುಷ್ಪಜಾತಿಗಳಿಗೆ ಅನುಗುಣವಾಗಿ ಬೇರೆಬೇರೆ ಫಲವನ್ನು ಹೇಳಿದೆ; ಆಯಾ ಪುಷ್ಪಪೂಜೆಮಾಡಿದವನು ಆ ಫಲಕ್ಕನುಸಾರವಾಗಿ ಸೂರ್ಯಲೋಕದಲ್ಲಿ ಪೂಜಾರ್ಹನಾಗುವನು.

ಶಮೀಪುಷ್ಪಂ ಬೃಹತ್ಯಾಶ್ಚ ಕುಸುಮಂ ತುಲ್ಯಮುಚ್ಯತೇ ।
ಕರವೀರಸಮಾ ಜ್ಞೇಯಾ ಜಾತೀವಿಜಯಪಾಟಲಾಃ ॥ ೬೫ ॥

ಶ್ವೇತಮಂದಾರಕುಸುಮಮತಸೀಪುಷ್ಪಮೇವ ಚ ।
ನಾಗಚಂಪಕಪುನ್ನಾಗಮುದ್ಗರಾಣಾಂ ಸಮಾಃ ಸ್ಮೃತಾಃ ॥ ೬೬ ॥

ಗಂಧವಂತ್ಯಪವಿತ್ರಾಣಿ ಕುಸುಮಾನಿ ವಿವರ್ಜಯೇತ್ ।
ಗಂಧಹೀನಮಪಿ ಗ್ರಾಹ್ಯಂ ಪವಿತ್ರಂ ಯತ್ಕುಶಾದಿಕಂ ॥ ೬೭ ॥

ಸಾತ್ತ್ವಿಕಂ ತದ್ಧಿ ಕುಸುಮಮಪವಿತ್ರಂ ಚ ತಾಮಸಂ ।
ಮುದ್ಗರಾಣಿ ಕದಂಬಾನಿ ರಾತ್ರೌ ದೇಯಾನಿ ಭಾನವೇ ॥ ೬೮ ॥

ದಿವಾ ಶೇಷಾಣಿ ಪುಷ್ಪಾಣಿ ತ್ಯಜೇದುಪಹತಾನಿ ಚ ।
ಮುಕುಲೈರ್ನಾರ್ಚಯೇದ್ಭಾನುಂ ಅಪಕ್ವಂ ನ ನಿವೇದಯೇತ್ ॥ ೬೯ ॥

---

೬೫. ಶಮೀ (ಬನ್ನಿ) ಪುಷ್ಪವೂ, ಬೃಹತೀಪುಷ್ಪವೂ ಇವೆರಡೂ ಸಮಾನವಾಗಿ ಉತ್ಕೃಷ್ಟವೆಂದು ಹೇಳುವರು. ಜಾಜಿಯಹೂವು, ವಿಜಯಪುಷ್ಪ, ಪಾದರೀಹೂವು ಇವುಗಳು ಕರವೀರಪುಷ್ಪಕ್ಕೆ ಸಮಾನವಾದುವೆಂದು ತಿಳಿಯಬೇಕು.

೬೬. ಬಿಳಿಯ ಮಂದಾರಪುಷ್ಪ, ಅಗಸೆಯಹೂವು, ನಾಗಸಂಪಿಗೆಯಹೂವು, ಪುನ್ನಾಗಪುಷ್ಪ, ಮುದ್ಗರಪುಷ್ಪ ಇವುಗಳೆಲ್ಲವೂ ಶ್ರೇಷ್ಠತೆಯಲ್ಲಿ ಸಮಾನವಾದುವುಗಳು

೬೭. ಸುವಾಸನೆಯುಳ್ಳವುಗಳಾಗಿದ್ದರೂ ಅಪವಿತ್ರಗಳಾದ ಹೂಗಳನ್ನು ಬಿಟ್ಟು ಬಿಡಬೇಕು. ದರ್ಭೆ ಮುಂತಾದುವು ಸುವಾಸನೆಯಿಲ್ಲದಿದ್ದರೂ ಪರಿಶುದ್ಧಗಳಾದುದರಿಂದ ಅವುಗಳನ್ನು ಪೂಜಿಸಬೇಕು.

೬೮. ಮೇಲೆ ಹೇಳಿದ ಈ ಪ್ರಕಾರವಾದುವು ಸಾತ್ತ್ವಿಕಪುಷ್ಪವರ್ಗಕ್ಕೆ ಸೇರಿದುವು. ಅಪವಿತ್ರವಾದ ಪುಷ್ಪಗಳು ತಾಮಸಪುಷ್ಪವರ್ಗಕ್ಕೆ ಸೇರಿದುವೆಂದು ತಿಳಿಯಬೇಕು. ಮುದ್ಗರಪುಷ್ಪ ಕದಂಬಪುಷ್ಪಗಳನ್ನು ಅರ್ಚಿಸಬೇಕಾದರೆ ರಾತ್ರಿ ವೇಳೆಯಲ್ಲಿ ಮಾತ್ರ ಸೂರ್ಯನಿಗೆ ಸಮರ್ಪಿಸಬೇಕು.

೬೯. ಇತರ ದೇವರಿಗೆ ಹಗಲೂ ಸಹ ಪೂಜಿಸಬಹುದು. ಕ್ರಿಮಿಕೀಟಗಳಿಂದ ಬಾಡಿದ ಹೂವುಗಳನ್ನು ಪೂಜೆಗೆ ಉಪಯೋಗಿಸಬಾರದು. ಯಾವಾಗಲೂ ಸೂರ್ಯನಿಗೆ ಮೊಗ್ಗುಗಳನ್ನು ಪೂಜಿಸಬಾರದು. ಮತ್ತು ಪಕ್ವವಾಗದ ಪದಾರ್ಥಗಳನ್ನು ಸೂರ್ಯನಿಗೆ ನೈವೇದ್ಯವಾಗಿ ಸಮರ್ಪಿಸಬಾರದು.

**ಫಲಂ ಕ್ವಥಿತವಿದ್ಧಂ ಚ ಯತ್ನಾತ್ಪಕ್ವಮಪಿ ತ್ಯಜೇತ್ ।**
**ಅಲಾಭೇ ಬಕಪುಷ್ಪಾಣಾಂ ಪತ್ರಾಣ್ಯಪಿ ನಿವೇದಯೇತ್ ॥ ೨೦ ॥**

**ಪತ್ರಾಣಾಮಪ್ಯಭಾವೇ ತು ಮೂಲಾನ್ಯಪಿ ನಿವೇದಯೇತ್ ।**
**ಮೂಲಾನಾಮಪ್ಯಲಾಭೇನ ತೃಣಗುಲ್ಮೌಷಧೀರಪಿ ॥ ೨೧ ॥**

**ಔಷಧೀನಾಮಭಾವೇ ತು ಭಕ್ತ್ಯಾ ಭವತಿ ಪೂಜಿತಃ ।**
**ಪ್ರತ್ಯೇಕಮುಕ್ತಪುಷ್ಪೇಣ ದಶಸೌವರ್ಣಕಂ ಫಲಂ ॥ ೨೨ ॥**

**ಯಃ ಸುಗಂಧೈರ್ಮುಕ್ತಪುಷ್ಪೈಃ ಸಮ್ಯಗ್ಭಾನುಂ ಪ್ರಪೂಜಯೇತ್ ।**
**ಮಾಘಾಸಿತೇಽಪಿ ಸುಮನಾಃ ಸೋಽನಂತಫಲಮಶ್ನುತೇ ॥ ೨೩ ॥**

**ಕರವೀರೈರ್ಮಹಾರಾಜ ಸಂಯುಕ್ತೋ ಭಾನುಮರ್ಚಯೇತ್ ।**
**ಸರ್ವಪಾಪವಿನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ॥ ೨೪ ॥**

---

೨೦. ಬೇಯಿಸಿದ ಕಾಯಿಗಳನ್ನೂ, ಏಟುಬಿದ್ದ ಫಲಗಳನ್ನೂ, ಬಲಾತ್ಕಾರದಿಂದ ಹಣ್ಣುಮಾಡಿದುವುಗಳನ್ನೂ ನಿವೇದನಮಾಡಬಾರದು. ಉಕ್ತವಾದ ಹೂಗಳು ದೊರೆಯದೆ ಹೋದ ಸಮಯದಲ್ಲಿ ಆ ಗಿಡದ ಪತ್ರೆಗಳನ್ನಾದರೂ ಸಮರ್ಪಿಸಬೇಕು.

೨೧. ಸರಿಯಾದ ಪತ್ರೆಗಳು ಸಿಕ್ಕದೇ ಹೋದರೆ ಆ ಗಿಡದ ಬೇರುಗಳನ್ನು ಉಪಯೋಗಿಸಬೇಕು. ಬೇರುಗಳೂ ಸರಿಯಾಗಿ ಸಿಕ್ಕದೇ ಹೋದರೆ ನೊದೆ ಮುಂತಾದ ಹುಲ್ಲುಗಳು ಚಿಗುರುಗಳು ಮೂಲಿಕೆಗಳು ಇವನ್ನು ಉಪಯೋಗಿಸಬೇಕು.

೨೨. ಮೂಲಿಕೆಗಳೂ ದೊರೆಯದೇ ಹೋದರೆ, ಕೇವಲ ಭಕ್ತಿಮಾತ್ರದಿಂದ ಮನಸ್ಸಿನಲ್ಲಿಯೇ ಪೂಜಿಸಬೇಕು. ಹಿಂದೆ ಹೇಳಿದ ಒಂದೊಂದು ಬಗೆಯ ಪುಷ್ಪಗಳಿಂದ ಪ್ರತ್ಯೇಕವಾಗಿ ಅರ್ಚಿಸಿದರೆ ಹತ್ತು ಸುವರ್ಣನಾಣ್ಯಗಳನ್ನು ದಾನಮಾಡಿದಷ್ಟು ಫಲವು ಬರುವುದು.

೨೩. ಮಾಘಮಾಸದ ಕೃಷ್ಣಪಕ್ಷದಲ್ಲಿ ಸುಗಂಧಯುಕ್ತಪುಷ್ಪಗಳಿಂದ ಸೂರ್ಯನನ್ನು ಚೆನ್ನಾಗಿ ಪೂಜಿಸುವವನು ಅಪರಿಮಿತವಾದ ಫಲವನ್ನು ಹೊಂದುತ್ತಾನೆ.

೨೪. ಅಯ್ಯಾ ಮಹಾರಾಜನೇ! ನಿಯಮಯುಕ್ತನಾಗಿ ಕಣಿಗಲೇಹೂವುಗಳಿಂದ ಸೂರ್ಯನನ್ನು ಪೂಜಿಸಬೇಕು. ಹೀಗೆ ಮಾಡಿದರೆ ಸರ್ವಪಾಪಗಳಿಂದಲೂ ಬಿಡುಗಡೆ ಹೊಂದಿ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

ಅಗಸ್ತ್ಯಕುಸುಮೈರ್ಭಕ್ತ್ಯಾ ಯಃ ಸಕೃದ್ಭಾನುಮರ್ಚಯೇತ್ ।
ಗವಾಂ ಪ್ರಯುತದಾನಸ್ಯ ಫಲಂ ಪ್ರಾಪ್ಯ ದಿವಂ ವ್ರಜೇತ್ ॥ ೭೫ ॥

ಮಲ್ಲಿಕೋತ್ಪಲಪದ್ಮೈಶ್ಚ ಜಾತೀಪುನ್ನಾಗಚಂಪಕೈಃ ।
ಅಶೋಕಶ್ವೇತಮಂದಾರಕರ್ಣಿಕಾಬಂಧುಕೈಸ್ತಥಾ ॥ ೭೬ ॥

ಕರವೀರಾರ್ಕಕಲ್ಹಾರಶಮೀತಗರಕೇಶರೈಃ ।
ಅಗಸ್ತಿಬಕಪುಷ್ಪೈಸ್ತು ಶತಪತ್ರೈರ್ನರಾಧಿಪ ॥ ೭೭ ॥

ಪುಷ್ಪೈರೇತೈರ್ಯಥಾಲಾಭಂ ಯೋ ನರಃ ಪೂಜಯೇದ್ರವಿಂ ।
ಸ ತತ್ಫಲಮವಾಪ್ನೋತಿ ತದೇಕಾಗ್ರಮನಾಃ ಶೃಣು ॥ ೭೮ ॥

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸರ್ವಗಾಮಿಭಿಃ ।
ಪುಷ್ಪಮಾಲಾಪರಿಕ್ಷಿಪ್ತೈಃ ಗೀತವಾದಿತ್ರನಾದಿತೈಃ ॥ ೭೯ ॥

ತಂತ್ರೀಮಧುರವಾದ್ಯೈಶ್ಚ ಸ್ವಚ್ಛಂದಗಮನೈರ್ನೃಪ ।
ಸೂರ್ಯಕನ್ಯಾಸಮಾಕೀರ್ಣೈರ್ದೇವಾನಾಂ ಚ ಸುದುರ್ಲಭೈಃ ॥ ೮೦ ॥

---

೭೫. ಭಕ್ತಿಯುಕ್ತನಾಗಿ ಅಗಸೆಯಹೂವಿನಿಂದ ಒಂದುಸಾರಿ ಸೂರ್ಯನನ್ನು ಪೂಜಿಸಿದವನು, ಲಕ್ಷಗೋದಾನ ಮಾಡಿದ ಫಲವನ್ನು ಹೊಂದಿ ಸ್ವರ್ಗಕ್ಕೆ ಹೋಗುತ್ತಾನೆ.

೭೬-೭೮. ಅಯ್ಯಾ ರಾಜಶ್ರೇಷ್ಠನೇ! ಮಲ್ಲಿಗೆ, ಕಮಲ, ನೈದಿಲೆ, ಜಾಜಿ, ಪುನ್ನಾಗ, ಸಂಪಿಗೆ, ಬನ್ನಿ, ತಗರೆ ಈ ಹೂಗಳು, ಕೇಸರಪುಷ್ಪ, ಅಗಸೇಹೂ, ಬಕಪುಷ್ಪ, ಶತಪತ್ರಪುಷ್ಪ ಇವುಗಳಲ್ಲಿ ಆಯಾಕಾಲದಲ್ಲಿ ದೊರೆತ ಪುಷ್ಪಗಳಿಂದ ಯಾವನು ಸೂರ್ಯನನ್ನು ಪೂಜಿಸುವನೋ ಅವನು ಹೊಂದುವ ಫಲವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು.

೭೯-೮೧. ಹಾಗೆ ಪೂಜಿಸಿದವನು ಕೋಟಿಸೂರ್ಯ ಪ್ರಕಾಶಮಾನವಾದುವುಗಳೂ, ಸ್ವೇಚ್ಛೆಯಾಗಿ ಎಲ್ಲೆಲ್ಲಿಗೂ ಹೋಗಬಲ್ಲ ಸಾಮರ್ಥ್ಯವುಳ್ಳವುಗಳೂ, ಪುಷ್ಪಹಾರಗಳಿಂದ ಸಿಂಗರಿಸಿದವೂ, ಗಾನವಾದ್ಯಗಳಿಂದ ಶಬ್ದಮಯವಾದುವೂ, ತಂತಿಗಳಿಂದ ಬಾರಿಸಲ್ಪಡುವ ವೀಣಾದಿ ಮಧುರವಾದ್ಯಗಳಿಂದ ಕೂಡಿದುವೂ, ಸ್ವಚ್ಛಂದವಾಗಿ

ದೋಧೂಯಮಾನಶ್ಚಮರೈಃ ಸ್ತೂಯಮಾನಃ ಸುರಾಸುರೈಃ ।
ಗಚ್ಛೇದರ್ಕಪುರೀಂ ದಿವ್ಯಾಂ ತತ್ರ ಸಂಪೂಜಿತೋ ಭವೇತ್ ॥ ೮೧ ॥

ಯೈಸ್ತೈಶ್ಚ ವಾಪಿ ಕುಸುಮೈಃ ಜಲಜೈಃ ಸ್ಥಲಜೈರ್ನೃಪ ।
ಸಂಪೂಜ್ಯ ಶ್ರದ್ಧಯಾ ಭಾನುಮರ್ಕಲೋಕೇ ಮಹೀಯತೇ ॥ ೮೨ ॥

ಸೂರ್ಯಸ್ಯೋಪರಿ ಯಃ ಕುರ್ಯಾಚ್ಛೋಭನಂ ಪುಷ್ಪಮಂಡಪಂ ।
ಶೋಭಿತಂ ಪುಷ್ಪಸ್ರಗ್ದಾಮೈರಾಪೀಠಾಂತಂ ಪ್ರಲಂಬಿತೈಃ ॥ ೮೩ ॥

ಆಶ್ಚರ್ಯರ್ಮಹಾಯಾನೈರ್ದಿವ್ಯಪುಷ್ಪೋಪಶೋಭಿತಃ ।
ಸರ್ವೇಷಾಮುಪರಿಷ್ಟಾಚ್ಚ ವಸೇದರ್ಕಪುರೇ ಸುಖೀ ॥ ೮೪ ॥

ಅನೇಕರಾಗವಿನ್ಯಸ್ತೈಃ ಸುಗಂಧೈಃ ಕುಸುಮೈರ್ನೃಪ ।
ಯಃ ಕುರ್ಯಾತ್ಪರ್ವಕಾಲೇ ತು ವಿಚಿತ್ರಕುಸುಮೋಜ್ವಲಂ ॥ ೮೫ ॥

---

ಹೋಗತಕ್ಕವುಗಳೂ ಆಗಿ ದೇವತೆಗಳಿಗೂ ದುರ್ಲಭವಾದ ವಿಮಾನಗಳಲ್ಲಿ ಕುಳಿತು ಸೂರ್ಯಕನ್ಯೆಯರಿಂದ ಚಾಮರಬೀಸಿಸಿಕೊಳ್ಳುತ್ತಾ ದೇವಸುರರಿಂದ ಸ್ತೋತ್ರಮಾಡಿಸಿಕೊಳ್ಳುವನಾಗಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ.

೮೨. ಎಲೈ ರಾಜನೇ! ಸ್ಥಲಜಪುಷ್ಪಗಳು, ಜಲಜಪುಷ್ಪಗಳು ಇವು ಯಾವುದರಿಂದಲೇ ಆಗಲೀ ಶ್ರದ್ಧಾಯುಕ್ತನಾಗಿ ಸೂರ್ಯನನ್ನು ಪೂಜಿಸಿದವನು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೮೩-೮೪. ಸೂರ್ಯಪ್ರತಿಮೆಯ ಮೇಲುಗಡೆ ಯಾವನು ಸುಂದರವಾದ ಪುಷ್ಪಮಂಟಪವನ್ನು ರಚಿಸಿ ಅಲಂಕರಿಸುವನೋ, ಅವನು ಪೀಠದ ಬುಡವವರೆಗೂ ಜೋಲಾಡುವ ಹೂಮಾಲೆಗಳಿಂದ ಶೋಭಿತವಾಗಿಯೂ ಅತ್ಯಾಶ್ಚರ್ಯಕರವಾಗಿಯೂ, ಇರುವ ಮಹಾಯಾನಗಳನ್ನು ಹತ್ತಿಕೊಂಡು, ದಿವ್ಯಪುಷ್ಪಗಳಿಂದ ಅಲಂಕೃತನಾಗಿ ಎಲ್ಲರಿಗಿಂತಲೂ ಮೇಲೆ ಸೂರ್ಯಪುರದಲ್ಲಿ ಸುಖವಾಗಿ ವಾಸಮಾಡುತ್ತಾನೆ.

೮೫-೮೬. ಅನೇಕ ಬಣ್ಣಗಳು ಪ್ರಕಾಶಮಾನವಾಗಿರುವಂತೆ ಚಿತ್ರವಾಗಿ ವಿನ್ಯಾಸಮಾಡಿದ ಸುವಾಸನಾಪುಷ್ಪಗಳಿಂದ, ಸಂಕ್ರಮಣ ಮುಂತಾದ ಪರ್ವಕಾಲಗಳಲ್ಲಿ ಸೂರ್ಯ

ಸ ಪುಷ್ಪಕವಿಮಾನೇನ ಪುಷ್ಪಮಾಲಾಕುಲೇನ ಚ ।
ಪುಷ್ಪೋತ್ತರಪುರಂ ದಿವ್ಯಂ ಶ್ರಯತೇ ನಾತ್ರ ಸಂಶಯಃ ॥ ೮೬ ॥

ಅಕ್ಷಯಂ ಮೋದತೇ ಕಾಲಮತಿರಸ್ಕೃತಶಾಸನಃ ।
ಸೌರಾದಿ ಸರ್ವಲೋಕೇಷು ಯತ್ರೇಷ್ಟಂ ತತ್ರ ಯಾತಿ ಸಃ ॥ ೮೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಪುಷ್ಪಪೂಜಾ ವರ್ಣನಂ ನಾಮ ತ್ರಿಷಷ್ಟ್ಯುತ್ತರ ಶತತಮೋಽಧ್ಯಾಯಃ.



---

ದೇವಾಲಯವನ್ನು ಯಾವನು ಅಲಂಕರಿಸುವನೋ, ಅವನು ಪುಷ್ಪಮಾಲೆಗಳಿಂದ ವ್ಯಾಪ್ತವಾದ ಪುಷ್ಪಕವಿಮಾನದ ಮೂಲಕ ಶ್ರೇಷ್ಠವಾದ ಪುಷ್ಪೋತ್ತರಪುರವನ್ನು ಸೇರುತ್ತಾನೆ. ಇದರಲ್ಲಿ ಸಂಶಯವಿಲ್ಲ.

೮೭. ಆತನು ಎಂದೆಂದಿಗೂ ತನ್ನ ಆಜ್ಞೆಗೆ ಭಂಗವಿಲ್ಲದೆ, ಸೌರಲೋಕವೇ ಮೊದಲಾದ ಸರ್ವಲೋಕಗಳಲ್ಲಿಯೂ ಇಷ್ಟಬಂದ ಕಡೆಗೆ ಸಂಚರಿಸಬಹುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಪುಷ್ಪಪೂಜಾ ವರ್ಣನವೆಂಬ ನೂರಅರವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಪುನಸ್ತ್ವಂ ದೇವದೇವಸ್ಯ ಭಾಸ್ಕರಸ್ಯ ಮಹೌಜಸಃ ।
ಪೂಜನೇ ಯತ್ಫಲಂ ಪ್ರೋಕ್ತಂ ತನ್ಮೇ ಬ್ರೂಹಿ ದ್ವಿಜೋತ್ತಮ ॥ ೧ ॥

॥ ಸುಮಂತುರುವಾಚ ॥

ಶೃಣು ತ್ವಂ ಹಿ ಮಹಾರಾಜ ಸರ್ವದಂ ಲೋಕಪೂಜಿತಂ ।
ಬ್ರಹ್ಮೇಶೋಪೇಂದ್ರದೇವಾನಾಂ ತ್ರಯಾಣಾಮಪಿ ಭಾರತ ॥ ೨ ॥

---

## ನೂರಅರವತ್ತನಾಲ್ಕನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು ಪ್ರಶ್ನೆಮಾಡು ವನಾಗಿ "ಎಲೈ ಬ್ರಾಹ್ಮಣಶ್ರೇಷ್ಠನೇ! ದೇವದೇವನೂ, ಮಹಾಬಲಶಾಲಿಯೂ ಆದ ಸೂರ್ಯನನ್ನು ಪೂಜಿಸುವುದರಿಂದ ಏನು ಫಲ? ಎಂಬುದನ್ನು ನನಗೆ ಹೇಳು" ಎಂದನು

೨. ಸುಮಂತುಮುನಿವರ್ಯರು ಅದಕ್ಕೆ ಉತ್ತರಕೊಡುವರಾಗಿ ಎಲೈ ಭರತ ಕುಲೋತ್ಪನ್ನನಾದ ಮಹಾರಾಜನೇ! ಕೇಳು; ಬ್ರಹ್ಮ, ವಿಷ್ಣು, ರುದ್ರ ಎಂಬ ಮೂವ ರಿಗೂ ಸರ್ವಪ್ರದವೂ ಮತ್ತು ಲೋಕಪೂಜಿತವೂ ಆದ ಈ ವಿಷಯವನ್ನು ಹೇಳು ತ್ತೇನೆ ಕೇಳು ;

ಸುಖಾಸೀನಂ ಸುರಜ್ಯೇಷ್ಠಂ ಮನೋವತ್ಯಾಂ ಚತುರ್ಮುಖಂ ।
ಪ್ರಣಮ್ಯ ಶಿರಸಾ ಭೂಮೌ ವಿಷ್ಣ್ವೀಶೌ ವಾಕ್ಯಮೂಚತುಃ ॥ ೩ ॥

ಯ ಏಷ ಭಗವಾನ್ದೇವಃ ಸಹಸ್ರಕಿರಣೋ ರವಿಃ ।
ಅಸ್ಯ ಯತ್ಪೂಜನೇ ಪುಣ್ಯಂ ಪ್ರಾಪ್ಯತೇ ತದ್ವದಸ್ವ ನೋ ॥ ೪ ॥

॥ ಬ್ರಹ್ಮೋವಾಚ ॥

ಸಾಧು ಸಾಧು ಜಗನ್ನಾಥ ಸಾಧು ಪೃಷ್ಟೋऽಸ್ಮಿ ವಾಮಿಹ ।
ತಸ್ಮಾಚ್ಛೃಣುತಮೇಕಾಗ್ರೌ ಗದತೋ ನಿಖಿಲಂ ಮಮ ॥ ೫ ॥

ಸ್ವಯಮುತ್ಪಾದ್ಯ ಪುಷ್ಪಾಣಿ ಯಃ ಸೂರ್ಯಂ ಪೂಜಯೇತ್ಸ್ವಯಂ ।
ತಾನಿ ಸಾಕ್ಷಾತ್ಪ್ರಗೃಹ್ಣಾತಿ ತದ್ಭಕ್ತ್ಯಾ ಸತತಂ ರವಿಃ ॥ ೬ ॥

ಯಸ್ತ್ವಾರಾಮಂ ರವೇಃ ಕುರ್ಯಾದಾಮ್ರಬಿಲ್ವಾದಿಶೋಭಿತಂ ।
ಜಾತೀವಿಜಯರಾಜಾರ್ಕಕರವೀರೈಃ ಸಕುಂಕುಮೈಃ ॥ ೭ ॥

---

೩. ಮನೋವತಿಯಲ್ಲಿ ಸುಖವಾಗಿ ಕುಳಿತಿರುವ ಸುರಜ್ಯೇಷ್ಠನಾದ ಚತುರ್ಮುಖಬ್ರಹ್ಮನ ಬಳಿಗೆ, ವಿಷ್ಣು, ಮಹೇಶ್ವರ, ಇವರು ಬಂದು ಭೂಮಿಗೆ ಶಿರಸ್ಸನ್ನಿಟ್ಟು ನಮಸ್ಕರಿಸಿ ಮುಂದೆ ಹೇಳುವಂತೆ ಮಾತಾಡಿದರು.

೪. " ಭಗವಂತನೂ, ಸಹಸ್ರಕಿರಣನೂ ಆದ ಈ ಸೂರ್ಯದೇವನನ್ನು ಪೂಜಿಸುವುದರಿಂದ ಯಾವ ಪುಣ್ಯಪ್ರಾಪ್ತಿಯಾಗುವುದೆಂಬುದನ್ನು ನಮಗೆ ಹೇಳು " ಎಂದು ರುದ್ರ ವಿಷ್ಣು ಇವರಿಬ್ಬರೂ ಬ್ರಹ್ಮನನ್ನು ಕೇಳಿದರು

೫. ಆಗ ಬ್ರಹ್ಮನು ಅವರನ್ನು ಕುರಿತು "ಎಲೈ ಜಗನ್ನಾಥನೇ! ನೀವಿಬ್ಬರೂ ಪ್ರಶ್ನೆಮಾಡಿದುದು ಯುಕ್ತವಾಗಿದೆ. ಅದೆಲ್ಲವನ್ನೂ ಹೇಳುವೆನು. ನೀವಿಬ್ಬರೂ ಒಂದೇ ಮನಸ್ಸಿನಿಂದ ಕೇಳಿರಿ "

೬. " ಯಾವನು ತಾನೇ ಸಾಕ್ಷಾತ್ತಾಗಿ ಬೆಳೆಯಿಸಿದ ಗಿಡಗಳ ಹೂಗಳಿಂದ ಸೂರ್ಯನನ್ನು ಯಾವಾಗಲೂ ಪೂಜಿಸುವನೋ, ಅವನ ಭಕ್ತಿಗೆ ಮೆಚ್ಚಿ ಸೂರ್ಯನೇ ಸಾಕ್ಷಾತ್ತಾಗಿ ಆ ಹೂಗಳನ್ನು ಸ್ವೀಕರಿಸುತ್ತಾನೆ.

೭. ಸೂರ್ಯಪೂಜಾರ್ಥವಾಗಿ ಮಾವಿನಗಿಡಗಳಿಂದಲೂ, ಬಿಲ್ವವೃಕ್ಷಗಳಿಂದಲೂ ಜಾಜೀ, ವಿಜಯ, ರಾಜ, ಎಕ್ಕ, ಕಣಿಗಲೆ, ಕೇಸರವೃಕ್ಷ ಇವುಗಳಿಂದಲೂ ಶೋಭಿತವಾದ ಪುಷ್ಪೋದ್ಯಾನವನ್ನು ಏರ್ಪಡಿಸಬೇಕು.

ಪುನ್ನಾಗನಾಗಬಕುಲೈರಶೋಕೆ ತಿಲಚಂಪಕೈಃ ।
ಅಗಸ್ತಿಕದಲೀಖಂಡೈಸ್ತಸ್ಯ ಪುಣ್ಯಫಲಂ ಶೃಣು ॥ ೮ ॥

ಯಾವದ್ಧಿ ಪತ್ರಂ ಕುಸುಮಂ ಬೀಜಂ ಸೂತೇ ಫಲಾನಿ ಚ ।
ತಾವದ್ವರ್ಷಸಹಸ್ರಾಣಿ ಸೂರಲೋಕೇ ಮಹೀಯತೇ ॥ ೯ ॥

ಸ ಘೃತಂ ಗುಗ್ಗುಲಂ ದದ್ಯಾದ್ರಾಜನ್ವಾ ಕುಂದುರುಂ ತಥಾ ।
ಚತುರ್ವೇದಿಗೃಹೇ ಜನ್ಮ ಪ್ರಾಪ್ನೋತಿ ಸತತಂ ಸುಖೀ ॥ ೧೦ ॥

ಕೃಷ್ಣಾಗುರುಂ ಚ ಕರ್ಪೂರಧೂಪಂ ದದ್ಯಾದ್ದಿವಾಕರೇ ।
ನೈರಂತರ್ಯೇಣ ಯಸ್ತಸ್ಯ ರಾಜನ್ ಪುಣ್ಯಫಲಂ ಶೃಣು ॥ ೧೧ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ಭುಕ್ತ್ವಾ ಸೂರ್ಯಪುರೇ ಭೋಗಾಂಸ್ತಸ್ಯಾಂತೇ ಕ್ಷ್ಮಾಧಿಪೋ ಭವೇತ್ ॥ ೧೨ ॥

---

೮. ಅಷ್ಟೇ ಅಲ್ಲದೆ ಪುನ್ನಾಗ, ನಾಗ, ವಕುಳ, ಅಶೋಕ, ತಿಲಕ, ಚಂಪಕ, ಅಗಸೆ, ಬಾಳೆಯಕಂದುಗಳು, ಇವುಗಳಿಂದ ಕೂಡಿದ ಉದ್ಯಾನವನ್ನೂ ರಚಿಸಬೇಕು. ಹೀಗೆ ರಚಿಸುವವನಿಗೆ ಲಭಿಸುವ ಪುಣ್ಯಫಲವನ್ನು ಹೇಳುವೆನು ಕೇಳು ?

೯. ಅವನು ನಿರ್ಮಿಸಿದ ಉದ್ಯಾನದಲ್ಲಿರುವ ವೃಕ್ಷಗಳಲ್ಲಿ ಎಷ್ಟು ಎಲೆಗಳೂ, ಹಣ್ಣುಗಳೂ, ಬೀಜಗಳೂ, ಹೂವುಗಳೂ ಆಗುವುವೋ, ಅಷ್ಟು ಸಹಸ್ರವರ್ಷಗಳವರೆಗೆ ಸೂರ್ಯಲೋಕದಲ್ಲಿ ಅವನು ಪೂಜಿತನಾಗುತ್ತಾನೆ.

೧೦. ಎಲೈ ರಾಜನೇ ! ಕೇಳು ; ಸೂರ್ಯನಧೂಪಕ್ಕೆ ಘೃತಮಿಶ್ರವಾದ ಗುಗ್ಗುಲವನ್ನೂ, ಕಂದುರು ಎಂಬ ಹಾಲುಮಡ್ಡಿಯನ್ನೂ ಸಮರ್ಪಿಸುವವನು, ಮುಂದಕ್ಕೆ ಚತುರ್ವೇದಪಾರಂಗತರಾದವರ ಮನೆಯಲ್ಲಿ ಹುಟ್ಟಿ ಯಾವಾಗಲೂ ಸುಖಿಯಾಗಿರುವನು.

೧೧. ಕೃಷ್ಣಾಗುರುವನ್ನೂ, ಕರ್ಪೂರಧೂಪವನ್ನೂ ಸೂರ್ಯನಿಗೆ ಸಮರ್ಪಿಸಬೇಕು. ಎಲೈ ರಾಜನೇ ! ಕೇಳು ; ಯಾವಾಗಲೂ ಯಾರು ಅವನಿಗೆ ಇಂಥ ಧೂಪವನ್ನು ಸಮರ್ಪಣೆಮಾಡುವರೋ, ಅವರಿಗೆ ಲಭಿಸುವ ಪುಣ್ಯಫಲವನ್ನು ಹೇಳುವೆನು ಕೇಳು ?

೧೨. ಹೀಗೆ ಧೂಪಸಮರ್ಪಣೆ ಮಾಡಿದವನು ಸಾವಿರಾರು ಕಲ್ಪಕೋಟಿಗಳವರೆಗೆ ಸೂರ್ಯಲೋಕದಲ್ಲಿ ದಿವ್ಯಭೋಗಗಳನ್ನು ಅನುಭವಿಸಿ, ಅನಂತರ ಭೂಮಿಯಲ್ಲಿ ಜನಿಸಿ ರಾಜನಾಗುವನು.

ಗುಗ್ಗುಲಂ ಘೃತಸಂಯುಕ್ತಂ ಯಕ್ಷೋ ಗೃಹ್ಣಾತಿ ಶಬ್ದಕೃತ್ ।
ಯಕ್ಷಾಹ್ವಯಸ್ಯ ದಾನೇನ ತಸ್ಯ ಲೋಕೇ ಮಹೀಯತೇ ॥ ೧೩ ॥

ಕೃಷ್ಣಾಂಶೌ ಕೃಷ್ಣಸಪ್ತಮ್ಯಾಂ ಯಃ ಸಾಜ್ಯಂ ಗುಗ್ಗುಲಂ ದಹೇತ್ ।
ಸ ಚಾಸೌ ಸೌರಮಾಸಾದ್ಯ ವರ್ಷಾಣಾಂ ಚ ದಶಾರ್ಬುದಂ ॥ ೧೪ ॥

ದೇವದಾರುಂ ನಮೇರುಂ ಚ ಶ್ರೀವಾಸಂ ಕುಂದುರುಂ ತಥಾ ।
ಶ್ರೀಫಲಂ ಚಾಜ್ಯಸಂಯುಕ್ತಂ ದಗ್ಧ್ವಾ ಶ್ರಿಯಮವಾಪ್ನುಯಾತ್ ॥ ೧೫ ॥

ಏವಂ ಸೌಗಂಧಿಕಂ ಧೂಪಂ ಷಟ್ಸಹಸ್ರಗುಣೋತ್ತರಂ ।
ಅಗುರುಂ ದಶಸಾಹಸ್ರಂ ಸಘೃತಂ ದ್ವಿಗುಣಂ ಭವೇತ್ ॥ ೧೬ ॥

ಅನಂತಫಲದಂ ದೈವಂ ಸದಾ ಕುಂದುರುಕಾಮುಕಂ ।
ದ್ವಿಸಹಸ್ರಪಲಾನಾಂ ತು ಮಹಿಷಾಕ್ಷಸ್ಯ ಗುಗ್ಗುಲೋ ॥ ೧೭ ॥

---

೧೩. ಘೃತಸಂಯುಕ್ತವಾದ ಗುಗ್ಗುಲವನ್ನು ಯಕ್ಷನು ಶಬ್ದಮಾಡುತ್ತಾ ಗ್ರಹಿಸುತ್ತಾನೆ. ಯಕ್ಷನಾಮಕನಿಗೆ ಇದನ್ನು ಸಮರ್ಪಿಸೋಣದರಿಂದ ಅವನ ಲೋಕದಲ್ಲಿ ಪೂಜಿತನಾಗುತ್ತಾನೆ.

೧೪. ಕೃಷ್ಣಪಕ್ಷದ ಸಪ್ತಮಿಯ ದಿವಸ ಆಜ್ಯಸಹಿತವಾದ ಗುಗ್ಗುಳವನ್ನು ಯಾವನು ಅಗ್ನಿಯಲ್ಲಿ ಹಾಕಿ ಧೂಪವನ್ನು ಅರ್ಪಿಸುವನೋ ಅವನು ಸೂರ್ಯಲೋಕವನ್ನು ಸೇರಿ ಹತ್ತುಅರ್ಬುದ ಸಂಖ್ಯೆಯ ವರ್ಷಗಳವರೆಗೆ ಅಲ್ಲಿ ವಾಸಮಾಡುತ್ತಾನೆ.

೧೫. ದೇವದಾರು, ನಮೇರು, ಶ್ರೀವಾಸ, ಕುಂದುರು, ಆಜ್ಯಸಹಿತವಾದ ಶ್ರೀಫಲ ಇವುಗಳನ್ನು ಧೂಪಾರ್ಥವಾಗಿ ಅಗ್ನಿಯಲ್ಲಿ ಹಾಕಿದರೆ ಐಶ್ವರ್ಯಾಭಿವೃದ್ಧಿಯನ್ನು ಹೊಂದುತ್ತಾನೆ.

೧೬. ಹಿಂದೆ ಹೇಳಿದ ಸೌಗಂಧಿಕ ಧೂಪವು ಆರುಸಾವಿರ ಪಾಲು ಅಧಿಕಗುಣವುಳ್ಳದ್ದು. ಅಗುರುಧೂಪವು ಹತ್ತುಸಾವಿರಪಾಲು ಗುಣವುಳ್ಳದ್ದು. ಅದರಲ್ಲಿಯೂ ಘೃತಸಹಿತವಾದ ಅಗುರುಧೂಪವು ಅದರ ಎರಡರಷ್ಟು ಎಂದರೆ ಇಪ್ಪತ್ತು ಸಾವಿರ ಗುಣವುಳ್ಳದ್ದು.

೧೭-೧೮. ಕುಂದುರುಕಾಮುಕವೆಂಬ ಧೂಪವು ದೇವಯೋಗ್ಯವೂ, ಅನಂತ ಫಲದಾಯಕವೂ ಆಗಿದೆ. ಎರಡುಸಾವಿರ ಪಲ ತೂಕವುಳ್ಳ ಮಿಶ್ರಣವಿಲ್ಲದೆ ಶುದ್ಧ

ದಗ್ಧ್ವಾರ್ಥಮವಿಮಿಶ್ರಸ್ಯ ಸೂರ್ಯತುಲ್ಯಃ ಪ್ರಜಾಯತೇ ।
ಶೋಧಯೇತ್ಪಾಪಸಂಯುಕ್ತಂ ಪುರುಷಂ ನಾತ್ರ ಸಂಶಯಃ ॥೧೮॥

ಕೃಷ್ಣಾಗುರುಭವಂ ಧೂಪಂ ತುಷಾಗ್ನಿರಿವ ಕಾಂಚನಂ ।
ಯೋsಂತಃಪುರಗೃಹಂ ಗಂಧೈಃ ಸುಗಂಧೈಃ ಪ್ರವಿಲೇಪಯೇತ್ ॥ ೧೯ ॥

ಕಪಾಟದ್ವಾರಕುಡ್ಯಾದಿ ತಿರ್ಯಗೂರ್ಧ್ವಂ ಸವೇದಿಕಂ ।
ವಾಸಯೇತ್ಪುಷ್ಪಮಾಲಾಭಿರ್ಧೂಪೈಶ್ಚಾಪಿ ಸುಗಂಧಿಭಿಃ ॥ ೨೦ ॥

ತಸ್ಯ ಪುಣ್ಯಂ ಯಥಾವತ್ತು ಯುವಯೋರ್ವಚ್ಮಿ ಕೃತ್ಸ್ನಶಃ ।
ಆ ಪೂರಯನ್ದಿಶಃ ಸರ್ವಾ ನಾನಾಗಂಧಸಮನ್ವಿತೈಃ ॥ ೨೧ ॥

ಕಲ್ಪಕೋಟಿಶತಂ ದಿವ್ಯಂ ತೇಜಸಾ ವಹ್ನಿಸಂಭವಃ ।
ಶಕ್ರವತ್ಪ್ರಜ್ವಲನ್ದೇವಃ ಸೂರ್ಯಲೋಕೇ ಮಹೀಯತೇ ॥ ೨೨ ॥

---

ವಾದ ಮಹಿಷಾಕ್ಷ ಗುಗ್ಗುಳವನ್ನು ಧೂಪಾರ್ಥವಾಗಿ ದಹಿಸಿದವನು, ಸೂರ್ಯನಿಗೆ ಸಮಾನನೇ ಆಗುತ್ತಾನೆ. ಇಂತಹ ಧೂಪವು ಮಹಾಪಾಪಯುಕ್ತನಾದ ಪುರುಷನನ್ನೂ ಕೂಡ ಪರಿಶುದ್ಧಿ ಮಾಡುವುದು, ಇದರಲ್ಲಿ ಸಂಶಯವಿಲ್ಲ.

೧೯. ತುಷಾಗ್ನಿಯು (ಬತ್ತದ ಹೊಟ್ಟಿನ ಬೆಂಕಿಯು) ಭಂಗಾರವನ್ನು ಹೇಗೆ ಥಳಥಳಿಸುವಂತೆ ಮಾಡುವುದೋ, ಹಾಗೆ ಕೃಷ್ಣಾಗುರುಧೂಪವು ಸೂರ್ಯಪ್ರತಿಮೆಯಿರುವ ಗರ್ಭಗೃಹದಲ್ಲಿ, ಸುವಾಸನಾಯುಕ್ತವಾದ ಗಂಧದ್ರವ್ಯಗಳನ್ನು ಗೋಡೆಗೆ ತೊಡೆದಂತೆ ಸುಗಂಧಮಯುವನ್ನಾಗಿ ಮಾಡುವುದು.

೨೦. ಕದಗಳು, ಬಾಗಿಲು, ಗೋಡೆ, ಇವುಗಳಲ್ಲೂ ; ಆಯಾ ವೇದಿಕೆಯ ಮುಂಭಾಗದಲ್ಲಿ ಅಡ್ಡಡ್ಡಲಾಗಿಯೂ, ಸುವಾಸನೆಯಾದ ಪುಷ್ಪಮಾಲಿಕೆಗಳನ್ನಲಂಕರಿಸಿ ಧೂಪಗಳಿಂದ ಸುವಾಸನಾಯುತವಾದುದನ್ನಾಗಿ ಮಾಡಬೇಕು.

೨೧. ಹೀಗೆ ಮಾಡುವುದರಿಂದ ಅವನಿಗೆ ಸ್ಥಿರವಾಗಿ ಲಭಿಸುವ ಪುಣ್ಯವನ್ನು ನಿಮ್ಮಿಬ್ಬರಿಗೂ ವಿಸ್ತಾರವಾಗಿ ಹೇಳುತ್ತೇನೆ ಕೇಳಿ, ಈ ರೀತಿ ಸೇವೆಮಾಡಿದವನು ನಾನಾಸುವಾಸನೆಗಳನ್ನು ಎಲ್ಲಾ ದಿಕ್ಕಿಗೂ ಬೀರುವವನಾಗಿ

೨೨. ತೇಜಸ್ಸಿನಲ್ಲಿ ಅಗ್ನಿಸಮಾನನೂ, ಇಂದ್ರನಂತೆ ಪ್ರಕಾಶಿಸುವವನೂ ಆಗಿ ನೂರುಕೋಟಿ ಕಲ್ಪಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

ತಸ್ಯಾಂತೇ ಧರ್ಮಶೇಷೇಣ ತ್ರೈಲೋಕ್ಯಾಧಿಪತಿರ್ಭವೇತ್ ।
ಶತಾವೃತಂ ತು ಯಃಕುರ್ಯಾ ದೇವಂ ಗಂಧೈರ್ಭಗಾಲಯಂ ॥ ೨೩ ॥

ಸ ಸರ್ವಶರ್ಮಸಂಯುಕ್ತಃ ಸೂರ್ಯತುಲ್ಯಪರಾಕ್ರಮಃ ।
ಸೂರ್ಯಲೋಕೇ ವಸೇದ್ದೇವೋ ಯುವಾಭ್ಯಾಂ ಸಂಪ್ರಪೂಜಿತಃ ॥ ೨೪ ॥

ತದ್ವಚ್ಛುಕ್ಲೈಶ್ಚ ಸಂವೀತಂ ಪಟ್ಟಸೂತ್ರೈರ್ವಿನಿರ್ಮಿತಂ ।
ದತ್ವೋಪವೀತಂ ಸೂರ್ಯಾಯ ಭವೇದ್ವೇದಾಂಗಪಾರಗಃ ॥ ೨೫ ॥

ವಾಸಾಂಸಿ ದತ್ವಾ ಚಿತ್ರಾಣಿ ಸೂರಲೋಕೇ ಮಹೀಯತೇ ।
ತ್ರುಟಿಮಾತ್ರಂ ತು ಯೋ ದದ್ಯಾದೂರ್ಣಾವಸ್ತ್ರಂ ಸಪಂಕಜಂ ॥ ೨೬ ॥

---

೨೩. ಸೂರ್ಯಲೋಕದ ವಾಸಮುಗಿದ ಮೇಲೆ ಭೂಲೋಕದಲ್ಲಿ ಜನಿಸಿ, ಅಲ್ಲಿ ತ್ರಿಲೋಕಾಧಿಪತಿಯೆನಿಸುತ್ತಾನೆ. ಹೀಗೆ ಭಕ್ತನು ಸುಗಂಧದ ಹೊಗೆಯು ಸೂರ್ಯಾಲಯದಲ್ಲಿ ನೂರಾವರ್ತಿ ಬಳಸುವಂತೆ ಮಾಡುವನು.

೨೪. ಹಾಗೆ ಮಾಡಿದವನು ಸರ್ವವಿಧಗಳಾದ ಸೌಖ್ಯಗಳಿಂದ ಯುಕ್ತನಾಗಿ ಸೂರ್ಯನಂತೆ ಪರಾಕ್ರಮವುಳ್ಳವನೂ, ಕಾಂತಿಯುಳ್ಳವನೂ ಆಗಿ ಸೂರ್ಯಲೋಕದಲ್ಲಿ ವಾಸಿಸುವನು. ಅವನನ್ನು ನೀವೂ ಸಹ ಸೇವಿಸುವಿರಿ.

೨೫. ಬಿಳಿಯದಾದ ಪಟ್ಟೆಯ ದಾರಗಳಿಂದ ರಚಿಸಿದ ಉಪವೀತವನ್ನು ಸೂರ್ಯನಿಗೆ ಸಮರ್ಪಿಸಿದವನು ವೇದವೇದಾಂಗಗಳಲ್ಲಿ ಪಾರಂಗತನಾಗುತ್ತಾನೆ.

೨೬. ಚಿತ್ರಯುಕ್ತವಾದ ವಸ್ತ್ರಗಳನ್ನು ಸೂರ್ಯನಿಗೆ ಸಮರ್ಪಿಸಿದವನು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ. ಕಮಲದ ಆಕಾರದ ಚಿತ್ರಸಹಿತವಾದ ಉಣ್ಣೆಯ ಬಟ್ಟೆಯನ್ನು, ಸೂರ್ಯನ ಶಿರಸ್ಸಿನಲ್ಲಿ ಧರಿಸುವಷ್ಟು ಸ್ವಲ್ಪಮಾತ್ರವಾದರೂ ಮಾಡಿಸಿ, ಯಾವನು ಸೂರ್ಯನಿಗೆ ಸಮರ್ಪಿಸುವನೋ ಅವನಿಗೆ ಲಭಿಸುವ ಪುಣ್ಯಫಲವನ್ನು ಹೇಳುತ್ತೇನೆ. ಕೇಳಿ;

ಭಾಸ್ಕರಸ್ಯೋತ್ತಮಾಂಗೇಷು ತಸ್ಯ ಪುಣ್ಯಂ ಬ್ರವೀಮ್ಯಹಂ ।
ಇಂದ್ರಸ್ಯಾರ್ಧಾಸನೇ ತಿಷ್ಠೇದ್ಯಾವದಿಂದ್ರಾಶ್ಚತುರ್ದಶ ॥ ೨೭ ॥

ಏವಂ ವಿತ್ತಾನುಸಾರೇಣ ಸರ್ವಂ ಜ್ಞೇಯಂ ಸಮಾಸತಃ ।
ಸರ್ವೇಷಾಂ ಹೇಮಪಾತ್ರಾಣಾಂ ಮುಕುಟಾನಾಂ ಚ ಸರ್ವಶಃ ॥ ೨೮ ॥

ಅರ್ಕಪತ್ರಪುಟಂ ಚೂರ್ಣಂ ಮಧುಪರ್ಣಸಮನ್ವಿತಂ ।
ಯೋ ನಿವೇದಯತೇಽರ್ಕಾಯ ಸೋಽಶ್ವಮೇಧಫಲಂ ಲಭೇತ್ ॥ ೨೯ ॥

ಶಾಲಿತಂಡುಲ ಪ್ರಸ್ಥಸ್ಯ ಕುರ್ಯಾದನ್ನಂ ಸುಸಂಸ್ಕೃತಂ ।
ಸೂರ್ಯಾಯ ಚ ಚರುಂ ದದ್ಯಾತ್ಸಪ್ತಮ್ಯಾಂ ತು ವಿಶೇಷತಃ ॥ ೩೦ ॥

ಸಂಯಾವಂ ಕೃಶರಂ ಪೂಪಂ ಪಾಯಸಂ ಯಾವಕಂ ತಥಾ ।
ದಧ್ಯೋದನರಸಾಲಾನ್ನವೋದಕಾನ್ಗುಡಪೂಪಕಾನ್ ॥ ೩೧ ॥

---

೨೭. ಆತನು ಹದಿನಾಲ್ಕು ಇಂದ್ರಪಟ್ಟಗಳು ಮುಗಿಯುವವರೆಗೂ, ಇಂದ್ರ ಲೋಕದಲ್ಲಿ ಪ್ರತಿಯೊಬ್ಬ ಇಂದ್ರನ ಜೊತೆಯಲ್ಲಿಯೂ ಅವನ ಸಮನಾಗಿ ಅರ್ಧಾಸನ ದಲ್ಲಿ ಕುಳಿತುಕೊಳ್ಳುವ ಗೌರವವನ್ನು ಹೊಂದಿ ಮೆರೆಯುತ್ತಾನೆ.

೨೮. ಇದೇ ಪ್ರಕಾರ ಸೂರ್ಯನಿಗೆ ಸಮರ್ಪಿಸುವ ಕಿರೀಟ, ಚಿನ್ನದ ಒಡವೆ ವಸ್ತುಗಳು, ಮುಂತಾದ ಸರ್ವವೂ ಪೂಜಿಸುವವನ ದ್ರವ್ಯಾನುಕೂಲಕ್ಕೆ ತಕ್ಕ ಹಾಗಿರ ಬೇಕೆಂದು ಒಟ್ಟಿನಲ್ಲಿ ತಿಳಿಯಬೇಕು.

೨೯. ಮುಕ್ತಾಚೂರ್ಣಸಹಿತವೂ, ಮಧುರವೂ ಆದ ನಾಗವಲ್ಲಿಯ ದಳವನ್ನು ಎಕ್ಕದೆಲೆಯ ದೊನ್ನೆಯಲ್ಲಿಟ್ಟು ಸೂರ್ಯನಿಗೆ ಸಮರ್ಪಿಸಿದವನು ಅಶ್ವಮೇಧ ಯಜ್ಞ ವನ್ನು ಮಾಡಿದ್ದರಿಂದ ಬರುವಂಥ ಫಲವನ್ನು ಹೊಂದುತ್ತಾನೆ.

೩೦. ಭತ್ತನನ್ನು ಕುಟ್ಟಿ ಮಾಡಿದ ಒಂದು ಸೇರು ಅಕ್ಕಿಯ ಅನ್ನವನ್ನು ಮಾಡಿ, ಅದಕ್ಕೆ ಹಾಲು ಮೊಸರು ಮುಂತಾದುವನ್ನು ಹಾಕಿ ಸಿದ್ಧಪಡಿಸಿದ ಚರುವನ್ನು, ವಿಶೇಷವಾಗಿ ಸಪ್ತಮಿಯ ದಿವಸ ಸೂರ್ಯನಿಗೆ ಸಮರ್ಪಿಸಬೇಕು.

೩೧. ಸಂಯಾವ (ಸಜ್ಜಿಗೆ) ಚಿಗುಳಿ, ಅಪೂಪ, ಜವೇಗೋಧಿಯ ರವೆಯ ಪಾಯಸ, ಮೊಸರನ್ನ, ರಸಾಲಾನ್ನ, (ಮಾವಿನಕಾಯನ್ನ) ಕಡುಬುಗಳು, ಬೆಲ್ಲದ ಎರೆ ಯಪ್ಪ ಇವನ್ನು ಸೂರ್ಯನ ನೈವೇದ್ಯಕ್ಕೆ ಸಮರ್ಪಿಸಬೇಕು.

ಯಾವಂತಸ್ತಂಡುಲಾಸ್ತಸ್ಮಿನ್ನೈವೇದ್ಯೇ ಪರಿಸಂಖ್ಯಯಾ ।
ತಾವದ್ವರ್ಷಸಹಸ್ರಾಣಿ ಸೂರಲೋಕೇ ಮಹೀಯತೇ ॥ ೩೨ ॥

ಗುಡಖಂಡಕೃತಾನಾಂ ಚ ಭಕ್ಷ್ಯಾಣಾಂ ವಿನಿವೇದನೇ ।
ಘೃತೇನ ಪ್ಲಾವಿತಾನಾಂ ಚ ಫಲಂ ಶತಗುಣಂ ಲಭೇತ್ ॥ ೩೩ ॥

ರಸಾಲಖಾದ್ಯಕಾದ್ಯಾನಾಂ ಭಕ್ಷ್ಯಾಣಾಂ ಫಲಮಿಷ್ಯತೇ ।
ತದರ್ಧಂ ಸಲಿಲಸ್ಯಾಪಿ ವಾಸಿತಸ್ಯ ನಿವೇದನೇ ॥ ೩೪ ॥

ಯಥಾಕಾಲೋಪಲಬ್ಧಾನಿ ಭಕ್ಷ್ಯಾಣಿ ವಿವಿಧಾನಿ ಚ ।
ನಿವೇದ್ಯಾರ್ಕಾಯ ಪರಮಂ ಸ್ಥಾನಂ ಪ್ರಾಪ್ನೋತಿ ಪೂಜನಾತ್ ॥ ೩೫ ॥

ಪ್ರಜ್ವಾಲ್ಯ ಘೃತದೀಪಂ ತು ಭಾಸ್ಕರಸ್ಯಾಲಯೇ ಶುಭಂ ।
ಅಗ್ನೇಯಂ ಯಾನಮಾರುಹ್ಯ ಗಚ್ಛೇತ್ಸೌಮನಸಂ ಪುರಂ ॥ ೩೬ ॥

---

೩೨. ಆ ನಿವೇದನಕ್ಕಾಗಿ ಸಿದ್ಧಮಾಡಿದ ಪಾಕಾದಿಗಳಿಗೋಸ್ಕರ, ಎಷ್ಟು ಸಂಖ್ಯೆಯ ಅಕ್ಕಿಯಕಾಳುಗಳು ವಿನಿಯೋಗವಾಗಿವೆಯೋ, ಅಷ್ಟುಸಹಸ್ರ ವರ್ಷಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೩೩ ಬೆಲ್ಲಹಾಕಿ ಮಾಡಿದ ಭಕ್ಷ್ಯಗಳನ್ನು ತುಪ್ಪದಲ್ಲಿ ಕರಿದು ನಿವೇದನ ಮಾಡಿದರೆ ಫಲವು ನೂರರಷ್ಟಾಗುತ್ತದೆ.

೩೪. ರಸಾಲ ಮುಂತಾದುವುಗಳಿಂದ ಸಿದ್ಧವಾದ ಖಾದ್ಯವಸ್ತುಗಳನ್ನು ಸಮರ್ಪಿಸಿದರೆ, ಬರುವ ಫಲದ ಅರ್ಧದಷ್ಟು ಫಲವು ಸುವಾಸನೆ ಕಟ್ಟಿದ ಸುಗಂಧೋದಕವನ್ನು ಸಮರ್ಪಣೆಮಾಡುವುದರಿಂದ ಬರುವುದು.

೩೫. ತತ್ತತ್ಕಾಲಾನುಗುಣವಾಗಿ ದೊರೆಯುವ ವಸ್ತುಗಳಿಂದ ಸಿದ್ಧಮಾಡಿದ ನಾನಾಬಗೆಯ ಭಕ್ಷ್ಯಗಳನ್ನು ಸೂರ್ಯನಿಗೆ ನಿವೇದನಮಾಡಿ ಪೂಜಿಸುವುದರಿಂದ, ಶ್ರೇಷ್ಠವಾದ ಸ್ಥಾನವನ್ನು ಪಡೆದು ಪೂಜ್ಯನಾಗುತ್ತಾನೆ.

೩೬. ಸೂರ್ಯದೇವಾಲಯದಲ್ಲಿ ಮಂಗಳಕರವಾದ ಘೃತದೀಪವನ್ನು ಹತ್ತಿಸಿದವನು, ಆಗ್ನೇಯವೆಂಬ ವಿಮಾನವನ್ನು ಆರೋಹಣ ಮಾಡಿ ಸೌಮನಸಪುರಕ್ಕೆ (ದೇವತೆಗಳ ಪಟ್ಟಣವಾದ ಅಮರಾವತಿಗೆ) ಹೋಗುತ್ತಾನೆ.

**ಯಃ ಕುರ್ಯಾತ್ಕಾರ್ತಿಕೇ ಮಾಸಿ ಶೋಭನಾಂ ದೀಪಮಾಲಿಕಾಂ ।**
**ಸಪ್ತಮ್ಯಾಮಥ ಷಷ್ಠ್ಯಾಂ ವಾಮಾವಾಸ್ಯಾಯಾಮಥಾಪಿ ವಾ ॥ ೩೭ ॥**

**ಭಾಸ್ಕರಾಯುತಸಂಕಾಶಃ ತೇಜಸಾ ಭಾಸಯನ್ದಿಶಃ ।**
**ದಿವ್ಯಾಭರಣಸಂಪನ್ನಃ ಕುಲಮುದ್ಧೃತ್ಯ ಸರ್ವಶಃ ॥ ೩೮ ॥**

**ಯಾವತ್ಪ್ರದೀಪಸಂಖ್ಯಾನಂ ಘೃತೇನಾಪೂರ್ಯ ಬೋಧಿತಂ ।**
**ತಾವದ್ವರ್ಷಸಹಸ್ರಾಣಿ ಸೂರ್ಯಲೋಕೇ ಮಹೀಯತೇ ॥ ೩೯ ॥**

**ದೀಪವೃಕ್ಷಮಥೋದ್ಬೋಧ್ಯ ಪರ್ವಸ್ವಾಯತನೇಷು ವೈ ।**
**ಪೂರ್ವಸ್ಮಾದ್ದ್ವಿಗುಣಂ ಪುಣ್ಯಂ ಲಭತೇ ನಾತ್ರ ಸಂಶಯಃ ॥ ೪೦ ॥**

**ದೀಪವೃಕ್ಷಂ ಸಮುದ್ಬೋಧ್ಯ ಭಾಸ್ಕರಾಯತನೇಷು ಭೋಃ ।**
**ಸರ್ವಲೋಹಮಯಂ ವೀರ ರವಿಲೋಕೇ ಮಹೀಯತೇ ॥ ೪೧ ॥**

---

೩೭-೩೮. ಕಾರ್ತೀಕಮಾಸದ ಷಷ್ಠೀ, ಸಪ್ತಮೀ, ಅಥವಾ ಅಮಾವಾಸ್ಯೆ ಈ ದಿವಸಗಳಲ್ಲಿ, ದೀಪೋತ್ಸವಕ್ಕಾಗಿ ದೀಪದ ಮಾಲೆಯನ್ನು ರಚಿಸುವವನು, ಹತ್ತುಸಹಸ್ರ ಸೂರ್ಯರಿಗೆ ಸಮನಾದ ತೇಜಸ್ಸಿನಿಂದ ದಿಕ್ಕುಗಳನ್ನು ಬೆಳಗಿಸುತ್ತಾ, ದಿವ್ಯಾಭರಣಗಳಿಂದ ಕೂಡಿದವನಾಗಿ ಸರ್ವಪ್ರಕಾರಗಳಿಂದಲೂ ತನ್ನ ಕುಲವನ್ನು ಉದ್ಧಾರಮಾಡುತ್ತಾನೆ.

೩೯. ಇದುವರೆಗೆ ನಾನು ತಿಳಿಸಿದ ಪ್ರಕಾರವಾಗಿ, ಯಾವನು ತುಂಬಾ ತುಪ್ಪವನ್ನು ಹಾಕಿ ಎಷ್ಟು ಸಂಖ್ಯೆಯ ದೀಪಗಳನ್ನು ಉರಿಸುವನೋ, ಅವನು ಅಷ್ಟು ಸಹಸ್ರ ವರ್ಷಗಳು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೪೦. ಪರ್ವಕಾಲಗಳಲ್ಲಿ ಸೂರ್ಯದೇವಾಲಯದಲ್ಲಿ ಅನೇಕ ದೀಪವೃಕ್ಷ (ತೇರಿನ ಆರತಿ) ಗಳನ್ನು ಹತ್ತಿಸಿದರೆ, ಅವನು ಹಿಂದೆ ಹೇಳಿದ ಪುಣ್ಯದ ಎರಡರಷ್ಟು ಪುಣ್ಯವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೪೧. ಅಯ್ಯಾ! ಸೂರ್ಯಾಲಯದಲ್ಲಿ ಸರ್ವಲೋಹಮಯವಾದ (ಪಂಚಲೋಹನಿರ್ಮಿತವಾದ) ದೀಪವೃಕ್ಷವನ್ನು ಹತ್ತಿಸಿದವನು ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಎಲ್ಲರಿಂದಲೂ ಪೂಜಿತನಾಗುತ್ತಾನೆ.

ಶಿರಸಾ ಧಾರಯೇದ್ದೀಪಂ ಭಾಸ್ಕರಸ್ಯಾಗ್ರತೋ ನಿಶಿ ।
ಲಲಾಟೇ ಚೈವ ಹಸ್ತಾಭ್ಯಾಂ ಸಮುದ್ಯುಕ್ತಸ್ತಥೋರಸಿ ॥ ೪೨ ॥

ಭಾಸ್ಕರಾಯುತ ಸಂಕಾಶೋವಿಮಾನೈರರ್ಕಸನ್ನಿಭೈಃ ।
ಕಲ್ಪಾಯುತಶತಂ ಚೈವ ಸೂರ್ಯಲೋಕೇ ಮಹೀಯತೇ ॥ ೪೩ ॥

ಅನ್ನದಾತಾ ತು ಯೋ ವೀರ ವೀರಲೋಕೇ ಮಹೀಯತೇ ।
ಭಾಸ್ಕರಸ್ಯಾಗ್ರತೋ ದತ್ವಾ ದರ್ಪಣಂ ನಿರ್ಮಲಂ ಶುಭಂ ॥ ೪೪ ॥

ಪರ್ಯಂಕೇ ಶೋಭಿತಂ ಕೃತ್ವಾ ಶ್ವೇತಮಾಲ್ಯೈಃ ಸಚಂದನೈಃ ।
ವ್ಯಕಾರ್ಕನಿರ್ಮಲಃ ಶ್ರೀಮಾನ್ದಿವ್ಯಾಭರಣರೂಪಧೃಕ್ ।
ಕಲ್ಪಾಯುತಸಹಸ್ರಾಣಿ ಸೂರಲೋಕೇ ಮಹೀಯತೇ ॥ ೪೫ ॥

ಕೃತ್ವಾ ಪ್ರದಕ್ಷಿಣಂ ಭಕ್ತ್ಯಾ ಶ್ರದ್ಧಧಾನೋ ರವೇರ್ನರಃ ।
ಅಶ್ವಮೇಧಸಹಸ್ರಸ್ಯ ಸುಖೇನ ಲಭತೇ ಫಲಂ ॥ ೪೬ ॥

---

೪೨-೪೩. ರಾತ್ರಿಯ ಕಾಲದಲ್ಲಿ ಸೂರ್ಯಪ್ರತಿಮೆಯ ಇದಿರಿಗೆ ತಲೆಯಮೇಲೆ ದೀಪವನ್ನು ಇರಿಸಿಕೊಂಡು ಸೇವಿಸಿದವನೂ, ಮತ್ತು ಹಣೆ, ಕೈಗಳು, ಎದೆ, ಇವುಗಳ ಮೇಲೂ ದೀಪವನ್ನು ಇಟ್ಟುಕೊಂಡು ಭಕ್ತಿಯಿಂದ ಸೇವಿಸುವವನೂ, ಹತ್ತುಸಹಸ್ರ ಸೂರ್ಯರಷ್ಟು ತೇಜಸ್ಸುಳ್ಳವನಾಗಿ ಸೂರ್ಯನಂತೆ ಪ್ರಕಾಶಮಾನವಾದ ವಿಮಾನಗಳನ್ನೇರಿ ಹತ್ತುಸಹಸ್ರ ಕಲ್ಪಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೪೪. ಎಲೈ ವೀರನೇ! ಕೇಳು, ಸೂರ್ಯಪ್ರೀತಿಗಾಗಿ ಯಾವನು ಅನ್ನದಾನ ಮಾಡುವನೋ ಅವನು ವೀರಲೋಕವನ್ನು ಪಡೆದು ಅಲ್ಲಿ ಪೂಜಿತನಾಗುತ್ತಾನೆ.

೪೫. ಬಿಳಿಯಹೂವಿನ ಹಾರಗಳು, ಚಂದನ, ದಿವ್ಯವಾದ ಆಭರಣಗಳು ಇವುಗಳಿಂದ ದೇವನನ್ನು ಅಲಂಕರಿಸಿ ವ್ಯಕಾರ್ಕನಂತೆ ನಿರ್ಮಲನೂ, ಸೌಂದರ್ಯಯುತನೂ ಆದ ದೇವನನ್ನು, ಮಂಚದ ಮೇಲೆ ಕೂರಿಸಿ ಸ್ವಾಮಿಯ ಇದಿರಿಗೆ ಸ್ವಚ್ಛವಾದ ಕನ್ನಡಿಯನ್ನಿಡಬೇಕು. ಹೀಗೆ ಶೋಭಿಸುವಂತೆ ಮಾಡಿದರೆ ಅಂಥವನು ಕಲ್ಪಕೋಟಿಕಾಲದವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೪೬. ಆಸ್ತಿಕ್ಯಬುದ್ಧಿಯುಳ್ಳ ಮನುಷ್ಯನು, ಭಕ್ತಿಯಿಂದ ಸೂರ್ಯನನ್ನು ಒಂದು ಪ್ರದಕ್ಷಿಣೆ ಮಾಡಿದರೂ, ಸಾವಿರ ಅಶ್ವಮೇಧಯಜ್ಞಗಳನ್ನು ಮಾಡಿದಷ್ಟು ಫಲವನ್ನು ಸುಖವಾಗಿ ಹೊಂದುತ್ತಾನೆ.

ಕೃತ್ವಾ ಪ್ರದಕ್ಷಿಣಂ ಯಸ್ತು ನಮಸ್ಕಾರಂ ಪ್ರಯೋಜಯೇತ್ ।
ರಾಜಸೂಯಾಶ್ವಮೇಧಾಭ್ಯಾಂ ಸಕಲಂ ವಿಂದತೇ ಫಲಂ ॥ ೪೭ ॥

ನಮಸ್ಕಾರಃ ಸ್ಮೃತೋ ಯಜ್ಞಃ ಸರ್ವಯಜ್ಞೋತ್ತಮೋತ್ತಮಃ ।
ನಮಸ್ಕೃತ್ವಾ ಸಹಸ್ರಾಂಶುಮಶ್ವಮೇಧಫಲಂ ಲಭೇತ್ ॥ ೪೮ ॥

ಪ್ರಣಮ್ಯ ದಂಡವದ್ಭೂಮೌ ನಮಸ್ಕಾರೇಣ ಯೋऽರ್ಚಯೇತ್ ।
ಸ ಯಾಂ ಗತಿಮವಾಪ್ನೋತಿ ನ ತಾಂ ಕ್ರತುಶತೈರಪಿ ॥ ೪೯ ॥

ಸರ್ವಯಜ್ಞೋಪವಾಸೇಷು ಸರ್ವತೀರ್ಥೇಷು ಯತ್ಫಲಂ ।
ಅಭಿಜ್ಞೋಪಹಾರೇಣ ಪೂಜಯಾ ಫಲಮಶ್ನುತೇ ॥ ೫೦ ॥

ಶ್ವೇತಂ ಮಹಾಧ್ವಜಂ ಕೃತ್ವಾ ಕೃತ್ವಾ ಚಾಪಂ ಚ ರಂಗಕಂ ।
ಕಿಂಕಿಣೀಜಾಲನಿರ್ಘೋಷಂ ಮಯೂರಚ್ಛತ್ರಭೂಷಿತಂ ॥
ಯಸ್ತ್ವರ್ಯಮ್ಣೇ ನರೋ ದದ್ಯಾಚ್ಛ್ರದ್ಧಯಾ ಪರಯಾನ್ವಿತಃ ॥ ೫೧ ॥

---

೪೭. ಸೂರ್ಯಮೂರ್ತಿಗೆ ಪ್ರದಕ್ಷಿಣೆಯನ್ನು ಮಾಡಿ ನಮಸ್ಕಾರ ಮಾಡಿದ ಮನುಷ್ಯನು, ರಾಜಸೂಯ ಅಶ್ವಮೇಧ ಈ ಎರಡು ಯಜ್ಞಗಳನ್ನು ಮಾಡಿದುದರಿಂದ ಲಭಿಸುವಷ್ಟು ಫಲವನ್ನು ಸ್ವಲ್ಪವೂ ಲೋಪವಿಲ್ಲದೆ ಹೊಂದುವನು.

೪೮. ನಮಸ್ಕಾರ ಮಾಡುವಿಕೆಯು ಎಲ್ಲ ಯಜ್ಞಗಳಿಗಿಂತ ಉತ್ತಮವಾದ ಯಜ್ಞವೆಂದು ಹೇಳಿದೆ. ಸಹಸ್ರಕಿರಣನಾದ ಸೂರ್ಯನಿಗೆ ನಮಸ್ಕಾರ ಮಾಡಿದವನು ಅಶ್ವಮೇಧಯಾಗ ಮಾಡಿದುದರಿಂದುಂಟಾಗುವ ಫಲವನ್ನು ಪಡೆಯುತ್ತಾನೆ.

೪೯, ದೀರ್ಘದಂಡಪ್ರಣಾಮದಿಂದ ಎಂದರೆ ಸಾಷ್ಟಾಂಗ ನಮಸ್ಕಾರಪೂರ್ವಕವಾಗಿ ಸೂರ್ಯನನ್ನು ಪೂಜಿಸಿದವನು, ಅದರಿಂದ ಪಡೆಯುವಷ್ಟು ಫಲವನ್ನು ಬೇರೆ ನೂರಾರುಯಾಗ ಮಾಡುವುದರಿಂದಲೂ ಸಹ ಹೊಂದಲಾರನು.

೫೦. ಭಕ್ತನು ನಿವೇದನಕ್ಕೆ ಯೋಗ್ಯವಾದ ವಸ್ತುಗಳನ್ನು ಸ್ವಾಮಿಗೆ ಉಪಾಹಾರವಾಗಿ ಸಮರ್ಪಿಸಿ, ಪೂಜೆಮಾಡಿದರೆ ಸಮಸ್ತ ಯಜ್ಞಾಚರಣೆ, ಉಪವಾಸವ್ರತ, ತೀರ್ಥಯಾತ್ರೆ ಇವುಗಳಿಂದ ಹೊಂದಬಹುದಾದಷ್ಟು ಫಲವನ್ನು ಹೊಂದುತ್ತಾನೆ.

೫೧-೫೩. ಭಕ್ತನಾದವನು ಬಿಳಿಯಬಣ್ಣದ ದೊಡ್ಡಬಾವುಟವನ್ನು ರಚಿಸಿ, ಅದರಲ್ಲಿ ಬಣ್ಣದಿಂದ ಬಿಲ್ಲಿನ ಆಕೃತಿಯನ್ನು ರಚಿಸಬೇಕು, ಕಿರುಗೆಜ್ಜೆಗಳನ್ನು ಧ್ವಜದ

ಸ ಶತೇನ ವಿಮಾನಾನಾಂ ಸರ್ವದೇವ ನಮಸ್ಕೃತಃ ।
ಮನ್ವಂತರಶತಂ ದೇವ ಮೋದತೇ ದಿವಿ ದೇವವತ್ ॥ ೫೨ ॥

ಧ್ವಜಮಾಲಾಕುಲಂ ಕುರ್ಯಾದ್ಯಃ ಪ್ರಾಂತೇಷು ಭಗಾಲಯಂ ।
ಮಹಾಧ್ವಜಾಷ್ಟಕಂ ಚಾಪಿ ದಿಗ್ವಿದಿಕ್ಷು ನಿಯೋಜಯೇತ್ ॥ ೫೩ ॥

ಸ ವಿಮಾನಸಹಸ್ರೇಣ ಧ್ವಜಮಾಲಾಕುಲೇನ ತು ।
ಕಲ್ಪಾಯುತಶತಂ ದಿವ್ಯಂ ಮೋದತೇ ದಿವಿ ಸೂರವತ್ ॥ ೫೪ ॥

ಶತಚಂದ್ರಾಂಶುವಿಮಲಂ ಮುಕ್ತಾದಾಮೋಪಶೋಭಿತಂ ।
ಮಣಿದಂಡಮಯಂ ಛತ್ರಂ ದದ್ಯಾದ್ವಾ ಕಾಂಚನಾದಿಕಂ ॥ ೫೫ ॥

ಸ ಧಾರ್ಯಮಾಣಚ್ಛತ್ರೇಣ ಹೇಮದಂಡೋಪಶೋಭಿನಾ ।
ಮೋದತೇ ಸೂರ್ಯಲೋಕೇ ತು ವಿಮಾನವರಮಾಸ್ಥಿತಃ ॥ ೫೬ ॥

---

ಅಂಚಿಗೆ ಕಟ್ಟಿ ಧ್ವನಿಯಾಗುವ ಹಾಗೆ ಮಾಡಬೇಕು. ಬಳಿಕ ನವಿಲುಗರಿಯಿಂದ ಛತ್ರಿಯಂತೆ ಮಾಡಿ ಅಲಂಕರಿಸಬೇಕು. ಈ ರೀತಿ ಸಿದ್ಧಮಾಡಿದ ಧ್ವಜವನ್ನು ಭಯಭಕ್ತಿಯಿಂದ ಅರ್ಯಮಾಸಂಜ್ಞಕನಾದ ಸೂರ್ಯನಿಗೆ ಸಮರ್ಪಿಸುವವನು ಸಾವಿರ ವಿಮಾನಗಳನ್ನು ಪಡೆದು ಸರ್ವದೇವನಮಸ್ಕೃತನೆನಿಸಿ ನೂರುಮನ್ವಂತರಗಳವರೆಗೆ ಸ್ವರ್ಗದಲ್ಲಿ ದೇವತೆಯಂತೆ ಸಂತೋಷಹೊಂದುತ್ತಾನೆ.

೫೩-೫೪. ತನ್ನ ಊರಿನ ಸುತ್ತಮುತ್ತ ಸಮೀಪ ಪ್ರದೇಶಗಳಲ್ಲಿರುವ ಸೂರ್ಯದೇವಾಲಯಗಳನ್ನು ಸಾಲಾದ ಬಾವುಟಗಳಿಂದ ಅಲಂಕರಿಸಿ, ಎಂಟು ದಿಕ್ಕುಗಳಲ್ಲಿಯೂ ದೊಡ್ಡಬಾವುಟವನ್ನು ಏರಿಸಿ ಶೃಂಗಾರಮಾಡಬೇಕು. ಹೀಗೆ ಮಾಡಿದ ಭಕ್ತನು ಧ್ವಜಮಾಲೆಯಿಂದ ಕೂಡಿದ ಸಹಸ್ರ ವಿಮಾನಗಳಲ್ಲಿ ಕುಳಿತು ಅಂತರಿಕ್ಷದಲ್ಲಿ ಹತ್ತು ಸಹಸ್ರಕಲ್ಪಗಳವರೆಗೆ ಸೂರ್ಯನಂತೆ ಸಂತೋಷಪಡುತ್ತಾನೆ.

೫೫. ನೂರುಚಂದ್ರರ ಕಿರಣಗಳಂತೆ ನಿರ್ಮಲವಾದ ಮುತ್ತಿನಸರಗಳಿಂದ ಶೋಭಿತವಾಗಿ, ಸ್ವರ್ಣದಂಡಮಯವೋ ಅಥವಾ ರತ್ನದಂಡಮಯವೋ ಆದ ಛತ್ರವನ್ನು ಸೂರ್ಯನಿಗೆ ಸಮರ್ಪಿಸಬೇಕು.

೫೬. ಹೀಗೆ ಸುವರ್ಣದಂಡದಿಂದ ಶೋಭಿಸುತ್ತಿರುವ ಛತ್ರಿಯನ್ನು ಸಮರ್ಪಿಸಿದವನು ಶ್ರೇಷ್ಠವಾದ ವಿಮಾನವನ್ನೇರಿ ಸೂರ್ಯಲೋಕದಲ್ಲಿ ಸಂತೋಷಪಡುತ್ತಾನೆ

ತತಸ್ತಸ್ಮಾಚ್ಚ್ಯುತೋ ಲೋಕಾನ್ನಿಸರ್ಗಾದ್ಭುವಮಾಗತಃ ।
ಭುಕ್ತೇ ಸಮುದ್ರಪರ್ಯಂತಾಮೇಕಚ್ಛತ್ರಾಂ ವಸುಂಧರಾಂ ॥ ೫೭ ॥

ಯಃ ಶೃಂಖಲಾಸಮಾಯುಕ್ತಾಂ ಮಹಾಘಂಟಾಂ ಮಹಾಸ್ವನಾಂ ।
ಕಾಂಸ್ಯಲೋಹಮಯೀಂ ವಾಪಿ ನಿಬಧ್ನೀಯಾದ್ಭಗಾಲಯೇ ॥ ೫೮ ॥

ಶೋಭನಃ ಸ್ಯಾನ್ನರಃ ಶ್ರೀಮಾನ್ ಭಗಸ್ಯಾತೀವವಲ್ಲಭಃ ।
ಸೂರ್ಯತುಲ್ಯಬಲೋ ಭೂತ್ವಾ ಸೂರ್ಯಲೋಕೇ ಮಹೀಯತೇ ॥ ೫೯ ॥

ಭೇರೀಮೃದಂಗ ಪಟಹಜರ್ಝರೀಮರ್ದಲಾದಿಕಂ ।
ದಂಶಕಾಂಸ್ಯಾದಿವಾದಿತ್ರಂ ಯೋ ಭಗಾಯ ನಿವೇದಯೇತ್ ॥ ೬೦ ॥

ಸ ವಿಮಾನೈರ್ಮಹಾಭಾಗೈರ್ವಂಶವೀಣಾಯುತಸ್ವನೈಃ ।
ಯುಗಾಂತಕಶತಂ ದಿವ್ಯಂ ಭಗಲೋಕೇ ಮಹೀಯತೇ ॥ ೬೧ ॥

---

೫೭. ಆ ಪ್ರಕಾರ ಪುಣ್ಯಮುಗಿದ ಮೇಲೆ ಆ ಲೋಕದಿಂದ ಚ್ಯುತನಾಗಿ ಭೂಲೋಕದಲ್ಲಿ ಬಂದು ಜನಿಸಿ, ಸಮುದ್ರಪರ್ಯಂತವಾದ ಭೂಮಿಗೆ ಏಕಚ್ಛತ್ರಾಧಿಪತಿಯಾಗುತ್ತಾನೆ

೫೮. ಧರ್ಮಪರರಾದ ಭಕ್ತರು, ದೊಡ್ಡದಾಗಿ ಧ್ವನಿಕೊಡುವ ಕಂಚಿನದೊಡ್ಡ ಗಂಟೆಯನ್ನು ಮಾಡಿಸಿ ತಂದು, ಸರಪಳಿಸಹಿತವಾಗಿ ಸೂರ್ಯದೇವಾಲಯದಲ್ಲಿ ತೂಗು ಹಾಕಬೇಕು.

೫೯. ಹೀಗೆ ಮಾಡಿದ ಭಕ್ತನು ಶ್ರೀಮಂತನೂ, ಸೂರ್ಯನಿಗೆ ಅತಿಪ್ರಿಯನೂ, ಮಂಗಳಕರನೂ ಆಗುವುದಲ್ಲದೆ, ಸೂರ್ಯನಿಗೆ ಸಮಾನವಾದ ಬಲಶಾಲಿಯಾಗಿ ಸೂರ್ಯ ಲೋಕದಲ್ಲಿ ಪೂಜಿತನಾಗುತ್ತಾನೆ.

೬೦. ಧರ್ಮನಿರತರಾದರು, ನಗಾರಿ, ತಮಟೆ, ಜರ್ಝರೀ, ಪಟಹ, ಮೊದಲಾದುವನ್ನೂ, ದಂಶ, ಕಂಚಿನ ತಾಳ, ಮೊದಲಾದ ವಾದ್ಯವನ್ನೂ ಭಗಸಂಜ್ಞಕನಾದ ಸೂರ್ಯನ ದೇವಾಲಯದಲ್ಲಿ ಸೇವಾರ್ಥವಾಗಿ ಸಮರ್ಪಿಸಬೇಕು.

೬೧. ಹೀಗೆ ಸಮರ್ಪಿಸಿದ ಮಾನವನು ಕೊಳಲು, ವೀಣೆ, ಮೊದಲಾದ ಅನೇಕ ವಾದ್ಯಧ್ವನಿಯುಕ್ತವಾದ ಶ್ರೇಷ್ಠವಾದ ವಿಮಾನಗಳಲ್ಲಿ ಕುಳಿತು ಸಂಚರಿಸುತ್ತಾ. ದೇವಮಾನದ ಅನೇಕ ಯುಗಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ

ಸುಸಂಗೀತಕದಾನೇನ ಸವಾದ್ಯೇನ ವಿಶೇಷತಃ ।
ಯಥೇಷ್ಟಂ ಭಾಸ್ಕರೇ ಲೋಕೇ ಮೋದತೇ ಕಾಲಮಕ್ಷಯಂ ॥ ೬೨ ॥

ಮಹಾಮಹಾಸ್ವನಂ ದತ್ವಾ ಶಂಖಯುಗ್ಮಂ ಭಗಾಲಯೇ ।
ಯುಗಕೋಟಿಶತಂ ದಿವ್ಯಂ ಭಗಲೋಕೇ ಮಹೀಯತೇ ॥ ೬೩ ॥

ವಿಮಾನಂ ಬಹುವರ್ಣಾಭಂ ಮಧ್ಯೇ ಪಂಕಜಭೂಷಿತಂ ।
ವಿಚಿತ್ರಮೇಕವರ್ಣಂ ವಾ ನವವಸ್ತ್ರೋಪಕಲ್ಪಿತಂ ॥ ೬೪ ॥

ಕಿಂಕಿಣೀಜಾಲಸಂಪನ್ನಂ ವರ್ಣಕೈಶ್ಚೋಪಶೋಭಿತಂ ।
ಪುಷ್ಪಮಾಲಾಪ್ರಭಂ ವಾಪಿ ಘಂಟಾಚಾಮರಭೂಷಿತಂ ॥ ೬೫ ॥

ಭಗಸ್ಯೋಪರಿ ಯೋ ದದ್ಯಾತ್ಸರ್ವರತ್ನೋಪಶೋಭಿತಂ ।
ದುಕೂಲಪಟ್ಟದೇವಾಂಗೈರ್ವಸ್ತ್ರೈರ್ವಾ ವರ್ಣಕಾನ್ವಿತೈಃ ॥ ೬೬ ॥

---

೬೨. ಅಷ್ಟಕ್ಕೆ ಅನುಕೂಲವಿಲ್ಲದ ಹಲವರು ಭಕ್ತರು, ಯಥೇಷ್ಟವಾಗಿ ಸುಶ್ರಾವ್ಯವಾದ ಸಂಗೀತಗಳು, ವಿಶೇಷತಃ ವಾದ್ಯವಾದನಗಳು, ಮುಂತಾದುವುಗಳನ್ನು ದೇವರಸಮ್ಮುಖದಲ್ಲಿ ಸದಾ ನಡೆಯುವಂತೆ ಮಾಡಬಹುದು. ಹೀಗೆ ಏರ್ಪಾಡು ಮಾಡುವಂಥ ಭಕ್ತನು ಅಪರಿಮಿತಕಾಲದವರೆಗೆ ಸೂರ್ಯಲೋಕದಲ್ಲಿ ವಾಸಿಸುತ್ತಾ ಸಂತೋಷಹೊಂದುತ್ತಾನೆ.

೬೩. ಧರ್ಮಾರ್ಥಿಗಳಾದ ಭಕ್ತರು ಭಗಸಂಜ್ಞಕನಾದ ಸೂರ್ಯದೇವಾಲಯದ ಉಪಯೋಗಕ್ಕಾಗಿ ಮಹಾಧ್ವನಿ ಕೊಡುವಂತಹ ಎರಡು ಶಂಖಗಳನ್ನು ಸಮರ್ಪಿಸಬೇಕು. ಈ ಪ್ರಕಾರ ಧರ್ಮಮಾಡಿದವನು ದೇವಮಾನದ ನೂರುಕೋಟಿ ಯುಗಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೬೪-೬೫. ಅನೇಕ ವರ್ಣಗಳಿಂದ ಕಾಂತಿಯುಕ್ತವಾಗಿ ಮಧ್ಯದಲ್ಲಿ ಕಮಲದಿಂದಲಂಕೃತವಾದುದೋ ಅಥವಾ ಏಕವರ್ಣಯುಕ್ತವಾಗಿರುವಂತೆ ವಿಚಿತ್ರವಾಗಿ ಹೊಸ ವಸ್ತ್ರಗಳಿಂದ ಸಿದ್ಧಪಡಿಸಲ್ಪಟ್ಟದೋ ಆಗಿ, ಕಿರುಗಂಟೆಗಳ ಸಮೂಹದಿಂದ ಕೂಡಿ ಅನೇಕ ಬಣ್ಣಗಳಿಂದ ಅಲಂಕೃತವಾದ ಹೂವಿನಮಾಲೆಗಳಿಂದ ಕಾಂತಿಯುಕ್ತವಾಗಿಯೂ, ಘಂಟೆ ಚಾಮರ, ಇವುಗಳಿಂದ ಭೂಷಿತವಾಗಿಯೂ,

೬೬. ಇರುವ ವಿಮಾನವನ್ನು ರಚಿಸಿ ಭಗಸಂಜ್ಞಕನಾದ ಸೂರ್ಯಪ್ರತಿಮೆಯ ಮೇಲೆ ಶೋಭಾಯಮಾನವಾಗುವಂತೆ ರಚಿಸಬೇಕು. ಮತ್ತು ರೇಷ್ಮೆಯಿಂದ ಮಾಡಿದ

ಪಟ್ಟಾದಿವಸ್ತ್ರತಂತೂನಾಂ ಪರಿಸಂಖ್ಯಾ ತು ಯಾ ಭವೇತ್ ।
ತಾವದ್ಯುಗಸಹಸ್ರಾಣಿ ಸೂರಲೋಕೇ ಮಹೀಯತೇ ॥ ೬೭ ॥

ಭಗಾಹುತ್ಯಾ ಜಗತ್ಸರ್ವಂ ಸೃಷ್ಟಿದ್ವಾರೇಣ ಧಾರ್ಯತೇ ।
ಅಗ್ನಿವತ್ಕಾರ್ಯ ವಚಸ್ಯುಕ್ತೋ ಹ್ಯಗ್ನಿರಸ್ಯಾತ್ಮಜಃ ಸದಾ ॥ ೬೮ ॥

ಯಸ್ತ್ವಗ್ನಿಕಾರ್ಯಂ ವಿಧಿವತ್ಕುರ್ಯಾನ್ನಿತ್ಯಂ ಭಗಾಲಯೇ ।
ಭಗಮುದ್ದಿಶ್ಯ ರಾಜೇಂದ್ರ ಸ ಯಾತಿ ಪರಮಾಂ ಗತಿಂ ॥ ೬೯ ॥

ಸರ್ವಾನ್ನಂ ಯಾವಕೋಪೇತಂ ಯಸ್ತು ನಿತ್ಯವಿಧಿಂ ಹರೇತ್ ।
ಪುಷ್ಪಧೂಪಜಲೋಪೇತಂ ಕಾಲೇ ಕಾಲೇ ವಿಶೇಷತಃ ॥ ೭೦ ॥

---

ದೇವಾಂಗವಸ್ತ್ರದಲ್ಲಿ ಸರ್ವರತ್ನಗಳನ್ನೂ ಬಿಗಿದು, ಶೋಭಿತವಾಗುವಂತೆ ಮಾಡಿಯೋ; ಅಥವಾ ನಾನಾವರ್ಣದ ವಸ್ತ್ರಗಳಿಗೆ ಮುತ್ತುರತ್ನಗಳಿಂದ ಬಿಗಿದೋ; ಆ ವಸ್ತ್ರವನ್ನು ಸೂರ್ಯನ ಮೇಲೆ ಕಟ್ಟಬೇಕು.

೬೭. ಹೀಗೆ ರಚಿಸಿದಾತನು, ಆ ವಸ್ತ್ರಗಳಲ್ಲಿ ಎಷ್ಟು ತಂತುಗಳಿರುವುವೋ ಅಷ್ಟು ಸಹಸ್ರ ಯುಗಗಳವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೬೮. ಭಗಸಂಜ್ಞಕನಾದ ಸೂರ್ಯನಿಗೆ ಆ ರೀತಿ ವಿಮಾನ ಸೇವೆ ಮಾಡಿದರೆ ಸೃಷ್ಟಿಯಕ್ರಮದ ಪ್ರಕಾರ ಸರ್ವಜಗತ್ತಿಗೂ ವಿಮಾನ ಧರಿಸಿದಂತೆಯೇ ಆಗುತ್ತದೆ. ಅಗ್ನಿಯಂತೆ ದಹಿಸುವ ಮಾರ್ಗವುಳ್ಳವನೆಂದು ಸೂರ್ಯನು ಮಾತಿನಲ್ಲಿ ಹೊಗಳಿಸಿಕೊಳ್ಳುತ್ತಾನೆ. ಆದ್ದರಿಂದ ಅಗ್ನಿಯು ಸದಾ ಇವನ ಮಗನೆನಿಸುತ್ತಾನೆ.

೬೯. ಸೂರ್ಯದೇವಾಲಯದಲ್ಲಿ ಭಗನನ್ನುದ್ದೇಶಿಸಿ ನಿತ್ಯವೂ ವಿಧಿವತ್ತಾಗಿ ಔಪಾಸನಾದಿ ಅಗ್ನಿಕಾರ್ಯಗಳನ್ನು ಮಾಡುವವನೂ, ಮತ್ತು ಯವಧಾನ್ಯಸಂಬಂಧವಾದ ಎಲ್ಲಾ ಬಗೆಯ ಅನ್ನವನ್ನೂ ಬಲಿಸಮರ್ಪಿಸುವವನೂ,

೭೦. ಆಯಾ ಕಾಲಕ್ಕೆ ಬೇಕಾಗುವ ಧೂಪ, ಅರ್ಘ್ಯೋದಕ, ಮುಂತಾದುವನ್ನು ನಿತ್ಯಪೂಜೆಗೋಸ್ಕರ ತೆಗೆದುಕೊಂಡು ಹೋಗಿ ಕೊಡುವವನೂ, ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ.

ಮಹಾಶ್ವೇತಾದಿಮಾತೃಣಾಂ ತ್ರಿಕಲ್ಪಾನಾಂ ಚ ಸರ್ವಶಃ ।
ಯಃ ಕೃತ್ವಾ ಸಕೃದಸ್ಯೈವಂ ಸರ್ವದಿಕ್ಷು ಬಲಿಂ ಹರೇತ್ ॥
ಸ ನರೋ ಬಹುವರ್ಷಾಣಿ ಶಾಂಡಿಲೇಯಪುರೇ ವಸೇತ್ ॥ ೭೧ ॥

ಸೌರಸಂಧ್ಯಾಬಲಿಂ ಕೃತ್ವಾ ದಿನಾಂತೇ ಸತತಂ ರವೇಃ ।
ವರ್ಷಾಯುತಶತಂ ಸಾಗ್ರಂ ಭಗಲೋಕೇ ಮಹೀಯತೇ ॥ ೭೨ ॥

ದಧ್ಯೋದನಪಯೋಭಿರ್ಯಃ ಪೂರಿತಂ ಪಾತ್ರಮಾವೃತಂ ।
ಪುಷ್ಪಧೂಪಾರ್ಚಿತಂ ಚೈವ ವಿತಾನೋಪರಿ ಶೋಭಿತಂ ॥ ೭೩ ॥

ಶಿರಸಾ ಧಾರಯೇತ್ಪಾತ್ರಂ ಶನೈರ್ಗಚ್ಛೇತ್ಪ್ರದಕ್ಷಿಣಂ ।
ರವ್ಯಾಯತನಪರ್ಯಂತೇ ಶಂಖವೀಣಾದಿನಿಸ್ವನೈಃ ॥ ೭೪ ॥

---

೭೧. ಮತ್ತು ತ್ರಿಚಕಲ್ಪಮಂತ್ರದಲ್ಲಿ ಉಕ್ತವಾದ ಮಹಾಶ್ವೇತಾ ಮಂತ್ರಮಾತೃ ದೇವತೆಗಳಿಗೆ, ಹೀಗೆ ವರ್ಷಕ್ಕೆ ಒಂದಾವರ್ತಿ ಎಲ್ಲಾ ದಿಕ್ಕುಗಳಲ್ಲಿಯೂ ಬಲಿಸಮರ್ಪಣೆ ಮಾಡುವವನೂ, ಬಹುವರ್ಷಗಳವರೆಗೆ ಶಾಂಡಿಲೇಯ ಪುರದಲ್ಲಿ (ತೇಜೋವತೀ ಪಟ್ಟಣದಲ್ಲಿ) ವಾಸಿಸುವನು.

೭೨. ಸಾಯಂಕಾಲದಲ್ಲಿ ಸೂರ್ಯನಿಗೆ ಸೌರಸಂಬಂಧಿಯಾದ ಸಂಧ್ಯಾಬಲಿ ಯನ್ನು ನಿತ್ಯವೂ ಸಮರ್ಪಿಸಿದವನು ಸಮಗ್ರವಾಗಿ ಹತ್ತುಲಕ್ಷ ವರ್ಷದವರೆಗೆ ಸೂರ್ಯ ಲೋಕದಲ್ಲಿ ಪೂಜಿತನಾಗಿರುತ್ತಾನೆ.

೭೩-೭೪. ಸೌರಸಂಧ್ಯಾ ಬಲಿಸಮರ್ಪಣೆ ಮಾಡುವಾತನು, ಮೊಸರನ್ನ ಮತ್ತು ಹಾಲು ಇವುಗಳನ್ನು ಪಾತ್ರೆಯಲ್ಲಿ ತುಂಬಿ ಅದರ ಮೇಲೆ ಆವರಣವನ್ನು ಮಾಡಿ (ಮುಸುಗುಹಾಕಿ) ಪುಷ್ಪ ಧೂಪ ಮೊದಲಾದವುಗಳಿಂದ ಅದನ್ನು ಪೂಜಿಸಿ ಮೇಲ್ಗಡೆ ಶೋಭಿಸುವಂತೆ ನಡೆ ಚಪ್ಪರವನ್ನು ಹಿಡಿಸಿಕೊಂಡು, ಆ ಪಾತ್ರೆಯನ್ನು ತಲೆಯ ಮೇಲೆ ಹೊತ್ತುಕೊಂಡು, ಶಂಖಧ್ವನಿ, ವಿಣಾವಾದನಧ್ವನಿಗಳನ್ನು ಮಾಡಿಸುತ್ತಾ ಹೊರಡಬೇಕು.

**ದರ್ಪಣೈರ್ಧೂಪಮಾಲ್ಯಾಭಿರ್ಗೇಯನೃತ್ಯೈಶ್ಚ ಶೋಭಿತಂ ।**
**ಭಾನೋರ್ಹಿ ಸ್ಮೃತಿಶೀಲಸ್ಯ ತಸ್ಯಪುಣ್ಯಫಲಂ ಶೃಣು ॥ ೭೫ ॥**

**ದಿವ್ಯಂ ವರ್ಷಸಹಸ್ರಂ ತು ದಿವ್ಯಂ ವರ್ಷಶತಂ ತಥಾ ।**
**ತಪಸ್ತಪ್ತಂ ಮಹತ್ತೇನ ಭವೇದೇವಂ ನ ಸಂಶಯಃ ॥ ೭೬ ॥**

**ಭಗಭಕ್ತಿಪ್ರಸನ್ನಾತ್ಮಾ ಯದ್ಯಪಿಸ್ಯಾತ್ಸ ಪಾಪಕೃತ್ ।**
**ಭಗಲೋಕೇ ವಸೇನ್ನಿತ್ಯಂ ಭಗಾನುಚರತಾಂ ಗತಃ ॥ ೭೭ ॥**

**ಕೃಷ್ಣಾಂ ತು ಷಷ್ಠೀಂ ನಕ್ತೇನ ಯಶ್ಚ ಕೃಷ್ಣಾಂ ಚ ಸಪ್ತಮೀಂ ।**
**ಇಹ ಭೋಗಾನವಾಪ್ನೋತಿ ಪರತ್ರ ಚ ಶುಭಾಂ ಗತಿಂ ॥ ೭೮ ॥**

---

೭೫. ಕನ್ನಡಿ, ಧೂಪಕುಂಡ, ಮಾಲ್ಯ ಇವುಗಳಿಂದಲೂ, ಗಾನ, ನರ್ತನ ಮುಂತಾದುವುಗಳಿಂದಲೂ, ಉತ್ಸವವು ಶೋಭಿಸುವಂತೆ ಮೆರವಣಿಗೆಮಾಡಿಕೊಂಡು, ಊರಿನ ಸುತ್ತಲೂ ಪ್ರದಕ್ಷಿಣೆಯಾಗಿ ದೇವಾಲಯಕ್ಕೆ ಬರಬೇಕು. ಅನಂತರ ಬಲಿ ಪ್ರದಾನಮಾಡಬೇಕು.

೭೬. ಈ ವಿಧಾನವನ್ನು ಮರೆಯದೆ ಜ್ಞಾಪಕವಿಟ್ಟುಕೊಂಡು, ವಿಧಿವಿಹಿತ ವಾಗಿ, ಸೌರಸಂಧ್ಯಾ ಬಲಿಪ್ರದಾನ ಕರ್ಮವನ್ನು ನಡೆಯಿಸುವವನಿಗೆ ಲಭಿಸುವ ಪುಣ್ಯ ಫಲವನ್ನು ಹೇಳುವೆನು ಕೇಳು; ಈ ಪ್ರಕಾರ ಮಾಡಿಸಿದವನು ದೇವಮಾನದ ಒಂದು ಸಾವಿರದನೂರು ವರ್ಷಗಳಕಾಲ ಮಹಾತಪಸ್ಸು ಮಾಡಿದುದರಿಂದ ಲಭಿಸುವಷ್ಟು ಫಲ ವುಂಟಾಗುವುದು.

೭೭. ಅವನಿಗೆ ಒಂದುವೇಳೆ ಪಾಪಸಂಘಟನೆಯಾಗಿದ್ದಾಗ್ಯೂ ಸೂರ್ಯಭಕ್ತಿ ಯಿಂದ ಅವನ ಮನಸ್ಸು ನಿರ್ಮಲವಾಗಿ ಸೂರ್ಯಲೋಕದಲ್ಲಿ ಯಾವಾಗಲೂ ಸೂರ್ಯನ ಅನುಚರನಾಗಿ ಪ್ರಕಾಶಿಸುತ್ತಾನೆ.

೭೮. ಕೃಷ್ಣಪಕ್ಷದ ಷಷ್ಠಿಯಲ್ಲಿಯೂ, ಸಪ್ತಮಿಯಲ್ಲಿಯೂ ನಕ್ತವ್ರತಾಚರಣ ಮಾಡುವವನು, ಇಹಲೋಕದಲ್ಲಿ ಭೋಗಗಳನ್ನನುಭವಿಸಿ, ಮುಂದೆ ಶುಭವಾದ ಗತಿ ಯನ್ನು ಪಡೆಯುತ್ತಾನೆ.

ಯೋऽಬ್ದಮೇಕಂ ತು ಕುರ್ವೀತ ನಕ್ತಂ ಭಗದಿನೇ ನರಃ ।
ಬ್ರಹ್ಮಚಾರೀ ಜಿತಕ್ರೋಧೋ ಭಗಾರ್ಚನಪರೋ ನರಃ ॥
ಅಯಾಚಿತಾತ್ಪರಂ ನಕ್ತಂ ತಸ್ಮಾನ್ನಕ್ತೇನ ವರ್ತಯೇತ್ ॥ ೭೯ ॥

ದೇವೈಸ್ತು ಭುಕ್ತಂ ಮಧ್ಯಾಹ್ನೇ ಪೂರ್ವಾಹ್ಣೇ ಋಷಿಭಿಸ್ತಥಾ ।
ಅಪರಾಹ್ಣೇ ತು ಪಿತೃಭಿಃ ಸಂಧ್ಯಾಯಾಂ ಗುಹ್ಯಕಾದಿಭಿಃ ॥ ೮೦ ॥

ಸರ್ವಾ ವೇಲಾ ಹ್ಯತಿಕ್ರಮ್ಯ ಸೌರಾಣಾಂ ಭೋಜನಂ ಪರಂ ।
ಭುಂಜಾನೋ ನಕ್ತಕಾಲೇ ತು ಸೂರ್ಯಭಕ್ತಿಪರಾಯಣಃ ॥ ೮೧ ॥

ಭಗಲೋಕಮವಾಪ್ನೋತಿ ಸುಮನಾಃ ಸುಮನೋವ್ರತಃ ।
ಭುಕ್ತ್ವಾ ಸೌಮನಸಾನ್ಲೋಕಾನ್ ರಾಜಾ ಭವತಿ ಭೂತಲೇ ॥ ೮೨ ॥

---

೭೯. ಒಂದು ವರ್ಷಕಾಲ ಪ್ರತಿಭಾನುವಾರವೂ ನಕ್ತಭೋಜನವ್ರತ ಮಾಡಿ, ಜಿತೇಂದ್ರಿಯನಾಗಿ, ಕೋಪವನ್ನು ವರ್ಜ್ಯಮಾಡಿ, ಸೂರ್ಯಪೂಜೆಯಲ್ಲಿ ನಿರತನಾಗಿರಬೇಕು. ಆಯಾಚಿತ ವ್ರತಕ್ಕಿಂತ ನಕ್ತವ್ರತವು ಶ್ರೇಷ್ಠವಾದುದರಿಂದ ನಕ್ತವ್ರತದಿಂದಲೇ ಜೀವಿಸಬೇಕು.

೮೦. ದೇವತೆಗಳು ಮಧ್ಯಾಹ್ನಕಾಲದಲ್ಲಿಯೂ, ಋಷಿಗಳು ಪೂರ್ವಾಹ್ಣದಲ್ಲಿಯೂ, ಪಿತೃಗಳು ಅಪರಾಹ್ಣದಲ್ಲಿಯೂ, ಗುಹ್ಯಕರೇ ಮೊದಲಾದವರು ಸಂಜೆಯಲ್ಲಿಯೂ, ಭೋಜನ ಮಾಡುತ್ತಾರೆ.

೮೧. ಹಿಂದೆ ಹೇಳಿದ ಮಧಾಹ್ನ, ಪೂವಾಹ್ಣ, ಅಪರಾಹ್ಣ ಮತ್ತು ಸಾಯಂಕಾಲ ಈ ನಾಲ್ಕು ವೇಳೆಗಳನ್ನೂ ಬಿಟ್ಟು ರಾತ್ರಿಯಕಾಲದಲ್ಲಿ ಸೌರಭೋಜನಮಾಡುವ ಸೂರ್ಯಭಕ್ತಿಪರಾಯಣನಾದ ಪುರುಷನು ಸೂರ್ಯಲೋಕವನ್ನು ಹೊಂದುವನು.

೮೨. ಅಲ್ಲಿ ದೇವತ್ವವನ್ನು ಹೊಂದಿ ದೇವವ್ರತವನ್ನು ಆಚರಿಸುತ್ತಾ, ದೇವಲೋಕಗಳ ಭೋಗಗಳನ್ನೆಲ್ಲಾ ಅನುಭವಿಸಿ, ಅನಂತರ ಭೂಲೋಕಕ್ಕೆ ಬಂದು ಇಲ್ಲಿ ರಾಜನಾಗುತ್ತಾನೆ.

**ಹವಿಷ್ಯಭೋಜನಂ ಸ್ನಾನಮಾಹಾರಸ್ಯ ಚ ಲಾಘವಂ ।**
**ಅಗ್ನಿಕಾರ್ಯಮಧಃಶಯ್ಯಾಂ ನಕ್ತಭೋಜೀ ಸಮಾಚರೇತ್ ॥ ೮೩ ॥**

**ಕೃಷ್ಣಷಷ್ಠ್ಯಾಂ ಪ್ರಯತ್ನೇನ ಕೃತ್ವಾ ನಕ್ತಂ ವಿಧಾನತಃ ।**
**ನರೋ ಮಾರ್ಗಶಿರೇ ಮಾಸಿ ಅಂಶುಮಾನಿತಿ ಪೂಜಯೇತ್ ॥ ೮೪ ॥**

**ವಿಧಿವತ್ಪ್ರಾಶ್ಯ ಗೋಮೂತ್ರಮನಾಹರೋ ನಿಶಿ ಸ್ವಪೇತ್ ।**
**ಅತಿರಾತ್ರಸ್ಯ ಯಜ್ಞಸ್ಯ ಫಲಮಾಪ್ನೋತಿ ಮಾನವಃ ॥ ೮೫ ॥**

**ಪುಷ್ಯೇಪ್ಯೇವಂ ಸಹಸ್ರಾಂಶುಂ ಭಾನುಮಂತಮುಶಂತಿ ಚ ।**
**ವಿಧಿವತ್ಪ್ರಾಶ್ಯ ಸರ್ಪಿಶ್ಚ ವಾಜಪೇಯಫಲಂ ಲಭೇತ್ ॥ ೮೬ ॥**

---

೮೩. ನಕ್ತಭೋಜನವ್ರತವನ್ನು ಮಾಡುವವನು, ಸ್ನಾನ, ಹವಿಷ್ಯಾನ್ನ ಭೋಜನ, ಲಘುವಾದ ಆಹಾರಸೇವನೆ, ಅಗ್ನಿಕಾರ್ಯ, ಹಾಸಿಗೆಹಾಸಿಕೊಳ್ಳದೆ ಬರೀ ನೆಲದಮೇಲೆ ಮಲಗುವುದು, ಇವುಗಳನ್ನೆಲ್ಲಾ ತಪ್ಪದೆ ನಡೆಸಬೇಕು.

೮೪. ಈ ವ್ರತ ಮಾಡಲಿಚ್ಛಿಯುಳ್ಳ ಮನುಷ್ಯನು, ಮಾರ್ಗಶಿರಕೃಷ್ಣ ಷಷ್ಠಿಯಲ್ಲಿ ಪ್ರಯತ್ನಪೂರ್ವಕವಾಗಿ, ವಿಧಿಪ್ರಕಾರ ಅಂಶುಮಾನ್ ಸಂಜ್ಞಕನಾದ ಸೂರ್ಯನನ್ನು ಪೂಜಿಸಬೇಕು.

೮೫. ಆ ದಿನ ನಕ್ತವ್ರತಮಾಡಿ ಪಾರಣೆಯಲ್ಲಿ ವಿಧಿಪ್ರಕಾರ ಗೋಮೂತ್ರವನ್ನು ಪ್ರಾಶನಮಾಡಿ, ಇನ್ನೇನೂ ಆಹಾರವನ್ನು ಸೇವಿಸದೆ ರಾತ್ರಿ ಮಲಗಬೇಕು. ಹೀಗೆ ಮಾಡಿದವನಿಗೆ ಅತಿರಾತ್ರವೆಂಬ ಯಜ್ಞವನ್ನು ಮಾಡಿದಷ್ಟು ಫಲವು ಬರುವುದು.

೮೬. ಪುಷ್ಯಕೃಷ್ಣ ಷಷ್ಠಿಯಲ್ಲಿ ಸಹಸ್ರಾಂಶು ಸಂಜ್ಞೆಯಿಂದ ಸೂರ್ಯನನ್ನು ಪೂಜಿಸಬೇಕು. ಪಾರಣೆಯಲ್ಲಿ ವಿಧಿಪ್ರಕಾರ ಘೃತವನ್ನು ಪ್ರಾಶನಮಾಡಿ ಉಳಿದುದನ್ನೆಲ್ಲಾ ಹಿಂದಿನ ಪಾರಣೆಯಂತೆಯೇ ಆಚರಿಸಬೇಕು. ಹೀಗೆ ಮಾಡಿದ ಮನುಷ್ಯನು ವಾಜಪೇಯ ಯಾಗ ಮಾಡಿದುದರಿಂದ ಬರುವಷ್ಟು ಪುಣ್ಯಫಲವನ್ನು ಹೊಂದುತ್ತಾನೆ.

ಮಾಘೇ ದಿವಾಕರಂ ನಾಮ ಕೃಷ್ಣಷಷ್ಠ್ಯಾಂ ನರೋತ್ತಮ ।
ನಿಶಿ ಪೀತ್ವಾ ತು ಗೋಕ್ಷೀರಂ ಗೋಮೇಧಫಲಮಾಪ್ನುಯಾತ್ ॥ ೮೭ ॥

ಮಾರ್ತಂಡಂ ಫಾಲ್ಗುನೇ ಮಾಸಿ ಪೂಜಯಿತ್ವಾ ಗವಾಂ ಪಯಃ ।
ಪಿಬೇತ್ತತಃ ಸೂರ್ಯಲೋಕೇ ಮೋದತೇ ಸೋಽಯುತಾಯುತಂ ॥ ೮೮ ॥

ಚೈತ್ರೇ ಮಾಸಿ ವಿವಸ್ವಂತಂ ಪೂಜಯಿತ್ವಾ ಸುಭಕ್ತಿಮಾನ್ ।
ಹವಿಷ್ಯಾಶೀ ಸೂರ್ಯಲೋಕೇಽಪ್ಸರೋಭಿಃ ಸಹ ಮೋದತೇ ॥ ೮೯ ॥

ವೈಶಾಖೇ ಚಂಡಕಿರಣಂ ಪೂಜಯೇಚ್ಚ ಪಯೋವ್ರತಃ ।
ವರ್ಷಾಣಾಮಯುತಂ ಸಾಗ್ರಂ ಮೋದತೇ ಸೂರ್ಯಸನ್ನಿಧೌ ॥ ೯೦ ॥

---

೮೭. ಅಯ್ಯಾ ರಾಜನೇ! ಮಾಘಕೃಷ್ಣಷಷ್ಠಿಯ ರಾತ್ರಿಯಲ್ಲಿ, ದಿವಾಕರ ಸಂಜ್ಞಕನಾದ ಸೂರ್ಯನನ್ನು ಪೂಜಿಸಿ, ಪಾರಣೆಯಲ್ಲಿ ವಿಧಿವತ್ತಾಗಿ ಗೋಕ್ಷೀರವನ್ನು ಪ್ರಾಶನಮಾಡಬೇಕು. ಈ ಪ್ರಕಾರ ವ್ರತಮಾಡಿದವನಿಗೆ ಗವಾಲಂಭಯಜ್ಞ ಮಾಡಿದುದರಿಂದ ಬರುವ ಪುಣ್ಯಫಲವು ಲಭಿಸುವುದು.

೮೮. ಫಾಲ್ಗುನ ಕೃಷ್ಣಷಷ್ಠಿಯಲ್ಲಿ ಮಾರ್ತಂಡಸಂಜ್ಞಕನಾದ ಸೂರ್ಯನನ್ನು ಪೂಜಿಸಿ, ಪಾರಣೆಯಲ್ಲಿ ಹಸುವಿನ ಹಾಲನ್ನು ಪ್ರಾಶನಮಾಡಬೇಕು. ಹೀಗೆ ಮಾಡಿದರೆ ಅವನು ನೂರುಕೋಟಿ ವರ್ಷಗಳಕಾಲ ಸೂರ್ಯಲೋಕದಲ್ಲಿ ಸಂತೋಷವಾಗಿರುತ್ತಾನೆ.

೮೯. ಚೈತ್ರಕೃಷ್ಣಷಷ್ಠಿಯಲ್ಲಿ ವಿವಸ್ವಂತಸಂಜ್ಞಕನಾದ ಸೂರ್ಯನನ್ನು ಭಕ್ತಿಯುತನಾಗಿ ಪೂಜಿಸಿ ಪಾರಣೆಯಲ್ಲಿ ಹವಿಷ್ಯಾನ್ನ ಪ್ರಾಶನಮಾಡಬೇಕು. ಹೀಗೆ ಮಾಡಿದವನು ಸೂರ್ಯಲೋಕದಲ್ಲಿ ಅಪ್ಸರಸೆಯರೊಡನೆ ಸಂತೋಷದಿಂದ ವಿಹರಿಸುತ್ತಾನೆ.

೯೦. ವೈಶಾಖ ಕೃಷ್ಣಷಷ್ಠಿಯಲ್ಲಿ ಚಂಡಕಿರಣ ಸಂಜ್ಞಕನಾದ ಸೂರ್ಯನನ್ನು ಪೂಜಿಸಿ, ಪಾರಣೆಯನ್ನ ಕ್ಷೀರಪ್ರಾಶನ ಮಾಡಬೇಕು. ಈ ರೀತಿ ಮಾಡಿದರೆ ಹತ್ತು ಸಾವಿರವರ್ಷ ಮುಗಿಯುವವರೆಗೆ ಸೂರ್ಯಸನ್ನಿಧಿಯಲ್ಲಿ ಸಂತೋಷವಾಗಿರುತ್ತಾನೆ.

ಜ್ಯೇಷ್ಠೇ ದಿವಸ್ಪತಿಂ ಪೂಜ್ಯ ಗವಾಂ ಶೃಂಗೋದಕಂ ಪಿಬೇತ್ ।
ಗವಾಂ ಕೋಟಿಪ್ರದಾನಸ್ಯ ನಿಖಿಲಂ ಫಲಮಾಪ್ನುಯಾತ್ ॥ ೯೧ ॥

ಆಷಾಢೇ ತ್ವರ್ಕನಾಮಾನಮಿಷ್ಟ್ವಾ ಪ್ರಾಶ್ಯ ಚ ಗೋಮಯಂ ।
ಪ್ರಯಾತ್ಯರ್ಕಸ್ಯ ಲೋಕಂ ತು ವರ್ಷಾಣಾಂ ಚ ಶತಂ ಶತಂ ॥ ೯೨ ॥

ಶ್ರಾವಣೇತ್ವರ್ಯಮನಾಮಾನಂ ಪೂಜಯಿತ್ವಾ ಪಯಃ ಪಿಬೇತ್ ।
ವರ್ಷಾಣಾಮಯುತಂ ಸಾಗ್ರಂ ಮೋದತೇ ಭಾಸ್ಕರಾಲಯೇ ॥ ೯೩ ॥

ಮಾಸಿ ಭಾದ್ರಪದೇ ಷಷ್ಠ್ಯಾಂ ಭಾಸ್ಕರಂ ನಾಮ ಪೂಜಯೇತ್ ।
ಪ್ರಾಶನೇ ಪಂಚಗವ್ಯಸ್ಯ ಸರ್ವಮೇಧಫಲಂ ಲಭೇತ್ ॥ ೯೪ ॥

ಮಾಸಿ ಚಾಶ್ವಯುಜೇ ಷಷ್ಠ್ಯಾಂ ಭಗಾಖ್ಯಂ ನಾಮ ಪೂಜಯೇತ್ ।
ಪಲಗೋಮೂತ್ರಪಾನೇನ ಚಾಶ್ವಮೇಧಫಲಂ ಲಭೇತ್ ॥ ೯೫ ॥

---

೮೧. ಜ್ಯೇಷ್ಠಕೃಷ್ಣಷಷ್ಠಿಯಲ್ಲಿ ದಿವಸ್ಪತಿ ಸಂಜ್ಞಕನಾದ ಸೂರ್ಯನನ್ನು ಪೂಜಿಸಿ ಪಾರಣೆಯಲ್ಲಿ ಗೋಶೃಂಗಜಲವನ್ನು ಪಾನಮಾಡಬೇಕು. ಈ ವ್ರತಾಚರಣದಿಂದ ಅವನು ಕೋಟಿ ಗೋದಾನದ ಫಲವನ್ನು ಸಮಗ್ರವಾಗಿ ಹೊಂದುವನು.

೯೨. ಆಷಾಢಕೃಷ್ಣಷಷ್ಠಿಯಲ್ಲಿ ಅರ್ಕಸಂಜ್ಞಕನಾದ ಸೂರ್ಯನನ್ನು ಆರಾಧಿಸಿ ಪಾರಣೆಯಲ್ಲಿ ಗೋಮಯಪ್ರಾಶನ ಮಾಡಬೇಕು. ಈ ಪ್ರಕಾರವಾಗಿ ಮಾಡಿದರೆ, ಹತ್ತುಸಹಸ್ರವರ್ಷಕಾಲ ಸೂರ್ಯಸಾಲೋಕ್ಯ ಪದವಿಯನ್ನು ಹೊಂದುತ್ತಾನೆ.

೯೩. ಶ್ರಾವಣಕೃಷ್ಣಷಷ್ಠಿಯಲ್ಲಿ ಆರ್ಯಮಾಸಂಜ್ಞಕನಾದ ಸೂರ್ಯನನ್ನು ಆರಾಧಿಸಿ ಪಾರಣೆಯಲ್ಲಿ ಕ್ಷೀರಪಾನಮಾಡಬೇಕು. ಇದರಿಂದ ಅವನು ಹತ್ತುಸಾವಿರವರ್ಷ ಪೂರ್ತಿ ಭಾಸ್ಕರಾಲಯದಲ್ಲಿರುತ್ತಾ ಸಂತೋಷವನ್ನು ಅನುಭವಿಸುವನು.

೯೪. ಭಾದ್ರಪದಕೃಷ್ಣಷಷ್ಠಿಯಲ್ಲಿ ಭಾಸ್ಕರ ಸಂಜ್ಞಕನಾದ ಸೂರ್ಯನನ್ನು ಪೂಜಿಸಬೇಕು. ಪಾರಣೆಯಲ್ಲಿ ಪಂಚಗವ್ಯವನ್ನು ಪ್ರಾಶನಮಾಡಬೇಕು ಹೀಗೆ ಮಾಡಿದವನು ಸರ್ವವಿಧವಾದ ಮೇಧಯಾಗಗಳ ಫಲವನ್ನೂ ಹೊಂದುವನು.

೯೫. ಆಶ್ವಯುಜ ಕೃಷ್ಣಷಷ್ಠಿಯಲ್ಲಿ ಭಗಸಂಜ್ಞಕನಾದ ಸೂರ್ಯನನ್ನು ಪೂಜಿಸಬೇಕು. ಪಾರಣೆಯಲ್ಲಿ ಒಂದು ಪಲಪ್ರಮಾಣದ ಗೋಮೂತ್ರವನ್ನು ಪ್ರಾಶನಮಾಡಬೇಕು. ಹೀಗೆ ಮಾಡಿದವನು ಅಶ್ವಮೇಧಯಜ್ಞದ ಫಲವನ್ನು ಹೊಂದುತ್ತಾನೆ.

ಮಾಸೇ ತು ಕಾರ್ತಿಕೇ ಷಷ್ಠ್ಯಾಂ ಶಕ್ರಾಖ್ಯಂ ನಾಮ ಪೂಜಯೇತ್ ।
ದೂರ್ವಾಂಕುರಂ ಸಕೃತ್ಪ್ರಾಶ್ಯ ರಾಜಸೂಯಫಲಂ ಲಭೇತ್ ॥ ೯೬ ॥

ವರ್ಷಾಂತೇ ಭೋಜಯೇದ್ವಿಪ್ರಾನ್ ಸೂರ್ಯಭಕ್ತಿಪರಾಯಣಾನ್ ।
ಪಾಯಸಂ ಮಧುಸಂಯುಕ್ತಂ ವಜ್ರೇಣ ಚ ಪರಿಪ್ಲುತಂ ॥ ೯೭ ॥

ಶಕ್ತ್ಯಾ ಹಿರಣ್ಯವಾಸಾಂಸಿ ಭಕ್ತ್ಯಾ ತೇಭ್ಯೋ ನಿವೇದಯೇತ್ ।
ನಿವೇದಯೇಚ್ಚ ಸೂರ್ಯಾಯ ಕೃಷ್ಣಾಂ ಗಾಂ ಚ ಪಯಸ್ವಿನೀಂ ॥ ೯೮ ॥

ವರ್ಷಮೇಕಂ ಚ ದೇವೇ ವೈ ನೈರಂತರ್ಯೇಣ ಯೋ ನಯೇತ್ ।
ಕೃಷ್ಣಷಷ್ಠೀವ್ರತಂ ಭಕ್ತ್ಯಾ ತಸ್ಯ ಪುಣ್ಯಫಲಂ ಶೃಣು ॥ ೯೯ ॥

ಸರ್ವಪಾಪವಿನಿರ್ಮುಕ್ತಃ ಸರ್ವಕಾಮಸಮನ್ವಿತಃ ।
ಮೋದತೇ ಸೂರ್ಯಲೋಕೇ ತು ಸ ನರಃ ಶಾಶ್ವತೀಃ ಸಮಾಃ ॥ ೧೦೦ ॥

---

೯೬. ಕಾರ್ತಿಕ ಕೃಷ್ಣಷಷ್ಠಿಯಲ್ಲಿ ಶಕ್ರಸಂಜ್ಞಕನಾದ ಸೂರ್ಯನ್ನು ಪೂಜಿಸಿ, ಪಾರಣೆಯಲ್ಲಿ ಒಂದುಸಲ ದೂರ್ವಾಂಕುರವನ್ನು ಪ್ರಾಶನಮಾಡಬೇಕು. ಈ ರೀತಿಯಲ್ಲಿ ಆಚರಿಸಿದವನು ರಾಜಸೂಯಯಾಗ ಮಾಡಿದ ಫಲವನ್ನು ಹೊಂದುತ್ತಾನೆ.

೯೭. ಈ ಪ್ರಕಾರ ಹನ್ನೆರಡು ತಿಂಗಳೂ ನಡೆಸಿ, ವರ್ಷದ ಕೊನೆಯಲ್ಲಿ ಸೂರ್ಯ ಭಕ್ತಿಪರಾಯಣರಾದ ಬ್ರಾಹ್ಮಣರಿಗೆ ಮಧು, ಆಜ್ಯಯುಕ್ತವಾದ ಪಾಯಸವನ್ನು ಭೋಜನಮಾಡಿಸಬೇಕು.

೯೮ ತನಗೆ ಶಕ್ತಿಯಿದ್ದಷ್ಟುಮಟ್ಟಿಗೆ ವಸ್ತ್ರದಾನ, ಹಿರಣ್ಯದಾನಗಳನ್ನು ಆ ವಿಪ್ರವರ್ಯರಿಗೆ ಕೊಡಬೇಕು. ಮತ್ತು ಕರೆಯುವ (ಹಾಲುಕೊಡುವ) ಕರಿಯ ಹಸು ವನ್ನು ಸೂರ್ಯಪ್ರೀತ್ಯರ್ಥವಾಗಿ ದಾನ ಕೊಡಬೇಕು.

೯೯. ಸೂರ್ಯದೇವನಲ್ಲಿ ಭಕ್ತಿಯಿಟ್ಟು ಈ ಕೃಷ್ಣಷಷ್ಠಿವ್ರತವನ್ನು ಒಂದು ಸಲವೂ ತಪ್ಪದೆ (ನಿರಂತರವಾಗಿ) ಆಚರಿಸುವವನಿಗೆ ಉಂಟಾಗುವ ಪುಣ್ಯಫಲವನ್ನು ಹೇಳುವೆನು ಕೇಳು;

೧೦೦. ಈ ವ್ರತಮಾಡಿದವನು ಹಿಂದೆ ತನಗೆ ಪಾಪಗಳು ಸಂಬಂಧಿಸಿದ್ದರೆ ಆ ಸಮಸ್ತಪಾಪಗಳಿಂದ ಬಿಡುಗಡೆ ಹೊಂದುವುದಲ್ಲದೆ, ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಪಡೆದು, ಸೂರ್ಯಲೋಕದಲ್ಲಿ ಅನೇಕ ವರ್ಷಗಳು ಸಂತೋಷವಾಗಿ ವಾಸಿಸುತ್ತಾನೆ.

ಪುಣ್ಯೇಷ್ವಹಃಸು ಸರ್ವೇಷು ವಿಷುವದ್ಗ್ರಹಣಾದಿಷು ।
ದಾನೋಪವಾಸಹೋಮಾದ್ಯೈರಕ್ಷಯಂ ಖಗ ಜಾಯತೇ ॥ ೧೦೧ ॥

॥ ಸುಮಂತುರುವಾಚ ॥

ಇತ್ಯುಕ್ತವಾನ್ ಪುರಾ ಭಾನುರ್ವರುಣಾಯ ವಿಶಾಂಪತೇ ।
ಕೃಷ್ಣಷಷ್ಠೀವ್ರತಂ ಪುಣ್ಯಂ ಸರ್ವಪಾಪಭಯಾಪಹಂ ॥ ೧೦೨ ॥

ಕೃತ್ವೇದಂ ಪುರುಷೋ ಭಕ್ತ್ಯಾ ಭಾಸ್ಕರಸ್ಯ ಮಹಾತ್ಮನಃ ।
ಪ್ರಯಾತಿ ಪರಮಂ ಸ್ಥಾನಂ ಭಾನೋರಮಿತತೇಜಸಃ ॥ ೧೦೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೂರ್ಯಷಷ್ಠೀವ್ರತ ವರ್ಣನಂ ನಾಮ ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ.

---

೧೦೧. ಅಯ್ಯಾ ಖಗನೇ! ಕೇಳು; ವಿಷುವತ್ಸಂಕ್ರಮಣ, ಗ್ರಹಣ ಮುಂತಾದ ಪುಣ್ಯದಿನಗಳಲ್ಲಿ ದಾನ, ಉಪವಾಸ, ಹೋಮ, ಮೊದಲಾದುವುಗಳನ್ನು ಮಾಡುವುದರಿಂದ ಅಕ್ಷಯವಾದ ಫಲವು ಲಭಿಸುವುದು ಎಂದನು.

೧೦೨. ಬಳಿಕ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳಲು ಪ್ರಾರಂಭಿಸಿ "ಅಯ್ಯಾ ಮಹಾರಾಜನೇ! ಈ ಪ್ರಕಾರ ಸೂರ್ಯದೇವನು ಪುಣ್ಯಕರವೂ, ಸರ್ವಪಾಪಕ್ಷಯಕರವೂ ಆದ ಕೃಷ್ಣಷಷ್ಠೀವ್ರತವನ್ನು ಅರುಣನಿಗೆ ಹೇಳಿದನು.

೧೦೩. ಮಹಾತ್ಮನಾದ ಭಾಸ್ಕರನ ಈ ವ್ರತವನ್ನು ಭಕ್ತಿಯಿಂದ ಮಾಡಿದವನು, ಅಮಿತತೇಜಸ್ಕನಾದ ಸೂರ್ಯನ ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾನೆ ಎಂದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೂರ್ಯಷಷ್ಠೀ ವ್ರತವರ್ಣನೆಯೆಂಬ ನೂರಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಅಹಂ ತೇ ಸಂಪ್ರವಕ್ಷ್ಯಾಮಿ ಸೂರ್ಯಸ್ಯ ವ್ರತಮುತ್ತಮಂ ।
ಧರ್ಮಾರ್ಥಕಾಮಮೋಕ್ಷಾಣಾಂ ಪ್ರತಿಪಾದನಮುತ್ತಮಂ ॥ ೧ ॥

ಪೌಷಮಾಸೇ ತು ಸಂಪ್ರಾಪ್ತೇ ಯಃ ಕುರ್ಯಾನ್ನಕ್ತಭೋಜನಂ ।
ಜಿತೇಂದ್ರಿಯಃ ಸತ್ಯವಾದೀ ಶಾಲಿಗೋಧೂಮಗೋರಸೈಃ ॥ ೨ ॥

ಪಕ್ಷಯೋಃ ಸಪ್ತಮೀಂ ಯತ್ನಾದುಪವಾಸೇನ ಯಾಪಯೇತ್ ।
ತ್ರಿಸಂಧ್ಯಮರ್ಚಯೇದ್ಭಾನುಂ ಶಾಂಡಿಲೇಯಂ ಚ ಸುವ್ರತ ॥ ೩ ॥

---

## ನೂರಅರವತ್ತೈದನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಮುಂದುವರಿಸಿ ಹೇಳುತ್ತಾರೆ—ಅಯ್ಯಾ ರಾಜನೇ ! ನಿನಗೆ ಉತ್ತಮವಾದ ಒಂದು ಸೂರ್ಯವ್ರತವನ್ನು ಹೇಳುತ್ತೇನೆ. ಈ ವ್ರತವನ್ನು ಮಾಡಿದರೆ ಧರ್ಮ, ಅರ್ಥ, ಕಾಮ, ಮತ್ತು ಮೋಕ್ಷಗಳೆಂಬ ಚತುರ್ವಿಧ ಫಲಪುರುಷಾರ್ಥಗಳೂ ಲಭಿಸುವುವು.

೨. ಪುಷ್ಯಮಾಸದ ಶುಕ್ಲಕೃಷ್ಣಪಕ್ಷಗಳ ಷಷ್ಠಿಗಳಲ್ಲಿ, ನಕ್ತಭೋಜನ ವ್ರತವನ್ನಾಚರಿಸಿ ಜಿತೇಂದ್ರಿಯನೂ, ಸತ್ಯವಾದಿಯೂ ಆಗಿ, ಕೇವಲ ಬತ್ತದಅಕ್ಕಿ, ಗೋಧಿ ಕ್ಷೀರ ಇವುಗಳಿಂದ ಮಾಡಿದ ಆಹಾರವನ್ನು ಮಾತ್ರ ಭೋಜನಮಾಡಬೇಕು.

೩. ಶುಕ್ಲ ಮತ್ತು ಕೃಷ್ಣಪಕ್ಷಗಳ ಸಪ್ತಮಿಯಲ್ಲಿ ಪ್ರಯತ್ನದಿಂದ ಉಪವಾಸ ಮಾಡಿ, ಮೂರು ಸಂಧ್ಯಾಕಾಲಗಳಲ್ಲಿಯೂ (ಪ್ರಾತಃ ಮಧ್ಯಾಹ್ನ ಮತ್ತು ಸಾಯಂಕಾಲ) ಸೂರ್ಯನನ್ನೂ, ಅಗ್ನಿಯನ್ನೂ ಪೂಜಿಸಬೇಕು.

**ಅಧಃಶಾಯೀ ಭವೇನ್ನಿತ್ಯಂ ಸರ್ವಭೋಗವಿವರ್ಜಿತಃ ।**
**ಮಾಸಿ ಪೂರ್ಣೇ ತು ಸಪ್ತಮ್ಯಾಂ ಘೃತಾದಿಭಿರರಿಂದಮ ॥ ೪ ॥**

**ಕೃತ್ವಾ ಸ್ನಾನಂ ಮಹಾಪೂಜಾಂ ಸೂರ್ಯದೇವಸ್ಯ ಭಾರತ ।**
**ನೈವೇದ್ಯಂ ಮೋದಕಪ್ರಸ್ಥಂ ಕ್ಷೀರಂ ಸಿದ್ಧಂ ನಿವೇದಯೇತ್ ॥ ೫ ॥**

**ಭೋಜಯೇಚ್ಚ ದ್ವಿಜಾನಷ್ಟೌ ಭಗಾರ್ಚಾಂ ಶುಭಲಕ್ಷಣಾಂ ।**
**ಗಾಂ ಚ ದದ್ಯಾನ್ಮಹಾರಾಜ ಕಪಿಲಾಂ ಭಾಸ್ಕರಾಯ ತು ॥ ೬ ॥**

**ಯ ಏವಂ ಕುರುತೇ ಪುಣ್ಯಂ ಸೂರ್ಯಸ್ಯ ವ್ರತಮುತ್ತಮಂ ।**
**ತಸ್ಯ ಪುಣ್ಯಫಲಂ ವಚ್ಮಿ ಸರ್ವಕಾಮಸಮನ್ವಿತಂ ॥ ೭ ॥**

**ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।**
**ಅಪ್ಸರೋಗಣಸಂಕೀರ್ಣೈರ್ಮಹಾವಿಭವಸಂಯುತೈಃ ॥ ೮ ॥**

---

೪. ಈ ವ್ರತಮಾಡುವವನು ಯಾವಾಗಲೂ ಸರ್ವಭೋಗವನ್ನೂ ತೊರೆದು ಅಧಃಶಯನಮಾಡಬೇಕು. ಎಲೈ ಶತ್ರುಗಳನ್ನು ನಿಗ್ರಹಿಸುವವನೇ! ಕೇಳು; ಘೃತಾಹಾರಾದಿಗಳ ಸೇವನೆಯಿಂದ ಮಾಸವು ಪೂರ್ಣವಾಗಲು ಮರುದಿನ ಸ್ನಾನಾದಿಗಳನ್ನು ಮಾಡಿ,

೫. ಸೂರ್ಯದೇವನಿಗೆ ಮಹಾಪೂಜೆಯನ್ನು ಮಾಡಿ, ಒಂದು ಪ್ರಸ್ಥ (ಒಂದು ಸೇರು) ಧಾನ್ಯದಿಂದ ಮಾಡಿದ ಕಡುಬನ್ನೂ, ಕಾಯಿಸಿ ಸಿದ್ಧವಾದ ಕ್ಷೀರವನ್ನೂ, ನಿವೇದನಮಾಡಬೇಕು.

೬. ಎಲೈ ಮಹಾರಾಜನೇ! ಬಳಿಕ ಶುಭಲಕ್ಷಣವುಳ್ಳ ಎಂಟುಮಂದಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಸೂರ್ಯಪ್ರೀತ್ಯರ್ಥವಾಗಿ ಕಪಿಲವರ್ಣದ ಗೋವನ್ನು ದಾನಕೊಡಬೇಕು.

೭. ಹೀಗೆ ಪುಣ್ಯಕರವೂ, ಉತ್ತಮವೂ, ಸರ್ವಕಾಮಸಮನ್ವಿತವೂ ಆದ ಈ ಸೂರ್ಯವ್ರತವನ್ನು ಮಾಡಿದವನಿಗೆ ಉಂಟಾಗುವ ಪುಣ್ಯಫಲವನ್ನು ಹೇಳುತ್ತೇನೆ ಕೇಳು;

೮. ಈ ವ್ರತಮಾಡಿದಾತನು ಕೋಟಿಸೂರ್ಯರಿಗೆ ಸಮಾನವೂ, ಬೇಕಾದ ಸರ್ವವಸ್ತುಗಳಿಂದ ತುಂಬಿದುದೂ, ಅಪ್ಸರಸ್ತ್ರೀವೃಂದದಿಂದ ವ್ಯಾಪ್ತವೂ, ಮಹಾಸಂಪತ್ತಿನಿಂದ ಕೂಡಿರುವುದೂ ಆದ ವಿಮಾನವನ್ನು ಪಡೆಯುತ್ತಾನೆ.

ಸಂಗೀತ ನೃತ್ಯವಾದ್ಯಾದ್ಯೈರ್ಗಂಧರ್ವಗಣಸೇವಿತೈಃ ।
ಧೋಧೂಯಮಾನಶ್ಚಾಮರೈಃ ಸ್ತೂಯಮಾನಃ ಸುರಾಸುರೈಃ ॥ ೯ ॥

ಸಹಸ್ರಕಿರಣಾಭಾಸಃ ಸೌರೈಃ ಸೂರ್ಯಸಮನ್ವಿತೈಃ ।
ಸ ಯಾತಿ ಪರಮಂ ಸ್ಥಾನಂ ಯತ್ರಾಸ್ತೇ ರವಿರಂಶುಮಾನ್ ॥ ೧೦ ॥

ರೋಮಸಂಖ್ಯಾ ತು ಯಾ ತಸ್ಯಾಃ ತತ್ಪ್ರಸೂತಿಃ ಕುಲೇಷು ಚ ।
ತಾವದ್ಯುಗಸಹಸ್ರಾಣಿ ಸೂರಲೋಕೇ ಮಹೀಯತೇ ॥ ೧೧ ॥

ತ್ರಿಃಸಪ್ತಕುಲಜೈಃ ಸಾರ್ಧಂ ಭೋಗಾನ್ ಭುಕ್ತ್ವಾ ಯಥೇಪ್ಸಿತಾನ್ ।
ಜ್ಞಾನಯೋಗಂ ಸಮಾಸಾದ್ಯ ಪುನರೇವ ಪ್ರಮುಚ್ಯತೇ ॥ ೧೨ ॥

ಯೋಗಾದ್ದುಃಖಾಂತಮಾಪ್ನೋತಿ ಜ್ಞಾನಯೋಗಃ ಪ್ರವರ್ತತೇ ।
ಸೌರಧರ್ಮಾದ್ಭವೇಜ್ಜ್ಞಾನಂ ಸೌರಧರ್ಮೋ ಭಗಾರ್ಚನಾತ್ ॥ ೧೩ ॥

---

೯. ಆ ವಿಮಾನದಲ್ಲಿ ಕುಳಿತು ಗಂಧರ್ವಗಣಗಳು, ಶೋಭಾಯಮಾನವಾಗುವಂತೆ ಹಾಡುವ ಸಂಗೀತ ನೃತ್ಯ ವಾದ್ಯಾದಿಗಳನ್ನು ಅವಲೋಕನಮಾಡುವನಾಗಿ, ಚಾಮರಗಳಿಂದ ಬೀಸಿಸಿಕೊಳ್ಳುತ್ತಾ, ದೇವತೆಗಳಿಂದಲೂ, ರಾಕ್ಷಸರಿಂದಲೂ ಸ್ತುತಿಸಲ್ಪಡುತ್ತಾನೆ.

೧೦. ಮತ್ತು ಸೂರ್ಯನಂತೆ ತೇಜೋವಂತನಾಗಿ ಪ್ರಕಾಶಿಸುತ್ತಾ, ಸೂರ್ಯನ ಜೊತೆಯಲ್ಲಿ ಇರತಕ್ಕ ಸೂರ್ಯಭಕ್ತರೊಡನೆ, ಸೂರ್ಯನು ವಾಸಿಸುತ್ತಿರುವ ಶ್ರೇಷ್ಠವಾದ ಸ್ಥಾನವನ್ನು ಹೊಂದುವನು.

೧೧. ಅವನ ಶಿರದಲ್ಲಿ ರೋಮಗಳೆಷ್ಟು ಉಂಟೋ ಅಷ್ಟು ಸಹಸ್ರಯುಗಗಳ ಪರ್ಯಂತವಾಗಿಯೂ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೧೨. ಅಲ್ಲಿ ಬೇಕಾದ ಭೋಗಗಳನ್ನನುಭವಿಸಿ, ತನ್ನ ಕುಲದಲ್ಲಿ ಹುಟ್ಟಿದ ಇಪ್ಪತ್ತೊಂದು ತಲೆಮಾರಿನವರ ಸಮೇತ ಜ್ಞಾನಯೋಗವನ್ನು ಪಡೆದು ಅನಂತರ ಮುಕ್ತನಾಗುತ್ತಾನೆ.

೧೩. ಆ ಮನುಷ್ಯನು ಈ ವ್ರತಯೋಗದಿಂದ ದುಃಖಾಂತವನ್ನು ಹೊಂದುವನು. ಅನಂತರ ಜ್ಞಾನಯೋಗವುಂಟಾಗುತ್ತದೆ. ಈ ಜ್ಞಾನಯೋಗವಾದರೋ

**ಇತ್ಯೇವಂ ತೇ ಸಮಾಖ್ಯಾತಂ ಭವಾರ್ಣವವಿಶೋಷಣಂ ।**
**ಸೌರಮೋಕ್ಷಕ್ರಮೋಪಾಯಂ ಸುರಾಶ್ರಯನಿಷೇವಣಂ ॥ ೧೪ ॥**

**ಮಾಘಮಾಸೇ ತು ಸಂಪ್ರಾಪ್ತೇ ಯಃ ಕುರ್ಯಾನ್ನಕ್ತಭೋಜನಂ ।**
**ಪಿಣ್ಯಾಕಂ ಘೃತಸಂಯುಕ್ತಂ ಭುಂಜಾನಃ ಸಜಿತೇಂದ್ರಿಯಃ ॥ ೧೫ ॥**

**ಸೋಪವಾಸಶ್ಚ ಸಪ್ತಮ್ಯಾಂ ಭವೇದುಭಯಪಕ್ಷಯೋಃ ।**
**ಘೃತಾಭಿಷೇಕಮಷ್ಟಮ್ಯಾಂ ಕುರ್ಯಾದ್ಭಾನೋರ್ನರಾಧಿಪ ॥**
**ಗಾಂ ಚ ದದ್ಯಾದ್ದಿನೇಶಾಯ ತರುಣೀಂ ನೀಲಸನ್ನಿಭಾಂ ॥ ೧೬ ॥**

**ಇಂದ್ರನೀಲಪ್ರತೀಕಾಶೈರ್ವಿಮಾನೈಃ ಶಿಖಿಸಂಯುತೈಃ ।**
**ಗತ್ವಾದಿತ್ಯಪುರಂ ರಮ್ಯಂ ಭೋಗಾನ್ ಭುಙ್ಕ್ತೇ ಯಥೇಪ್ಸಿತಾನ್ ॥೧೭॥**

---

ಸೌರಧರ್ಮದಿಂದುಂಟಾಗುವುದು. ಭಗಾರ್ಚನೆಯಿಂದ (ಸೂರ್ಯನ ಪೂಜೆಯಿಂದ) ಸೌರಧರ್ಮವುತ್ಪನ್ನವಾಗುವುದು.

೧೪. ಹೀಗೆ ಸಂಸಾರವೆಂಬ ಸಮುದ್ರವನ್ನು ಶೋಷಣಮಾಡುವ ವಿಧಾನವನ್ನೂ, ಸೂರ್ಯಭಕ್ತರಿಗೆ ಮೋಕ್ಷ ಸಂಪಾದನೋಪಾಯವನ್ನೂ, ದೇವಾಶ್ರಯವಿಧಾನವನ್ನೂ, ದೇವಸೇವೆಯ ಕ್ರಮವನ್ನೂ ನಿನಗೆ ಹೇಳಿದುದಾಯಿತು.

೧೫. ಮಾಘಮಾಸದಲ್ಲಿ ನಕ್ತಭೋಜನ ವ್ರತಮಾಡುವವನು ಎಣ್ಣೆತೆಗೆದ ಹಿಂಡಿಯನ್ನು ತುಪ್ಪದೊಡನೆ ಸೇವಿಸಬೇಕು. ಮತ್ತು ಅವನು ಜಿತೇಂದ್ರಿಯನಾಗಿರಬೇಕು.

೧೬. ಎಲೈ ರಾಜನೇ! ಕೇಳು; ಕೃಷ್ಣಪಕ್ಷ ಶುಕ್ಲಪಕ್ಷಗಳೆರಡರಲ್ಲೂ ಬರುವ ಸಪ್ತಮಿಯಲ್ಲಿ ಉಪವಾಸ ಮಾಡಿ ಅಷ್ಟಮಿಯದಿನ, ಸೂರ್ಯನಿಗೆ ಘೃತಾಭಿಷೇಕಮಾಡಬೇಕು. ಮತ್ತು ಸೂರ್ಯಪ್ರೀತಿಗಾಗಿ ಪ್ರಾಯದವಯಸ್ಸಿನ ಒಂದು ಕಪ್ಪುಹಸುವನ್ನು ದಾನಕೊಡಬೇಕು.

೧೭. ಈರೀತಿ ಮಾಡಿದವನು ಇಂದ್ರನೀಲಮಣಿಗೆ ಸಮವಾದ ಬಣ್ಣವುಳ್ಳದೂ ನವಿಲುಗಳಿಂದ ಎಳೆಯಲ್ಪಡುವುದೂ ಆದ ವಿಮಾನಗಳಲ್ಲಿ ಕುಳಿತು, ರಮ್ಯವಾದ ಆದಿತ್ಯಪುರಕ್ಕೆ ಹೋಗಿ ತನಗೆ ಇಷ್ಟವಾದ ಭೋಗಗಳನ್ನನುಭವಿಸುತ್ತಾನೆ.

ರಾಜೇಂದ್ರ ಫಾಲ್ಗುನೇ ಮಾಸಿ ಯಃ ಕುರ್ಯಾನ್ನಕ್ತಭೋಜನಂ ।
ಶ್ಯಾಮಾಕಕ್ಷೀರನೀವಾರೈರ್ಜಿತಕ್ರೋಧೋ ಜಿತೇಂದ್ರಿಯಃ ॥ ೧೮ ॥

ಷಷ್ಠ್ಯಾಂ ವಾಪ್ಯಥ ಸಪ್ತಮ್ಯಾಂ ಉಪವಾಸಪರೋ ನರಃ ।
ಅಷ್ಟಮ್ಯಾಂ ತು ಮಹಾಸ್ನಾನಂ ಪಂಚಗವ್ಯಘೃತಾದಿಭಿಃ ॥ ೧೯ ॥

ವಲ್ಮೀಕಜಾದಿಮೃದ್ಭಿಶ್ಚ ಗೋಮೂತ್ರಶಕೃದಾದಿಭಿಃ ।
ತ್ವಗ್ಭಿಶ್ಚ ಕ್ಷೀರವೃಕ್ಷಾಣಾಂ ಸ್ನಾಪಯಿತ್ವಾ ಪ್ರಮಾರ್ಜಯೇತ್ ॥ ೨೦ ॥

ಸೌರಭೇಯೀಂ ತತೋ ದದ್ಯಾದ್ರಕ್ತಾಭಾಂ ರಕ್ತಮಾಲಿನೇ ।
ಪದ್ಮರಾಗಪ್ರತೀಕಾಶೈರ್ವಿಮಾನೈರ್ಹಸ್ತಿಸಂಯುತಂ ॥
ಗತ್ವಾದಿತ್ಯಪುರಂ ರಮ್ಯಂ ಮೋದತೇ ಶಾಶ್ವತೀಃ ಸಮಾಃ ॥ ೨೧ ॥

---

೧೮. ಎಲೈ ರಾಜೇಂದ್ರನೇ! ಫಾಲ್ಗುಣಮಾಸದಲ್ಲಿ ಈ ನಕ್ತಭೋಜನವ್ರತ ಮಾಡಬೇಕಾದರೆ ಸಾವೇಧಾನ್ಯ, ಮೇರೆಯುಭತ್ತದಅಕ್ಕಿ, (ತೃಣಧಾನ್ಯ) ಹಾಲು ಇವು ಗಳಿಂದ ಸಿದ್ಧವಾದ ಆಹಾರವನ್ನು ಸೇವಿಸಬೇಕು.

೧೯. ಷಷ್ಠಿಯಲ್ಲಿ ಅಥವಾ ಸಪ್ತಮಿಯಲ್ಲಿ ಉಪವಾಸಪರನಾಗಿ ಇಂದ್ರಿಯ ನಿಗ್ರಹಮಾಡಿ ಕೋಪತಾಪಗಳಿಲ್ಲದೆ ಇರಬೇಕು. ಅಷ್ಟಮಿಯಲ್ಲಿ ಪಂಚಗವ್ಯ, ಘೃತ ಇವುಗಳಿಂದಲೂ

೨೦. ಮತ್ತು ಹುತ್ತದಮಣ್ಣು, ಗೋಮೂತ್ರ, ಗೋಮಯ ಮುಂತಾದುವು ಗಳಿಂದಲೂ ಮಹಾಭಿಷೇಕಮಾಡಬೇಕು. ಈ ಅಭಿಷೇಕಕಾಲದಲ್ಲಿ ಕ್ಷೀರವೃಕ್ಷದ ತೊಗಟೆಗಳಿಂದ ಪ್ರತಿಮೆಯನ್ನು ಉಜ್ಜಿ ಪ್ರಮಾರ್ಜನೆಮಾಡಿಬೇಕು.

೨೧. ರಕ್ತಪುಷ್ಪಪ್ರಿಯನಾದ ಸೂರ್ಯನಪ್ರೀತ್ಯರ್ಥವಾಗಿ ಕೆಂಪು ಬಣ್ಣದ ಗೋವನ್ನು ದಾನಕೊಡಬೇಕು. ಹೀಗೆ ಮಾಡಿದವನು ಪದ್ಮರಾಗದಂತೆ ಕಾಂತಿಯುಳ್ಳದೂ, ಆನೆಗಳಿಂದ ಯುಕ್ತವಾದುದೂ, ಆದ ವಿಮಾನಗಳ ಮೂಲಕ ರಮ್ಯವಾದ ಸೂರ್ಯಪುರಕ್ಕೆ ಹೋಗಿ ಅನೇಕ ಸಂವತ್ಸರಗಳವರೆಗೆ ಸಂತೋಷವನ್ನು ಹೊಂದುತ್ತಾನೆ.

ಮಾಸಿ ಚೈತ್ರೇ ತು ಸಂಪ್ರಾಪ್ತೇ ಯಃ ಕುರ್ಯಾನ್ನಕ್ತಭೋಜನಂ ।
ಶಾಲ್ಯನ್ನಂ ಪಾಯಸೈರ್ಯುಕ್ತಂ ಭುಂಜಾನಶ್ಚ ಜಿತೇಂದ್ರಿಯಃ ॥
ಭಾನವೇ ಪಾಟಲಾಂ ದದ್ಯಾದ್ವೈಷ್ಣವೀಂ ತರುಣೀಂ ನೃಪ ॥ ೨೨ ॥

ಪುಷ್ಪರಾಗಪ್ರಭೈರ್ಯಾನೈರ್ನಾನಾಹಂಸಾದಿಯಾಯಿಭಿಃ ।
ಗಚ್ಛೇತ್ಸೂರ್ಯಪುರಂ ರಮ್ಯಂ ಮೋದತೇ ಶಾಶ್ವತೀಃ ಸಮಾಃ ॥ ೨೩ ॥

ವೈಶಾಖೇ ವೀರ ಮಾಸೇ ತು ಯಃ ಕುರ್ಯಾನ್ನಕ್ತಭೋಜನಂ ।
ಸೂರ್ಯೇ ಖಂಡಾಜ್ಯಸಂಮಿಶ್ರಂ ಸಕೃದ್ದದ್ಯಾನ್ನಿವೇದನಂ ॥ ೨೪ ॥

ಗಾಂ ಚ ದದ್ಯಾನ್ಮಹಾರಾಜ ಭಾಸ್ಕರಾಯ ಶುಭಾನನಾಂ ।
ಸಾಮಾನ್ಯಂ ಚ ವಿಧಿಂ ಕುರ್ಯಾತ್ಪ್ರಯುಕ್ತೋ ಯೋ ಮಯಾ ತವ ॥೨೫॥

ಶುದ್ಧಸ್ಫಟಿಕಸಂಕಾಶೈರ್ಯಾನೈರ್ಬರ್ಹಿಣವಾಹನೈಃ ।
ಅಣಿಮಾದಿಗುಣೈರ್ಯುಕ್ತಃ ಸೂರ್ಯವದ್ವಿಚರೇದ್ದಿವಿ ॥ ೨೬ ॥

---

೨೨. ಅಯ್ಯಾ ರಾಜನೇ! ಚೈತ್ರಮಾಸದಲ್ಲಿ ನಕ್ತಭೋಜನವ್ರತ ಮಾಡುವವನು, ಪಾಯಸಗಳು, ಶಾಲ್ಯನ್ನ ಇವುಗಳನ್ನು ಭೋಜನಮಾಡಬೇಕು. ಜಿತೇಂದ್ರಿಯನಾದ ಅವನು, ಸೂರ್ಯಪ್ರೀತಿಗೋಸ್ಕರ ವೈಷ್ಣವೀಸಂಜ್ಞಕನಾದ, ಪ್ರಾಯದ ಕೆಂಪು ಹಸುವನ್ನು ದಾನಮಾಡಬೇಕು.

೨೩. ಹೀಗೆ ಮಾಡಿದರೆ ಪುಷ್ಯರಾಗದ ಕಾಂತಿಯಿಂದ ಕೂಡಿದುದೂ, ಹಂಸ ಮೊದಲಾದುವುಗಳಿಂದ ಸಾಗತಕ್ಕುದೂ, ಆದ ವಿಮಾನದ ಮೂಲಕ ರಮ್ಯವಾದ ಆದಿತ್ಯಪುರಕ್ಕೆ ಹೋಗಿ ಅನೇಕ ಸಂವತ್ಸರಗಳವರೆಗೆ ಸಂತೋಷಹೊಂದುತ್ತಾನೆ.

೨೪-೨೫. ಅಯ್ಯಾ ವೀರನಾದ ಮಹಾರಾಜನೇ! ಕೇಳು; ವೈಶಾಖಮಾಸದಲ್ಲಿ ನಕ್ತಭೋಜನವ್ರತ ಮಾಡಿ ಕಲ್ಲುಸಕ್ಕರೆ, ತುಪ್ಪ, ಇವು ಮಿಶ್ರವಾದ ನಿವೇದನವನ್ನು ಸೂರ್ಯನಿಗೆ ಒಂದಾವರ್ತಿ ಸಮರ್ಪಿಸಬೇಕು, ಮತ್ತು ಸೂರ್ಯಪ್ರೀತಿಗಾಗಿ ಲಕ್ಷಣವಾದ ಗೋವನ್ನು ದಾನಮಾಡಬೇಕು. ಈಗ ನಿನಗೆ ಹೇಳಿದುದು ವ್ರತವನ್ನು ಆಚರಿಸುವಾಗ ಅನುಸರಿಸುವ ಸಾಮಾನ್ಯವಿಧಿಯಾಗಿದೆ.

೨೬. ಹೀಗೆ ಆಚರಿಸಿದ ಮನುಷ್ಯನು, ಸ್ವಚ್ಛವಾದ ಸ್ಫಟಿಕದಂತೆ ವರ್ಣವುಳ್ಳದ್ದಾಗಿ, ಮಯೂರಯುಕ್ತಗಳಾದ ಯಾನಗಳಲ್ಲಿ ಕುಳಿತು, ಅಣಿಮಾದಿ ಸಿದ್ಧಿಗಳೊಡನೆ ಕೂಡಿ, ಅಂತರಿಕ್ಷದಲ್ಲಿ ಸೂರ್ಯನಂತೆ ಸಂಚರಿಸುತ್ತಾನೆ.

ಸಂಪ್ರಾಪ್ತೇ ಶ್ರಾವಣೇ ಮಾಸಿ ಯಃ ಕುರ್ಯಾನ್ನಕ್ತಭೋಜನಂ ।
ಕ್ಷೀರಷಷ್ಠಿಕಭಕ್ತೇನ ಸರ್ವಸತ್ವಹಿತೇ ರತಃ ॥ ೨೭ ॥

ಪೀತವರ್ಣಾಂ ಚ ಗಾಂ ದದ್ಯಾದ್ಭಾಸ್ಕರಾಯ ಮಹಾತ್ಮನೇ ।
ಸಾಮಾನ್ಯಮಖಿಲಂ ಕುರ್ಯಾದ್ವಿಧಾನಂ ಯತ್ಪ್ರಕೀರ್ತಿತಂ ॥ ೨೮ ॥

ಸ ವಿಚಿತ್ರೈರ್ಮಹಾಯಾನೈರ್ಹಂಸಸಾರಸಗಾಮಿಭಿಃ ।
ಗತ್ವಾದಿತ್ಯಪುರಂ ಶ್ರೀಮಾನ್ ಪೂರ್ವೋಕ್ತಂ ಲಭತೇ ಫಲಂ ॥ ೨೯ ॥

ವೀರ ಭಾದ್ರಪದೇ ಮಾಸಿ ಯಃ ಕುರ್ಯಾನ್ನಕ್ತಭೋಜನಂ ।
ಹುತಶೇಷಹವಿಷ್ಯಾಶೀ ವೃಕ್ಷಮೂಲಮುಪಾಶ್ರಿತಃ ॥ ೩೦ ॥

ಸುಪ್ಯಾದಾಯತನೇ ರಾತ್ರೌ ಸರ್ವಭೂತಾನುಕಂಪಕಃ ।
ದದ್ಯಾದ್ಗಾಂ ರೋಹಿಣೀಂ ಶ್ರೇಷ್ಠಾಂ ಭಾಸ್ಕರಾಯ ಮಹಾತ್ಮನೇ ॥ ೩೧ ॥

---

೨೭. ಶ್ರಾವಣಮಾಸದಲ್ಲಿ ನಕ್ತಭೋಜನವ್ರತ ಮಾಡುವವನು, ಷಷ್ಠಿಕಧಾನ್ಯದ ಅನ್ನವನ್ನು ಕ್ಷೀರಸಮೇತವಾಗಿ ಸೇವಿಸಬೇಕು. ಸರ್ವಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿ ಆಸಕ್ತನಾಗಬೇಕು.

೨೮. ಮತ್ತು ಮಹಾಮಹಿಮನಾದ ಸೂರ್ಯನ ಪ್ರೀತ್ಯರ್ಥವಾಗಿ ಹಳದಿಯ ಬಣ್ಣದ ಹಸುವನ್ನು ದಾನಕೊಡಬೇಕು. ಮಿಕ್ಕವಿಚಾರಗಳಲ್ಲಿ ಹಿಂದೆ ಹೇಳಿದ ಸಾಮಾನ್ಯ ವಿಧಿಯಂತೆ ಆಚರಿಸಬೇಕು.

೨೯ ಈ ಪ್ರಕಾರ ಯಾವನು ಆಚರಿಸುವನೋ ಅವನು ಹಂಸ, ಸಾರಸಪಕ್ಷಿ ಇವುಗಳಿಂದ ಯುಕ್ತಗಳಾದ ವಿಚಿತ್ರಗಳಾದ ಮಹಾಯಾನಗಳನ್ನೇರಿ, ಆದಿತ್ಯಪುರಕ್ಕೆ ಹೋಗಿ ಶ್ರೀಮಂತನಾಗಿ ಪೂರ್ವೋಕ್ತವಾದ ಫಲವನ್ನು ಹೊಂದುತ್ತಾನೆ.

೩೦. ಅಯ್ಯಾ ವೀರನೇ! ಭಾದ್ರಪದಮಾಸದಲ್ಲಿ ನಕ್ತಭೋಜನ ವ್ರತಮಾಡತಕ್ಕವನು, ಹೋಮಮಾಡಿ ಮಿಕ್ಕ ಹವಿಷ್ಯಾನ್ನವನ್ನು ಒಂದು ಮರದ ಬುಡದಲ್ಲಿ ಕುಳಿತು ಸೇವಿಸಬೇಕು.

೩೧. ಮತ್ತು ಯಾವ ಪ್ರಾಣಿಗಳಿಗೂ ಹಿಂಸೆ ಕೊಡದೆ, ಸರ್ವಭೂತದಯಾಪರನಾಗಿರಬೇಕು. ಆ ದಿನ ದೇವಾಲಯದಲ್ಲಿ ಮಲಗಬೇಕು. ಮಹಾತ್ಮನಾದ ಭಾಸ್ಕರನ ಪ್ರೀತಿಗಾಗಿ ರೋಹಿಣೀ ಸಂಜ್ಞಕವಾದ ಗೋವನ್ನು ದಾನಮಾಡಬೇಕು.

ನಿಶಾಕರಕರಪ್ರಖ್ಯೈರ್ವಜ್ರವೈಡೂರ್ಯ ಸನ್ನಿಭೈಃ ।
ಚಕ್ರವಾಕಸಮಾಯುಕ್ತೈರ್ವಿಮಾನೈಃ ಸಾರ್ವಕಾಮಿಕೈಃ ॥ ೩೨ ॥

ಗತ್ವಾದಿತ್ಯಪುರಂ ರಮ್ಯಂ ಸುರಾಸುರಸುವಂದಿತಂ ।
ಮೋದತೇ ಸ ಮಹಾಭಾಗೋ ಯಾವದಾಭೂತಸಂಪ್ಲವಂ ॥ ೩೩ ॥

ಶ್ರೀಮಾನಾಶ್ವಯುಜೇ ಮಾಸಿ ಯಃ ಕುರ್ಯಾನ್ನಕ್ತಭೋಜನಂ ।
ಮಿತಾಶನಂ ಪ್ರಭುಂಜಾನೋ ಜಿತಕ್ರೋಧೋ ಜಿತೇಂದ್ರಿಯಃ ॥ ೩೪ ॥

ದದ್ಯಾದ್ಗಾಂ ಪದ್ಮವರ್ಣಾಭಾಂ ಭಾನವೇऽಮಿತ ತೇಜಸೇ ।
ದಿವ್ಯಾಭರಣಸಂಪನ್ನಾಂ ತರುಣೀಂ ಚ ಪಯಸ್ವಿನೀಂ ॥ ೩೫ ॥

---

೩೨. ಹೀಗೆ ಮಾಡಿದರೆ ಚಂದ್ರಕಿರಣ ಸದೃಶವಾಗಿ ಬೆಳ್ಳಗಿರುವುದೂ, ವಜ್ರ ವೈಡೂರ್ಯಗಳಂತೆ ಥಳಥಳಿಸುವುದೂ, ಚಕ್ರವಾಕ ಪಕ್ಷಿಗಳಿಂದ ಕೂಡಿದುದೂ, (ಸರ್ವಕಾಮಸಮೃದ್ಧವೂ) ಬೇಕಾದ ವಸ್ತುಗಳಿಂದ ತುಂಬಿದುದೂ, ಆದ ವಿಮಾನಗಳಲ್ಲಿ ಕುಳಿತು,

೩೩. ದೇವಾಸುರರಿಂದ ವಂದಿತನಾಗಿ, ರಮ್ಯವಾದ ಆದಿತ್ಯಪುರವನ್ನು ಸೇರಿ ಅಲ್ಲಿ ಮಹಾಭಾಗ್ಯಶಾಲಿಯೆನಿಸಿ, ಜಗತ್ಪ್ರಳಯವಾಗುವವರೆಗೂ ಹರ್ಷದಿಂದ ಸುಖವಾಗಿರುತ್ತಾನೆ.

೩೪. ಆಶ್ವಯುಜಮಾಸದಲ್ಲಿ ನಕ್ತಭೋಜನ ವ್ರತವನ್ನಾಚರಿಸುವಾತನು, ಮಿತವಾಗಿ ಆಹಾರವನ್ನು ಸೇವಿಸಬೇಕು. ಆತನು ಕೋಪರಹಿತನೂ, ಇಂದ್ರಿಯನಿಗ್ರಹಿಯೂ ಆಗಿರಬೇಕು.

೩೫. ಅಮಿತತೇಜಸ್ವಿಯಾದ ಸೂರ್ಯನ ಪ್ರೀತಿಗಾಗಿ ದಿವ್ಯಾಭರಣದಿಂದ ಕೂಡಿದುದೂ, ಪ್ರಾಯದ ವಯಸ್ಸಿನದೂ, ಕೆಂಪುಬಣ್ಣವುಳ್ಳದೂ ಆದ ಕರೆಯುವ ಹಸುವೊಂದನ್ನು ದಾನಮಾಡಬೇಕು.

ಸ್ವಸ್ತಿಮೌಕ್ತಿಕ ಸಂಕಾಶೈರಿಂದ್ರನೀಲೋಪಶೋಭಿತೈಃ ।
ಜೀವಂಜೀವಕಸಂಯುಕ್ತವಿಮಾನೈಃ ಸಾರ್ವಕಾಮಿಕೈಃ ।
ಗಚ್ಛೇದ್ಭಾನುಸಲೋಕತ್ವಂ ಭುಂಜಾನಃ ಸ ಜಿತೇಂದ್ರಿಯಃ ॥ ೩೬ ॥

ದಿವಾಕರಾಯ ಗಾಂದ ದ್ಯಾಜ್ಜ್ವಲನಾರ್ಕಸಮಪ್ರಭಾಂ ।
ಪೂರ್ವೋಕ್ತಂ ಚ ವಿಧಿಂ ಕುರ್ಯಾತ್ಸೂರ್ಯತುಲ್ಯೋ ಭವೇನ್ನರಃ ॥ ೩೭ ॥

ಕಾಲಾನಲಶಿಖಾಪ್ರಖ್ಯೈರ್ಮಹಾಯಾನೈರ್ನಗೋಪಮೈಃ ।
ಮಹಾಸಿಂಹಕೃತಾರೋಪೈಃ ಸೂರ್ಯವನ್ಮೋದತೇ ಸುಖೀ ॥ ೩೮ ॥

ಮಾರ್ಗಶೀರ್ಷೇ ಶುಭೇ ಮಾಸಿ ಯಃ ಕುರ್ಯಾನ್ನಕ್ತಭೋಜನಂ ।
ಯಚ್ಚಾನ್ನಂ ಪಯಸಾ ಯುಕ್ತಂ ಭುಂಜಾನಃ ಸ ಜಿತೇಂದ್ರಿಯಃ ॥ ೩೯ ॥

---

೩೬. ಹೀಗೆ ಕ್ರಮವಾಗಿ ವ್ರತಮಾಡಿದರೆ ಆತನು ಶುಭಕರವಾದುದೂ, ಮುತ್ತಿನಂತೆ ಕಾಂತಿಯುಳ್ಳದೂ, ಇಂದ್ರನೀಲ ರತ್ನಗಳಿಂದ ಅಲಂಕೃತವಾದುದೂ, ಚಕೋರಪಕ್ಷಿಗಳಿಂದ ಯುಕ್ತವಾದುದೂ, ಸರ್ವಸಂಪತ್ತಿನಿಂದ ಸಮೃದ್ಧವಾದುದೂ, ಆದ ವಿಮಾನವನ್ನೇರಿ ಅಲ್ಲಿನ ಸುಖಗಳು ಅನುಭವಕ್ಕೆ ಬರುತ್ತಿದ್ದರೂ ಜಿತೇಂದ್ರಿಯನಾಗಿ ಸೂರ್ಯಸಾಲೋಕ್ಯವನ್ನು ಹೊಂದುತ್ತಾನೆ.

೩೭. ಅಗ್ನಿಯಂತೆಯೂ, ಸೂರ್ಯನಂತೆಯೂ ಕಾಂತಿಯುಳ್ಳ ಗೋವನ್ನೇ ಸೂರ್ಯಪ್ರೀತಿಗಾಗಿ ದಾನಕೊಡಬೇಕು. ಮಿಕ್ಕವಿಚಾರವನ್ನು ಪೂರ್ವೋಕ್ತವಾದ ಸಾಮಾನ್ಯವಿಧಿಯಂತೆ ಆಚರಿಸಬೇಕು. ಹೀಗೆ ಆಚರಿಸಿದ ಮನುಷ್ಯನು ಸೂರ್ಯನಿಗೆ ಸಮಾನನೇ ಆಗುತ್ತಾನೆ.

೩೮. ಅಲ್ಲದೆ ಆತನು ಕಾಲಾಗ್ನಿಜ್ವಾಲೆಗೆ ಸಮಾನವೂ, ಪರ್ವತಸದೃಶವೂ ಮಹಾಸಿಂಹಪ್ರತಿಮೆಗಳ ಅಂಕಿತಯುಕ್ತವೂ, ಆದ ಮಹಾಯಾನಗಳನ್ನೇರಿ ಸೂರ್ಯ ಲೋಕಕ್ಕೆ ಹೋಗಿ, ಸೂರ್ಯನಂತೆ ಸುಖಿಯಾಗಿ ಸಂತೋಷಪಡುತ್ತಾನೆ.

೩೯. ಶುಭಕರವಾದ ಮಾರ್ಗಶಿರಮಾಸದಲ್ಲಿ ನಕ್ತಭೋಜನ ವ್ರತಮಾಡು ವಾತನು ಹಾಲನ್ನು ಮತ್ತು ಅನ್ನವನ್ನು ಸೇವಿಸಬೇಕು. ಮತ್ತು ಜಿತೇಂದ್ರಿಯನಾಗಿರ ಬೇಕು.

ಪ್ರಯಚ್ಛೇದ್ಗಾಂ ತಥಾ ರಕ್ತಾಂ ನಾನಾಲಂಕಾರಭೂಷಿತಾಂ ।
ಸೂರ್ಯಾಯ ಕುರುಶಾರ್ದೂಲ ವಿಧಿಂ ಚಾಪಿ ಸಮಾಚರೇತ್ ॥ ೪೦ ॥

ಸಿತಪದ್ಮನಿಭೈರ್ಯಾನೈಃ ಶ್ವೇತಾಶ್ವರಥಸಂಯುತೈಃ ।
ಗತ್ವಾ ತತ್ರ ಪುರೇ ರಮ್ಯೇ ಪ್ರಭಯಾ ಪರಯಾನ್ವಿತಃ ॥ ೪೧ ॥

ಅಹಿಂಸಾಸತ್ಯವಚನಮಸ್ತೇಯಂ ಕ್ಷಾಂತಿರಾರ್ಜವಂ ।
ತ್ರಿಷವಣಾಗ್ನಿಹವನಂ ಭೂಶಯ್ಯಾ ನಕ್ತಭೋಜನಂ ॥ ೪೨ ॥

ಪಕ್ಷಯೋರುಭಯೋರ್ಮಾರ್ಗೇ ಸಪ್ತಮ್ಯಾಂ ಕುರುನಂದನ ।
ಏತಾನ್ಗುಣಾನ್ಸಮಾಶ್ರಿತ್ಯ ಕುರ್ವಾಣೋ ವ್ರತಮುತ್ತಮಂ ॥ ೪೩ ॥

ಸಪ್ತಮ್ಯೋಭಯವಿಖ್ಯಾತಂ ಸರ್ವಪಾಪಭಯಾಪಹಂ ।
ಸರ್ವರೋಗಪ್ರಶಮನಂ ಸರ್ವಕಾಮಫಲಪ್ರದಂ ॥ ೪೪ ॥

---

೪೦. ಆ ಮಾಸದಲ್ಲೂ ಸೂರ್ಯಪ್ರೀತಿಗಾಗಿ ಸರ್ವಾಭರಣಯುಕ್ತವಾದ ಗೋವನ್ನು ದಾನಕೊಡಬೇಕು, ಮತ್ತು ಹಿಂದೆ ಹೇಳಿದಂತೆ ಸಾಮಾನ್ಯವಿಧಿಯೆಲ್ಲ ವನ್ನೂ ಆಚರಿಸಬೇಕು.

೪೧. ಹೀಗೆ ಮಾಡಿದರೆ ಬಿಳಿಯಕಮಲದಂತೆ ಕಾಂತಿಯುಕ್ತವೂ, ಬಿಳಿಯ ಕುದುರೆಗಳಿಂದ ಯುಕ್ತವೂ ಆದ ಯಾನದ ಮೂಲಕ ರಮ್ಯವಾದ ಸೂರ್ಯ ಲೋಕಕ್ಕೆ ಹೋಗಿ ಶ್ರೇಷ್ಠವಾದ ಕಾಂತಿಯಿಂದ ಕೂಡಿರುವನಾಗುತ್ತಾನೆ.

೪೨. ತ್ರಿಷವಣಾಗ್ನಿಯಲ್ಲಿ ಹೋಮ, ಭೂಶಯನ, ನಕ್ತಭೋಜನ ಈ ನಿಯ ಮಗಳನ್ನು ಅನುಸರಿಸುತ್ತಾ ಉಭಯಪಕ್ಷದಲ್ಲಿಯೂ ಅಂದರೆ ಮಾರ್ಗಶಿರಮಾಸದ ಶುಕ್ಲಕೃಷ್ಣಪಕ್ಷಗಳೆರಡರ ಸಪ್ತಮೀ ತಿಥಿಗಳಲ್ಲಿಯೂ ಈ ವ್ರತವನ್ನು ಆಚರಿಸಬೇಕು.

೪೩. ಅಯ್ಯಾ ಕುರುನಂದನನೇ! ಅಹಿಂಸೆ, ಸತ್ಯವಾಕ್ಕು, ಅಸ್ತೇಯ (ಕದಿ ಯದೇ ಇರುವುದು) ಕ್ಷಮೆ, (ದಯಾ) ಋಜುತ್ವ (ಸರಿಯಾದ ಮಾರ್ಗದಲ್ಲಿರುವುದು) ಈ ಗುಣಗಳನ್ನಾಶ್ರಯಿಸಿ ಉತ್ತಮವಾದ ಉಭಯ ಸಪ್ತಮೀ ವ್ರತವನ್ನು ಮಾಡಿದರೆ

೪೪. ಅದು ಸರ್ವಪಾಪ ಭಯವನ್ನೂ ಪರಿಹರಿಸತಕ್ಕದ್ದೂ. ಸರ್ವರೋಗ ಗಳನ್ನೂ ನಿರ್ಮೂಲಮಾಡತಕ್ಕದ್ದೂ. ಸರ್ವ ಇಷ್ಟಾರ್ಥಗಳನ್ನೂ ಕೊಡುವುದೂ ಸಹ ಆಗುತ್ತದೆ.

**ಇತ್ಯೇವಮಾದೀನ್ನಿಯಮಾನ್ ಚರೇತ್ಸೂರ್ಯವ್ರತೀ ಸದಾ ।**
**ಯ ಇಚ್ಛೇದ್ವಿಪುಲಂ ಸ್ಥಾನಂ ಭಾನೋರಮಿತತೇಜಸಃ ॥ ೪೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಉಭಯ ಸಪ್ತಮೀ ವರ್ಣನಂ ನಾಮ ಪಂಚಷಷ್ಟ್ಯುತ್ತರ ಶತತಮೋಽಧ್ಯಾಯಃ.**



೪೫. ಅಮಿತತೇಜಸ್ವಿಯಾದ ಸೂರ್ಯನ ವಿಪುಲವಾದ ಲೋಕವನ್ನು ಅಪೇಕ್ಷಿಸತಕ್ಕ ಮಾನವನು ಸೂರ್ಯವ್ರತದಲ್ಲಿ ಈ ನಿಯಮವೆಲ್ಲವನ್ನೂ ಯಾವಾಗಲೂ ಆಚರಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಉಭಯ ಸಪ್ತಮೀವ್ರತ ವರ್ಣನವೆಂಬ ನೂರಅರವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಸೂರ್ಯಭಕ್ತಾ ತು ಯಾ ನಾರೀ ಧ್ರುವಂ ಸಾ ಪುರುಷೋ ಭವೇತ್ ।
ಸ್ತ್ರೀ ಪುತ್ರಮುತ್ತಮಂ ಸಾ ಚೇತ್ಕಾಂಕ್ಷತೇ ಶೃಣು ತದ್ವ್ರತಂ ॥ ೧ ॥

ನಿಕ್ಷುಭಾರ್ಕಾಖ್ಯಮಾಖ್ಯಾತಂ ಸದಾ ಪ್ರೀತಿವಿವರ್ಧನಂ ।
ಅವಿಯೋಗಕರಂ ವೀರ ಧರ್ಮಕಾಮಾರ್ಥಸಾಧಕಂ ॥ ೨ ॥

ಸಪ್ತಮ್ಯಾಮಥ ಷಷ್ಠ್ಯಾಂ ವಾ ಸಂಕ್ರಾಂತೌ ಚ ರವೇರ್ದಿನೇ ।
ಹವಿರ್ಹೋಮಂ ತು ಹವಿಷಾ ಸೋಪವಾಸಃ ಸಮಾಚರೇತ್ ॥ ೩ ॥

---

### ನೂರಅರವತ್ತಾರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಮುಂದುವರಿಸಿ ಹೇಳುತ್ತಾರೆ—ಸೂರ್ಯಭಕ್ತಳಾದ ನಾರಿಯು ನಿಜವಾಗಿ ಪುರುಷಸದೃಶಳು. ಆ ಹೆಂಗಸು ಉತ್ತಮನಾದ ಪುತ್ರನನ್ನು ಅಪೇಕ್ಷಿಸುವುದಾದರೆ ಅದಕ್ಕಾಗಿ ಮಾಡಬೇಕಾದ ವ್ರತವೊಂದಿರುವುದು. ಅದನ್ನು ನಿನಗೆ ಹೇಳುವೆನು ಕೇಳು.

೨. ನಿಕ್ಷುಭಾರ್ಕವ್ರತ ಎಂದು ಅದಕ್ಕೆ ಹೆಸರು. ಅದು ಪ್ರೀತಿವೃದ್ಧಿಕರವಾದ ವ್ರತವೆನಿಸುವುದು. ಸಪ್ತಮಿಯಲ್ಲೋ, ಷಷ್ಠಿಯಲ್ಲೋ ಅಥವಾ ಸಂಕ್ರಮಣಕಾಲದಲ್ಲೋ, ಭಾನುವಾರದಲ್ಲಿಯೋ ಉಪವಾಸಮಾಡಿ ಅಗ್ನಿಯನ್ನು ಪ್ರತಿಷ್ಠಿಸಿ ಹೋಮ ಮಾಡಬೇಕು.

ನಿಕ್ಷುಭಾಂ ಕಾಂಸ್ಯನಿಷ್ಪನ್ನಾಂ ಕೃತ್ವಾ ಸ್ವರ್ಣಮಯೀಂ ಶುಭಾಂ ।
ರಾಜತೀಂ ವಾಥವಾ ವಾರ್ಕ್ಷೀಂ ಸ್ನಾಪಯೇಚ್ಚ ಘೃತಾದಿಭಿಃ ॥ ೪ ॥

ಗಂಧಮಾಲ್ಯೈರಲಂಕೃತ್ಯ ವಸ್ತ್ರಯುಗ್ಮೈಶ್ಚ ಶೋಭನೈಃ ।
ಭಕ್ಷ್ಯಭೋಜ್ಯೈರಶೇಷೈಶ್ಚ ವಿತಾನಧ್ವಜಚಾಮರೈಃ ॥ ೫ ॥

ಭೋಜಯೇತ್ಸೂರ್ಯಭಕ್ತಾಂಶ್ಚ ಶುಕ್ಲವಸ್ತ್ರಾವಗುಂಠಿತಾನ್ ।
ಕೃತ್ವಾಯತನಮಧ್ಯೇ ತು ಪ್ರತಿಮಾಮುಪಕಲ್ಪಯೇತ್ ॥ ೬ ॥

ಕೃತ್ವಾ ಶಿರಸಿ ತತ್ಪಾತ್ರಂ ವಿತಾನಚ್ಛತ್ರಶೋಭಿತಂ ।
ಧ್ವಜಶಂಖಾದಿವಿಭವೈರ್ಭಗಸ್ಯಾಯತನಂ ನಯೇತ್ ॥ ೭ ॥

---

೪. ಕಂಚು, ಚಿನ್ನ, ಬೆಳ್ಳಿ ಇವುಗಳಿಂದಲಾಗಲಿ, ಅಥವಾ ಶ್ರೇಷ್ಠಜಾತಿಯ ಮರದಿಂದಲಾಗಲಿ ನಿಕ್ಷುಭಾಪ್ರತಿಮೆಯನ್ನು ಮಾಡಿಸಿ, ತುಪ್ಪ ಮೊದಲಾದುವುಗಳಿಂದ ಆ ಪ್ರತಿಮೆಗೆ ಒಂದು ವರ್ಷದವರೆಗೆ ಅಭಿಷೇಕಮಾಡಿಸಬೇಕು.

೫. ಗಂಧ, ಪುಷ್ಪಹಾರ ಮೊದಲಾದುವುಗಳಿಂದಲೂ, ಒಳ್ಳೆಯ ವಸ್ತ್ರಯುಗ್ಮಗಳಿಂದಲೂ ಅಲಂಕರಿಸಿ, ಮೇಲ್ಕಟ್ಟು, ಧ್ವಜ, ಚಾಮರಗಳಿಂದ ಯುಕ್ತವಾಗಿ ಮಾಡಬೇಕು. ಬಳಿಕ ಸಮಸ್ತ ಭಕ್ಷ್ಯಭೋಜ್ಯಗಳನ್ನೂ ನಿವೇದನಕ್ಕೆ ಸಿದ್ಧಪಡಿಸಬೇಕು.

೬. ಬಿಳಿಯಬಟ್ಟೆಗಳನ್ನು ಹೊದೆದಿರುವ ಸೂರ್ಯಭಕ್ತರನ್ನು ಆಹ್ವಾನಿಸಿ ಭೋಜನಮಾಡಿಸಬೇಕು. ಅನಂತರ ಪೂಜಿಸಿರುವ ಪ್ರತಿಮೆಯನ್ನು ತಂದು ದೇವಾಲಯದ ಮಧ್ಯದಲ್ಲಿ ಸ್ಥಾಪಿಸಬೇಕು.

೭. ನಿವೇದನಮಾಡುವ ವಸ್ತುಗಳನ್ನು ತುಂಬಿದ ಪಾತ್ರೆಯನ್ನು, ತಲೆಯ ಮೇಲೆ ಹೊತ್ತುಕೊಂಡು ನಡೆಚಪ್ಪರ, ಧ್ವಜ, ಛತ್ರಿಗಳನ್ನು ಹಿಡಿಸಿಕೊಂಡು, ವಾದ್ಯ, ಶಂಖಧ್ವನಿ ಮೊದಲಾದ ವಿಭವಸಮೇತ ಸೂರ್ಯದೇವಾಲಯಕ್ಕೆ ತೆಗೆದುಕೊಂಡು ಹೋಗಬೇಕು.

ನಿಕ್ಷುಭಾರ್ಕದಿನೇಶಸ್ಯ ವ್ರತಮೇತನ್ನಿವೇದಯೇತ್ ।
ತತ್ಪಿಂಡ್ಯಾಂ ಸ್ಥಾಪಯೇತ್ಪಾತ್ರಮುಪಶೋಭಾಸಮನ್ವಿತಂ ॥ ೮ ॥

ಪ್ರದಕ್ಷಿಣೀಕೃತ್ಯ ರವಿಂ ಪ್ರಣಿಪತ್ಯ ಕ್ಷಮಾಪಯೇತ್ ।
ಸಮಾಪ್ಯ ತದ್ವ್ರತಂ ಪುಣ್ಯಂ ಶೃಣು ಯತ್ಫಲಮಶ್ನುತೇ ॥ ೯ ॥

ದ್ವಾದಶಾದಿತ್ಯಸಂಕಾಶೈರ್ಮಹಾಯಾನೈರ್ನಗೋಪಮೈಃ ।
ಯಥೇಷ್ಟಂ ಭಾನವೇ ಲೋಕೇ ಸೌರೈಃ ಸಾರ್ಧಂ ಪ್ರಮೋದತೇ ॥ ೧೦ ॥

ವರ್ಷಕೋಟಿಸಹಸ್ರಾಣಿ ವರ್ಷಕೋಟಿಶತಾನಿ ಚ ।
ನಂದತೇऽಸೌ ಮಹಾಭಾಗ ವಿಷ್ಣುಲೋಕೇ ಮಹೀಯತೇ ॥ ೧೧ ॥

ತತಃ ಕರ್ಮವಿಶೇಷೇಣ ಸರ್ವಕಾಮಸಮನ್ವಿತಂ ।
ಬ್ರಹ್ಮಲೋಕಂ ಸಮಾಸಾದ್ಯ ಪರಂ ಸುಖಮವಾಪ್ನುಯಾತ್ ॥ ೧೨ ॥

---

೮. ನಿಕ್ಷುಭಾರ್ಕ ನಾಮಕನಾದ ದಿನೇಶನಿಗೆ ಅವುಗಳನ್ನು ಸಮರ್ಪಿಸಬೇಕು. ಶೋಭಾತಿಶಯದಿಂದ ಕೂಡಿದ ಆ ಪಾತ್ರೆಯನ್ನು ಆ ವಿಗ್ರಹದ ಪೀಠದ ಬಳಿ ಇರಿಸಬೇಕು.

೯-೧೦. ಬಳಿಕ ಸೂರ್ಯನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ಕ್ಷಮಾಪಣೆಯನ್ನು ಕೇಳಬೇಕು. ಆ ವ್ರತವನ್ನು ವಿಧಿಕ್ರಮ ಪ್ರಕಾರ ಆಚರಿಸಿದವನು ಹೊಂದುವ ಫಲ ವಿಚಾರವನ್ನು ಹೇಳುವೆನು ಕೇಳಿ; ದ್ವಾದಶಾದಿತ್ಯರಂತೆ ಪ್ರಕಾಶಿಸುವುದೂ, ಪರ್ವತಗಳಂತೆ ಇರುವುದೂ, ಆದ ಮಹಾಯಾನಗಳಿಂದ ಕೂಡಿ, ಇಷ್ಟಾನುಸಾರವಾಗಿ ಸೂರ್ಯಲೋಕದಲ್ಲಿ ಸಂಚರಿಸಿ ಸೂರ್ಯಭಕ್ತರೊಡನೆ ಸಂತೋಷಹೊಂದುತ್ತಾನೆ.

೧೧. ಎಲೈ ಮಹಾಭಾಗನೇ! ಈ ವ್ರತಿಯು ವಿಷ್ಣುಲೋಕದಲ್ಲಿ ಸಾವಿರದ ನೂರುಕೋಟಿ ವರ್ಷಗಳವರೆಗೆ ಪೂಜಿತನಾಗಿರುತ್ತಾನೆ.

೧೨. ಅನಂತರ ಕರ್ಮವಿಶೇಷದಿಂದ ತನಗೆ ಬೇಕಾದ್ದನ್ನು ಪಡೆಯಬಹುದಾದ ಬ್ರಹ್ಮಲೋಕವನ್ನು ಸೇರಿ ಶ್ರೇಷ್ಠವಾದ ಸುಖವನ್ನು ಹೊಂದುತ್ತಾನೆ.

ಬ್ರಹ್ಮಲೋಕಾತ್ಪರಿಭ್ರಷ್ಟಃ ಶ್ರೀಮಾನ್ಸುರಸುಪೂಜಿತಃ ।
ಪ್ರಜಾಪತಿಮವಾಪ್ನೋತಿ ಸುರಾಸುರನಮಸ್ಕೃತಃ ॥ ೧೩ ॥

ಲೋಕಾನಿಹ ಚಿರಂ ಭುಕ್ತ್ವಾ ಸೋಮಲೋಕೇ ಮಹೀಯತೇ ।
ಸೋಮಾದೈಂದ್ರಂ ಪುನರ್ಲೋಕಮಾಸಾದ್ಯೇಂದ್ರಪತಿರ್ಭವೇತ್ ॥ ೧೪ ॥

ಇಂದ್ರಲೋಕಾಚ್ಚ ಗಂಧರ್ವಲೋಕಂ ಪ್ರಾಪ್ಯ ಸ ಮೋದತೇ ।
ತತಸ್ತದ್ಧರ್ಮಶೇಷೇಣ ಭವತ್ಯಾದಿತ್ಯಭಾವಿತಃ ॥ ೧೫ ॥

ಸ್ವಕರ್ಮಭಾವನೋದ್ಯೋಗಾತ್ಪುನಃ ಪ್ರಾರಭತೇ ಶುಭಂ ।
ಶುಭಾಚ್ಚ ಪುನರೇತ್ಯೇಹ ಸ ಯಾತ್ಯತಿಸಹಸ್ರಶಃ ॥ ೧೬ ॥

ಯಾವನ್ನಾಪ್ನೋತಿ ಮರಣಂ ತಾವದ್ಭ್ರಮತಿ ಕರ್ಮಣಾ ।
ಸುನಿರ್ವೇದಾತ್ಸುವೈರಾಗ್ಯಂ ವೈರಾಗ್ಯಾಜ್ಜ್ಞಾನಸಂಭವಃ ॥ ೧೭ ॥

---

೧೩. ಶ್ರೀಮಂತನೂ, ದೇವಪೂಜಿತನೂ, ದೇವಾಸುರರಿಂದ ನಮಸ್ಕಾರ ಮಾಡಿಸಿಕೊಳ್ಳುವವನೂ ಆದ ಅವನು ಬ್ರಹ್ಮಲೋಕವಾಸ ಮುಗಿದ ಮೇಲೆ ಪ್ರಜಾಪತಿಯ ಸಾನ್ನಿಧ್ಯವನ್ನು ಹೊಂದುತ್ತಾನೆ.

೧೪. ಆ ಪ್ರಜಾಪತಿ ಲೋಕದಲ್ಲಿ ಬಹುಕಾಲ ಭೋಗಗಳನ್ನನುಭವಿಸಿ ಬಳಿಕ ಸೋಮಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ. ಆ ಸೋಮಲೋಕದಿಂದ ಹೊರಟು ಇಂದ್ರಲೋಕಕ್ಕೆ ಹೋಗಿ ಇಂದ್ರಪತಿಯಾಗುವನು.

೧೫. ಅನಂತರ ಇಂದ್ರಲೋಕದಿಂದ ಗಂಧರ್ವಲೋಕಕ್ಕೆ ಬಂದು, ಅಲ್ಲಿ ಸಂತೋಷಪಡುತ್ತಾನೆ. ಆ ಮೇಲೆ ಆ ಪುಣ್ಯವಿಶೇಷದಿಂದ ಸೂರ್ಯನ ಪ್ರೀತಿಗೂ ಪಾತ್ರನಾಗುತ್ತಾನೆ.

೧೬. ತನ್ನ ಕರ್ಮದ ಭಾವನೆಗೆ ಅನುಸಾರವಾಗಿ ಉದ್ಯೋಗಕ್ಕೆ ತೊಡಗಿ ಪುನಃ ಶುಭಕರ್ಮವನ್ನಾರಂಭಿಸುವನು. ಶುಭಕರ್ಮಜನಿತವಾದ ಪುಣ್ಯದಿಂದ ಪುನಃ ಪುಣ್ಯಲೋಕಗಳಿಗೆ ಹೋಗುವುದು. ಮತ್ತೆ ಇಲ್ಲಿಗೆ ಬರುವುದು. ಈ ರೀತಿ ಸಹಸ್ರಬಾರಿ ಸಂಚರಿಸುತ್ತಿರುತ್ತಾನೆ.

೧೭. ಈ ಪ್ರಕಾರ ಮರಣಾವಧಿ ಕರ್ಮವಶದಿಂದ ಸುತ್ತುತ್ತಿರುತ್ತಾನೆ. ಈ ವಿಧವಾದ ಕಾರ್ಯಕ್ರಮದಿಂದ ಸಂಪೂರ್ಣ ನಿರ್ವೇದವುಂಟಾದ ಮೇಲೆ ವೈರಾಗ್ಯದಿಂದ ಜ್ಞಾನಹುಟ್ಟುವುದು.

ಜ್ಞಾನಾತ್ಪ್ರವರ್ತತೇ ಯೋಗೋ ಯೋಗಾದ್ದುಃಖಾಂತಮಾಪ್ನುಯಾತ್
॥ ೧೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾಕಲ್ಪೇ ಸೌರಧರ್ಮೇ ನಿಕ್ಷುಭಾರ್ಕವ್ರತವರ್ಣನಂ ನಾಮ ಷಟ್‌ಷಷ್ಟ್ಯುತ್ತರ ಶತತಮೋಽಧ್ಯಾಯಃ.



೧೮. ಜ್ಞಾನದಿಂದ ಯೋಗವುಂಟಾಗಿ ಯೋಗಮಹಿಮೆಯಿಂದ ದುಃಖವನ್ನು ಕಳೆದುಕೊಳ್ಳುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಾಕಲ್ಪದಲ್ಲಿ ಸೌರಧರ್ಮದ ನಿಕ್ಷುಭಾರ್ಕವ್ರತ ವರ್ಣನವೆಂಬ ನೂರರವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಷಷ್ಠ್ಯಾಂ ಚಾಪ್ಯಥ ಸಪ್ತಮ್ಯಾಂ ನಿಯತಾ ಬ್ರಹ್ಮಚಾರಿಣೀ ।
ವರ್ಷಮೇಕಂ ನ ಭುಂಕ್ತೇ ಯಾ ಮಹಾಭಾಗಜಿಗೀಷಯಾ ॥ ೧ ॥

ವರ್ಷಾಂತೇ ಪ್ರತಿಮಾಂ ಕೃತ್ವಾ ನಿಕ್ಷುಭಾಂಕೇತಿ ವಿಶ್ರುತಾಂ ।
ಸ್ನಾನಾದ್ಯಂ ಚ ವಿಧಿಂ ಕೃತ್ವಾ ಪೂರ್ವೋಕ್ತಂ ಲಭತೇ ಫಲಂ ॥ ೨ ॥

ಜಾಂಬೂನದಮಯ್ಯೈರ್ಯಾನೈಶ್ಚತುರ್ದ್ವಾರೈರಲಂಕೃತೈಃ ।
ಗತ್ವಾದಿತ್ಯಪುರೇ ರಮ್ಯೇ ಅಶೇಷಂ ವಿಂದತೇ ಫಲಂ ॥ ೩ ॥

---

### ನೂರಅರವತ್ತೇಳನೆಯ ಅಧ್ಯಾಯ

೧-೨. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಈ ವ್ರತ ಮಾಹಾತ್ಮ್ಯೆಯನ್ನು ಮುಂದುವರಿಸಿ ಹೇಳುತ್ತಾರೆ—ಮಹಾಭಾಗನಾದ ಪುರುಷನನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶವುಳ್ಳ ಸುಮಂಗಲಿಯು ಒಂದು ವರ್ಷ ಪೂರ್ತ ಈ ವ್ರತ ಮಾಡಬೇಕು. ವರ್ಷದ ಪ್ರತಿಪಕ್ಷದ ಷಷ್ಠಿಯಲ್ಲೂ, ಸಪ್ತಮಿಯಲ್ಲೂ ಪೂಜಾನಿಯಮಪರಳಾಗಿ ಬ್ರಹ್ಮಚರ್ಯವ್ರತವನ್ನು ಆಚರಿಸಬೇಕಲ್ಲದೆ ಉಪವಾಸವನ್ನೂ ಆಚರಿಸಬೇಕು. ವರ್ಷದ ಕೊನೆಯಲ್ಲಿ ನಿಕ್ಷುಭಾನಾಮಕವಾದ ಪ್ರಸಿದ್ಧವಾದ ಪ್ರತಿಮೆಯನ್ನು ಮಾಡಿ ಅದಕ್ಕೆ ಹಿಂದೆ ತಿಳಿಸಿದಂತೆ ವಿಧ್ಯುಕ್ತರೀತಿ ಸ್ನಾನಾದಿಗಳನ್ನು ನೆರವೇರಿಸಬೇಕು. ಇದರಿಂದ ತಾನು ಮನದಲ್ಲಿ ಉದ್ದೇಶಮಾಡಿದ ಫಲವನ್ನು ಹೊಂದುತ್ತಾಳೆ.

೩. ಅಲ್ಲದೆ ದೇಹಾವಸಾನದಲ್ಲಿ ಅಲಂಕೃತವಾದ ನಾಲ್ಕು ದ್ವಾರಗಳುಳ್ಳದ್ದಾಗಿ ಸುವರ್ಣಮಯವಾದ ಯಾನವನ್ನೇರಿ ರಮ್ಯವಾದ ಆದಿತ್ಯಲೋಕಕ್ಕೆ ಹೋಗಿ ಸಮಗ್ರವಾದ ಫಲವನ್ನು ಹೊಂದುತ್ತಾಳೆ.

ಸೌರಾದಿಸರ್ವಲೋಕೇಷು ಭೋಗಾನ್ ಭುಕ್ತ್ವಾ ಯಥೇಪ್ಸಿತಾನ್ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾನಂ ಪತಿಮಾಪ್ನುಯಾತ್ ॥ ೪ ॥

ಯಾ ನಾರ್ಯುಪವಸೇದೇವಂ ಕೃಷ್ಣಾಮೇಕಾಂ ತು ಸಪ್ತಮೀಂ ।
ಸಾ ಗಚ್ಛೇತ್ಪರಮಂ ಸ್ಥಾನಂ ಭಾನೋರಮಿತತೇಜಸಃ ॥ ೫ ॥

ವರ್ಷಾಂತೇ ಪ್ರತಿಮಾಂ ಕೃತ್ವಾ ಶಾಲಿಪಿಷ್ಟಮಯೀಂ ಶುಭಾಂ ।
ಪೀತಾನುಲೇಪನೈರ್ಮಾಲ್ಯೈಃ ಪೀತವಸ್ತ್ರೈಶ್ಚ ಪೂಜಯೇತ್ ॥
ಪೂರ್ವೋಕ್ತಮಖಿಲಂ ಕೃತ್ವಾ ಭಾಸ್ಕರಾಯ ನಿವೇದಯೇತ್ ॥ ೬ ॥

ಚಾಮೀಕರಪ್ರಭೈರ್ಯಾನೈಃ ನಿಕ್ಷುಭಾಂ ಪ್ರೀಣಯೇದ್ಯದಿ ।
ವರ್ಷಕೋಟಿಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥ ೭ ॥

---

೪. ಸೌರಲೋಕ ಮೊದಲಾದ ಎಲ್ಲಾ ಲೋಕಗಳಲ್ಲಿಯೂ, ಕ್ರಮವಾಗಿ ಇಚ್ಛಾನುಸಾರವಾದ ಭೋಗಗಳನ್ನು ಅನುಭವಿಸಿ, ಕೊನೆಗೆ ಭೂಲೋಕಕ್ಕೆ ಬಂದು, ರಾಜನನ್ನೇ ಪತಿಯಾಗಿ ಪಡೆಯುತ್ತಾಳೆ.

೫. ಒಂದು ಕೃಷ್ಣಸಪ್ತಮಿಯಲ್ಲಿ ಹೀಗೆ ನಿಯಮದಿಂದ ಉಪವಾಸ ಮಾಡಿದ ಮಾತ್ರದಿಂದ, ಅವಳು ಶ್ರೇಷ್ಠನೂ, ಅಪರಿಮಿತತೇಜಸ್ವಿಯೂ ಆದ ಸೂರ್ಯನಲೋಕಕ್ಕೆ ಹೋಗುತ್ತಾಳೆ.

೬. ಒಂದು ವರ್ಷದವರೆಗೂ ಹೀಗೆ ಮಾಡಿ ವರ್ಷದ ಕೊನೆಯಲ್ಲಿ, ಅಕ್ಕಿಯ ಹಿಟ್ಟಿನಲ್ಲಿ ಶುಭಕರವಾದ ನಿಕ್ಷುಭಾ ಪ್ರತಿಮೆಯನ್ನು ಮಾಡಿ ಶ್ರೀಗಂಧ, ಹಳದೀಬಣ್ಣದ ಹೂ, ಹಳದಿಯವಸ್ತ್ರ, ಇವುಗಳಿಂದ ಪೂಜಿಸಬೇಕು. ಹಿಂದೆ ಹೇಳಿದ ವಿಧಿಯಂತೆ ಎಲ್ಲವನ್ನೂ ನೆರವೇರಿಸಿ ಸೂರ್ಯನಿಗೆ ಈ ವ್ರತವನ್ನು ನಿವೇದಿಸಬೇಕು.

೭. ಸೂರ್ಯಭಕ್ತೆಯು ಚಿನ್ನದಿಂದ ಕಾಂತಿಯುಕ್ತವಾಗಿರುವ ಯಾನಗಳನ್ನು ಮಾಡಿಸಿ, ನಿಕ್ಷುಭಾಪ್ರೀತ್ಯರ್ಥವಾಗಿ ಸಮರ್ಪಿಸಿದರೆ; ಆ ಪೂಜ್ಯೆಯು ನೂರುಕೋಟಿ ವರ್ಷಗಳವರೆಗೆ ಸಮಗ್ರವಾಗಿ ಸೂರ್ಯಲೋಕದಲ್ಲಿ ಪೂಜಿತೆಯಾಗುತ್ತಾಳೆ.

ಸೌರಲೋಕಾದಿಲೋಕೇಷು ಭುಕ್ತ್ವಾ ಭೋಗಾನ್ನರಾಧಿಪ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ಯಥೇಷ್ಟಂ ವಿಂದತೇ ಪತಿಂ ॥
ಸರ್ವಲಕ್ಷಣಸಂಪನ್ನಂ ಧನಧಾನ್ಯಸಮನ್ವಿತಂ ॥ ೮ ॥

ಕೃಷ್ಣಪಕ್ಷೇ ತು ಸಪ್ತಮ್ಯಾಂ ಯಾ ನಾರೀ ತು ದೃಢವ್ರತಾ ।
ವರ್ಷಮೇಕಾಮುಪವಸೇತ್ಸರ್ವಭೋಗವಿವರ್ಜಿತಾ ॥ ೯ ॥

ವರ್ಷಾಂತೇ ಸರ್ವಗಂಧಾಢ್ಯಂ ನಿಕ್ಷುಭಾರ್ಕಂ ನಿವೇದಯೇತ್ ।
ಸುವರ್ಣಮಣಿಮುಕ್ತಾಭ್ಯಾಂ ಭೋಜಯಿತ್ವಾ ಮಗಾಂಗನಾಂ ॥ ೧೦ ॥

ಸುವಿಚಿತ್ರೈರ್ಮಹಾಯಾನೈರ್ದಿವ್ಯಗಂಧರ್ವಶೋಭಿತೈಃ ।
ಸಾ ವೈ ಯುಗಸಹಸ್ರಾಣಿ ಸೂರಲೋಕೇ ನರಾಧಿಪ ॥ ೧೧ ॥

---

೮. ಅಯ್ಯಾ ನರಾಧಿಪನೇ! ಕೇಳು; ಹೀಗೆ ಆಕೆಯು ಸೌರಲೋಕವೇ ಮೊದಲಾದ ಲೋಕಗಳಲ್ಲಿ, ಯಥೇಷ್ಟವಾದ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಭೂಲೋಕದಲ್ಲಿ ಜನಿಸಿ, ತನಗೆ ಇಷ್ಟನೂ, ಸಮಸ್ತ ಶುಭಲಕ್ಷಣದಿಂದ ಕೂಡಿದವನೂ, ಧನಧಾನ್ಯಯುಕ್ತನೂ ಆದ ಪತಿಯನ್ನು ಹೊಂದುತ್ತಾಳೆ.

೯. ಯಾವ ಸ್ತ್ರೀಯು ಸಮಸ್ತ ಭೋಗಗಳನ್ನೂ ತ್ಯಜಿಸಿ, ದೃಢನಿಯಮವುಳ್ಳವಳಾಗಿ, ಒಂದು ವರ್ಷಕಾಲ ಪ್ರತಿಮಾಸದ ಕೃಷ್ಣಪಕ್ಷದ ಸಪ್ತಮಿಯಲ್ಲಿ ಉಪವಾಸ ಮಾಡಿ, ವರ್ಷದ ಕೊನೆಯಲ್ಲಿ ಸಮಸ್ತ ಗಂಧಸಂಯುಕ್ತನಾದ ನಿಕ್ಷುಭಾರ್ಕನಿಗೆ ಈ ವ್ರತ ಸಮರ್ಪಣೆಮಾಡಬೇಕು.

೧೦-೧೧. ಅಯ್ಯಾ ನರಾಧಿಪನೇ! ಮಗಜಾತಿಯ ಅರ್ಚಕನ ಪತ್ನಿಗೆ ಭೋಜನಮಾಡಿಸಿ, ಚಿನ್ನದಗೆಜ್ಜೆ, ಮುತ್ತು, ಇವುಗಳನ್ನು ಕೊಡಬೇಕು. ಹೀಗೆ ದಾನ ಕೊಟ್ಟ ಆಕೆಯು, ಗಂಧರ್ವರಿಂದ ಶೋಭಿತವೂ; ವಿಚಿತ್ರಕರವೂ ಆದ ಮಹಾಯಾನದಲ್ಲಿ ಕುಳಿತು, ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಸಹಸ್ರಯುಗಗಳವರೆಗೆ ಪೂಜಿತಳಾಗುತ್ತಾಳೆ.

**ಯಥೇಷ್ಟಂ ಚ ರವೇರ್ಲೋಕೇ ಭೋಗಾನ್ ಭುಕ್ತ್ವಾ ತು ಕೃತ್ಸ್ನಶಃ ।**
**ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾನಂ ವಿಂದತೇ ಪತಿಂ ॥ ೧೨ ॥**

**ಏವಂ ಯಾ ಕುರುತೇ ರಾಜನ್ ವ್ರತಂ ಪಾಪಭಯಾಪಹಂ ।**
**ನಿಕ್ಷುಭಾರ್ಕಮಿದಂ ಪುಣ್ಯಂ ಸಾ ಯಾತಿ ಪರಮಂ ಪದಂ ॥ ೧೩ ॥**

**ವರ್ಷಮೇಕಂ ಮಹಾಬಾಹೋ ಶ್ರದ್ಧಯಾ ಪರಯಾನ್ವಿತಃ ।**
**ವರ್ಷಾಂತೇ ಭೋಜಯೇದ್ವೀರ ಸಮ್ಯಗ್ಭೋಜಕದಂಪತೀ ॥ ೧೪ ॥**

**ಮಹಾಫಲೈರ್ಭೋಜಯಿತ್ವಾ ಸಮ್ಯಗ್ಭೋಜಕದಂಪತೀ ।**
**ಪೂಜಯೇದ್ಗಂಧಮಾಲ್ಯೈಸ್ತು ವಾಸೋಭಿಃ ಕುರುನಂದನ ॥ ೧೫ ॥**

**ಕೃತ್ವಾ ತಾಮ್ರಮಯೇ ಪಾತ್ರೇ ವಜ್ರಪೂರ್ಣೈರಲಂಕೃತಂ ।**
**ನಿಕ್ಷುಭಾರ್ಕಂ ತು ಸೌವರ್ಣಂ ದತ್ವಾ ತಾಭ್ಯಾಂ ತು ಶಕ್ತಿತಃ ॥ ೧೬ ॥**

---

೧೨. ಆ ಸೂರ್ಯಲೋಕದಲ್ಲಿ ಯಥೇಷ್ಟವಾದ ಭೋಗಗಳನ್ನು ಸಮಗ್ರವಾಗಿ ಅನುಭವಿಸಿ ಮುಗಿಸಿ, ಕ್ರಮವಾಗಿ ಈ ಲೋಕಕ್ಕೆ ಬಂದು, ಇಲ್ಲಿ ರಾಜನನ್ನೇ ಪತಿಯನ್ನಾಗಿ ಪಡೆಯುತ್ತಾಳೆ.

೧೩. ಎಲೈ ರಾಜನೇ! ಕೇಳು; ನಿಕ್ಷುಭಾರ್ಕವೆಂದು ಪ್ರಸಿದ್ಧವೂ, ಪಾಪಭಯ ಪರಿಹಾರಕವೂ ಆದ ಈ ವ್ರತವನ್ನು. ವಿಧಿಪ್ರಕಾರ ಆಚರಿಸುವವಳು ಶ್ರೇಷ್ಠವಾದ ಸ್ಥಾನವನ್ನು ಹೊಂದುತ್ತಾಳೆ.

೧೪. ಎಲೈ ಮಹಾಬಾಹುವಾದ ವೀರನೇ! ಕೇಳು; ಈ ರೀತಿ ಒಂದುವರ್ಷದವರೆಗೆ ಉತ್ಕೃಷ್ಟವಾದ ಶ್ರದ್ಧೆಯಿಂದ ಕೂಡಿದವಳಾಗಿ ವ್ರತಮಾಡಿ, ವರ್ಷದ ಕೊನೆಯಲ್ಲಿ ಭೋಜಕದಂಪತಿಗಳಿಗೆ ದಿವ್ಯಭೋಜನಮಾಡಿಸಬೇಕು.

೧೫. ಅಯ್ಯಾ ಕುರುನಂದನನೇ! ಕೇಳು; ಆ ಭೋಜಕದಂಪತಿಗಳನ್ನು ಶ್ರೇಷ್ಠವಾದ ಹಣ್ಣುಗಳಿಂದಲೂ ತೃಪ್ತಿಪಡಿಸಬೇಕು. ಭೋಜನಾನಂತರ ಗಂಧಮಾಲ್ಯಗಳಿಂದಲೂ, ವಸ್ತ್ರಗಳಿಂದಲೂ ಅವರನ್ನು ತೃಪ್ತಿಪಡಿಸಬೇಕು.

೧೬. ನಿಕ್ಷುಭಾರ್ಕನ ಮೂರ್ತಿಯನ್ನು ಶಕ್ತ್ಯನುಸಾರ ಸುವರ್ಣದಿಂದ ಮಾಡಿ, ವಜ್ರಗಳಿಂದ ಅಲಂಕರಿಸಿ, ತಾಮ್ರದ ಪಾತ್ರೆಯಲ್ಲಿ ಇರಿಸಿ, ಆ ಭೋಜಕದಂಪತಿಗಳಿಗೆ ದಾನಕೊಡಬೇಕು.

ನಿಕ್ಷುಭಾ ಭೋಜಿಕಾ ಜ್ಞೇಯಾ ಭೋಜಕೋಽರ್ಕಃ ಪ್ರಕೀರ್ತಿತಃ ।
ತಸ್ಮಾತ್ತೌ ಪೂಜಯೇತ್ಸೌರೀಶ್ವರವಚ್ಛ್ರದ್ಧಯಾನ್ವಿತಃ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರ
ಧರ್ಮೇಷು ನಿಕ್ಷುಭಾರ್ಕವ್ರತಂ ನಾಮ ಸಪ್ತಷಷ್ಟ್ಯುತ್ತರ
ಶತತಮೋಽಧ್ಯಾಯಃ.



---

೧೭. ಆ ಕಾಲದಲ್ಲಿ ಭೋಜಕನ ಪತ್ನಿಯೇ ನಿಕ್ಷುಭೆಯೆಂದೂ, ಭೋಜಕನೇ ಅರ್ಕನೆಂದೂ ಭಾವಿಸಬೇಕೆಂದು ಹೇಳಿದೆ. ಆದುದರಿಂದ ಸೂರ್ಯಭಕ್ತರಾದ ಅವರಿಬ್ಬರನ್ನೂ, ದೇವರನ್ನು ಪೂಜಿಸುವಂತೆ ಶ್ರದ್ಧೆಯಿಂದ ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ
ನಿಕ್ಷುಭಾರ್ಕವ್ರತವೆಂಬ ನೂರಅರವತ್ತೇಳನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಏಕಭಕ್ತೇನ ಯಾ ನಾರೀ ಕಾರ್ತಿಕಂ ಕ್ಷಪಯೇನ್ನೃಪ ।
ಕ್ಷಮಾಹಿಂಸಾದಿನಿಯಮೈಃ ಸಂಯುತಾ ಬ್ರಹ್ಮಚಾರಿಣೀ ॥ ೧ ॥

ಗುಡಾಜ್ಯಮಿಶ್ರಂ ಶಾಲ್ಯನ್ನಂ ಭಾಸ್ಕರಾಯ ನಿವೇದಯೇತ್ ।
ಪಕ್ಷಯೋರುಭಯೋಸ್ತಾತ ಶ್ರದ್ಧಯಾ ಪರಯಾನ್ವಿತಾ ॥ ೨ ॥

ಪುಷ್ಪಾಣಿ ಕರವೀರಾಣಾಂ ಗುಗ್ಗುಲಂ ಸಾಜ್ಯಮಾದಿಶೇತ್ ।
ಸಪ್ತಮ್ಯಾಂ ತಾತ ಷಷ್ಠ್ಯಾಂ ವೈ ಉಪವಾಸರತಿರ್ಭವೇತ್ ॥ ೩ ॥

---

## ನೂರಅರವತ್ತೆಂಟನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು "ಎಲೈ ರಾಜನೇ! ಕೇಳು; ಭಕ್ತೆಯಾದ ಹೆಂಗಸು ಕಾರ್ತಿಕಮಾಸದಲ್ಲೆಲ್ಲಾ ಪ್ರತಿದಿನವನ್ನೂ ಏಕಭುಕ್ತದಿಂದ ಕಳೆಯಬೇಕು. ಕ್ಷಮೆ, ಅಹಿಂಸೆ, ಮುಂತಾದುವುಗಳನ್ನು ಅನುಸರಿಸುವ ನಿಯಮಬದ್ಧಳೂ, ಮತ್ತು ಬ್ರಹ್ಮಚಾರಿಣಿಯೂ ಆಗಿರಬೇಕು.

೨. ಬೆಲ್ಲ, ತುಪ್ಪ, ಇವುಗಳಿಂದ ಮಿಶ್ರವಾದ ಶಾಲ್ಯನ್ನವನ್ನು ಭಾಸ್ಕರನಿಗೆ ನಿವೇದಿಸಬೇಕು. ಅಯ್ಯಾ ರಾಜನೇ! ಕೇಳು; ಎರಡು ಪಕ್ಷಗಳ ಷಷ್ಠೀ ಸಪ್ತಮಿಗಳಲ್ಲೂ ತುಂಬ ಶ್ರದ್ಧಾಯುಕ್ತಳಾಗಿ ಈ ವ್ರತಮಾಡಬೇಕು.

೩. ಈ ವ್ರತದಲ್ಲಿ ದೇವನಿಗೆ ಕರವೀರಪುಷ್ಪಗಳನ್ನೂ, ಆಜ್ಯಸಹಿತವಾದ ಗುಗ್ಗುಳವನ್ನೂ ಸಮರ್ಪಿಸಬೇಕು. ಆ ಷಷ್ಠೀ, ಸಪ್ತಮೀ ಎರಡು ದಿನಗಳಲ್ಲಿಯೂ ಉಪವಾಸಮಾಡಬೇಕು.

ಇಂದ್ರನೀಲಪ್ರತೀಕಾಶೈಃ ವಿಮಾನೈಸ್ಸಾರ್ವಕಾಮಿಕೈಃ ।
ವರ್ಷಾಯುತಶತಂ ಸಾಗ್ರಂ ಸೂರಲೋಕೇ ಮಹೀಯತೇ ॥ ೪ ॥

ತಥಾ ಚ ಸರ್ವಲೋಕೇಷು ಭೋಗಮಾಸಾದ್ಯ ಯತ್ನತಃ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ಯಥೇಷ್ಟಂ ವಿಂದತೇ ಪತಿಂ ॥ ೫ ॥

ಇತ್ಯೇಷ ಸರ್ವಯಜ್ಞೇಷು ವಿಧಿಸ್ತುಲ್ಯಃ ಪ್ರಕೀರ್ತಿತಃ ।
ಏಕಭಕ್ತೋಪವಾಸಸ್ಯ ಫಲಂ ಚ ಸದೃಶಂ ಭವೇತ್ ॥ ೬ ॥

ಕ್ಷಮಾ ಸತ್ಯಂ ದಯಾ ದಾನಂ ಶೌಚಮಿಂದ್ರಿಯನಿಗ್ರಹಃ ।
ಸೂರ್ಯಪೂಜಾಗ್ನಿಹವನಂ ಸನ್ತೋಷಃ ಸ್ತೇಯವರ್ಜನಂ ॥ ೭ ॥

ಸರ್ವವ್ರತೇಷ್ವಯಂ ಧರ್ಮಃ ಸಾಮಾನ್ಯೋ ದಶಧಾ ಸ್ಮೃತಃ ।
ವಕ್ಷ್ಯಾಮ್ಯಹಮಶೇಷೇಣ ಮಾಸಾನ್ಮಾಸವ್ರತಂ ಪ್ರತಿ ॥ ೮ ॥

---

೪. ಹೀಗೆ ಮಾಡಿದರೆ ಇಂದ್ರನೀಲರತ್ನದಂತೆ ಪ್ರಕಾಶಿಸುವುದೂ, ತನಗೆ ಇಷ್ಟವಾದ ವಸ್ತುಗಳಿಂದ ತುಂಬಿರುವುದೂ, ಆದ ವಿಮಾನವನ್ನೇರಿ ಸೂರ್ಯಲೋಕಕ್ಕೆ ಹೋಗಿ, ಅಲ್ಲಿ ಹತ್ತುಲಕ್ಷ ವರ್ಷಗಳಪರ್ಯಂತ ಪೂಜಿತೆಯಾಗುತ್ತಾಳೆ.

೫. ಹಾಗೆಯೇ ಇತರ ಎಲ್ಲ ಲೋಕಗಳಲ್ಲಿಯೂ ಪ್ರಯತ್ನದಿಂದ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಲೋಕಕ್ಕೆ ಬಂದು ತನಗೆ ಇಷ್ಟನಾದ ಪತಿಯನ್ನು ಹೊಂದುತ್ತಾಳೆ.

೬. ಈ ವಿಧಾನವು ಸರ್ವಯಜ್ಞಗಳಿಗೂ ಸಾಮಾನ್ಯವಿಧಿಯೆಂದು ಹೇಳಿದೆ. ಒಪ್ಪೊತ್ತು ಭೋಜನ ಮಾಡಿದವಳಿಗೆ ಅದಕ್ಕೆ ತಕ್ಕಷ್ಟು ಫಲವೂ, ಉಪವಾಸಮಾಡಿದವಳಿಗೆ ಅದಕ್ಕೆ ತಕ್ಕಷ್ಟು ಫಲವೂ ದೊರೆಯುತ್ತದೆ.

೭. ಕ್ಷಮೆ, ಸತ್ಯ, ದಯೆ, ದಾನ, ಶುಚಿತ್ವ, ಇಂದ್ರಿಯನಿಗ್ರಹ, ಸೂರ್ಯಪೂಜೆ, ಅಗ್ನಿಯಲ್ಲಿ ಹೋಮಮಾಡುವುದು, ಸಂತೋಷಚಿತ್ತತೆ, ಕಳ್ಳತನ ಮಾಡದಿರುವುದು, ಈ ಹತ್ತೂ; ಸರ್ವವ್ರತಾಚರಣಗಳಲ್ಲೂ ನಡೆಯಿಸಬೇಕಾದ ಸಾಮಾನ್ಯಧರ್ಮವೆಂದು ತಿಳಿಯಬೇಕು.

೮. ಮಾಸವ್ರತವನ್ನು ಆಚರಿಸುವಾಗ ಎಲ್ಲ ಮಾಸಗಳಲ್ಲೂ ಆಚರಿಸಬೇಕಾದ ಕ್ರಮವನ್ನು ಈಗ ಸಮಗ್ರವಾಗಿ ಹೇಳುತ್ತೇನೆ ಕೇಳು ;

**ಮಾರ್ಗಶೀರ್ಷೇ ಶುಭೇ ಮಾಸಿ ವ್ಯೋಮಸ್ಪೃಷ್ಟೇ ವಿನಿರ್ಮಿತಂ ।**
**ಗಂಧಮಾಲ್ಯೈರಲಂಕೃತ್ಯ ಶುಭಾನನಮನೂಪಮಂ ॥ ೯ ॥**

**ತಾಮ್ರಪಾತ್ರಾದಿಕೈಶ್ಚೈವಾಪ್ಯಪ್ಸರೋಗಣಸೇವಿತೈಃ ।**
**ಸುಮೇರೌ ದಶಸಾಹಸ್ರೇ ಸೂರ್ಯಲೋಕೇ ಮಹೀಯತೇ ॥ ೧೦ ॥**

**ಸರ್ವದೇವಕದಂಬೇಷು ಸಂಪ್ರಾಪ್ಯ ವಿಮಲಾಂ ಶ್ರಿಯಂ ।**
**ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾನಂ ಪತಿಮಾಪ್ನುಯಾತ್ ।**
**ಪುಷ್ಯೇ ವ್ಯೋಮಮಲಂಕೃತ್ಯ ಭಾನವೇ ವಿನಿವೇದಯೇತ್ ॥ ೧೧ ॥**

**ಗಂಧಮಾಲ್ಯೈರಲಂಕೃತ್ಯ ಶುಭಾನನಮನೂಪಮಂ ।**
**ತಾಮ್ರಪಾತ್ರಾದಿ ಕಾಂಸ್ಯಂ ವಾ ಕೃತ್ವಾ ತತ್ರ ನಿವೇದಯೇತ್ ॥ ೧೨ ॥**

**ಮಹಾಪುಷ್ಪಕಯಾನೇನ ದಿವ್ಯಗಂಧಪ್ರವಾಹಿನಾ ।**
**ಸುಮೇರೌ ದಶಸಾಹಸ್ರಂ ಸೂರ್ಯಲೋಕೇ ಮಹೀಯತೇ ॥ ೧೩ ॥**

---

೯-೧೦. ಶುಭಕರವಾದ ಮಾರ್ಗಶಿರಮಾಸದಲ್ಲಿ ವ್ಯೋಮಸ್ಪೃಷ್ಟದಲ್ಲಿ ಅಸದೃಶವಾದ ಶುಭಾನನವನ್ನು ಮಾಡಿ, ತಾಮ್ರದ ಕಲಶಗಳಲ್ಲಿ ಅಪ್ಸರರಗಣಯುಕ್ತವಾಗುವಂತೆ ಆವಾಹಿಸಿ, ಗಂಧಮಾಲ್ಯಗಳಿಂದ ಅಲಂಕರಿಸಿ, ಅಪ್ಸರೋಗಣ ಸಂಬಂಧಿಯಾದ ಅದನ್ನು ಧೂಪ ದೀಪ ನೈವೇದ್ಯಾದಿಗಳಿಂದ ತುಷ್ಟಿಪಡಿಸಬೇಕು. ಹೀಗೆ ಮಾಡಿದರೆ ಸುಮೇರುವಿನಲ್ಲಿರುವ ಸೂರ್ಯಲೋಕದಲ್ಲಿ ಹತ್ತುಸಾವಿರ ವರ್ಷಗಳವರೆಗೆ ಪೂಜಿತೆಯಾಗುತ್ತಾಳೆ.

೧೧. ಅಲ್ಲಿ ದೇವತಾಸಮೂಹಗಳ ಮಧ್ಯೆ ಶ್ರೇಷ್ಠವಾದ ಸಂಪತ್ತನ್ನು ಅನುಭವಿಸುತ್ತಿದ್ದು, ಕಾಲಕ್ರಮದಲ್ಲಿ ಈ ಲೋಕಕ್ಕೆ ಬಂದು ರಾಜನನ್ನೇ ಪತಿಯಾಗಿ ಹೊಂದುವಳು. ಪುಷ್ಯಮಾಸದವ್ರತದಲ್ಲಿಯೂ ಇದೇ ರೀತಿ ವ್ಯೋಮವನ್ನು ಅಲಂಕರಿಸಬೇಕು.

೧೨. ಆ ವ್ಯೋಮದಲ್ಲಿ ಅಸದೃಶವಾದ ಶುಭಾನನವನ್ನು ಮಾಡಿ, ತಾಮ್ರದ ಅಥವಾ ಕಂಚಿನ ಪಾತ್ರೆಗಳಲ್ಲಿ ಆವಾಹಿಸಿ, ಗಂಧಮಾಲ್ಯಮೊದಲಾದುವುಗಳಿಂದ ಅಲಂಕರಿಸಿ ದೇವರ ಸಮ್ಮುಖದಲ್ಲಿ ಇರಿಸಿ, ಧೂಪ ನೈವೇದ್ಯಾದಿಗಳನ್ನು ಸಮರ್ಪಣೆಮಾಡಬೇಕು.

೧೩. ಹೀಗೆ ಮಾಡಿದರೆ ಸೊಗಸಾದ ಸುವಾಸನೆಯನ್ನು ಎರಚುತ್ತಿರುವ ದೊಡ್ಡದಾದ ಪುಷ್ಪಕವಿಮಾನದ ಮೂಲಕ, ಸುಮೇರು ಪರ್ವತದಲ್ಲಿರುವ ಸೂರ್ಯಲೋಕಕ್ಕೆ ಹೋಗಿ, ಅಲ್ಲಿ ಹತ್ತುಸಹಸ್ರ ವರ್ಷಗಳವರೆಗೆ ಪೂಜಿತೆಯಾಗುತ್ತಾಳೆ.

ಭುಕ್ತ್ವಾ ತು ವಿಪುಲಾನ್ ಭೋಗಾನ್ ಸರ್ವಲೋಕೇಷು ಭಾರತ ।
ಸಂಪ್ರಾಪ್ಯೈಕಂ ಕ್ರಮಾಲ್ಲೋಕಂ ಯಥೇಷ್ಟಂ ವಿಂದತೇ ಪತಿಂ ॥ ೧೪ ॥

ಮಾಘೇ ರಥಂ ಚಾಶ್ವಯುಜಂ ದೀಪಮಾಲ್ಯವಿಭೂಷಿತಂ ।
ಪಿಷ್ಟಸಾನುಸಮಾಯುಕ್ತಂ ಕೃತ್ವಾಯತನಮಾನಯೇತ್ ॥ ೧೫ ॥

ಮಹಾರಥೋಪಮೈರ್ಯಾನೈಃ ಶ್ವೇತಾಶ್ವವರಸಂಯುತೈಃ ।
ವರ್ಷಾಯುತಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥ ೧೬ ॥

ಸರ್ವಾಮರಾಣಾಂ ಲೋಕೇಷು ಪ್ರಾಪ್ಯ ಭೋಗಾನ್ಯಥೇಪ್ಸಿತಾನ್ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ಯಥೇಷ್ಟಂ ಪತಿಮಾಪ್ನುಯಾತ್ ॥ ೧೭ ॥

ಪ್ರತಿಮಾಂ ಫಾಲ್ಗುನೇ ಮಾಸಿ ಕೃತ್ವಾ ಪಿಷ್ಟಮಯೀಂ ರವೇಃ ।
ಗಂಧಮಾಲ್ಯೈರಲಂಕೃತ್ಯ ಸ್ಥಾಪಯೇದ್ಭಾಸ್ಕರಾಲಯೇ ॥ ೧೮ ॥

---

೧೪. ಅಯ್ಯಾ ಭರತಕುಲೋತ್ಪನ್ನನೇ! ಕೇಳು; ಆಕೆ ಎಲ್ಲ ಲೋಕಗಳಲ್ಲಿಯೂ ಸಮೃದ್ಧಿಯಾಗಿ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಲೋಕಕ್ಕೆ ಬಂದು ತನಗೆ ಇಷ್ಟನಾದ ಪತಿಯನ್ನು ಪಡೆಯುತ್ತಾಳೆ.

೧೫. ಮಾಘಮಾಸದಲ್ಲಿ ಈ ವ್ರತಮಾಡುವಾಗ ಕುದುರೆಗಳನ್ನು ಕಟ್ಟಿದುದೂ, ದೀಪಗಳಿಂದಲೂ, ಪುಷ್ಪಹಾರಗಳಿಂದಲೂ, ಭೂಷಿತವಾದುದೂ, ಮತ್ತು ಹಿಟ್ಟಿನಿಂದ ಮಾಡಿದ ಸಾನುಪ್ರದೇಶವನ್ನುಳ್ಳದ್ದೂ ಆಗಿರುವಂತೆ ರಥವನ್ನು ನಿರ್ಮಿಸಿ ಅದನ್ನು ಸೂರ್ಯದೇವಾಲಯಕ್ಕೆ ತಂದು ಸಮರ್ಪಿಸಬೇಕು.

೧೬. ಹೀಗೆ ಮಾಡಿದವರೆ ಶ್ರೇಷ್ಠವಾದ ಬಿಳಿಯಕುದುರೆಗಳನ್ನು ಕಟ್ಟಿದ ಮಹಾರಥಸದೃಶವಾದ ಯಾನಗಳ ಮೂಲಕ ಸೂರ್ಯಲೋಕಕ್ಕೆ ಹೋಗಿ, ಹತ್ತುಲಕ್ಷ ವರ್ಷಗಳವರೆಗೆ ಸೂರ್ಯಲೋಕದಲ್ಲಿ ಪೂಜಿತೆಯಾಗುತ್ತಾಳೆ.

೧೭. ಅಲ್ಲದೆ ಇತರ ದೇವಲೋಕಗಳಲ್ಲೆಲ್ಲಾ ಸಂಚರಿಸಿ, ತನಗೆ ಇಷ್ಟಗಳಾದ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಲೋಕಕ್ಕೆ ಬಂದು ತನಗೆ ಇಷ್ಟನಾದ ಪತಿಯನ್ನು ಪಡೆಯುತ್ತಾಳೆ.

೧೮. ಫಾಲ್ಗುಣಮಾಸದಲ್ಲಿ ಈ ವ್ರತಮಾಡುವಾಗ, ಹಿಟ್ಟಿನಿಂದ ಸೂರ್ಯಪ್ರತಿಮೆಯನ್ನು ಮಾಡಿ, ಗಂಧಮಾಲ್ಯ ಮೊದಲಾದುವುಗಳಿಂದ ಅಲಂಕರಿಸಿ ಸೂರ್ಯದೇವಾಲಯಕ್ಕೆ ತಂದು ಅಲ್ಲಿ ಸ್ಥಾಪನಮಾಡಬೇಕು.

**ಯಾನೈರಪ್ರತಿಮೈರ್ದಿವ್ಯೈರ್ಗೀತನಾದಸಮಾಕುಲೈಃ ।**
**ಸುಮೇರೌ ದಶಸಾಹಸ್ರಂ ಸೂರ್ಯಲೋಕೇ ಮಹೀಯತೇ ॥ ೧೯ ॥**

**ಸರ್ವಾಭಿಮತಲೋಕೇಽಸ್ಮಿನ್ ಪ್ರಾಪ್ಯ ಭೋಗಾನ್ ಯಥೇಪ್ಸಿತಾನ್ ।**
**ಪುನರೇತ್ಯ ಇಮಂ ಲೋಕಂ ಯಥೇಷ್ಟಂ ವಿಂದತೇ ಪತಿಂ ॥ ೨೦ ॥**

**ಕೃತ್ವಾರುಣಂ ತಥಾ ಚೈತ್ರೇ ಗಂಧಮಾಲ್ಯೋಪಶೋಭಿತಂ ।**
**ಸ್ಥಾಪ್ಯ ಪಾತ್ರೇ ಯಥೋಕ್ತೇ ತು ಭಾಸ್ಕರಾಯ ನಿವೇದಯೇತ್ ॥ ೨೧ ॥**

**ಶರದಿಂದುಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।**
**ವರ್ಷಾಯುತಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥ ೨೨ ॥**

**ಕರ್ಮಕ್ಷಯಾದಿಹಾಗತ್ಯ ಪುತ್ರಪೌತ್ರಸಮನ್ವಿತಂ ।**
**ಅಭೀಷ್ಟಂ ಪತಿಮಾಸಾದ್ಯ ಲಭೇದ್ಭೋಗಾನ್ ಸುದುರ್ಲಭಾನ್ ॥ ೨೩ ॥**

---

೧೯; ಹೀಗೆ ಮಾಡಿದರೆ ದಿವ್ಯಗೀತನಾದಗಳಿಂದ ಯುಕ್ತಗಳಾಗಿ, ಅಪ್ರತಿಮಗಳಾದ ಯಾನಗಳ ಮೂಲಕ ಸುಮೇರುವಿನಲ್ಲಿರುವ ಸೂರ್ಯಲೋಕಕ್ಕೆ ಬಂದು, ಅಲ್ಲಿ ಹತ್ತುಸಾವಿರ ವರ್ಷಗಳಕಾಲ ಪೂಜಿತೆಯಾಗುತ್ತಾಳೆ.

೨೦. ಸರ್ವರೂ ಆಶೆಪಡುವಂತಹ ಆ ಲೋಕದಲ್ಲಿ ಯಥೇಚ್ಛವಾಗಿ ಭೋಗಗಳನ್ನು ಅನುಭವಿಸುತ್ತಿದ್ದು, ಮತ್ತೆ ಈ ಲೋಕಕ್ಕೆ ಬಂದು, ತನಗೆ ಇಷ್ಟನಾದ ಪತಿಯನ್ನು ಪಡೆಯುತ್ತಾಳೆ.

೨೧. ಚೈತ್ರಮಾಸದಲ್ಲಿ ಈ ವ್ರತ ಮಾಡುವಾಗ ಹಿಂದೆ ಹೇಳಿದಂತಹ ತಾಮ್ರಾದಿ ಪಾತ್ರೆಗಳಲ್ಲಿ ಅರುಣನನ್ನು ಸ್ಥಾಪಿಸಿ, ಗಂಧ, ಹೂ ಇವುಗಳಿಂದ ಪೂಜಿಸಿ ಶೋಭಿಸುವಂತೆಮಾಡಿ, ದೇವಾಲಯದಲ್ಲಿರುವ ಭಾಸ್ಕರನಿಗೆ ಸಮರ್ಪಣಮಾಡಬೇಕು

೨೨. ಹೀಗೆ ಮಾಡಿದ ಆಕೆಯು, ಶರಚ್ಚಂದ್ರನಂತೆ ಕಾಂತಿಯುಕ್ತವೂ, ಸರ್ವಕಾಮಸಮೃದ್ಧವೂ ಆದ ವಿಮಾನದ ಮೂಲಕ ಸೂರ್ಯಲೋಕಕ್ಕೆ ಹೋಗಿ, ಹತ್ತು ಲಕ್ಷವರ್ಷಗಳ ಕಾಲ ಪೂರ್ತಿ ಅಲ್ಲಿ ಪೂಜಿತೆಯಾಗುತ್ತಾಳೆ.

೨೩. ಆ ಲೋಕದಲ್ಲಿ ವಾಸಿಸುವ ಪುಣ್ಯಫಲ ತೀರಿದಮೇಲೆ, ಈ ಲೋಕಕ್ಕೆ ಬಂದು, ಮಕ್ಕಳು ಮೊಮ್ಮಕ್ಕಳನ್ನು ಪಡೆಯುವ ಯೋಗವುಳ್ಳವನೂ, ತನಗೆ ಇಷ್ಟನೂ ಆದ ಪತಿಯನ್ನು ಪಡೆದು ಸುದುರ್ಲಭಗಳಾದ ಭೋಗಗಳನ್ನು ಹೊಂದುತ್ತಾಳೆ.

ತಂಡುಲಾಢಕಪಿಷ್ಟೇನ ಕೃತ್ವಾ ವೈ ಮೇರುಪರ್ವತಂ ।
ನಿಕ್ಷುಭಾರ್ಕಸಮಾಯುಕ್ತಂ ಸರ್ವಧಾತುವಿಭೂಷಿತಂ ॥ ೨೪ ॥

ನಾನಾಲಂಕಾರಸಂಪನ್ನಂ ನಾನಾಮಾಲ್ಯವಿಭೂಷಿತಂ ।
ಸರ್ವರತ್ನಸಮಾಯುಕ್ತಂ ಸ್ಥಾಪಯೇದ್ಭಾಸ್ಕರಾಲಯೇ ॥ ೨೫ ॥

ಮಹದ್ವ್ಯೋಮವ್ರತಂ ಹ್ಯೇತದ್ವೈಶಾಖೇ ಯಃ ಸಮಾಚರೇತ್ ।
ನಾನಾವಿಧೈಶ್ಚ ಯಾನೈಸ್ತು ಸೂರ್ಯಲೋಕೇ ಮಹೀಯತೇ ॥ ೨೬ ॥

ಸೌರಾದಿಸರ್ವಲೋಕೇಷು ಭುಕ್ತ್ವಾ ಭೋಗಾನಶೇಷತಃ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾನಂ ಪತಿಮಾಪ್ನುಯಾತ್ ॥ ೨೭ ॥

ದ್ವಿತೀಯಂ ಚ ತಥಾ ಪದ್ಮಮಾಷಾಢೇ ಪಿಷ್ಟಮುತ್ತಮಂ ।
ಸರ್ವಬೀಜರಸೈಃ ಪೂರ್ಣಂ ಕೃತ್ವಾ ತು ಶುಭಲಕ್ಷಣಂ ॥
ನಾನಾಕೇಶರಗಂಧಾಢ್ಯಂ ಸರ್ವರತ್ನವಿಭೂಷಿತಂ ॥ ೨೮ ॥

---

೨೪-೨೫. ಒಂದು ಕೊಳಗ ಪ್ರಮಾಣದ ಅಕ್ಕಿಯಹಿಟ್ಟಿನಿಂದ ಮೇರುಪರ್ವತಾಕೃತಿಯನ್ನು ಮಾಡಿ, ಅದರಲ್ಲಿ ನಿಕ್ಷುಭಾ, ಅರ್ಕ ಇವರ ಪ್ರತಿಮೆಗಳಸಮೇತವಾಗಿರುವಂತೆಯೂ, ಸಮಸ್ತ ಗೈರಿಕಾದಿ ಧಾತುವಸ್ತುಯುಕ್ತವಾಗಿರುವಂತೆಯೂ ರಚಿಸಿ, ಆಭರಣಗಳಿಂದಲೂ, ಪುಷ್ಪಹಾರಗಳಿಂದಲೂ ಅಲಂಕರಿಸಿ, ಸರ್ವರತ್ನಯುಕ್ತವಾದ ಆ ಮೇರುಪರ್ವತಾಕೃತಿಯನ್ನು ಭಾಸ್ಕರಾಲಯದಲ್ಲಿ ಸ್ಥಾಪಿಸಬೇಕು.

೨೬. ವೈಶಾಖಮಾಸದಲ್ಲಿ ಈ ರೀತಿ ಮಹಾವ್ಯೋಮವ್ರತವನ್ನು ಮಾಡುವವಳು, ನಾನಾವಿಧವಾದ ಯಾನಗಳ ಮೂಲಕ ಸೂರ್ಯಲೋಕವನ್ನು ಸೇರಿ ಅಲ್ಲಿ ಪೂಜಿತೆಯಾಗುವಳು.

೨೭. ಸೌರಲೋಕವೇ ಮುಂತಾದ ಎಲ್ಲ ಲೋಕಗಳಲ್ಲಿಯೂ ಸಮಗ್ರವಾಗಿ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಲೋಕದಲ್ಲಿ ಜನಿಸಿ, ರಾಜನನ್ನು ಪತಿಯಾಗಿ ಪಡೆಯುತ್ತಾಳೆ.

೨೮. ಆ ವೈಶಾಖಮಾಸದ ಮುಂದಿನ ತಿಂಗಳಾದ ಜ್ಯೇಷ್ಠಮಾಸದಲ್ಲಿಯೂ ವೈಶಾಖಮಾಸದಲ್ಲಿ ಮಾಡಿದಂತೆಯೇ ಆಚರಿಸಬೇಕು. ಆಷಾಢಮಾಸದಲ್ಲಿ ಈ ಮಹಾ

ಏತೈರ್ವಾ ಹೈಮಭಿರ್ಯಾನೈಃ ಸರ್ವಭೋಗಾನ್ವಿತೈರ್ನೃಪ ।
ವರ್ಷಕೋಟಿಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥ ೨೯ ॥

ಭುಕ್ತ್ವಾ ತು ವಿಪುಲಾನ್ ಭೋಗಾನ್ ಸರ್ವಲೋಕೇಷ್ವನುಕ್ರಮಾತ್ ।
ಪ್ರಾಪ್ತಾ ತು ಸರ್ವಭೋಗಾಢ್ಯಂ ತರುಣಂ ವಿಂದತೇ ಪತಿಂ ॥ ೩೦ ॥

ಸರ್ವಧಾತುಸಮಾಕೀರ್ಣಂ ವಿಚಿತ್ರಧ್ವಜಶೋಭಿತಂ ।
ನಿವೇದಯೇತ ಸೂರ್ಯಾಯ ಶ್ರಾವಣೇ ತಿಲಪರ್ವತಂ ॥ ೩೧ ॥

ಸ್ವಚ್ಛಂದಗಾಮಿಭಿರ್ಯಾನೈರ್ನಾನಾವರ್ಣವಿಭೂಷಿತೈಃ ।
ವರ್ಷಕೋಟಿಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥ ೩೨ ॥

---

ವ್ಯೋಮವ್ರತ ಮಾಡಲು ಇಚ್ಛಿಸುವವಳು ಉತ್ತಮವಾದ ಹಿಟ್ಟಿನಲ್ಲಿ ಪದ್ಮಾಕಾರವಾಗಿ ವ್ಯೋಮವನ್ನು ರಚಿಸಿ, ಸರ್ವಬೀಜಗಳಿಂದಲೂ, ಸರ್ವರಸಗಳಿಂದಲೂ ಯುಕ್ತವಾಗಿ, ಶುಭಕರವಾದ ಲಕ್ಷಣಗಳಿಂದ ಕೂಡಿರುವಂತೆ ಮಾಡಿ, ಕುಂಕುಮಕೇಸರಿ ಮುಂತಾದ ನಾನಾವಸ್ತುಮಿಶ್ರಿತವಾದ ಗಂಧದಿಂದ ಲೇಪಿಸಿ, ಸಮಸ್ತ ರತ್ನಗಳಿಂದ ಅಲಂಕರಿಸಿ ದೇವಾಲಯಕ್ಕೆ ತಂದು ಸಮರ್ಪಿಸಬೇಕು.

೨೯. ಎಲೈ ರಾಜನೇ! ಕೇಳು; ಹೀಗೆ ಮಾಡಿದರೆ ಸರ್ವಭೋಗ್ಯವಸ್ತುಗಳಿಂದ ಕೂಡಿದ ಚಿನ್ನದ ವಿಮಾನಗಳಲ್ಲಿ ಕುಳಿತು, ಸೂರ್ಯಲೋಕಕ್ಕೆ ಹೋಗಿ, ಅಲ್ಲಿ ಕೋಟಿವರ್ಷಗಳಕಾಲ ಪೂರ್ತ ಪೂಜಿತೆಯಾಗಿರುತ್ತಾಳೆ.

೩೦. ಅದೇ ರೀತಿ ಇತರ ಸಮಸ್ತಲೋಕಗಳಲ್ಲಿಯೂ ಅಧಿಕವಾಗಿ ಭೋಗಗಳನ್ನು ಅನುಭವಿಸಿ, ಅನುಕ್ರಮದಿಂದ ಈ ಲೋಕಕ್ಕೆ ಬಂದು, ಭೋಗಸಮರ್ಥನೂ ಪ್ರಾಯದವನೂ ಆದ ಪತಿಯನ್ನು ಹೊಂದುವಳು.

೩೧. ಶ್ರಾವಣಮಾಸದಲ್ಲಿ ಈ ವ್ರತಮಾಡಿದಾಗ ತಿಲದಿಂದ ಪರ್ವತಾಕೃತಿಯನ್ನು ರಚಿಸಿ, ಎಲ್ಲ ಬಣ್ಣಗಳಿಂದಲೂ ಕೂಡಿದ ವಿಚಿತ್ರಧ್ವಜಗಳಿಂದ ಅದನ್ನು ಅಲಂಕರಿಸಿ, ದೇವಾಲಯದಲ್ಲಿ ಸೂರ್ಯಸನ್ನಿಧಿಗೆ ಸಮರ್ಪಿಸಬೇಕು.

೩೨. ಹೀಗೆ ಮಾಡಿದರೆ ಸ್ವೇಚ್ಛಾನುಸಾರ ಗಮಿಸತಕ್ಕುದೂ, ನಾನಾವರ್ಣ ವಿಭೂಷಿತವೂ ಆದ ವಿಮಾನಗಳ ಮೂಲಕ ಹೊರಟು ಸೂರ್ಯಲೋಕವನ್ನು ಸೇರಿ ಅಲ್ಲಿ ನೂರುಕೋಟಿ ವರ್ಷಗಳ ಪರ್ಯಂತ ಪೂಜಿತೆಯಾಗುತ್ತಾಳೆ.

ಸಂಪ್ರಾಪ್ಯ ವಿವಿಧಾನ್ ಭೋಗಾನ್ ಬಹ್ವಾಶ್ಚರ್ಯಸಮನ್ವಿತಾನ್ ।
ಕ್ರಮಾಲ್ಲೋಕಮಿದಂ ಪ್ರಾಪ್ಯ ರಾಜಾನಂ ವಿಂದತೇ ಪತಿಂ ॥ ೩೩ ॥

ಕೃತ್ವಾ ಭಾದ್ರಪದೇ ಮಾಸಿ ವ್ಯೋಮ ಶಾಲಿಮಯಂ ನೃಪ ।
ವಿತಾನಧ್ವಜಛತ್ರಾಢ್ಯಂ ನಾನಾಮಾಲಾವಿಭೂಷಿತಂ ॥ ೩೪ ॥

ತರುಣಾರ್ಕಕರಪ್ರಖ್ಯೈರ್ಮಹಾಯಾನೈಃ ಸುಶೋಭನೈಃ ।
ವರ್ಷಕೋಟಿಸಹಸ್ರಾಣಿ ಸೂರ್ಯಲೋಕೇ ಮಹೀಯತೇ ॥ ೩೫ ॥

ಸಂಪ್ರಾಪ್ಯ ವಿವಿಧಾನ್ ಭೋಗಾನ್ ಸರ್ವಾನ್ನಿಮಿಷಸಂಭವಾನ್ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾನಂ ವಿಂದತೇ ಪತಿಂ ॥ ೩೬ ॥

ಕೃತ್ವಾ ಚಾಶ್ವಯುಜೇ ಮಾಸಿ ವಿಪುಲಂ ಧಾನ್ಯಪರ್ವತಂ ।
ಸುವರ್ಣವಸ್ತ್ರಗಂಧಾಢ್ಯಂ ಭಾಸ್ಕರಾಯ ನಿವೇದಯೇತ್ ॥ ೩೭ ॥

---

೩೩. ಅಲ್ಲಿ ಅನೇಕಾಶ್ಚರ್ಯಗಳಿಂದ ಕೂಡಿದ ಬಗೆಬಗೆಯ ಭೋಗಗಳನ್ನು ಹೊಂದಿ, ಕ್ರಮೇಣ ಈ ಲೋಕಕ್ಕೆ ಬಂದು ರಾಜನನ್ನು ತನ್ನ ಪತಿಯಾಗಿ ಪಡೆಯುತ್ತಾಳೆ.

೩೪. ಅಯ್ಯಾ ರಾಜನೇ! ಕೇಳು; ಭಾದ್ರಪದಮಾಸದಲ್ಲಿ ಈ ವ್ರತಮಾಡುವಾಗ ಅಕ್ಕಿಯ ಹಿಟ್ಟಿನಿಂದ ವ್ಯೋಮವನ್ನು ರಚಿಸಿ, ಅದನ್ನು ಮೇಲ್ಕಟ್ಟು, ಬಾವುಟ, ಛತ್ರಿಗಳಿಂದಲೂ, ನಾನಾ ಪುಷ್ಪಮಾಲೆಗಳಿಂದಲೂ ಅಲಂಕರಿಸಿ, ಹಿಂದಿನಂತೆ ಸೂರ್ಯದೇವಾಲಯದಲ್ಲಿ ಸ್ವಾಮಿಗೆ ಸಮರ್ಪಿಸಬೇಕು.

೩೫. ಹೀಗೆ ಮಾಡಿದರೆ ಆ ವ್ಯಕ್ತಿಯು ಬಾಲಸೂರ್ಯಕಿರಣಗಳಿಗೆ ಸಮಾನವಾಗಿ ಕಾಂತಿಯುತವೂ, ಮಂಗಳಕರವೂ, ಆದ ಮಹಾಯಾನಗಳ ಮೂಲಕ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಕೋಟಿವರ್ಷಗಳಕಾಲ ಪೂಜಿತವಾಗಿರುವುದು.

೩೬. ಅಲ್ಲಿ ನಿಮಿಷ ನಿಮಿಷಕ್ಕೂ ಉತ್ಪನ್ನವಾಗುವ ಬಗೆಬಗೆಯಾದ ಭೋಗಗಳನ್ನು ಅನುಭವಿಸಿ, ಕಾಲಕ್ರಮದಲ್ಲಿ ಈ ಲೋಕಕ್ಕೆ ಬಂದು, ರಾಜನನ್ನೇ ಪತಿಯನ್ನಾಗಿ ಪಡೆಯುತ್ತಾಳೆ.

೩೭. ಆಶ್ವಯುಜಮಾಸದಲ್ಲಿ ಈ ವ್ರತಮಾಡುವಾಗ ಧಾನ್ಯದಿಂದ ದೊಡ್ಡದಾದ ಪರ್ವತಾಕೃತಿಯನ್ನು ಮಾಡಿ, ಸುವರ್ಣ, ಗಂಧ, ವಸ್ತ್ರಾದಿಗಳಿಂದ ಅಲಂಕರಿಸಿ ದೇವಾಲಯದಲ್ಲಿ ಸೂರ್ಯಸಮ್ಮುಖದಲ್ಲಿ ಸಮರ್ಪಣೆಮಾಡಬೇಕು.

**ಸಾವಿತ್ರ್ಯೈಶ್ಚ ಮಹಾಯಾನೈಃ ವರಭೋಗಸಮನ್ವಿತೈ ।**
**ವರ್ಷಕೋಟಿಸಹಸ್ರಾಣಿ ಸೂರ್ಯಲೋಕೇ ಮಹೀಯತೇ　　　　॥ ೩೮ ॥**

**ಸೂರ್ಯಲೋಕಾದಿಲೋಕೇಷು ಭುಕ್ತ್ವಾ ಭೋಗಾನ್ಯಥೇಪ್ಸಿತಾನ್ ।**
**ಅಸ್ಮಿಲ್ಲೋಕೇ ಚ ಸಂಪ್ರಾಪ್ತಾ ರಾಜಾನಂ ವಿಂದತೇ ಪತಿಂ ॥**
**ಚಂದ್ರಾಗ್ನಿಭಾಸ್ಕರಾಣಾಂ ತು ಕಾಂತಿತೇಜಃಪ್ರಭಾನ್ವಿತಂ　　　　॥ ೩೯ ॥**

**ಯಂಯಂ ಕಾಮಂ ಸಮುದ್ದಿಶ್ಯ ನರನಾರೀನಪುಂಸಕಾಃ ।**
**ಪೂಜಯಂತಿ ರವಿಂ ಭಕ್ತ್ಯಾ ತತ್ಸರ್ವಂ ಪ್ರಾಪ್ನುವಂತಿ ತೇ　　　　॥ ೪೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸೌರಧರ್ಮೇಷು ಕಾಮಪ್ರದಸ್ತ್ರೀವ್ರತವರ್ಣನಂ ನಾಮ ಅಷ್ಟಷಷ್ಟ್ಯುತ್ತರ ಶತತಮೋಽಧ್ಯಾಯಃ.**

---

೩೮. ಹೀಗೆ ಮಾಡಿದರೆ ಶ್ರೇಷ್ಠಗಳಾದ ಭೋಗಸಾಮಗ್ರಿಗಳಿಂದ ಕೂಡಿದ ಸವಿತೃದೇವತಾಕವಾದ ಮಹಾಯಾನಗಳನ್ನೇರಿ ಸೂರ್ಯಲೋಕಕ್ಕೆ ಹೋಗಿ, ಅಲ್ಲಿ ಸಹಸ್ರಕೋಟಿ ವರ್ಷಗಳಕಾಲ ಪೂಜಿತೆಯಾಗುತ್ತಾಳೆ.

೩೯. ಅಲ್ಲದೆ ಸೂರ್ಯಲೋಕವೇ ಮುಂತಾದ ಇತರ ಲೋಕಗಳಿಗೆಲ್ಲಾ ಹೋಗಿ, ತನಗೆ ಇಷ್ಟಗಳಾದ ಭೋಗಗಳನ್ನು ಅನುಭವಿಸಿ, ಅನಂತರ ಈ ಲೋಕಕ್ಕೆ ಬಂದು ಚಂದ್ರನಕಾಂತಿಯಿಂದಲೂ, ಅಗ್ನಿಯತೇಜಸ್ಸಿನಿಂದಲೂ, ಭಾಸ್ಕರನ ಪ್ರಭೆಯಿಂದಲೂ ಕೂಡಿದ ತೇಜೋವಂತನಾದ ರಾಜನನ್ನು ಪತಿಯನ್ನಾಗಿ ಪಡೆಯುತ್ತಾಳೆ.

೪೦. ಸ್ತ್ರೀಯಾಗಲಿ, ಪುರುಷನಾಗಲಿ, ನಪುಂಸಕನಾಗಲಿ, ಯಾರು ಯಾರು ಯಾವ ಯಾವ ಅಭೀಷ್ಟವನ್ನು ಉದ್ದೇಶಮಾಡಿಕೊಂಡು ಸೂರ್ಯನನ್ನು ಪೂಜಿಸುತ್ತಾರೆಯೋ, ಅವರವರು ಆಯಾ ಅಭೀಷ್ಟಗಳನ್ನೆಲ್ಲವನ್ನೂ ಹೊಂದುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೌರಧರ್ಮ ವಿವರಣದಲ್ಲಿ ಕಾಮಪ್ರದ ಸ್ತ್ರೀವ್ರತ ವರ್ಣನೆಯೆಂಬ ನೂರರವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನಸಪ್ತತ್ಯುತ್ತರಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಮೃಣ್ಮಯಂ ದಾರುಜಂ ಶೈಲಂ ಪಕ್ವೇಷ್ಟಕಮಥಾಪಿ ವಾ ।
ಕೃತ್ವಾ ಮಠಂ ಗೃಹಂ ವಾಪಿ ಯಥಾವಿಭವಸಂಭವಾತ್ ॥ ೧ ॥

ಸರ್ವೋಪಕರಣೋಪೇತಂ ಸರ್ವಧಾನ್ಯಸಮನ್ವಿತಂ ।
ಸೂರ್ಯಾಯೇತ್ಥಂ ಗೃಹಂ ದದ್ಯಾತ್ಸರ್ವಾನ್ಕಾಮಾನವಾಪ್ನುಯಾತ್ ॥ ೨ ॥

ಕೃತ್ವೈಕಭಕ್ತಂ ಹೇಮಂತೇ ಮಾಘಮಾಸಮತಂದ್ರಿತಃ ।
ಮಾಸಾಂತೇನ ರಥಂ ಕುರ್ಯಾಚ್ಚಿತ್ರವಸ್ತ್ರೋಪಶೋಭಿತಂ ॥ ೩ ॥

---

## ನೂರಅರತ್ತೊಂಭತ್ತನೆಯ ಅಧ್ಯಾಯ

೧-೨. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಮತ್ತೊಂದು ಬಗೆಯ ಸೂರ್ಯವ್ರತವನ್ನು ನಿರೂಪಿಸುತ್ತಾರೆ—ಮಾನವನು ತನಗೆ ಲಭ್ಯವಾಗಿರುವ ದ್ರವ್ಯ ಸಂಪತ್ತಿಗೆ ತಕ್ಕಂತೆ ಮಣ್ಣಿನಿಂದಲೋ, ಮರದಿಂದಲೋ, ಕಲ್ಲಿನಿಂದಲೋ, ಸುಟ್ಟ ಇಟ್ಟಿಗೆಯಿಂದಲೋ, ಮಠವನ್ನಾಗಲಿ, ಮನೆಯನ್ನಾಗಲಿ ನಿರ್ಮಿಸಿ, ಸಮಸ್ತಉಪಕರಣಗಳನ್ನೂ, ಸಮಸ್ತಧಾನ್ಯಗಳನ್ನೂ ಒದಗಿಸಿ, ಸೂರ್ಯಪ್ರೀತಿಗಾಗಿ ಆ ಕಟ್ಟಡವನ್ನು ದಾನಮಾಡಬೇಕು. ಹೀಗೆ ದಾನಮಾಡಿದವನಿಗೆ ಸಕಲ ಇಷ್ಟಾರ್ಥಗಳೂ ಲಭಿಸುತ್ತವೆ.

೩. ಹಿಮಂತುಋತುವಿನ (ಮಾರ್ಗಶಿರ ಪುಷ್ಯಮಾಸದ) ಲ್ಲಿ ಎಂದರೆ ಮಾಘ ಮಾಸ ಹುಟ್ಟುವವರೆಗೂ ಪಾಲುಮಾರಿಕೆಯಿಲ್ಲದೆ ಏಕಭುಕ್ತವ್ರತವನ್ನು ಮಾಡಿ,

ಶ್ವೇತೈಶ್ಚತುರ್ಭಿಃ ಸಂಯುಕ್ತಂ ತುರಂಗೈಃ ಸಮಲಂಕೃತಂ ।
ಶ್ವೇತಧ್ವಜಪತಾಕಾಭಿಶ್ಛತ್ರಚಾಮರದರ್ಪಣೈಃ ॥ ೪ ॥

ತಂಡುಲಾಢಕಪಿಷ್ಟೇನ ಕೃತ್ವಾ ಭಾನುಂ ನರಾಧಿಪ ।
ವಿನ್ಯಸ್ಯ ತಂ ರಥೋಪಸ್ಥೇ ಸಂಜ್ಞಯಾ ಸಹ ಭೂಪತೇ ॥ ೫ ॥

ತಂ ರಾತ್ರೌ ರಾಜಮಾರ್ಗೇಣ ಶಂಖಭೇರ್ಯಾದಿನಿಸ್ವನೈಃ ।
ಭ್ರಮಯಿತ್ವಾ ಶನೈಃ ಪಶ್ಚಾತ್ಸೂರ್ಯಾಯತನಮಾವಿಶೇತ್ ॥ ೬ ॥

ತತ್ರ ಜಾಗರಪೂಜಾಭಿಃ ಪ್ರದೀಪಾವಲಿಶೋಭಿತೈಃ ।
ಪ್ರೇಕ್ಷಣೀಯೈಃ ಪ್ರದಾನೈಶ್ಚ ಕ್ಷಪಯಿತ್ವಾ ಶನೈಃ ಕ್ಷಪಾಂ ॥ ೭ ॥

---

ಪುಷ್ಯಮಾಸದ ಕೊನೆಯದಿನ ಚಿತ್ರವಸ್ತುಗಳಿಂದ ಶೋಭಿತವಾದ ರಥವನ್ನು ಮಾಡಿಸ ಬೇಕು.

೪. ಆ ರಥಕ್ಕೆ ನಾಲ್ಕು ಬಿಳಿಯ ಕುದುರೆಗಳನ್ನು ಕಟ್ಟಿ, ಬಿಳಿಯ ಧ್ವಜ ಪತಾಕೆ, ಛತ್ರಿ, ಚಾಮರ, ಕನ್ನಡಿ, ಇವುಗಳಿಂದ ಅಲಂಕಾರಮಾಡಬೇಕು.

೫ ಅಯ್ಯಾ ರಾಜನೇ! ಕೇಳು; ಒಂದುಕೊಳಗ ಅಕ್ಕಿಯಹಿಟ್ಟಿನಿಂದ ಸೂರ್ಯನ ಪ್ರತಿಮೆಯನ್ನೂ, ಸಂಜ್ಞಾದೇವಿಯ ಪ್ರತಿಮೆಯನ್ನೂ ಮಾಡಿ, ರಥದ ಒಳಗೆ ಆ ಪ್ರತಿಮೆಗಳನ್ನಿರಿಸಬೇಕು.

೬. ಆ ರಾತ್ರಿಯಲ್ಲಿ ಶಂಖ ಭೇರಿ ಮುಂತಾದ ವಾದ್ಯಧ್ವನಿಯ ಸಮೇತ ರಾಜ ಬೀದಿಯಲ್ಲಿ ಆ ರಥವನ್ನು ಮೆಲ್ಲಗೆ ಎಳೆಯುತ್ತ ಊರಿನಸುತ್ತಲೂ ಸುತ್ತಿಸಿ ಸೂರ್ಯ ದೇವಾಲಯಕ್ಕೆ ತೆಗೆದುಕೊಂಡು ಹೋಗಬೇಕು

೭. ಆ ದೇವಾಲಯದಲ್ಲಿ ಅನೇಕ ದೀಪಗಳನ್ನು ಹತ್ತಿಸಿ ದೀಪೋತ್ಸವದಿಂದ ಶೋಭಿಸುವಂತೆ ಮಾಡಿ, ನಿಧಾನವಾಗಿ ಪ್ರತಿಯಾಮದಲ್ಲೂ ಪೂಜಾದಿಗಳನ್ನು ನಡೆಸುತ್ತಲೂ, ನಾಟಕ, ಹರಿಕಥೆ ಮುಂತಾದ ನೋಟಗಳನ್ನು ಏರ್ಪಡಿಸಿಯೂ, ಆ ರಾತ್ರಿಯನ್ನು ಜಾಗರಣೆಯಿಂದ ಕಳೆಯಬೇಕು.

ಪ್ರಭಾತೇ ಸ್ನಪನಂ ಕೃತ್ವಾ ಮಧುಕ್ಷೀರಘೃತೇನ ಚ ।
ದೀನಮೂಕಾಂಧಕೇಭ್ಯೋಽನ್ನಂ ಯಥಾಶಕ್ತಿ ಚ ದಕ್ಷಿಣಾಂ ॥ ೮ ॥

ರಥಂ ಸಂವಾಹನೋಪೇತಂ ಭಾಸ್ಕರಾಯ ನಿವೇದಯೇತ್ ।
ಭುಕ್ತ್ವಾ ಚ ಬಾಂಧವೈಃ ಸಾರ್ಧಂ ಪ್ರಣಮ್ಯಾರ್ಕಂ ಗೃಹಂ ವ್ರಜೇತ್ ॥ ೯ ॥

ಸರ್ವವ್ರತಾನಾಂ ಪ್ರವರಂ ಮಂತ್ರಧರ್ಮಾನ್ವಿತಃ ಸದಾ ।
ವ್ರತಂ ಸೂರ್ಯವ್ರತಂ ನಾಮ ಸರ್ವಕಾಮಾರ್ಥಸಿದ್ಧಯೇ ॥ ೧೦ ॥

ಸರ್ವವ್ರತೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ ।
ಸರ್ವಂ ಸೂರ್ಯರಥೇನೇಹ ತತ್ಪುಣ್ಯಂ ಲಭತೇ ನೃಪ ॥ ೧೧ ॥

ಸೂರ್ಯಾಯುತಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ತ್ರಿಸಪ್ತಪುರುಷೈಸ್ಸಾರ್ಧಂ ಸೂರ್ಯಲೋಕೇ ಮಹೀಯತೇ ॥ ೧೨ ॥

---

೮-೯. ಹೀಗೆ ಜಾಗರಣೆ ಮಾಡಿ, ಮಾರನೆಯ ಬೆಳಗ್ಗೆ ದೇವರಿಗೆ ಜೇನು ತುಪ್ಪ, ಹಾಲು, ತುಪ್ಪ ಇತ್ಯಾದಿ ಪಂಚಾಮೃತವಸ್ತುಗಳಿಂದ ಅಭಿಷೇಕಮಾಡಿಸಬೇಕು. ಪೂಜಾನಂತರ ದರಿದ್ರರು, ಮೂಗರು, ಕುರುಡರು ಇವರಿಗೆ ಅನ್ನವನ್ನೂ, ಶಕ್ತ್ಯನುಸಾರ ದಕ್ಷಿಣೆಯನ್ನೂ ಕೊಡಬೇಕು. ರಥಸ್ಥವಾದ ಪ್ರತಿಮೆಗೆ ಉಪಚಾರಪೂಜೆ ಮಾಡಿ, ಸಂವಾಹನಯುಕ್ತವಾದ ಆ ರಥವನ್ನು ಸೂರ್ಯದೇವನಿಗೆ ಅರ್ಪಿಸಬೇಕು. ಅನಂತರ ಬಂಧುಗಳೊಡಗೂಡಿ ಭೋಜನಮಾಡಿ, ದೇವರಿಗೆ ನಮಸ್ಕರಿಸಿ ತಮ್ಮ ಮನೆಗೆ ಹೋಗಬೇಕು.

೧೦ ಅಲ್ಲಿ ಸದಾ ಮಂತ್ರಜಪದಲ್ಲಿಯೂ, ಧರ್ಮಚಿಂತನದಲ್ಲಿಯೂ ಆಸಕ್ತನಾಗಿರಬೇಕು. ಸರ್ವವ್ರತಗಳಲ್ಲಿ ಶ್ರೇಷ್ಠವಾದ ಈ ಸೂರ್ಯವ್ರತವನ್ನು ಸಮಸ್ತ ಇಷ್ಟಾರ್ಥಸಿದ್ಧಿಗೋಸ್ಕರ ಮಾಡಬೇಕು.

೧೧. ಎಲೈ ರಾಜನೇ! ಕೇಳು; ಸರ್ವವ್ರತಗಳನ್ನು ಆಚರಿಸುವುದರಿಂದ ಬರುವ ಪುಣ್ಯವನ್ನೂ, ಸರ್ವಯಜ್ಞಾಚರಣೆಯಿಂದ ಒರುವ ಫಲವನ್ನೂ ಸೂರ್ಯನಿಗೆ ಈ ರೀತಿ ರಥವನ್ನು ಸಮರ್ಪಣಮಾಡುವುದರಿಂದಲೇ ಹೊಂದಬಹುದು.

೧೨. ಅಲ್ಲದೆ ಹತ್ತುಸಾವಿರ ಸೂರ್ಯರಿಗೆ ಸಮಸಾದ ಕಾಂತಿಯುಳ್ಳದ್ದೂ, ಸರ್ವಕಾಮ ಸಮೃದ್ಧಿಯುಳ್ಳದ್ದೂ, ಆದ ವಿಮಾನಗಳ ಮೂಲಕ, ತನ್ನ ವಂಶದ ಇಪ್ಪತ್ತೊಂದು ತಲೆಮಾರಿನ ಜನರೊಡನೆ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ.

ಭುಕ್ತ್ವಾ ತು ವಿಪುಲಾನ್ ಭೋಗಾನ್ ಸರ್ವಲೋಕೇಷ್ವನುಕ್ರಮಾತ್ ।
ಕಲ್ಪಾಯುತಶತಂ ಸಾಗ್ರಂ ತತೋ ರಾಜಾ ಭವೇತ್ ಕ್ಷಿತೌ ॥ ೧೩ ॥

ಪಂಚಭಿರ್ಬಲಿಭಿರ್ಯುಕ್ತಂ ಮೃದುಷಡ್ಭಾಸ್ತುಕಲ್ಪಿತಂ ।
ಸರ್ವೋಪಕರಣೋಪೇತಂ ಸೂರ್ಯಂ ಸಂಜ್ಞಾಂ ಪ್ರಕಲ್ಪಯೇತ್ ॥ ೧೪ ॥

ಸಂಜ್ಞಾದೇವೀಸಮಾಯುಕ್ತಂ ಪೈಷ್ಟಾಂಶಾಢ್ಯಂ ನಿವೇದಯೇತ್ ।
ಸೌರಜ್ಞಾನಾರ್ಥತತ್ತ್ವಜ್ಞಮಾಚಾರ್ಯಂ ಚ ಮುದನ್ವಿತಂ ॥ ೧೫ ॥

ಸಂಪೂಜ್ಯ ಗಂಧಪುಷ್ಪಾದ್ಯೈರ್ವಸ್ತ್ರಾಲಂಕಾರಚಾಮರೈಃ ।
ಭಕ್ಷ್ಯಭೋಜ್ಯೈರಶೇಷೈಶ್ಚ ತತಃ ಶಯ್ಯಾಂ ನಿವೇದಯೇತ್ ॥ ೧೬ ॥

ತದೂರ್ಣಾತೂಲವಸ್ತ್ರಾಣಾಂ ಪರಿಸಂಖ್ಯಾ ತು ಯಾವತೀ ।
ತಾವದ್ವರ್ಷಸಹಸ್ರಾಣಿ ಸೂರ್ಯಲೋಕೇ ಮಹೀಯತೇ ॥ ೧೭ ॥

---

೧೩. ಕ್ರಮವಾಗಿ ಇತರ ಎಲ್ಲ ದೇವಲೋಕಗಳಲ್ಲೂ ಲಕ್ಷಕಲ್ಪಕಾಲಪರ್ಯಂತ ಬೇಕಾದ ಸುಖಗಳನ್ನು ಸಮೃದ್ಧಿಯಾಗಿ ಅನುಭವಿಸಿ, ಆ ಮೇಲೆ ಭೂಲೋಕಕ್ಕೆ ಬಂದು ರಾಜನಾಗುತ್ತಾನೆ.

೧೪. ಐದು ಬಲಿಗಳಿಂದ ಕೂಡಿದುದೂ, ಆರುವಾಸ್ತು ಪ್ರಕಾರ ಮೃದುವಾದ ಕಲ್ಪಿತವಾದುದೂ, ಸರ್ವೋಪಕರಣಗಳಿಂದ ಯುಕ್ತವಾದುದೂ ಆಗಿರುವಂತೆ ಸೂರ್ಯನನ್ನೂ, ಸಂಜ್ಞೆಯನ್ನೂ ಹಿಟ್ಟಿನಿಂದ ರಚಿಸಿ, ಸಂಜ್ಞಾದೇವೀಸಮೇತವಾದ ಆ ಸೂರ್ಯ ಪ್ರತಿಮೆಯನ್ನು ದೇವಾಲಯದಲ್ಲಿರುವ ಮೂರ್ತಿಸನ್ನಿಧಿಗೆ ಸಮರ್ಪಿಸಬೇಕು.

೧೫. ಬಳಿಕ ಸೌರಜ್ಞಾನ, ತತ್ತ್ವಾರ್ಥ ಇವನ್ನು ತಿಳಿದಿರುವವನೂ, ಸಂತೋಷ ಯುಕ್ತನೂ ಆದ ಆಚಾರ್ಯನನ್ನು ಗೌರವದಿಂದ ಕರೆದುತರಬೇಕು.

೧೬. ಆತನನ್ನು ಗಂಧಪುಷ್ಪಾದಿಗಳು, ವಸ್ತ್ರ, ಭೂಷಣ, ಚಾಮರಗಳು, ಭಕ್ಷ್ಯ ಭೋಜ್ಯಗಳು ಇವುಗಳಿಂದ ಆರಾಧಿಸಿ ಅನಂತರ ಆತನಿಗೆ ಆ ಶಯ್ಯೆಯನ್ನು ದಾನಕೊಡ ಬೇಕು.

೧೭. ಹೀಗೆ ಮಾಡಿದರೆ ಆ ಹಾಸಿಗೆಗೆ ಉಪಯೋಗಿಸುವ ಉಣ್ಣೆಯಬಟ್ಟೆ, ಹತ್ತಿಯಬಟ್ಟೆ, ರೇಶ್ಮೆಬಟ್ಟೆ ಇವುಗಳಲ್ಲಿ ತಂತು(ದಾರದಎಳೆ) ಗಳ ಸಂಖ್ಯೆ ಎಷ್ಟಿದೆಯೋ ಅಷ್ಟು ಸಹಸ್ರ ವರ್ಷಗಳಕಾಲ ದಾತೃವು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

ಸೌರಾದಿ ಸರ್ವ ಲೋಕೇಷು ಭುಕ್ತ್ವಾ ಭೋಗಾನಶೇಷತಃ ।
ಕ್ರಮಾದಾಗತ್ಯ ಲೋಕೇಽಸ್ಮಿನ್ ರಾಜಾ ಭವತಿ ಧಾರ್ಮಿಕಃ ॥ ೧೮ ॥

ದಶಗೋಭಿಃ ಸಹ ವೃಷಂ ತಾ ವೃಷ್ಮೈಕಾದಶಾಃ ಸ್ಮೃತಾಃ ।
ಸೂರ್ಯಾಯ ವಿನಿವೇದ್ಯೇಹ ಯತ್ಫಲಂ ಲಭತೇ ಶೃಣು ॥ ೧೯ ॥

ದ್ವಾದಶಾದಿತ್ಯತುಲ್ಯಾತ್ಮಾ ಅಣಿಮಾದಿಗುಣೈರ್ಯುತಃ ।
ಸರ್ವತ್ರ ಮೋದತೇ ರಾಜನ್ ಸೂರ್ಯಸ್ಯಾನುಚರೋ ಭವೇತ್ ॥ ೨೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೂರ್ಯವ್ರತವರ್ಣನಂ ನಾಮ ಏಕೋನಸಪ್ತತ್ಯುತ್ತರ
ಶತತಮೋಽಧ್ಯಾಯಃ.

---

೧೮. ಇದೂ ಅಲ್ಲದೆ ಸೌರಲೋಕವೇ ಮೊದಲಾದ ಇತರ ಎಲ್ಲ ದೇವಲೋಕಗಳಲ್ಲಿಯೂ ಇಚ್ಛಾನುಸಾರವಾಗಿ ಸಮಗ್ರವಾದ ಸುಖಗಳನ್ನನುಭವಿಸಿ ಭೂಲೋಕಕ್ಕೆ ಬಂದು ಧಾರ್ಮಿಕನಾದ ರಾಜನಾಗುತ್ತಾನೆ.

೧೯. ಹತ್ತು ಗೋವುಗಳು ಜೊತೆಗೆ ಒಂದು ವೃಷಭ ಈರೀತಿ ಒಟ್ಟು ಹನ್ನೊಂದನ್ನೂ ಸೂರ್ಯನ ಪ್ರೀತ್ಯರ್ಥವಾಗಿ ಸಮರ್ಪಣಮಾಡಬೇಕು. ಹೀಗೆ ಮಾಡಿದವನು ಹೊಂದುವ ಫಲವನ್ನು ಹೇಳುವೆನು ಕೇಳು.

೨೦. ಆತನು ದ್ವಾದಶಾದಿತ್ಯರಿಗೆ ಸಮಾನವಾದ ಸ್ವರೂಪವುಳ್ಳವನೂ, ಅಣಿಮಾ ಮೊದಲಾದ ಸಿದ್ಧಿಗಳಿಂದ ಯುಕ್ತನೂ ಆಗಿ ಸೂರ್ಯನ ಸಮೀಪದ ಅನುಚರನಾಗಿ ಸಂತೋಷಪಡುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೂರ್ಯವ್ರತ ವರ್ಣನೆಯೆಂಬ ನೂರಅರವತ್ತೊಂಬತ್ತನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತತ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಸವೃಷಂ ಗೋಶತಂ ದತ್ವಾ ಭಾಸ್ಕರಾಯ ನರಾಧಿಪ ।
ತ್ರಿಃಸಪ್ತಕುಲಜೈಃ ಸಾರ್ಧಂ ಶೃಣು ಯತ್ಫಲಮಾಪ್ನುಯಾತ್ ॥ ೧ ॥

ರವಿಕೋಟಿಪ್ರತೀಕಾಶೈಃ ಸರ್ವಕಾಮಸಮನ್ವಿತೈಃ ।
ಮಹಾಯಾನೈರಸಂಖ್ಯೇಯೈರಮರಾಸುರಪೂಜಿತೈಃ ॥ ೨ ॥

ದ್ವಾದಶಾದಿತ್ಯಸಂಕಾಶೋ ದಿವಾಕರ ಇವಾಪರಃ ।
ಗತ್ವಾದಿತ್ಯಪುರಂ ರಮ್ಯಂ ಕ್ರೀಡತೇ ಸೂರ್ಯಮಂಡಪೇ ॥ ೩ ॥

---

## ನೂರಎಪ್ಪತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳುತ್ತಾರೆ—ಅಯ್ಯಾ ರಾಜನೇ! ಕೇಳು; ವೃಷಭಸಹಿತವಾದ ನೂರುಗೋವುಗಳನ್ನು ಸೂರ್ಯ ಪ್ರೀತ್ಯರ್ಥವಾಗಿ ಕೊಟ್ಟವನು ತನ್ನ ವಂಶದ ಇಪ್ಪತ್ತು ತಲೆಮಾರಿನ ಜನರನ್ನು ಉದ್ಧರಿಸುವನಲ್ಲದೆ ಅವರೊಡನೆ ಆತನು ಹೊಂದುವ ಫಲವನ್ನು ಹೇಳುತ್ತೇನೆ ಕೇಳು.

೨–೩. ದಾತೃವು ಕೋಟಿಸೂರ್ಯಪ್ರಕಾಶವುಳ್ಳವೂ, ಸಮಸ್ತ ಭೋಗಸಾಮಗ್ರಿ ಸಹಿತವಾದುವೂ, ಅಮರರಿಂದಲೂ ಅಸುರರಿಂದಲೂ ಪೂಜಿಸಲ್ಪಡತಕ್ಕವೂ ಆದ ಅಪರಿಮಿತ ಸಂಖ್ಯೆಯ ಮಹಾಯಾನಗಳನ್ನೇರಿ ದ್ವಾದಶಾದಿತ್ಯಸದೃಶನಾದ ಬೇರೊಬ್ಬ ಸೂರ್ಯನೋ ಎಂಬಂತೆ ಶೋಭಿಸುತ್ತಾ, ರಮ್ಯವಾದ ಸೂರ್ಯಲೋಕಕ್ಕೆ ಹೋಗಿ, ಸೂರ್ಯನು ಕುಳಿತುಕೊಳ್ಳುವ ಮಂಟಪದಲ್ಲಿ ತಾನೂ ಕ್ರೀಡಿಸುತ್ತಾನೆ.

ಭುಕ್ತ್ವಾ ತು ವಿಪುಲಾನ್ ಭೋಗಾನ್ ಪ್ರಲಯೇ ಸರ್ವದೇಹಿನಾಂ ।
ಮೋಹಕಂಚುಕಮುತ್ಸೃಜ್ಯ ವಿಶತ್ಯಾದಿತ್ಯಮಂಡಲೇ ॥ ೪ ॥

ಸರ್ವಜ್ಞಃ ಸೂರಪರಮಃ ಶುದ್ಧಃ ಸ್ವಾತ್ಮನ್ಯವಸ್ಥಿತಃ ।
ಸರ್ವಗಃ ಪರಿಪೂರ್ಣತ್ವಾತ್ ಸೂರ್ಯವದ್ದೀಪ್ತಿಮಾನ್ ಭವೇತ್ ॥ ೫ ॥

ಯೋ ದದಾತ್ಯುಭಯಮುಖೀಂ ಸೌರಭೇಯೀಂ ದಿವಾಕರೇ ।
ಸಪ್ತದ್ವೀಪಾಂ ಮಹೀಂ ದತ್ವಾ ಯತ್ಫಲಂ ತದವಾಪ್ನುಯಾತ್ ॥
ಪಾದದ್ವಯಂ ಶಿರೋರ್ಧಂ ಚ ಸ ಶೈಲವನ ಕಾನನಾಂ ॥ ೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಗೋದಾನ ವರ್ಣನಂನಾಮ ಸಪ್ತತ್ರ್ಯಧಿಕ ಶತತಮೋಽಧ್ಯಾಯಃ.

---

೪. ಜಗತ್ಪ್ರಲಯವಾಗುವ ಪರ್ಯಂತ ಆ ಸೂರ್ಯಲೋಕದಲ್ಲಿ ಸಮೃದ್ಧಿಯಾಗಿ ಭೋಗಗಳನ್ನು ಅನುಭವಿಸಿ, ಅಜ್ಞಾನಕಪಚವನ್ನು ಕಳಚಿಹಾಕಿ ಸೂರ್ಯಮಂಡಲವನ್ನು ಪ್ರವೇಶಿಸುತ್ತಾನೆ.

೫. ಆತನು ಸರ್ವಜ್ಞನೂ, ಸೂರ್ಯನನ್ನೇ ಉತ್ಕೃಷ್ಟದೇವತೆಯೆಂದು ತಿಳಿದಿರುವವನೂ, ಶುದ್ಧನೂ, ಸ್ವಾತ್ಮರೂಪದಿಂದ ಇರತಕ್ಕವನೂ, ಪರಿಪೂರ್ಣನೂ ಆಗಿರುವುದರಿಂದ ಸರ್ವವ್ಯಾಪಕನಾಗಿ ಸೂರ್ಯನಂತೆ ಪ್ರಕಾಶಮಾನನಾಗುವನು.

೬. (ಗೋಪುಚ್ಛದ ಕಡೆ ಪ್ರಸವವಾಗುತ್ತಿರುವ ಕರುವಿನ ಶಿರಸ್ಸಿನ ಅರ್ಧಭಾಗವೂ, ಎರಡುಕಾಲುಗಳೂ ಹೊರಗೆ ಬರುತ್ತಿರುವ ಸಮಯದಲ್ಲಿ ಗೋದಾನಮಾಡುವುದಕ್ಕೆ ಉಭಯಮುಖೀ ಗೋದಾನವೆನ್ನುವರು. ತಾಯಿಯಮುಖ ಒಂದುದಿಕ್ಕಿಗೂ ಕರುವಿನ ಮುಖವು ಅದರ ಅಭಿಮುಖದಿಕ್ಕಿಗೂ ಇರುವುದರಿಂದ ಇದು ಉಭಯಮುಖವಾಯಿತು.) ಸೂರ್ಯಪ್ರೀತ್ಯರ್ಥವಾಗಿ ಯಾವನು ಈ ರೀತಿ ಉಭಯಮುಖ ಗೋದಾನ ಮಾಡುವನೋ ಅವನು ಸಪ್ತದ್ವೀಪ, ಪರ್ವತ, ಅರಣ್ಯ ಇವುಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ್ದರಿಂದ ಲಭಿಸುವ ಫಲವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಗೋದಾನವರ್ಣನವೆಂಬ ನೂರಎಪ್ಪತ್ತನೇ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಾಸಪ್ತತ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಮಗಾನಾಂ ಬ್ರೂಹಿ ಮೇ ಧರ್ಮಂ ಸಮಾಸವ್ಯಾಸಯೋಗತಃ ।
ಫಲಂ ಚ ಕಿಂ ಭವೇದ್ಬ್ರಹ್ಮನ್ ಮಗಧರ್ಮನಿಷೇವಣಾತ್ ॥ ೧ ॥

॥ ಸುಮಂತುರುವಾಚ ॥

ಯ ಏಷ ಧರ್ಮಸ್ಸೌರ್ಯೇತಿ ತವಾಖ್ಯಾತೋ ಮಯಾನಘ ।
ಮಗಧರ್ಮಃ ಸ ಏವೋಕ್ತಃ ಸರ್ವಪಾಪಭಯಾಪಹಃ ॥ ೨ ॥

---

## ನೂರಎಪ್ಪತ್ತೊಂದನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಪ್ರಶ್ನಿಸುವವನಾಗಿ— "ಸ್ವಾಮಿ! ಮಗಧರ್ಮವನ್ನು ಸಂಕ್ಷೇಪಕ್ರಮದಿಂದಲೂ, ವಿಸ್ತಾರಕ್ರಮದಿಂದಲೂ ನನಗೆ ಹೇಳಬೇಕು ಆ ರೀತಿ ಮಗಧರ್ಮವನ್ನು ಆಚರಿಸುವುದರಿಂದ ಏನು ಫಲ ವೆಂಬುದನ್ನೂ ದಯವಿಟ್ಟು ಹೇಳಿ" ಎಂದನು.

೨. ಸಮಂತುಮುನಿವರ್ಯರು ಅದಕ್ಕೆ ಉತ್ತರಕೊಡುವವರಾಗಿ ಹೇಳುತ್ತಾರೆ— "ಎಲೈ ನಿರ್ದೋಷಿಯಾದ ರಾಜನೇ! ಕೇಳು; ಸೌರಧರ್ಮವೆಂದು ನಾನು ನಿನಗೆ ಯಾವುದನ್ನು ಹೇಳಿದೆನೋ ಅದನ್ನೇ ಸರ್ವಪಾಪನಿವಾರಕವಾದ ಮಗಧರ್ಮವೆಂದು ಹೇಳಬಹುದು.

**ಸರ್ವೇಷಾಮೇವ ವರ್ಣಾನಾಂ ಮಗಧರ್ಮನಿಷೇವಣಾತ್ ।**
**ಮಗಧರ್ಮಶ್ಚ ಸಂಪ್ರೋಕ್ತ ಏತೇಷಾಂ ಭವಮುಕ್ತಯೇ ॥ ೩ ॥**

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ತ್ರೀ ಶೂದ್ರೋ ವಾ ಮಗಾಶ್ರಮಿಣಾ ।**
**ಯೇ ಪೂಜಯಂತಿ ಮಾರ್ತಂಡಂ ತೇ ಯಾಂತಿ ಪರಮಾಂ ಗತಿಂ ॥ ೪ ॥**

**ತ್ರಿಸಂಧ್ಯಮರ್ಚಯೇದ್ಭಾನುಮಗ್ನಿಕಾರ್ಯಂ ಚ ಶಕ್ತಿತಃ ।**
**ಕುರ್ಯಾನ್ಮಗೋ ಮಹಾಬಾಹೋ ಮುಖಮಾವೃತ್ಯ ಯತ್ನತಃ ॥ ೫ ॥**

**ತ್ರಿಸಂಧ್ಯಮೇಕಕಾಲಂ ವಾ ಪೂಜಯೇಚ್ಛ್ರದ್ಧಯಾ ರವಿಂ ।**
**ಅಸಂಪೂಜ್ಯ ರವಿಂ ಮೋಹಾನ್ನ ಭುಂಜೀತ ಕದಾಚನ ॥ ೬ ॥**

---

೩. ಎಲ್ಲ ವರ್ಣಗಳವರೂ ಮಗಧರ್ಮವನ್ನು ಆಚರಿಸಬಹುದಾದುದರಿಂದ ಮಗಧರ್ಮವು ಅದನ್ನಾಚರಿಸಿದವರೆಲ್ಲರಿಗೂ ಸಂಸಾರದಿಂದ ಮುಕ್ತಿಹೊಂದುವುದಕ್ಕೆ ಸಾಧನವಾಗುತ್ತದೆ.

೪. ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಈ ವರ್ಣಗಳ ಪುರುಷರಾಗಲಿ, ಸ್ತ್ರೀಯರಾಗಲಿ ಮಗಧರ್ಮವನ್ನು ಅಂಗೀಕರಿಸಿ, ಸೂರ್ಯನನ್ನು ಪೂಜಿಸಿದರೆ ಶ್ರೇಷ್ಠವಾದ ಗತಿಯನ್ನು ಹೊಂದುತ್ತಾರೆ.

೫. ಅಯ್ಯಾ ಮಹಾಬಾಹುವೇ! ಕೇಳು; ಮಗಾಶ್ರಮಿಯಾದವನು ಮೂರು ಸಂಧ್ಯೆಗಳಲ್ಲಿಯೂ ಶಕ್ತ್ಯನುಸಾರ ಸೂರ್ಯನನ್ನು ಪೂಜಿಸಬೇಕು. ಮತ್ತು ಅಗ್ನಿ ಕಾರ್ಯವನ್ನೂ ಮಾಡಬೇಕು.

೬. ಮತ್ತೂ ಆತನು ಯತ್ನದಿಂದ ಬಾಯಿಗೆ ಬಟ್ಟೆಯನ್ನು ಮರೆಮಾಡಿಕೊಂಡು, ಮೂರುಸಂಧ್ಯಗಳಲ್ಲಿಯೋ ಅಥವಾ ಒಂದುಕಾಲದಲ್ಲೋ, ಶಕ್ತ್ಯನುಸಾರ ಭಕ್ತಿಯಿಂದ ರವಿಯನ್ನು ಪೂಜಿಸಬೇಕು. ಸೂರ್ಯಪೂಜೆ ಮಾಡಿಯೇ ಭೋಜನ ಮಾಡಬೇಕೇ ಹೊರತು ಪೂಜೆಮಾಡದೆ ಅಜ್ಞಾನದಿಂದ ಯಾವಾಗಲೂ ಭೋಜನ ಮಾಡಬಾರದು.

ಏಷ ಧರ್ಮಃ ಪರೋ ಜ್ಞೇಯಃ ಶೇಷೋ ಭವತಿ ಮಾನವಃ ।
ಅಪೂಜಯಿತ್ವಾ ಭುಂಜಾನೋ ವಿಷ್ಠಾಂ ಭುಂಕ್ತೇ ಚ ವೈ ಮಗಃ ॥ ೭ ॥

ದೇವಂ ಸಮಾಶ್ರಿತೈಃ ಪೂಜಾ ಕರ್ತವ್ಯೇಯಂ ತ್ರಿಭಿಃ ಸದಾ ।
ಮನಸಾ ಪೂಜಯೇದ್ಯೋಗೀ ಪುಷ್ಪೈಶ್ಚಾರಣ್ಯಸಂಭವೈಃ ॥ ೮ ॥

ದೇವಾರ್ಥಪುಷ್ಪಹಿಂಸಾಯಾಂ ನ ಭವೇತ್ತಸ್ಯ ಹಿಂಸಕಃ ।
ಯದ್ಯಲ್ಪಮಪಿ ಚಾತ್ಮಾರ್ಥಂ ನಿಹನ್ಯಾದ್ಧಿಂಸಕಸ್ತದಾ ॥ ೯ ॥

ಮಗಶ್ಚಾಗ್ನಿಪರೋ ನಿತ್ಯಂ ತದ್ಭಕ್ತೋಽತಿಥಿಪೂಜಕಃ ।
ಮಗೀಮೈಥುನವರ್ಜ್ಯಃ ಸ್ಯಾಚ್ಛ್ರೀಮಾನ್ ಗೃಹಮಗಾಶ್ರಮಿ ॥ ೧೦ ॥

---

೭. ಇದೇ ಪರಮಧರ್ಮವೆಂದೂ, ಉಳಿದುವು ಮಾನವಧರ್ಮವೆಂದೂ ತಿಳಿಯಬೇಕು. ಮಗನಾದವನು ಸೂರ್ಯಾರ್ಚನೆಮಾಡದೆ ಭೋಜನಮಾಡಿದರೆ ಅಮೇಧ್ಯವನ್ನು ತಿಂದಂತೆ ಆಗುವುದು.

೮. ಸೂರ್ಯಧರ್ಮವನ್ನು (ಸೂರ್ಯದೇವನನ್ನು) ಆಶ್ರಯಿಸಿದವರು ಸದಾ ಮನೋವಾಕ್ಕಾಯಗಳಿಂದ ಈ ಪೂಜೆಯನ್ನು ಮಾಡಬೇಕು. ಯೋಗಿಯಾದವನು ಅರಣ್ಯದಲ್ಲಿ ಬೆಳೆದ ಪುಷ್ಪದಿಂದ ಪೂಜಿಸುತ್ತಾನೆ. ಅಥವಾ ಮಾನಸಪೂಜೆಯನ್ನಾದರೂ ಮಾಡುತ್ತಾನೆ.

೯. ದೇವರ ಪೂಜೆಗೋಸ್ಕರ ಹೂವನ್ನು ಕೊಯ್ದರೆ, ಅವನು ಅದಕ್ಕೆ ಇರತಕ್ಕ ಆಶ್ರಯವನ್ನು ತಪ್ಪಿಸಿ ಹಿಂಸೆಪಡಿಸಿದಂತೆ ಆಗುವುದಿಲ್ಲ. ಯಾವನು ತನ್ನ ಸುಖಕ್ಕೋಸ್ಕರವಾಗಿಯೇ ಸ್ವಲ್ಪಪುಷ್ಪವನ್ನು ಗಿಡದಿಂದ ವಿಚ್ಛೇದನಮಾಡಿದರೂ ಅವನು ಹಿಂಸಕನೆನಿಸುವನು.

೧೦. ಯಾವಾಗಲೂ ಅಗ್ನಿಕಾರ್ಯದಲ್ಲಿ ಆಸಕ್ತನಾಗಿ ಸೂರ್ಯಭಕ್ತನಾಗಿರುತ್ತಾ ಅತಿಥಿಗಳನ್ನು ಪೂಜಿಸತಕ್ಕವನೇ ಮಗಧರ್ಮಿಯೆನಿಸುವನು. ಆತನು ಶ್ರೀಮಂತನೂ, ಗೃಹಸ್ಥಾಶ್ರಮಿಯೂ ಆಗಿದ್ದರೂ ಪತ್ನೀ ಸಂಗಮಮಾಡಬಾರದು.

ದೇವಾಗ್ನಿಸ್ವಥಿತೌ ಭಕ್ತಂ ಪಚೇಯುಶ್ಚಾತ್ಮಕಾರಣಾತ್ ।
ಆತ್ಮಾರ್ಥೇ ಯಃ ಪಚೇನ್ಮೋಹಾತ್ಸ ಮಗೋ ನರಕಂ ವ್ರಜೇತ್ ॥ ೧೧ ॥

ದೇವಾರ್ಥೇ ಪಚನಂ ಯೇಷಾಂ ಸಂತಾನಾರ್ಥಂ ತು ಮೈಥುನಂ ।
ಅರ್ಥೋ ದಾನಾರ್ಥ ಉದ್ದಿಷ್ಟೋ ನರಕಂ ಹಿ ವಿಪರ್ಯಯಾತ್ ॥ ೧೨ ॥

ಜೀವೇತ್ತೃತೀಯಭಾಗೇನ ನ ಪ್ರಕುರ್ವೀತ ದಾರ್ಜನಂ ।
ವಿತ್ತಾರ್ಜನೇ ತದರ್ಧೇನ ಯತೋ ನಿತ್ಯಂ ಹಿ ಜೀವಿತಂ ॥ ೧೩ ॥

ನಾನ್ಯೋಪಾರ್ಜಿತವಿತ್ತಃ ಸ್ಯಾದನ್ಯಾಯಂ ಪರಿವರ್ಜಯೇತ್ ।
ಅನ್ಯಾಯಾರ್ಜಿತವಿತ್ತೈಸ್ತು ಕುರ್ವನ್ನರಕಮಾಪ್ನುಯಾತ್ ॥ ೧೪ ॥

---

೧೧. ದೇವತನಿವೇದನ, ಅಗ್ನಿಗೆಆಹುತಿ, ಅತಿಥಿಸತ್ಕಾರ ಮತ್ತು ತನ್ನ ಆಹಾರ ಇವೆಲ್ಲಕ್ಕೂ ಆಗುವಂತೆ ಅನ್ನವನ್ನು ಪಚನಮಾಡಬೇಕು. ಹಾಗಲ್ಲದೆ ಅಜ್ಞಾನದಿಂದ ಕೇವಲ ತನ್ನ ಆಹಾರಕ್ಕಾಗಿ ಅನ್ನವನ್ನು ಮಾಡಿಕೊಂಡರೆ ಆ ಮಗಾಶ್ರಮಿಗೆ ನರಕ ಪ್ರಾಪ್ತಿಯಾಗುವುದು.

೧೨. ದೇವರ ನಿವೇದನಕ್ಕಾಗಿಯೇ ಯಾರು ಅಡಿಗೆ ಮಾಡುತ್ತಾರೋ, ಪ್ರಜೋತ್ಪತ್ತಿಗಾಗಿ ಮಾತ್ರ ಯಾರು ಸ್ತ್ರೀಸಂಗ ಮಾಡುತ್ತಾರೋ, ದಾನಮಾಡುವುದಕ್ಕಾಗಿಯೇ ಯಾರು ದ್ರವ್ಯಸಂಪಾದಿಸುತ್ತಾರೋ ಅವರಿಗೇ ಸುಖ. ಇದಕ್ಕೆ ವ್ಯತ್ಯಾಸವಾಗಿ ನಡೆದರೆ ನರಕವುಂಟಾಗುತ್ತದೆ.

೧೩. ತಾನು ಸಂಪಾದಿಸಿದ ಹಣದ ಮೂರರಲ್ಲೊಂದು ಪಾಲನ್ನಾಗಲಿ, ಒಂದು ವೇಳೆ ಹೆಚ್ಚುವೆಚ್ಚ ಒದಗಿದರೆ ಅರ್ಧಪಾಲನ್ನಾಗಲಿ, ವೆಚ್ಚಮಾಡಿ ಮಿಕ್ಕುದನ್ನು ಧರ್ಮಕ್ಕಾಗಿ ವಿನಿಯೋಗಮಾಡಬೇಕೇ ವಿನಾ, ಕೂಡಿಸಿ ಇಡಬಾರದು. ಏಕೆಂದರೆ ಜೀವನವು ಅನಿತ್ಯವಾದುದು. ಅಶಾಶ್ವತವಾದ ಜೀವನಕ್ಕೆ ಹೆಚ್ಚಾಗಿ ವೆಚ್ಚಮಾಡಿ ಶಾಶ್ವತವಾದ ಧರ್ಮಕ್ಕೆ ಗಮನಕೊಡದೆ ಇರುವುದು ಸರಿಯಲ್ಲ.

೧೪. ಇತರರು ಸಂಪಾದಿಸಿದ ಎಂದೂ ದ್ರವ್ಯವನ್ನು ಉಪಯೋಗಿಸಿಕೊಳ್ಳಬಾರದು. ಅನ್ಯಾಯದಿಂದ ಸಂಪಾದನೆಮಾಡಬಾರದು. ಅನ್ಯಾಯಾರ್ಜಿತ ದ್ರವ್ಯದಿಂದ ಧರ್ಮಕಾರ್ಯ ಮಾಡಿದರೆ ನರಕವನ್ನು ಹೊಂದಬೇಕಾಗುವುದು.

ವಾಚೋರ್ಥೇ ಬ್ರಹ್ಮಚಾರೀ ಯಃ ಸೂರ್ಯಪೂಜಾಗ್ನಿತತ್ಪರಃ ।
ಭವೇಜ್ಜಿತೇಂದ್ರಿಯಃ ಶಾಂತೋ ನೈಷ್ಠಿಕೋ ಭೌತಿಕೋऽಪಿ ವಾ ॥ ೧೫ ॥

ಸರ್ವಗಂಧವಿನಿರ್ಮುಕ್ತಃ ಕಂದಮೂಲಫಲಾಶನಃ ।
ಮಮ ವೈಖಾನಸೋ ಜ್ಞೇಯಃ ಸೂರ್ಯಪೂಜಾಗ್ನಿತತ್ಪರಃ ॥ ೧೬ ॥

ನಿವೃತ್ತಃ ಸಂಗಮೇಭ್ಯಸ್ತು ಸೂರ್ಯಧ್ಯಾನರತಃ ಸದಾ ।
ಜ್ಞೇಯಃ ಸೌರಯತೀಂದ್ರಾಯ ಪೂಜಾನಿಷ್ಠೋ ಜಿತೇಂದ್ರಿಯಃ ॥ ೧೭ ॥

ಮುಂಡೋಪನಯನೋ ವ್ಯಂಗೀ ಶುಕ್ಲವಾಸಃ ಸಮನ್ವಿತಃ ।
ಜ್ಞೇಯಂ ತದರ್ಚನಸ್ಥಾನಮೇತತ್ಕಾರ್ಯಂ ಪ್ರಯತ್ನತಃ ॥ ೧೮ ॥

---

೧೫. ವಾಙ್ನಿಯಮವುಳ್ಳವನೂ, ದ್ರವ್ಯಾರ್ಜನನಿಯಮಯುಕ್ತನೂ, ಬ್ರಹ್ಮಚಾರಿಯೂ, ಸೂರ್ಯಪೂಜೆ, ಅಗ್ನಿಕಾರ್ಯ ಇವುಗಳಲ್ಲಿ ಆಸಕ್ತನೂ ಜಿತೇಂದ್ರಿಯನೂ, ಶಾಂತನೂ, ನೈಷ್ಠಿಕನೂ, ಭೂತದಯಾಪರನೂ ಆಗಿರುವವನು,

೧೬. ಮತ್ತು ಸರ್ವಸುಗಂಧವಸ್ತುವನ್ನೂ ತ್ಯಾಜ್ಯಮಾಡಿ, ಕಂದಮೂಲ ಫಲಗಳನ್ನು ಸೇವನಮಾಡುತ್ತಾ ಸೂರ್ಯಪೂಜೆ ಅಗ್ನಿಪೂಜೆಗಳಲ್ಲಿ ಆಸಕ್ತನಾಗಿರುವನೂ ವೈಖಾನಸನೆಂದು ನನ್ನ ಅಭಿಮತ.

೧೭. ಮತ್ತು ಮಗಾಶ್ರಮಿಯು ಜಿತೇಂದ್ರಿಯನಾಗಿ ಸಂಗಮವನ್ನು ವರ್ಜ್ಯಮಾಡಿ, ಸದಾ ಸೂರ್ಯಧ್ಯಾನದಲ್ಲಿ ಆಸಕ್ತನೂ, ಸೌರಯತೀಂದ್ರರನ್ನು ಪೂಜೆಮಾಡುವುದರಲ್ಲಿ ಆಸಕ್ತನೂ ಆಗಿರಬೇಕು.

೧೮. ಅಲ್ಲದೆ ಈ ಸೂರ್ಯಪೂಜಕನು ಪೂರ್ತಿ ಮುಂಡನಮಾಡಿಸಿದ ತಲೆಯುಳ್ಳವನೂ, ಅವ್ಯಂಗವನ್ನು ಧರಿಸಿದವನೂ, ಬಿಳಿಯಬಟ್ಟೆಯನ್ನು ಉಟ್ಟುಕೊಂಡವನೂ ಆಗಿರಬೇಕು. ಅಂಥವನೇ ಪೂಜಾರ್ಹನೆಂದು ತಿಳಿಯಬೇಕು. ಅಂಥವನಿಗೆ ಈ ಸತ್ಕಾರವನ್ನು ಪ್ರಯತ್ನದಿಂದಲಾದರೂ ಮಾಡಬೇಕು.

ಅಥಾವ್ಯಂಗಂ ಮಹಾರಾಜ ಧಾರಯೇದ್ಯಸ್ತು ಭೋಜಕಃ ।
ಅಗಮ್ಯಂ ಸರ್ವಸತ್ವಾನಾಂ ಸೂರ್ಯಲೋಕಂ ಸ ಗಚ್ಛತಿ ॥ ೧೯ ॥

ಧ್ವಂಸನಂ ಸರ್ವದುಷ್ಟಾನಾಂ ಸರ್ವಪಾಪಭಯಾಪಹಂ ।
ಭಾವಶುದ್ಧೇನ ಸತತಮರ್ಚನೀಯೋ ದಿವಾಕರಃ ॥ ೨೦ ॥

ಗಂಧಲೇಪವಿಹೀನೋಽಪಿ ಭಾವಶುದ್ಧೋ-ನ ದುಷ್ಯತಿ ।
ಭಾವೇಷು ಚ ಚರೇಚ್ಛೌಚಂ ವಸ್ತ್ರಪೂತಂ ಜಲಂ ಪಿಬೇತ್ ॥ ೨೧ ॥

ದೃಷ್ಟಿಪೂತಂ ನ್ಯಸೇತ್ಪಾದಂ ಸತ್ಯಪೂತಂ ವಚೋ ವದೇತ್ ।
ಸೌರಧ್ಯಾನರತಾಃ ಶಾಂತಾಃ ಸೌರಧರ್ಮಪರಾಯಣಾಃ ॥ ೨೨ ॥

---

೧೯. ಅಯ್ಯಾ ಮಹಾರಾಜನೇ! ಕೇಳು; ಅವ್ಯಂಗವನ್ನು ಧರಿಸಿದ ಭೋಜಕನು ಸೂರ್ಯಲೋಕಕ್ಕೆ ಹೋಗುತ್ತಾನೆ. ಅಲ್ಲಿಗೆ ಇತರ ಪ್ರಾಣಿಗಳು ಪ್ರವೇಶಿಸುವುದಕ್ಕೇ ಸಾಧ್ಯವಿಲ್ಲ.

೨೦. ಸರ್ವದುಷ್ಟರನ್ನು ಧ್ವಂಸಮಾಡುವವನೂ, ಸರ್ವಪಾಪ ಭಯವನ್ನು ನಿವಾರಿಸತಕ್ಕವನೂ ಆದ ಸೂರ್ಯನ ಪೂಜೆಯನ್ನು ಯಾವಾಗಲೂ ಭಾವಶುದ್ಧಿಯಿಂದ ಆಚರಿಸಬೇಕು.

೨೧. ಪೂಜೆಗೆ ಗಂಧ ಮೊದಲಾದುವು ಇಲ್ಲದಿದ್ದರೂ ಬಾಧಕವಿಲ್ಲ. ಭಾವವು ಶುದ್ಧಿಯಾಗಿದ್ದರೆ ಆ ಪೂಜೆಯು ಸ್ವಾಮಿಗೆ ಗ್ರಾಹ್ಯವಾಗುವುದು. ಆದುದರಿಂದ ಪೂಜಕನು ಭಾವಶುದ್ಧಿಯನ್ನು ಮುಖ್ಯವಾಗಿ ತಂದುಕೊಳ್ಳಬೇಕು. ಬಟ್ಟೆಯಿಂದ ಶೋಧಿಸಿ ಶುದ್ಧವಾದ ನೀರನ್ನೇ ಕುಡಿಯಬೇಕು,

೨೨. ಎಲ್ಲಾ ಭೋಜಕರೂ ನಡೆಯುವಾಗ ನೆಲವನ್ನು ಗಮನವಿಟ್ಟು ನೋಡಿ ಕಣ್ಣಿಗೆ ಶುದ್ಧವೆಂದು ತೋರಿದ ಸ್ಥಳಗಳಲ್ಲಿ ಹೆಜ್ಜೆಯಿಡಬೇಕು. ಸತ್ಯವೂ, ಶುದ್ಧವೂ ಆದ ಮಾತನ್ನೇ ಆಡಬೇಕು. ಸೌರಧ್ಯಾನದಲ್ಲಿ ಆಸಕ್ತರೂ, ಶಾಂತರೂ ಸೌರಧರ್ಮಪರಾಯಣರೂ ಆಗಿರಬೇಕು.

ಸರ್ವ ಏವಾಶ್ರಮಾ ಜ್ಞೇಯಾ ಭಾಸ್ಕರಾಂಗಸಮುದ್ಭವಾಃ ।
ಭೋಜಕಾಷ್ಟವ್ರತಂ ಧಾರ್ಯಂ ರವಿಣೋಕ್ತಮನೂಪಮಂ ॥ ೨೩ ॥

ಸರ್ವವ್ರತಾನಾಂ ಪರಮಂ ಧರ್ಮಾಲಯಮನುತ್ತಮಂ ।
ಸೌರಭಕ್ತೇ ಸದಾ ಕ್ಷಾಂತಿರಹಿಂಸಾ ಚ ದಮಃ ಶಮಃ ॥ ೨೪ ॥

ಸಂತೋಷಃ ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಥಾಷ್ಟಮಂ ।
ಯಥಾಸಂಭವಪೂಜಾಭಿಃ ಕರ್ಮಣಾ ಮನಸಾ ಗಿರಾ ॥ ೨೫ ॥

ಸೌರಭಕ್ತಿಃ ಸದಾ ಕಾರ್ಯಾ ಭೋಜಕೇಷು ವಿಶೇಷತಃ ।
ಸ್ವದೇಹಾನ್ನಿರ್ವಿಶೇಷಂ ಹಿ ಭೋಜಕಾನ್ ಪಾಲಯೇದ್ಬುಧಃ ॥ ೨೬ ॥

ಭಯದಾರಿದ್ರ್ಯರೋಗೇಭ್ಯಃ ತೇಷಾಂ ಕುರ್ಯಾತ್ಪ್ರಿಯಾಣಿ ವೈ ।
ಸೂರ್ಯಸ್ಯ ಪರಿಪೂರ್ಣಸ್ಯ ಕಿಂ ನಾಮ ಕ್ರಿಯತೇ ನರೈಃ ॥ ೨೭ ॥

---

೨೩. ಎಲ್ಲ ಆಶ್ರಮಧರ್ಮಗಳೂ ಭಾಸ್ಕರನ ಅಂಗದಲ್ಲಿ ಹುಟ್ಟಿದುವೆಂದು ತಿಳಿಯಬೇಕು. ಭೋಜಕರು ಈ ಮುಂದಿನ ಎಂಟುನಿಯಮಗಳನ್ನು ಆಚರಿಸಲೇಬೇಕೆಂದು ಸೂರ್ಯನು ಅಸದೃಶವಾಗಿ ಹೇಳಿದ್ದಾನೆ,

೨೪. ಶ್ರೇಷ್ಠವಾದ ಈ ಧರ್ಮಗಳಿಗೆ ಆಶ್ರಯನಾಗಿರುವುದನ್ನು ಸರ್ವೋತ್ತಮವಾದ ವ್ರತವೆನ್ನಬೇಕು. ಸೌರಭಕ್ತನಲ್ಲಿ ಸದಾ ಕ್ಷಾಂತಿ, ಅಹಿಂಸೆ, ದಮ, ಶಮ ಇವೂ

೨೫. ಮತ್ತು ಸಂತೋಷ, ಸತ್ಯ, ಆಸ್ತೇಯ ಮತ್ತು ಬ್ರಹ್ಮಚರ್ಯ ಇವು ಇರಬೇಕು. ಇವು ಭೋಜಕರು ಅನುಸರಿಸಬೇಕಾದ ಅಷ್ಟವ್ರತಗಳಾಗಿವೆ. ತಾನು ಮಾಡುವ ಪೂಜೆಗಳನ್ನು ಯಥಾಸಂಭವವಾಗಿ ಮನೋವಾಕ್ಕಾಯಪೂರ್ವಕವಾಗಿ ಮಾಡುವನಾಗಬೇಕು

೨೬. ಸೂರ್ಯಭಕ್ತರೆಲ್ಲರಲ್ಲಿ ಸಾಮಾನ್ಯವಾಗಿ ಭಕ್ತಿಯಿಡಬೇಕು. ಭೋಜಕರಲ್ಲಿ ವಿಶೇಷತಃ ಭಕ್ತಿಯಿಡಬೇಕು. ತಿಳಿದವನು ಭೋಜಕರನ್ನು ತನ್ನ ದೇಹಕ್ಕಿಂತ ಅತಿಶಯವೆಂಬದಾಗಿ ತಿಳಿದುಕೊಂಡು ಪಾಲಿಸಬೇಕು.

೨೭. ಅವರಿಗೆ ಭಯ, ದಾರಿದ್ರ್ಯ, ರೋಗ ಇವು ಪ್ರಾಪ್ತವಾದಕಾಲದಲ್ಲಿ ಅವನ್ನು ನಿವಾರಿಸಿ, ಅವರಿಗೆ ಹಿತವಾಗುವಂತೆ ಮಾಡಬೇಕು. ಸರ್ವಶಕ್ತಿಪರಿಪೂರ್ಣನಾದ ಸೂರ್ಯನಿಗೆ ಮನುಷ್ಯರು ಏನನ್ನು ತಾನೆ ಮಾಡಲಾದೀತು ? ಸೂರ್ಯನಿಗೆ ಸಾಕ್ಷಾತ್ತಾಗಿ ಏನೂಮಾಡುವುದಕ್ಕಾಗುವುದಿಲ್ಲವೆಂದು ಸುಮ್ಮನಿರಬಾರದು.

ಯತ್ಕೃತಂ ಭೋಜಕಾನಾಂ ವೈ ತತ್ಕೃತಂ ಸ್ಯಾದ್ರವೇರ್ನೃಪ ।
ಸುದೂರಮಪಿ ಗಂತವ್ಯಂ ಮಗಾನಾಂ ಯತ್ರ ವೈ ಗಣಃ ॥ ೨೮ ॥

ಸ ಚ ಪ್ರಯತ್ನಾದ್ದ್ರಷ್ಟವ್ಯಸ್ತತ್ರ ಸನ್ನಿಹಿತೋ ರವಿಃ ।
ಭೋಜಕಸ್ಯ ತು ಭಕ್ತಸ್ಯ ಸೂರ್ಯಪೂಜಾರತಸ್ಯ ಚ ॥ ೨೯ ॥

ಆಜ್ಞಾಂ ಕೃತ್ವಾ ಯಥಾನ್ಯಾಯಮಶ್ವಮೇಧಫಲಂ ಲಭೇತ್ ।
ದೇವಾಶ್ರಮಗತೋ ಭಕ್ತ್ಯಾ ದೇವಾರ್ಚಾಂ ಪೂಜಯೇನ್ನೃಪ ॥ ೩೦ ॥

ಸ್ವಾಗತಾಸನಪಾದ್ಯಾರ್ಘ್ಯಮಧುಪರ್ಕಾದ್ಯನುಕ್ರಮಾತ್ ।
ಭೋಜಯಿತ್ವಾ ಯಥಾನ್ಯಾಯಂ ಸೂರ್ಯಲೋಕೇ ಮಹೀಯತೇ ॥ ೩೧ ॥

ಪ್ರತಿಶ್ರಯಪ್ರದಾನೇನ ರಾಜಾ ಭವತಿ ಭಾರತ ।
ದತ್ವಾ ಸ್ಥಾನಂ ತಥಾ ಶೌಚಂ ವಾರುಣಂ ಲೋಕಮಾಪ್ನುಯಾತ್ ॥ ೩೨ ॥

---

೨೮. ಎಲೈ ರಾಜನೇ ! ಕೇಳು ; ಭೋಜಕರಿಗೆ ಮಾಡಿದ ಸೇವೆಯು ಸೂರ್ಯನಿಗೆ ಸೇವೆಮಾಡಿದಂತೆಯೇ ಆಗುವುದು. ಮಗರ ಸಮೂಹವು ಸೇರುವ ಸ್ಥಳವು ತಾನಿರುವಲ್ಲಿಗೆ ಎಷ್ಟುದೂರವಾದರೂ ಅಲ್ಲಿಗೆ ಹೋಗಬೇಕು.

೨೯-೩೦. ಅಲ್ಲಿ ಹೋಗಿ ಪ್ರಯತ್ನದಿಂದ ಅವರ ದರ್ಶನಮಾಡಬೇಕು. ಏಕೆಂದರೆ ಅಲ್ಲಿ ಸೂರ್ಯನು ಸನ್ನಿಹಿತನಾಗಿರುವನು. ಭಕ್ತನೂ ಸೂರ್ಯಪೂಜಾರತನೂ ಆಗಿರುವ ಭೋಜಕನ ಆಜ್ಞೆಯನ್ನು ನ್ಯಾಯಪ್ರಕಾರ ನಡೆಯಿಸಿದ ಮಾನವನು ಅಶ್ವಮೇಧ ಫಲವನ್ನು ಹೊಂದುತ್ತಾನೆ.

೩೧. ಮಗರಿಗೆ ಸ್ವಾಗತ, ಆಸನ, ಪಾದ್ಯ, ಅರ್ಘ್ಯ, ಮಧುಪರ್ಕ ಮೊದಲಾದವುಗಳನ್ನು ಕ್ರಮವಾಗಿ ಅರ್ಪಿಸಿ ವಿಧಿಪ್ರಕಾರವಾಗಿ ನಿವೇದನಮಾಡಿದರೆ ಆತನು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೩೨. ಎಲೈ ಭಾರತನೇ ! ಕೇಳು ; ಭೋಜಕರಿಗೆ ಪ್ರತಿಶ್ರಯವನ್ನು ಕೊಟ್ಟರೆ ಆ ಪುಣ್ಯದಿಂದ ಮಾನವನು ರಾಜಪದವಿ ಲಭಿಸಿ ರಾಜನಾಗುತ್ತಾನೆ. ಮತ್ತು ಭೋಜಕರಿಗೆ ಇರುವುದಕ್ಕೆ ಸ್ಥಲವನ್ನೂ ಸ್ನಾನದ ಅನುಕೂಲ್ಯವನ್ನೂ ಕಲ್ಪಿಸಿಕೊಟ್ಟರೆ ವರುಣಲೋಕವನ್ನು ಪಡೆಯುವನು

ಸ್ವೇದಬಿಂದುಪರೀತಾಂಗಂ ಧ್ಯಾನಶ್ರಮವಿಕರ್ಶಿತಂ ।
ಸಂವೀಜ್ಯ ತಾಲವೃಂತೇನ ವಾಯುಲೋಕೇ ಮಹೀಯತೇ ॥ ೩೩ ॥

ಕ್ಷುತ್ಪಿಪಾಸಾತುರಂ ಶ್ರಾಂತಂ ಮಲಿನಂ ರೋಗಿಣಂ ತಥಾ ।
ಪಾಲಯಿತ್ವಾ ಯಥಾಶಕ್ತಿ ಸರ್ವಾನ್ಕಾಮಾನವಾಪ್ನುಯಾತ್ ॥ ೩೪ ॥

ಪತಿತಾಶಸ್ತಸಂಕೀರ್ಣಚಂಡಾಲಾನಾಂ ಚ ಪಕ್ಷಿಣಾಂ ।
ಕಾರುಣ್ಯಾತ್ಸರ್ವಭೂತಾನಾಂ ದೇಯಮನ್ನಂ ಸ್ವಶಕ್ತಿತಃ ॥ ೩೫ ॥

ಅತ್ಯಲ್ಪಮಪಿ ಕಾರುಣ್ಯಾದ್ದತ್ತಂ ಭವತಿ ಚಾಕ್ಷಯಂ ।
ತಸ್ಮಾತ್ಸರ್ವೇಷು ಭೂತೇಷು ದೇವಕಾರುಣ್ಯಮುಚ್ಯತೇ ॥ ೩೬ ॥

ಅಭಾವೇ ತೃಣಭೂಮ್ಯನ್ನಂ ಪತ್ರಂ ಧನಫಲಾನಿ ಚ ।
ದತ್ವಾಽಽಗತಾಯ ಪ್ರಣತಃ ಸ್ವರ್ಗಂ ಯಾತಿ ಪ್ರಿಯೇಣ ವಾ ॥ ೩೭ ॥

---

೩೩. ಪೂಜಾದಿಕಾರ್ಯಗಳಿಂದ ಬಳಲಿ ಮೈಯೆಲ್ಲಾ ಬೆವರಿದವನೂ, ಧ್ಯಾನ, ಸ್ತೋತ್ರಪಾಠ ಈ ಶ್ರಮದಿಂದ ಕೃಶನೂ ಆದ ಭೋಜಕನಿಗೆ ಬೀಸಣಿಗೆಯಿಂದ ಬೀಸಿದವನು ವಾಯುಲೋಕದಲ್ಲಿ ಪೂಜಿತನಾಗುತ್ತಾನೆ.

೩೪. ಹಸಿವು ಬಾಯಾರಿಕೆಗಳಿಂದ ಬಳಲಿದವನೂ, ಮಲಿನನೂ ರೋಗಿಯೂ ಆಗಿರುವ ಭೋಜಕನನ್ನು ಕೈಯಲ್ಲಾದಷ್ಟು ಮಟ್ಟಿಗೆ ಉಪಚರಿಸಿ ಕಾಪಾಡಿದರೆ ಆ ಧರ್ಮಿಷ್ಠನು ತನ್ನ ಎಲ್ಲಾ ಇಷ್ಟಾರ್ಥಗಳನ್ನೂ ಪಡೆಯುವನು.

೩೫. ಪತಿತರು, ಅಪ್ರಶಸ್ತರು, ಮಿಶ್ರಜಾತಿಯವರು, ಚಂಡಾಲರು, ಪಕ್ಷಿಗಳು ಇವರಿಗೂ ಎಲ್ಲಾ ಪ್ರಾಣಿಗಳಿಗೂ ಕೃಪೆಯಿಂದ ತನ್ನ ಶಕ್ತ್ಯನುಸಾರವಾಗಿ ಅನ್ನವನ್ನು ನೀಡಬೇಕು.

೩೬. ಕೃಪೆಯಿಂದ ಕೊಟ್ಟದ್ದು ಬಹು ಸ್ವಲ್ಪವಾದರೂ ಅದು ಅಕ್ಷಯವಾಗುವುದು. ಆದುದರಿಂದ ಎಲ್ಲ ಪ್ರಾಣಿಗಳಲ್ಲೂ ಕಾರುಣ್ಯವನ್ನು ತೋರಿಸಬೇಕೆಂದು ಶಾಸ್ತ್ರಗಳು ಹೇಳುತ್ತಿವೆ

೩೭. ಹೊರಗಿನಿಂದ ಬಂದವರಿಗೆ ಇರುವುದಕ್ಕೆ ಜಾಗ, ಕಾಲ್ನಡೆಗಳಿಗೆ ಹುಲ್ಲು ಮನುಷ್ಯರಿಗೆ ಅನ್ನ, ಇವನ್ನು ಕೊಡುವುದಕ್ಕೆ ಸಾಧ್ಯವಾಗದಿದ್ದರೆ ಎಲೆಯಡಿಕೆ, ಸ್ವಲ್ಪ ದುಡ್ಡು, ಹಣ್ಣು ಇವುಗಳನ್ನಾದರೂ ಕೊಟ್ಟು ನಮಸ್ಕರಿಸಿ ಒಳ್ಳೆಯ ಮಾತುಗಳನ್ನು ಆಡಬೇಕು. ಹೀಗೆ ಮಾಡಿದವನು ಸ್ವರ್ಗಲೋಕಕ್ಕೆ ಹೋಗುತ್ತಾನೆ.

ನ ಹೀದೃಕ್ ಸ್ವರ್ಗಯಾನಾಯ ಯಥಾ ಲೋಕೇ ಪ್ರಿಯಂ ವಚಃ ।
ಇಹಾಮುತ್ರ ಸುಖಂ ತೇಷಾಂ ವಾಗ್ಯೇಷಾಂ ಮಧುರಾ ಭವೇತ್ ॥ ೩೮ ॥

ಅಮೃತಸ್ಯಂದಿನೀಂ ವಾಚಂ ಚಂದನಸ್ಪರ್ಶಶೀತಲಾಂ ।
ಧರ್ಮಾವಿರೋಧಿನೀಮುಕ್ತ್ವಾ ಸುಖಮಕ್ಷಯ್ಯಮಾಪ್ನುಯಾತ್ ॥ ೩೯ ॥

ಅಲಂ ದಾನೇನ ರಾಜೇಂದ್ರ ಪೂಜಯಾಧ್ಯಾಪನೇನ ವಾ ।
ಇದಂ ಸ್ವರ್ಗಸ್ಯ ಸೋಪಾನಮಚಲಂ ಯತ್ಪ್ರಿಯಂ ವಚಃ ॥ ೪೦ ॥

ಪೂಜಾಭಿಭಾಷಣಂ ದೃಷ್ಟಿಃ ಪ್ರತ್ಯೇಕಂ ಸ್ವರ್ಗಹೇತವಃ ।
ಸಂಪೃಚ್ಛೇದಾಗತಂ ಭಕ್ತ್ಯಾ ಕುಶಲಪ್ರಶ್ನಮಾದರಾತ್ ॥ ೪೧ ॥

---

೩೮. ಲೋಕದಲ್ಲಿ ಸ್ವರ್ಗಪ್ರಾಪ್ತಿಗೆ ಪ್ರಿಯವಚನವು ಹೇಗೆ ನೆರವಾಗುತ್ತದೆಯೋ ಹಾಗೆ ಸಹಾಯವಾಗತಕ್ಕದ್ದು ಬೇರೆ ಯಾವುದೂ ಇಲ್ಲ. ಮತ್ತು ಯಾರ ಮಾತು ಮಧುರವಾಗಿರುವುದೋ ಅಂತಹವರಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವುಂಟು.

೩೯. ಚಂದನದ ಸ್ಪರ್ಶದಂತೆ ಆಪ್ಯಾಯನವಾದುದೂ, ಅಮೃತ ತೊಟ್ಟಿಕ್ಕುವಂತಿರುವುದೂ, ಧರ್ಮವಿರುದ್ಧವಲ್ಲದುದೂ ಆದ ಮಾತುಗಳನ್ನಾಡುವವನು ಅಕ್ಷಯವಾದ ಸುಖವನ್ನು ಹೊಂದುತ್ತಾನೆ.

೪೦. ಎಲೈ ರಾಜೇಂದ್ರನೇ ! ಕೇಳು ; ಪ್ರಿಯವಚನರಹಿತವಾದ ದಾನದಿಂದಲೂ, ಪೂಜೆಯಿಂದಲೂ, ಅಧ್ಯಾಪನದಿಂದಲೂ ಏನೂ ಪ್ರಯೋಜನವಿಲ್ಲ. ಈ ಪ್ರಿಯವಚನವೆಂಬುದು ಸ್ವರ್ಗವೇರುವುದಕ್ಕೆ ಸಾಧನವೂ ಸ್ಥಿರವೂ ಆದ ಸೋಪಾನವಾಗಿದೆ.

೪೧. ಬಂದವರಿಗೆ ಮಾಡುವ ಪೂಜೆ, ಅವರೊಡನೆ ಆಡುವ ಮಾತು, ಅವರನ್ನು ಒಳ್ಳೆಯ ದೃಷ್ಟಿಯಿಂದ ನೋಡುವುದು, ಎಂಬ ಈ ಪ್ರತಿಯೊಂದೂ ಸ್ವರ್ಗಪ್ರಾಪ್ತಿಗೆ ಕಾರಣಗಳಾಗಿವೆ. ಬಂದವರನ್ನು ಭಕ್ತಿಯಿಂದಲೂ, ಪ್ರೀತಿಯಿಂದಲೂ ಕುಶಲಪ್ರಶ್ನೆ ಮಾಡಬೇಕು.

**ಗಮನೇ ತಸ್ಯ ವಕ್ತವ್ಯಂ ಪಂಥಾನಸ್ಸಂತು ತೇ ಶಿವಾಃ ।**
**ಸುಖಂ ಭವತು ತೇ ನಿತ್ಯಂ ಸರ್ವಕಾರ್ಯಕರಂ ಭೃಶಂ ॥ ೪೨ ॥**

**ಆಶೀರ್ವಾದಮಿದಂ ವಾಕ್ಯಂ ಸರ್ವದೇಶೇಷು ಸರ್ವದಾ ।**
**ನಮಸ್ಕಾರಾದಿ ವಾಕ್ಯೇಷು ಸ್ವಸ್ತಿಮಂಗಲವಾದನೇ ॥ ೪೩ ॥**

**ಶಿವಂ ಭವತು ತೇ ನಿತ್ಯಂ ತಂ ಬ್ರೂಯಾತ್ಸರ್ವಕರ್ಮಸು ।**
**ಏವಮಾದಿ ಚ ವಾಚಾರಮನುಷ್ಠಾಯ ಸದಾಶ್ರಮೀ ॥ ೪೪ ॥**

**ಅಶೇಷಪಾಪನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ।**
**ಸೂರ್ಯಭಕ್ತೇ ತು ಯಾ ಭಕ್ತಿಃ ಸದ್ಭಕ್ತೈಃ ಕ್ರಿಯತೇ ನರೈಃ ॥**
**ಸೂರ್ಯಭಕ್ತಿಸಮಾ ನಿತ್ಯಂ ಭಕ್ತೇ ಭಕ್ತಿರನುಷ್ಠಿತಾ ॥ ೪೫ ॥**

---

೪೨. ಅವನು ಮುಂದಕ್ಕೆ ಪ್ರಯಾಣಮಾಡುವ ಕಾಲದಲ್ಲಿ " ನಿನಗೆ ಮುಂದಿನ ಪ್ರಯಾಣವು ಶುಭವಾಗಿರಲಿ. ಸರ್ವಕಾರ್ಯಗಳನ್ನೂ ಸಮಗ್ರವಾಗಿ ನೆರವೇರಿಸಿಕೊಳ್ಳುವ ಸುಖವು ಯಾವಾಗಲೂ ನಿನಗೆ ಉಂಟಾಗಲಿ " ಎನ್ನಬೇಕು.

೪೩. ನಮಸ್ಕಾರ ಎಂದು ಮುಂತಾದ ವಾಕ್ಯಗಳನ್ನು ಇತರರು ತನ್ನಲ್ಲಿ ಪ್ರಯೋಗಮಾಡಿದಾಗ 'ಸ್ವಸ್ತಿ' ಎಂದೂ, 'ಶುಭಂ' ಎಂದೂ ಹೇಳಬೇಕು. ಈ ಆಶೀರ್ವಾದ ವಾಕ್ಯವನ್ನು ಸರ್ವದೇಶದಲ್ಲೂ, ಸರ್ವಕಾಲದಲ್ಲಿಯೂ ಪ್ರಯೋಗಿಸಬಹುದು.

೪೪-೪೫. ತನಗೆ ನಮಸ್ಕರಿಸಿದವನಿಗೆ " ಸಮಸ್ತ ಕಾರ್ಯಗಳಲ್ಲಿಯೂ ನಿನಗ ಯಾವಾಗಲೂ ಮಂಗಳವಾಗಲಿ " ಎಂದು ಹೇಳಬೇಕು. ಒಳ್ಳೆಯ ಆಶ್ರಮಧರ್ಮವನ್ನನುಸರಿಸುವವನು, ಇಷ್ಟು ಆಚಾರವನ್ನಾದರೂ ಅನುಷ್ಠಾನಮಾಡಿದರೆ, ಎಲ್ಲ ಪಾಪಗಳಿಂದಲೂ ಬಿಡುಗಡೆ ಹೊಂದಿದವನಾಗಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ. ಒಳ್ಳೆಯ ಭಕ್ತರೆನಿಸಿದ ಮನುಷ್ಯರು ಸೂರ್ಯಭಕ್ತರನ್ನು ಭಕ್ತಿಯಿಂದ ಕಾಣುವರಷ್ಟೆ. ಆ ರೀತಿ ಸೂರ್ಯಭಕ್ತರಲ್ಲಿ ಮಾಡುವ ಭಕ್ತಿಯೂ ಕೂಡ ಯಾವಾಗಲೂ ಸೂರ್ಯಭಕ್ತಿಗೆ ಸಮವೆನಿಸುತ್ತದೆ.

ಆಕ್ರುಷ್ಟೇ ತಾಡಿತೇ ವಾಪಿ ಯೋ ನಾಕ್ರೋಶೇನ್ನ ತಾಡಯೇತ್ ।
ವಾಕ್ಯಾದಧಿಕೃತಃ ಸ್ವಸ್ಥಃ ಸ ದುಃಖಾತ್ಪರಿಮುಚ್ಯತೇ ॥ ೪೬ ॥

ಸರ್ವೇಷಾಮೇವ ತೀರ್ಥಾನಾಂ ಕ್ಷಾಂತಿಃ ಪರಮಪೂಜಿತಾ ।
ತಸ್ಮಾತ್ಪೂರ್ವಂ ಪ್ರಯತ್ನೇನ ಕ್ಷಾಂತಿಃ ಕಾರ್ಯಾ ಕ್ರಿಯಾಸು ವೈ ॥ ೪೭ ॥

ಜ್ಞಾನಯೋಗತಪೋ ಯಸ್ಯ ಯಜ್ಞದಾನಾನಿ ಸತ್ಕ್ರಿಯಾ ।
ಕ್ರೋಧನಸ್ಯ ವೃಥಾ ಯಸ್ಮಾತ್ತಸ್ಮಾತ್ಕ್ರೋಧಂ ವಿವರ್ಜಯೇತ್ ॥ ೪೮ ॥

ಮರ್ಮಾಸ್ಥಿಪ್ರಾಣಹೃದಯಂ ನಿರ್ದಹೇದಪ್ರಿಯಂ ವಚಃ ।
ನ ವಚೋ ಹ್ಯಪ್ರಿಯಂ ತಸ್ಮಾದ್ಭೋಜಕೇಷು ವಿಶೇಷತಃ ॥ ೪೯ ॥

---

೪೬. ತನ್ನ ಮೇಲೆ ಯಾರಾದರೂ ಆಕ್ರೋಶಮಾಡಿದರೂ, ತನ್ನನ್ನು ಹೊಡೆದರೂ, ಮಾತಿನಲ್ಲಿ ಅಧಿಕಾರದರ್ಪವನ್ನು ತೋರಿಸಿದರೂ ಅದಕ್ಕೆ ಪ್ರತಿಯಾಗಿ ಆಕ್ರೋಶವನ್ನಾಗಲಿ, ತಾಡನವನ್ನಾಗಲಿ ಮಾಡಬಾರದು. ಹೀಗೆ ಶಾಂತನಾಗಿದ್ದವನು ತನಗೆ ಪ್ರಾಪ್ತವಾಗಬಹುದಾಗಿದ್ದ ದುಃಖದಿಂದ ಪಾರಾಗುತ್ತಾನೆ.

೪೭. ಎಲ್ಲ ತೀರ್ಥಕ್ಷೇತ್ರಗಳ ಸಂಚಾರದಿಂದ ಲಭಿಸುವ ಪುಣ್ಯಕ್ಕಿಂತಲೂ, ಕ್ಷಮೆಯಿಂದ ಬರುವ ಪುಣ್ಯವು ಶ್ಲಾಘ್ಯತಮವಾದುದು. ಆದುದರಿಂದ ತಾನು ಮಾಡುವ ಎಲ್ಲಾ ಕೆಲಸಗಳಲ್ಲೂ ಬಹು ಪ್ರಯತ್ನದಿಂದ ಕ್ಷಮೆಯನ್ನು ಮೊದಲು ತೋರಿಸಬೇಕು.

೪೮. ಕೋಪ ಸ್ವಭಾವವುಳ್ಳವನಲ್ಲಿ ಜ್ಞಾನ, ಯೋಗ, ತಪಸ್ಸು, ಯಜ್ಞ, ದಾನ, ಸತ್ಕಾರ ಮುಂತಾದುವು ಯಾವುದಿದ್ದರೂ ಅವೆಲ್ಲ ವ್ಯರ್ಥವೇ ಆಗುವುದರಿಂದ ಕೋಪವನ್ನು ಬಿಟ್ಟುಬಿಡಬೇಕು.

೪೯. ಅಪ್ರಿಯವಾದ ಮಾತು ಎಂಬುದು, ಅದಕ್ಕೆ ಗುರಿಯಾದ ಮಾನವನ ಮರ್ಮಸ್ಥಾನ, ಅಸ್ಥಿ, ಪ್ರಾಣ, ಹೃದಯ ಇವನ್ನೆಲ್ಲಾ ಸುಡುವುದು. ಆದುದರಿಂದ ಯಾರಲ್ಲಿಯೂ ಅಪ್ರಿಯವಾದ ಮಾತನ್ನು ಆಡಬಾರದು ತತ್ರಾಪಿ ಭೋಜಕರ ವಿಷಯದಲ್ಲಿ ಇದು ವಿಶೇಷ ನಿಯಮವಾಗಿದೆ.

ಕ್ಷಮಾ ದಾನಂ ಕ್ಷಮಾ ಸತ್ಯಂ ಕ್ಷಮಾಽಹಿಂಸಾರ್ಕಸಂಭವಾ ।
ನ ಶಕ್ಯಾ ವಿಸ್ತರಾದ್ವಕ್ತುಮಪಿ ವರ್ಷಶತೈರಪಿ ॥ ೫೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ ಭೋಜಕ ಭೋಜನಾನುಷ್ಠಾನ ವರ್ಣನಂ ನಾಮ ಏಕಸಪ್ತತ್ಯುತ್ತರ ಶತತಮೋಽಧ್ಯಾಯಃ.



---

೫೦. ಕ್ಷಮೆಯೇ ದಾನ, ಕ್ಷಮೆಯೇ ಸತ್ಯ, ಕ್ಷಮೆಯೇ ಸೂರ್ಯಾನುಗ್ರಹಲಬ್ಧವಾದ ಅಹಿಂಸಾಗುಣವಾಗಿದೆ. ಕ್ಷಮೆಯ ವಿಷಯವನ್ನು ವಿಸ್ತರಿಸಿ ಹೇಳಿ ಮುಗಿಸಲು ನೂರುವರ್ಷಗಳ ಕಾಲವಾದರೂ ಸಾಕಾಗುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ಭೋಜಕರ ಭೋಜನದ ಅನುಷ್ಠಾನ ವಿವರಣವೆಂಬ ನೂರಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಪುನಃ ಶೃಣು ಮಹಾರಾಜ ಧರ್ಮಮಾದಿತ್ಯಸಂಮತಂ ।
ಸೌರಪ್ರಿಯಂ ಸದಾ ಸೌರಂ ಪವಿತ್ರಂ ಪಾಪನಾಶನಂ ॥ ೧ ॥

ಕ್ವಚಿದ್ಗಚ್ಛನ್ಯದಾ ಪಶ್ಯೇತ್ಸೂರ್ಯಾರ್ಚಾಂ ಸಂಪ್ರಪೂಜನಂ ।
ಯತ್ರ ಪೂಜಾ ತತೋ ಗಚ್ಛನ್ಸ್ಸ ಸೂರ್ಯೋ ನಾತ್ರ ಸಂಶಯಃ ॥ ೨ ॥

---

## ನೂರಎಪ್ಪತ್ತೆರಡನೆಯ ಅಧ್ಯಾಯ

೧. ಬಳಿಕ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು "ಎಲೈ ಮಹಾರಾಜನೇ! ಸೂರ್ಯಭಕ್ತರಿಗೆ ಪ್ರಿಯವೂ, ಪವಿತ್ರವೂ, ಪಾಪನಾಶನವೂ, ಸೂರ್ಯನಿಗೆ ಸಮ್ಮತವೂ, ಮತ್ತು ಸೂರ್ಯಸಂಬದ್ಧವೂ ಆದ ಇನ್ನೂ ಕೆಲವು ಧರ್ಮಗಳನ್ನು ಹೇಳುವೆನು ಕೇಳು."

೨. "ಎಲ್ಲಿಯಾದರೂ ಹೋಗುತ್ತಿರುವಾಗ ಮಾರ್ಗವಶದಿಂದ ಸಿಕ್ಕಿದ ಸೂರ್ಯದೇವಾಲಯದಲ್ಲಿ ಬಾಗಿಲು ತೆಗೆದಿದ್ದು ಅಲ್ಲಿ ಮಹಾಪೂಜೆ ನಡೆಯುತ್ತಿದ್ದರೆ, ಅಂಥ ಸಂದರ್ಭದಲ್ಲಿ ಪೂಜೆ ನಡೆಯುವ ಸ್ಥಳಕ್ಕೆ ಹೋಗಬೇಕು. ಹೀಗೆ ಹೋಗಿ ದರ್ಶನ ಮಾಡಿದವನು ಸಾಕ್ಷಾತ್ ಸೂರ್ಯನೇ ಆಗುವನು ಇದಕ್ಕೆ ಸಂಶಯವಿಲ್ಲ.

ಸ್ನಾನನೈವೇದ್ಯವಸ್ತ್ರೈಶ್ಚ ನಾನಾಲಂಕಾರಭೂಷಣೈಃ ।
ಯಥಾವಿಭವಮಾಶ್ರಿತ್ಯ ನಮಸ್ಕಾರೈಶ್ಚ ಸಂಸ್ತವೈಃ ॥ ೩ ॥

ದೃಷ್ಟ್ವಾಯತನಮಾಕ್ರಮ್ಯ ನಮಸ್ಕೃತ್ಯ ರವಿಂ ವ್ರಜೇತ್ ।
ಕ್ವಚಿತ್ಪಥಿ ನದೀಂ ಶೈಲಂ ಗಚ್ಛಮಾನಂ ಚ ಭೋಜಕಂ ॥ ೪ ॥

ಉಪಶ್ರುತ್ಯಾವನಿಂ ಗತ್ವಾ ಭೋಜಕಂ ಪೂಜಯೇದ್ಬುಧಃ ।
ಗಜಾಶ್ವ ರಥಯಾನೇಭ್ಯೋ ಹ್ಯವತೀರ್ಯ ಮಗಾನ್ನೃಪ ॥
ಮಗಾನಾಂ ಭೋಜನಂ ಭಕ್ತ್ಯಾ ಶಕ್ತ್ಯಾ ದಾನಂ ಪ್ರಕಲ್ಪಯೇತ್ ॥ ೫ ॥

ದಶಪೂರ್ವಾನ್ ದಶಪರಾನಾತ್ಮನಾ ಸಹ ಭಾರತ ।
ಸಮಾದಾಯ ವ್ರಜೇತ್ಸ್ಥಾನಂ ರವೇರಮಿತತೇಜಸಃ ॥ ೬ ॥

---

೩. ದೇವಾಲಯಕ್ಕೆ ಹೋಗಿ ತನ್ನ ದ್ರವ್ಯಶಕ್ತಿಯಿದ್ದಷ್ಟು ಮಟ್ಟಿಗೆ ಅಭಿಷೇಕ ದ್ರವ್ಯಗಳು, ವಸ್ತ್ರಗಳು, ನೈವೇದ್ಯಸಾಮಗ್ರಿ, ನಾನಾಅಲಂಕಾರ ಸಾಧನವಾದ ಭೂಷಣಗಳು ಇವುಗಳಿಂದ ಪೂಜಿಸಿ ನಮಸ್ಕರಿಸಿ, ಸ್ತೋತ್ರ ಮುಂತಾದುವುಗಳಿಂದ ಭಜಿಸಬೇಕು.

೪. ಮತ್ತು ದೇವರನ್ನು ಕಣ್ತುಂಬ ನೋಡಿ, ದೇವಾಲಯವನ್ನು ಪ್ರದಕ್ಷಿಣೆ ಮಾಡಿ. ಸೂರ್ಯದೇವನಿಗೆ ನಮಸ್ಕರಿಸಿ ಮುಂದಕ್ಕೆ ಪ್ರಯಾಣಮಾಡಬೇಕು. ಯಾವಾಗಲಾದರೂ ಭೋಜಕನು ನದಿಗೆ ಹೋಗುವುದಕ್ಕೋ ಅಥವಾ ಬೆಟ್ಟಕ್ಕೆ ಹೋಗುವುದಕ್ಕೋ ಆ ಮಾರ್ಗವಾಗಿ ಸಾಗುತ್ತಿದ್ದುದನ್ನು ಕಂಡರೆ

೫. ವಿದ್ವಾಂಸನಾದವನು ಕೂಡಲೆ ಬಂದು ಆ ಭೋಜಕರಿಗೆ ದಂಡಪ್ರಣಾಮ ಮಾಡಿ ಪೂಜಿಸಬೇಕು. ತಾನು ರಥದಮೇಲೋ, ಆನೆಯಮೇಲೋ, ಕುದುರೆಯ ಮೇಲೋ ಕುಳಿತು ಪ್ರಯಾಣಮಾಡುತ್ತಿದ್ದಾಗ ಭೋಜಕನು ಎದುರಿಗೆ ಬರುವುದನ್ನು ಕಂಡರೆ ಕೂಡಲೇ ವಾಹನವನ್ನು ಇಳಿದು ಭಕ್ತಿಯಿಂದ ನಮಿಸಿ ಅವರಿಗೆ ಭೋಜನ ಸೌಕರ್ಯವನ್ನೂ ಶಕ್ತ್ಯನುಸಾರ ದಾನವನ್ನೂ ಮಾಡಬೇಕು.

೬. ಎಲೈ ಭರತವಂಶದ ರಾಜನೇ ! ಹೀಗೆ ಮಾಡಿದರೆ ತನ್ನ ಹಿಂದಿನ ತಲೆಮಾರಿನ ಹತ್ತುಮಂದಿ, ಮುಂದಿನ ತಲೆಮಾರಿನ ಹತ್ತುಮಂದಿ, ಮತ್ತು ತಾನು ಎಲ್ಲರೂ ಅಪರಿಮಿತ ತೇಜಶ್ಶಾಲಿಯಾದ ಸೂರ್ಯನಸ್ಥಾನಕ್ಕೆ ಹೋಗುವರು.

ದೈವಪರ್ವೋತ್ಸವೇ ಶ್ರಾದ್ಧೇ ಪುಣ್ಯೇಷು ದಿವಸೇಷು ಚ ।
ಭಾನುಂ ಸಂಪೂಜ್ಯ ವಿಧಿವದ್ಭೋಜಕಾನ್ ಭೋಜಯೇತ್ತತಃ ॥ ೭ ॥

ಪಿತರಃ ಸರ್ವದೇವಾನಾಂ ಸೂರ್ಯಮಾಶ್ರಿತ್ಯ ಸಂಸ್ಥಿತಾಃ ।
ಪ್ರೀತೇ ಸೂರ್ಯೇ ತು ತೇ ಸರ್ವೇ ಪ್ರೀತಾಃ ಸ್ಯುರ್ನಾತ್ರ ಸಂಶಯಃ ॥ ೮ ॥

ಯದಾ ಚ ಶ್ರದ್ಧಯಾ ಯುಕ್ತಂ ಪ್ರಸಕ್ತಂ ರವಿಪೂಜನಂ ।
ಭೋಜಯೇದ್ಭೋಜಕಂ ಭಕ್ತ್ಯಾ ಶ್ರಾದ್ಧೇಷು ವಿಧಿವನ್ನೃಪ ॥ ೯ ॥

ಭೋಜಕಸ್ಯ ಮಹಾರಾಜ ದಿವಸೇನಾಪಿ ಯತ್ಫಲಂ ।
ನ ತಚ್ಛಕ್ಯಮಿದಂ ತೇನ ಪ್ರಾಪ್ತುಂ ವರ್ಷಶತೈರಪಿ ॥ ೧೦ ॥

ಯಃ ಪಶ್ಯತಿ ಪ್ರಸನ್ನಾತ್ಮಾ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ಶಬ್ದಾದೀನಾಂ ತು ಸಂಭೋಗಂ ಸ ವಿಜ್ಞೇಯೋ ಜಿತೇಂದ್ರಿಯಃ ॥ ೧೧ ॥

---

೭. ದೇವತಾಸಂಬಂಧವಾದ ವ್ರತದ ದಿನದಲ್ಲೂ, ಉತ್ಸವದ ದಿನದಲ್ಲೂ ಪಿತೃಕರ್ಮದ ದಿನದಲ್ಲಿಯೂ, ಪುಣ್ಯದಿನಗಳಲ್ಲಿಯೂ ವಿಧಿಪ್ರಕಾರ ಸೂರ್ಯನನ್ನು ಆರಾಧಿಸಿ ಅನಂತರ ಭೋಜಕನಿಗೆ ಭೋಜನಮಾಡಿಸಬೇಕು.

೮. ಸರ್ವದೇವತೆಗಳ ಮಧ್ಯಘಟಕರಾದ ಪಿತೃದೇವತೆಗಳು ಸೂರ್ಯದೇವನನ್ನೇ ಆಶ್ರಯಿಸಿಕೊಂಡಿರುತ್ತಾರೆ. ಸೂರ್ಯನು ಪ್ರೀತನಾದರೆ ಅವರೆಲ್ಲರೂ ಪ್ರೀತರಾಗುವರೆಂಬುದರಲ್ಲಿ ಸಂಶಯವಿಲ್ಲ.

೯. ಶ್ರದ್ಧಾಯುಕ್ತನಾಗಿ ಸೂರ್ಯಪೂಜೆಮಾಡಬೇಕಾದ ಪ್ರಸಂಗ ಬಂದಲ್ಲಿ, ವಿಧಿಪ್ರಕಾರ ಭಕ್ತಿಯಿಂದ ಭೋಜಕನಿಗೆ ಭೋಜನ ಮಾಡಿಸುವುದೂ, ಆ ಶ್ರದ್ಧೆಯಿಂದ ಆಚರಿಸುವ ಕರ್ಮಗಳಲ್ಲಿ ಸೇರಿದೆ.

೧೦. ಅಯ್ಯಾ ಮಹಾರಾಜನೇ! ಕೇಳು; ಭೋಜಕನಿಗೆ ಒಂದು ದಿವಸ ಭೋಜನ ಮಾಡಿಸಿದರೆ ಎಷ್ಟುಫಲ ಬರುವುದೋ, ಅಷ್ಟುಫಲವನ್ನು ಹೊಂದಲು ನೂರು ವರ್ಷ ಇತರರಿಗೆ ಭೋಜನಮಾಡಿಸಿದರೂ ಸಾಧ್ಯವಿಲ್ಲ.

೧೧. ಪ್ರಸನ್ನವಾದ ಮನಸ್ಸಿನಿಂದ ಎಲ್ಲವನ್ನೂ ಅವಲೋಕಿಸುವವನು; ಯಾರನ್ನೂ ದ್ವೇಷಿಸದೆ ಇರುವವನು, ಶಬ್ದಸ್ಪರ್ಶರೂಪರಸಗಂಧಾದಿ ವಿಷಯ ಸಂಬಂಧವನ್ನು ಅಪೇಕ್ಷಿಸದವನು, ಇಂಥವನನ್ನೇ ಜಿತೇಂದ್ರಿಯನೆಂದು ತಿಳಿಯಬೇಕು.

ಜ್ಞಾನವಿಜ್ಞಾನಸಂಪನ್ನಃ ಸೂರ್ಯಭಕ್ತ್ಯಾ ಸಮನ್ವಿತಃ ।
ಪಾಷಂಡಯೋಗಮುಕ್ತಶ್ಚ ಸ ವೈ ಭೋಜಕ ಉಚ್ಯತೇ ॥ ೧೨ ॥

ಸೂರ್ಯಧರ್ಮಾದ್ಭವೇಜ್ಞ್ಞಾನಂ ಜ್ಞಾನಾದ್ವೈರಾಗ್ಯಸಂಭವಃ ।
ಜ್ಞಾನವೈರಾಗ್ಯಯುಕ್ತಸ್ಯ ಸೂರ್ಯಯೋಗಃ ಪ್ರವರ್ತತೇ ॥ ೧೩ ॥

ಸೂರ್ಯಯೋಗಾಚ್ಚ ಸರ್ವಜ್ಞಃ ಪರಿಪೂರ್ಣಃ ಸ್ವನಿರ್ವೃತಃ ।
ಆತ್ಮನ್ಯವಸ್ಥಿತಃ ಶುದ್ಧಃ ಸೂರ್ಯವದ್ದಿವಿ ಮೋದತೇ ॥ ೧೪ ॥

ಸರ್ವೇಷಾಮೇವ ಭೂತಾನಾಮುತ್ತಮಃ ಪುರುಷಃ ಸ್ಮೃತಃ ।
ಪುರುಷೇಭ್ಯೋ ದ್ವಿಜಃ ಶ್ರೇಷ್ಠೋ ದ್ವಿಜೇಭ್ಯೋ ಗ್ರಂಥಪಾರಗಃ ॥ ೧೫ ॥

ಗ್ರಂಥಿಭ್ಯೋ ವೇದವಿದ್ವಾಂಸಸ್ತೇಭ್ಯಸ್ತತ್ತ್ವಾರ್ಥಚಿಂತಕಾಃ ।
ಅರ್ಥವಿದ್ಭ್ಯಶ್ಚ ಜ್ಞಾನಾರ್ಥಪ್ರತಿಬುದ್ಧೋ ವಿಶಿಷ್ಯತೇ ॥ ೧೬ ॥

---

೧೨. ಭೋಜಕನೆನಿಸಿಕೊಳ್ಳುವವನು ನಿಶ್ಚಯಜ್ಞಾನ ವಿಶೇಷ ಜ್ಞಾನಗಳಿಂದ ಕೂಡಿದವನೂ, ಸೂರ್ಯಭಕ್ತಿಯುಕ್ತನೂ, ಪಾಷಂಡರ ಸಂಪರ್ಕವಿಲ್ಲದವನೂ ಆಗಿರ ಬೇಕು.

೧೩. ಸೂರ್ಯನ ವಿಷಯದಲ್ಲಿ ಆಚರಿಸಬೇಕಾದ ಧರ್ಮವನ್ನು ತಿಳಿದುಕೊಳ್ಳುವುದರಿಂದ ಜ್ಞಾನವುಂಟಾಗುತ್ತದೆ. ಜ್ಞಾನದಿಂದ ವೈರಾಗ್ಯ ಹುಟ್ಟುತ್ತದೆ. ಜ್ಞಾನ, ವೈರಾಗ್ಯಗಳಿಂದ ಕೂಡಿದವನಿಗೆ ಸೂರ್ಯಯೋಗವು ಸಂಭವಿಸುತ್ತದೆ.

೧೪. ಸೂರ್ಯಯೋಗವುಂಟಾಗುವುದರಿಂದ ಸರ್ವಜ್ಞನೂ, ಪೂರ್ಣಮನೋರಥನೂ, ಚೆನ್ನಾಗಿ ಸುಖಪಡುವವನೂ, ಪರಮಾತ್ಮನಲ್ಲಿ ಸೇರಿ ಇರತಕ್ಕವನೂ, ಶುದ್ಧನೂ ಆಗಿ, ಸೂರ್ಯನಂತೆ ಹರ್ಷಿಸುತ್ತಾನೆ.

೧೫. ಪೃಥಿವ್ಯಾದಿ ಸರ್ವತತ್ವಗಳಲ್ಲಿ ಪುರುಷನು ಉತ್ತಮತತ್ವ. ಈ ಪುರುಷ ತತ್ವದಲ್ಲಿ ದ್ವಿಜನು ಶ್ರೇಷ್ಠನು. ದ್ವಿಜಸಾಮಾನ್ಯರಲ್ಲಿ ಗ್ರಂಥಪಾರಂಗತನು ಇನ್ನೂ ಶ್ರೇಷ್ಠನು.

೧೬. ಗ್ರಂಥಜ್ಞಾನವುಳ್ಳವರಲ್ಲಿ ವೇದಾಧ್ಯಯನ ಮಾಡಿದವನು ತುಂಬಾ ಶ್ರೇಷ್ಠನು. ಅವರಲ್ಲಿ ವೇದತತ್ವಾರ್ಥವನ್ನು ಚಿಂತನೆ ಮಾಡತಕ್ಕವನು ಇನ್ನೂ ಶ್ರೇಷ್ಠನು. ಕೇವಲ ತತ್ವಾರ್ಥವನ್ನು ತಿಳಿದವನಿಗಿಂತ ಜ್ಞಾನರೂಪವಾದ ಅರ್ಥವನ್ನು ತಿಳಿದವನು ಮೇಲ್ಮೆ ಹೊಂದುತ್ತಾನೆ.

ಜ್ಞಾನಾರ್ಥಕೋಟಿಕೋಟಿಭ್ಯೋ ವರಿಷ್ಠಾ ಯೋಗಿನೋ ಮತಾಃ ।
ಯೋಗಿನಾಂ ಕೋಟಿಕೋಟಿಭ್ಯೋ ಭೋಜಕಶ್ಚೋತ್ತಮೋ ಭವೇತ್ ॥ ೧೭ ॥

ಯೋಗಜ್ಞಾ ಯೋಗನಿಷ್ಠಾಶ್ಚ ಪಿತರೋ ಯೋಗಸಂಭವಾಃ ।
ಭೋಜಿತೇ ಭೋಜಕೇ ಸರ್ವೇ ಪ್ರೀತಾಃ ಸ್ಯುಸ್ತೇ ನ ಸಂಶಯಃ ॥ ೧೮ ॥

ಸರ್ವಜ್ಞಾನಕೃತೈರ್ದತ್ತೈಃ ತಪೋದಾನೈಶ್ಚ ಯತ್ಫಲಂ ।
ತತ್ಫಲಂ ಲಭತೇ ಸರ್ವಂ ವಿಧಿವದ್ಭೋಜ್ಯ ಭೋಜಕಂ ॥ ೧೯ ॥

ಯಶ್ಚ ದ್ರವ್ಯಕಲಾಪಾತ್ಮಾ ದಕ್ಷಿಣಾ ಹವಿಋತ್ವಿಜಃ ।
ಋಗ್ಯಜುಃಸಾಮಯೋಗೈಶ್ಚ ದೇವಯಜ್ಞಃ ಪ್ರಕೀರ್ತಿತಃ ॥ ೨೦ ॥

ಬ್ರಹ್ಮಚರ್ಯಂ ಜಪೋ ಮೌನಂ ಕ್ಷಾಂತಿಸಾಹಾರಲಾಘವಂ ।
ಇತ್ಯೇತತ್ತಪಸಾಂ ರೂಪಂ ಸುಧೀರಂ ಪಂಚಲಕ್ಷಣಂ ॥ ೨೧ ॥

---

೧೭. ಜ್ಞಾನರೂಪವಾದ ಅರ್ಥವನ್ನು ತಿಳಿದ ಕೋಟ್ಯಂತರ ಜನರಿಗಿಂತ, ಜ್ಞಾನಯೋಗಿಗಳು ಶ್ರೇಷ್ಠರು. ಈ ಜ್ಞಾನಯೋಗಿಗಳಾದ ಕೋಟ್ಯಂತರ ಜನಗಳಿಗಿಂತ ಭೋಜಕನು ಉತ್ತಮನು.

೧೮. ಭೋಜಕನೊಬ್ಬನಿಗೆ ಭೋಜನ ಮಾಡಿಸಿದರೆ ಯೋಗಜ್ಞರು ಎಂದರೆ ಕರ್ಮಯೋಗಿಗಳು, ಯೋಗನಿಷ್ಠರು (ಜ್ಞಾನಯೋಗಿಗಳು), ಯೋಗಸಂಭವರಾದ ಪಿತೃಗಳು, ಇವರೆಲ್ಲರೂ ತೃಪ್ತರಾಗುವರೆಂಬುದರಲ್ಲಿ ಸಂಶಯವಿಲ್ಲ.

೧೯. ಜ್ಞಾನಪೂರ್ವಕವಾಗಿ ಮಾಡಿದ ತಪಸ್ಸುಗಳಿಂದಲೂ, ಜ್ಞಾನಪೂರ್ವಕವಾಗಿ ಕೊಟ್ಟ ದಾನಗಳಿಂದಲೂ ಯಾವ ಫಲವನ್ನು ಹೊಂದುವನೋ, ಆ ಫಲವೆಲ್ಲವನ್ನೂ ಭೋಜಕನೊಬ್ಬನಿಗೆ ವಿಧಿಪ್ರಕಾರ ಭೋಜನ ಮಾಡಿಸುವುದರಿಂದ ಹೊಂದುತ್ತಾನೆ.

೨೦. ಸಮೃದ್ಧಿಯಾದ ದಕ್ಷಿಣಾದ್ರವ್ಯ, ಹವಿಸ್ಸು, ಋತ್ವಿಕ್ಕುಗಳು, ಋಗ್ಯಜುಸ್ಸಾಮ, ಈ ವೇದಘೋಷಧ್ವನಿ, ಇವುಗಳಿಂದ ಕೂಡಿದುದೇ ದೇವಯಜ್ಞವೆನಿಸುವುದು.

೨೧. ಬ್ರಹ್ಮಚರ್ಯ, ವ್ರತಾಚರಣೆ, ಮಾನಸಿಕಮೌನ, (ಎಂದರೆ ಮನಸ್ಸಿನ ನಿರ್ವ್ಯಾಪಾರ), ಕ್ಷಮೆ, ಲಘುವಾದ ಆಹಾರಸೇವನೆ, ಎಂಬ ಈ ಐದೂ ಗಂಭೀರವಾದ ತಪಸ್ಸಿನ ಲಕ್ಷಣ.

**ಯಚ್ಚಾದುಷ್ಟಂ ವಿಶಿಷ್ಟಂ ಚ ನ್ಯಾಯಪ್ರಾಪ್ತಂ ಚ ಯದ್ಭವೇತ್ ।**
**ತತ್ತದ್ಗುಣವತೇ ದೇಯಂ ಇತ್ಯೇತದ್ದಾನಲಕ್ಷಣಂ ॥ ೨೨ ॥**

**ವಿವರ್ಧನೀಂ ಸಹಸ್ರಾಣಾಂ ಸರ್ವಸಸ್ಯಪ್ರರೋಹಿಣೀಂ ।**
**ದದ್ಯಾದ್ಭೂಮಿಂ ಜಲೋಪೇತಾಂ ಭೂಮಿದಾನಂ ತದುಚ್ಯತೇ ॥ ೨೩ ॥**

**ಏಕಚ್ಛತ್ರಾಂ ಮಹೀಂ ಕೃತ್ವಾ ದ್ವಿಜೇಭ್ಯಃ ಪ್ರತಿಪಾದಯೇತ್ ।**
**ಸಂಪೂರ್ಣಂ ಪರ್ವತಾರಣ್ಯೇ ಭೂಮಿದಾನಂ ತದುಚ್ಯತೇ ॥ ೨೪ ॥**

**ಕನ್ಯಾಮಲಂಕೃತಾಂ ದದ್ಯಾದಧನಾಯ ನರಾಧಿಪ ।**
**ದ್ವಿಜಾಯ ವೇದ ವಿದುಷೇ ಕನ್ಯಾದಾನಂ ತದುಚ್ಯತೇ ॥ ೨೫ ॥**

**ಸರ್ವದೋಷವಿನಿರ್ಮುಕ್ತಾಂ ಕುಲಯೋಗ್ಯಾಂ ಗುಣಾನ್ವಿತಾ ।**
**ಮಧ್ಯಮೋತ್ತಮವಸ್ತ್ರಾಣಾಂ ಯೋ ದದ್ಯಾದಹತಾನಿ ಚ ॥ ೨೬ ॥**

---

೨೨. ದುಷ್ಟವಲ್ಲದ ವಸ್ತುವನ್ನೂ, ವಿಶೇಷ ಗುಣವುಳ್ಳದಾಗಿ ನ್ಯಾಯವಾಗಿ ನಾವು ಸಂಪಾದನೆ ಮಾಡಿದ ಶ್ರೇಷ್ಠವಾದ ವಸ್ತುಗಳನ್ನೂ, ಗುಣವಂತನಾದ ಪಾತ್ರನಿಗೆ ಕೊಡುವುದೇ ದಾನವೆನಿಸಿಕೊಳ್ಳುವುದು.

೨೩. ಸಾವಿರಾರು ವೃಕ್ಷಗಳೂ, ಸಮಸ್ತವಾದ ಪೈರುಪಚ್ಚೆಗಳೂ ಬೆಳೆಯತಕ್ಕದ್ದಾಗಿ, ಜಲವಸತಿಯುಳ್ಳ ಕ್ಷೇತ್ರವನ್ನು ಸತ್ಪಾತ್ರನಿಗೆ ಧಾರೆಎರೆದು ಕೊಡುವುದೇ ಭೂದಾನವೆನಿಸುವುದು.

೨೪. ಪರ್ವತದ ತಪ್ಪಲಿನಲ್ಲಿ ಕಾಡಾಗಿರುವ ಭೂಮಿಯನ್ನು ಸಂಪೂರ್ಣವಾಗಿ ನಿರುಪಾಧಿಕವನ್ನಾಗಿ ಮಾಡಿ, ಬ್ರಾಹ್ಮಣರಿಗೆ ದಾನಕೊಡಬೇಕು. ಅದು ಭೂದಾನವೆನಿಸುತ್ತದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

೨೫-೨೬. ಎಲೈ ರಾಜನೇ! ಕೇಳು; ಸರ್ವದೋಷಗಳಿಂದ ಬಿಡಲ್ಪಟ್ಟವಳೂ, ಯೋಗ್ಯಕುಲದಲ್ಲಿ ಹುಟ್ಟಿದವಳೂ, ಸುಗುಣವಂತೆಯೂ ಆಗಿ ಅಲಂಕೃತಳಾದ ಕನ್ಯೆಯನ್ನು; ಬಡವನೂ, ವೇದಜ್ಞನೂ ಆದ ಬ್ರಾಹ್ಮಣನಿಗೆ ಕೊಟ್ಟು ಮದುವೆಮಾಡುವುದು ಕನ್ಯಾದಾನವೆನಿಸುವುದು. ಅಹತವಾಗಿರುವುದನ್ನು ಎಂದರೆ ಹರಿಯದೇ ಇರುವಂಥ ಮಧ್ಯಮತರಹ ವಸ್ತ್ರಗಳನ್ನೂ, ಉತ್ತಮತರಹ ವಸ್ತ್ರಗಳನ್ನೂ ದಾನಮಾಡುವುದು ವಸ್ತ್ರದಾನವೆನಿಸುವುದು.

ಏತತ್ಸಮಾಸತೋ ಜ್ಞೇಯಂ ವಸ್ತ್ರದಾನಸ್ಯ ಲಕ್ಷಣಂ ।
ಬ್ರಹ್ಮ ವಿಷ್ಣು ಸಮಾಧಿಕ್ಯಕಾಂತಿಶೀಲಪರಾಯಣಃ ।
ಅಹೋರಾತ್ರಂ ನ ಭುಂಜೀತ ಹ್ಯುಪವಾಸಸ್ಯ ಲಕ್ಷಣಂ ॥ ೨೭ ॥

ಚತ್ವಾರಿಂಶತ್ಸಮಾಯುಕ್ತಂ ಪಿಂಡಾನಾಂ ಹಿ ಶತದ್ವಯಂ ।
ಮಾಸೇಹ್ಯದ್ಯಾ ದ್ಯಥಾಕಾಮಮಿದಂ ಚಾಂದ್ರಾಯಣಂ ಸ್ಮೃತಂ ॥ ೨೮ ॥

ಋಷಿಭಿಃ ಸ್ಸರ್ವಶಾಸ್ತ್ರಜ್ಞೈಃ ತಪೋನಿಷ್ಠೈರ್ಜಿತೇಂದ್ರಿಯೈಃ ।
ದೇವೈಶ್ಚ ಸೇವಿತಂ ತೋಯಂ ಕ್ಷಿತೌ ತತ್ತೀರ್ಥಮುಚ್ಯತೇ ॥ ೨೯ ॥

ಸೂರ್ಯಾವಾಂತರಸ್ಥಾನಾನಿ ಪುಣ್ಯಕ್ಷೇತ್ರಾಣಿ ನಿರ್ದಿಶೇತ್ ।
ಮೃತಾನಾಂ ತೇಷು ಸೂರ್ಯತ್ವಂ ಸೌರಕ್ಷೇತ್ರೇಷು ದೇಹಿನಾಂ ॥ ೩೦ ॥

ದಾನಾನ್ಯಾವಸಥಂ ಕುರ್ಯಾದುದ್ಯಾನಂ ದೇವತಾಗೃಹಂ ।
ತೀರ್ಥೇಷ್ವೇತಾನಿ ಯಃ ಕುರ್ಯಾತ್ಸೋಽಕ್ಷಯಂ ಲಭತೇ ಫಲಂ ॥ ೩೧ ॥

---

೨೭. ಇದು ವಸ್ತ್ರದಾನದ ಸ್ಥೂಲವಾದ ಲಕ್ಷಣವೆಂದು ತಿಳಿಯಬೇಕು. ಬ್ರಹ್ಮ, ವಿಷ್ಣುಗಳ ಸಾಮ್ಯ, ಆಧಿಕ್ಯ, ಕಾಂತಿ, ಶೀಲ ಇವುಗಳ ವಿಚಾರ, ಧ್ಯಾನ ಇವುಗಳಲ್ಲಿ ಆಸಕ್ತನಾಗಿ ಎಂದರೆ ದೇವಧ್ಯಾನ ತತ್ಪರನಾಗಿ, ಹಗಲೂ, ರಾತ್ರಿಯೂ, ಭೋಜನ ಮಾಡದೆ ಇರುವುದೇ ಉಪವಾಸದ ಲಕ್ಷಣವು.

೨೮. ಒಂದು ತಿಂಗಳೊಳಗೆ ಒಟ್ಟಿನಲ್ಲಿ ಇನ್ನೂರುನಲವತ್ತು ತುತ್ತುಗಳನ್ನು ಇಷ್ಟಾನುಸಾರ ಭೋಜನಮಾಡಬೇಕು. ಇದನ್ನೇ ಚಾಂದ್ರಾಯಣ ವ್ರತವೆಂದು ಹೇಳುತ್ತಾರೆ.

೨೯. ಸರ್ವಶಾಸ್ತ್ರಜ್ಞರಾದ ಋಷಿಗಳೂ, ತಪೋನಿಷ್ಠರಾದ ಜಿತೇಂದ್ರಿಯರೂ, ದೇವತೆಗಳೂ, ಭೂಮಿಯಲ್ಲಿ ಸೇವಿಸಿದ ಜಲವನ್ನು ತೀರ್ಥ ಎಂದು ವ್ಯವಹರಿಸುವರು

೩೦. ಸೂರ್ಯನನ್ನು ಪ್ರತಿಷ್ಠಿಸಿರುವ (ಅವಾಂತರ) ಸ್ಥಾನಗಳನ್ನು ಪುಣ್ಯಕ್ಷೇತ್ರಗಳೆಂದು ನಿರ್ದೇಶಮಾಡಬೇಕು. ಆ ಸೌರಕ್ಷೇತ್ರಗಳಲ್ಲಿ ಮೃತಪಟ್ಟ ಪ್ರಾಣಿಗಳಿಗೆ ಸೂರ್ಯತ್ವಬರುವುದು.

೩೧. ಅಂಥ ಕ್ಷೇತ್ರಗಳಲ್ಲಿ ತನ್ನ ಶಕ್ತಿಯಿದ್ದಷ್ಟರಲ್ಲಿ ಗೃಹವನ್ನೂ, ಉದ್ಯಾನವನ್ನೂ, ದೇವಾಲಯವನ್ನೂ ಕಟ್ಟಿಸಿ ದಾನಮಾಡಬೇಕು. ಯಾವನು ಈ ದಾನ

ಕ್ಷಾಂತಿಃ ಸ್ಪೃಹಾ ಶುಚಿಃ ಸತ್ಯಂ ದಾನಂ ಶೀಲಂ ತಪಃ ಶ್ರುತಂ ।
ಏತದಷ್ಟಾಂಗಮುದ್ದಿಷ್ಟಂ ಪರಂ ಪಾತ್ರಸ್ಯ ಲಕ್ಷಣಂ ॥ ೩೨ ॥

ಯಜ್ಞೋಪವಾಸದಾನಾನಿ ತಪಸ್ತೀರ್ಥಫಲಾನಿ ಚ ।
ಸಂಪೂರ್ಣಂ ಲಭತೇ ಭಕ್ತ್ಯಾ ಭೋಜಯಿತ್ವಾ ತು ಭೋಜಕಾನ್ ॥ ೩೩ ॥

ಸೂರೇ ಭಕ್ತಿಃ ಕ್ಷಮಾ ಸತ್ಯಂ ದಶೇಂದ್ರಿಯವಿನಿಗ್ರಹಃ ।
ಸುಖಿತೇಷು ಚ ಮೈತ್ರೀ ಚ ಸೂರ್ಯಧರ್ಮಸ್ಯ ಲಕ್ಷಣಂ ॥ ೩೪ ॥

ಸೂರ್ಯಭಕ್ತಂ ದ್ವಿಜಂ ಭಕ್ತ್ಯಾ ಯಃ ಶ್ರಾದ್ಧೇಷು ಚ ಭೋಜಯೇತ್ ।
ಕುಲಸಪ್ತಕಮುದ್ಧೃತ್ಯ ಸೂರ್ಯಲೋಕೇ ಮಹೀಯತೇ ॥ ೩೫ ॥

---

ಗಳನ್ನು ತೀರ್ಥಸನ್ನಿಧಿಯಲ್ಲಿ ಮಾಡುತ್ತಾನೋ ಅವನು ಅಕ್ಷಯವಾದ ಫಲವನ್ನು ಪಡೆಯುತ್ತಾನೆ.

೩೨. ಕ್ಷಮೆ, ಕಾರ್ಯೋತ್ಸಾಹ, ಶುಚಿತ್ವ, ಸತ್ಯ, ದಾನ, ಸೌಶೀಲ್ಯ, ತಪಸ್ಸು, ಶಾಸ್ತ್ರಜ್ಞಾನ ಇವು ಉತ್ತಮವಾದ ಪಾತ್ರನಲ್ಲಿರಬೇಕಾದ ಎಂಟುಬಗೆಯ ಲಕ್ಷಣವೆಂದು ನಿರ್ದಿಷ್ಟವಾಗಿದೆ.

೩೩. ಯಜ್ಞ, ಉಪವಾಸ, ದಾನ, ತಪಸ್ಸು, ತೀರ್ಥ ಇವುಗಳಿಂದ ಬರುವಷ್ಟು ಫಲವೇ, ಭೋಜಕರಿಗೆ ಭಕ್ತಿಯಿಂದ ಭೋಜನಮಾಡಿಸಿದರೂ ಸಂಪೂರ್ಣವಾಗಿ ಲಭಿಸುವುದು.

೩೪. ಸೂರ್ಯನಲ್ಲಿ ಭಕ್ತಿ, ಕ್ಷಮೆ, ಸತ್ಯ, ಐದು ಅಂತರಿಂದ್ರಿಯ ಮತ್ತು ಐದು ಬಹಿರಿಂದ್ರಿಯ ಈ ರೀತಿ ದಶೇಂದ್ರಿಯಗಳ ನಿಗ್ರಹ, ಸುಖಿಗಳೊಡನೆ ಮೈತ್ರಿ, ಇವು ಸೂರ್ಯಧರ್ಮದ ಲಕ್ಷಣವು.

೩೫. ಸೂರ್ಯಭಕ್ತನಾದ ಬ್ರಾಹ್ಮಣನಿಗೆ ಯಾವನು ಶ್ರಾದ್ಧಗಳಲ್ಲಿ ಭೋಜನ ಮಾಡಿಸುತ್ತಾನೋ, ಅವನು ತನ್ನ ಕಡೆಯ ಏಳುಕುಲಗಳನ್ನು ಉದ್ಧರಿಸಿ ಸೂರ್ಯ ಲೋಕದಲ್ಲಿ ಪೂಜಿತನಾಗುತ್ತಾನೆ.

ಬಹುನಾತ್ರ ಕಿಮುಕ್ತೇನ ಸೂರ್ಯಭಕ್ತಂ ತು ಭೋಜಯೇತ್ ।
ಸೂರ್ಯಭಕ್ತೇನ ಯದ್ಭುಕ್ತಂ ಭಾನೂನಾಮರ್ಪಿತಂ ನೃಪ ॥ ೩೬ ॥

ನ ವೇದವಿದುಷಾಂ ಕೋಟ್ಯಾ ಲಭ್ಯತೇ ಚೇಹ ತತ್ಫಲಂ ।
ತತ್ಫಲಂ ಲಭತೇ ರಾಜರ್ ಭೋಜಂ ಭೋಜ್ಯವಿಧಾನತಃ ॥ ೩೭ ॥

ತಸ್ಮಾಚ್ಛ್ರಾದ್ಧೇ ವಿಶೇಷೇಣ ಪುಣ್ಯೇಷು ದಿವಸೇಷು ಚ ।
ಸೂರ್ಯಮುದ್ದಿಶ್ಯ ವಿಪ್ರೇಂದ್ರ ಭೋಜಕಾನ್ ಭೋಜಯೇನ್ನೃಪ ॥ ೩೮ ॥

ಅಸಂಯುತಃ ಸಂಯುತೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಶ್ಚಾಸೌ ರವಿಭಕ್ತಃ ಸ್ಯಾತ್ಸೂರ್ಯವತ್ಪೂಜ್ಯ ಏವ ಹಿ ॥ ೩೯ ॥

ಸಂಸರ್ಗಾದ್ವಾಪಿ ವಾ ಲೋಭಾದ್ಭೋಜಕಂ ಯಸ್ತು ಭೋಜಯೇತ್ ।
ಸೋಽಪಿ ಯಾಂ ಗತಿಮಾಪ್ನೋತಿ ನ ತಾಂ ಯಜ್ಞಶತೈರಪಿ ॥ ೪೦ ॥

---

೩೬. ಅಯ್ಯಾ ರಾಜನೇ! ಈ ವಿಷಯದಲ್ಲಿ ಹೆಚ್ಚು ಮಾತು ಹೇಳುವುದರಿಂದ ಫಲವೇನು ? ಸೂರ್ಯಭಕ್ತನಿಗೇ ಭೋಜನ ಮಾಡಿಸಬೇಕು. ಸೂರ್ಯಭಕ್ತನು ಭೋಜನ ಮಾಡಿದುದೆಲ್ಲವೂ ದ್ವಾದಶಾದಿತ್ಯರಿಗೆ ಅರ್ಪಿತವಾಗುವುದು.

೩೭. ಭೋಜಕನಿಗೆ ಭೋಜನ ಮಾಡಿಸಿದುದರಿಂದ ಬರುವಷ್ಟು ಫಲವು, ಭೋಜಕರಾಗಿಲ್ಲದೆ ಕೇವಲ ವೇದಜ್ಞರೆನಿಸಿದ ಕೋಟಿಜನರಿಗೆ ಭೋಜನ ಮಾಡಿಸಿದರೂ ಬರುವುದಿಲ್ಲ.

೩೮. ಎಲೈ ವಿಪ್ರಶ್ರೇಷ್ಠನೇ! ಕೇಳು; ಹೀಗಿರುವುದರಿಂದ ವಿಶೇಷವಾಗಿ ಸೂರ್ಯನನ್ನು ಉದ್ದೇಶಿಸಿ ಮಾಡುವ ಶ್ರಾದ್ಧದಿನದಲ್ಲೂ, ಪುಣ್ಯದಿವಸಗಳಲ್ಲೂ ಭೋಜಕರಿಗೇ ಭೋಜನಮಾಡಿಸಬೇಕು.

೩೯. ನೇಮವಿಲ್ಲದವನಾಗಲಿ, ನೇಮಿಷ್ಠನಾಗಿರಲಿ, ಸರ್ವಾವಸ್ಥೆಗಳನ್ನು ಪಡೆದವನಾಗಲಿ, ಸೂರ್ಯಭಕ್ತನು ಸರ್ವದಾ ಸೂರ್ಯನಂತೆ ಪೂಜ್ಯನೇ ಆಗುತ್ತಾನೆ.

೪೦. ಸಂಸರ್ಗವಶದಿಂದಲಾಗಲಿ, ಲೋಭದಿಂದಲೇ ಆಗಲಿ ಹೇಗಾದರೂ ಭೋಜಕನಿಗೆ ಭೋಜನಮಾಡಿಸಿದರೆ, ನೂರು ಯಾಗಗಳಿಂದ ಬರುವ ಫಲಕ್ಕಿಂತ ಅಧಿಕ ಫಲವು ಲಭಿಸುವುದು.

ತಸ್ಮಾನ್ಮಾನ್ಯಶ್ಚ ಪೂಜ್ಯಶ್ಚ ರಕ್ಷಣೀಯಶ್ಚ ಸರ್ವದಾ ।
ಭೋಜಕಃ ಕುರುಶಾರ್ದೂಲ ಸೌರೇಣ ಗತಿಮಿಚ್ಛತಾ ॥ ೪೧ ॥

ನಾಮಮಾತ್ರಪ್ರಯುಕ್ತೋಽಪಿ ಯದಿ ಸ್ಯಾದ್ಭೋಜಕೋ ರವೇಃ ।
ಸೂರ್ಯವತ್ಸ ಹಿ ದ್ರಷ್ಟವ್ಯಃ ಪೂಜನೀಯಶ್ಚ ಭಾರತ ॥ ೪೨ ॥

ಗೃಹೇ ಶ್ರಾದ್ಧಸ್ಯ ಯತ್ಪುಣ್ಯಮರಣ್ಯೇ ತಚ್ಛತಾಧಿಕಂ ।
ಸೌರಾಶ್ರಮೇಷು ವಿಜ್ಞೇಯಂ ತತ್ಪುಣ್ಯಮಯುತಾಧಿಕಂ ॥ ೪೩ ॥

ದತ್ವಾ ತು ಭೋಜಕೇ ಸೌಮ್ಯಂ ಹ್ಯಾಸನಂ ಸಪರಿಚ್ಛದಂ ।
ಧಾತುದಂತಮಯಂ ಚಾಪಿ ರಾಜಾ ಭವತಿ ಭೂತಲೇ ॥ ೪೪ ॥

ವಿಮಲೇ ವಾಸಸೀ ದತ್ವಾ ಭೋಜಕಾಯ ಮಹೀಪತೇ ।
ಉದ್ಧೃತ್ಯ ಶತಸಾಹಸ್ರಂ ಸೂರ್ಯಲೋಕೇ ಮಹೀಯತೇ ॥ ೪೫ ॥

---

೪೧. ಎಲೈ ಕುರುಶ್ರೇಷ್ಠನೇ! ಕೇಳು ; ಸದ್ಗತಿಯನ್ನು ಅಪೇಕ್ಷಿಸುವ ಸೌರನು (ಸೂರ್ಯಭಕ್ತನು) ಈ ಕಾರಣದಿಂದ ಭೋಜಕನನ್ನೇ ಗೌರವಿಸಬೇಕು. ಪೂಜಿಸಬೇಕು. ಮತ್ತು ರಕ್ಷಿಸಬೇಕು.

೪೨. ಎಲೈ ಭರತವಂಶೀಯನೇ! ಕೇಳು ; ಗೌರವ ಹೊಂದುವ ಆಶೆಯಿಂದ ಹೆಸರುಮಾತ್ರಕ್ಕೆ ಭೋಜಕನಾಗಿದ್ದರೂ, ಅವನನ್ನೂ ಸಹ ಸೂರ್ಯನನ್ನು ಕಂಡಂತೆಯೇ ಕಾಣಬೇಕು. ಮತ್ತು ಪೂಜೆಯನ್ನೂ ಮಾಡಬೇಕು.

೪೩. ಮನೆಯಲ್ಲಿ ಶ್ರಾದ್ಧಮಾಡಿದರೆ ಎಷ್ಟುಪುಣ್ಯ ಬರುವುದೋ ಅದರ ನೂರರಷ್ಟು ಪುಣ್ಯವು ಅರಣ್ಯದಲ್ಲಿ ಮಾಡಿದ ಶ್ರಾದ್ಧದಿಂದ ಬರುವುದು. ಸೌರಾಶ್ರಮಗಳಲ್ಲಿ ಶ್ರಾದ್ಧಮಾಡುವುದರಿಂದ ಈ ಪುಣ್ಯವು ಹತ್ತುಸಾವಿರದಷ್ಟು ಹೆಚ್ಚಾಗಿ ಬರುವುದು.

೪೪. ಭೋಜಕನಿಗೆ ಸೌಮ್ಯವೂ, ಪರಿಕರಸಹಿತವೂ, ಧಾತು ವಸ್ತುಮಯವೂ, ದಂತಮಯವೂ, ಆದ ಆಸನವನ್ನು ಕೊಟ್ಟರೆ ಅವನು ಭೂಮಿಯಲ್ಲಿ ರಾಜನಾಗುವನು.

೪೫. ಎಲೈ ರಾಜನೇ! ಕೇಳು ; ಭೋಜಕನಿಗೆ ನಿರ್ಮಲಗಳಾದ ಎರಡು ವಸ್ತ್ರಗಳನ್ನು ದಾನಕೊಟ್ಟರೆ ಶತಸಹಸ್ರ ಮಂದಿಗಳನ್ನು ಅಧೋಗತಿಯಿಂದ ಉದ್ಧರಿಸಿದಷ್ಟು ಪುಣ್ಯ ಲಭಿಸಿ, ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

ದತ್ವಾ ತು ಲೋಮಶಾಂ ರಾರ್ಜ ಭೋಜಕಾಯ ಶುಭಾಂ ಬೃಹತ್ ।
ರೋಮ್ಣಿರೋಮ್ಣಿ ಸುವರ್ಣಸ್ಯ ದತ್ತಸ್ಯ ಫಲಮಾಪ್ನುಯಾತ್ ॥ ೪೬ ॥

ಶಂಖಂ ದದಾತಿ ಯೋ ಭಕ್ತ್ಯಾ ತಥಾ ದಿವ್ಯೇ ಚ ಪಾದುಕೇ ।
ಸೂರ್ಯಲೋಕಮವಾಪ್ನೋತಿ ತೇಜಸಾ ರವಿಸನ್ನಿಭಃ ॥ ೪೭ ॥

ಲಿಖಾಪಯತಿ ಯೋ ಭಕ್ತ್ಯಾ ಪುರಾಣಸ್ಯ ತು ಪುಸ್ತಕಂ ।
ಯುಗಕೋಟಿಶತಂ ದಿವ್ಯಂ ಸೂರ್ಯಲೋಕೇ ಮಹೀಯತೇ ॥ ೪೮ ॥

ಭವೇದಿಹಾಗತಃ ಶ್ರೀಮಾರ್ನ ಸುಖಾಢ್ಯೋ ವೇದಪಾರಗಃ ।
ಯಃ ಕರೋತಿ ಗೃಹಂ ಭಾನೋಃ ತತ್ಸ್ಥಾನಂ ಚೋತ್ತಮಂ ಭವೇತ್ ॥ ೪೯ ॥

---

೪೬. ಮಂಗಳಕರವೂ ಲೋಮಯುಕ್ತವೂ ಆದ ಕೃಷ್ಣಾಜಿನ ಮುಂತಾದ ಆಸನವನ್ನು ಭೋಜಕನಿಗೆ ಕೊಟ್ಟರೆ, ಆ ಆಸನದಲ್ಲಿ ಎಷ್ಟು ಸಂಖ್ಯೆಯ ರೋಮಗಳಿರುವುವೋ ಅಷ್ಟು ಸುವರ್ಣನಾಣ್ಯಗಳನ್ನು ದಾನಕೊಟ್ಟ ಫಲವನ್ನು ಹೊಂದುವನು.

೪೭. ಯಾವನು ಭಕ್ತಿಯಿಂದ ಶಂಖವನ್ನೂ, ಮತ್ತು ಶ್ರೇಷ್ಠವಾದ ಪಾದುಕೆಗಳನ್ನೂ, ಭೋಜಕರಿಗೆ ಕೊಡುತ್ತಾನೋ, ಅವನು ಸೂರ್ಯಸಮನಾದ ತೇಜಸ್ವಿಯಾಗಿ ಸೂರ್ಯಲೋಕವನ್ನು ಹೊಂದುತ್ತಾನೆ.

೪೮. ಯಾವನು ಭಕ್ತಿಯಿಂದ ಪುರಾಣದ ಪುಸ್ತಕವನ್ನು ಬರೆಯಿಸುವನೋ ಅವನು ದೇವಮಾನದ ನೂರುಕೋಟಿ ಯುಗಗಳ ಕಾಲದವರೆಗೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೪೯. ಅನಂತರ ಭೂಲೋಕಕ್ಕೆ ಬಂದು ಶ್ರೀಮಂತನೂ, ಸುಖಾಢ್ಯನೂ, ವೇದ ಪಾರಂಗತನೂ ಆಗುವನು. ಯಾವನು ಸೂರ್ಯದೇವಾಲಯವನ್ನು ಕಟ್ಟಿಸಿಕೊಡುವನೋ ಅವನಿಗೆ ಉತ್ತಮಃಸ್ಥಾನವು ಲಭಿಸುವುದು.

ತತ್ಸೂರ್ಯೋ ಭೋಜಕಃ ಸೋತ್ರ ಭೋಜಕಃ ಸೂರ್ಯ ಏವ ಹಿ ।
ತೇನ ಭೋಜಕವಿಪ್ರೇಷು ದಾನಮಕ್ಷಯ್ಯಮಿತ್ಯಪಿ ॥ ೫೦ ॥

ಯದ್ಯದ್ಯಸ್ಯೋಪಯುಜ್ಯೇತ ದೇಯಂ ತತ್ತಸ್ಯ ಯತ್ನತಃ ।
ಉಪಯೋಗಪರೋ ನಿತ್ಯಂ ಸೂರ್ಯಸ್ತದುಭಯೋರಪಿ ॥ ೫೧ ॥

ವ್ಯಾಖ್ಯಾನೇ ಸೌರಧರ್ಮಸ್ಯ ಕೃತ್ವಾ ಆಮಲಕಂ ಮಹತ್ ।
ಶೋಭಿತಂ ಪುಷ್ಪಪತ್ರಾದ್ಯೈರ್ನ್ಯಸೇತ್ತತ್ರಾಸನೇ ನೃಪ ॥ ೫೨ ॥

ಶೋಭಿತಂ ಮಾಲ್ಯಗಂಧೈಸ್ತು ಸೂರ್ಯಸ್ಯ ಸಾಧನಂ ಮಹತ್ ।
ಪುರಸ್ತಾತ್ತಸ್ಯ ಸಂಸ್ಥಾಪ್ಯ ಆಚಾರ್ಯಂ ಪೂಜಯೇತ್ಸದಾ ॥
ಸೂರ್ಯವತ್ಸೌರಧರ್ಮೇ ಚ ತುಲ್ಯಮೇತದ್ದ್ವಯಂ ವಚಃ ॥ ೫೩ ॥

---

೫೦. ಆದುದರಿಂದ ಸೂರ್ಯನೇ ಭೋಜಕರೂಪನು, ಭೋಜಕನೇ ಸೂರ್ಯಸ್ವರೂಪನು, ಎಂದು ಅಭೇದವಾಗಿ ಭಾವಿಸಬೇಕು. ಆದುದರಿಂದ ಭೋಜಕರಾದ ಬ್ರಾಹ್ಮಣರಿಗೆ ಕೊಟ್ಟದಾನವು ಅಕ್ಷಯವಾಗುವುದು.

೫೧. ದಾನಕೊಡುವಾಗ ಯಾವಯಾವುದು ಯಾರಿಗೆ ಉಪಯೋಗವಾಗುವುದೋ ನೋಡಿಕೊಂಡು, ಅವರಿಗೆ ಅದನ್ನು ಯತ್ನದಿಂದ ಕೊಡಬೇಕು. ಹೀಗೆ ಮಾಡಿದರೆ ಯಾವಾಗಲೂ ಸೂರ್ಯನು ಅವರಿಬ್ಬರಿಗೂ (ಕೊಟ್ಟವನಿಗೂ ತೆಗೆದುಕೊಂಡವನಿಗೂ) ಉಪಯೋಗಪರನಾಗುವನು

೫೨. ಎಲೈ ರಾಜನೇ! ಕೇಳು; ಸೌರಧರ್ಮವನ್ನು ಹೇಳುವಾಗ, ಪುಷ್ಪ ಪತ್ರಾದಿಗಳಿಂದ ಶೋಭಿತವಾದ ಒಂದು ದೊಡ್ಡ ನೆಲ್ಲಿಯ ಕೊನೆಯನ್ನು ಧರ್ಮಶ್ರವಣ ಮಾಡಿಸುವ ಸ್ಥಾನದಲ್ಲಿ ಪೀಠದಮೇಲೆ ಇಡಬೇಕು.

೫೩. ಧರ್ಮಸಾಧನವಾದ ಮಂಡಲವನ್ನು ಗಂಧಪುಷ್ಪಾದಿಗಳಿಂದ ಅಲಂಕರಿಸಿ ಆಚಾರ್ಯ ಸಮ್ಮುಖದಲ್ಲಿ ತಂದಿರಿಸಿ ಆಚಾರ್ಯನನ್ನು ಪೂಜಿಸಬೇಕು. ಸೌರಧರ್ಮದಲ್ಲಿ ಸೂರ್ಯಮಂಡಲವೂ, ಆಚಾರ್ಯನೂ, ಸಹ ಸೂರ್ಯಭಗವಂತನಿಗೆ ಸಮಾನವೆಂದೇ ಹೇಳಿದೆ. ಯಾವನು ಹೀಗೆ ಹಿಂದೆ ಹೇಳಿದ ಕ್ರಮದಿಂದ ಸೌರಧರ್ಮವನ್ನು ಹೇಳುತ್ತಾನೋ, ಮತ್ತು ಕೇಳುತ್ತಾನೋ ಅವನು ಆಯುಸ್ಸು, ವಿದ್ಯೆ, ಯಶಸ್ಸು ಇವುಗಳನ್ನು ಸಮೃದ್ಧಿಯಾಗಿ ಪಡೆದು, ಸೂರ್ಯಭಗವಂತನ ಕೀರ್ತಿಯನ್ನೇ ಜಪಿಸುವನು.

ಯ ಏವಂ ನ್ಯಾಯತೋ ವಕ್ತಿ ಸೌರಧರ್ಮಂ ಶೃಣೋತಿ ಚ ।
ಆಯುರ್ವಿದ್ಯಾಂ ಯಶಃಕೀರ್ತಿಮುಪಲಭ್ಯ ರವೇರ್ಜಪೇತ್ ॥
ವದಂತ್ಯನ್ಯೇ ಪಿಬಂತ್ಯನ್ಯೇ ಸರ್ವೇ ತೇ ಫಲಭಾಗಿನಃ ॥ ೫೪ ॥

ತಸ್ಮಾದೇವಂವಿಧೋ ಧರ್ಮೋ ।
ವಾಚಕೈಶ್ಚ ವಿದುರ್ಬುಧಾಃ ॥
ತಸ್ಯಾಂತೇ ಪೂಜಯೇದ್ಭಕ್ತ್ಯಾ ।
ಯ ಇಚ್ಛೇದ್ವಿಪುಲಂ ಯಶಃ ॥ ೫೫ ॥

ಇತೀ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೌರಧರ್ಮೇ ದ್ವಿಸಪ್ತತ್ಯುತ್ತರ ಶತತಮೋಽಧ್ಯಾಯಃ.



---

೫೪. ಇದನ್ನು ಯಾರು ಹೇಳುವರೋ ಅವರಿಗೂ, ಮತ್ತು ಯಾರು ಕೇಳುತ್ತಾರೆಯೋ ಅವರೆಲ್ಲರಿಗೂ ಈ ಫಲವು ಲಭಿಸುವುದರಲ್ಲಿ ಸಂಶಯವಿಲ್ಲ.

೫೫. ಭೋಜಕಧರ್ಮವು ಈ ಪ್ರಕಾರ ಇದೆ. ಇದನ್ನು ವಿದ್ವಾಂಸರು ವಾಚಕರಿಂದ ತಿಳಿಯಬಹುದು. ಹೆಚ್ಚಾದ ಯಶಸ್ಸನ್ನು ಅಪೇಕ್ಷಿಸುವವನು, ಪುರಾಣಶ್ರವಣದ ಕೊನೆಯಲ್ಲಿ ಭಕ್ತಿಯಿಂದ ವಾಚಕರ ಪೂಜೆಯನ್ನೂ ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸೌರಧರ್ಮವೆಂಬ ನೂರಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

ಪುನರ್ಮೇ ಬ್ರೂಹಿ ವಿಪ್ರೇಂದ್ರ ಸೌರಂ ಧರ್ಮಮನುತ್ತಮಂ ।
ಸಮಾಸಾತ್ಕಥಿತಂ ಬ್ರಹ್ಮನ್ ವಿಸ್ತರೇಣ ಪ್ರಕೀರ್ತಯ ॥ ೧ ॥

॥ ಸುಮಂತುರುವಾಚ ॥

ಸಾಧು ಸಾಧು ಮಹಾಬಾಹೋ ಸಾಧುಪೃಷ್ಟೋಽಸ್ಮಿ ಭಾರತ ।
ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ಸೌರಃ ಪಾರ್ಥಿವಸತ್ತಮ ॥ ೨ ॥

ಕೀರ್ತಯಾಮ್ಯದ್ಯ ತಂ ಪುಣ್ಯಂ ಸಂವಾದಂ ಪಾಪನಾಶನಂ ।
ಗರುಡಾರುಣಯೋ ರಾಜನ್ ಪುರಾವೃತ್ತಂ ನರಾಧಿಪ ॥ ೩ ॥

---

### ನೂರಎಪ್ಪತ್ತಮೂರನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು " ಓ ಬ್ರಾಹ್ಮಣ ಶ್ರೇಷ್ಠನೇ! ಸರ್ವೋತ್ತಮವಾದ ಸೌರಧರ್ಮವನ್ನು ನೀನು ಸಂಕ್ಷೇಪಿಸಿ ಹೇಳಿದುದು ಬಹಳ ಸಂಕ್ಷೇಪವಾಯಿತು. ಇದನ್ನೇ ಪುನಃ ವಿಸ್ತಾರವಾಗಿ ಹೇಳು " ಎಂದನು.

೨. ಆಗ ಸುಮಂತುಮುನಿವರ್ಯರು ಆ ರಾಜನಿಗೆ ಹೇಳುತ್ತಾರೆ—ಎಲೈ ಮಹಾಬಾಹುವಾದ ರಾಜಶ್ರೇಷ್ಠನೇ! ಶಹಬಾಸ್, ನನ್ನನ್ನು ಕೇಳಿದ ವಿಚಾರ ಚೆನ್ನಾಗಿದೆ. ಈ ಲೋಕದಲ್ಲಿ ನಿನ್ನ ಸಮಾನನಾದ ಸೂರ್ಯಭಕ್ತನು ಯಾರು ಇಲ್ಲ.

೩. ಅಯ್ಯಾ ರಾಜನೇ! ಪೂರ್ವದಲ್ಲಿ ಗರುಡನಿಗೂ, ಅರುಣನಿಗೂ ನಡೆದ ಸಂವಾದವು ಪುಣ್ಯಕರವೂ, ಪಾಪನಾಶಕವೂ ಆದುದೆನಿಸಿದೆ. ಅದನ್ನೇ ಈಗ ನಿನಗೆ ಹೇಳುತ್ತೇನೆ.

ಸುಖಾಸೀನಂ ಪುರಾ ರಾಜನ್ನರುಣಂ ಸೂರ್ಯಸಾರಥಿಂ ।
ಉಪಗಮ್ಯ ಮಹಾಬಾಹೋ ಗರುಡೋ ವಾಕ್ಯಮಬ್ರವೀತ್ ॥ ೪ ॥

ಧರ್ಮಾಣಾಮುತ್ತಮಂ ಧರ್ಮಂ ಸರ್ವಪಾಪಪ್ರಣಾಶನಂ ।
ಸೌರಧರ್ಮಂ ಖಗಶ್ರೇಷ್ಠ ಬ್ರೂಹಿ ಮೇ ಕೃತ್ಸ್ನಶೋಽನಘ ॥ ೫ ॥

॥ ಅರುಣ ಉವಾಚ ॥

ಸಾಧು ವತ್ಸ ಮಹಾತ್ಮಾಸಿ ಧನ್ಯಸ್ತ್ವಂ ಪಾಪವರ್ಜಿತಃ ।
ಶ್ರೋತುಕಾಮೋಽಸಿ ಯತ್ಪುತ್ರ ಸೌರಧರ್ಮಮನುತ್ತಮಂ ॥ ೬ ॥

ಶೃಣು ತ್ವಂ ಕೀರ್ತಯಾಮ್ಯೇಷ ಸುಖೋಪಾಯಂ ಮಹತ್ಫಲಂ ।
ಪರಮಂ ಸರ್ವಧರ್ಮಾಣಾಂ ಸೌರಧರ್ಮಮನುತ್ತಮಂ ॥ ೭ ॥

ಅಜ್ಞಾನಾರ್ಣವಮಗ್ನಾನಾಂ ಸರ್ವೇಷಾಂ ಪ್ರಾಣಿನಾಮಯಂ ।
ಸೌರಧರ್ಮೋ ಹ್ಯಯಂ ಶ್ರೀಮಾನ್ ಪರತೀರಪ್ರದೋ ಯತಃ ॥ ೮ ॥

---

೪. ಅಯ್ಯಾ ಮಹಾಬಾಹುವಾದ ರಾಜನೇ! ಕೇಳು; ಪೂರ್ವದಲ್ಲಿ ಒಂದು ದಿನ ಸೂರ್ಯಸಾರಥಿಯಾದ ಅರುಣನು ಸುಖವಾಗಿ ಕೂತಿದ್ದಾಗ ಗರುಡನು ಅವನ ಸಮೀಪಕ್ಕೆ ಬಂದನು.

೫. ಅನಂತರ ಅವನನ್ನು ಕುರಿತು "ಎಲೈ ನಿರ್ದೋಷಿಯೇ! ಸರ್ವಪಾಪ ನಾಶಕವೂ, ಧರ್ಮಗಳಲ್ಲಿ ಉತ್ತಮವೂ ಆದ ಸೌರಧರ್ಮವನ್ನು ನನಗೆ ಸಮಗ್ರವಾಗಿ ಹೇಳು" ಎಂದನು.

೬. ಆಗ ಅರುಣನು ಗರುಡನನ್ನು ಕುರಿತು "ಅಯ್ಯಾ ವತ್ಸಾ! ಒಳ್ಳೆಯದು. ಇಷ್ಟುಮಟ್ಟಿಗೆ ಇದನ್ನು ಕೇಳಬೇಕೆಂಬ ಅಪೇಕ್ಷೆಯುಳ್ಳವನಾದುದರಿಂದ ನೀನೇ ಧನ್ಯನು ಮಹಾತ್ಮನೂ. ಪಾಪರಹಿತನೂ, ಆಗಿರುವೆ.

೭. ಸುಖಕ್ಕೆ ಕಾರಣವೂ, ಮಹಾಫಲದಾಯಕವೂ, ಸರ್ವಧರ್ಮಗಳಲ್ಲಿ ಶ್ರೇಷ್ಠವೂ, ಸರ್ವೋತ್ತಮವೂ ಆದ ಸೌರಧರ್ಮವನ್ನು ನಾನು ಹೇಳುತ್ತೇನೆ ಕೇಳು.

೮. ಅಜ್ಞಾನ ಸಮುದ್ರದಲ್ಲಿ ಮುಳುಗಿರುವ ಸರ್ವಪ್ರಾಣಿಗಳನ್ನೂ ಪಾರುಗಾಣಿಸಬಲ್ಲುದಾದುದರಿಂದ ಈ ಸೌರಧರ್ಮವು ಬಹು ಶ್ರೇಷ್ಠವಾದುದು.

ಯೇ ಸ್ಮರಂತಿ ರವಿಂ ಭಕ್ತ್ಯಾ ಕೀರ್ತಯಂತಿ ಚ ಯೇ ಖಗ ।
ಪೂಜಯಂತಿ ಚ ಯೇ ನಿತ್ಯಂ ತೇ ಯಾಸ್ಯಂತಿ ಪರಂ ಪದಂ ॥ ೯ ॥

ಆತ್ಮದ್ರೋಹಃ ಕೃತಸ್ತೇನ ಜಾತೇನೇಹ ಖಗಾಧಿಪ ।
ನಾರ್ಚಿತೋ ಯೇನ ದೇವೇಶಃ ಸಹಸ್ರಕಿರಣೋ ರವಿಃ ॥ ೧೦ ॥

ಸುಚಿರಂ ಸಂಭ್ರಮತ್ಯಸ್ಮಿನ್ ದುಃಖದೇ ಚ ಭವಾರ್ಣವೇ ।
ಜರಾರೂಪ ಮಹಾಗ್ರಾಹೇ ತೃಷ್ಣಾಪಾರಾಕುಲೇಽಪರೇ ॥ ೧೧ ॥

ಮಾನುಷ್ಯಂ ದುರ್ಲಭಂ ಪ್ರಾಪ್ಯ ಯೇಽರ್ಚಯಂತಿ ದಿವಾಕರಂ ।
ತೇಷಾಂ ಹಿ ಸಫಲಂ ಜನ್ಮ ಕೃತಾರ್ಥಾಸ್ತೇ ನರೋತ್ತಮಾಃ ॥ ೧೨ ॥

ಸೂರ್ಯಭಕ್ತಿಪರಾ ಲೋಕಾಃ ಯೇ ಚ ತದ್ಗತಮಾನಸಾಃ ।
ಯೇ ಸ್ಮರಂತಿ ಸದಾ ಸೂರ್ಯಂ ನ ತೇ ದುಃಖಸ್ಯ ಭಾಗಿನಃ ॥ ೧೩ ॥

---

೯. ಯಾರು ಸೂರ್ಯನನ್ನು ಭಕ್ತಿಯಿಂದ ಸ್ಮರಿಸುವರೋ, ಮತ್ತು ಯಾರು ಕೀರ್ತನಮಾಡುವರೋ, ಯಾರು ಪೂಜಿಸುವರೋ ಅವರೇ ಪರಮಪದವನ್ನು ಹೊಂದುವರು.

೧೦. ಎಲೈ ಖಗಶ್ರೇಷ್ಠನೇ! ಕೇಳು; ದೇವೇಶನೂ, ಸಹಸ್ರಕಿರಣನೂ ಆದ ಸೂರ್ಯನನ್ನು ಪೂಜಿಸದೆ ಇರುವ ಜೀವಿಯು ತನಗೇ ತಾನು ದ್ರೋಹಮಾಡಿಕೊಂಡಂತೆಯೇ ಆಗುವುದು.

೧೧. ಹಾಗೆ ಸೂರ್ಯನನ್ನು ಪೂಜಿಸದೆ ಇರುವವನು, ದುಃಖಪ್ರದವಾದುದೂ, ಮುಪ್ಪೆಂಬ ದೊಡ್ಡ ಮೊಸಳೆಯಿಂದ ಕೂಡಿದುದೂ, ತೃಷ್ಣೆಯೆಂಬ ಪರತೀರ (ಆಚೆ ದಡ) ವುಳ್ಳುದೂ, ಮತ್ತು ನೀಚವಾದುದೂ ಆದ, ಸಂಸಾರಸಮುದ್ರದಲ್ಲಿ ಬಹುಕಾಲ ತೊಳಲುವನು.

೧೨. ದುರ್ಲಭವಾದ ಮನುಷ್ಯಜನ್ಮವನ್ನು ಹೊಂದಿರುವಾಗ, ಸೂರ್ಯಪೂಜೆಯನ್ನು ಆಚರಿಸುವವರ ಜನ್ಮವೇ ಸಫಲ. ಆ ನರಶ್ರೇಷ್ಠರೇ ಕೃತಾರ್ಥರು.

೧೩. ಸೂರ್ಯಭಕ್ತಿಯಲ್ಲಿ ಆಸಕ್ತರಾದವರೂ, ಸೂರ್ಯನಲ್ಲಿಯೇ ಮನಸ್ಸನ್ನಿಟ್ಟಿರುವವರೂ, ಸದಾ ಸೂರ್ಯನನ್ನು ಸ್ಮರಿಸುವವರೂ, ಸಹ ಎಂದೂ ದುಃಖಭಾಗಿಗಳಾಗುವುದಿಲ್ಲ.

ವಿವಿಧಾನಿ ಮನೋಜ್ಞಾನಿ ವಿವಿಧಾಭರಣಾನಿ ಚ ।
ಧನಂ ವಾ ದೃಷ್ಟಪರ್ಯಂತಂ ಸೂರ್ಯಪೂಜಾವಿಧೇಃ ಫಲಂ ॥ ೧೪ ॥

ಯೇ ವಾಂಛಂತಿ ಮಹಾಭೋಗಾನ್ ರಾಜ್ಯಂ ವಾ ತ್ರಿದಶಾಲಯೇ ।
ಸೌಭಾಗ್ಯಂ ಕಾಂತಿಮತುಲಾಂ ಭೋಗಂ ತ್ಯಾಗಂ ಯಶಃ ಶ್ರಿಯಂ ॥ ೧೫ ॥

ಸೌಂದರ್ಯಂ ಜಗತಿ ಖ್ಯಾತಿಃ ಕೀರ್ತಿರ್ಧರ್ಮಾದಯಃ ಸ್ಮೃತಾಃ ।
ಫಲಾನ್ಯೇತಾನಿ ವೈ ಪುತ್ರ ಸೂರ್ಯಭಕ್ತಿವಿಧೇರ್ಬುಧ ॥ ೧೬ ॥

ತಸ್ಮಾತ್ಸಂಪೂಜಯೇತ್ಸೂರ್ಯಂ ಸರ್ವದೇವಗಣಾರ್ಚಿತಂ ।
ದುರ್ಲಭಾ ಭಾಸ್ಕರೇ ಭಕ್ತಿರ್ದುರ್ಲಭಂ ಚ ತದರ್ಚನಂ ॥ ೧೭ ॥

ದಾನಂ ಚ ದುರ್ಲಭಂ ತಸ್ಮೈ ತದ್ಧೋಮಶ್ಚ ಸುದುರ್ಲಭಃ ।
ದುರ್ಲಭಂ ತಸ್ಯ ವಿಜ್ಞಾನಂ ತದಭ್ಯಾಸೋಽಪಿ ದುರ್ಲಭಃ ॥ ೧೮ ॥

---

೧೪. ನಾನಾವಿಧವಾದ ವಸ್ತ್ರಗಳು, ನಾನಾಬಗೆಯ ಆಭರಣಗಳು, ದೃಷ್ಟಿ ಪ್ರಸರವಾಗುವವರೆಗೂ ರಾಶಿಯಾಗಿ ಕಾಣುವ ದ್ರವ್ಯ, ಇವೆಲ್ಲಾ ಕೆಲಕೆಲವರಿಗೆ ಲಭಿಸಿರುವುದು, ಅವರು ಸೂರ್ಯಪೂಜೆಯನ್ನು ಮಾಡಿದುದರ ಫಲವಾಗಿದೆ.

೧೫. ಮಹಾಭೋಗಗಳನ್ನೂ, ಸ್ವರ್ಗಲೋಕದಲ್ಲಿ ರಾಜ್ಯವನ್ನೂ, ಸೌಭಾಗ್ಯವನ್ನೂ, ಅತುಲವಾದ ಕಾಂತಿಯನ್ನೂ, ಭೋಗ, ತ್ಯಾಗ, ಯಶಸ್ಸು, ಸಂಪತ್ತು ಇವುಗಳನ್ನೂ ಹೊಂದೋಣವೂ.

೧೬-೧೭. ಲೋಕದಲ್ಲಿ ಸೌಂದರ್ಯಯುಕ್ತತೆ, ಜಗತ್ಪ್ರಸಿದ್ಧಿ, ಕೀರ್ತಿ, ಲಾಭ, ಇವೆಲ್ಲವೂ ವಿಧಿಪ್ರಕಾರ ಸೂರ್ಯನಲ್ಲಿ ಭಕ್ತಿಮಾಡಿದುದರ ಫಲಗಳು ಎನಿಸುವುವು. ಅಯ್ಯಾ ಬುದ್ಧಿಶಾಲಿ ವತ್ಸಾ! ಆದುದರಿಂದ ಸಮಸ್ತ ದೇವತಾಸಮೂಹಗಳಿಗೆ ಪೂಜ್ಯನಾದ ಸೂರ್ಯನನ್ನು ನಾವೂ ಪೂಜಿಸಬೇಕು.

೧೮. ಸಾಮಾನ್ಯವಾಗಿ ಸೂರ್ಯಭಕ್ತಿ ಹುಟ್ಟುವುದೇ ಅಪೂರ್ವ. ಭಕ್ತಿ ಹುಟ್ಟಿದರೂ, ಅರ್ಚನಾದಿ ಕಾರ್ಯಗಳನ್ನು ಸಾಂಗವಾಗಿ ಮಾಡುವುದು ಇನ್ನೂ ದುರ್ಲಭ. ಸೂರ್ಯಪ್ರೀತಿಗಾಗಿ ದಾನಮಾಡುವುದೂ ದುರ್ಲಭವೇ. ಅವನ ತೃಪ್ತ್ಯರ್ಥವಾಗಿ ಹೋಮಾದಿಗಳನ್ನು ಮಾಡುವುದೂ ದುರ್ಲಭ, ಅವನ ಸಂಬಂಧವಾದ ವಿಶೇಷ ಜ್ಞಾನ ಪ್ರಾಪ್ತಿಯಂತೂ ಇನ್ನೂ ದುರ್ಲಭ, ಅದನ್ನು ಅಭ್ಯಾಸಮಾಡುವುದೂ ಕೂಡ ಕಷ್ಟ.

ಸುದುರ್ಲಭತರಂ ಜ್ಞೇಯಂ ತದಾರಾಧನಮುತ್ತಮಂ ।
ಲಾಭಸ್ತೇಷಾಂ ಮನುಷ್ಯಾಣಾಂ ಯೇ ರವಿಂ ಶರಣಂ ಗತಾಃ ॥ ೧೯ ॥

ಯೇಷಾಮಿಹೇಶ್ವರೇ ಭಾನೌ ನಿತ್ಯಂ ಸೂರ್ಯಗತಂ ಮನಃ ।
ನಮಸ್ಕಾರಾದಿಸಂಯುಕ್ತಂ ರವಿರಿತ್ಯಕ್ಷರದ್ವಯಂ ॥ ೨೦ ॥

ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಂ ।
ಯ ಏವಂ ಪೂಜಯೇದ್ಭಾನುಂ ಶ್ರದ್ಧಯಾ ಪರಯಾನ್ವಿತಃ ॥ ೨೧ ॥

ಮುಚ್ಯತೇ ಸರ್ವಪಾಪೇಭ್ಯಃ ಸ ನರೋ ನಾತ್ರ ಸಂಶಯಃ ।
ಡಾಕಿನ್ಯೋ ವಿವಿಧಾಕಾರಾ ರಾಕ್ಷಸಾಃ ಸಪಿಶಾಚಕಾಃ ॥
ನ ತಸ್ಯ ಪೀಡಾಂ ಕುರ್ವಂತಿ ತಥಾನ್ಯಾಶ್ಚಾತಿಭೀಷಣಾಃ ॥ ೨೨ ॥

---

೧೯. ಉತ್ತಮವಾದ ಕ್ರಮದಲ್ಲಿ ಅವನ ಆರಾಧನೆಯನ್ನು ಮಾಡುವುದಂತೂ ಬಹುದುರ್ಲಭ. ಸೂರ್ಯನನ್ನು ನೀನೇ ಗತಿಯೆಂದು ನಂಬಿ ಮರೆಹೊಗುವವರಿಗೆ ಪರಮಲಾಭವಿದೆ.

೨೦–೨೧. ಸಮಸ್ತಕ್ಕೂ ಈಶನೂ. ಲೋಕಪ್ರಕಾಶಕನೂ ಆದ ಸೂರ್ಯನ ವಿಚಾರದಲ್ಲಿ ಯಾವ ಮನುಷ್ಯರ ಮನಸ್ಸು ಸರ್ವದಾ ಪ್ರವರ್ತಿಸುವುದೋ, ಮತ್ತು ನಮಸ್ಕಾರಾರ್ಥವಾದ 'ನಮಃ' ಎಂಬುದರಿಂದ ಯುಕ್ತವಾದ ರವಿ ಎಂಬ ಎರಡು ಅಕ್ಷರವು ಯಾವನ ನಾಲಿಗೆಯ ತುದಿಯಲ್ಲಿ ಸದಾ ಇರುವುದೋ ಅವನ ಜೀವಿತವು ಸಾರ್ಥಕ. ಉತ್ಕೃಷ್ಟವಾದ ಶ್ರದ್ಧೆಯಿಂದ ಹೀಗೆ ಸೂರ್ಯನನ್ನು ಪೂಜಿಸುವವನು, ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುವನು. ಇದರಲ್ಲಿ ಸಂಶಯವಿಲ್ಲ.

೨೨. ನಾನಾಬಗೆಯ ಘೋರರೂಪವುಳ್ಳ ಡಾಕಿನಿಯರು, ರಾಕ್ಷಸರು, ಪಿಶಾಚರು, ಮತ್ತು ಭಯಂಕರಗಳಾದ ಇತರ ವ್ಯಕ್ತಿಗಳು ಇವ್ಯಾವವೂ ಆ ಸೂರ್ಯಭಕ್ತನಿಗೆ ತೊಂದರೆಮಾಡಲಾರವು.

**ಶತ್ರವೋ ನಾಶಮಾಯಾಂತಿ ಸಂಗ್ರಾಮೇ ಜಯಮಾಪ್ನುಯಾತ್ ।**
**ನ ರೋಗೈಃ ಪೀಡ್ಯತೇ ವೀರ ಆಪದೋ ನ ಸ್ಪೃಶಂತಿ ತಂ ॥ ೨೩ ॥**

**ಧನಮಾಯುರ್ಯಶೋ ವಿದ್ಯಾಪ್ರಭಾವೋ ಹ್ಯತುಲಸ್ತಥಾ ।**
**ಶುಭಾನ್ಯುಪಚಯಂ ಯಾಂತಿ ನಿತ್ಯಂ ಪೂರ್ಣಮನೋರಥಾಃ ॥ ೨೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಗರುಡಾರುಣ ಸಂವಾದೇ ಸೌರಧರ್ಮ ವರ್ಣನಂ ನಾಮ ತ್ರಿಸಪ್ತತ್ಯುತ್ತರ ಶತತಮೋऽಧ್ಯಾಯಃ.**



---

೨೩. ಆ ಸೂರ್ಯಭಕ್ತನ ಶತ್ರುಗಳಾದವರು ತಾವೇ ಧ್ವಂಸರಾಗುತ್ತಾರೆ. ಆ ಭಕ್ತನು ಯುದ್ಧಗಳಲ್ಲಿ ಜಯಹೊಂದುತ್ತಾನೆ. ಅಯ್ಯಾ ವೀರನೇ! ಕೇಳು, ಆ ಸೂರ್ಯ ಭಕ್ತನು ಎಂದೂ ರೋಗಪೀಡಿತನಾಗುವುದಿಲ್ಲ. ಯಾವ ಆಪತ್ತುಗಳೂ ಅವನನ್ನು ಸೋಕಲಾರವು.

೨೪. ಸೂರ್ಯಭಕ್ತನಿಗೆ ಧನ, ಆಯಸ್ಸು, ಯಶಸ್ಸು, ವಿದ್ಯಾ ಇವೂ; ಅತುಲವಾದ ಪ್ರಭಾವ, ಶುಭಗಳು, ಎಲ್ಲವೂ ವೃದ್ಧಿಹೊಂದುತ್ತವೆ. ಹೀಗೆ ಸೂರ್ಯಭಕ್ತರು ನಿತ್ಯವೂ ಪೂರ್ಣಮನೋರಥರಾಗುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಗರುಡಾರುಣ ಸಂವಾದದಲ್ಲಿ ಸೌರಧರ್ಮ ವರ್ಣನವೆಂಬ ನೂರಎಪ್ಪತ್ತ ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

॥ ಅರುಣ ಉವಾಚ ॥

ಪೂಜಯಿತ್ವಾ ರವಿಂ ಭಕ್ತ್ಯಾ ಬ್ರಹ್ಮಾ ಬ್ರಹ್ಮತ್ವಮಾಗತಃ ।
ವಿಷ್ಣುತ್ವಂ ಚಾಪಿ ದೇವೇಶೋ ವಿಷ್ಣುರಾಪ ತದರ್ಚನಾತ್ ॥ ೧ ॥

ಶಂಕರೋಽಪಿ ಜಗನ್ನಾಥಃ ಪೂಜಯಿತ್ವಾ ದಿವಾಕರಂ ।
ಮಹಾದೇವತ್ವಮಗಮತ್ತತ್ಪ್ರಸಾದಾತ್ಖಗಾಧಿಪ ॥ ೨ ॥

ಸಹಸ್ರಾಕ್ಷೋಽಪಿ ದೇವೇಶ ಇಂದ್ರೋ ಭಾನುಂ ತಮೋಪಹಂ ।
ಇಂದ್ರತ್ವಮಗಮದ್ದೇವಂ ಪೂಜಯಿತ್ವಾ ದಿವಾಕರಂ ॥ ೩ ॥

---

## ನೂರಎಪ್ಪತ್ತನಾಲ್ಕನೆಯ ಅಧ್ಯಾಯ

೧. ಅರುಣನು ಗರುಡನನ್ನು ಕುರಿತು ಮುಂದುವರಿಸಿ ಹೇಳುತ್ತಾನೆ ಬ್ರಹ್ಮನು ಬ್ರಹ್ಮನೆನಿಸಿದುದು (ಸೃಷ್ಟಿಕರ್ತನೆನಿಸಿದುದು) ಸೂರ್ಯಪೂಜಾ ಪ್ರಭಾವದಿಂದಲೇ. ದೇವೇಶನಾದ ವಿಷ್ಣುವೂ ಕೂಡ ಆ ಸೂರ್ಯನನ್ನು ಅರ್ಚನೆಮಾಡಿದುದರಿಂದಲೇ ವಿಷ್ಣುತ್ವವನ್ನು ಹೊಂದಿದನು.

೨. ಅಯ್ಯಾ ಖಗಶ್ರೇಷ್ಠನೇ! ಕೇಳು, ಜಗನ್ನಾಥನಾದ ಶಂಕರನೂ ಕೂಡ ಅವನನ್ನು ಪೂಜಿಸಿ ಅವನ ಅನುಗ್ರಹದಿಂದಲೇ ಮಹಾದೇವನೆನಿಸಿದನು.

೩. ಸಹಸ್ರಾಕ್ಷನೂ, ದೇವತೆಗಳ ಒಡೆಯನೂ ಆದ ಇಂದ್ರನೂ ಕೂಡ, ಅಂಧಕಾರವಿನಾಶಕನಾದ ಸೂರ್ಯದೇವನನ್ನು ಪೂಜಿಸಿಯೇ ಇಂದ್ರತ್ವವನ್ನು ಪಡೆದನು.

ಮಾತರೋ ದೇವಗಂಧರ್ವಾಃ ಪಿಶಾಚೋರಗರಾಕ್ಷಸಾಃ ।
ಪೂಜಯಂತಿ ಸದಾ ಭಾನುಮೀಶಾನಂ ಸುರನಾಯಕಂ ॥ ೪ ॥

ಸರ್ವಮೇತಜ್ಜಗನ್ನಿತ್ಯಂ ಭಾನೌ ದೇವೇ ಪ್ರತಿಷ್ಠಿತಂ ।
ತಸ್ಮಾತ್ಸಂಪೂಜಯೇದ್ಭಾನುಂ ಯ ಇಚ್ಛೇತ್ಸ್ವರ್ಗಮಕ್ಷಯಂ ॥ ೫ ॥

ಯೋ ನ ಪೂಜಯತೇ ಸೂರ್ಯಂ ಭಾಸ್ಕರಂ ತಮಸೂದನಂ ।
ಧರ್ಮಾರ್ಥಕಾಮಮೋಕ್ಷಾಣಾಂ ನ ನರೋ ಭಾಜನಂ ಭವೇತ್ ॥ ೬ ॥

ತಸ್ಮಾತ್ಕಾರ್ಯಂ ಹಿ ತದ್ಧ್ಯಾನಂ ಯಾವಜ್ಜೀವಂ ಪ್ರತಿಜ್ಞಯಾ ।
ಅರ್ಚಯೇತ ಸದಾ ಭಾನುಮಾಪನ್ನೋಽಪಿ ಸದಾ ಖಗ ॥ ೭ ॥

ಯಸ್ತು ಸಂತಿಷ್ಠತೇ ನಿತ್ಯಂ ವಿನಾ ಸೂರ್ಯಸ್ಯ ಪೂಜನಾತ್ ।
ವರಂ ಪ್ರಾಣಪರಿತ್ಯಾಗಃ ಶಿರಸೋ ವಾಥ ಕೃಂತನಂ ॥ ೮ ॥

---

೪. ಸಪ್ತಮಾತೃಗಳು, ದೇವತೆಗಳು, ಗಂಧರ್ವರು, ಪಿಶಾಚರು, ನಾಗರು, ರಾಕ್ಷಸರು, ಇವರೆಲ್ಲರೂ ಕೂಡ, ಈಶನೂ, ಸುರಶ್ರೇಷ್ಠನೂ, ಆದ ಸೂರ್ಯನನ್ನು ಸರ್ವದಾ ಪೂಜಿಸುತ್ತಾರೆ.

೫. ಈ ಜಗತ್ತೆಲ್ಲವೂ ನಿತ್ಯವೂ ಸೂರ್ಯದೇವನಿಂದ ಪ್ರತಿಷ್ಠಿತವಾಗಿದೆ. ಅಕ್ಷಯವಾದ ಸ್ವರ್ಗವನ್ನು ಅಪೇಕ್ಷಿಸುವ ಮನುಷ್ಯನು ಈ ಕಾರಣದಿಂದ ಸೂರ್ಯನನ್ನು ಚೆನ್ನಾಗಿ ಪೂಜಿಸಬೇಕು.

೬. ಅಂಧಕಾರವಿನಾಶಕನಾದ ಸೂರ್ಯನನ್ನು ಪೂಜಿಸದೆ ಇರುವ ಮನುಷ್ಯನು, ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವುದಕ್ಕೆ ಅರ್ಹನಾಗುವುದಿಲ್ಲ.

೭. ಆದುದರಿಂದ ಮನುಷ್ಯನು ನಾನು ಬದುಕಿರುವವರೆಗೂ ಸೂರ್ಯಧ್ಯಾನ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿಕೊಂಡು ಆ ರೀತಿ ಮಾಡಬೇಕು. ಅಯ್ಯಾ ಖಗನೇ ! ಆಪದ್ಗ್ರಸ್ತನಾಗಿದ್ದರೂ ಸದಾ ಸೂರ್ಯನನ್ನು ಪೂಜಿಸಬೇಕು.

೮. ನಿತ್ಯವೂ ಸೂರ್ಯನನ್ನು ಪೂಜಿಸದೆ ಇರುವವನು ಲೋಕದಲ್ಲಿ ವೃಥಾ ಜೀವಿಸಿರುವುದಕ್ಕಿಂತ ಪ್ರಾಣತ್ಯಾಗ ಮಾಡುವುದು ಮೇಲು. ತನ್ನ ತಲೆಯನ್ನು ತಾನೇ ಕತ್ತರಿಸಿಕೊಳ್ಳುವುದಾದರೂ ಉತ್ತಮ.

ಸೂರ್ಯಂ ಸಂಪೂಜ್ಯ ಭುಂಜೀತ ತ್ರಿದಶೇಶಂ ದಿವಾಕರಂ ।
ಇತ್ಥಂ ನಿರ್ವಹತೇ ಯಸ್ಯ ಯಾವಜ್ಜೀವಂ ತದರ್ಚನಂ ॥
ಮನುಷ್ಯಚರ್ಮಣಾ ನದ್ಧಃ ಸ ರವಿರ್ನಾತ್ರ ಸಂಶಯಃ ॥ ೯ ॥

ನ ಹಿ ಸೂರ್ಯಾರ್ಚನಾದನ್ಯತ್ಪುಣ್ಯಮಪ್ಯಧಿಕಂ ಭವೇತ್ ।
ಇತಿ ವಿಜ್ಞಾಯ ಯತ್ನೇನ ಪೂಜಯಸ್ವ ದಿವಾಕರಂ ॥ ೧೦ ॥

ಸೂರ್ಯಭಕ್ತಿಯುತಾಶ್ಚೈವ ಸೂರ್ಯಾರ್ಚನಪರಾಯಣಾಃ ।
ಸಂಯತಾ ಧರ್ಮಸಂಪನ್ನಾ ಧರ್ಮಾದೀನ್ ಸಾಧಯಂತಿ ತೇ ॥ ೧೧ ॥

ಸರ್ವದ್ವಂದ್ವಸಹಾ ವೀರಾ ನೀತಿವಿಧ್ಯುಕ್ತಚೇತಸಃ ।
ಪರೋಪಕಾರನಿರತಾ ಗುರುಶುಶ್ರೂಷಣೇ ರತಾಃ ॥ ೧೨ ॥

---

೯. ದೇವೇಶನೂ, ದಿವಾಕರನೂ ಆದ ಸೂರ್ಯನನ್ನು ಪೂಜಿಸಿಯೇ ಭೋಜನ ಮಾಡಬೇಕು. ತಾನು ಬದುಕಿರುವವರೆಗೂ (ತನ್ನ ಜೀವಮಾನದಲ್ಲೆಲ್ಲಾ) ಹೀಗೆ ಸೂರ್ಯಪೂಜೆಯನ್ನು ತಪ್ಪದೆ ನಡೆಸುವಾತನು ಮನುಷ್ಯ ಚರ್ಮದಿಂದ ಹೊದ್ದಿಸಲ್ಪಟ್ಟ ಪ್ರತ್ಯಕ್ಷಸೂರ್ಯನೇ ಎಂಬುದರಲ್ಲಿ ಸಂಶಯವಿಲ್ಲ.

೧೦. ಸೂರ್ಯಪೂಜೆಗಿಂತ ಹೆಚ್ಚಿನ ಪುಣ್ಯಕಾರ್ಯ ಯಾವುದೂ ಇಲ್ಲ ಎಂದು ಖಂಡಿತವಾಗಿ ತಿಳಿದುಕೊಂಡು, ಪ್ರಯತ್ನಪಟ್ಟಾದರೂ ಸೂರ್ಯನನ್ನು ಪೂಜಿಸಬೇಕು.

೧೧ ಸೂರ್ಯಭಕ್ತಿಯಿಂದ ಕೂಡಿದವರೂ, ಸೂರ್ಯಪೂಜೆಯಲ್ಲಿ ಆಸಕ್ತರಾದವರೂ, ನಿಯಮವುಳ್ಳವರೂ, ಕರ್ತವ್ಯಧರ್ಮದಲ್ಲಿ ಆಸಕ್ತರೂ, ಆದ ಜನರು ಧರ್ಮ ಮುಂತಾದುವನ್ನು ಸಾಧಿಸುತ್ತಾರೆ.

೧೨. ಈ ಭಕ್ತರು ಸಮಸ್ತವಾದ ದ್ವಂದ್ವದುಃಖಗಳನ್ನೂ ಸಹಿಸುವ ವೀರರೂ, ನೀತಿ ಶಾಸ್ತ್ರದಲ್ಲಿ ಹೇಳಿರುವ ನಿಯಮವನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡವರೂ ಪರೋಪಕಾರದಲ್ಲಿ ನಿರತರೂ, ಗುರುಸೇವೆಯಲ್ಲಿ ಆಸಕ್ತರೂ ಆಗಿರಬೇಕು.

ಅಮಾನಿನೋ ಬುದ್ಧಿಮಂತೋಽವ್ಯಕ್ತಸ್ಪರ್ಧಾ ಗತಸ್ಪೃಹಾಃ ।
ಶಾಂತಾ ಸ್ವಾಂತಗತಾ ಭದ್ರಾ ನಿತ್ಯಂ ಸ್ವಾಗತವಾದಿನಃ ॥ ೧೩ ॥

ಸ್ವಲ್ಪವಾಚಃ ಸುಮನಸಃ ಶೂರಾಃ ಶಾಸ್ತ್ರವಿಶಾರದಾಃ ।
ಶೌಚಾಚಾರಸುಸಂಪನ್ನಾ ದಯಾದಾಕ್ಷಿಣ್ಯಗೋಚರಾಃ ॥ ೧೪ ॥

ದಂಭಮತ್ಸರನಿರ್ಮುಕ್ತಾಸ್ತೃಷ್ಣಾಲೋಭವಿವರ್ಜಿತಾಃ ।
ಸಂವಿಭಾಗಪರಾಃ ಪ್ರೋಕ್ತಾ ನ ಶಠಾಶ್ಚಾಪಿ ಕುತ್ಸಿತಾಃ ॥ ೧೫ ॥

ವಿಷಯೇಷ್ವಪಿ ನಿರ್ಲೇಪಾಃ ಪದ್ಮಪತ್ರಮಿವಾಂಭಸಾ ।
ನ ದೀನಾ ಮಾನಿನಶ್ಚೈವ ನ ಚ ರೋಗವಶಾನುಗಾಃ ॥ ೧೬ ॥

---

೧೩. ಇವರು ಗರ್ವಪಡದೆ ಬುದ್ಧಿವಂತರೆನಿಸಿಕೊಂಡು, ಅವ್ಯಕ್ತವಾದ ಸ್ಪರ್ಧೆಯುಳ್ಳವರಾಗಿರಬೇಕು. ಸ್ಪೃಹೆಯನ್ನು ಪರಿತ್ಯಾಗಮಾಡಿ ಶಾಂತರಾಗಿ, ತನ್ನ ಸಂಕಟ ತೊಂದರೆ ಮುಂತಾದುವುಗಳನ್ನು ಬಹಿಃಪ್ರಕಾಶ ಪಡಿಸದೆ, ತಮ್ಮ ಬಳಿಗೆ ಬಂದವರಿಗೆ ಯಾವಾಗಲೂ ಸುಖಾಗಮನವನ್ನು ಹೇಳತಕ್ಕವರಾಗಿ ಇರಬೇಕು.

೧೪. ಇವರು ಮಿತಭಾಷಿಗಳೂ, ಒಳ್ಳೆಯ ಮನಸ್ಸುಳ್ಳವರೂ, ಶೂರರೂ, ಶಾಸ್ತ್ರವಿಶಾರದರೂ, ಶುಚಿತ್ವ ಒಳ್ಳೆಯ ನಡವಳಿಕೆ ಇವನ್ನು ಚೆನ್ನಾಗಿ ಅನುಸರಿಸುವವರೂ, ದಾಕ್ಷಿಣ್ಯ ಮುಂತಾದುವುಗಳಲ್ಲಿ ಆಸಕ್ತರೂ ಆಗಿರಬೇಕು.

೧೫. ಸಹಜವಾಗಿ ದಂಭ ಮತ್ಸರಗಳಿಲ್ಲದೆ ತೃಷ್ಣೆ, ಲೋಭ ಇವುಗಳನ್ನು ತೊರೆದವರು, ಸಂವಿಭಾಗಪರರು ಎನಿಸುತ್ತಾರೆ. ವಂಚನೆಯಿಂದಲಾಗಲಿ, ನೀಚತನದಿಂದಲಾಗಲಿ, ಕುತ್ಸಿತವಾಗಿಯಾಗಲಿ, ಈ ಗುಣಗಳನ್ನು ತೋರಿಸುವವರು, ಸಂವಿಭಾಗಪರರೆನಿಸುವುದಿಲ್ಲ.

೧೬. ನೀರಿನಲ್ಲೇ ಇದ್ದರೂ ತಾವರೆಎಲೆಗೆ ನೀರು ಅಂಟಿಕೊಳ್ಳದಿರುವಂತೆ ಇವರು ವಿಷಯಸಾನ್ನಿಧ್ಯದಲ್ಲಿದ್ದರೂ, ವಿಷಯಲೇಪವಿಲ್ಲದವರೂ, ದೈನ್ಯತೋರಿಸದವರೂ, ಮಾನಿಗಳೂ, ರೋಗಗಳಿಗೆ ತುತ್ತಾಗದಂತೆ ಆರೋಗ್ಯವನ್ನು ಕಾಪಾಡಿಕೊಳ್ಳುವವರೂ ಆಗಿರಬೇಕು.

ಭವಂತಿ ಭಾವಿತಾತ್ಮಾನಃ ಸುಸ್ನಿಗ್ಧಾಃ ಸಾಧುಸೇವಿತಾಃ ।
ನ ಪಾಣಿಪಾದವಾಕ್ಚಕ್ಷುಃ ಶ್ರೋತ್ರಶಿಶ್ನೋದರೇ ರತಾಃ ॥ ೧೭ ॥

ಚಪಲಾನಿ ನ ಕುರ್ವಂತಿ ಸರ್ವವ್ಯಾಸಂಗವರ್ಜಿತಾಃ ।
ಸೂರ್ಯಾಸನರತಾಃ ಶಾಂತಾಃ ಷಡಕ್ಷರಮನೋಗತಾಃ ॥ ೧೮ ॥

ಇತ್ಯಾಚಾರಸಮಾಯುಕ್ತಾ ಭವಂತಿ ಭುವಿ ಮಾನವಾಃ ।
ಏಕಾಂತಭಕ್ತಿಮಾಸ್ಥಾಯ ಧರ್ಮಕಾಮಾರ್ಥಸಿದ್ಧಯೇ ॥ ೧೯ ॥

ಪೂಜನೀಯೋ ರವಿರ್ನಿತ್ಯಂ ಗುಣೇಷ್ವೇತೇಷು ವರ್ತತೇ ।
ಸರ್ವೇಷಾಮೇವ ಪಾತ್ರಾಣಾಮತಿಪಾತ್ರಂ ದಿವಾಕರಃ ॥
ಪತಂತಂ ತ್ರಾಯತೇ ಯಸ್ಮಾದತೀವ ನರಕಾರ್ಣವಾತ್ ॥ ೨೦ ॥

---

೧೭. ಮತ್ತು ಸುಸಂಸ್ಕೃತವಾದ ಮನಸ್ಸುಳ್ಳವರೂ, ಒಳ್ಳೆಯ ಸ್ನೇಹಪರರೂ ಸಾಧುಗಳಿಂದ ಸೇವಿತರೂ ಆಗಿ; ಪಾಣಿ, ಪಾದ, ವಾಕ್, ಚಕ್ಷು, ಶ್ರೋತ್ರ, ಶಿಶ್ನ, ಉದರ ಇವುಗಳ ವ್ಯಾಪಾರಗಳಲ್ಲಿ ಆಸಕ್ತರಾಗದೆ ಇರಬೇಕು.

೧೮. ಚಪಲಕರ್ಮಗಳಿಗೆ ಕೈಹಾಕದೆ, ಸೂರ್ಯೇತರವಾದ ವ್ಯಾಸಂಗರಹಿತರಾಗಿ ಇರಬೇಕು. ಇಂಥವರು ಸೂರ್ಯಸಾನ್ನಿಧ್ಯದಲ್ಲಿ ವಾಸಿಸಲು ಅರ್ಹರೂ, ಶಾಂತರೂ ಆಗಿ ಷಡಕ್ಷರಮಂತ್ರದಲ್ಲಿ ಮನಸ್ಸನ್ನು ಇಟ್ಟುಕೊಂಡು ಇರುತ್ತಾರೆ.

೧೯. ಭೂಲೋಕದಲ್ಲಿ ಮನುಷ್ಯರು ಉತ್ತಮವಾದ ಭಕ್ತಿಯಿಂದಲೂ, ಈ ಬಗೆಯ ಆಚಾರದಿಂದಲೂ ಕೂಡಿದವರಾಗಿದ್ದರೆ ಅವರಿಗೆ ಧರ್ಮಾರ್ಥಕಾಮಗಳು ಸಿದ್ಧಿಸುತ್ತವೆ.

೨೦. ಈ ಗುಣವುಳ್ಳವರಲ್ಲಿ ಪೂಜ್ಯನಾದ ಸೂರ್ಯನು ಯಾವಾಗಲೂ ನೆಲಸಿ ಇರುತ್ತಾನೆ. ಇವರು ಸೂರ್ಯಪ್ರೀತಿಗೆ ಅತಿಯಾಗಿ ಪಾತ್ರರೆಂದು ಇತರರಿಂದಲೂ ಸಹ ಹೇಳಿಸಿಕೊಳ್ಳುವರು.

ತಸ್ಯ ಪಾತ್ರಾತಿಪಾತ್ರಸ್ಯ ಮಾಹಾತ್ಮ್ಯಂ ದಾನಮಣ್ವಪಿ ।
ಅನೇನ ಫಲಮಾದಿಷ್ಟಮಿಹಲೋಕೇ ಪರತ್ರ ಚ ॥ ೨೧ ॥

ದ್ರವ್ಯೇಣಾಪಿ ಹಿ ಯಃ ಕುರ್ಯಾತ್ ನರಃ ಕರ್ಮ ತದಾಲಯೇ ।
ಸೋsಪಿ ದೇಹಕ್ಷಯೇ ಜ್ಞಾನಂ ಪ್ರಾಪ್ಯ ಶಾಂತಿಮವಾಪ್ನುಯಾತ್ ॥ ೨೨ ॥

ಸರ್ವದ್ವಿಜ ಕದಂಬೇಷು ಕಶ್ಚಿಜ್ಜ್ಞಾನಮವಾಪ್ನುಯಾತ್ ।
ಕಶ್ಚಿದೇತತ್ತ್ವಮೇ ದಿವ್ಯಂ ಲಬ್ಧ್ವಾ ಜ್ಞಾನಂ ವಿಮುಂಚತಿ ॥ ೨೩ ॥

ತಾವದ್ಭ್ರಮಂತಿ ಸಂಸಾರೇ ದುಃಖಶೋಕಪರಿಪ್ಲುತಾಃ ।
ನ ಭವಂತಿ ರವೇರ್ಭಕ್ತಾ ಯಾವತ್ಸರ್ವೇsಪಿ ದೇಹಿನಃ ॥ ೨೪ ॥

ಸೂರ್ಯಸ್ಯಾಲೋಪನಂ ಪುಣ್ಯಂ ದ್ವಿಗುಣಂ ಚಂದನೇನ ತು ।
ಚಂದನಾದಗರೌ ಜ್ಞೇಯಂ ಪುಣ್ಯಮಷ್ಟಗುಣೋತ್ತರಂ ॥ ೨೫ ॥

---

೨೧. ನರಕಸಮುದ್ರದಲ್ಲಿ ಬೀಳುತ್ತಿರುವವನನ್ನು ಸಂಪೂರ್ಣವಾಗಿ ರಕ್ಷಿಸುವ ಕಾರಣದಿಂದ ಸೂರ್ಯನು ಅತಿ ಪಾತ್ರನೆನಿಸುವನು. ಅಂಥ ಪಾತ್ರನೂ, ಅತಿಪಾತ್ರನೂ ಆದವನ ಪ್ರೀತ್ಯರ್ಥವಾಗಿ ಅಣುಮಾತ್ರ ದಾನಮಾಡಿದರೂ, ಮಾಹಾತ್ಮ್ಯವುಳ್ಳುದೆನಿಸುವುದು. ಇಹಲೋಕದಲ್ಲೂ, ಪರಲೋಕದಲ್ಲೂ ಅದರ ಫಲವು ತೋರುತ್ತದೆ.

೨೨. ದ್ರವ್ಯವನ್ನು ತೆಗೆದುಕೊಂಡಾದರೂ ಯಾವ ಮನುಷ್ಯನು ಆ ಆಲಯದಲ್ಲಿ ಕರ್ಮಮಾಡುತ್ತಾನೋ, ಅವನು ದೇಹಾಂತ್ಯದಲ್ಲಿ ಜ್ಞಾನಿಯಾಗಿ ಶಾಂತಿಯನ್ನು ಪಡೆಯುವನು.

೨೩. ಬಹುಮಂದಿ ಬ್ರಾಹ್ಮಣರಲ್ಲಿ ಹುಡುಕಿದರೆ ಇಂತಹ ಜ್ಞಾನಿಯು ಒಬ್ಬನು ದೊರೆತಾನು. ಅಂಥವನು ಅಜ್ಞಾನವನ್ನು ಹೋಗಲಾಡಿಸಿಕೊಂಡು ಸೂರ್ಯಸಂಬಂಧ ದಿವ್ಯಜ್ಞಾನವನ್ನು ಪಡೆಯುವನು.

೨೪. ಸೂರ್ಯಭಕ್ತಿಯನ್ನು ಹೊಂದುವ ಪರ್ಯಂತ ಎಲ್ಲಾ ಪ್ರಾಣಿಗಳೂ ದುಃಖಶೋಕಭರಿತವಾದ ಸಂಸಾರದಲ್ಲಿ ಸುತ್ತುತ್ತಿರುತ್ತವೆ.

೨೫. ಸಾಮಾನ್ಯವಾಗಿ ಸೂರ್ಯನಿಗೆ ಅನುಲೇಪನ ಮಾಡುವುದೇ ಪುಣ್ಯಕರವು. ಚಂದನದಿಂದ ಅನುಲೇಪನಮಾಡಿದರೆ ದ್ವಿಗುಣವಾಗಿ ಫಲವು ಲಭಿಸುವುದು. ಚಂದನಕ್ಕಿಂತ ಅಗುರುವಿನಿಂದ ಲೇಪನಮಾಡುವುದು ಎಂಟುಪಾಲು ಹೆಚ್ಚಾದ ಫಲವುಂಟಾಗುವುದು.

ಕೃಷ್ಣಾಗುರೌ ವಿಶೇಷೇಣ ದ್ವಿಗುಣಂ ಫಲಮಿಷ್ಯತೇ ।
ತಸ್ಮಾಚ್ಛತಗುಣಂ ಪುಣ್ಯಂ ಕುಂಕುಮಸ್ಯ ವಿಧೀಯತೇ ॥ ೨೬ ॥

ಸೂರ್ಯಯಜ್ಞೋಪಕರಣಂ ಕೃತ್ವಾಲ್ಪಂ ಯದಿ ವಾ ಬಹು ।
ಭಾವಾದ್ವಿತ್ತಾನುಸಾರೇಣ ಸೂರ್ಯಲೋಕೇ ಮಹೀಯತೇ ॥ ೨೭ ॥

ಯದಪೀಷ್ಟಮನಿಷ್ಟಂ ಚ ನ್ಯಾಯೇನೋಭಯಮಾಗತಂ ।
ತತ್ಸೂರ್ಯಾಯ ನಿವೇದ್ಯಂ ಸದ್ಭಕ್ತ್ಯಾನಂತಫಲಾರ್ಥಿನಾ ॥ ೨೮ ॥

ಕರ್ಮಶಾಠ್ಯೇನ ಯಃ ಕುರ್ಯಾದ್ದುಃಖೇನಾಪಿ ತದರ್ಚನಂ ।
ಸೋಽಪಿ ದ್ವಿಜೋ ದಿವಂ ಯಾತಿ ಕರ್ಮಣಾ ಪಾಪವರ್ಜಿತಃ ॥ ೨೯ ॥

ಸರ್ವಮನ್ಯತ್ಪರಿತ್ಯಜ್ಯ ಸೂರ್ಯೇ ಚೈಕಮನಾಃ ಸದಾ ।
ಸೂರ್ಯಪೂಜಾವಿಧಿಂ ಕುರ್ಯಾತ್ ಯ ಇಚ್ಛೇಚ್ಛ್ರೇಯ ಆತ್ಮನಃ ॥ ೩೦ ॥

೨೬. ಕೃಷ್ಣಾಗುರುವಿನ ಲೇಪನಮಾಡಿದರೆ, ಅದರ ಎರಡರಷ್ಟು ಫಲವೆಂದು ಹೇಳಿದೆ. ಕುಂಕುಮಕೇಸರಿಯ ಲೇಪನವು ಅದಕ್ಕಿಂತಲೂ ನೂರುಪಾಲು ಹೆಚ್ಚಾದ ಪುಣ್ಯವೆಂದು ತಿಳಿಯಬೇಕು.

೨೭. ತನಗೆ ದ್ರವ್ಯಾನುಕೂಲವಿದ್ದುದರಲ್ಲಿ ಸ್ವಲ್ಪವಾಗಲಿ, ಅಪಾರವಾಗಲಿ ಮನಃಪೂರ್ವಕವಾಗಿ ಸೂರ್ಯಪೂಜೋಪಚಾರವನ್ನು ಮಾಡಿದರೆ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೨೮. ಅನಂತ ಫಲಾರ್ಥಿಯಾದವನು ತನಗೆ ಇಷ್ಟವಾಗಲಿ, ಅನಿಷ್ಟವಾಗಲಿ ಯಾವುದು ಸಂಭವಿಸಿದರೂ ಅವೆರಡನ್ನೂ ಸದ್ಭಕ್ತಿಯಿಂದ ಸೂರ್ಯನಿಗೇ ಸಮರ್ಪಿಸಬೇಕು.

೨೯. ಖೇದಪಟ್ಟುಕೊಂಡಾಗಲಿ, ಅಥವಾ ಕಪಟಯುಕ್ತನಾಗಿಯಾಗಲಿ ಸೂರ್ಯಾರ್ಚನೆಮಾಡಿದರೂ, ಆ ಪೂಜೆಯಿಂದಲೂ ಸಹ ಪಾಪಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ.

೩೦. ತನಗೆ ಒಳ್ಳೆಯದಾಗಬೇಕೆಂದು ಅಪೇಕ್ಷಿಸುವವನು ಮಿಕ್ಕ ಹವ್ಯಾಸವೆಲ್ಲವನ್ನೂ ಬಿಟ್ಟು, ಸೂರ್ಯನಲ್ಲಿ ಒಂದೇ ಮನಸ್ಸಿಟ್ಟು ವಿಧಿವತ್ತಾಗಿ ಪೂಜೆ ಮಾಡಬೇಕು.

ತ್ವರಿತಂ ಜೀವಿತಂ ಯಾತಿ ತ್ವರಿತಂ ಯೌವನಂ ತಥಾ ।
ತ್ವರಿತಂ ವ್ಯಾಧಿರಪ್ಯೇತಿ ತಸ್ಮಾನ್ನಿತ್ಯಂ ರವಿಂ ವ್ರಜೇತ್ ॥ ೩೧ ॥

ಯಾವನ್ನಾಭ್ಯೇತಿ ಮರಣಂ ಯಾವನ್ನಾಕ್ರಮತೇ ಜರಾ ।
ಯಾವನ್ನೇಂದ್ರಿಯವೈಕಲ್ಯಂ ತಾವದರ್ಚೇದ್ದಿವಾಕರಂ ॥ ೩೨ ॥

ನ ಸೂರ್ಯಾರ್ಚನತುಲ್ಯೋsಸ್ತಿ ನ ಧರ್ಮೋsನ್ಯೋ ಜಗತ್ತ್ರಯೇ ।
ಇತ್ಥಂ ವಿಜ್ಞಾಯ ದೇವೇಶಂ ಪೂಜಯಸ್ವ ದಿವಾಕರಂ ॥ ೩೩ ॥

ಯೇ ಭಕ್ತ್ಯಾ ದೇವದೇವೇಶಂ ಸೂರ್ಯಂ ಶಾಂತಮಜಂ ಪ್ರಭುಂ ।
ಇಹಲೋಕೇ ಸುಖಂ ಪ್ರಾಪ್ಯ ತೇ ಗತಾಃ ಪರಮಂ ಪದಂ ॥ ೩೪ ॥

ಗೋಪತಿಂ ಪೂಜಯಿತ್ವಾ ತು ಪ್ರಹೃಷ್ಟೇನಾಂತರಾತ್ಮನಾ ।
ಕೃತಾಂಜಲಿಪುಟೋ ಭೂತ್ವಾ ಪುರಾ ಬ್ರಹ್ಮಾಬ್ರವೀದಿದಂ ॥ ೩೫ ॥

---

೩೧. ದೇಹಿಗೆ ದಿನದಿನಕ್ಕೆ ಯೌವನವು ಗಳಿತವಾಗುತ್ತಾ ಬಂದು, ದೇಹ ದುರ್ಬಲವಾಗಿ, ನಾನಾರೋಗಕ್ಕೆ ಗುರಿಯಾಗಿ ಎಂದೋ ಒಂದುದಿನ ಹಠಾತ್ತಾಗಿ ಜೀವ ಹೋಗಿಬಿಡುವುದು. ಆದುದರಿಂದ ಸದಾ ಸೂರ್ಯಾರ್ಚನೆಯನ್ನು ಮಾಡಬೇಕು.

೩೨. ಮತ್ತು ದೇಹಕ್ಕೆ ಮುಪ್ಪು ಪ್ರಾಪ್ತವಾಗುವ ಮುನ್ನವೇ; ಇಂದ್ರಿಯಶಕ್ತಿ ಕುಂಠಿತವಾಗುವ ಮುನ್ನವೇ, ಅಥವಾ ಮರಣ ಸಂಭವಿಸುವ ಮುನ್ನವೇ, ಸೂರ್ಯನನ್ನು ಪೂಜಿಸಬೇಕು.

೩೩. ಸೂರ್ಯನನ್ನು ಪೂಜಿಸುವುದಕ್ಕೆ ಸಮಾನವಾದ ಧರ್ಮವು, ಮೂರು ಲೋಕಗಳಲ್ಲಿ ಮತ್ತೆ ಯಾವುದೂ ಇಲ್ಲ ಎಂಬದಾಗಿ ತಿಳಿದುಕೊಂಡು, ದೇವೇಶನಾದ ಸೂರ್ಯನನ್ನು ಪೂಜಿಸಬೇಕು.

೩೪. ದೇವದೇವೇಶನೂ, ಶಾಂತನೂ, ಅಜನೂ, ಪ್ರಭುವೂ ಆದ ಸೂರ್ಯನನ್ನು ಭಕ್ತಿಯಿಂದ ಪೂಜಿಸಿದವರು, ಈ ಲೋಕದಲ್ಲಿ ಸುಖವನ್ನು ಅನುಭವಿಸುವರಲ್ಲದೆ ಅನಂತರ ಪರಮಪದವನ್ನೂ ಹೊಂದುವರು;

೩೫. ಪೂರ್ವದಲ್ಲಿ ಬ್ರಹ್ಮನು ಸಂತುಷ್ಟವಾದ ಮನಸ್ಸಿನಿಂದ ಕಿರಣಾಧಿಪತಿಯಾದ ಸೂರ್ಯನನ್ನು ಪೂಜಿಸಿ ಕೈಮುಗಿದುಕೊಂಡು ಹೇಳುತ್ತಾನೆ.

॥ ಬ್ರಹ್ಮೋವಾಚ ॥

ಭಗವಂತಂ ಭಗಕರಂ ಶಾಂತಚಿತ್ತಮನುತ್ತಮಂ ।
ದೇವಮಾರ್ಗಪ್ರಣೇತಾರಂ ಪ್ರಣತೋಽಸ್ಮಿ ರವಿಂ ಸದಾ ॥ ೩೭ ॥

ಶಾಶ್ವತಂ ಶೋಭನಂ ಶುದ್ಧಂ ಚಿತ್ರಭಾನುಂ ದಿವಸ್ಪತಿಂ ।
ದೇವದೇವೇಶಮೀಶೇಶಂ ಪ್ರಣತೋಽಸ್ಮಿ ದಿವಾಕರಂ ॥ ೩೮ ॥

ಸರ್ವದುಃಖಹರಂ ದೇವಂ ಸರ್ವಸೌಖ್ಯಕರಂ ರವಿಂ ।
ವರಾನನಂ ವರಾಂಗಂ ಚ ವರಸ್ಥಾನಂ ವರಪ್ರದಂ ॥ ೩೮ ॥

ವರೇಣ್ಯಂ ವರದಂ ನಿತ್ಯಂ ಪ್ರಣತೋಽಸ್ಮಿ ವಿಭಾವಸುಂ ।
ಅರ್ಕಮರ್ಯಮಣಂ ಚೇಂದ್ರಂ ವಿಷ್ಣುಮೀಶಂ ದಿವಾಕರಂ ॥ ೩೯ ॥

---

೩೬. "ಭಗವಂತನೂ, ಭಗಕರನೂ, (ಷಡ್ಗುಣ್ಯೈಶ್ವರ್ಯವುಂಟುಮಾಡುವವನೂ) ಶಾಂತಚಿತ್ತನೂ, ಸುರೋತ್ತಮನೂ, ದೇವಮಾರ್ಗದಲ್ಲಿ ನಡೆಯಿಸತಕ್ಕವನೂ ಆದ ಸೂರ್ಯನಿಗೆ ನಮಸ್ಕರಿಸುತ್ತೇನೆ."

೩೭. "ಶಾಶ್ವತನೂ, ಶೋಭನನೂ, ಶುದ್ಧನೂ, ಚಿತ್ರಭಾನುವೂ, ದಿವಸ್ಪತಿಯೂ, ದೇವದೇವನೂ, ಈಶನೂ, ಅಧೀಶನೂ ಆದ ಸೂರ್ಯನಿಗೆ ಪ್ರಣತನಾಗಿದ್ದೇನೆ."

೩೮–೩೯. ಸರ್ವದುಃಖಗಳನ್ನೂ ಹೋಗಲಾಡಿಸುವವನೂ, ಸರ್ವಸುಖಗಳನ್ನೂ ಉಂಟುಮಾಡತಕ್ಕವನೂ, ಶ್ರೇಷ್ಠವಾದ ಮುಖ, ಶ್ರೇಷ್ಠವಾದ ಅವಯವಗಳುಳ್ಳವನೂ, ಶ್ರೇಷ್ಠವಾದ ಸ್ಥಾನವುಳ್ಳವನೂ, ಶ್ರೇಷ್ಠವಾದ ವಸ್ತುಗಳನ್ನು ಕೊಡತಕ್ಕವನೂ, ಶ್ರೇಷ್ಠನೂ, ಮತ್ತು ಬೇಕಾದ ವರಪ್ರಸಾದ ಕೊಡತಕ್ಕವನೂ ಆದ ವಿಭಾವಸುವನ್ನು ನಿತ್ಯವೂ ನಮಸ್ಕರಿಸುತ್ತೇನೆ. ಅರ್ಕ, ಅರ್ಯಮ, ಇಂದ್ರ, ವಿಷ್ಣು, ಈಶ, ದಿವಾಕರ, ದೇವೇಶ್ವರ, ದೇವರತ ಎಂಬದಾಗಿ ಹೇಳಿಸಿಕೊಳ್ಳುವ ವಿಭಾವಸುವನ್ನು ನಮಸ್ಕರಿಸುತ್ತೇನೆ ಎಂಬದಾಗಿ ಬ್ರಹ್ಮನು ಸ್ತುತಿಸಿದನು.

ದೇವೇಶ್ವರಂ ದೇವರತಂ ಪ್ರಣತೋಽಸ್ಮಿ ವಿಭಾವಸುಂ ।
ಯ ಇದಂ ಶೃಣುಯಾನ್ನಿತ್ಯಂ ಬ್ರಹ್ಮಣೋಕ್ತಂ ಸ್ತವಂ ಪರಂ ॥
ಸ ಹಿ ಕೀರ್ತಿಂ ಪರಾಂ ಪ್ರಾಪ್ಯ ಪುನಃ ಸೂರ್ಯಪುರಂ ವ್ರಜೇತ್ ॥ ೪೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಗರುಡಾರುಣ ಸಂವಾದೇ ಸೂರ್ಯಸ್ತುತಿರ್ನಾಮ ಚತುಃಸಪ್ತತ್ಯುತ್ತರ ಶತತಮೋಽಧ್ಯಾಯಃ.



---

೪೦. ಬ್ರಹ್ಮನು ಮಾಡಿದ ಈ ಸ್ತೋತ್ರವನ್ನು ನಿತ್ಯವೂ ಶ್ರವಣಮಾಡಿದವನು ಶ್ರೇಷ್ಠವಾದ ಕೀರ್ತಿಯನ್ನು ಪಡೆದು ಸೂರ್ಯಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೂರ್ಯಸ್ತೋತ್ರ ವರ್ಣನೆಯೆಂಬ ನೂರಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

---

॥ ಗರುಡ ಉವಾಚ ॥

**ಸರ್ವರೋಗಹತಾ ಯೇ ತು ಆಧಿವ್ಯಾಧಿ ಸಮನ್ವಿತಾಃ ।**
**ಗ್ರಹೋಪಘಾತೈರ್ವಿವಿಧೈರರ್ದಿತಾ ಯೇ ಚ ಮಾನವಾಃ ॥ ೧ ॥**

**ಅರಿಭಿಃ ಪೀಡಿತಾ ಯೇ ಚ ವಿನಾಯಕಹತಾಶ್ಚ ಯೇ ।**
**ಕರ್ತವ್ಯಂ ಕಿಂ ಭವೇತ್ತೇಷಾಮಾತ್ಮನಃ ಶ್ರೇಯಸೇಽನಘ ॥ ೨ ॥**

॥ ಅರುಣ ಉವಾಚ ॥

**ನಾನಾರೋಗಹತಾನಾಂ ತು ಅರ್ದಿತಾನಾಂ ತಥಾರಿಭಿಃ ।**
**ಆದಿತ್ಯಾರಾಧನಂ ಮುಕ್ತ್ವಾ ನಾನ್ಯಚ್ಛ್ರೇಯಸ್ಕರಂ ಪರಂ ॥ ೩ ॥**

---

## ನೂರಎಪ್ಪತ್ತೈದನೆಯ ಅಧ್ಯಾಯ

೧-೨. ಆಗ ಗರುಡನು ಅರುಣನನ್ನು ಕುರಿತು ಪ್ರಶ್ನೆ ಮಾಡಲು ಇಷ್ಟವುಳ್ಳವನಾಗಿ "ಎಲೈ ನಿರ್ದೋಷಿಯಾದ ಅರುಣನೇ! ನಾನಾರೋಗಗಳಿಂದ ಪೀಡಿತರು, ಆಧಿ (ಮನೋವ್ಯಥೆ) ವ್ಯಾಧಿಗಳಿಂದ ಕೂಡಿದವರು, ಬಗೆಬಗೆಯಾದ ಗ್ರಹಗಳ ಬಾಧೆಯಿಂದ ಪೀಡಿತರು, ಶತ್ರುಪೀಡಿತರು, ವಿಘ್ನಕಾರಿಚೇತನಗಳಿಂದ ಪೀಡಿತರು, ಇಂಥವರು ತಮ್ಮ ಪೀಡೆಯನ್ನು ಪರಿಹರಿಸಿಕೊಂಡು ಶ್ರೇಯಸ್ಸನ್ನು ಪಡೆಯುವುದಕ್ಕೆ ಏನುಮಾಡಬೇಕು? ಹೇಳು" ಎಂದನು.

೩. ಆಗ ಅರುಣನು ಉತ್ತರ "ಹೇಳುವವನಾಗಿ ನಾನಾರೋಗ ಪೀಡಿತರೂ, ಮತ್ತು ಶತ್ರುಬಾಧಾಪೀಡಿತರೂ ಆದ ಜನರಿಗೆ ಸೂರ್ಯಾರಾಧನೆಯನ್ನು ಬಿಟ್ಟರೆ ಶ್ರೇಯಸ್ಕರವಾದುದು ಬೇರೆ ಯಾವುದೂ ಇಲ್ಲ."

ತಸ್ಮಾದಾರಾಧಯೇನಿತ್ಯಂ ಸರ್ವರೋಗ ವಿನಾಶನಂ ।
ಗ್ರಹೋಪಘಾತಹಂತಾರಂ ರಾಜೋಪದ್ರವನಾಶನಂ ॥ ೪ ॥

॥ ಗರುಡ ಉವಾಚ ॥

ಸರ್ವಪತ್ರವಿಹೀನಂ ಮೇ ಸರ್ವರೋಗವಿವರ್ಜಿತಂ ।
ಶಾಪೇನ ಬ್ರಹ್ಮವಾದಿನ್ಯಾಃ ಪಶ್ಯಾಂಗಂ ದ್ವಿಜಸತ್ತಮ ॥ ೫ ॥

ಏವಂ ಮತ್ತಸ್ಯ ಮೇ ತಾತ ಕಿಂ ಕಾರ್ಯಮವಶಿಷ್ಯತೇ ।
ಯೇನಾಹಂ ಕರ್ಮಣಾ ಕಲ್ಪೋ ಭವೇಯಂ ಪತ್ರವಾನ್ಪುನಃ ॥ ೬ ॥

ತನ್ಮೇ ಬ್ರೂಹಿ ಖಗಶ್ರೇಷ್ಠ ಪ್ರಪನ್ನಸ್ಯ ಖಗಾಧಿಪ ।
ಯತ್ಕೃತ್ವಾ ಕಲ್ಪತಾಂ ಪ್ರಾಪ್ಯ ಪೂಜಯಾಮಿ ದಿವಾಕರಂ ॥ ೭ ॥

॥ ಅರುಣ ಉವಾಚ ॥

ಪೂಜಯಸ್ವ ಜಗನ್ನಾಥಂ ಭಾಸ್ಕರಂ ತಿಮಿರಾಪಹಂ ।
ಸೂರ್ಯಾಗ್ನಿಕಾರ್ಯೇ ಸತತಂ ಶುದ್ಧಚಿತ್ತಃ ಸಮಾಚರ ॥ ೮ ॥

---

೪. "ಆದುದರಿಂದ ಸರ್ವರೋಗನಾಶಕನೂ, ಗ್ರಹಗಳಿಂದ ಆದ ಉತತಾಪಗಳನ್ನು ನಿವಾರಣೆಮಾಡುವವನೂ, ರಾಜರ ಕಡೆಯಿಂದ ಪ್ರಾಪ್ತವಾದ ಉಪದ್ರವಗಳನ್ನು ನಾಶಮಾಡಲು ಶಕ್ತನೂ ಆದ ಸೂರ್ಯನನ್ನು ಯಾವಾಗಲೂ ಆರಾಧಿಸಬೇಕು" ಎಂದನು

೫-೭. ಆಗ ಗರುಡನು ಪುನಃ ಕೇಳುತ್ತಾನೆ—"ಅಯ್ಯಾ ದ್ವಿಜಶ್ರೇಷ್ಠನಾದ ಅರುಣನೇ! ಯಾವ ರೋಗಗಳೂ ಇಲ್ಲದಿದ್ದರೂ ಬ್ರಹ್ಮವಾದಿನಿಯ ಶಾಪದಿಂದ ಗರಿಗಳೆಲ್ಲಾ ಉದುರಿಹೋಗಿರುವ ನನ್ನ ಅಂಗವನ್ನು ನೋಡು. ನಾನು ಮದೋನ್ಮತ್ತನಾಗಿ ನಡೆದು, ಹೀಗೆ ನಾನೇ ನನಗೆ ವಿಪತ್ತನ್ನು ತಂದುಕೊಂಡಮೇಲೆ ಶಾಪವಿಮೋಚನೆಗೆ ಮಾಡಬಹುದಾದುದಿನ್ನೇನಿದೆ? ಯಾವ ಕರ್ಮಮಾಡಿದರೆ ನನಗೆ ಮತ್ತೆ ಗರಿಗಳು ಬೆಳೆದು ಎಂದಿನಂತೆ ಕಾರ್ಯನಿರ್ವಾಹ ಮಾಡಲು ಸಮರ್ಥನಾಗುವೆನೋ ಅಂತಹ ಒಂದು ಕರ್ಮವಿಧಾನವನ್ನು ದೀನನಾದ ನನಗೆ ದಯೆಯಿಟ್ಟು ಹೇಳಯ್ಯಾ, ಅದರಂತೆ ಆಚರಿಸಿ ಸಾಮರ್ಥ್ಯ ಹೊಂದಿ ಸೂರ್ಯನನ್ನು ಪೂಜಿಸುವೆನು" ಎಂದನು.

೮-೯. ಆಗ ಅರುಣನು ಗರುಡನನ್ನು ಕುರಿತು ಈ ರೀತಿ ಹೇಳಿದನು—ಅಂಧಕಾರವನ್ನು ಹೋಗಲಾಡಿಸುವವನೂ, ಜಗನ್ನಾಥನೂ, ಮಹಾಶಾಂತಿಕರ್ತನೂ,

**ಮಹಾಶಾಂತಿಕರಂ ಖ್ಯಾತಂ ಸರ್ವೋಪದ್ರವನಾಶನಂ ।**
**ಗ್ರಹೋಪಘಾತಹಂತಾರಂ ಶುಭಕಾರ್ಯಕರಂ ಪರಂ ॥ ೯ ॥**

**॥ ಗರುಡ ಉವಾಚ ॥**

**ನಾಹಂ ಶಕ್ನೋಮಿ ವೈ ಕರ್ತುಂ ಪೂಜಾಂ ದಿನಕರಸ್ಯ ಚ ।**
**ನ ಚಾಗ್ನಿಕಾರ್ಯಂ ಶಕ್ನೋಮಿ ಕರ್ತುಂ ವಿಕಲತಾಂ ಗತಃ ॥ ೧೦ ॥**

**ತಸ್ಮಾನ್ಮೇ ಕುರು ಶಾಂತ್ಯರ್ಥಮಗ್ನಿಕಾರ್ಯಂ ಖಗಾಧಿಪ ।**
**ಮಹಾಶಾಂತಿರಿತಿ ಖ್ಯಾತಂ ಶಾಂತಯೇ ಮಮ ಸುವ್ರತ ॥ ೧೧ ॥**

**॥ ಅರುಣ ಉವಾಚ ॥**

**ಏವಮೇವ ಯದಾತ್ಥಂ ತ್ವಂ ವೈನತೇಯ ಖಗಾಧಿಪ ।**
**ಅಕಲ್ಪಸ್ತ್ವಂ ನ ಶಕ್ನೋಷಿ ಮಹಾವ್ಯಾಧಿಪ್ರಪೀಡಿತಃ ॥ ೧೨ ॥**

**ಅಹಂ ಕರೋಮಿ ತೇ ಪುತ್ರ ಶಾಂತಯೇ ಪಾವಕಾರ್ಚನಂ ।**
**ಯತ್ಕೃತಂ ಮಮ ಚಾರ್ಕೇಣ ಪುರಾ ಶಾಂತಿದಮಾದರಾತ್ ॥ ೧೩ ॥**

---

ಪ್ರಖ್ಯಾತನೂ, ಸಮಸ್ತ ಉಪದ್ರವಗಳನ್ನೂ ನಾಶಮಾಡತಕ್ಕವನೂ, ಗ್ರಹಪೀಡೆಯನ್ನು ನಾಶಮಾಡತಕ್ಕವನೂ, ಶುಭಕರನೂ, ಶ್ರೇಷ್ಠನೂ ಆದ ಭಾಸ್ಕರನನ್ನು ಪೂಜಿಸು. ಯಾವಾಗಲೂ ಶುದ್ಧಚಿತ್ತದಿಂದ ಸೂರ್ಯಪೂಜೆ, ಅಗ್ನಿಕಾರ್ಯ ಇವೆರಡನ್ನೂ ಮಾಡು" ಎಂದನು.

೧೦. ಇದನ್ನು ಕೇಳಿ ಗರುಡನು "ಸುವ್ರತನಾದ ಖಗಾಧಿಪನೇ! ಸೂರ್ಯಪೂಜೆ ಮಾಡಲು ನನಗೆ ಶಕ್ತಿಯಿಲ್ಲ. ಅಂಗವಿಕಲನಾಗಿ ಇರೋಣದರಿಂದ ಅಗ್ನಿಕಾರ್ಯವನ್ನೂ ಮಾಡಲಾರೆನು"

೧೧. "ಆದುದರಿಂದ ನನಗೆ ಕ್ಷೇಮವುಂಟಾಗುವುದಕ್ಕಾಗಿ ಮಹಾಶಾಂತಿ ಎಂದು ಪ್ರಸಿದ್ಧವಾದ ಅಗ್ನಿಕಾರ್ಯವನ್ನು ನೀನೇ ಮಾಡು" ಎಂದನು.

೧೨-೧೩. ವತ್ಸ ಖಗಾಧಿಪನಾದ ವೈನತೇಯ! ನೀನು ಹೇಳಿದ ಹಾಗೆಯೇ ಆಗಲಿ. ನೀನು ಅಸಮರ್ಥನೂ, ಮಹಾವ್ಯಾಧಿಪೀಡಿತನೂ ಆದುದರಿಂದ ನಿನಗೆ ಶಾಂತಿಯುಂಟಾಗುವುದಕ್ಕಾಗಿ ನಾನು ಅಗ್ನಿಪೂಜೆಯನ್ನು ಮಾಡುತ್ತೇನೆ. ಅಪ್ಪಾ ಗರುಡಾ! ಪೂರ್ವದಲ್ಲಿ ಸೂರ್ಯನು ನನಗೆ ಶಾಂತಿಯುಂಟಾಗುವುದಕ್ಕೋಸ್ಕರ ಆದರದಿಂದ ತಾನು ಶಾಂತಿಕರ್ಮ ಮಾಡಿದ್ದನು.

**ಸರ್ವಪಾಪಹರಂ ಪುಣ್ಯಂ ಮಹಾವಿಘ್ನವಿನಾಶನಂ ।**
**ಮಹೋದಯಂ ಶಾಂತಿಕರಂ ಲಕ್ಷಹೋಮವಿಧಿ ಸ್ಮೃತಂ ॥ ೧೪ ॥**

**ಅಪಮೃತ್ಯುಹರಂ ವೀರ ಸರ್ವವ್ಯಾಧಿಹರಂ ಪರಂ ।**
**ಪರಚಕ್ರಪ್ರಮಥನಂ ಸದಾವಿಜಯವರ್ಧನಂ ॥ ೧೫ ॥**

**ತೃಪ್ತಿದಂ ಸರ್ವದೇವಾನಾಂ ಭಾಸ್ಕರಪ್ರಿಯಮುತ್ತಮಂ ।**
**ಆಗ್ನೇಯ್ಯಾಂ ದಿಶಿ ಲಿಪ್ತ್ವಾಥ ಸ್ಥಂಡಿಲಂ ಗೋಮಯೇನ ತು ॥ ೧೬ ॥**

**ದೇವಾಲಯಸ್ಯ ವಿಧಿವತ್ ಕುರ್ಯಾದಗ್ನಿ ಪ್ರಬೋಧನಂ ।**
**ಮಹಾವ್ಯಾಹೃತಿಭಿರ್ವೀರ ಲಕ್ಷಹೋಮಂ ಸಮಾಚರೇತ್ ॥ ೧೭ ॥**

**ಭೂರ್ಭುವಃಸ್ವರಿತಿ ಸ್ವಾಹಾ ಪ್ರಣವೇನ ಸಮನ್ವಿತಂ ।**
**ಆರಕ್ತದೇಹರೂಪಾಯ ರಕ್ತಾಕ್ಷಾಯ ಮಹಾತ್ಮನೇ ॥ ೧೮ ॥**

---

೧೪. ಅದು ಸರ್ವಶಾಂತಿಕರವೂ, ಸರ್ವಪಾಪಹರವೂ, ಪುಣ್ಯಕರವೂ, ಮಹಾವಿಘ್ನನಾಶಕವೂ, ಮಹಾವೃದ್ಧಿಕರವೂ, ಎನಿಸುವುದು.

೧೫. ಅಲ್ಲದೆ ಅಪಮೃತ್ಯುಹರವೂ, ಸರ್ವವ್ಯಾಧಿನಿವಾರಕವೂ, ಶತ್ರುಸಮೂಹಧ್ವಂಸಕವೂ, ಸದಾ ವಿಜಯವೃದ್ಧಿಕರವೂ ಆಗಿರುವುದು.

೧೬. ಸರ್ವದೇವತೆಗಳಿಗೂ ಪ್ರಿಯವಾದುದೂ, ತೃಪ್ತಿಯನ್ನುಂಟುಮಾಡುವುದೂ, ಭಾಸ್ಕರಪ್ರಿಯವೂ, ಉತ್ತಮವೂ ಆದ ಆ ವಿಧಿಗೆ ಲಕ್ಷಹೋಮವೆಂದು ಹೆಸರು. ನಿನಗೆ ಶಾಂತಿಯುಂಟಾಗುವುದಕ್ಕೋಸ್ಕರ ನಾನು ಆ ವಿಧಿಯಿಂದ ಅಗ್ನಿಯನ್ನು ಆರಾಧನೆ ಮಾಡುತ್ತೇನೆ. ಅದರ ವಿಧಾನವು ಈ ರೀತಿಯಾಗಿದೆ.

೧೭. ದೇವಾಲಯದ ಆಗ್ನೇಯದಿಕ್ಕಿನಲ್ಲಿ ಹೋಮಕ್ಕಾಗಿ ಏರ್ಪಡಿಸಿದ ಜಗಲಿಯ ನೆಲವನ್ನು ಸಗಣಿಯಿಂದ ಸಾರಿಸಿ ವಿಧಿಪ್ರಕಾರ (ಮಂತ್ರಪೂರ್ವಕವಾಗಿ) ಅಗ್ನಿಪ್ರತಿಷ್ಠೆ ಮಾಡಿ ಅಗ್ನಿಯನ್ನು ಪ್ರಜ್ವಲನಮಾಡಬೇಕು.

೧೮. ಆ ಮೇಲೆ ಮಹಾವ್ಯಾಹೃತಿ ಮಂತ್ರಗಳನ್ನು ಪ್ರಣವಯುಕ್ತವಾಗಿಯೂ ಸ್ವಾಹಾಕಾರಾಂತ್ಯಗಳಾಗಿರುವಂತೆಯೂ, ಚತುರ್ಥ್ಯಂತ ಶಬ್ದಗಳಾಗಿರುವಂತೆಯೂ ಉಚ್ಚಾರಮಾಡಿ ಲಕ್ಷಹೋಮ ಮಾಡಬೇಕು.

**ಧರಾಧರಾಯ ಶಾಂತಾಯ ಸಹಸ್ರಾಕ್ಷಿ ಶಿರಾಯ ಚ ॥ ೧೯ ॥**

**ಅಧೋ ಮುಖಾಯ ಶ್ವೇತಾಯ ಸ್ವಾಹಾಪೂರ್ವಾಹುತಿಂ ಸೃಜೇತ್ ।**
**ಚತುರ್ಮುಖಾಯ ಶಾಂತಾಯ ಪದ್ಮಾಸದಗತಾಯ ಚ ॥ ೨೦ ॥**

**ಪದ್ಮವರ್ಣಾಯ ದೇವಾಯ ಕಮಂಡಲುಧರಾಯ ಚ ।**
**ದ್ವಿತೀಯೋರ್ಧ್ವಮುಖಾಯೇಹ ಸ್ವಾಹಾಕಾರಾಹುತಿಂ ಸೃಜೇತ್ ॥ ೨೧ ॥**

**ಹೇಮವರ್ಣಾಯ ದೇಹಾಯ ಐರಾವತಗತಾಯ ಚ ।**
**ಸಹಸ್ರಾಕ್ಷ ಶರೀರಾಯ ಪೂರ್ವದಿಶ್ಯುನ್ಮುಖಾಯ ಚ ॥ ೨೨ ॥**

**ದೇವಾಧಿಪಾಯ ಚೇಂದ್ರಾಯ ವಿಹಸ್ತಾಯ ಶುಭಾಯ ಚ ।**
**ಸ್ವಾಹಾಕಾರಂ ಜೋತ್ಸೃಜೇ ದೇವತೃತೀಯ ವದನಾಯಂ ಚ ॥ ೨೩ ॥**

---

೧೯. ಓಂಭೂಃ ಸ್ವಾಹಾ, ಓಂಭುವಃ ಸ್ವಾಹಾ, ಓಂಸ್ವಃ ಸ್ವಾಹಾ, ಇದೇ ಪ್ರಕಾರ ಆರಕ್ತ ದೇಹಾಯ ಸ್ವಾಹಾ, ಓಂ ಆರಕ್ತ ರೂಪಾಯ ಸ್ವಾಹಾ, ಓಂ ರಕ್ತಾಕ್ಷಾಯ ಸ್ವಾಹಾ, ಓಂ ಮಹಾತ್ಮನೇ ಸ್ವಾಹಾ, ಓಂ ಧರಾಧರಾಯ ಸ್ವಾಹಾ, ಓಂ ಶಾಂತಾಯ ಸ್ವಾಹಾ, ಸಹಸ್ರಾಕ್ಷಾಯ ಸ್ವಾಹಾ, ಓಂ ಸಹಸ್ರ ಶಿರಸೇ ಸ್ವಾಹಾ ಎಂಬ ಮಂತ್ರಗಳಿಂದಲೂ

೨೦. ಮತ್ತು ಓಂ ಅಧೋಮುಖಾಯ ಸ್ವಾಹಾ, ಓಂ ಶ್ವೇತಾಯಸ್ವಾಹಾ, ಎಂಬ ಮಂತ್ರಗಳಿಂದಲೂ ಆಹುತಿಯನ್ನು ಕೊಡಬೇಕು.

೨೧. ಓಂ ಚತುರ್ಮುಖಾಯ ಸ್ವಾಹಾ, ಓಂ ಶಾಂತಾಯ ಸ್ವಾಹಾ, ಓಂ ಪದ್ಮಾಸನಗತಾಯ ಸ್ವಾಹಾ, ಓಂ ಪದ್ಮವರ್ಣಾಯ ಸ್ವಾಹಾ, ಓಂ ವೇಧಸೇ ಸ್ವಾಹಾ, ಓಂ ಕಮಂಡಲುಧರಾಯ ಸ್ವಾಹಾ, ಓಂ ದ್ವಿತೀಯಸ್ಮೈ ಸ್ವಾಹಾ, ಓಂ ಊರ್ಧ್ವಮುಖಾಯ ಸ್ವಾಹಾ ಎಂಬ ಮಂತ್ರದಿಂದಲೂ ಆಹುತಿಕೊಡಬೇಕು.

೨೨-೨೩. ಓಂ ಹೇಮವರ್ಣಾಯ ಸ್ವಾಹಾ, ದೇಹಾಯ ಸ್ವಾಹಾ, ಓಂ ಐರಾವತಗತಾಯ ಸ್ವಾಹಾ, ಓಂ ಸಹಸ್ರಾಕ್ಷಾಯ ಸ್ವಾಹಾ, ಓಂ ಶಾರೀರಾಯ ಸ್ವಾಹಾ, ಓಂ ಪೂರ್ವದಿಶಿಉನ್ಮುಖಾಯ ಸ್ವಾಹಾ, ಓಂ ದೇವಾಧಿಪಾಯ ಸ್ವಾಹಾ, ಓಂ ಇಂದ್ರಾಯ ಸ್ವಾಹಾ, ಓಂ ವಿಹಸ್ತಾಯ ಸ್ವಾಹಾ, ಓಂ ಶುಭಾಯ ಸ್ವಾಹಾ, ಓಂ ತೃತೀಯವದನಾಯ ಸ್ವಾಹಾ ಎಂದು ಆಹುತಿ ಕೊಡಬೇಕು.

ದೀಪ್ತಾಯ ವ್ಯಕ್ತದೇಹಾಯ ಜ್ವಾಲಾಮಾಲಾಕುಲಾಯ ಚ ।
ಇಂದ್ರನೀಲಾಭದೇಹಾಯ ಸರ್ವಾರೋಗ್ಯಕರಾಯ ಚ ॥ ೨೪ ॥

ಯಮಾಯ ಧರ್ಮರಾಜಾಯ ದಕ್ಷಿಣಾಶಾಮುಖಾಯ ಚ ।
ಕೃಷ್ಣಾಂಬರಧರಾಯೇಹ ಸ್ವಾಹಾಹುತಿಮನುಸ್ಸೃಜೇತ್ ॥ ೨೫ ॥

ನೀಲಜೀಮೂತವರ್ಣಾಯ ರಕ್ತಾಂಬರಧರಾಯ ಚ ।
ಮುಕ್ತಾಫಲಶರೀರಾಯ ಪಿಂಗಾಕ್ಷಾಯ ಮಹಾತ್ಮನೇ ॥ ೨೬ ॥

ಶುಕ್ಲವಸ್ತ್ರಾಯ ಪೀತಾಯ ದಿವ್ಯಪಾಶಧರಾಯ ಚ ।
ಸ್ವಾಹಾಕಾರಾಯ ಚ ತಥಾ ಪಶ್ಚಿಮಾಭಿಮುಖಾಯ ಚ ॥ ೨೭ ॥

ಕೃಷ್ಟಪಿಂಗಲನೇತ್ರಾಯ ವಾಯವ್ಯಾಭಿಮುಖಾಯ ಚ ।
ನೀಲಧ್ವಜಾಯ ವೀರಾಯ ತಥಾ ಚೇಂದ್ರಾಯ ವೇಧಸೇ ॥ ೨೮ ॥

---

೨೪-೨೫. ಪುನಃ ಓಂ ದೀಪ್ತಾಯ ಸ್ವಾಹಾ, ಓಂ ವ್ಯಕ್ತದೇಹಾಯ ಸ್ವಾಹಾ, ಓಂ ಜ್ವಾಲಮಾಲಾಕುಲಾಯ ಸ್ವಾಹಾ, ಓಂ ಇಂದ್ರನೀಲಾಭದೇಹಾಯ ಸ್ವಾಹಾ, ಓಂ ಸರ್ವಾರೋಗ್ಯಕರಾಯ ಸ್ವಾಹಾ, ಓಂ ಯಮಾಯ ಸ್ವಾಹಾ, ಓಂ ಧರ್ಮರಾಜಾಯ ಸ್ವಾಹಾ, ಓಂ ದಕ್ಷಿಣಾಶಾಮುಖಾಯ ಸ್ವಾಹಾ, ಓಂ ಕೃಷ್ಣಾಂಬರಧರಾಯ ಸ್ವಾಹಾ ಎಂಬುದಾಗಿ ಆಹುತಿ ಕೊಡಬೇಕು.

೨೬-೨೭. ಓಂ ನೀಲಜೀಮೂತವರ್ಣಾಯ ಸ್ವಾಹಾ, ಓಂ ರಕ್ತಾಂಬರಧರಾಯ ಸ್ವಾಹಾ, ಓಂ ಮುಕ್ತಾಫಲಶರೀರಾಯ ಸ್ವಾಹಾ, ಓಂ ಮಹಾತ್ಮನೇ ಸ್ವಾಹಾ, ಓಂ ಪಿಂಗಾಕ್ಷಾಯ ಸ್ವಾಹಾ, ಓಂ ಶುಕ್ಲವಸ್ತ್ರಾಯ ಸ್ವಾಹಾ, ಓಂ ಪೀತಾಯ ಸ್ವಾಹಾ, ಓಂ ದಿವ್ಯಪಾಶಧರಾಯ ಸ್ವಾಹಾ, ಓಂ ಸ್ವಾಹಾಕಾರಾಯ ಸ್ವಾಹಾ, ಓಂ ಪಶ್ಚಿಮಾಭಿಮುಖಾಯ ಸ್ವಾಹಾ.

೨೮. ಪ್ರಾಜ್ಞನಾದವನು ಓಂ ಕೃಷ್ಣಪಿಂಗಲನೇತ್ರಾಯ ಸ್ವಾಹಾ, ಓಂ ವಾಯವ್ಯಾಭಿಮುಖಾಯ ಸ್ವಾಹಾ, ಓಂ ನೀಲಧ್ವಜಾಯ ಸ್ವಾಹಾ, ಓಂ ವೀರಾಯ ಸ್ವಾಹಾ, ಓಂ ಇಂದ್ರಾಯ ಸ್ವಾಹಾ, ಓಂ ವೇಧಸೇ ಸ್ವಾಹಾ, ಓಂ ಪವನಾಯ ಸ್ವಾಹಾ. ಎಂದು ಆಹುತಿಕೊಡಬೇಕು.

ಸ್ವಾಹೇತಿ ಪವನಾಯೇಹ ಆಹುತಿಂ ಚೋತ್ಸೃಜೇದ್ಬುಧಃ ।
ಗದಾಹಸ್ತಾಯ ಸೂರ್ಯಾಯ ಚಿತ್ರಸ್ರಗ್ಭೂಷಣಾಯ ಚ ॥ ೨೯ ॥

ಮಹೋದರಾಯ ಶಾಂತಾಯ ಸ್ವಾಹಾಧಿಪತಯೇ ತಥಾ ।
ಉತ್ತರಾಭಿಮುಖಾಯೇಹ ಮಹಾದೇವಪ್ರಿಯಾಯ ಚ ॥ ೩೦ ॥

ಶ್ವೇತಾಯ ಶ್ವೇತವರ್ಣಾಯ ಚಿತ್ರಾಕ್ಷಾಯ ಮಹಾತ್ಮನೇ ।
ಶಾಂತಾಯ ಶಾಂತರೂಪಾಯ ಪಿನಾಕವರಧಾರಿಣೇ ॥ ೩೧ ॥

ಈಶಾನಾಭಿಮುಖಾಯೇಹ ದದ್ಯಾದೀಶಾಯ ಚಾಹುತಿಂ ।
ವಿಸೃಜೇತ್ಖಗಶಾರ್ದೂಲ ವಿಧಿವಚ್ಛ್ರೇಯಸೇಽನಘ ॥ ೩೨ ॥

ಏವಂ ದೇವಂ ಮಹಾತ್ಮಾನಂ ಪಾವಕಂ ವಿಧಿವತ್ಖಗ ।
ಅರ್ಹೇದಿತಿ ತು ಯತ್ಕಾರ್ಯಂ ತತ್ಸಾರಂ ಖಗಸತ್ತಮಂ ॥ ೩೩ ॥

---

೨೯-೩೧. ಓಂ ಗದಾಹಸ್ತಾಯ ಸ್ವಾಹಾ, ಓಂ ಸೂರ್ಯಾಯ ಸ್ವಾಹಾ, ಓಂ ಚಿತ್ರಸ್ರಗ್ಭೂಷಣಾಯ ಸ್ವಾಹಾ, ಓಂ ಮಹೋದರಾಯ ಸ್ವಾಹಾ, ಓಂ ಶಾಂತಾಯ ಸ್ವಾಹಾ, ಓಂ ಸ್ವಾಹಾಧಿಪತಯೇ ಸ್ವಾಹಾ ಎಂದು ಆಹುತಿಕೊಡಬೇಕು.

೩೨. ಈಶ್ವರನನ್ನು ಉದ್ದೇಶಿಸಿ ಉತ್ತರಾಭಿಮುಖವಾಗಿ, ಓಂ ಮಹಾದೇವ ಪ್ರಿಯಾಯ ಸ್ವಾಹಾ, ಓಂ ಶ್ವೇತಾಯ ಸ್ವಾಹಾ, ಓಂ ಶ್ವೇತವರ್ಣಾಯ ಸ್ವಾಹಾ, ಓಂ ಚಿತ್ರಾಕ್ಷಾಯ ಸ್ವಾಹಾ, ಓಂ ಮಹಾತ್ಮನೇ ಸ್ವಾಹಾ, ಓಂ ಶಾಂತಾಯ ಸ್ವಾಹಾ, ಓಂ ಶಾಂತರೂಪಾಯ ಸ್ವಾಹಾ, ಓಂ ಪಿನಾಕವರಧಾರಿಣೇ ಸ್ವಾಹಾ.

೩೩. ಓಂ ಈಶಾನಾಭಿಮುಖಾಯ ಸ್ವಾಹಾ ಎಂಬ ಈ ಮಂತ್ರಗಳಿಂದ ಈಶ್ವರನಿಗೆ ಆಹುತಿಯನ್ನು ಕೊಡಬೇಕು. ನಿರ್ದೋಷಿಯೂ, ಖಗಶ್ರೇಷ್ಠನೂ ಆದ ಗರುಡನೇ! ಕೇಳು; ಶಾಸ್ತ್ರೋಕ್ತವಾದ ಶ್ರೇಯಸ್ಸು ಉಂಟಾಗಬೇಕಾದರೆ ದೇವನೂ, ಮಹಾತ್ಮನೂ ಆದ ಅಗ್ನಿಯನ್ನು ವಿಧಿವತ್ತಾಗಿ ಪೂಜಿಸಬೇಕು.

ಲಕ್ಷಹೋಮಂ ಚ ವಿಧಿವತ್ ಕೃತ್ವಾ ಶಾಂತಿಕಮಾಚರೇತ್ ।
ಭೂರ್ಭುವಃ ಸ್ವರಿತಿ ಸ್ವಾಹಾ ಲಕ್ಷಹೋಮವಿಧಿಃ ಸ್ಮೃತಃ ॥ ೩೪ ॥

ಮಹಾಹೋಮೋ ಚ ವೈ ಸೌರ ಏಷ ಏವ ವಿಧಿಃ ಪರಃ ।
ಕೃತ್ವೈವಮಗ್ನಿಕಾರ್ಯಂ ತು ಭೋಜಕೋ ಭಾಸ್ಕರಸ್ಯ ವೈ ॥ ೩೫ ॥

ಶಾಂತ್ಯರ್ಥಂ ಸರ್ವಲೋಕಾನಾಂ ತತಃ ಶಾಂತಿಕಮಾಚರೇತ್ ।
ಸಿಂದೂರಾಸನರಕ್ತಾಭಃ ರಕ್ತಪದ್ಮಾಭಲೋಚನಃ ॥ ೩೬ ॥

ಸಹಸ್ರಕಿರಣೋ ದೇವಃ ಸಪ್ತಾಶ್ವರಥವಾಹನಃ ।
ಗಭಸ್ತಿಮಾಲೀ ಭಗವಾನ್ ಸರ್ವದೇವನಮಸ್ಕೃತಃ ॥ ೩೭ ॥

ಕರೋತು ತೇ ಮಹಾಶಾಂತಿಂ ಗ್ರಹಪೀಡಾನಿವಾರಿಣೀಂ ।
ತ್ರಿಚಕ್ರರಥಮಾರೂಢೋ ಅಪಾಂ ಸಾರಮಯಶ್ಚಯಃ ॥
ದಶಾಶ್ವವಾಹನೋ ದೇವ ಆತ್ರೇಯಶ್ಚಾನ್ಮೃತಸ್ರವಃ ॥ ೩೮ ॥

---

೩೪. ವಿಧಿಪ್ರಕಾರ ಲಕ್ಷಹೋಮ ಮಾಡಿದಮೇಲೆ ಶಾಂತಿಹೋಮವನ್ನೂ ಮಾಡಬೇಕು. ಓಂ ಭೂರ್ಭುವಃ ಸ್ವ ಸ್ವಾಹಾ ಎಂಬುದೇ ಆ ಹೋಮವಿಧಿಯೆಂದು ತಿಳಿಯಬೇಕು.

೩೫. ಮಹಾ ಹೋಮಗಳಲ್ಲಿಯೂ ಕೂಡ ಈ ಸೌರವಿಧಿಯೇ ಶ್ರೇಷ್ಠವಾದುದು. ಭೋಜಕನು ಭಾಸ್ಕರಪ್ರೀತ್ಯರ್ಥವಾದ ಈ ಅಗ್ನಿಕಾರ್ಯವನ್ನು ಮಾಡಬೇಕು

೩೬-೩೭. ಆ ಮೇಲೆ ಸರ್ವಲೋಕಗಳಿಗೂ, ಶಾಂತಿಯುಂಟಾಗುವುದಕ್ಕಾಗಿ ಶಾಂತಿಹೋಮವನ್ನು ಮಾಡಬೇಕು. ಸಿಂದೂರದಂತೆ ರಕ್ತವರ್ಣದ ಆಸನವುಳ್ಳವನೂ, ಕೆಂದಾವರೆಯಂತಿರುವ ಕಣ್ಣುಳ್ಳವನೂ, ಸಹಸ್ರಕಿರಣನೂ, ದೇವನೂ, ಸಪ್ತಾಶ್ವಯುಕ್ತವಾದ ರಥವನ್ನೇ ವಾಹನವಾಗಿ ಉಳ್ಳವನೂ, ಕಿರಣಮಾಲೆ(ಪಂಕ್ತಿ) ಯುಳ್ಳವನೂ ಭಗವಂತನೂ, ಸರ್ವದೇವರಿಂದ ನಮಸ್ಕರಿಸಲ್ಪಡುವವನೂ, ಆದ ಸೂರ್ಯನು, ಗ್ರಹಪೀಡಾ ನಿವಾರಣರೂಪವಾದ ಮಹಾಶಾಂತಿಯನ್ನುಂಟುಮಾಡಲಿ.

೩೮. ಜಲಮಯನೂ, ಹತ್ತುಕುದುರೆಗಳಿಂದ ಎಳೆಯಲ್ಪಡುವಂಥ ಮೂರು ಚಕ್ರದ ರಥವನ್ನು ಆರೋಹಣ ಮಾಡಿರುವವನೂ, ಅತ್ರಿಮಹರ್ಷಿಯ ಗೋತ್ರದಲ್ಲಿ ಹುಟ್ಟಿದವನೂ, ಅಮೃತವನ್ನು ಹನಿಸುವವನೂ, ಅಮೃತಸ್ವರೂಪನೂ, ಶೀತಕಿರ

**ಶ್ವೇತಾಂಶುರಮೃತಾತ್ಮಾ ಚ ಕ್ಷಯವೃದ್ಧಿಸಮನ್ವಿತಃ ।**
**ಸೋಮಃ ಸೌಮ್ಯೇನ ಭಾವೇನ ಗ್ರಹಪೀಡಾಂ ವ್ಯಪೋಹತು　　॥ ೩೯ ॥**

**ಪದ್ಮರಾಗನಿಭೋ ಭೌಮೋ ಮಧುಪಿಂಗಲಲೋಚನಃ ।**
**ಅಂಗಾರಕೋಽಗ್ನಿಸದೃಶೋ ಗ್ರಹಪೀಡಾಂ ವ್ಯಪೋಹತು　　॥ ೪೦ ॥**

**ಪುಷ್ಯರಾಗನಿಭೇನೇಹ ದೇಹೇನ ಪರಿಪಿಂಗಲಃ ।**
**ಪೀತಮಾಲ್ಯಾಂಬರಧರೋ ಬುಧಃ ಪೀಡಾಂ ವ್ಯಪೋಹತು　　॥ ೪೧ ॥**

**ಸಪ್ತಗೈರಿಕಸಂಕಾಶಃ ಸರ್ವಶಾಸ್ತ್ರವಿಶಾರದಃ ।**
**ಸರ್ವದೇವಗುರುರ್ವಿಪ್ರೋ ಹ್ಯಥರ್ವಣಪರೋಮುನಿಃ　　॥ ೪೨ ॥**

**ಬೃಹಸ್ಪತಿರಿತಿ ಖ್ಯಾತಃ ಅರ್ಥಶಾಸ್ತ್ರಪರಶ್ಚ ಯಃ ।**
**ಶಾಂತೇನ ಚೇತಸಾ ಸೋಽಪಿ ಪರೇಣ ಸುಸಮಾಹಿತಃ　　॥ ೪೩ ॥**

---

ಣನೂ, ಕ್ಷಯವೃದ್ಧಿಗಳಿಂದ ಕೂಡಿದವನೂ, ಅಮೃತಾತ್ಮನೂ ಆದ ಸೋಮನು ಸೌಮ್ಯಭಾವದಿಂದ ಗ್ರಹಪೀಡೆಯನ್ನು ನಾಶಮಾಡಲಿ.

೪೦. ಪದ್ಮರಾಗದಂತೆ ಕಾಂತಿಯುಳ್ಳವನೂ, ಭೂಪುತ್ರನೂ, ಜೇನುತುಪ್ಪದಂತೆ ಪಿಂಗಳವರ್ಣದ ನೇತ್ರವುಳ್ಳವನೂ, ಅಗ್ನಿಸದೃಶನೂ ಆದ ಅಂಗಾರಕನು ಗ್ರಹಪೀಡೆಯನ್ನು ನಿವಾರಣೆಮಾಡಲಿ.

೪೧. ಪುಷ್ಪರಾಗ ಸದೃಶವಾದ ದೇಹದಿಂದ ಕೂಡಿ ಹಸುರು ಬಣ್ಣವುಳ್ಳವನೂ, ಹಸುರುಪುಷ್ಪಮಾಲೆ, ಹಸುರುವಸ್ತ್ರ ಇವುಗಳನ್ನು ಧರಿಸಿದವನೂ ಆದ ಬುಧನು ಗ್ರಹಪೀಡೆಯನ್ನು ನಿವಾರಿಸಲಿ.

೪೨. ಏಳುಗೈರಿಕಾದಿ ಧಾತುಗಳಿಗೆ ಸಮಾನವಾದ ಪ್ರಕಾಶವುಳ್ಳವನೂ, ಸರ್ವಶಾಸ್ತ್ರಗಳಲ್ಲೂ ನಿಪುಣನೂ, ಸಮಸ್ತದೇವತೆಗಳಿಗೂ ಗುರುವೂ, ಬ್ರಾಹ್ಮಣನೂ, ಅಥರ್ವಣವೇದಾಸಕ್ತನಾದ ಮುನಿಯೂ, ಅರ್ಥಶಾಸ್ತ್ರದಲ್ಲಿ ಆಸಕ್ತನೂ, ಶಾಂತವೂ ಶ್ರೇಷ್ಠವೂ ಆದ ತೇಜಸ್ಸಿನಿಂದ ಕೂಡಿದವನೂ, ಸಮಾಧಾನಚಿತ್ತವುಳ್ಳವನೂ,

ಗ್ರಹಪೀಡಾಂ ವಿನಿರ್ಜಿತ್ಯ ಕರೋತು ತವ ಶಾಂತಿಕಂ ।
ಸೂರ್ಯಾರ್ಚನಪರೋ ನಿತ್ಯಂ ಪ್ರಸಾದಾದ್ಭಾಸ್ಕರಸ್ಯ ತು ॥ ೪೪ ॥

ಹಿಮಕುಂದೇಂದುವರ್ಣಾಭೋ ದೈತ್ಯದಾನವಪೂಜಿತಃ ।
ಮಹೇಶ್ವರಸ್ತುತೋ ಧೀಮಾನ್ ಮಹಾಸೌರೋ ಮಹಾಮತಿಃ ॥ ೪೫ ॥

ಸೂರ್ಯಾರ್ಚನಪರೋ ನಿತ್ಯಂ ಶುಕ್ರಃ ಶುಕ್ಲನಿಭಸ್ತದಾ ।
ನೀತಿಶಾಸ್ತ್ರಪರೋ ನಿತ್ಯಂ ಗ್ರಹಪೀಡಾಂ ವ್ಯಪೋಹತು ॥ ೪೬ ॥

ನಾನಾರೂಪಧರೋಽವ್ಯಕ್ತ ಅವಿಜ್ಞಾತಗತಿಶ್ಚ ಯಃ ।
ನೋತ್ಪತ್ತಿರ್ಜ್ಞಾಯತೇ ಯಸ್ಯ ನೋದಯಃ ಪೀಡಿತೈರಪಿ ॥ ೪೭ ॥

ಏಕಚೂಲೋ ದ್ವಿಚೂಲಶ್ಚ ತ್ರಿಶಿಖಃ ಪಂಚಚೂಲಕಃ ।
ಸಹಸ್ರಶಿರರೂಪಸ್ತು ಚಂದ್ರಕೇತುರಿವ ಸ್ಥಿತಃ ॥ ೪೮ ॥

---

೪೪. ಯಾವಾಗಲೂ ಸೂರ್ಯಪೂಜಾಸಕ್ತನೆನಿಸಿ ಪ್ರಸಿದ್ಧನಾದ ಬೃಹಸ್ಪತಿಯು ಸೂರ್ಯಾನುಗ್ರಹದಿಂದ ಗ್ರಹಬಾಧೆಯನ್ನು ಹೋಗಲಾಡಿಸಿ ನಿನಗೆ ಶಾಂತಿಯನ್ನುಂಟು ಮಾಡಲಿ.

೪೫. ಹಿಮಗಡ್ಡೆ, ಮಲ್ಲಿಗೆಹೂ, ಚಂದ್ರ ಇವುಗಳಂತೆ ಬಣ್ಣವುಳ್ಳವನೂ, ದೈತ್ಯರಿಂದಲೂ, ದಾನವರಿಂದಲೂ ಪೂಜಿತನೂ, ಮಹೇಶ್ವರನೂ, ಪ್ರಶಸ್ತಬುದ್ಧಿಯುಳ್ಳವನೂ, ಮಹಾಸೂರ್ಯಭಕ್ತನೂ, ಮಹಾಬುದ್ಧಿಶಾಲಿ ಎನಿಸಿದವನೂ,

೪೬. ಯಾವಾಗಲೂ ಸೂರ್ಯಾರ್ಚನೆಯಲ್ಲಿ ಆಸಕ್ತನೂ, ಶುಭ್ರವರ್ಣನೂ, ನೀತಿಶಾಸ್ತ್ರಪರನೂ, ಆದ ಶುಕ್ರನು ನಿನಗೆ ಗ್ರಹಬಾಧೆಯನ್ನು ಯಾವಾಗಲೂ ನಿವಾರಣೆಮಾಡಲಿ.

೪೭. ನಾನಾರೂಪಗಳನ್ನು ಧರಿಸಿ ವ್ಯಕ್ತನಾಗಿ ಕಾಣುತ್ತಿದ್ದರೂ ಚಲಿಸುವುದೇ ಗೊತ್ತಾಗದಷ್ಟು ನಿಧಾನವಾದ ಚಲನೆಯುಳ್ಳವನೂ, ಉತ್ಪತ್ತಿಯು ವ್ಯಕ್ತವಾಗಿಲ್ಲದವನೂ, ತನ್ನಿಂದ ಪೀಡಿತರಾದ ಜನರಿಗೆ ಮತ್ತೆ ಏಳ್ಗೆಯಿಲ್ಲದಂತೆ ಮಾಡುವವನೂ,

೪೮. ಒಂದುಕಡೆ ಎರಡುಕಡೆ, ಮೂರುಕಡೆ, ಅಥವಾ ಐದುಕಡೆಗಳಲ್ಲಿ ಜುಟ್ಟು ಉಳ್ಳವನೂ, ಸಹಸ್ರ ಶಿರರೂಪನೂ, ಚಂದ್ರಕೇತುವಿನಂತೆ ಇರುವವನೂ, ಸೂರ್ಯಪುತ್ರನೂ ಆದ ಶನಿಯು ನಿನಗೆ ಗ್ರಹಬಾಧೆಯನ್ನು ನಿವಾರಣೆಮಾಡಲಿ.

ಸೂರ್ಯಪುತ್ರೋಽಗ್ನಿಪುತ್ರಸ್ತು ಬ್ರಹ್ಮವಿಷ್ಣುಶಿವಾತ್ಮಕಃ ।
ಅನೇಕಶಿಖರಃ ಕೇತುಃ ಸ ತೇ ಪೀಡಾಂ ವ್ಯಪೋಹತು　　　॥ ೪೯ ॥

ಏತೇ ಗ್ರಹಾಮಹಾತ್ಮಾನಃ ಸೂರ್ಯಾರ್ಚನಪರಾಃ ಸದಾ ।
ಶಾಂತಿಂ ಕುರ್ವಂತು ತೇ ಹೃಷ್ಟಾಃ ಸದಾ ಕಾಲಂ ಹಿತೇಕ್ಷಣಾಃ　　　॥ ೫೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸೌರಧರ್ಮೇಷು ಸೂರ್ಯಾಗ್ನಿಕರ್ಮಣಿ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ.



೪೯. ಅಗ್ನಿಪುತ್ರನೂ, ಬ್ರಹ್ಮವಿಷ್ಣು ಶಿವಾತ್ಮಕನೂ, ಅನೇಕ ಶಿಖರವುಳ್ಳವನೂ ಎನಿಸಿದ ಆ ಕೇತುವು ನಿನಗೆ ಗ್ರಹಬಾಧೆಯನ್ನು ನಿವಾರಣೆಮಾಡಲಿ.

೫೦. ಸದಾ ಸೂರ್ಯಾರ್ಚನಪರರೂ, ಮಹಾತ್ಮರೂ ಆದ ಈ ಗ್ರಹಗಳು ಯಾವಾಗಲೂ ಶುಭದೃಷ್ಟಿಯುಳ್ಳವರೂ, ಹೃಷ್ಟರೂ ಆಗಿ ನಿನಗೆ ಶಾಂತಿಯನ್ನು ಉಂಟುಮಾಡಲಿ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೌರಧರ್ಮದಲ್ಲಿ ಸೂರ್ಯಾಗ್ನಿಕರಣವೆಂಬ ನೂರಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಪದ್ಮಾಸನಃ ಪದ್ಮವರ್ಣಃ ಪದ್ಮಪತ್ರನಿಭೇಕ್ಷಣಃ ।
ಕಮಂಡಲುಧರಃ ಶ್ರೀಮಾನ್ದೇವಗಂಧರ್ವಪೂಜಿತಃ ॥ ೧ ॥

ಚತುರ್ಮುಖೋ ವೇದಪತಿಃ ಸೂರ್ಯಾರ್ಚನಪರಃ ಸದಾ ।
ಸುರಜ್ಯೇಷ್ಠೋ ಮಹಾತೇಜಾಃ ಸರ್ವಲೋಕಪ್ರಜಾಪತಿಃ ॥ ೨ ॥

ಪೀತಾಂಬರಧರೋ ದೇವ ಆತ್ರೇಯೀದಯಿತಃ ಸದಾ ।
ಶಂಖಚಕ್ರಗದಾಪಾಣಿಃ ಶ್ಯಾಮವರ್ಣಶ್ಚತುರ್ಭುಜಃ ॥ ೩ ॥

---

### ನೂರಎಪ್ಪತ್ತಾರನೆಯ ಅಧ್ಯಾಯ

೧. ಬಳಿಕ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ತಾನು ಹೇಳುತ್ತಿದ್ದ ವಿಚಾರವನ್ನು ಮುಂದುವರಿಸಿ ಹೇಳುತ್ತಾರೆ. “ ಪದ್ಮಾಸನದಲ್ಲಿ ಕುಳಿತಿರುವವನೂ, ಪದ್ಮದ ಬಣ್ಣವುಳ್ಳವನೂ, ಕಮಂಡಲುಧರನೂ, ಶ್ರೀಮಂತನೂ, ದೇವಗಂಧರ್ವರಿಂದ ಪೂಜಿತನೂ,

೨. ಚತುರ್ಮುಖನೂ, ವೇದಪತಿಯೂ, ಸದಾ ಸೂರ್ಯಾರ್ಚನೆಯಲ್ಲಿ ಆಸಕ್ತನೂ, ಸುರಜ್ಯೇಷ್ಠನೂ, ಮಹಾತೇಜಸ್ವಿಯೂ ಎನಿಸಿ, ಸಕಲಲೋಕ ವಂದ್ಯನಾದ ಪ್ರಜಾಪತಿ ಬ್ರಹ್ಮನು ನಿನಗೆ ಶಾಂತಿಯನ್ನು ಉಂಟುಮಾಡಲಿ.

೩. ಪೀತಾಂಬರಧರನಾದ ದೇವನೂ, ಸದಾ ಆತ್ರೇಯಿಗೆ ಪ್ರಿಯನೂ, ಶಂಖಚಕ್ರಗದೆಗಳನ್ನು ಕೈಯ್ಯಲ್ಲಿ ಹಿಡಿದಿರುವವನೂ, ನೀಲಮೇಘದಂತೆ ಶ್ಯಾಮವರ್ಣನೂ ಚತುರ್ಭುಜನೂ ಆದ ವಿಷ್ಣುವು ನಿನಗೆ ಶಾಂತಿಯನ್ನುಂಟುಮಾಡಲಿ.

**ಯಜ್ಞದೇಹಕ್ರಮೋ ದೇವ ಆತ್ರೇಯಿಸಾದಯಿತಃ ಸದಾ ।**
**ಶಂಖಚಕ್ರಗದಾಪಾಣಿಃ ಮಾಧವೋ ಮಧುಸೂದನಃ ॥ ೪ ॥**

**ಸೂರ್ಯಭಕ್ತಾನ್ವಿತೋ ನಿತ್ಯಂ ವಿಗತಿರ್ವಿಗತತ್ರಯಃ ।**
**ಸೂರ್ಯಧ್ಯಾನಪರೋ ನಿತ್ಯಂ ವಿಷ್ಣುಃ ಶಾಂತಿಂ ಕರೋತು ತೇ ॥ ೫ ॥**

**ಹಿಮಕುಂದೇಂದುಸಂಕಾಶೋ ವಿಶ್ರುತಾಭರಣೈರಿಹ ।**
**ಚತುರ್ಭುಜೋ ಮಹಾತೇಜಾಃ ಚಂದ್ರಾರ್ಧಕೃತಶೇಖರಃ ॥ ೬ ॥**

**ಪಂಚವಕ್ತ್ರೋ ಭಸ್ಮಧರಃ ಸ್ಮಶಾನನಿಲಯಃ ಸದಾ ।**
**ಗೋತ್ರಧೃಗ್ವಿಶ್ವನಿಲಯಃ ತಥಾ ಚ ಕ್ರತುದೂಷಣಃ ॥ ೭ ॥**

---

೪. ಬಲಿಯಯಜ್ಞ ನಡೆಯುತ್ತಿರುವಲ್ಲಿಗೆ ವಾಮನರೂಪ ದೇಹಧಾರಿಯಾಗಿ ನಡೆತಂದ ದೇವನೂ, ಸದಾ ಆತ್ರೇಯಿಗೆ ಪ್ರೀತಿಪಾತ್ರನೂ, ಶಂಖ ಚಕ್ರ ಗಧೆ ಪದ್ಮ ಇವನ್ನು ಕೈಯಲ್ಲಿ ಹಿಡಿದವನೂ, ಲಕ್ಷ್ಮೀಪತಿಯೂ, ಮಧುವೆಂಬ ರಾಕ್ಷಸವನ್ನು ಧ್ವಂಸ ಮಾಡಿದವನೂ

೫. ಮತ್ತು ಯಾವಾಗಲೂ ಸೂರ್ಯಭಕ್ತರಿಂದ ಕೂಡಿದವನೂ, ಪಕ್ಷಿಯನ್ನೇರಿ ಸಂಚರಿಸುವವನೂ, ತಾಪತ್ರಯಗಳಿಲ್ಲದವನೂ, ಸದಾ ಸೂರ್ಯಧ್ಯಾನಾಸಕ್ತನೂ ಆದ ವಿಷ್ಣುವು ನಿನಗೆ ಶಾಂತಿಯನ್ನುಂಟುಮಾಡಲಿ.

೬. ಮಂಜು. ಮಲ್ಲೀಹೂ, ಚಂದ್ರ ಇವುಗಳಂತೆ ಶುಭ್ರಕಾಂತಿಯುಳ್ಳವನೂ ಪ್ರಸಿದ್ಧವಾದ ನಾಗಾಭರಣಗಳನ್ನುಳ್ಳವನೂ, ನಾಲ್ಕುಭುಜಗಳುಳ್ಳವನೂ, ಮಹಾತೇಜಸ್ವಿಯೂ, ಚಂದ್ರಲೇಖೆಯನ್ನು ತಲೆಯಲ್ಲಿ ಧರಿಸಿರುವವನೂ,

೭-೮. ಮತ್ತು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖಗಳುಳ್ಳವನೂ, ವಿಭೂತಿಯನ್ನು ಧರಿಸಿದವನೂ, ಸದಾ ಸ್ಮಶಾನದಲ್ಲಿ ವಾಸಿಸುವವನೂ, ಮೇರುಪರ್ವತವನ್ನು ಧನುಸ್ಸಾಗಿ ಧರಿಸಿದವನೂ, ಪ್ರಪಂಚಕ್ಕೆ ಆಶ್ರಯನೂ, ದಕ್ಷಯಜ್ಞಧ್ವಂಸಕನೂ, ವರಸ್ವರೂಪನೂ, ಶ್ರೇಷ್ಠನೂ, ವರವನ್ನು

**ವರೋ ವರೇಣ್ಯೋ ವರದೋ ದೇವದೇವೋ ಮಹೇಶ್ವರಃ ।**
**ಆದಿತ್ಯದೇಹಸಂಭೂತಃ ಸ ತೇ ಶಾಂತಿಂ ಕರೋತು ವೈ ॥ ೮ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇಷು ಷಟ್ಸಪ್ತತ್ಯುತ್ತರ ಶತತಮೋಽಧ್ಯಾಯಃ.**



---

ಕೊಡತಕ್ಕವನೂ, ದೇವದೇವನೂ, ಆದಿತ್ಯನ ದೇಹದಿಂದ ಹುಟ್ಟಿದವನೂ ಆದ ಮಹೇಶ್ವರನು ನಿನಗೆ ಶಾಂತಿಯನ್ನುಂಟುಮಾಡಲಿ" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೌರಧರ್ಮವಿವರದಲ್ಲಿ ನೂರಎಪ್ಪತ್ತಾರನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

॥ ಅರುಣ ಉವಾಚ ॥

**ಪದ್ಮರಾಗಪ್ರಭಾ ದೇವೀ ಚತುರ್ವದನಪಂಕಜಾ ।**
**ಅಕ್ಷಮಾಲಾರ್ಪಿತಕರಾ ಕಮಂಡಲುಧರಾ ಶುಭಾ ॥ ೧ ॥**

**ಬ್ರಹ್ಮಾಣೀ ಸೌಮ್ಯವದನಾ ಆದಿತ್ಯಾರಾಧನೇ ರತಾ ।**
**ಶಾಂತಿಂ ಕರೋತು ಸುಪ್ರೀತಾ ಆಶೀರ್ವಾದಪರಾ ಖಗ ॥ ೨ ॥**

**ಮಹಾಶ್ವೇತೇತಿ ವಿಖ್ಯಾತಾ ಆದಿತ್ಯದಯಿತಾ ಸದಾ ।**
**ಹಿಮಕುಂದೇಂದು ಸದೃಶಾ ಮಹಾವೃಷಭವಾಹಿನೀ ॥ ೩ ॥**

---

## ನೂರಎಪ್ಪತ್ತೇಳನೆಯ ಅಧ್ಯಾಯ

೧. ಅರುಣನು ಗರುಡನ ಶಾಂತ್ಯರ್ಥವಾಗಿ ಪುನಃ ಹೇಳುತ್ತಾನೆ. "ಅಯ್ಯಾ ಖಗನೇ ! ಕೇಳು ; ಪದ್ಮರಾಗರತ್ನದಂತೆ ಕಾಂತಿಯುಕ್ತವಾದ ನಾಲ್ಕು ಮುಖಕಮಲವುಳ್ಳವಳೂ, ಜಪಮಾಲೆಯನ್ನು ಕೈಯಲ್ಲಿ ಹಿಡಿದಿರುವವಳೂ, ಕಮಂಡಲವನ್ನು ಧರಿಸಿದವಳೂ, ಮಂಗಳಕರಳೂ,

೨. ಸೌಮ್ಯಸ್ವರೂಪಳೂ, ಸೂರ್ಯಾರಾಧನೆಯಲ್ಲಿ ಆಸಕ್ತೆಯೂ, ಆಶೀರ್ವಾದ ಮಾಡುವುದರಲ್ಲಿ ಆಸಕ್ತೆಯೂ, ಆದ ಬ್ರಾಹ್ಮೀಮಾತೆಯು ನಿನಗೆ ಶಾಂತಿಯನ್ನುಂಟು ಮಾಡಲಿ.

೩. ಮಹಾಶ್ವೇತಾ ಎಂಬ ಹೆಸರಿನಿಂದ ಪ್ರಸಿದ್ಧಳೂ, ಸದಾ ಆದಿತ್ಯನಿಗೆ ಪ್ರಿಯಕರಿಯೂ; ಮಂಜು, ಮಲ್ಲಿಗೆ, ಚಂದ್ರ ಇವುಗಳಿಗೆ ಸಮಾನವಾದ ವರ್ಣವುಳ್ಳವಳೂ, ಮಹಾವೃಷಭವನ್ನೇರಿ ಕುಳಿತವಳೂ :

ತ್ರಿಶೂಲಹಸ್ತಾವರಣಾ ವಿಶ್ರುತಾಭರಣಾ ಸತೀ ।
ಚತುರ್ಭುಜಾ ಚತುರ್ವಕ್ತ್ರಾ ತ್ರಿನೇತ್ರಾ ಪಾಪನಾಶಿನೀ ॥ ೪ ॥

ವೃಷಧ್ವಜಾರ್ಚನರತಾ ರುದ್ರಾಣೀ ಶಾಂತಿದಾ ಭವೇತ್ ।
ಮಯೂರವಾಹನಾ ದೇವೀ ಸಿಂದೂರಾರುಣವಿಗ್ರಹಾ ।
ಶಕ್ತಿಹಸ್ತಾ ಮಹಾಕಾಯಾ ಸರ್ವಾಲಂಕಾರಭೂಷಿತಾ ॥ ೫ ॥

ಸೂರ್ಯಭಕ್ತಾ ಮಹಾವೀರ್ಯಾ ಸೂರ್ಯಾರ್ಚನರತಾ ಸದಾ ।
ಕೌಮಾರೀ ವರದಾ ದೇವೀ ಶಾಂತಿಮಾಶು ಕರೋತು ತೇ ॥ ೬ ॥

ಗದಾಚಕ್ರಧರಾ ಶ್ಯಾಮಾ ಪೀತಾಂಬರಧರಾ ಖಗ ।
ಚತುರ್ಭುಜಾ ಹಿ ಸಾ ದೇವೀ ವೈಷ್ಣವೀ ಸುರಪೂಜಿತಾ ॥ ೭ ॥

---

೪. ಕೈಯಲ್ಲಿ ತ್ರಿಶೂಲಾಯುಧವನ್ನು ಧರಿಸಿದವಳೂ, ಪ್ರಸಿದ್ಧವಾದ ನಾಗಾಭರಣವುಗಳುಳ್ಳವಳೂ, ನಾಲ್ಕುಭುಜ, ನಾಲ್ಕುಮುಖ, ಮೂರುಕಣ್ಣು ಇವನ್ನು ಉಳ್ಳವಳೂ, ಪಾಪನಾಶಕಳೂ, ವೃಷಧ್ವಜನನ್ನು ಸದಾ ಅರ್ಚಿಸುವುದರಲ್ಲಿ ಆಸಕ್ತೆಯೂ ರುದ್ರಪತ್ನಿಯೂ ಆದ ಮಾಹೇಶ್ವರೀಮಾತೆಯು ನಿನಗೆ ಶಾಂತಿಯನ್ನುಂಟುಮಾಡಲಿ.

೫. ನವಿಲಿನ ವಾಹನವುಳ್ಳವಳೂ, ಸಿಂದೂರದಂತೆ ಕೆಂಪಗಿರುವ ದೇಹವುಳ್ಳವಳೂ, ಸರ್ವಾಭರಣಗಳಿಂದ ಅಲಂಕೃತೆಯೂ, ಸೂರ್ಯಭಕ್ತೆಯೂ,

೬. ಮಹಾಪರಾಕ್ರಮವುಳ್ಳವಳೂ, ಯಾವಾಗಲೂ ಸೂರ್ಯನನ್ನು ಪೂಜಿಸುವುದರಲ್ಲಿ ಆಸಕ್ತೆಯೂ, ವರಪ್ರದೆಯೂ ಆದ ಕೌಮಾರೀದೇವಿಯು ನಿನಗೆ ಜಾಗ್ರತೆ ಶಾಂತಿಯನ್ನುಂಟುಮಾಡಲಿ.

೭. ಅಯ್ಯಾ ಖಗನೇ! ಚಕ್ರ ಗದೆ ಇವನ್ನು ಧರಿಸಿದವಳೂ, ಕಪ್ಪುಬಣ್ಣವುಳ್ಳವಳೂ, ಪೀತಾಂಬರವನ್ನುಟ್ಟಿರುವವಳೂ, ನಾಲ್ಕು ಭುಜಗಳುಳ್ಳವಳೂ, ದೇವತೆಗಳಿಂದ ಪೂಜೆಮಾಡಿಸಿಕೊಳ್ಳುವವಳೂ,

ಸೂರ್ಯಾರ್ಚನಪರಾ ನಿತ್ಯಂ ಸೂರ್ಯೈಕಗತಮಾನಸಾ ।
ಶಾಂತಿಂ ಕರೋತು ತೇ ನಿತ್ಯಂ ಸರ್ವಾಸುರವಿಮರ್ದಿನೀ ॥ ೮ ॥

ಐರಾವತಗಜಾರೂಢಾ ವಜ್ರಹಸ್ತಾ ಮಹಾಬಲಾ ।
ಸರ್ವತ್ರಲೋಚನಾ ದೇವೀ ವರ್ಣತಃ ಕರ್ಬುರಾರುಣಾ ॥ ೯ ॥

ಸಿದ್ಧಗಂಧರ್ವನಮಿತಾ ಸರ್ವಾಲಂಕಾರಭೂಷಿತಾ ।
ಇಂದ್ರಾಣೀ ತೇ ಸದಾ ದೇವೀ ಶಾಂತಿಮಾಶು ಕರೋತು ವೈ ॥ ೧೦ ॥

ವರಾಹಘೋಣಾ ವಿಕಟಾ ವರಾಹವರವಾಹಿನೀ ।
ಶ್ಯಾಮಾವದಾತಾ ಯಾ ದೇವೀ ಶಂಖಚಕ್ರಗದಾಧರಾ ॥ ೧೧ ॥

ತೇಜಯಂತೀತಿ ನಿಮಿಷಾರ್ಧ ಪೂಜಯಂತೀ ಸದಾ ರವಿಂ ।
ವಾರಾಹೀ ವರದಾ ದೇವೀ ತವ ಶಾಂತಿಂ ಕರೋತು ವೈ ॥ ೧೨ ॥

---

೮. ಸೂರ್ಯಪೂಜೆಯಲ್ಲಿ ಆಸಕ್ತೆಯೂ, ಸೂರ್ಯನಲ್ಲಿಯೇ ಮನಸ್ಸುಳ್ಳವಳೂ, ಸರ್ವರಾಕ್ಷಸಧ್ವಂಸಿನಿಯೂ ಆಗಿರುವ ವೈಷ್ಣವೀಮಾತೆಯು ನಿನಗೆ ಸದಾ ಶಾಂತಿಯನ್ನುಂಟುಮಾಡಲಿ.

೯. ಐರಾವತವೆಂಬ ಆನೆಯನ್ನೇರಿದವಳೂ, ವಜ್ರಾಯುಧವನ್ನು ಧರಿಸಿದವಳೂ, ಮಹಾಬಲಶಾಲಿನಿಯೂ, ದೇಹದ ಎಲ್ಲಾ ಕಡೆಯಲ್ಲಿಯೂ ಕಣ್ಣುಳ್ಳವಳೂ, ಚಿತ್ರವರ್ಣ ಮತ್ತು ಕೆಂಪುಬಣ್ಣದ ದೇಹವುಳ್ಳವಳೂ,

೧೦. ಮತ್ತು ಸಿದ್ಧರಿಂದಲೂ, ಗಂಧರ್ವರಿಂದಲೂ ನಮಸ್ಕಾರ ಮಾಡಿಸಿಕೊಳ್ಳತಕ್ಕವಳೂ, ಸರ್ವಾಭರಣಗಳಿಂದ ಅಲಂಕೃತೆಯೂ ಆದ, ಇಂದ್ರಾಣೀ ದೇವಿಯು, ನಿನಗೆ ಜಾಗ್ರತೆಯಾಗಿ ಶಾಂತಿಯನ್ನುಂಟುಮಾಡಲಿ.

೧೧. ವರಾಹದಂತೆ ಭಯಂಕರವಾದ ಮುಸುಡುಳ್ಳವಳೂ, ಶ್ರೇಷ್ಠವಾದ ವರಾಹವನ್ನು ಏರಿದವಳೂ, ಕಪ್ಪುಬಣ್ಣ ಮತ್ತು ಬಿಳಿಯುಬಣ್ಣದ ದೇಹವುಳ್ಳವಳೂ, ಶಂಖಚಕ್ರ ಗದೆಗಳನ್ನು ಧರಿಸಿದವಳೂ,

೧೨. ಕಾಲದ ಅವಯುವವಾದ ನಿಮಿಷವನ್ನು ಉತ್ತೇಜನಮಾಡತಕ್ಕವಳೂ, ಸದಾ ಸೂರ್ಯನನ್ನು ಪೂಜಿಸುವವಳೂ, ವರಕೊಡತಕ್ಕವಳೂ ಆದ, ವಾರಾಹೀದೇವಿಯು ನಿನಗೆ ಶಾಂತಿಯನ್ನುಂಟುಮಾಡಲಿ.

ಅರ್ಧಕೋಶಾ ಕಟೀಕ್ಷಾಮಾ ನಿರ್ಮಾಂಸಾ ಸ್ನಾಯುಬಂಧನಾತ್ ।
ಕರಾಲವದನಾ ಘೋರಾ ಖಡ್ಗಘಂಟೋತ್ಕರಾ ಸತೀ ॥ ೧೩ ॥

ಕಪಾಲಮಾಲಿನೀ ಕ್ರೂರಾ ಖಟ್ವಾಂಗವರಧಾರಿಣೀ ।
ಆರಕ್ತಾ ಪಿಂಗನಯನಾ ಗಜಚರ್ಮಾವಗುಂಠಿತಾ ॥ ೧೪ ॥

ಗೋಶ್ರುತಾಭರಣಾ ದೇವೀ ಪ್ರೇತಸ್ಥಾನನಿವಾಸಿನೀ ।
ಶಿವಾ ರೂಪೇಣ ಘೋರೇಣ ಶವಾರೂಢಭಯಂಕರೀ ॥
ಚಾಮುಂಡಾ ಚಂಡರೂಪೇಣ ಸದಾ ಶಾಂತಿಂ ಕರೋತು ತೇ ॥ ೧೫ ॥

ಚಂಡಮುಂಡಕರಾ ದೇವೀ ಮುಂಡದೇಹಗತಾ ಸತೀ ।
ಕಪಾಲಮಾಲಿನೀ ಕ್ರೂರಾ ಖಟ್ವಾಂಗವರಧಾರಿಣೀ ॥ ೧೬ ॥

---

೧೩. ಅರ್ಧಕೋಶಸ್ವರೂಪಳೂ, ಕೃಶವಾದ ಸೊಂಟವುಳ್ಳವಳೂ, ನರಗಳು ವ್ಯಕ್ತವಾಗಿ ಕಾಣುವಮಟ್ಟಿಗೆ ಮಾಂಸಶೂನ್ಯಳಾದವಳೂ, ಭಯಂಕರವಾದ ಮುಖವುಳ್ಳವಳೂ, ಭಯಂಕರಸ್ವರೂಪಿಣಿಯೂ, ಖಡ್ಗ ಘಂಟೆ ಇವುಗಳನ್ನು ಕೈಯಲ್ಲಿ ಎತ್ತಿ ಹಿಡಿದಿರುವವಳೂ,

೧೪ ಮತ್ತು ರುಂಡಮಾಲೆಯನ್ನು ಧರಿಸಿದವಳೂ, ಕ್ರೂರಸ್ವರೂಪಿಣಿಯೂ, ಶ್ರೇಷ್ಠವಾದ ಖಟ್ವಾಂಗಾಯುಧವನ್ನು ಧರಿಸಿದವಳೂ, ಸರ್ವತ್ರ ರಕ್ತವರ್ಣಳೂ, ಹಳದಿಯ ಬಣ್ಣದ ಕಣ್ಣುಳ್ಳವಳೂ ಆನೆಯ ಚರ್ಮದಿಂದ ಆಚ್ಛಾದಿತೆಯಾದವಳೂ ;

೧೫. ನಾಗಾಭರಣವನ್ನು ಧರಿಸಿರುವವಳೂ, ಸ್ಮಶಾನವಾಸಿನಿಯೂ, ಮಂಗಳಕರಳೂ, ಘೋರರೂಪಿನಿಂದ ಕೂಡಿದವಳೂ, ಶವಪೀಠವನ್ನೇರಿ ಭಯಂಕರವಾಗಿ ಕಾಣುವವಳೂ, ಚಂಡಮುಂಡಾಸುರರ ಶಿರಸ್ಸನ್ನು ಕೈಯಲ್ಲಿ ಹಿಡಿದವಳೂ, ಮುಂಡಾಸುರನ ದೇಹವನ್ನು ಮೆಟ್ಟಿರುವವಳೂ,

೧೬. ರುಂಡಮಾಲಾಧಾರಿಣಿಯೂ, ಕ್ರೂರಳೂ, ಶ್ರೇಷ್ಠವಾದ ಖಟ್ವಾಂಗವನ್ನು ಧರಿಸಿದವಳೂ, ಉಗ್ರರೂಪಿಣಿಯೂ ಆದ ಚಾಮುಂಡಾಂಬಿಕೆಯು ಸದಾ ನಿನಗೆ ಶಾಂತಿಯನ್ನುಂಟುಮಾಡಲಿ.

ಆಕಾಶಮಾತರೋ ದೇವ್ಯಸ್ತಥ್ಯಾನ್ಯಾ ಪಿತೃಮಾತರಃ ।
ಭೂತಾನಾಂ ಮಾತರಃ ಸರ್ವಾಸ್ತಥ್ಯಾನ್ಯಾ ಲೋಕಮಾತರಃ ॥ ೧೭ ॥

ವೃದ್ಧಿಶ್ರಾದ್ಧೇಷು ಪೂಜ್ಯಂತೇ ಯಸ್ತು ದೇವ್ಯೋ ಮನೀಷಿಭಿಃ ।
ಮಾತ್ರೀ ಪ್ರಮಾತ್ರೀ ತನ್ಮಾತ್ರೀ ಇತಿ ಮಾತೃಮುಖಾಸ್ತಥಾ ॥ ೧೮ ॥

ಪಿತಾಮಹೀ ತು ತನ್ಮಾತಾ ವೃದ್ಧಾ ಯಾ ಪ್ರಪಿತಾಮಹೀ ।
ಇತ್ಯೇತಾಸ್ತು ಪಿತಾಮಹ್ಯಃ ಶಾಂತಿಂ ತೇ ಪಿತೃಮಾತರಃ ॥ ೧೯ ॥

ಸರ್ವಾ ಮಾತೃಮಹಾದೇವ್ಯಃ ಸ್ವಾಯುಧವ್ಯಗ್ರಪಾಣಯಃ ।
ಜಗದ್ವ್ಯಾಪ್ಯ ಪ್ರತಿಷ್ಠಂತ್ಯೋ ಬಲಿಕಾಮಾ ಮಹೋದಯಾಃ ॥ ೨೦ ॥

ಶಾಂತಿಂ ಕುರ್ವಂತು ತಾ ನಿತ್ಯಮಾದಿತ್ಯಾರಾಧನೇ ರತಾಃ ।
ಶಾಂತೇನ ಚೇತಸಾ ಸತ್ಯಃ ಶಾಂತಯೇ ತವ ಶಾಂತಿದಾ ॥ ೨೧ ॥

---

೧೭. ಆಕಾಶಮಾತೃಗಳಾದ ದೇವಿಯರೂ, ಲೋಕಮಾತೃಗಳಾದ ಇತರರೂ, ಎಲ್ಲಾ ಭೂತಮಾತೃಗಳೂ, ಇತರ ಪಿತೃಮಾತೃಗಳೂ,

೧೮. ವಿದ್ವಾಂಸರಿಂದ ವೃದ್ಧಿ (ನಾಂದೀ) ಶ್ರಾದ್ಧಗಳಲ್ಲಿ ಪೂಜಿಸಲ್ಪಡುವ ಮಾತೃ, ಮಾತಾಮಹಿ, ಮಾತುಃಪಿತಾಮಹಿ ಎಂಬ ಮಾತೃಮುಖ ಗಣಗಳೂ;

೧೯. ಪಿತಾಮಹಿ, ಪ್ರಪಿತಾಮಹಿ, ವೃದ್ಧಪ್ರಪಿತಾಮಹಿ ಎಂಬ ಪಿತೃಮುಖ ಗಣಗಳೂ, ಈ ರೀತಿ ಪಿತೃಮಾತೃಗಣ ಪ್ರಪಿತಾಮಹಿಯರೂ, ಸಹ ನಿನಗೆ ಶಾಂತಿಯನ್ನುಂಟುಮಾಡಲಿ.

೨೦. ತಮ್ಮ ತಮ್ಮ ಆಯುಧಗಳನ್ನು ಕೈಯಲ್ಲಿಟ್ಟುಕೊಂಡು, ಜಗತ್ತನ್ನೆಲ್ಲಾ ವ್ಯಾಪಿಸಿ, ಬಲಿಯನ್ನು ಅಪೇಕ್ಷಿಸುತ್ತಾ, ಹೆಚ್ಚಾದ ಅಭಿವೃದ್ಧಿಯುಳ್ಳವರಾಗಿರುವ ಸಪ್ತ ಮಾತೃ ಸದೃಶೆಯರಾದ ಮಹಾದೇವಿಯರೆಲ್ಲರೂ ನಿನಗೆ ಶಾಂತಿಯನ್ನು ಕರುಣಿಸಲಿ.

೨೧. ನಿತ್ಯವೂ ಆದಿತ್ಯಾರಾಧನೆಯಲ್ಲಿ ಆಸಕ್ತರಾದ ಇವರೆಲ್ಲರೂ ಶಾಂತಮನಸ್ಸಿನಿಂದ ಕೂಡಿ, ನಿನ್ನ ಶಾಂತಿಗೆ ನೆರವಾಗಿ ನಿಂತು ನಿನಗೆ ಮಂಗಳವನ್ನುಂಟುಮಾಡಲಿ.

ಸರ್ವಾವಯವಮುಖ್ಯೇನ ಗಾತ್ರೇಣ ಚ ಸುಮಧ್ಯಮಾ ।
ಪೀತಶ್ಯಾಮಾತಿಸೌಮ್ಯೇನ ಸ್ನಿಗ್ಧವರ್ಣೇನ ಶೋಭನಾ ॥ ೨೨ ॥

ಲಲಾಟತಿಲಕೋಪೇತಾ ಚಂದ್ರರೇಖಾರ್ಧಧಾರಿಣೀ ।
ಚಿತ್ರಾಂಬರಧರಾ ದೇವೀ ಸರ್ವಾಭರಣಭೂಷಿತಾ ॥ ೨೩ ॥

ವರಾ ಸ್ತ್ರೀಮಯರೂಪಾಣಾಂ ಶೋಭಾ ಗುಣಸುಸಂಪದಾ ।
ಭಾವನಾಮಾತ್ರಸಂತುಷ್ಟಾ ಉಮಾದೇವೀ ವರಪ್ರದಾ ॥ ೨೪ ॥

ಸಾಕ್ಷಾದಾಗತ್ಯ ರೂಪೇಣ ಶಾಂತೇನಾಮಿತತೇಜಸಾ ।
ಶಾಂತಿಂ ಕರೋತು ತೇ ಪ್ರೀತಾ ಆದಿತ್ಯಾರಾಧನೇ ರತಾ ॥ ೨೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು ದಶಮುಖೇ ಅಗ್ನಿಕಾರ್ಯವಿಧೌ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ.

---

೨೨. ಸಮಸ್ತ ಅವಯವಗಳಲ್ಲೂ ಮುಖ್ಯಾವಯವವೆನಿಸಿ ತಕ್ಕಷ್ಟು ಕೃಶತೆಯುಳ್ಳ ಸುಂದರವಾದ ಸೊಂಟವುಳ್ಳವರಾಗಿ, ಹಳದಿ ಮತ್ತು ಕಪ್ಪುಬಣ್ಣಗಳಿಂದ ಅತಿಸೌಮ್ಯವಾಗಿ ಮಿಂಚುವಂತಹ ಆಕೃತಿಯುಳ್ಳ ಶೋಭನಾಂಗಿಯರು ನಿನಗೆ ಶಾಂತಿಯನ್ನುಂಟುಮಾಡಲಿ.

೨೩. ಹಣೆಯಲ್ಲಿ ತಿಲಕವನ್ನು ಇಟ್ಟುಕೊಂಡು, ಬಾಲಚಂದ್ರಕಲೆಯನ್ನು ಕಿರೀಟದಲ್ಲಿ ಧರಿಸಿ, ಚಿತ್ರಯುಕ್ತವಾದ ವಸ್ತ್ರವನ್ನು ಧರಿಸಿರುವವಳೂ, ಸರ್ವಾಭರಣಗಳಿಂದ ಅಲಂಕೃತೆಯೂ ಮಹಾತಾಯಿಯೂ

೨೪. ಶಾಂತಿಯಿಂದಲೂ, ಗುಣಸಂಪತ್ತಿಯಿಂದಲೂ ಕೂಡಿ, ಸ್ತ್ರೀಯರ ರೂಪಗಳಲ್ಲಿ ಅತ್ಯಂತ ಶ್ರೇಷ್ಠಳಾದವಳೂ. ಭಾವಿಸಿದ ಮಾತ್ರದಿಂದಲೇ ಸಂತೋಷಪಡತಕ್ಕವಳೂ, ವರವನ್ನು ಕೊಡುವುದರಲ್ಲಿ ಆಸಕ್ತಿಯುಳ್ಳವಳೂ ಎನಿಸಿ

೨೫. ಯಾವಾಗಲೂ ಸೂರ್ಯದೇವನ ಆರಾಧನೆಯಲ್ಲಿಯೇ ತುಂಬಾ ಆಸಕ್ತಿಯುಳ್ಳವಳಾದ ಉಮಾದೇವಿಯು, ಶಾಂತವೂ, ಅಮಿತವೂ ಆದ ತೇಜಸ್ಸಿನಿಂದ ಕೂಡಿದವಳಾಗಿ, ಪ್ರೀತಿಯಿಂದ ಸಾಕ್ಷಾತ್ತಾಗಿ ಬಂದು ನಿನಗೆ ಶಾಂತಿಯನ್ನು ಉಂಟುಮಾಡಲಿ" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ದಶಮುಖಾಗ್ನಿ ಕಾರ್ಯವಿಧಾನವೆಂಬ ನೂರಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

॥ ಅರುಣ ಉವಾಚ ॥

ಅಬಾಲೋ ಬಾಲರೂಪೇಣ ಖಟ್ವಾಂಗೀ ಶಿಖಿವಾಹನಃ ।
ಪೂರ್ವೇಣ ವದನಃ ಶ್ರೀಮಾಂಸ್ತ್ರಿಶಿಖಃ ಶಕ್ತಿಸಂಯುತಃ ॥ ೧ ॥

ಕೃತ್ತಿಕಾಯಾಶ್ಚ ರುದ್ರಸ್ಯ ಚಾಂಗೋದ್ಭೂತಃ ಸುರಾರ್ಚಿತಃ ।
ಕಾರ್ತಿಕೇಯೋ ಮಹಾತೇಜಾ ಆದಿತ್ಯವರದರ್ಪಿತಃ
ಶಾಂತಿಂ ಕರೋತು ತೇ ನಿತ್ಯಂ ಬಲಂ ಸೌಖ್ಯಂ ಚ ತೇಜಸಾ । ॥ ೨ ॥

---

## ನೂರಎಪ್ಪತ್ತೆಂಟನೆಯ ಅಧ್ಯಾಯ

೧. ಅರುಣನು ತನ್ನ ಮಾತನ್ನು ಮುಂದುವರಿಸಿ ಹೇಳುವವನಾಗಿ--"ಎಲೈ ಪಕ್ಷಿರಾಜನೇ! ವಸ್ತುತಃ ಹುಡುಗನಲ್ಲದಿದ್ದರೂ ಹುಡುಗನ ರೂಪದಿಂದ ಇರತಕ್ಕವನೂ, ಖಟ್ವಾಂಗವನ್ನು ಧರಿಸಿರುವವನೂ, ಮಯೂರವಾಹನನೂ, ಸದಾ ಪೂರ್ವಮುಖವಾಗಿರುವವನೂ, ಮಂಗಳಕರನೂ, ಮೂರುಕಡೆಯಲ್ಲಿ ಶಿಖೆಯುಳ್ಳವನೂ, ಶಕ್ತ್ಯಾಯುಧವನ್ನು ಧರಿಸಿರುವವನೂ,

೨-೩. ಕೃತ್ತಿಕೆಯರು ಮತ್ತು ರುದ್ರ ಇವರಿಂದ ಉತ್ಪನ್ನನಾದವನೂ, ದೇವಪೂಜಿತನೂ, ಮಹಾತೇಜಸ್ವಿಯೂ, ಸೂರ್ಯನ ವರದಿಂದ ಗರ್ವಿತನೂ, ಬಲಶಾಲಿಯೂ,

ಆತ್ರೇಯಿೂ ಬಲವಾರ್ದೇವ ಆರೋಗ್ಯಂ ಚ ಖಗಾಧಿಪ ॥
ಶ್ವೇತವಸ್ತ್ರಪರೀಧಾನಸ್ತ್ರ್ಯಕ್ಷಃ ಕನಕಸುಪ್ರಭಃ ॥ ೩ ॥

ಶೂಲಹಸ್ತೋ ಮಹಾಪ್ರಾಜ್ಞೋ ನಂದೀಶೋ ರವಿಭಾವಿತಃ ।
ಶಾಂತಿಂ ಕರೋತು ತೇ ಶಾಂತೋ ಧರ್ಮೇ ಚ ಮತಿಮುತ್ತಮಾಂ ॥ ೪ ॥

ಧರ್ಮೇತರಾವುಭೌ ನಿತ್ಯಮಚಲಃ ಸಂಪ್ರಯಚ್ಛತು ।
ಮಹೋದರೋ ಮಹಾಕಾಯಃ ಸ್ನಿಗ್ಧಾಂಜನಸಮಪ್ರಭಃ ॥ ೫ ॥

ಏಕದಂಷ್ಟ್ರೋತ್ಕಟೋ ದೇವೋ ಗಜವಕ್ತ್ರೋ ಮಹಾಬಲಃ ।
ನಾಗಯಜ್ಞೋಪವೀತೇನ ನಾನಾಭರಣಭೂಷಿತಃ ॥ ೬ ॥

---

ಆದ ಷಣ್ಮುಖನು ಚಂದ್ರನಂತೆ ತೇಜಸ್ಸನ್ನೂ ಬಲದಿಂದ ಕೂಡಿದ ಸೌಖ್ಯವನ್ನೂ ಆರೋಗ್ಯವನ್ನೂ, ಶಾಂತಿಯನ್ನೂ ನಿನಗೆ ಯಾವಾಗಲೂ ಉಂಟುಮಾಡಲಿ.

೪. ಬಿಳಿಯ ಬಟ್ಟೆಯನ್ನು ಉಟ್ಟಿರುವವನೂ, ತ್ರಿನೇತ್ರನೂ, ಬಂಗಾರದ ವರ್ಣದ ದೇಹವುಳ್ಳವನೂ ಶೂಲಾಯುಧಧರನೂ ಮಹಾಪ್ರಾಜ್ಞನೂ, ಸೂರ್ಯಭಾವಿತನೂ, ಶಾಂತನೂ ಆದ ನಂದೀಶನು, ನಿನಗೆ ಶಾಂತಿಯನ್ನೂ, ಉತ್ತಮವಾದ ಧರ್ಮ ಬುದ್ಧಿಯನ್ನೂ ಉಂಟುಮಾಡಲಿ.

೫. ಧರ್ಮವೂ, ತದಿತರವಾದ ಅಧರ್ಮವೂ, ಎರಡೂ ಯಾವಾಗಲೂ ನಿನಗೆ ಸ್ಥಿರವಾಗಿ ಶಾಂತಿಯನ್ನುಂಟುಮಾಡಲಿ. (ಎಂದರೆ ಅಧರ್ಮವು ದುಷ್ಫಲವನ್ನು ಕೊಟ್ಟು ಅದರಲ್ಲಿ ತ್ಯಾಜ್ಯಬುದ್ಧಿಯನ್ನು ಹುಟ್ಟಿಸಿ ತನ್ಮೂಲಕ ಬುದ್ಧಿಗೆ ಶಾಂತಿಯನ್ನು ಕೊಡುವುದೆಂಬುದು ತತ್ವಾರ್ಥ.) ಮಹೋದರನೂ, ಮಹಾಕಾಯನೂ, ಮಿಂಚುವ ಕಾಡಿಗೆಗೆ

೬. ಒಂದು ದಂತವುಳ್ಳವನೂ, ಶ್ರೇಷ್ಠನಾದದೇವನೂ ಸಮಾನವಾದ ಕಾಂತಿಯುಳ್ಳವನೂ, ಗಜಮುಖನೂ, ಮಹಾಬಲವುಳ್ಳವನೂ, ನಾಗಯಜ್ಞೋಪವೀತವನ್ನು ಧರಿಸಿದವನೂ, ನಾನಾ ಆಭರಣಗಳಿಂದ ಲಕ್ಷಿತನೂ,

ಸರ್ವಾರ್ಥಸಂಪದೋದ್ಧಾರೋ ಗಣಾಧ್ಯಕ್ಷೋ ವರಪ್ರದಃ ।
ಭೀಮಸ್ಯ ತನಯೋ ದೇವೋ ನಾಯಕೋಽಥ ವಿನಾಯಕಃ ॥
ಕರೋತು ತೇ ಮಹಾಶಾಂತಿಂ ಭಾಸ್ಕರಾರ್ಚನತತ್ಪರಃ ॥ ೭ ॥

ಇಂದ್ರನೀಲನಿಭಸ್ತ್ರ್ಯಕ್ಷೋ ದೀಪ್ತಶೂಲಾಯುಧೋದ್ಯತಃ ।
ರಕ್ತಾಂಬರಧರಃ ಶ್ರೀಮಾನ್ ಕೃಷ್ಣಾಂಗೋ ನಾಗಭೂಷಣಃ ॥ ೮ ॥

ಪಾಪಾಪನೋದಮತುಲಮಲಕ್ಷ್ಮ್ಯೋ ಮಲಶಾಸನಃ ।
ಕರೋತು ತೇ ಮಹಾಶಾಂತಿಂ ಪ್ರೀತಃ ಪ್ರೀತೇನ ಚೇತಸಾ ॥ ೯ ॥

ವರಾಂಬರಧರಾ ಕನ್ಯಾ ನಾನಾಲಂಕಾರಭೂಷಿತಾ ।
ತ್ರಿದಶಾನಾಂ ಚ ಜನನೀ ಪುಣ್ಯಾ ಲೋಕನಮಸ್ಕೃತಾ ॥ ೧೦ ॥

ಸರ್ವಸಿದ್ಧಿಕರಾ ದೇವೀ ಪ್ರಸಾದಪರಮಾಸ್ಪದಾ ।
ಶಾಂತಿಂ ಕರೋತು ತೇ ಮಾತಾ ಭುವನಸ್ಯ ಖಗಾಧಿಪ ॥ ೧೧ ॥

---

೭. ಸರ್ವಾರ್ಥಸಂಪತ್ತಿಯನ್ನು ಕೊಟ್ಟು ಉದ್ಧಾರಮಾಡುವವನೂ, ವರಪ್ರದನೂ, ಭೀಮೇಶಪುತ್ರನೂ, ಗಣನಾಯಕನೂ, ವಿನಾಯಕನೂ, ಆದ ಗಣಪತಿಯು ಸೂರ್ಯಾರ್ಚನದಲ್ಲಿ ಆಸಕ್ತನಾಗಿ ನಿನಗೆ ಮಹಾಶಾಂತಿಯನ್ನು ಉಂಟುಮಾಡಲಿ

೮. ಇಂದ್ರನೀಲ ರತ್ನಕ್ಕೆ ಸಮನಾದ ಮೂರು ಕಣ್ಣುಳ್ಳವನೂ, ಥಳಥಳಿಸುವ ಶೂಲಾಯುಧವನ್ನು ಹಿಡಿದಿರುವವನೂ, ಕೆಂಪುಬಟ್ಟೆಯನ್ನು ಧರಿಸಿದವನೂ, ಮಂಗಳಕರನೂ ಕೃಷ್ಣವರ್ಣನೂ, ನಾಗಭೂಷಣನೂ

೯. ಅಪಾರವಾದ ಪಾಪಗಳನ್ನು ಸಹ, ನಾಶಮಾಡತಕ್ಕವನೂ, ಅದೃಶ್ಯನೂ ಮಲನಿವರ್ತಕನೂ ಆದ ಪ್ರಮಥಗಣಾಧಿಪತಿಯು ಪ್ರೀತವಾದ ಮನಸ್ಸಿನಿಂದ ನಿನಗೆ ಮಹಾಶಾಂತಿಯನ್ನು ಉಂಟುಮಾಡಲಿ.

೧೦-೧೧. ಶ್ರೇಷ್ಠವಾದ ವಸ್ತ್ರವನ್ನು ಧರಿಸಿರುವವಳೂ, ಕನ್ಯಾಸ್ವರೂಪಿಣಿಯೂ, ನಾನಾಭರಣಭೂಷಿತೆಯೂ, ದೇವಮಾತೃಕೆಯೂ, ಪುಣ್ಯಕರಳೂ, ಲೋಕನಮಸ್ಕೃತೆಯೂ, ಸರ್ವಸಿದ್ಧಿಕಾರಿಣಿಯೂ, ಪ್ರಸಾದಪರಮಾಸ್ಪದವೆನಿಸಿದ ದೇವಿಯೂ ಆದ ಲೋಕಮಾತೆಯು ನಿನಗೆ ಶಾಂತಿಯನ್ನುಂಟುಮಾಡಲಿ.

ಸ್ನಿಗ್ಧಶ್ಯಾಮೇನ ವರ್ಣೇನ ಮಹಾಮಹಿಷಮರ್ದಿನೀ ।
ಧನುಶ್ಚಕ್ರಪ್ರಹರಣಾ ಖಡ್ಗಪಟ್ಟಿಶಧಾರಿಣೀ ॥ ೧೨ ॥

ಆತರ್ಜಿನ್ಯಾಯತಕರೋ ಸರ್ವೋಪದ್ರವನಾಶಿನೀ ।
ಶಾಂತಿಂ ಕರೋತು ತೇ ದುರ್ಗಾ ಭವಾನೀ ಚ ಶಿವಾ ತಥಾ ॥ ೧೩ ॥

ಅತಿಸೂಕ್ಷ್ಮೋ ಹ್ಯತಿಕ್ರೋಧಸ್ತ್ರ್ಯಕ್ಷೋ ಭೃಂಗಿರಿಟಿರ್ಮಹಾನ್ ।
ಸೂರ್ಯಾತ್ಮಕೋ ಮಹಾವೀರಃ ಸೂರ್ಯೈಕಗತಮಾನಸಃ ॥
ಸೂರ್ಯಭಕ್ತಿಕರೋ ನಿತ್ಯಂ ಶಿವಂ ತೇ ಸಂಪ್ರಯಚ್ಛತು ॥ ೧೪ ॥

ಪ್ರಚಂಡಗಣಸೈನ್ಯೇಶೋ ಮಹಾಘಂಟಾಕ್ಷಧಾರಕಃ ।
ಅಕ್ಷಮಾಲಾರ್ಪಿತಕರಶ್ಚಾಕ್ಷಚಂಡೇಶ್ವರೋ ವರಃ ॥ ೧೫ ॥

---

೧೨. ಮಿಂಚುತ್ತಿರುವ ಕಪ್ಪುಬಣ್ಣದಿಂದ ಕೂಡಿದವಳೂ, ಮತ್ತು ಮಹಾ ಮಹಿಷಾಸುರನನ್ನು ನಾಶಮಾಡಿದವಳೂ, ಧನುಸ್ಸು, ಚಕ್ರಾಯುಧ, ಖಡ್ಗ, ಪಟ್ಟಿಶ ಎಂಬ ಆಯುಧವನ್ನು ಹಿಡಿದಿರುವವಳೂ,

೧೩. ತರ್ಜನೀಬೆರಳನ್ನು, ದೀರ್ಘಮಾಡಿರುವ ಹಸ್ತವುಳ್ಳವಳೂ, ಸರ್ವೋಪದ್ರವಗಳನ್ನೂ ನಾಶಮಾಡತಕ್ಕವಳೂ ಆಗಿ, ದುರ್ಗೆ, ಭವಾನಿ, ಶಿವೆ ಎಂಬ ಹೆಸರಿನಿಂದ ಕರೆಯಲ್ಪಡುವ ದೇವಿಯು ನಿನಗೆ ಶಾಂತಿಯುಂಟುಮಾಡಲಿ.

೧೪. ಸೂರ್ಯಸ್ವರೂಪನೂ, ಮಹಾವೀರನೂ, ಸೂರ್ಯನಲ್ಲೇ ನಟ್ಟಮನಸ್ಸುಳ್ಳವನೂ, ಯಾವಾಗಲೂ ಸೂರ್ಯಭಕ್ತಿಮಾಡುವವನೂ ಆದ ಭೃಂಗಿರಿಟಿಯು ಶಾಂತಿ ಮಂಗಳವನ್ನು ಕೊಡಲಿ.

೧೫. ಪ್ರಚಂಡವಾದ ಗಣ ಸೈನ್ಯಕ್ಕೊಡೆಯನೂ, ದೊಡ್ಡಗಂಟೆ, ರುದ್ರಾಕ್ಷಿ, ಇವುಗಳನ್ನು ಧರಿಸಿರುವವನೂ, ಜಪಸರವನ್ನು ಕೈಯಲ್ಲಿ ಹಿಡಿದಿರುವವನೂ, ಶ್ರೇಷ್ಠನೂ (ಆದ ಅಕ್ಷಚಂಡೇಶ್ವರನು)

**ಚಂಡಪಾಪಹರೋ ನಿತ್ಯಂ ಬ್ರಹ್ಮಹತ್ಯಾದಿನಾಶನಃ ।**
**ಶಾಂತಿಂ ಕರೋತು ತೇ ನಿತ್ಯಮಾದಿತ್ಯಾರಾಧನೇ ರತಃ ॥**
**ಕರೋತಿ ಚ ಮಹಾಯೋಗೀ ಕಲ್ಯಾಣಾನಾಂ ಪರಂಪರಾಃ ॥ ೧೬ ॥**

**ಆಕಾಶಮಾತರೋ ದಿವ್ಯಾಸ್ತಥಾನ್ಯಾ ದೇವಮಾತರಃ ।**
**ಸೂರ್ಯಾಯಣಪರಾ ದೇವ್ಯೋ ಜಗದ್ವ್ಯಾಪ್ಯ ವ್ಯವಸ್ಥಿತಾಃ ॥**
**ಶಾಂತಿಂ ಕುರ್ವಂತು ತೇ ನಿತ್ಯಂ ಮಾತರಃ ಸುರಪೂಜಿತಾಃ ॥ ೧೭ ॥**

**ಯೇ ರುದ್ರಾ ರೌದ್ರಕರ್ಮಾಣೋ ರೌದ್ರಸ್ಥಾನನಿವಾಸಿನಃ ।**
**ಮಾತರೋ ರುದ್ರರೂಪಾಶ್ಚ ಗಣಾನಾಮಧಿಪಾಶ್ಚ ಯೇ ॥ ೧೮ ॥**

**ವಿಘ್ನಭೂತಾಸ್ತಥಾಚಾನ್ಯೇ ದಿಗ್ವಿದಿಕ್ಷು ಸಮಾಶ್ರಿತಾಃ ।**
**ಸರ್ವೇ ತೇ ಪ್ರೀತಮನಸಃ ಪ್ರತಿಗೃಹ್ಣಂ ತು ಮೇ ಬಲಿಂ ॥**
**ಸಿದ್ಧಿಂ ಕುರ್ವಂತು ತೇ ನಿತ್ಯಂ ಭಯೇಭ್ಯಃ ಪಾಂತು ಸರ್ವತಃ ॥ ೧೯ ॥**

---

೧೬. ಮತ್ತು ಯಾವಾಗಲೂ ಕ್ರೂರಪಾಪಗಳನ್ನು ನಾಶಮಾಡುವವನೂ, ಬಹ್ಮಹತ್ಯಾದಿಗಳನ್ನು ನಾಶಮಾಡುವವನೂ, ಯಾವಾಗಲೂ ಸೂರ್ಯನನ್ನು ಆರಾಧಿಸುವುದರಲ್ಲಿ ಆಸಕ್ತನೂ ಆದ ಅಕ್ಷಚಂಡೇಶ್ವರನು ನಿನಗೆ ಯಾವಾಗಲೂ ಶಾಂತಿಯನ್ನುಂಟುಮಾಡಲಿ.

೧೭. ಶ್ರೇಷ್ಠವಾದ ಆಕಾಶಮಾತೃಗಳೂ ಇತರ ದೇವಮಾತೃಗಳೂ, ಸೂರ್ಯಾಯಣದಲ್ಲಿ ಆಸಕ್ತೆಯರಾಗಿ ಜಗತ್ತನ್ನು ವ್ಯಾಪಿಸಿಕೊಂಡಿರುವ ದೇವಿಯರೂ, ದೇವತೆಗಳಿಂದ ಪೂಜಿತೆಯರಾದ ಇತರ ಮಾತೃಗಳೂ, ನಿನಗೆ ಯಾವಾಗಲೂ ಶಾಂತಿಯನ್ನು ಉಂಟುಮಾಡಲಿ.

೧೮. ರೌದ್ರಕರ್ಮವನ್ನು ಆಚರಿಸುವ ಮತ್ತು ರೌದ್ರಸ್ಥಾನದಲ್ಲಿ ವಾಸಮಾಡತಕ್ಕ ರುದ್ರರೂ, ರುದ್ರಸ್ವರೂಪೆಯರಾದ ಮಾತೃಗಳೂ, ಮತ್ತು ಗಣಗಳ ಅಧಿಪತಿಗಳೂ ನಿನಗೆ ಶಾಂತಿಯನ್ನುಂಟುಮಾಡಲಿ.

೧೯. ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ ಆಶ್ರಯಿಸಿಕೊಂಡಿರುವ ವಿಘ್ನಕಾರಿಗಳಾದ ಇತರ ಭೂತಾದಿಗಳೆಲ್ಲರೂ ಪ್ರೀತಮನಸ್ಕರಾಗಿ ನಾನು ಕೊಡುವ ಬಲಿಯನ್ನು ಸ್ವೀಕರಿಸಲಿ. ನನಗೆ ನಿತ್ಯವೂ ಪ್ರಾರ್ಥನಾಸಿದ್ಧಿಯನ್ನು ಉಂಟುಮಾಡಲಿ. ನಿತ್ಯವೂ ಸರ್ವತ್ರಭಯವನ್ನು ತಪ್ಪಿಸಲಿ. ಮತ್ತು ಯಾವಾಗಲೂ ಶಾಂತಿಯನ್ನುಂಟುಮಾಡಲಿ.

ಐಂದ್ರಾದಯೋ ಗಣಾ ಯೇ ತು ವಜ್ರಹಸ್ತಾ ಮಹಾಬಲಾಃ ।
ಹಿಮಕುಂದೇಂದುಸದೃಶಾಃ ನೀಲಕೃಷ್ಣಾಂಗಲೋಹಿತಾಃ ॥ ೨೦ ॥

ದಿವ್ಯಾಂತರಿಕ್ಷಾ ಭೌಮಾಶ್ಚ ಪಾತಾಲತಲವಾಸಿನಃ ।
ಐಂದ್ರಾಃ ಶಾಂತಿಂ ಪ್ರಕುರ್ವಂತು ಭದ್ರಾಣಿ ಚ ಪುನಃ ಪುನಃ ॥ ೨೧ ॥

ಆಗ್ನೇಯ್ಯಾಂ ಯೇ ಭೃತಾಃ ಸರ್ವೇ ಧ್ರುವಹತ್ಯಾನುಷಂಗಿಣಃ ।
ಸೂರ್ಯಾನುರಕ್ತಾ ರಕ್ತಾಭಾ ಜಪಾಸುಮನಿಭಾಸ್ತಥಾ ॥ ೨೨ ॥

ವಿರಕ್ತಲೋಹಿತಾ ದಿವ್ಯಾ ಆಗ್ನೇಯ್ಯಾಂ ಭಾಸ್ಕರಾದಯಃ ।
ಆದಿತ್ಯಾರಾಧನಪರಾ ಆದಿತ್ಯಗತಮಾನಸಾಃ ॥ ೨೩ ॥

---

೨೦. ವಜ್ರಾಯುಧವನ್ನು ಕೈಯಲ್ಲಿ ಹಿಡಿದಿರುವವರೂ, ಮಹಾಬಲವುಳ್ಳವರೂ, ಮಂಜುಗಡ್ಡೆ, ಮಲ್ಲೆಹೂ, ಚಂದ್ರ ಇವುಗಳಿಗೆ ಸದೃಶವಾದ ಬಣ್ಣವುಳ್ಳವರೂ ನೀಲವರ್ಣವುಳ್ಳವರೂ, ಕೃಷ್ಣಾಂಗವುಳ್ಳವರೂ, ಕೆಂಪುಬಣ್ಣವುಳ್ಳವರೂ,

೨೧. ಸ್ವರ್ಗ, ಅಂತರಿಕ್ಷ, ಭೂಮಿ ಇವುಗಳಲ್ಲಿ ವಾಸಿಸುವವರೂ, ಅಧಃ, ಪಾತಾಳ ನಿವಾಸಿಗಳೂ ಆದ ಐಂದ್ರ ಮೊದಲಾದ ಗಣಗಳು, ನಿನಗೆ ಶಾಂತಿಯನ್ನು ಉಂಟುಮಾಡಲಿ. ಪುನಃ ಪುನಃ ಮಂಗಳವನ್ನುಂಟುಮಾಡಲಿ.

೨೨. ಧ್ರುವಹತ್ಯಾ ಸಂಬಂಧವುಳ್ಳವರಾಗಿ, ಆಗ್ನೇಯದಿಕ್ಕಿನಲ್ಲಿರುವವರೂ ಸೂರ್ಯನಲ್ಲಿ ಅನುರಾಗವುಳ್ಳವರೂ ಆದ ಕೆಂಪು ಬಣ್ಣದವರೂ, ದಾಸವಾಳದ ಹೂವಿನ ಬಣ್ಣದವರೂ ಎಲ್ಲರೂ ನಿನಗೆ ಶಾಂತಿಯನ್ನುಂಟುಮಾಡಲಿ.

೨೩. ವಿಶೇಷ ಕೆಂಪುಬಣ್ಣದವರೂ, ಸ್ವಲ್ಪಕಡಿಮೆಯಾದ ಕೆಂಪುಬಣ್ಣದವರೂ ದಿವ್ಯರೂ ಆಗಿ, ಆಗ್ನೇಯ ದಿಕ್ಕಿನಲ್ಲಿರುತ್ತಾ ಆದಿತ್ಯಾರಾಧನದಲ್ಲಿ ಆಸಕ್ತರೂ, ಆದಿತ್ಯಾಸಕ್ತವಾದ ಮನಸ್ಸುಳ್ಳವರೂ, ಆದ ಭಾಸ್ಕರಾದಿಗಳೂ,

ಶಾಂತಿಂ ಕುರ್ವಂತು ತೇ ನಿತ್ಯಂ ಪ್ರತೀಚ್ಛಂತು ಬಲಿಂ ಮಮ ।
ಪ್ರಭಯಾದಿತ್ಯಸಮಾ ಯೇ ತು ಸತತಂ ದಂಡಪಾಣಯಃ ॥
ಆದಿತ್ಯಾರಾಧನಪರಾಃ ಶಂ ಪ್ರಯಚ್ಛಂತು ತೇ ಸದಾ ॥ ೨೪ ॥

ಐಶಾನ್ಯಾಂ ಸಂಸ್ಥಿತಾ ಯೇ ತು ಪ್ರಶಾಂತಾಃ ಶೂಲಪಾಣಯಃ ।
ಭಸ್ಮೋದ್ಧೂಲಿತದೇಹಾಶ್ಚ ನೀಲಕಂಠಾ ವಿಲೋಹಿತಾಃ ॥ ೨೫ ॥

ದಿವ್ಯಾಂತರಿಕ್ಷಾ ಭೌಮಾಶ್ಚ ಪಾತಾಲತಲವಾಸಿನಃ ।
ಸೂರ್ಯಪೂಜಾಕರಾ ನಿತ್ಯಂ ಪೂಜಯಿತ್ವಾಂಶುಮಾಲಿನಂ ॥ ೨೬ ॥

ತತಃ ಸುಪ್ರೀತಮನಸೋ ಲೋಕಪಾಲೈಃ ಸಮನ್ವಿತಾಃ ।
ಶಾಂತಿಂ ಕುರ್ವಂತು ತೇ ನಿತ್ಯಂ ಶಂ ಪ್ರಯಚ್ಛಂತು ಪೂಜಿತಾಃ ॥ ೨೭ ॥

ಅಮರಾವತೀ ಪುರೀ ನಾಮ ಪೂರ್ವಭಾಗೇ ವ್ಯವಸ್ಥಿತಾ ।
ವಿದ್ಯಾಧರಗಣಾಕೀರ್ಣಾ ಸಿದ್ಧಗಂಧರ್ವಸೇವಿತಾ ॥ ೨೮ ॥

---

೨೪. ಇವರೆಲ್ಲರೂ ನಾನು ಸಮರ್ಪಿಸುವ ಬಲಿಯನ್ನು ತೆಗೆದುಕೊಳ್ಳಲಿ, ಮತ್ತು ನಿನಗೆ ಶಾಂತಿಯನ್ನುಂಟುಮಾಡಲಿ. ಯಾವಾಗಲೂ ಕೈಯಲ್ಲಿ ದಂಡವನ್ನು ಹಿಡಿದಿರುವವರೂ, ಆದಿತ್ಯನಿಗೆ ಸಮನಾದ ಕಾಂತಿಯುಳ್ಳವರೂ, ಸೂರ್ಯಾರಾಧನದಲ್ಲಿ ಆಸಕ್ತರೂ ಆದ ಅವರು ಸರ್ವದಾ ಸುಖವನ್ನು ಕೊಡಲಿ.

೨೫. ಈಶಾನ್ಯ ದಿಕ್ಕಿನಲ್ಲಿರುವವರಾಗಿ ಪ್ರಶಾಂತರೂ, ಶೂಲಪಾಣಿಗಳೂ, ಭಸ್ಮವನ್ನು ಬಳಿದ ದೇಹವುಳ್ಳವರೂ, ಕಪ್ಪಾದ ಕೊರಳುಳ್ಳವರೂ, ವಿಶೇಷ ಲೋಹಿತ ವರ್ಣವುಳ್ಳವರೂ,

೨೬. ದಿವ್ಯರೂ, ಅಂತರಿಕ್ಷದಲ್ಲಿರತಕ್ಕವರೂ, ಭೂಮಿಯಲ್ಲೂ ಪಾತಾಳದಲ್ಲೂ ಇರತಕ್ಕವರೂ, ನಿತ್ಯವೂ ಸೂರ್ಯನನ್ನು ಪೂಜಿಸುವವರೂ, ಪ್ರೀತಿಮನಸ್ಕರೂ ಆಗಿ ಸೂರ್ಯನನ್ನು ಪೂಜಿಸಿ ಅನಂತರ

೨೭. ಲೋಕಪಾಲಕರಿಂದ ಕೂಡಿ ನಿನಗೆ ಯಾವಾಗಲೂ ಶಾಂತಿಯನ್ನುಂಟು ಮಾಡಲಿ. ಮತ್ತು ನನ್ನಿಂದ ಪೂಜಿತರಾಗಿ ಅವರು ನಿನಗೆ ಸುಖ ಕೊಡಲಿ.

೨೮. ವಿದ್ಯಾಧರರ ಗುಂಪುಗಳಿಂದ ತುಂಬಿದುದೂ, ಸಿದ್ಧರು, ಗಂಧರ್ವರು ಇವರುಗಳಿಂದ ಸೇವಿತವೂ, ರತ್ನ ಪ್ರಕಾಶಗಳಿಂದ ಮನೋಹರವೂ, ಮಹಾರತ್ನಗಳಿಂದ ಶೋಭಾಯಮಾನವೂ ಆದ ಅಮರಾವತಿಯೆಂಬ ಪಟ್ಟಣವು ಪೂರ್ವದಿಗ್ಭಾಗದಲ್ಲಿದೆ

ರತ್ನಪ್ರಾಕಾರರುಚಿರಾ ಮಹಾರತ್ನೋಪಶೋಭಿತಾ ।
ತತ್ರ ದೇವಪತಿಃ ಶ್ರೀಮಾನ್ ವಜ್ರಪಾಣಿರ್ಮಹಾಬಲಃ ॥
ಗೋಪತಿರ್ಗೋಸಹಸ್ರೇಣ ಶೋಭಮಾನೇನ ಶೋಭತೇ ॥ ೨೯ ॥

ಐರಾವತಗಜಾರೂಢೋ ಗೈರಿಕಾಭೋ ಮಹಾದ್ಯುತಿಃ ।
ದೇವೇಂದ್ರಃ ಸತತಂ ಹೃಷ್ಟ ಆದಿತ್ಯಾರಾಧನೇ ರತಃ ॥ ೩೦ ॥

ಸೂರ್ಯಜ್ಞಾನೈಕಪರಮಃ ಸೂರ್ಯಭಕ್ತಿಸಮನ್ವಿತಃ ।
ಸೂರ್ಯಪ್ರಣಾಮಪರಮಃ ಶಾಂತಿಂ ತೇಽದ್ಯಪ್ರಯಚ್ಛತು ॥ ೩೧ ॥

ಆಗ್ನೇಯದಿಗ್ವಿಭಾಗೇ ತು ಪುರೀ ತೇಜಸ್ವತೀ ಶುಭಾ ।
ನಾನಾದೇವಗಣಾಕೀರ್ಣಾ ನಾನಾರತ್ನೋಪಶೋಭಿತಾ ॥ ೩೨ ॥

ತತ್ರ ಜ್ವಾಲಾಸಮಾಕೀರ್ಣೋ ದೀಪ್ತಾಂಗಾರಸಮದ್ಯುತಿಃ ।
ಪುರಗೋ ದಹನೋ ದೇವೋ ಜ್ವಲನಃ ಪಾಪನಾಶನಃ ॥ ೩೩ ॥

---

೨೯. ಅಲ್ಲಿ ದೇವತೆಗಳ ಒಡೆಯನೂ, ಶ್ರೀಮಂತನೂ, ವಜ್ರಾಯುಧವನ್ನು ಕೈಯಲ್ಲಿ ಧರಿಸಿದವನೂ, ಮಹಾಬಲಶಾಲಿಯೂ, ಸ್ವರ್ಗಾಧಿಪತಿಯೂ, (ಗೋಪತಿ) ಶೋಭಾಯಮಾನವಾದ ಸಹಸ್ರನೇತ್ರಗಳಿಂದ ಅಲಂಕೃತನೂ ಆಗಿ

೩೦. ಐರಾವತವೆಂಬ ಆನೆಯನ್ನು ಏರಿದವನೂ,ಗೈರಿಕಕಾಂತಿಯಂತೆ ಹೆಚ್ಚಾಗಿ ಕಾಂತಿಯುಳ್ಳವನೂ, ಸದಾ ಸಂತೋಷಿಯೂ, ಸೂರ್ಯಾರಾಧನೆಯಲ್ಲಿ ಆಸಕ್ತನೂ,

೩೧. ಸೂರ್ಯಜ್ಞಾನವೊಂದೇ ಮುಖ್ಯವಾಗಿ ಉಳ್ಳವನೂ, ಸೂರ್ಯಭಕ್ತಿಯಿಂದ ಕೂಡಿದವನೂ, ಸೂರ್ಯನಮಸ್ಕಾರವೇ ಮುಖ್ಯವಾಗಿ ಉಳ್ಳವನೂ ಆಗಿರುವ ಇಂದ್ರನು ನಿನಗೆ ಶಾಂತಿಯನ್ನು ಕೊಡಲಿ

೩೨. ಆಗ್ನೇಯ ದಿಗ್ವಿಭಾಗದಲ್ಲಿ ತೇಜಸ್ವತೀ (ತೇಜೋವತೀ) ಎಂಬ ಪಟ್ಟಣವಿದೆ. ಅದು ನಾನಾದೇವಗಣದಿಂದ ವ್ಯಾಪ್ತವಾಗಿಯೂ, ನಾನಾರತ್ನಗಳಿಂದ ಶೋಭಿತವಾಗಿಯೂ ಇದೆ.

೩೩. ಅಲ್ಲಿ ಜ್ವಾಲೆಗಳಿಂದ ವ್ಯಾಪ್ತನೂ, ಉರಿಯುವ ಕೆಂಡಕ್ಕೆ ಸಮಾನವಾದ ಕಾಂತಿಯುಳ್ಳವನೂ, (ನೀಲಧ್ವಜ) ಪಟ್ಟಣವನ್ನು ಹೊಂದಿರುವವನೂ, ಸುಡುವ ಸ್ವಭಾವವುಳ್ಳವನೂ, ಪಾಪನಾಶಕನೂ, ಆದ ಅಗ್ನಿದೇವನಿದ್ದಾನೆ.

ಆದಿತ್ಯಾರಾಧನರತ ಆದಿತ್ಯಗತಮಾನಸಃ ।
ಶಾಂತಿಂ ಕರೋತು ತೇ ದೇವಸ್ತಥಾ ಪಾಪಪರಿಕ್ಷಯಂ ॥ ೩೪ ॥

ವೈವಸ್ವತೀ ಪುರೀ ರಮ್ಯಾ ದಕ್ಷಿಣೇನ ಮಹಾತ್ಮನಃ ।
ಸುರಾಸುರಶತಾಕೀರ್ಣಾ ನಾನಾರತ್ನೋಪಶೋಭಿತಾ ॥ ೩೫ ॥

ತತ್ರ ಕುಂದೇಂದುಸಂಕಾಶೋ ಹರಿಪಿಂಗಲಲೋಚನಃ ।
ಮಹಾಮಹಿಷಮಾರೂಢಃ ಕೃಷ್ಣಸ್ರಗ್ವಸ್ತ್ರಭೂಷಣಃ ॥ ೩೬ ॥

ಅಂತಕೋऽಥ ಮಹಾತೇಜಾಃ ಸೂರ್ಯಧರ್ಮಪರಾಯಣಃ ।
ಆದಿತ್ಯಾರಾಧನಪರಃ ಕ್ಷೇಮಾರೋಗ್ಯೇ ದದಾತು ತೇ ॥ ೩೭ ॥

---

೩೪. ಅವನು ಸೂರ್ಯಾರಾಧನೆಯಲ್ಲಿ ಆಸಕ್ತನೂ, ಸೂರ್ಯನನ್ನು ಹೊಂದಿದ ಮನಸ್ಸುಳ್ಳವನೂ, ಆಗಿ ನಿನಗೆ ಶಾಂತಿಯನ್ನುಂಟುಮಾಡಲಿ. ಮತ್ತು ನಿನ್ನ ಪಾಪವನ್ನು ಶಮನಮಾಡಲಿ.

೩೫. ಆ ಮಹಾತ್ಮನಿಗೆ ದಕ್ಷಿಣದಲ್ಲಿ ರಮ್ಯವಾದ ವೈವಸ್ವತೀ ಎಂಬ ಪಟ್ಟಣವಿದೆ. ಅದು ನೂರಾರು ಸಂಖ್ಯೆಯ ಸುರರ ಮತ್ತು ಅಸುರರ ಸಮೂಹದಿಂದ ವ್ಯಾಪ್ತವಾದುದು.

೩೬. ಮತ್ತು ನಾನಾರತ್ನಗಳಿಂದ ಶೋಭಿತವಾದದೂ ಆಗಿದೆ. ಆ ಪಟ್ಟಣದಲ್ಲಿ ಮಲ್ಲಿಯಹೂ ಚಂದ್ರ ಇದರಂತೆ ಪ್ರಕಾಶಿಸುವವನೂ, ಸಿಂಹದಂತೆ ಪಿಂಗವರ್ಣದ ಕಣ್ಣುಳ್ಳವನೂ, ದೊಡ್ಡಕೋಣವನ್ನು ಏರಿ ಕುಳಿತಿರುವವನೂ,

೩೭. ಕಪ್ಪುವಸ್ತ್ರಗಳು, ಒಡವೆಗಳು, ನೀಲಪುಷ್ಪಮಾಲಿಕೆಗಳು ಇವುಗಳಿಂದ ಅಲಂಕರಿಸಲ್ಪಟ್ಟವನೂ, ಮಹಾತೇಜಸ್ವಿಯೂ, ಅಂತಕ ಎಂಬ ಹೆಸರುಳ್ಳವನೂ, ಸತ್ಯಧರ್ಮಗಳಲ್ಲಿ ಆಸಕ್ತನೂ, ಸೂರ್ಯಾರಾಧನೆಯಲ್ಲಿ ಆಸಕ್ತನೂ ಆದ ಯಮನು ನಿನಗೆ ಕ್ಷೇಮವನ್ನುಂಟುಮಾಡಲಿ. ಮತ್ತು ಆರೋಗ್ಯವನ್ನು ಕೊಡಲಿ.

ನೈಋತೇ ದಿಗ್ವಿಭಾಗೇ ತು ಪುರೀ ಕೃಷ್ಣೇತಿ ವಿಶ್ರುತಾ ।
ಮೋಹರಕ್ಷೋಗಣಾಶೌಚಪಿಶಾಚಪ್ರೇತಸಂಕುಲಾ ॥ ೩೮ ॥

ತತ್ರ ನಿಭೋದೇವೋ ರಕ್ತಸ್ರಗ್ವಸ್ತ್ರಭೂಷಣಃ ।
ಖಡ್ಗಪಾಣಿರ್ಮಹಾತೇಜಾಃ ಕರಾಲವದನೋಜ್ಜ್ವಲಃ ॥ ೩೯ ॥

ರಕ್ಷೇಂದ್ರೋ ವಸತೇ ನಿತ್ಯಮಾದಿತ್ಯಾರಾಧನೇ ರತಃ ।
ಕರೋತು ತೇ ಸದಾ ಶಾಂತಿಂ ಧನಂ ಧಾನ್ಯಂ ಪ್ರಯಚ್ಛತು ॥ ೪೦ ॥

ಪಶ್ಚಿಮೇ ತು ದಿಶೋ ಭಾಗೇ ಪುರೀ ಶುದ್ಧಾವತೀ ಸದಾ ।
ನಾನಾಭೋಗಿಸಮಾಕೀರ್ಣಾ ನಾನಾಕಿನ್ನರಸೇವಿತಾ ॥ ೪೧ ॥

ತತ್ರ ಕುಂದೇಂದುಸಂಕಾಶೋ ಹರಿಪಿಂಗಲಲೋಚನಃ ।
ಶಾಂತಿಂ ಕರೋತು ತೇ ಪ್ರೀತಃ ಶಾಂತಾ ಶಾಂತೇನ ಚೇತಸಾ ॥ ೪೨ ॥

---

೩೮. ನೈಋತ್ಯ ದಿಗ್ಭಾಗದಲ್ಲಿ ಕೃಷ್ಣಾ ಎಂಬ ಪ್ರಸಿದ್ಧ ಪಟ್ಟಣವಿದೆ. ಅದರಲ್ಲಿ ಮುಗ್ಧರಾದ ರಾಕ್ಷಸರು ವೃಂದವಾಗಿ ತುಂಬಿದ್ದಾರೆ. ಮತ್ತು ಅದು ಅಶೌಚಯುಕ್ತಗಳಾದ ಪಿಶಾಚಗಳು, ಪ್ರೇತಗಳು ಇವರುಗಳಿಂದ ವ್ಯಾಪ್ತವಾಗಿದೆ.

೩೯-೪೦. ಅಲ್ಲಿ ಕುಂದಪುಷ್ಪಕ್ಕೆ ಸಮಾನವಾದ ಕಾಂತಿಯುಕ್ತನೂ, ಕೆಂಪು ಬಣ್ಣದ ಹಾರಗಳು, ವಸ್ತ್ರಗಳು, ಆಭರಣಗಳು, ಇವನ್ನು ಉಳ್ಳವನೂ, ಖಡ್ಗಪಾಣಿಯೂ, ಮಹಾತೇಜಸ್ವಿಯೂ, ಕ್ರೂರಮುಖನೂ, ರಾಕ್ಷಸಾಧಿಪನೂ ಆದ ನಿಋಋತಿಯು ಯಾವಾಗಲೂ ಸೂರ್ಯಾರಾಧನೆಯಲ್ಲಿ ಆಸಕ್ತನಾಗಿ ವಾಸಿಸುತ್ತಾನೆ. ಅವನು ನಿನಗೆ ಯಾವಾಗಲೂ ಶಾಂತಿಯನ್ನೂ, ಧನವನ್ನೂ, ಧಾನ್ಯವನ್ನೂ ಕೊಡಲಿ.

೪೧. ಪಶ್ಚಿಮ ದಿಗ್ಭಾಗದಲ್ಲಿ ಶುದ್ಧಾವತೀ ಎಂಬ ಪ್ರಸಿದ್ಧ ಪಟ್ಟಣವಿದೆ. ಅದು ಅನೇಕ ಭೋಗಯುಕ್ತರಾದವರಿಂದ ವ್ಯಾಪ್ತವೂ, ಅನೇಕ ಕಿನ್ನರರಿಗೆ ವಾಸಸ್ಥಾನವೂ ಆಗಿದೆ.

೪೨. ಅಲ್ಲಿ ಕುಂದಪುಷ್ಪದಂತೆ ಕಾಂತಿಯುಕ್ತನೂ, ಸಿಂಹದಂತೆ ಪಿಂಗಾಕ್ಷನೂ, ಪಶ್ಚಿಮದಿಕ್ಪತಿಯೂ ಆದ ವರುಣನು ಪ್ರೀತನೂ ಶಾಂತನೂ ಆಗಿ, ಶಾಂತವಾದ ಮನಸ್ಸಿನಿಂದ ಕೂಡಿ ನಿನಗೆ ಶಾಂತಿಯನ್ನು ಕೊಡಲಿ.

ಯಶೋವತೀ ಪುರೀ ರಮ್ಯಾ ಐಶಾನೀಂ ದಿಶಮಾಶ್ರಿತಾ ।
ನಾನಾಗಣಸಮಾಕೀರ್ಣಾ ನಾನಾಕೃತಿಶುಭಾಲಯಾ ॥
ತೇಜಃ ಪ್ರಾಕಾರಪರ್ಯಂತಾ ಅನೌಪಮ್ಯಾಸದೋಜ್ವಲಾ ॥ ೪೩ ॥

ತತ್ರ ಕುಂದೇಂದುಸಂಕಾಶಶ್ಚಾಂಬುಜಾಕ್ಷೋವಿಭೂಷಿತಃ ।
ತ್ರಿನೇತ್ರಃ ಶಾಂತರೂಪಾತ್ಮಾ ಅಕ್ಷಮಾಲಾಢ್ಯಕಂಧರಃ ॥
ಈಶಾನಃ ಪರಮೋ ದೇವಃ ಸದಾ ಶಾಂತಿಂ ಪ್ರಯಚ್ಛತು ॥ ೪೪ ॥

ಭೂಲೋಕೇ ತು ಭುವರ್ಲೋಕೇ ನಿವಸಂತಿ ಚ ಯೇ ಸದಾ ।
ದೇವದೇವಾಃ ಸು ಭಾಯುಕ್ತಾಃ ಶಾಂತಿಂ ಕುರ್ವಂತು ತೇ ಸದಾ ॥ ೪೫ ॥

ಮಹರ್ಲೋಕೇ ಜನೋಲೋಕೇ ತಪೋಲೋಕೇ ಗತಾಶ್ಚ ಯೇ ।
ತೇ ಸರ್ವೇ ಮುದಿತಾ ದೇವಾಃ ಶಾಂತಿಂ ಕುರ್ವಂತು ತೇ ಸದಾ ॥ ೪೬ ॥

---

೪೩. ಈಶಾನ್ಯದಿಕ್ಕನ್ನು ಆಶ್ರಯಿಸಿ ಯಶೋವತಿಯೆಂಬ ಪಟ್ಟಣವಿದೆ. ಅದು ನಾನಾಪ್ರಮಥಗಣಗಳಿಂದ ಕೂಡಿದುದೂ, ನಾನಾಆಕಾರದ ಶುಭಕರಗಳಾದ ಆಲಯಗಳುಳ್ಳದೂ, ತೇಜೋಯುಕ್ತವಾದ ಪ್ರಾಕಾರವುಳ್ಳದೂ ಆಗಿದೆ.

೪೪. ಅಲ್ಲದೆ ಹೋಲಿಕೆ ಇಲ್ಲದುದೂ, ಸದಾ ಪ್ರಕಾಶವುಳ್ಳದೂ ಆಗಿದೆ. ಅಲ್ಲಿರುವನಾಗಿ ಕುಂದಪುಷ್ಪ, ಚಂದ್ರ ಇವುಗಳಂತೆ ಕಾಂತಿಯುತನೂ, ಕಮಲದಂತೆ ಕಣ್ಣುಳ್ಳವನೂ ನಾಗಭೂಷಣನೂ, ತ್ರಿನೇತ್ರನೂ, ಶಾಂತವಾದ ಆತ್ಮವುಳ್ಳವನೂ ರುದ್ರಾಕ್ಷಮಾಲೆಯನ್ನು ಧರಿಸಿದ ಕೊರಳುಳ್ಳವನೂ, ಶ್ರೇಷ್ಠನೂ ಎನಿಸಿ ಶೋಭಿಸುತ್ತಿರುವ ಈಶಾನನು ನಿನಗೆ ಶಾಂತಿಯನ್ನು ಕೊಡಲಿ.

೪೫. ಭೂಲೋಕದಲ್ಲಿಯೂ, ಭುವರ್ಲೋಕದಲ್ಲಿಯೂ ಸದಾ ವಾಸಿಸತಕ್ಕವರೂ ಮತ್ತು ಒಳ್ಳೆಯ ಕಾಂತಿಯುಕ್ತರೂ ಆದ ದೇವತೆಗಳೂ ಕೂಡ ನಿನಗೆ ಸದಾ ಶಾಂತಿಯನ್ನು ಉಂಟುಮಾಡಲಿ.

೪೬. ಮಹರ್ಲೋಕ ಜನೋಲೋಕ, ತಪೋಲೋಕಗಳಲ್ಲಿರತಕ್ಕ ದೇವತೆಗಳೆಲ್ಲರೂ ಸಂತೋಷಯುಕ್ತರಾಗಿ ನಿನಗೆ ಯಾವಾಗಲೂ ಶಾಂತಿಯನ್ನುಂಟುಮಾಡಲಿ,

**ಸರಸ್ವತೀ ಸೂರ್ಯಭಕ್ತಾ ಶಾಂತಿಂ ಸಾ ವಿದಧಾತು ತೇ ।**
**ಚಾರು ಚಾಮೀಕರಸ್ಥಾ ಯಾ ಸರೋಜಕರಪಲ್ಲವಾ ॥**
**ಸೂರ್ಯಭಕ್ತ್ಯಾಶ್ರಿತಾ ದೇವೀ ವಿಭೂತಿಂ ತೇ ಪ್ರಯಚ್ಛತು ॥ ೪೭ ॥**

**ಹರೇಣ ಸುವಿಚಿತ್ರೇಣ ಭಾಸ್ವತ್ಕನಕಮೇಖಲಾ ।**
**ಅಪರಾಜಿತಾ ಸೂರ್ಯಭಕ್ತಾ ಕರೋತು ವಿಜಯಂ ತವ ॥ ೪೮ ॥**

**ಇತೀ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮ ವರ್ಣನಂ ನಾಮ ಅಷ್ಟಸಪ್ತತ್ಯುತ್ತರ ಶತತಮೋಽಧ್ಯಾಯಃ.**



---

೪೭. ಸ್ವರ್ಣಪೀಠದಲ್ಲಿ ಕುಳಿತಿರುವವಳೂ, ಕೋಮಲವಾದ ಕೈಯಲ್ಲಿ ಕಮಲವನ್ನು ಧರಿಸಿದವಳೂ, ಸೂರ್ಯಭಕ್ತೆಯೂ, ಸೂರ್ಯಭಕ್ತಿಯಿಂದ ಯುಕ್ತಳೂ ಆದ ಸರಸ್ವತೀದೇವಿಯು ನಿನಗೆ ಶಾಂತಿಯನ್ನು ಕೊಡಲಿ. ಮತ್ತು ಐಶ್ವರ್ಯವನ್ನು ಕೊಡಲಿ

೪೮. ಪ್ರಕಾಶಮಾನವಾದ ಚಿನ್ನದ ಒಡ್ಯಾಣವುಳ್ಳವಳೂ, ಸೂರ್ಯಭಕ್ತೆಯೂ ಆದ ಅಪರಾಜಿತಾದೇವಿಯು ಸುವಿಚಿತ್ರನಾದ ಹರನೊಡನೆ ಕೂಡಿ ನಿನಗೆ ವಿಜಯವನ್ನು ಉಂಟುಮಾಡಲಿ" ಎಂಬದಾಗಿ ಅರುಣನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೌರಧರ್ಮ ವರ್ಣನೆಯೆಂಬ ನೂರಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕೋನಾಶೀತ್ಯುತ್ತರಶತತಮೋಽಧ್ಯಾಯಃ

॥ ಅರುಣ ಉವಾಚ ॥

ಕೃತ್ತಿಕಾ ಪರಮಾ ದೇವೀ ರೋಹಿಣೀ ವರಾನನಾ ।
ಶ್ರೀಮನ್ಮೃಗಶಿರೋ ಭದ್ರಾ ಆರ್ದ್ರಾಚಾಪ್ಯಪರೋಜ್ಜ್ವಲಾ ॥ ೧ ॥

ಪುನರ್ವಸುಸ್ತಥಾ ಪುಷ್ಯ ಆಶ್ಲೇಷಾ ಚ ತಥಾಧಿಪ ।
ಸೂರ್ಯಾರ್ಚನರತಾ ನಿತ್ಯಂ ಸೂರ್ಯಭಾವಾನುಭಾವಿತಾಃ ॥ ೨ ॥

ಅರ್ಚಯಂತಿ ಸದಾ ದೇವಮಾದಿತ್ಯಂ ಪೂರ್ವತಃ ಸದಾ ।
ನಕ್ಷತ್ರಮಾತರೋ ಹ್ಯೇತಾಃ ಪ್ರಭಾಮಾಲಾವಿಭೂಷಿತಾಃ ॥ ೩ ॥

---

## ನೂರಎಪ್ಪತ್ತೊಂಭತ್ತನೆಯ ಅಧ್ಯಾಯ

೧. ಅರುಣನು ತನ್ನ ಮಾತನ್ನು ಮುಂದುವರಿಸಿ ಗರುಡನಿಗೆ ಶಾಂತಿಯನ್ನು ತೋರುವವನಾಗಿ ಹೇಳುತ್ತಾನೆ—ಅಯ್ಯಾ ಪಕ್ಷಿರಾಜನೇ! ಶ್ರೇಷ್ಠಳಾದ ಕೃತ್ತಿಕೆ ಶ್ರೇಷ್ಠಮುಖವುಳ್ಳ ರೋಹಿಣಿ, ಮಂಗಳಕರವಾದ ಮೃಗಶಿರೆ, ಪ್ರಕಾಶಮಾನವಾದ ಆರ್ದ್ರೆ.

೨. ಮತ್ತು ಕಾಂತಿಶ್ರೇಣಿಯಿಂದ ಅಲಂಕೃತಗಳಾದ ಪುನರ್ವಸು, ಪುಷ್ಯ, ಆಶ್ಲೇಷ ಎಂಬ ಹೆಸರುಳ್ಳ ಈ ನಕ್ಷತ್ರಾಭಿಮಾನಿ ಮಾತೃದೇವತೆಗಳು,

೩. ಸೂರ್ಯಾರಾಧನಾಸಕ್ತರೂ, ಸೂರ್ಯನಲ್ಲಿ ಮನಸ್ಸಿಟ್ಟವರೂ, ಸಂಸ್ಕಾರಹೊಂದಿದವರೂ ಆಗಿ, ಯಾವಾಗಲೂ ಪೂರ್ವದಿಕ್ಕಿನಲ್ಲಿರುತ್ತಾ ಆದಿತ್ಯನನ್ನು ಪೂಜಿಸುತ್ತಾರೆ.

ಮಘಾ ಸರ್ವಗುಣೋಪೇತಾ ಪೂರ್ವಾಚೈವ ಚ ಫಲ್ಗುನೀ ।
ಉತ್ತರಾಫಲ್ಗುನೀ ಚೈವ ಹಸ್ತಶ್ಚಿತ್ರಾ ತಥೈವ ಚ ॥
ಸ್ವಾತೀ ವಿಶಾಖಾ ವರದಾ ದಕ್ಷಿಣಾಂ ದಿಶಮಾಶ್ರಿತಾಃ ॥ ೪ ॥

ಅರ್ಚಯಂತಿ ಸದಾ ದೇವಮಾದಿತ್ಯಂ ಸುರಪೂಜಿತಂ ।
ತವಾಪಿ ಶಾಂತಿಕಂ ದ್ಯೋತಂ ಕುರ್ವಂತು ಗಗನೋದಿತಾಃ ॥ ೫ ॥

ಅನುರಾಧಾ ತಥಾ ಜ್ಯೇಷ್ಠಾ ಮೂಲಂ ಸೂರ್ಯಪುರಃಸದಾ ।
ಪೂರ್ವಾಷಾಢಾ ತಥಾ ವೀರ್ಯಾ ಆಷಾಢಾಚೋತ್ತರಾ ತಥಾ ॥ ೬ ॥

ಅಭಿಜಿನ್ನಾಮ ನಕ್ಷತ್ರಂ ಶ್ರವಣಂ ಚ ಬಹುಶ್ರುತಂ ।
ಏತಾಃ ಪಶ್ಚಿಮತೋ ದೀಪ್ತಾ ರಾಜಂತೇ ಚಾನುಮೂರ್ತಯಃ ॥ ೭ ॥

ಭಾಸ್ಕರಂ ಪೂಜಯಂತ್ಯೇತಾಃ ಸರ್ವಕಾಲಂ ಸುಭಾವಿತಾಃ ।
ಶಾಂತಿಂ ಕುರ್ವಂತು ತೇ ನಿತ್ಯಂ ವಿಭೂತಿಂ ಚ ಮಹರ್ಧಿಕಾಂ ॥ ೮ ॥

---

೪. ಸರ್ವಗುಣಯುಕ್ತರಾದ ಮುಖ, ಪೂರ್ವಫಲ್ಗುನೀ (ಪುಬ್ಬ), ಉತ್ತರ ಫಲ್ಗುನೀ (ಉತ್ತರ) ಹಸ್ತ, ಚಿತ್ತ, ಸ್ವಾತಿ, ವರಪ್ರದವಾದ ವಿಶಾಖಾ, ಎಂಬ ನಕ್ಷತ್ರಾಭಿಮಾನಿದೇವತಾಮಾತೃಗಳು, ದಕ್ಷಿಣದಿಕ್ಕನ್ನು ಆಶ್ರಯಿಸಿಕೊಂಡು ಇರುತ್ತಾ

೫. ಸುರಪೂಜಿತನಾದ ಆದಿತ್ಯದೇವನನ್ನು ಸದಾ ಪೂಜಿಸುತ್ತಾರೆ. ಗಗನದಲ್ಲಿ ಉದಿತವಾದ ಈ ನಕ್ಷತ್ರಗಳ ಅಭಿಮಾನ ದೇವತೆಗಳು ನಿನಗೆ ಶಾಂತಿಯನ್ನೂ ಪ್ರಕಾಶವನ್ನೂ ಉಂಟುಮಾಡಲಿ.

೬–೭. ಅನೂರಾಧಾ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಮಹಾವೀರ್ಯವತ್ತಾದ ಉತ್ತರಾಷಾಢ, ಅಭಿಜಿತ್, ಬಹುಶ್ರುತವಾದ ಶ್ರವಣ, ಈ ನಕ್ಷತ್ರಾಭಿಮಾನ ದೇವತೆಗಳು ದೇಹಧಾರಿಗಳಾಗಿ ಸೂರ್ಯನ ಇದುರಾಗಿ ಪಶ್ಚಿಮದಿಕ್ಕಿನಲ್ಲಿ ಪ್ರಕಾಶಮಾನರಾಗಿರುತ್ತಾರೆ.

೮. ಸರ್ವಕಾಲದಲ್ಲೂ ಸೂರ್ಯನನ್ನು ಚೆನ್ನಾಗಿ ಭಾವಿಸಿ ಪೂಜಿಸುವ ಇವರು ನಿನಗೆ ಯಾವಾಗಲೂ ಶಾಂತಿಯನ್ನೂ, ಸಮೃದ್ಧಿಯಾದ ಐಶ್ವರ್ಯವನ್ನೂ ಉಂಟುಮಾಡಲಿ.

**ಧನಿಷ್ಠಾ ಶತತಾರಾ ತು ಪೂರ್ವಾಭಾದ್ರಪದಾ ತಥಾ ॥ ೯ ॥**

**ಉತ್ತರಾಭಾದ್ರರೇವತ್ಯೌ ಚಾಶ್ವಿನೀ ಚ ಮಹಾಮತೇ ।**
**ಭರಣೀ ಚ ಮಹಾದೇವೀ ನಿತ್ಯಮುತ್ತರತಃ ಸ್ಥಿತಾಃ ॥ ೧೦ ॥**

**ಸೂರ್ಯಾರ್ಚನರತಾ ನಿತ್ಯಮಾದಿತ್ಯಗತಮಾನಸಾಃ ।**
**ಶಾಂತಿಂ ಕುರ್ವಂತು ತೇ ನಿತ್ಯಂ ವಿಭೂತಿಂ ಚ ಮಹರ್ಧಿಕಾಂ ॥ ೧೧ ॥**

**ಮೇಷೋ ಮೃಗಾಧಿಪಃ ಸಿಂಹೋ ಧನುರ್ದೀಪ್ತಿಮತಾಂ ವರಃ ।**
**ಪೂರ್ವತೋ ಭಾಸಯಂತ್ಯೇತೇ ಸೂರ್ಯಯೋಗಪರಾಃ ಶುಭಾಃ ॥**
**ಶಾಂತಿಂ ಕುರ್ವಂತು ತೇ ನಿತ್ಯಂ ಭಕ್ತ್ಯಾ ಸೂರ್ಯಪದಾಂಬುಜೇ ॥ ೧೨ ॥**

**ವೃಷಃ ಕನ್ಯಾ ಚ ಪರಮಾ ಮಕರಶ್ಚಾಪಿ ಬುದ್ಧಿಮಾನ್ ।**
**ಏತೇ ದಕ್ಷಿಣಭಾಗೇ ತು ಪೂಜಯಂತಿ ರವಿಂ ಸದಾ ॥**
**ಭಕ್ತ್ಯಾ ಪರಮಯಾ ನಿತ್ಯಂ ಶಾಂತಿಂ ಕುರ್ವಂತು ತೇ ಸದಾ ॥ ೧೩ ॥**

---

೯. ಧನಿಷ್ಠಾ, ಶತಭಿಷಾ, ಮತ್ತು ಪೂರ್ವಾಭದ್ರಾ, ಉತ್ತರಾಭದ್ರಾ, ರೇವತಿ ಈ ನಕ್ಷತ್ರಗಳ ಅಭಿಮಾನದೇವತೆಗಳು,

೧೦. ಅಶ್ವಿನಿ ನಕ್ಷತ್ರ ಮತ್ತು ಮಹಾದೇವಿಯಾದ ಭರಣೀನಕ್ಷತ್ರ ಈ ಅಭಿಮಾನದೇವತೆಗಳು ಇವರು ಯಾವಾಗಲೂ ಉತ್ತರದಿಕ್ಕಿನಲ್ಲಿರುವರು.

೧೧. ಇವರು ಯಾವಾಗಲೂ ಸೂರ್ಯಾರ್ಚನದಲ್ಲಿ ಆಸಕ್ತರೂ, ಸೂರ್ಯಗತವಾದ ಮನಸ್ಸುಳ್ಳವರೂ ಆಗಿ, ನಿನಗೆ ಶಾಂತಿಯನ್ನೂ, ಸಮೃದ್ಧಿಯನ್ನೂ, ಐಶ್ವರ್ಯವನ್ನೂ ಸದಾ ಉಂಟುಮಾಡಲಿ.

೧೨. ಮೇಷ, ಸಿಂಹ, ಪ್ರಕಾಶಯುಕ್ತವಾದ ಧನುಸ್ಸು ಈ ರಾಶಿಗಳ ಅಭಿಮಾನ ದೇವತೆಗಳು ಸೂರ್ಯನಿಗೆ ಪೂರ್ವದಿಕ್ಕಿನಲ್ಲಿ ಪ್ರಕಾಶಿಸುತ್ತಾರೆ. ಇವರು ಸೂರ್ಯನಲ್ಲಿ ಆಸಕ್ತರೂ, ಶುಭಕರವಾದ ಸೂರ್ಯಪಾದಕಮಲದಲ್ಲಿ ಭಕ್ತಿಯುಕ್ತರೂ ಆಗಿ ನಿನಗೆ ಶಾಂತಿಯನ್ನುಂಟುಮಾಡಲಿ.

೧೩. ವೃಷಭ, ಕನ್ಯಾ, ಮಕರ ಈ ರಾಶಿಗಳ ಅಭಿಮಾನದೇವತೆಗಳು ದಕ್ಷಿಣ ದಿಗ್ಭಾಗದಲ್ಲಿದ್ದು ಸೂರ್ಯನನ್ನು ಪೂಜೆಮಾಡುತ್ತಾರೆ. ಶ್ರೇಷ್ಠವಾದ ಸೂರ್ಯಭಕ್ತಿಯಿಂದ ಕೂಡಿದ ಇವರು ಯಾವಾಗಲೂ ನಿನಗೆ ಶಾಂತಿಯನ್ನುಂಟುಮಾಡಲಿ.

ಮಿಥುನಂ ಚ ತುಲಾ ಕುಂಭಃ ಪಶ್ಚಿಮೇ ಚ ವ್ಯವಸ್ಥಿತಾಃ ।
ಕಟಕೋ ವೃಶ್ಚಿಕೋ ಮೀನಮುತ್ತರೇ ಸತತಂ ಸ್ಥಿತಾಃ ॥
ಜಪಂತೇತೇ ಸದಾಕಾಲಮಾದಿತ್ಯಂ ಗ್ರಹನಾಯಕಂ ॥ ೧೪ ॥

ಶಾಂತಿಂ ಕುರ್ವಂತು ತೇ ನಿತ್ಯಂ ಖಷೋಲ್ಕಜ್ಞಾನತತ್ಪರಾಃ ।
ಸತಪೋ ಧೃತಪುಷ್ಪಾಭ್ಯಾಂ ಯೇ ಸ್ಮೃತಾಃ ಸತತಂ ಬುಧೈಃ ॥ ೧೫ ॥

ಋಷಯಃ ಸಪ್ತ ವಿಖ್ಯಾತಾ ಧ್ರುವಾಂತಾಃ ಪರಮೋಜ್ವಲಾಃ ।
ಭಾನುಪ್ರಸಾದಾತ್ಸಂಪನ್ನಾಃ ಶಾಂತಿಂ ಕುರ್ವಂತು ತೇ ಸದಾ ॥ ೧೬ ॥

ಕಶ್ಯಪೋ ಗಾಲವೋ ಗಾರ್ಗ್ಯೋ ವಿಶ್ವಾಮಿತ್ರೋ ಮಹಾಮುನಿಃ ।
ಮುನಿರ್ದಕ್ಷೋ ವಸಿಷ್ಠಶ್ಚ ಮಾರ್ತಂಡಃ ಪುಲಹಃ ಕ್ರತುಃ ॥ ೧೭ ॥

ನಾರದೋ ಭೃಗುರಾತ್ರೇಯೋ ಭಾರದ್ವಾಜಶ್ಚ ವೈ ಮುನಿಃ ।
ವಾಲ್ಮೀಕಿಃ ಕೌಶಿಕೋ ವಾತ್ಸ್ಯಃ ಶಾಕಲ್ಯೋಽಥ ಪರಾವಸುಃ ॥ ೧೮ ॥

---

೧೪. ಮಿಥುನ, ತುಲಾ, ಕುಂಭ ಈ ರಾಶಿಗಳ ಅಭಿಮಾನದೇವತೆಗಳು ಪಶ್ಚಿಮ ದಿಕ್ಕಿನಲ್ಲಿಯೂ, ಕಟಕ, ವೃಶ್ಚಿಕ, ಮೀನ ಇವುಗಳ ಅಭಿಮಾನದೇವತೆಗಳು ಉತ್ತರ ದಿಕ್ಕಿನಲ್ಲಿ ಇದ್ದಾರೆ. ಇವರು ಗ್ರಹನಾಯಕನಾದ ಸೂರ್ಯನನ್ನು ಯಾವಾಗಲೂ ಧ್ಯಾನ ಮಾಡುತ್ತಾರೆ

೧೫. ಖಷೋಲ್ಕಸಂಜ್ಞಕನಾದ ಸೂರ್ಯನ ಧ್ಯಾನದಲ್ಲಿ ಆಸಕ್ತರಾದ ಆ ಅಭಿಮಾನ ದೇವತೆಗಳು ನಿನಗೆ ಶಾಂತಿಯನ್ನುಂಟುಮಾಡಲಿ

೧೬. ಧಾರಣಪೋಷಣಾದಿಯಿಂದ ತಪೋಯುಕ್ತರೂ, ಬುಧರಿಂದ ಸದಾ ಸ್ಮರಿಸಲ್ಪಡತಕ್ಕವರೂ ಆಗಿ, ಧ್ರುವನಕ್ಷತ್ರದವರೆಗೆ ಪರಮೋಜ್ವಲರಾಗಿರುವ ಸಪ್ತರ್ಷಿಗಳು ಸೂರ್ಯಾನುಗ್ರಹ ಸಂಪನ್ನರಾಗಿ ಯಾವಾಗಲೂ ನಿನಗೆ ಶಾಂತಿಯನ್ನುಂಟು ಮಾಡಲಿ.

೧೭. ಕಶ್ಯಪ, ಗಾಲವ, ಗಾರ್ಗ್ಯ, ವಿಶ್ವಾಮಿತ್ರ, ದಕ್ಷ, ವಸಿಷ್ಠ, ಮಾರ್ತಂಡ, ಪುಲಹ, ಕ್ರತು ಮುಂತಾದವರೂ

೧೮. ಮತ್ತು ನಾರದ, ಭೃಗು, ಆತ್ರೇಯ, ಭಾರದ್ವಾಜ, ವಾಲ್ಮೀಕಿ, ಕೌಶಿಕ, ವಾತ್ಸ್ಯ, ಶಾಕಲ್ಯ,ಪರಾವಸು, ಶಾಲಂಕಾಯನ ಎಂಬ ಇವೇ ಮೊದಲಾದ ಹೆಸರುಳ್ಳವರೂ

ಶಾಲಂಕಾಯನ ಇತ್ಯೇತೇ ಋಷಯೋಽಥ ಮಹಾತಪಾಃ ।
ಸೂರ್ಯಧ್ಯಾನೈಕಪರಮಾಃ ಶಾಂತಿಂ ಕುರ್ವಂತು ತೇ ಸದಾ ॥ ೧೯ ॥

ಮುನಿಕನ್ಯಾ ಮಹಾಭಾಗಾ ಋಷಿಕನ್ಯಾಃ ಕುಮಾರಿಕಾಃ ।
ಸೂರ್ಯಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ತೇ ಸದಾ ॥ ೨೦ ॥

ಸಿದ್ಧಾಃ ಸಮೃದ್ಧತಪಸೋ ಯೇ ಚಾನ್ಯೇ ವೈ ಮಹಾತಪಾಃ ।
ವಿದ್ಯಾಧರಾ ಮಹಾತ್ಮಾನೋ ಗರುಡಶ್ಚ ತ್ವಯಾ ಸಹ ॥ ೨೧ ॥

ಆದಿತ್ಯಪರಮಾ ಹ್ಯೇತೇ ಆದಿತ್ಯಾರಾಧನೇ ರತಾಃ ।
ಸಿದ್ಧಿಂ ತೇ ಸಂಪ್ರಯಚ್ಛಂತು ಆಶೀರ್ವಾದಪರಾಯಣಾಃ ॥ ೨೨ ॥

ನಮುಚಿರ್ದೈತ್ಯರಾಜೇಂದ್ರಃ ಶಂಕುಕರ್ಣೋ ಮಹಾಬಲಃ ।
ಮಹಾನಾಥೋಽಥ ವಿಖ್ಯಾತೋ ದೈತ್ಯಃ ಪರಮವೀರ್ಯವಾನ್ ॥ ೨೩ ॥

---

೧೯. ಮಹಾತಪಸ್ವಿಗಳೂ, ಸೂರ್ಯಧ್ಯಾನವೊಂದೇ ಉತ್ಕೃಷ್ಟವೆಂದು ಭಾವಿಸಿರುವರೂ ಆದ ಋಷಿಗಳು, ನಿನಗೆ ಸದಾ ಶಾಂತಿಯನ್ನುಂಟುಮಾಡಲಿ.

೨೦. ಮಹಾಪೂಜ್ಯೆಯರಾದ ಮುನಿಪತ್ನಿಯರೂ, ಕುಮಾರಿಕೆಯರಾದ ಋಷಿಕನ್ನಿಕೆಯರೂ, ಸೂರ್ಯಾರ್ಚನಪರರಾಗಿ ನಿನಗೆ ಯಾವಾಗಲೂ ಶಾಂತಿಯನ್ನು ಉಂಟುಮಾಡಲಿ.

೨೧. ಮಹಾತಪಸ್ಸು ಮಾಡುವ ಸಿದ್ಧರೂ, ಮಹಾತಪಸ್ವಿಗಳಾದ ಇತರರೂ, ಮಹಾತ್ಮರಾದ ವಿದ್ಯಾಧರರೂ, ನಿನ್ನೊಡಗೂಡಿರುತ್ತಿದ್ದ ಗರುಡರು ಎಲ್ಲರೂ,

೨೨. ಆದಿತ್ಯನೇ ಉತ್ಕೃಷ್ಟನೆಂದು ಭಾವಿಸಿ ಆದಿತ್ಯಾರಾಧನೆಯಲ್ಲಿ ಆಸಕ್ತರಾಗಿ, ಅವನ ಕೃಪೆಪಡೆದು ನಿನಗೆ ಆಶೀರ್ವಾದ ಮಾಡಿ ಸಿದ್ಧಿಯನ್ನು ಕೊಡಲಿ.

೨೩. ದೈತ್ಯರಾಜರಿಗೆ ಇಂದ್ರನಾದ ನಮುಚಿ, ಮಹಾಬಲನಾದ ಶಂಕುಕರ್ಣ, ಪರಾಕ್ರಮಶಾಲಿಯಾದ ಮಹಾನಾಥನೆಂಬ ದೈತ್ಯ, ಮುಂತಾದವರು,

ಗ್ರಹಾಧಿಪಸ್ಯ ದೇವಸ್ಯ ನಿತ್ಯಂ ಪೂಜಾಪರಾಯಣಾಃ ।
ಬಲಂ ವೀರ್ಯಂ ಚ ತೇ ಬುದ್ಧಿಮಾರೋಗ್ಯಂ ಚ ದಿಶಂತು ತೇ ॥ ೨೪ ॥

ಮಹಾಢ್ಯೋ ಯೋ ಹಯಗ್ರೀವಃ ಪ್ರಹ್ಲಾದಃ ಪ್ರಭಯಾನ್ವಿತಃ ।
ತಾನ್ಯೈಕಾಗ್ನಿಮುಖೋ ದೈತ್ಯಃ ಕಾಲನೇಮಿರ್ಮಹಾಬಲಃ ॥ ೨೫ ॥

ಏತೇ ದೈತ್ಯಾ ಮಹಾತ್ಮಾನಃ ಸೂರ್ಯಭಾವೇನ ಭಾವಿತಾಃ ।
ತುಷ್ಟಿಂ ಬಲಂ ತಥಾರೋಗ್ಯಂ ಪ್ರಯಚ್ಛಂತು ಸುರಾರಯಃ ॥ ೨೬ ॥

ವೈರೋಚನೋ ಹಿರಣ್ಯಾಕ್ಷಸ್ತುರ್ವಸುಶ್ಚ ಸುಲೋಚನಃ ।
ಮುಚುಕುಂದೋ ಮುಕುಂದಶ್ಚ ದೈತ್ಯೋ ರೈವತಕಸ್ತಥಾ ॥ ೨೭ ॥

ಭಾವೇನ ಪರಮೇಣೇಮಂ ಯಜಂತೇ ಸತತಂ ರವಿಂ ।
ಸತತಂ ಚ ಶುಭಾತ್ಮಾನಃ ಪುಷ್ಟಿಂ ಕುರ್ವಂತು ತೇ ಸದಾ ॥ ೨೮ ॥

---

೨೪. ಇವರೆಲ್ಲರೂ ಗ್ರಹಾಧಿಪನಾದ ಸೂರ್ಯಪೂಜೆಯಲ್ಲಿ ಯಾವಾಗಲೂ ಆಸಕ್ತರಾಗಿ ಭಕ್ತರಾದ ದೈತ್ಯರು. ಅವರುಗಳೆಲ್ಲಾ ನಿನಗೆ ಬಲ, ವೀರ್ಯ, ಶುದ್ಧಿ, ಆರೋಗ್ಯ ಇವುಗಳನ್ನು ಕೊಡಲಿ.

೨೫. ಮಹಾಸಂಪದ್ಯುಕ್ತನಾದ ಹಯಗ್ರೀವ, ತೇಜಃಶಾಲಿಯಾದ ಪ್ರಹ್ಲಾದ, ತಾನ, ಕಲಾ, ಸಂಗೀತ ಇವುಗಳಲ್ಲಿ ನಿಪುಣನೂ, ಮಹಾಬಲಶಾಲಿಯೂ ಆದ ಕಾಲನೇಮಿ, ದೈತ್ಯರು ಇವರೇ ಮುಂತಾದ ಸೂರ್ಯಭಕ್ತಿತತ್ಪರರೆನಿಸಿದವರು.

೨೬. ಇವರು ಸೂರ್ಯಸಮಾನರೆಂದು ಹೆಸರು ಪಡೆದು, ಮಹಾತ್ಮರೂ, ದೇವಶತ್ರುಗಳೂ ಆಗಿದ್ದಾರೆ. ಇವರೆಲ್ಲಾ ನಿನಗೆ ಸಂತೋಷವನ್ನೂ, ಶಕ್ತಿಯನ್ನೂ, ಆರೋಗ್ಯವನ್ನೂ ಕರುಣಿಸಲಿ.

೨೭-೨೮. ವಿರೋಚನಪುತ್ರನಾದ ಬಲಿ, ಹಿರಣ್ಯಾಕ್ಷ ತುರ್ವಸು, ಸುಲೋಚನ, ಮುಚುಕುಂದ, ಮುಕುಂದ, ರೈವತಕ, ಎಂಬ ಹೆಸರುಳ್ಳ ರಾಕ್ಷಸರು, ಈ ಸೂರ್ಯನನ್ನು ಉತ್ಕೃಷ್ಟವಾದ ಭಾವದಿಂದ ಯಾವಾಗಲೂ ಪೂಜಿಸುವ ಭಕ್ತರಾಗಿರುತ್ತಾರೆ. ಅಂತಹ ಶುಭಾತ್ಮರು ನಿನಗೆ ಯಾವಾಗಲೂ ಪುಷ್ಟಿಯನ್ನು ಉಂಟುಮಾಡಲಿ.

ದೈತ್ಯಪತ್ನ್ಯೋ ಮಹಾಭಾಗಾ ದೈತ್ಯಾನಾಂ ಕನ್ಯಕಾಃ ಶುಭಾಃ ।
ಕುಮಾರಾ ಯೇ ಚ ದೈತ್ಯಾನಾಂ ಶಾಂತಿಂ ಕುರ್ವಂತು ತೇ ಸದಾ ॥ ೨೯ ॥

ಆರಕ್ತೇನ ಶರೀರೇಣ ರಕ್ತಾಂತಾಯತಲೋಚನಾಃ ।
ಮಹಾಭಾಗಾಃ ಕೃತಾಟೋಪಾಃ ಶಂಖಾದ್ಯಾಃ ಕೃತಲಕ್ಷಣಾಃ ॥ ೩೦ ॥

ಅನಂತೋ ನಾಗರಾಜೇಂದ್ರ ಆದಿತ್ಯಾರಾಧನೇ ರತಃ ।
ಮಹಾಪಾಪವಿಷಂ ಹತ್ವಾ ಶಾಂತಿಮಾಶು ಕರೋತು ತೇ ॥ ೩೧ ॥

ಅತಿಪೀತೇನ ದೇಹೇನ ವಿಸ್ಫುರದ್ಭೋಗಸಂಪದಾ ।
ತೇಜಸಾ ಚಾತಿದೀಪ್ತೇನ ಕೃತಸ್ವಸ್ತಿಕಲಾಂಛನಃ ॥ ೩೨ ॥

ನಾಗರಾಟ್ ತಕ್ಷಕಃ ಶ್ರೀಮಾನ್ ನಾಮಕೋಟ್ಯಾ ಸಮನ್ವಿತಃ ।
ಕರೋತು ತೇ ಸದಾ ಶಾಂತಿಂ ಸರ್ವದೋಷವಿಷಾಪಹಾಂ ॥ ೩೩ ॥

---

೨೯. ಮಹಾಭಾಗ್ಯಶಾಲಿನಿಯರಾದ ಈ ದೈತ್ಯರ ಪತ್ನಿಯರೂ, ಶುಭ ಸ್ವರೂಪಿಣಿಯರಾದ ಈ ದೈತ್ಯರ ಕನ್ಯೆಯರೂ, ಮತ್ತು ದೈತ್ಯಪುತ್ರರೂ ನಿನಗೆ ಸದಾ ಶಾಂತಿಯನ್ನುಂಟುಮಾಡಲಿ.

೩೦. ದೇಹವಾದ್ಯಂತವೂ, ಕೆಂಪುಬಣ್ಣದಿಂದ ಕೂಡಿದವರೂ, ವಿಸ್ತಾರವಾಗಿಯೂ, ಸ್ವಲ್ಪ ಕೆಂಪಗೂ ಇರುವ ಕಣ್ಣುಳ್ಳವರೂ, ಮಹಾಭಾಗ್ಯಶಾಲಿಗಳೂ, ಆಡಂಬರವುಳ್ಳವರೂ, ಸುಲಕ್ಷಣಯುಕ್ತರೂ ಆದ ಶಂಖನೇ ಮೊದಲಾದವರು ನಿನಗೆ ಶಾಂತಿಯನ್ನು ಕರುಣಿಸಲಿ.

೩೧. ಸೂರ್ಯಾರಾಧನದಲ್ಲಿ ಆಸಕ್ತನಾದ ಅನಂತನೆಂಬ ನಾಗರಾಜೇಂದ್ರನು, ನಿನ್ನ ಮಹಾಪಾಪವನ್ನು ಧ್ವಂಸಮಾಡಿ ನಿನಗೆ ಜಾಗ್ರತೆಯಾಗಿ ಶಾಂತಿಯನ್ನುಂಟುಮಾಡಲಿ.

೩೨–೩೩. ಹಳದಿಯುಬಣ್ಣದ ದೇಹದಿಂದ ಕೂಡಿ, ಪ್ರಕಾಶಮಾನವೂ ವಿಸ್ತಾರವೂ ಆದ ಹೆಡೆಯುಳ್ಳವನೂ, ಅತಿ ದೀಪ್ತವಾದ ತೇಜಸ್ಸಿನಿಂದ ಕೂಡಿದವನೂ, ಶ್ರೀಮಂತನೂ, ಸ್ವಸ್ತಿಕದ ಗುರುತನ್ನುಳ್ಳವನೂ, ಆಗಿರುವ ತಕ್ಷಕನೆಂಬ ನಾಗರಾಜನು ನಾಮಕೋಟಿಯಿಂದ ಕೂಡಿದವನಾಗಿ ನಿನ್ನ ಈ ಸರ್ವದೋಷವನ್ನೂ ಹೋಗಲಾಡಿಸಿ ಶಾಂತಿಯನ್ನು ಸದಾ ಕೊಡಲಿ.

ಅತಿಕೃಷ್ಣೇನ ವರ್ಣೇನ ಸ್ಫುಟಾಧಿಕಟಿಮಸ್ತಕಃ ।
ಕಂಠರೇಖಾ ತ್ರಯೋಪೇತೋ ಘೋರದಂಷ್ಟ್ರಾಯುಧೋದ್ಯತಃ ॥ ೩೪ ॥

ಕರ್ಕೋಟಕೋ ಮಹಾನಾಗೋ ವಿಷದರ್ಪಬಲಾನ್ವಿತಃ ।
ವಿಷಶಸ್ತ್ರಾಗ್ನಿಸಂತಾಪಂ ಹತ್ವಾ ಶಾಂತಿಂ ಕರೋತು ತೇ ॥ ೩೫ ॥

ಪದ್ಮವರ್ಣಃ ಪದ್ಮಕಾಂತಿಃ ಫುಲ್ಲಪದ್ಮಾಯತೇಕ್ಷಣಃ ।
ಖ್ಯಾತಃ ಪದ್ಮೋ ಮಹಾನಾಗೋ ನಿತ್ಯಂ ಭಾಸ್ಕರಪೂಜಕಃ ॥ ೩೬ ॥

ಸ ತೇ ಶಾಂತಿಂ ಶುಭಂ ಶೀಘ್ರಮಚಲಂ ಸಂಪ್ರಯಚ್ಛತು ।
ಶ್ಯಾಮೇನ ದೇಹಭಾರೇಣ ಶ್ರೀಮತ್ಕಮಲಲೋಚನಃ ॥ ೩೭ ॥

ವಿಷದರ್ಪಬಲೋನ್ಮತ್ತೋ ಗ್ರೀವಾಯಾಂ ರೇಖಯಾನ್ವಿತಃ ।
ಶಂಖಪಾಲಃ ಶ್ರಿಯಾ ದೀಪ್ತಃ ಸೂರ್ಯಪಾದಾಬ್ಜಪೂಜಕಃ ॥ ೩೮ ॥

---

೩೪. ಕಪ್ಪುಬಣ್ಣದಿಂದ ಕೂಡಿ ಸ್ಫುಟವಾದ ದವಡೆಯೂ, ತಲೆಯೂ ಉಳ್ಳವನೂ, ಕೊರಳಲ್ಲಿ ಮೂರುಗೆರೆಗಳುಳ್ಳವನೂ, ಭಯಂಕರವಾದ ಕೋರೆಹಲ್ಲಿನಿಂದ ಸರ್ವದಾ ಹೊಡೆಯಲು ಉದ್ಯುಕ್ತನಾಗಿರುವವನೂ,

೩೫. ಮತ್ತು ವಿಷದರ್ಪದ ಬಲದಿಂದ ಕೂಡಿದವನೂ ಆದ, ಕರ್ಕೋಟಕನೆಂಬ ಮಹಾನಾಗನು ವಿಷ, ಅಗ್ನಿ, ಶಸ್ತ್ರ ಇವುಗಳಿಂದುಂಟಾದ ಸಂಕಟಗಳನ್ನೆಲ್ಲಾ ನಿವಾರಣೆ ಮಾಡಿ, ನಿನಗೆ ಶಾಂತಿಯನ್ನುಂಟುಮಾಡಲಿ.

೩೬. ಪದ್ಮದಬಣ್ಣವೂ ಕಾಂತಿಯೂ ಉಳ್ಳವನೂ, ಅರಳಿದ ಕಮಲದಂತೆ ವಿಶಾಲವಾದ ಕಣ್ಣುಳ್ಳವನೂ, ಭಾಸ್ಕರಪೂಜಾಸಕ್ತನೂ ಆದ ಪದ್ಮನೆಂಬ ಮಹಾನಾಗನು ನಿನಗೆ ಶೀಘ್ರವಾಗಿ ಶುಭವನ್ನು ಕೊಡಲಿ.

೩೭-೩೮. ಕಪ್ಪಗೆ ಕಾಂತಿಯುಕ್ತವಾದ ಕಣ್ಣುಗಳು, ವಿಷದಿಂದುಂಟಾದ ದರ್ಪವೂ ಕುತ್ತಿಗೆಯಲ್ಲಿ ಗೆರೆಗಳೂ ಉಳ್ಳವನಾಗಿ, ಕಾಂತಿಯಿಂದ ಹೊಳೆಯುತ್ತಿರುವವನೂ, ಸೂರ್ಯನನ್ನು ಪೂಜಿಸುವವರಲ್ಲಿ ಆಸಕ್ತನೂ ಆದ, ಶಂಖಪಾಲನು ಮಹಾವಿಷಬಾಧೆಯನ್ನು ಪರಿಹಾರಮಾಡಿ ನಿನಗೆ ಶಾಂತಿಯನ್ನುಂಟುಮಾಡಲಿ.

ಮಹಾವಿಷಂ ಗರಶ್ರೇಷ್ಠಂ ಹತ್ವಾ ಶಾಂತಿಂ ಕರೋತು ತೇ ।
ಅತಿಗೌರೇಣ ದೇಹೇನ ಚಂದ್ರಾರ್ಧಕೃತಶೇಖರಃ ॥ ೩೯ ॥

ದೀಪಭಾಗೇ ಕೃತಾಟೋಪಶುಭಲಕ್ಷಣಲಕ್ಷಿತಃ ।
ಕುಲಿಕೋ ನಾಮ ನಾಗೇಂದ್ರೋ ನಿತ್ಯಂ ಸೂರ್ಯಪರಾಯಣಃ ॥
ಅಪಹೃತ್ಯ ವಿಷಂ ಘೋರಂ ಕರೋತು ತವ ಶಾಂತಿಕಂ ॥ ೪೦ ॥

ಅಂತರಿಕ್ಷೇ ಚ ಯೇ ನಾಗಾಃ ಯೇ ನಾಗಾಃ ಸ್ವರ್ಗಸಂಸ್ಥಿತಾಃ ।
ಗಿರಿಕಂದರದುರ್ಗೇಷು ಯೇ ನಾಗಾ ಭುವಿ ಸಂಸ್ಥಿತಾಃ ॥ ೪೧ ॥

ಪಾತಾಲೇ ಯೇ ಸ್ಥಿತಾ ನಾಗಾ ಸರ್ವೇ ಯತ್ರ ಸಮಾಹಿತಾಃ ।
ಸೂರ್ಯಪಾದಾರ್ಚನಾಸಕ್ತಾ ಶಾಂತಿಂ ಕುರ್ವಂತು ತೇ ಸದಾ ॥ ೪೨ ॥

ನಾಗಿನ್ಯೋ ನಾಗಕನ್ಯಾಶ್ಚ ತಥಾ ನಾಗಕುಮಾರಕಾಃ ।
ಸೂರ್ಯಭಕ್ತಾಃ ಸುಮನಸಃ ಶಾಂತಿಂ ಕುರ್ವಂತು ತೇ ಸದಾ ॥ ೪೩ ॥

---

೩೯. ಅತಿ ಶುಭ್ರವಾದ ದೇಹದಿಂದ ಕೂಡಿದವನೂ, ಹೆಡೆಯ ಹಿಂದೆ ಅರ್ಧ ಚಂದ್ರಾಕೃತಿಯ ರೇಖೆಯನ್ನುವುಳ್ಳವನೂ, ದೀಪವಿರುವ ಕಡೆ ಆಡಂಬರವನ್ನು ಮಾಡುವವನೂ

೪೦. ಮತ್ತು ಶುಭಲಕ್ಷಣದಿಂದ ಕೂಡಿದವನೂ ಆದ ಕುಲಿಕನೆಂಬ ನಾಗ ಶ್ರೇಷ್ಠನು ಯಾವಾಗಲೂ ಸೂರ್ಯಪೂಜಾಸಕ್ತನಾಗಿರುತ್ತಾ ಭಯಂಕರವಾದ ವಿಷವನ್ನು ಅಪಹರಿಸಿ, ನಿನಗೆ ಶಾಂತಿಯನ್ನು ಉಂಟುಮಾಡಲಿ.

೪೧-೪೨. ಸೂರ್ಯಾರಾಧನೆಯಲ್ಲಿ ತತ್ಪರರಾಗಿ ಅಂತರಿಕ್ಷದಲ್ಲಿರುವ ನಾಗರೂ, ಸ್ವರ್ಗದಲ್ಲಿರುವ ನಾಗರೂ, ಗಿರಿದುರ್ಗದಲ್ಲಿ ವಾಸಿಸುವ ನಾಗರೂ, ಭೂವಾಸಿಗಳಾದ ನಾಗರೂ, ಪಾತಾಳವಾಸಿಗಳಾದ ನಾಗರೂ, ಎಲ್ಲರೂ ಒಟ್ಟುಗೂಡಿ ನಿನಗೆ ಯಾವಾಗಲೂ ಶಾಂತಿಯನ್ನುಂಟುಮಾಡಲಿ.

೪೩. ಮತ್ತು ನಾಗಪತ್ನಿಯರು, ನಾಗಕನ್ನಿಕೆಯರು, ನಾಗಕುಮಾರರು ಇವರುಗಳೂ, ಸೂರ್ಯಭಕ್ತರೂ, ಒಳ್ಳೆಯಮನಸ್ಸುಳ್ಳವರೂ ಆಗಿ ನಿನಗೆ ಸದಾ ಶಾಂತಿಯನ್ನುಂಟುಮಾಡಲಿ.

ಯ ಇದಂ ನಾಮ ಸಂಸ್ಥಾನಂ ಕೀರ್ತಯೇಚ್ಛೃಣುಯಾತ್ತಥಾ ।
ನ ತಂ ಸರ್ಪಾ ವಿಹಿಂಸಂತಿ ನ ವಿಷಂ ಕ್ರಮತೇ ಸದಾ ॥ ೪೪ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮ
ವರ್ಣನಂ ನಾಮ ಏಕೋನಾಶೀತ್ಯುತ್ತರ
ಶತತಮೋಽಧ್ಯಾಯಃ.



---

೪೪. ಈ ನಾಮಸಮೂಹವನ್ನು ಯಾರು ಹೇಳುತ್ತಾರೆಯೋ, ಮತ್ತು ಯಾರು ಶ್ರವಣಮಾಡುತ್ತಾರೋ ಅವರನ್ನು ಸರ್ಪಗಳು ಎಂದೂ ಹಿಂಸಿಸುವುದಿಲ್ಲ. ಅವರಿಗೆ ವಿಷವೂ ವ್ಯಾಪಿಸುವುದಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೌರಧರ್ಮ
ವರ್ಣನೆಯೆಂಬ ನೂರಎಪ್ಪತ್ತೊಂಭತ್ತನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಶೀತ್ಯುತ್ತರಶತತಮೋಽಧ್ಯಾಯಃ

**ಗಂಗಾ ಪುಣ್ಯಾ ಮಹಾದೇವೀ ಯಮುನಾ ನರ್ಮದಾ ನದೀ ।**
**ಗೌತಮೀ ಚಾಪಿ ಕಾವೇರೀ ವರುಣಾ ದೇವಿಕಾ ತಥಾ ॥ ೧ ॥**

**ಸರ್ವಗ್ರಹಪತಿಂ ದೇವಂ ಲೋಕೇಶಂ ಲೋಕನಾಯಕಂ ।**
**ಪೂಜಯಂತಿ ಸದಾ ನದ್ಯಃ ಸೂರ್ಯಸದ್ಭಾವಭಾವಿತಾಃ ॥ ೨ ॥**

**ಶಾಂತಿಂ ಕುರ್ವಂತು ತೇ ನಿತ್ಯಂ ಸೂರ್ಯಧ್ಯಾನೈಕಮಾನಸಾಃ ।**
**ನಿರಂಜನಾ ನಾಮ ನದೀ ಶೋಣಶ್ಚಾಪಿ ಮಹಾನದಃ ।**
**ಮಂದಾಕಿನೀ ಚ ಪರಮಾ ತಥಾ ಸನ್ನಿಹಿತಾ ಶುಭಾ ॥ ೩ ॥**

---

## ನೂರಎಂಭತ್ತನೆಯ ಅಧ್ಯಾಯ

೧-೨. ಪುಣ್ಯಕರಳಾದ ಗಂಗೆ, ಯಮುನೆ, ನರ್ಮದೆ, ಗೌತಮೀ, ಕಾವೇರಿ, ವರುಣಾ ಮತ್ತು ದೇವಿಕಾ ಈ ನದಿಗಳೆಲ್ಲಾ ಗ್ರಹಾಧಿಪತಿಯೂ, ಲೋಕೇಶನೂ ಆದ ಸೂರ್ಯನಲ್ಲಿ ಒಳ್ಳೆಯ ಭಕ್ತಿಯನ್ನಿಟ್ಟು ಸಂಸ್ಕಾರ ಹೊಂದಿದವರಾಗಿ ಲೋಕನಾಯಕನಾದ ಆ ಸೂರ್ಯನನ್ನು ಪೂಜಿಸುತ್ತಾರೆ. ಸೂರ್ಯಸದ್ಭಾವವೊಂದನ್ನೇ ಮನಸ್ಸಿನಲ್ಲಿ ಧ್ಯಾನಿಸುವ ಈ ನದಿಗಳು ನಿನಗೆ ಯಾವಾಗಲೂ ಶಾಂತಿಯನ್ನುಂಟುಮಾಡಲಿ.

೩. ನಿರಂಜನವೆಂಬ ನದಿ, ಮಹಾನದಿಯೆನಿಸಿದ ಶೋಣಾ ಶ್ರೇಷ್ಠವಾದ ಮೂಲಗಂಗಾ, ಮತ್ತು ಅದರ ಸಮೀಪದಲ್ಲಿರುವ ಶುಭಕರಗಳಾದ ಇತರ ನದಿಗಳೂ,

ಏತಾಶ್ಚಾನ್ಯಾಶ್ಚ ಬಹವೋ ಭುವಿ ದಿವ್ಯಂತರಿಕ್ಷಕೇ ।
ಸೂರ್ಯಾರ್ಚನರತಾ ನದ್ಯಃ ಕುರ್ವಂತು ತವ ಶಾಂತಿಕಂ ॥ ೪ ॥

ಮಹಾವೈಶ್ರವಣೋ ದೇವೋ ಯಕ್ಷರಾಜೋ ಮಹರ್ಷಿಕಃ ।
ಯಕ್ಷಕೋಟಿಪರೀವಾರೋಯಕ್ಷಾಸಂಖ್ಯೇಯಸಂಯುತಃ ॥ ೫ ॥

ಮಹಾವಿಭವಸಂಪನ್ನಃ ಸೂರ್ಯಪಾದಾರ್ಚನೇ ರತಃ ।
ಸೂರ್ಯಧ್ಯಾನೈಕಪರಮಃ ಸೂರ್ಯಭಾವೇನ ಭಾವಿತಃ ॥ ೬ ॥

ಶಾಂತಿಂ ಕರೋತು ತೇ ಪ್ರೀತಃ ಪದ್ಮಪತ್ರಾಯತೇಕ್ಷಣಃ ।
ಮಣಿಭದ್ರೋ ಮಹಾಯಕ್ಷೋ ಮಣಿರತ್ನವಿಭೂಷಿತಃ ॥ ೭ ॥

ಮನೋಹರೇಣ ಹಾರೇಣ ಕಂಠಲಗ್ನೇನ ರಾಜತೇ ।
ಯಕ್ಷಿಣೀ ಯಕ್ಷಕನ್ಯಾಭಿಃ ಪರಿವಾರಿತವಿಗ್ರಹಃ ॥
ಸೂರ್ಯಾರ್ಚನಸಮಾಸಕ್ತಃ ಕರೋತು ತವ ಶಾಂತಿಕಂ ॥ ೮ ॥

---

೪. ಮತ್ತು ಭೂಲೋಕದಲ್ಲಿರತಕ್ಕವೂ, ಆಕಾಶದಲ್ಲಿರತಕ್ಕವೂ, ಸ್ವರ್ಗದಲ್ಲಿರತಕ್ಕವೂ ಆಗಿ, ಸೂರ್ಯಾರ್ಚನದಲ್ಲಿ ಆಸಕ್ತವಾದ ಇತರ ಅನೇಕ ನದಿಗಳು, ನಿನಗೆ ಶಾಂತಿಯನ್ನುಂಟುಮಾಡಲಿ.

೫. ಮಹರ್ಷಿಯೂ, ಯಕ್ಷಾಧಿಪನೂ, ಕೋಟಿಜನ ಯಕ್ಷರ ಪರಿವಾರವುಳ್ಳವನೂ, ಅಸಂಖ್ಯೇಯರಾದ ಯಕ್ಷಜನರಿಂದ ಕೂಡಿದವನೂ,

೬-೭. ಮತ್ತು ಮಹಾವೈಭವಶಾಲಿಯೂ, ಸೂರ್ಯನ ಪಾದವನ್ನು ಪೂಜಿಸುವುದರಲ್ಲಿ ಆಸಕ್ತನೂ, ಸೂರ್ಯಧ್ಯಾನವೊಂದನ್ನೇ ಮುಖ್ಯವೆಂದು ಭಾವಿಸಿರುವವನೂ, ತನ್ನಲ್ಲೇ ಸೂರ್ಯನಿದ್ದಾನೆಂಬ ಭಾವದಿಂದ ಕೂಡಿದವನೂ, ಕಮಲದ ಎಸಳಿನಂತೆ ನೀಳವಾದ ಕಣ್ಣುಳ್ಳವನೂ, ಪೂಜ್ಯನೂ, ಆದ ಮಹಾವೈಶ್ರವಣ ದೇವನು (ಕುಬೇರನು) ನಿನಗೆ ಶಾಂತಿಯನ್ನು ಉಂಟುಮಾಡಲಿ.

೮. ಕಂಠದಲ್ಲಿ ಧರಿಸಿರುವ ಮನೋಹರಗಳಾದ ಸರಗಳಿಂದ ಪ್ರಕಾಶಮಾನನೂ, ಸೂರ್ಯಾರ್ಚನದಲ್ಲಿ ಆಸಕ್ತನೂ ಆದ, ಮಣಿಭದ್ರನೆಂಬ ಮಹಾಯಕ್ಷನು ಯಕ್ಷಸ್ತ್ರೀಯರು ಯಕ್ಷಕನ್ಯೆಯರು, ಇವರುಗಳಿಂದ ಪರಿವೃತನಾಗಿ ನಿನಗೆ ಶಾಂತಿಯನ್ನು ಉಂಟುಮಾಡಲಿ.

ಸುಚಿರೋ ನಾಮ ಯಕ್ಷೇಂದ್ರೋ ಮಣಿಕುಂಡಲಭೂಷಿತಃ ।
ಅಲಾಟೇ ಹೇಮಪಟಲಪ್ರಬದ್ಧೇನ ವಿರಾಜತೇ ॥ ೯ ॥

ಬಹುಯಕ್ಷಸಮಾಕೀರ್ಣೋ ಯಕ್ಷೈರ್ನಮಿತವಿಗ್ರಹಃ ।
ಸೂರ್ಯಪೂಜಾಪರೋ ಯುಕ್ತಃ ಕರೋತು ತವ ಶಾಂತಿಕಂ ॥ ೧೦ ॥

ಪಾಂಚಿಕೋ ನಾಮ ಯಕ್ಷೇಂದ್ರಃ ಕಂಠಾಭರಣಭೂಷಿತಃ ।
ಕುಕ್ಕುಟೇನ ವಿಚಿತ್ರೇಣ ಬಹುರತ್ನಾನ್ವಿತೇನ ತು ॥ ೧೧ ॥

ಯಕ್ಷವೃಂದಸಮಾಕೀರ್ಣೋ ಯಕ್ಷಕೋಟಿಸಮನ್ವಿತಃ ।
ಸೂರ್ಯಾರ್ಚನಕರಃ ಶ್ರೀಮಾನ್ ಕರೋತು ತವ ಶಾಂತಿಕಂ ॥ ೧೨ ॥

ಧೃತರಾಷ್ಟ್ರೋ ಮಹಾತೇಜಾ ನಾನಾಯಕ್ಷಾಧಿಪಃ ಖಗ ।
ದಿವ್ಯಪಟ್ಟೈಃ ಶುಕ್ಲಚ್ಛತ್ರೋ ಮಣಿಕಾಂಚನಭೂಷಿತಃ ॥ ೧೩ ॥

---

೯–೧೦. ಮಣಿಕುಂಡಲಗಳಿಂದ ಅಲಂಕರಿಸಿಕೊಂಡವನೂ, ಹಣೆಯಲ್ಲಿ ಚಿನ್ನದ ಪಟಲವನ್ನು ಧರಿಸಿ ಪ್ರಕಾಶಮಾನನಾದವನೂ, ಯಕ್ಷರಿಂದ ನಮಸ್ಕಾರ ಮಾಡಿಸಿಕೊಳ್ಳುತ್ತಿರುವವನೂ, ಬಹುಜನ ಯಕ್ಷರಿಂದ ಕೂಡಿದವನೂ, ಸೂರ್ಯಪೂಜಾಪರನೂ ಆದ ಸುಚಿರನೆಂಬ ಯಕ್ಷಾಧಿಪತಿಯು ನಿನಗೆ ಶಾಂತಿಯನ್ನುಂಟುಮಾಡಲಿ.

೧೧. ಕಂಠದಲ್ಲಿ ಬಹುರತ್ನಯುಕ್ತವೆನಿಸಿದ ಆಭರಣಗಳನ್ನು ಧರಿಸಿದವನೂ, ವಿಚಿತ್ರವಾದ ಕುಕ್ಕುಟದಿಂದ ಕೂಡಿದವನೂ,

೧೨. ಯಕ್ಷಸಮೂಹದಿಂದ ಸುತ್ತುಗಟ್ಟಲ್ಪಟ್ಟವನೂ, ಕೋಟಿಯಕ್ಷರಿಂದ ಸಂಯುತನೂ, ಸೂರ್ಯಾರಾಧನೆಯಲ್ಲಿ ಆಸಕ್ತನೂ, ಶ್ರೀಮಂತನೂ ಆದ ಪಾಂಚಿಕನೆಂಬ ಯಕ್ಷೇಂದ್ರನು ನಿನಗೆ ಶಾಂತಿಯನ್ನುಂಟುಮಾಡಲಿ.

೧೩. ಅಯ್ಯಾ ಖಗನೇ! ಮಹಾತೇಜಸ್ವಿಯೂ, ನಾನಾಯಕ್ಷರಿಗೆ ಅಧಿಪತಿಯೂ. ಶ್ರೇಷ್ಠವಾದ ಪಟ್ಟೆಯವಸ್ತ್ರ, ಶ್ವೇತಚ್ಛತ್ರ, ಇವುಗಳನ್ನು ಉಳ್ಳವನೂ, ರತ್ನ ಸುವರ್ಣ ಇವುಗಳ ಆಭರಣಗಳಿಂದ ಅಲಂಕರಿಸಿಕೊಂಡವನೂ,

ಸೂರ್ಯಭಕ್ತಃ ಸೂರ್ಯರತಃ ಸೂರ್ಯಪೂಜಾಪರಾಯಣಃ ।
ಸೂರ್ಯಪ್ರದಾನಸಂಪನ್ನಃ ಕರೋತು ತವ ಶಾಂತಿಕಂ ॥ ೧೪ ॥

ವಿರೂಪಾಕ್ಷಶ್ಚ ಯಕ್ಷೇಂದ್ರಃ ಶ್ವೇತವಾಸಾ ಮಹಾದ್ಯುತಿಃ ।
ನಾನಾಕಾಂಚನಮಾಲಾಭಿರುಪಶೋಭಿತಕಂಧರಃ ॥ ೧೫ ॥

ಸೂರ್ಯಪೂಜಾಪರೋ ಭಕ್ತಃ ಕಂಜಾಕ್ಷಃ ಕಂಜಸನ್ನಿಭಃ ।
ತೇಜಸಾದಿತ್ಯಸಂಕಾಶಃ ಕರೋತು ತವ ಶಾಂತಿಕಂ ॥ ೧೬ ॥

ಅಂತರಿಕ್ಷಗತಾ ಯಕ್ಷಾ ಯೇ ಯಕ್ಷಾ ಸ್ವರ್ಗಗಾಮಿನಃ ।
ನಾನಾರೂಪಧರಾ ಯಕ್ಷಾಃ ಸೂರ್ಯಭಕ್ತಾ ದೃಢವ್ರತಾ ॥ ೧೭ ॥

ತದ್ಭಕ್ತಾಸ್ತದ್ಗಮನಸಃ ಸೂರ್ಯಪೂಜಾಸಮುತ್ಸುಕಾಃ ।
ಶಾಂತಿಂ ಕುರ್ವಂತು ತೇ ಹೃಷ್ಟಾಃ ಶಾಂತಾಃ ಶಾಂತಿಪರಾಯಣಾಃ ॥ ೧೮ ॥

---

೧೪. ಸೂರ್ಯಭಕ್ತನೂ, ಸೂರ್ಯಾಸಕ್ತನೂ, ಸೂರ್ಯಪೂಜೆಯಲ್ಲಿಯೂ ದಾನದಲ್ಲಿಯೂ ನಿರತನೂ ಆದ ಧೃತರಾಷ್ಟ್ರನೆಂಬ ಯಕ್ಷಾಧಿಪನು ನಿನಗೆ ಶಾಂತಿಯನ್ನು ಕರುಣಿಸಲಿ.

೧೫. ಬಿಳಿಯಬಟ್ಟೆಯನ್ನು ಧರಿಸಿದವನೂ, ಮಹಾಕಾಂತಿ ಸಂಪನ್ನನೂ, ಅನೇಕ ಸುವರ್ಣಹಾರಗಳಿಂದ ಪ್ರಕಾಶಿತವಾದ ಕಂಠವುಳ್ಳವನೂ,

೧೬. ಮತ್ತು ಸೂರ್ಯಪೂಜೆಯಲ್ಲಿ ಆಸಕ್ತನಾದ ಭಕ್ತನೂ, ಕಮಲನೇತ್ರನೂ, ಕಮಲಸದೃಶನೂ, ತೇಜಸ್ಸಿಂದ ಸೂರ್ಯನಂತೆ ಹೊಳೆಯುವವನೂ, ಆದ ವಿರೂಪಾಕ್ಷನೆಂಬ ಯಕ್ಷಾಧಿಪನು ನಿನಗೆ ಶಾಂತಿಯನ್ನುಂಟುಮಾಡಲಿ.

೧೭. ಸೂರ್ಯಭಕ್ತರೂ, ದೃಢವ್ರತರೂ, ಅವನ ಭಕ್ತಿಯ ಅತಿಶಯದಿಂದ ಅವನನ್ನೇ ಹೊಂದಿದ ಮನಸ್ಸುಳ್ಳವರೂ, ಸೂರ್ಯಪೂಜೆಯಲ್ಲಿ ಕುತೂಹಲವುಳ್ಳವರೂ, ಶಾಂತರೂ, ಶಾಂತಿಪರಾಯಣರೂ, ಹರ್ಷಹೊಂದಿದವರೂ ಎನಿಸಿರುವ

೧೮. ಅಂತರಿಕ್ಷನಿವಾಸಿಗಳಾದ ಯಕ್ಷರು, ಸ್ವರ್ಗಸಂಚಾರಿಗಳಾದ ಯಕ್ಷರು, ನಾನಾರೂಪವನ್ನು ಧರಿಸಬಲ್ಲ ಯಕ್ಷರು ಇವರೆಲ್ಲ ನಿನಗೆ ಶಾಂತಿಯನ್ನು ಉಂಟುಮಾಡಲಿ.

**ಯಕ್ಷಿಣ್ಯೋ ವಿವಿಧಾಕಾರಾಃ ತಥಾ ಯಕ್ಷಕುಮಾರಕಾಃ ।**
**ಯಕ್ಷಕನ್ಯಾ ಮಹಾಭಾಗಾಃ ಸೂರ್ಯಾರಾಧನತತ್ಪರಾಃ ॥ ೧೯ ॥**

**ಶಾಂತಿಂ ಸ್ವಸ್ತ್ಯಯನಂ ಕ್ಷೇಮಂ ಬಲಂ ಕಲ್ಯಾಣಮುತ್ತಮಂ ।**
**ಸಿದ್ಧಿಂ ಚಾಶು ಪ್ರಯಚ್ಛಂತು ನಿತ್ಯಂ ಚ ಸುಸಮಾಹಿತಾಃ ॥ ೨೦ ॥**

**ಪರ್ವತಾಃ ಸರ್ವತಃ ಸರ್ವೇ ವೃಕ್ಷಾಶ್ಚೈವ ಮಹರ್ಧಿಕಾಃ ।**
**ಸೂರ್ಯಭಕ್ತಾಃ ಸದಾ ಸರ್ವೇ ಶಾಂತಿಂ ಕುರ್ವಂತು ತೇ ಸದಾ ॥ ೨೧ ॥**

**ಸಾಗರಾಃ ಸರಿತಃ ಸರ್ವೇ ಗೃಹಾರಣ್ಯಾನಿ ಕೃತ್ಸ್ನಶಃ ।**
**ಸೂರ್ಯಸ್ಯಾರಾಧನಪರಾಃ ಕುರ್ವಂತು ತವಶಾಂತಿಕಂ ॥ ೨೨ ॥**

**ರಾಕ್ಷಸಾಃ ಸರ್ವತಃ ಸರ್ವೇ ಘೋರರೂಪಾ ಮಹಾಬಲಾಃ ।**
**ಸ್ಥಲಜಾ ರಾಕ್ಷಸಾ ಯೇ ತು ಅಂತರಿಕ್ಷಗತಾಶ್ಚ ಯೇ ॥ ೨೩ ॥**

---

೧೯. ನಾನಾ ಆಕಾರವುಳ್ಳ ಯಕ್ಷಸ್ತ್ರೀಯರು, ಯಕ್ಷಕುಮಾರರು, ಭಾಗ್ಯಶಾಲಿನಿಯರಾದ ಯಕ್ಷಕುಮಾರಿಯರು ಇವರೆಲ್ಲರೂ ಸೂರ್ಯಪೂಜೆಯಲ್ಲಿ ನಿರತರಾಗಿ

೨೦. ಯಾವಾಗಲೂ ಏಕಾಗ್ರಚಿತ್ತರಾಗಿ ಶಾಂತಿಯನ್ನೂ, ಶುಭಮಾರ್ಗವನ್ನೂ ಕ್ಷೇಮ, ಬಲ, ಉತ್ತಮವಾದ ಕಲ್ಯಾಣಸಿದ್ಧಿ, ಇವುಗಳನ್ನೂ ನಿನಗೆ ಜಾಗ್ರತೆಯಾಗಿ ಕೊಡಲಿ.

೨೧. ಸದಾ ಸೂರ್ಯನಲ್ಲಿ ಭಕ್ತಿಯುಳ್ಳವುಗಳಾಗಿ ಸರ್ವತ್ರ ಇರುವ ಪರ್ವತಗಳೂ, ಮಹತ್ತಾಗಿ ಬೆಳೆದಿರುವ ವೃಕ್ಷಗಳೂ, ನಿನಗೆ ಶಾಂತಿಯನ್ನುಂಟುಮಾಡಲಿ.

೨೨. ಮತ್ತು ಸಮಸ್ತ ಸಮುದ್ರಗಳು, ನದಿಗಳು, ವಿಸ್ತಾರವಾದ ಮಹಾರಣ್ಯಗಳು ಇವೆಲ್ಲವೂ ಸೂರ್ಯಾರಾಧನೆಯಲ್ಲಿ ನಿರತವಾಗಿರುತ್ತಾ ನಿನಗೆ ಮಂಗಳವನ್ನುಂಟುಮಾಡಲಿ.

೨೩. ಘೋರವಾದ ರೂಪವೂ, ಮಹಾಬಲವೂ, ಉಳ್ಳವರೆನಿಸಿ ಭೂಲೋಕಸಂಚಾರಿಗಳೂ, ಅಂತರಿಕ್ಷಸಂಚಾರಿಗಳೂ ಆದ ರಾಕ್ಷಸರು

ಪಾತಾಲೇ ರಾಕ್ಷಸಾ ಯೇ ತು ನಿತ್ಯಂ ಸೂರ್ಯಾರ್ಚನೇ ರತಾಃ ।
ಶಾಂತಿಂ ಕುರ್ವಂತು ತೇ ಸರ್ವೇ ತೇಜಸಾ ನಿತ್ಯದೀಪಿತಾಃ ॥ ೨೪ ॥

ಪ್ರೇತಾಃ ಪ್ರೇತಗಣಾಃ ಸರ್ವೇ ಯೇ ಪ್ರೇತಾಃ ಸರ್ವತೋಮುಖಾಃ ।
ಅತಿದೀಪ್ತಾಶ್ಚ ಯೇ ಪ್ರೇತಾ ಯೇ ಪ್ರೇತಾ ರುಧಿರಾಶನಾಃ ॥ ೨೫ ॥

ಅಂತರಿಕ್ಷೇ ಚ ಯೇ ಪ್ರೇತಾಸ್ತಥಾ ಯೇ ಸ್ವರ್ಗವಾಸಿನಃ ।
ಪಾತಾಲೇ ಭೂತಲೇ ವಾಪಿ ಯೇ ಪ್ರೇತಾಃ ಕಾಮರೂಪಿಣಃ ॥ ೨೬ ॥

ಏಕಚಕ್ರರಥೋ ಯಸ್ಯ ಯಸ್ತು ದೇವೋ ವೃಷಧ್ವಜಃ ।
ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ತೇ ಸದಾ ॥ ೨೭ ॥

ಯೇ ಪಿಶಾಚಾ ಮಹಾವೀರ್ಯಾ ವೃದ್ಧಿಮಂತೋ ಮಹಾಬಲಾಃ ।
ನಾನಾರೂಪಧರಾಃ ಸರ್ವೇ ಸರ್ವೇ ಚ ಗುಣವತ್ತರಾಃ ॥ ೨೮ ॥

ಅಂತರಿಕ್ಷೇ ಪಿಶಾಚಾ ಯೇ ಸ್ವರ್ಗೇ ಯೇ ಚ ಮಹಾಬಲಾಃ ।
ಪಾತಾಲೇ ಭೂತಲೇ ಯೇ ಚ ಬಹುರೂಪಮನೋಜವಾಃ ॥ ೨೯ ॥

---

೨೪. ಮತ್ತು ಪಾತಾಳಲೋಕದಲ್ಲಿರುವ ರಾಕ್ಷಸರು, ಇವರೆಲ್ಲಾ ಸೂರ್ಯಾರ್ಚನೆಯಲ್ಲಿ ಸರ್ವದಾ ಆಸಕ್ತರಾಗಿ ತೇಜಸ್ಸಿನಲ್ಲಿ ಆದಿತ್ಯನಂತೆ ನಿತ್ಯಪ್ರಕಾಶವುಳ್ಳವರಾಗಿರುತ್ತಾ ನಿನಗೆ ಶಾಂತಿಯನ್ನುಂಟುಮಾಡಲಿ.

೨೫-೨೭. ಎಲ್ಲಾ ಪ್ರೇತಗಣಗಳೂ, ಸರ್ವತೋಮುಖಪ್ರೇತಗಳೂ, ಅತಿ ಪ್ರಕಾಶಮಾನಗಳಾದ ಪ್ರೇತಗಳೂ, ರಕ್ತಪಾನಮಾಡುವ ಪ್ರೇತಗಳೂ, ಅಂತರಿಕ್ಷ ಸಂಚಾರಿ ಪ್ರೇತಗಳೂ, ಸ್ವರ್ಗದಲ್ಲೂ, ಭೂಮಿಯಲ್ಲೂ, ಪಾತಾಳದಲ್ಲೂ ಇರುವ ಪ್ರೇತಗಳೂ, ಕಾಮರೂಪಿಗಳಾದ ಪ್ರೇತಗಳೂ, ಇವೇ ಮೊದಲಾದ ಶಿವನ ಪರಿವಾರದ ಪ್ರೇತಗಳೆಲ್ಲರೂ ಏಕಚಕ್ರಯುತವಾದ ರಥವುಳ್ಳವನೂ, (ವೃಷ) ಧರ್ಮಧ್ವಜನೂ, ಆದ ಸೂರ್ಯದೇವನ ಅನುಗ್ರಹದಿಂದ ಸದಾ ನಿನಗೆ ಶಾಂತಿಯನ್ನುಂಟುಮಾಡಲಿ.

೨೮-೨೯. ಆಕಾಶ, ಸ್ವರ್ಗ, ಭೂಮಿ, ಪಾತಾಳ ಈ ಸ್ಥಳಗಳಲ್ಲಿ ವಾಸಿಸುತ್ತಿರುವವರೂ, ಮಹಾಐಶರ್ಯವಂತರೂ, ಬುದ್ಧಿವಂತರೂ, ಬಲಶಾಲಿಗಳೂ, ನಾನಾರೂಪವನ್ನು ಧರಿಸಬಲ್ಲವರೂ, ಅತ್ಯಂತ ಗುಣಶಾಲಿಗಳೂ, ಮಹಾಬಲಶಾಲಿಗಳೂ, ಬಹುರೂಪರೂ, ಮನೋವೇಗವುಳ್ಳವರೂ, ಆಗಿರುವ ಎಲ್ಲಾ ಪಿಶಾಚರೆಂಬ ದೇವಯೋನಿಗಳೂ ನಿನಗೆ ಜಾಗ್ರತೆಯಾಗಿ ಶಾಂತಿಯನ್ನು ಉಂಟುಮಾಡಲಿ.

ಯಸ್ಯಾಹಂ ಸಾರಥಿರ್ವೀರ ಯಸ್ಯ ತ್ವಂ ತುರಗಃ ಸದಾ ।
ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ತೇಽಂಜಸಾ ॥ ೩೦ ॥

ಅಪಸ್ಮಾರಗ್ರಹಾಃ ಸರ್ವೇ ಸರ್ವೇ ಚಾಪಿ ಜ್ವರಗ್ರಹಾಃ ।
ಯೇ ಚ ಸ್ವರ್ಗಸ್ಥಿತಾಃ ಸರ್ವೇ ಭೂಮಿಗಾ ಯೇ ಗ್ರಹೋತ್ತಮಾಃ ॥ ೩೧ ॥

ಪಾತಾಲೇ ತು ಗ್ರಹಾ ಯೇ ಚ ಯೇ ಗ್ರಹಾಃ ಸರ್ವತೋ ಗತಾಃ ।
ದಕ್ಷಿಣೇ ಕಿರಣೇ ಯಸ್ಯ ಸೂರ್ಯಸ್ಯ ಚ ಸ್ಥಿತೋ ಹರಿಃ ॥ ೩೨ ॥

ಹರೋ ಯಸ್ಯ ಸದಾ ವಾಮೇ ಲಲಾಟೇ ಕಂಜಜಃ ಸ್ಥಿತಃ ।
ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ತೇ ಸದಾ ॥ ೩೩ ॥

ಇತಿ ದೇವಾದಯಃ ಸರ್ವೇ ಸೂರ್ಯಯಜ್ಞವಿಧಾಯಿನಃ ।
ಕುರ್ವಂತು ಜಗತಃ ಶಾಂತಿಂ ಸೂರ್ಯಭಕ್ತೇಷು ಸರ್ವದಾ ॥ ೩೪ ॥

---

೩೦. ಯಾವ ದೇವನಿಗೆ ನೀನು ವಾಹನವಾಗಿರುವೆಯೋ ಆ ಸ್ವಾಮಿಯ ಮಹಿಮೆಯಿಂದಲೂ, ಯಾವ ದೇವನಿಗೆ ನಾನು ಸಾರಥಿ ಆಗಿರುವೆನೋ ಆ ಸ್ವಾಮಿಯ ಮಹಿಮೆಯಿಂದಲೂ ನಿನಗೆ ಜಾಗ್ರತೆ ಶಾಂತಿಯುಂಟಾಗಲಿ.

೩೧. ಎಲ್ಲಾ ಅಪಸ್ಮಾರಗ್ರಹಗಳು, ಜ್ವರಗ್ರಹಗಳು, ಸ್ವರ್ಗಸ್ಥಿತವಾದಗ್ರಹಗಳು, ಭೂಮಿಯಲ್ಲಿರುವ ಶ್ರೇಷ್ಠವಾದ ಗ್ರಹಗಳು,

೩೨. ಪಾತಾಳದಲ್ಲಿರುವ ಗ್ರಹಗಳು, ಸರ್ವತ್ರ ಇರತಕ್ಕ ಗ್ರಹಗಳು, ಎಲ್ಲರೂ ಸೂರ್ಯಪೂಜೆಯಲ್ಲಿ ಆಸಕ್ತರಾಗಿ ನಿನಗೆ ಶಾಂತಿಯನ್ನುಂಟುಮಾಡಲಿ.

೩೩. ಸೂರ್ಯದೇವನ ಬಲಭಾಗದ ಕಿರಣದಲ್ಲಿ ವಿಷ್ಣುವೂ, ಎಡಭಾಗದ ಕಿರಣದಲ್ಲಿ ಈಶ್ವರನೂ, ಹಣೆಯಪ್ರದೇಶದ ಕಿರಣದಲ್ಲಿ ಬ್ರಹ್ಮನೂ ಇರುವರು. ಹೀಗೆ ಆ ದೇವನ ತೇಜಸ್ಸಿನಿಂದ ಉತ್ಪನ್ನರಾದ ಆ ತ್ರಿಮೂರ್ತಿಗಳೂ ನಿನಗೆ ಶಾಂತಿಯನ್ನು ಉಂಟುಮಾಡಲಿ.

೩೪. ಹೀಗೆ ಸೂರ್ಯಯಜ್ಞವ (ಆರಾಧನೆಯನ್ನು) ಮಾಡತಕ್ಕ ದೇವತೆಗಳೇ ಮೊದಲಾದ, ಸಮಸ್ತರೂ ಜಗತ್ತಿನಲ್ಲಿರುವ ಸೂರ್ಯಭಕ್ತರಿಗೆಲ್ಲ ಸರ್ವದಾ ಶಾಂತಿಯನ್ನು ಕೊಡಲಿ.

ಜಯಃ ಸೂರ್ಯಾಯ ದೇವಾಯ ತಮೋಹಂತ್ರೇ ವಿವಸ್ವತೇ ।
ಜಯಪ್ರದಾಯ ಸೂರ್ಯಾಯ ಭಾಸ್ಕರಾಯ ನಮೋಽಸ್ತು ತೇ ॥ ೩೫ ॥

ಗ್ರಹೋತ್ತಮಾಯ ದೇವಾಯ ಜಯಃ ಕಲ್ಯಾಣಕಾರಿಣೇ ।
ಜಯಃ ಪದ್ಮವಿಕಾಸಾಯ ಬುಧರೂಪಾಯ ತೇ ನಮಃ ॥ ೩೬ ॥

ಜಯಃ ದೀಪ್ತಿವಿಧಾನಾಯ ಜಯಃ ಶಾಂತಿವಿಧಾಯಿನೇ ।
ತಮೋಘ್ನಾಯ ಜಯಾಯೈವ ಅಜಿತಾಯ ನಮೋನಮಃ ॥ ೩೭ ॥

ಜಯಾರ್ಕಜಯ ದೀಪ್ತೀಶ ಸಹಸ್ರಕಿರಣೋಜ್ಜ್ವಲ ।
ಜಯ ನಿರ್ಮಿತಲೋಕಸ್ತ್ವಮಜಿತಾಯ ನಮೋನಮಃ ॥ ೩೮ ॥

ಗಾಯತ್ರೀದೇಹರೂಪಾಯ ಸಾವಿತ್ರೀದಯಿತಾಯ ಚ ।
ಧರಾಧರಾಯ ಸೂರ್ಯಾಯ ಮಾರ್ತಂಡಾಯ ನಮೋನಮಃ ॥ ೩೯ ॥

---

೩೫. ಕತ್ತಲೆಯನ್ನು ಧ್ವಂಸಮಾಡತಕ್ಕವನೂ, ವಿವಸ್ವತ್‌ಸಂಜ್ಞಕನೂ ಆದ ಸೂರ್ಯದೇವನಿಗೆ ಜಯವಾಗಲಿ. ಜಯಕೊಡತಕ್ಕವನೂ, ಪ್ರಕಾಶಕೊಡತಕ್ಕವನೂ ಆದ ಸೂರ್ಯನೇ ! ನಿನಗೆ ನಮಸ್ಕಾರ.

೩೬. ಗ್ರಹಗಳಲ್ಲಿ ಉತ್ತಮನೂ, ಶುಭಕರನಾದ ದೇವನೂ ಆದ ನೀನು ಸರ್ವೋತ್ಕೃಷ್ಟನಾಗು. ಕಮಲಗಳನ್ನು ವಿಕಾಸಗೊಳಿಸುವವನೂ, ದೇವತಾಸ್ವರೂಪನೂ ಆದ ನಿನಗೆ ನಮಸ್ಕಾರ.

೩೭. ಪ್ರಕಾಶಕೊಡತಕ್ಕವನೂ, ಶಾಂತಿಯನ್ನು ವಿಧಿಸತಕ್ಕವನೂ, ತಮಸ್ಸನ್ನು ಧ್ವಂಸಮಾಡತಕ್ಕವನೂ, ಯಾರಿಂದಲೂ ಯಾವಾಗಲೂ ಜಯಿಸಲ್ಪಡದೆ ಇರತಕ್ಕವನೂ, ಜಯಸ್ವರೂಪನೂ ಆದ ನಿನಗೆ ನಮಸ್ಕಾರ.

೩೮. ಓ ! ಅರ್ಕನೇ ! ದೀಪ್ತೀಶನೇ ! ಸಹಸ್ರಕಿರಣದಿಂದ ಉಜ್ವಲನಾದವನೇ ! ಲೋಕನಿರ್ಮಾಣಕರ್ತನೇ ! ನೀನು ಸರ್ವೋತ್ಕೃಷ್ಟನಾಗು. ಅಜಿತನಾದ ನಿನಗೆ ನಮಸ್ಕಾರ.

೩೯. ಗಾಯಿತ್ರಿಯ ದೇಹಸ್ವರೂಪನೂ, ಸಾವಿತ್ರಿಯ ಹೃದಯಸ್ವರೂಪನೂ ಭೂಮಿಯನ್ನು ಧರಿಸಿದವನೂ, ಸೂರ್ಯನೂ, ಮಾರ್ತಂಡನೂ, ಆದ ನಿನಗೆ ನಮಸ್ಕಾರ ಎಂದನು.

॥ ಸುಮಂತುರುವಾಚ ॥

ಏವಂ ಹಿ ಕುರ್ವತಃ ಶಾಂತಿಮರುಣಸ್ಯ ಮಹೀಪತೇ ।
ಶ್ರೇಯಸೇ ವೈನತೇಯಸ್ಯ ಗರುಡಸ್ಯ ಮಹಾತ್ಮನಃ ॥ ೪೦ ॥

ಏತಸ್ಮಿನ್ನೇವ ಕಾಲೇ ತು ಸುಪರ್ಣಃ ಪತ್ರವಾನಭೂತ್ ।
ತೇಜಸಾ ಬುಧಸಂಕಾಶಃ ಬಲೇನ ಹರಿಣಾ ಸಮಃ ॥ ೪೧ ॥

ಸಂಪೂರ್ಣಾವಯವೋ ರಾಜನ್ ಯಥಾಪೂರ್ವಂ ತಥಾಽಭವತ್ ।
ಪ್ರಸಾದಾದ್ದೇವದೇವಸ್ಯ ಭಾಸ್ಕರಸ್ಯ ಮಹಾತ್ಮನಃ ॥ ೪೨ ॥

ಏವಮನ್ಯೇಽಪಿ ರಾಜೇಂದ್ರ ಮಾನವಾ ಯೇ ಚ ರೋಗಿಣಃ ।
ಅಸ್ಮಿನ್ಕೃತೇಽಗ್ನಿಕಾರ್ಯೇ ತು ವಿರುಜಾಸ್ತೇ ಭವಂತಿ ಹಿ ॥
ತಸ್ಮಾದ್ಯತ್ನೇನ ಕರ್ತವ್ಯಮಗ್ನಿಕಾರ್ಯಂ ವಿಶೇಷತಃ ॥ ೪೩ ॥

---

೪೦. ಬಳಿಕ ಸುಮಂತುಮುನಿವರ್ಯರು ಹೇಳುತ್ತಾರೆ:—ಎಲೈ ರಾಜನೇ! ಮಹಾತ್ಮನೂ, ವಿನತಾಪುತ್ರನೂ ಆದ ಗರುಡನಶ್ರೇಯಸ್ಸಿಗೋಸ್ಕರ ಹೀಗೆ ಅರುಣನು ಶಾಂತಿಸ್ವಸ್ತ್ಯಯನ ಮಾಡುತ್ತಿದ್ದನಷ್ಟೆ.

೪೧. ಹಾಗೆ ಪಠನಮಾಡುತ್ತಿರುವ ಕಾಲದಲ್ಲಿ ಗರುಡನಿಗೆ ರೆಕ್ಕೆಯ ಗರಿಗಳು ಹುಟ್ಟಿ, ತೇಜಸ್ಸಿನಲ್ಲಿ ದೇವತಾಸಮಾನನೂ, ಬಲದಲ್ಲಿ ಹರಿಗೆ ಸಮಾನನೂ ಆದನು.

೪೨. ಮಹಾತ್ಮನೂ, ದೇವದೇವನೂ ಆದ ಸೂರ್‍ಯನ ಅನುಗ್ರಹದಿಂದ ಅವನ ಅವಯವಗಳೆಲ್ಲಾ ಪುಷ್ಟಿಯಾಗಿ ತುಂಬಿಕೊಂಡು ಪೂರ್ವದಲ್ಲಿದ್ದಂತೆ ಅವನು ದೃಢಾಂಗನಾದನು.

೪೩. ಎಲೈ ರಾಜೇಂದ್ರನೇ! ಕೇಳು : ರೋಗಿಗಳಾದ ಮನುಷ್ಯರು; ಅರುಣನು ನಿರೂಪಿಸಿರುವ ಈ ಬಗೆಯಾದ ಅಗ್ನಿಕಾರ್‍ಯವೆಂಬ ಶಾಂತಿಕರ್ಮವನ್ನು ಮಾಡಿದರೆ ಅವರು ರೋಗರಹಿತರಾಗುತ್ತಾರೆ. ಆದುದರಿಂದ ರೋಗಗ್ರಸ್ತರಾದವರಿಗೆ ರೋಗಪರಿಹಾರವಾಗುವುದಕ್ಕಾಗಿ ಯತ್ನದಿಂದ ವಿಧಿಪ್ರಕಾರವಾಗಿ ಈ ಅಗ್ನಿಕಾರ್‍ಯವೆಂಬ ಶಾಂತಿಕರ್ಮವನ್ನು ಮಾಡಬೇಕು.

ಕರಣೀಯಂ ಚ ರಾಜೇಂದ್ರ ಮಾನವೈಶ್ಚ ಪ್ರರೋಗಿಭಿಃ ।
ಅಸ್ಮಿನ್ ಕೃತೇಽಗ್ನಿಕಾರ್ಯೇ ತು ವಿರುಜಾಸ್ತೇ ಭವಂತಿ ಹಿ ॥ ೪೪ ॥

ಗ್ರಹೋಪಘಾತೇ ದುರ್ಭಿಕ್ಷ ಉತ್ಪಾತೇಷು ಚ ಕೃತ್ಸ್ನಶಃ ।
ಅವರ್ಷಮಾಣೇ ಪರ್ಜನ್ಯೇ ಲಕ್ಷಹೋಮಸಮನ್ವಿತಃ ॥ ೪೫ ॥

ಪೂಜಯಿತ್ವಾ ಪ್ರಸೂರ್ಕ್ತಂ ತು ಧ್ಯಾತ್ವಾ ವೀರಂ ಪ್ರಯತ್ನತಃ ।
ವಾರುಣೈಶ್ಚ ತಥಾ ಸೂಕ್ತೈರ್ಹೋಮಂ ಕುರ್ಯಾದ್ವಿಚಕ್ಷಣಃ ॥ ೪೬ ॥

ಚೇತಸಾ ಸುಪ್ರಸನ್ನೇನ ಸರ್ಪಿಷಾ ಮಧುನಾ ಸಹ ।
ತಿಲೈರ್ಯವೈಶ್ಚ ಸಹಿತೈಃ ಪಾಯಸಂ ಮಧುನಾ ತಥಾ ॥ ೪೭ ॥

ಇದಂ ಚ ಶಾಂತಿಕಂ ಕುರ್ಯಾತ್ ಬಲಿಂ ದದ್ಯಾತ್ಪ್ರಯತ್ನತಃ ।
ಏವಂ ಕೃತೇ ಶ್ರಿಯಂ ದೇವಾ ವರ್ಷಂತೇ ಕಾಮನಾ ನೃಣಾಂ ॥ ೪೮ ॥

---

೪೪. ಎಲೈ ರಾಜೇಂದ್ರನೇ! ಪ್ರಬಲವಾದ ರೋಗವುಳ್ಳ ಮಾನವರು ಈ ಅಗ್ನಿ ಕಾರ್ಯವನ್ನು ಮಾಡಲೇಬೇಕು. ಇದನ್ನು ಮಾಡಿದರೆ ಅವರು ರೋಗರಹಿತರಾಗಿ ದೃಢಾಂಗರಾಗುತ್ತಾರೆ.

೪೫. ಗ್ರಹಗಳ ತೊಂದರೆಯಿರುವಾಗಲೂ, ದುರ್ಭಿಕ್ಷವೊದಗಿದ ಕಾಲದಲ್ಲಿಯೂ, ಎಲ್ಲಾ ಬಗೆಯ ಉತ್ಪಾತಗಳು ಕಾಣಿಸಿದಾಗಲೂ, ಅನಾವೃಷ್ಟಿಯುಂಟಾದಾಗಲೂ ಪ್ರಾಜ್ಞನು ಲಕ್ಷಹೋಮ ಮಾಡಲುದ್ಯುಕ್ತನಾಗಿ

೪೬. ಸೂರ್ಯನನ್ನು ಪೂಜೆಮಾಡಿ, ಪ್ರಸೂಕ್ತನಾದ ಅಗ್ನಿದೇವನನ್ನೂ ಯತ್ನದಿಂದ ಧ್ಯಾನಿಸಿ, ವಿಚಕ್ಷಣನಾಗಿ ವರುಣಸೂಕ್ತಗಳಿಂದ ಹೋಮವನ್ನು ಮಾಡಬೇಕು

೪೭. ಸುಪ್ರಸನ್ನವಾದ ಮನಸ್ಸಿನಿಂದ ಕೂಡಿದವನಾಗಿ ತುಪ್ಪ, ಜೇನು ತುಪ್ಪ; ಎಳ್ಳು, ಯವೆ; ಪಾಯಸ, ಜೇನುತುಪ್ಪ; ಇವುಗಳನ್ನು ಆಹುತಿಯಾಗಿ ಹೋಮಮಾಡಬೇಕು.

೪೮. ವಿಧಿವಿಧಾನದಂತೆ ಈ ಶಾಂತಿಹೋಮವನ್ನು ಮಾಡಿ, ಪ್ರಯತ್ನದಿಂದ ಬಲಿ ಪ್ರದಾನವನ್ನೂ ಮಾಡಬೇಕು. ಹೀಗೆ ಮಾಡಿದರೆ ದೇವತೆಗಳು ಆ ಮನುಷ್ಯರ ಸಮಸ್ತ ಇಷ್ಟಾರ್ಥಗಳನ್ನೂ ಸಲ್ಲಿಸುತ್ತಾರೆ.

ಇತ್ಯೇವಂ ಶಾಂತಿಕಾಧ್ಯಾಯಂ ಯಃ ಪಠೇಚ್ಛೃಣುಯಾದಪಿ ।
ವಿಧಿನಾ ಸರ್ವಲೋಕಸ್ತು ಧ್ಯಾಯಮಾನೋ ದಿವಾಕರಂ ॥ ೪೯ ॥

ಸ ವಿಜಿತ್ಯ ರಣೇ ಶತ್ರೂಂ ಮಾನಂ ಚ ಪರಮಂ ಲಭೇತ್ ।
ಅಕ್ಷಯಂ ಮೋದತೇ ಕಾಲಮತಿರಸ್ಕೃತಶಾಸನಃ ॥ ೫೦ ॥

ವ್ಯಾಧಿಭಿರ್ನಾಭಿಭೂಯೇತ ಪುತ್ರಪೌತ್ರೈಃ ಪ್ರತಿಷ್ಠಿತಃ ।
ಭವೇದಾದಿತ್ಯಸದೃಶಸ್ತೇಜಸಾ ಪ್ರಭಯಾ ತಥಾ ॥ ೫೧ ॥

ಯಾನುದ್ದಿಶ್ಯ ಪಠೇದ್ವೀರ ವಾಚಕೋ ಮಾನವೋ ಭುವಿ ।
ನ ಪೀಡ್ಯತೇ ಚ ತೈ ರೋಗೈರ್ವಾತಪಿತ್ತಕಫಾತ್ಮಕೈಃ ॥ ೫೨ ॥

ನಾಕಾಲೇ ಮರಣಂ ತಸ್ಯ ನ ಸರ್ಪೈಶ್ಚಾಪಿ ದಶ್ಯತೇ ।
ನ ವಿಷಂ ಕ್ರಮತೇ ದೇಹೇ ನ ಜಡಾಂಧ್ಯಂ ನ ಮೂಕತಾ ॥ ೫೩ ॥

---

೪೯. ಈ ಶಾಂತಿಕರ್ಮವನ್ನು ನಿರೂಪಿಸಿರುವ ಅಧ್ಯಾಯನವನ್ನು ವಿಧಿಪ್ರಕಾರವಾಗಿ ಯಾವನು ಪಠಿಸುತ್ತಾನೋ, ಮತ್ತು ಶ್ರವಣಮಾಡುತ್ತಾನೋ ಅವನು ಸೂರ್ಯನನ್ನು ಧ್ಯಾನಮಾಡುತ್ತಾ ಲೋಕದಲ್ಲಿ ಪ್ರಸಿದ್ಧನೆನಿಸುತ್ತಾನೆ.

೫೦. ಅಲ್ಲದೆ ಯುದ್ಧದಲ್ಲಿ ಶತ್ರುವನ್ನು ಗೆದ್ದು ತನ್ನ ಆಜ್ಞೆಗೆ ಎಲ್ಲರೂ ತಲೆಬಾಗುವಂತೆ ದರ್ಪದಿಂದ ಇರುತ್ತಾ ದೀರ್ಘಕಾಲ ಶ್ರೇಷ್ಠವಾದ ಗೌರವವನ್ನು ಹೊಂದುವನು.

೫೧. ಮತ್ತು ಆತನು ಪುತ್ರಪೌತ್ರರಿಂದ-ಪ್ರತಿಷ್ಠಿನಾಗುತ್ತಾನೆ. ಸಕುಟುಂಬನಾಗಿ ಅವನು ಎಂದೂ ವ್ಯಾಧಿಪೀಡಿತನಾಗಲಾರನು. ಅವನು ತೇಜಸ್ಸಿನಿಂದಲೂ ಮತ್ತು ಪ್ರಭೆಯಿಂದಲೂ ಸೂರ್ಯನಿಗೆ ಸದೃಶನಾಗುವನು.

೫೨. ಭಕ್ತನಾದವನು ಪೌರಾಣಿಕರು ವಾಚನಮಾಡುವ ಪುರಾಣವನ್ನು ಭಕ್ತಿಯಿಂದ ಶ್ರವಣಮಾಡಿದರೆ ವಾತರೋಗ, ಪಿತ್ತರೋಗ, ಕಫರೋಗ ಇವುಗಳಿಂದ ಎಂದೂ ಪೀಡಿತನಾಗುವುದಿಲ್ಲ.

೫೩. ಮತ್ತು ಅವನಿಗೆ ಅಕಾಲಮರಣವೂ ಉಂಟಾಗುವುದಿಲ್ಲ. ಸರ್ಪಗಳೂ ಅವನನ್ನು ಕಚ್ಚುವುದಿಲ್ಲ. ಹಾಗೆ ಕಚ್ಚಿದರೂ ಅವನ ದೇಹದಲ್ಲಿ ವಿಷವು ವ್ಯಾಪಿಸುವುದಿಲ್ಲ. ಜಡತ್ವ, ಕುರುಡು, ಮೂಕತ್ವ ಇವಾವುದೂ ಅವನಿಗೆ ಸಂಭವಿಸುವುದಿಲ್ಲ.

ನಚೋತ್ಪತ್ತಿಭಯಂ ತಸ್ಯ ನಾಭಿಚಾರಕಜಂ ಭವೇತ್ ।
ಯೇ ರೋಗಾ ಯೇ ಮಹೋತ್ಪಾತಾ ಯೇऽಹಯಶ್ಚ ಮಹಾವಿಷಾಃ
॥ ೫೪ ॥
ತೇ ಸರ್ವೇ ಪ್ರಶಮಂ ಯಾಂತಿ ಶ್ರವಣಾದಸ್ಯ ಭಾರತ ।
ಯತ್ಪುಣ್ಯಂ ಸರ್ವತೀರ್ಥಾನಾಂ ಗಂಗಾದೀನಾಂ ವಿಶೇಷತಃ ॥
ತತ್ಪುಣ್ಯಂ ಕೋಟಿಗುಣಿತಂ ಪ್ರಾಪ್ನೋತಿ ಶ್ರವಣಾದಿಭಿಃ ॥ ೫೫ ॥

ದಶಾನಾಂ ರಾಜಸೂಯಾನಾಮನ್ಯೇಷಾಂ ಚ ವಿಶೇಷತಃ ।
ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿವಿವರ್ಜಿತಃ ॥ ೫೬ ॥

ಗೋಘ್ನಶ್ಚೈವ ಕೃತಘ್ನಶ್ಚ ಬ್ರಹ್ಮಹಾ ಗುರುತಲ್ಪಗಃ ।
ಶರಣಾಗತದೀನಾರ್ತಮಿತ್ರವಿಶ್ರಂಭಘಾತಕಃ ॥ ೫೭ ॥

---

೫೪. ಅವನಿಗೆ ಮಾಟದಭಯವೂ ಇರುವುದಿಲ್ಲ, ಪುನರ್ಜನ್ಮಭಯವೂ ಇಲ್ಲ. ಎಲೈ ಭರತಕುಲಜನೇ! ಕೇಳು ರೋಗಗಳೂ, ಮಹೋತ್ಪಾತಗಳೂ, ಮಹಾವಿಷ ಸರ್ಪಭಯಗಳೂ ಇವೆಲ್ಲವೂ, ಇದನ್ನು ಶ್ರವಣಮಾಡುವುದರಿಂದ ಕೂಡಲೆ ಶಾಂತಿ ಹೊಂದುತ್ತವೆ.

೫೫. ಇದನ್ನು ಶ್ರವಣಮಾಡಿದವನಿಗೆ ಗಂಗಾದಿ ಸರ್ವತೀರ್ಥಗಳಲ್ಲಿ ಸ್ನಾನ ಮಾಡುವುದರಿಂದ ಬರುವ ಪುಣ್ಯದ ಕೋಟಿಯಷ್ಟು ಹೆಚ್ಚಿನ ಪುಣ್ಯವು ದೊರೆಯುವುದು.

೫೬. ಮತ್ತು ಹತ್ತು ರಾಜಸೂಯಯಾಗಗಳನ್ನು ಮಾಡಿದಷ್ಟು ಫಲವು ಬರುವುದು. ಅಲ್ಲದೆ ಇತರ ಯಾಗಗಳನ್ನು ಮಾಡಿದುದರಿಂದ ಬರುವಂಥ ವಿಶೇಷವಾದ ಫಲವೂ ಸಹ ಉಂಟಾಗುವುದೆಂದು ತಿಳಿಯಬೇಕು. ಆತನು ನೂರುವರ್ಷಗಳು ಮುಗಿಯುವವರೆಗೂ-ಆರೋಗದೃಢಕಾಯನಾಗಿ ಸುಖವಾಗಿ ಬದುಕುವನು.

೫೭. ಗೋವಧೆ ಮಾಡಿದವನು, ಉಪಕಾರಸ್ಮರಣೆಯಿಲ್ಲದವನು, ಬ್ರಹ್ಮಹತ್ಯೆ ಮಾಡಿದವನು, ಗುರುಪತ್ನೀ ಸಂಗಮಾಡಿದವನು, ಶರಣಾಗತರಿಗೂ (ಮರೆಹೊಕ್ಕವರು) ದೀನರಿಗೂ, ನೊಂದವರಿಗೂ, ಸ್ನೇಹಿತರಿಗೂ ನಂಬಿಸಿ ಮೋಸಮಾಡುವವನು,

ದುಷ್ಟಃ ಪಾಪಸಮಾಚಾರಃ ಪಿತೃಹಾ ಮಾತೃಹಾ ತಥಾ ।
ಶ್ರವಣಾದಸ್ಯ ಪಾಪೇಭ್ಯೋ ಮುಚ್ಯತೇ ನಾತ್ರಸಂಶಯಃ　　॥ ೫೮ ॥

ಇತಿಹಾಸಮಿಮಂ ಪುಣ್ಯಮಗ್ನಿಕಾರ್ಯಮನುತ್ತಮಂ ।
ನ ದದ್ಯಾತ್ಕಸ್ಯಚಿದ್ವೀರ ಮೂರ್ಖಸ್ಯ ಕಲುಷಾತ್ಮನಃ　　॥ ೫೯ ॥

ಸೂರ್ಯಭಕ್ತೇ ಸದಾ ದೇಯಂ ಸೂರ್ಯೇಣ ಕಥಿತಂ ಪುರಾ ।
ಅರುಣಸ್ಯ ಮಹಾಬಾಹೋ ಗರುಡಸ್ಯಾರುಣೇನ ಚ　　॥ ೬೦ ॥

ಗರುಡೇನ ಪುರಾ ಪ್ರೋಕ್ತಂ ಭೋಜಕಾನಾಂ ಮಹಾತ್ಮನಾಂ ।
ಸೂರ್ಯಶರ್ಮಸುಖಾದೀನಾಂ ಶಾಖದ್ವೀಪೇ ಮಹೀಪತೇ　　॥ ೬೧ ॥

---

೫೮. ಮತ್ತು ದುಷ್ಟನು, ಪಾಪಾಚರಣೆಯುಳ್ಳವನು, ಪಿತೃಹತ್ಯ ಮಾತೃಹತ್ಯ ಗಳನ್ನು ಮಾಡಿದವನು, ಮತ್ತು ಇತರ ನಾನಾಪಾಪಗಳನ್ನು ಮಾಡಿದವನು, ಇವರು ಗಳೆಲ್ಲ ಇದನ್ನು ಶ್ರವಣಮಾಡುವುದರಿಂದ ಸಕಲಪಾಪಗಳಿಂದಲೂ ನಿಶ್ಚಯವಾಗಿ ಮುಕ್ತರಾಗುವರು.

೫೯. ಅಯ್ಯಾ ವೀರನೇ! ಕೇಳು; ಪುಣ್ಯಕರವಾದ ಈ ಇತಿಹಾಸವನ್ನೂ, ಸರ್ವೋತ್ತಮವಾದ ಅಗ್ನಿಕಾರ್ಯವಿಧಿಯನ್ನೂ, ಕಲ್ಮಷಸ್ವಭಾವವುಳ್ಳವನಿಗೂ, ಮೂರ್ಖ ನಾದವನಿಗೂ ಉಪದೇಶಮಾಡಬಾರದು.

೬೦. ಸೂರ್ಯನ ನಿಜವಾದ ಭಕ್ತನಿಗೇ ಯಾವಾಗಲೂ ಇದನ್ನು ಉಪದೇಶ ಮಾಡಬೇಕೆಂದು ಹಿಂದೆ ಸೂರ್ಯನೇ ಅರುಣನಿಗೆ ತಿಳಿಸಿರುವನು. ಅನಂತರ ಆ ಅರು ಣನು ತನ್ನ ತಮ್ಮನಾದ ಗರುಡನಿಗೆ ಹೇಳಿರುವನು.

೬೧. ಎಲೈ ರಾಜನೇ! ಪುಣ್ಯಕರವಾದ ಈ ವಿಚಾರವನ್ನು ಗರುಡನು ಪೂರ್ವ ದಲ್ಲಿ ಶಾಕದ್ವೀಪ ನಿವಾಸಿಗಳಾದ ಸೂರ್ಯಶರ್ಮ, ಸುಖಶರ್ಮ ಮೊದಲಾದ ಭೋಜಕ ಮಹಾಪುರುಷರಿಗೆ ಹೇಳಿದನು.

ತೈಶ್ಚಾಪಿ ಕಥಿತಂ ಪುಣ್ಯಂ ಮುನೇರ್ವ್ಯಾಸಸ್ಯ ಧೀಮತಃ ।
ತೇನಾಪಿ ಕಥಿತಂ ಪುಣ್ಯಂ ಸರ್ವಪಾಪಭಯಾಪಹಂ ॥ ೬೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಗರುಡಾರುಣಸಂವಾದೇ ಶಾಂತಿಕವರ್ಣನಂ ನಾಮ
ಅಶೀತ್ಯುತ್ತರಶತತಮೋಽಧ್ಯಾಯಃ



---

೬೨. ಆ ಭೋಜಕರು ಪುಣ್ಯಕರವಾದ ಈ ವಿಚಾರವನ್ನು ಬುದ್ಧಿಶಾಲಿಯಾದ ವ್ಯಾಸಮಹರ್ಷಿಗೆ ತಿಳಿಸಿದರು. ಆ ವ್ಯಾಸಮುನಿಯು ಸರ್ವಪಾಪಗಳ ಭಯವನ್ನು ಹೋಗಲಾಡಿಸುವುದೂ, ಅತ್ಯಂತ ಪುಣ್ಯಕರವೂ ಆದ ಈ ವಿಚಾರವನ್ನು ಲೋಕಕ್ಕೆ ನಿರೂಪಿಸಿದನು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಗರುಡ ಮತ್ತು ಅರುಣರ
ಸಂವಾದದಲ್ಲಿ ಶಾಂತಿಕವರ್ಣನೆಯೆಂಬ ನೂರಎಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕಾಶೀತ್ಯುತ್ತರಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಪಂಚಪ್ರಕಾರಂ ಧರ್ಮಂ ಮೇ ವದ ಸ್ಮಾರ್ತಂ ಯಥಾಕ್ರಮಂ ।
ಕೌತುಕಂ ಪೃಚ್ಛತೇ ಬ್ರಹ್ಮನ್ಸಮಾಸವ್ಯಾಸಯೋಗತಃ ॥ ೧ ॥

॥ ಸುಮಂತುರುವಾಚ ॥

ಪಂಚಧಾ ವರ್ಣಿತಂ ಧರ್ಮಂ ಶೃಣು ರಾಜನ್ಸಮಾಸತಃ ।
ಯಥೋಕ್ತಂ ಭಾಸ್ಕರೇಣೇಹ ಅರುಣಸ್ಯ ಮಹಾತ್ಮನಃ ॥ ೨ ॥

---

## ನೂರಎಂಭತ್ತೊಂದನೆಯ ಅಧ್ಯಾಯ

೧. ಬಳಿಕ ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು "ಎಲೈ ಬ್ರಾಹ್ಮಣೋತ್ತಮನೇ! ಐದುಬಗೆಯಾದ ಸ್ಮಾರ್ತಧರ್ಮವನ್ನು ಮೊದಲು ಸಂಕ್ಷೇಪವಾಗಿಯೂ, ಕ್ರಮೇಣ ವಿಸ್ತಾರವಾಗಿಯೂ ಹೇಳು. ಕೇಳುತ್ತಾ ಕೇಳುತ್ತಾ ನನಗೆ ಇನ್ನೂ ಕುತೂಹಲವುಂಟಾಗುತ್ತಿದೆ ಎಂದು ಹೇಳಿದನು.

೨. ಆಗ ಸುಮಂತುಮುನಿವರ್ಯರು ಆತನಿಗೆ ವಿಷಯವನ್ನು ವಿವರಿಸತೊಡಗಿ "ಎಲೈ ರಾಜನೇ ! ಕೇಳು; ಸ್ಮಾರ್ತಧರ್ಮವು ಸಂಕ್ಷೇಪವಾಗಿ ಐದುವಿಧವೆಂದು ವರ್ಣಿಸಲ್ಪಟ್ಟಿದೆ. ಪೂರ್ವದಲ್ಲಿ ಇದನ್ನು ಸೂರ್ಯನು ಮಹಾತ್ಮನಾದ ಅರುಣನಿಗೆ ಹೇಳಿದನು.

ಸಹಸ್ರಕಿರಣಂ ಭಾನುಮುದಯಸ್ಥಂ ದಿವಾಕರಂ ।
ಪ್ರಣಮ್ಯ ಶಿರಸಾ ದೇವಮುವಾಚ ಗರುಡಾಗ್ರಜಃ ॥ ೩ ॥

ಭಗವನ್ದೇವದೇವೇಶ ಸಹಸ್ರಕಿರಣೋಜ್ಜ್ವಲ ।
ಸ್ಮೃತಿಧರ್ಮಾನ್ಯಥಾತ್ತತ್ತ್ವಂ ವಕ್ತುಮರ್ಹಸಿ ಪೃಚ್ಛತಃ ॥ ೪ ॥

ಏವಂ ಪೃಷ್ಟಸ್ತು ಭಗವಾನರುಣೇನ ಖಗಾಧಿಪ ।
ಉವಾಚ ಪರಯಾ ಪ್ರೀತ್ಯಾ ಪೂಜಯಿತ್ವಾ ಮಹೀಪತೇ ॥ ೫ ॥

॥ ಭಾಸ್ಕರ ಉವಾಚ ॥

ಸ್ಮೃತಿಧರ್ಮಂ ವೇದಮೂಲಂ ಶೃಣು ತ್ವಂ ಗರುಡಾಗ್ರಜ ।
ಪೂರ್ವಾನುಭೂತಂ ಯದ್ಧ್ಯಾನಮಥ ತತ್ಸ್ಮರಣಂ ಸ್ಮೃತಿಃ ॥ ೬ ॥

ಧರ್ಮಃ ಕ್ರಿಯಾತ್ಮಾ ನಿರ್ದಿಷ್ಟಃ ಶ್ರೇಯೋಭ್ಯುದಯಲಕ್ಷಣಃ ।
ಸ ಚ ಪಂಚವಿಧಃ ಪ್ರೋಕ್ತೋ ವೇದಮೂಲಃ ಸನಾತನಃ ॥ ೭ ॥

---

೩. ದಿವಾಕರನೂ, ಸಹಸ್ರಕಿರಣನೂ ಆದ ಸೂರ್ಯನು ಉದಯಪರ್ವತವೇರುತ್ತಲೆ, ಅರುಣನು ಅವನಿಗೆ ತಲೆಬಾಗಿ ನಮಸ್ಕರಿಸಿ ಮುಂದೆ ಹೇಳುವಂತೆ ನುಡಿದನು.

೪. ಭಗವಂತನೇ! ದೇವೇಶನೇ! ಸಹಸ್ರಕಿರಣನೇ! ಆ ಸ್ಮೃತಿಧರ್ಮಗಳನ್ನು ಅವುಗಳ ತತ್ತ್ವವನ್ನೂ ಹೇಳು ಎಂದು ನಾನು ನಿನ್ನನ್ನು ಕೇಳಿಕೊಳ್ಳುತ್ತೇನೆ ಎಂದನು.

೫. ಅರುಣನು ಹೀಗೆ ಕೇಳಲಾಗಿ ಭಗವಂತನಾದ ಸೂರ್ಯನು ಬಹುಪ್ರೀತಿಯಿಂದ ಶ್ಲಾಘಿಸಿ ಅವನಿಗೆ ಉತ್ತರ ಹೇಳುವನಾಗಿ,

೬. ಎಲೈ ಅರುಣನೇ! ವೇದವು ಮೂಲವಾಗಿರುವ ಸ್ಮೃತಿಧರ್ಮ ವಿಚಾರವನ್ನು ಹೇಳುವೆನು ಕೇಳು. ಪೂರ್ವದಲ್ಲಿ ಅನುಭವಿಸಿದ ವಿಚಾರವನ್ನು ಧ್ಯಾನದಿಂದ ಸ್ಮರಣೆಮಾಡುವುದೇ ಸ್ಮೃತಿಯೆನಿಸುವುದು.

೭. ಕಾರ್ಯಸ್ವರೂಪವನ್ನೇ ಧರ್ಮವೆಂದು ನಿರ್ದೇಶಿಸಿದೆ. ಶ್ರೇಯಸ್ಸು, ಅಭ್ಯುದಯ ಇವೇ ಧರ್ಮದ ಲಕ್ಷಣಗಳು. ಪುರಾತನವೂ, ವೇದಮೂಲವೂ ಆದ ಧರ್ಮವು ಐದುವಿಧವಾಗಿದೆ.

ಅಸ್ಯ ಶಬ್ದಸ್ಯಾನುಷ್ಠಾನಾತ್ಸ್ವರ್ಗೋ ಮೋಕ್ಷಶ್ಚ ಜಾಯತೇ ।
ಇಹಲೋಕೇ ಸುಖೈಶ್ವರ್ಯಮತುಲಂ ಚ ಖಗಾಧಿಪ ॥ ೮ ॥

॥ ಅನೂರುರುವಾಚ ॥

ಕಥಂ ಪಂಚವಿಧೋ ಹ್ಯೇಷ ಪ್ರೋಕ್ತೋ ಧರ್ಮಃ ಸನಾತನಃ ।
ಕಸ್ಯ ಭೇದಾಸ್ತು ತೇ ಪಂಚ ಬ್ರೂಹಿ ಮೇ ದೇವಸತ್ತಮ ॥ ೯ ॥

॥ ಭಾಸ್ಕರ ಉವಾಚ ॥

ವೇದಧರ್ಮಃ ಸ್ಮೃತಸ್ತ್ವೇಕ ಆಶ್ರಮಾಣಾಂ ಸ ತತ್ಪರಃ ।
ವರ್ಣಾಶ್ರಮಸ್ಮೃತೀಯಸ್ತು ಗುಣನೈಮಿತ್ತಿಕೋ ಯಥಾ ॥ ೧೦ ॥

ಯೋ ವರ್ಣಮೇಕಮಾಶ್ರಿತ್ಯ ಅಧಿಕಾರೇ ಪ್ರವರ್ತತೇ ।
ಸ ವರ್ಣಾಶ್ರಮಧರ್ಮಸ್ತು ಭಿಕ್ಷಾದಂಡಾದಿಕೋ ಯಥಾ ॥ ೧೧ ॥

---

೮. "ಎಲೈ ಖಗಾಧಿಪನೇ! ಕೇಳು; ಈ ಧರ್ಮದ ಅನುಷ್ಠಾನದಿಂದ ಪರದಲ್ಲಿ ಸ್ವರ್ಗ ಮೋಕ್ಷಗಳ ಲಾಭವೂ; ಇಹಲೋಕದಲ್ಲಿ ಸುಖವೂ, ನಿರ್ದುಷ್ಟವಾದ ಐಶ್ವರ್ಯವೂ ಲಭಿಸುತ್ತದೆ" ಎಂದನು.

೯. ಆಗ ಅರುಣನು ಸೂರ್ಯನನ್ನು ಕುರಿತು "ಎಲೈ ದೇವಶ್ರೇಷ್ಠನೇ! ಈ ಪುರಾತನವಾದ ಧರ್ಮವು ಐದೇಬಗೆಯೆಂದು ಹೇಗೆ ನಿಷ್ಕರ್ಷೆಯಾಗಿ ಹೇಳುವುದು ? ಆ ಐದು ಭೇದಗಳು ಯಾವುವು ? ಇದನ್ನು ನನಗೆ ಹೇಳು" ಎಂದನು.

೧೦. ಆಗ ಸೂರ್ಯನು ಉತ್ತರ ಹೇಳುವವನಾಗಿ "ವೇದಧರ್ಮವು ಒಂದನೆಯದು, ಆಶ್ರಮಧರ್ಮವು ಎರಡನೆಯದು, ಗುಣನೈಮಿತ್ತಿಕವಾದ ವರ್ಣಾಶ್ರಮ ಧರ್ಮವು ಮೂರನೆಯದು.

೧೧. ಯಾವುದು ವರ್ಣವೊಂದನ್ನಾಶ್ರಯಿಸಿ ಅಧಿಕಾರದಲ್ಲಿ ಪ್ರವರ್ತಿಸುವುದೋ ಅದು ವರ್ಣಧರ್ಮವು. ಅದು ಹೇಗೆಂದರೆ ಭಿಕ್ಷಾಚರಣ, ದಂಡಧಾರಣ ಇವು ವರ್ಣಧರ್ಮಗಳು.

ವರ್ಣಾಶ್ರಮಾಶ್ರಮತ್ವಂ ಚ ಯೋಧಿಕೃತ್ಯ ಪ್ರವರ್ತತೇ ।
ಸ ವರ್ಣಾಶ್ರಮಧರ್ಮಸ್ತು ದಂಡಾದ್ಯಾ ಮೇಖಲಾ ಯಥಾ ॥ ೧೨ ॥

ಯೋಗುಣೇ ನ ಪ್ರವರ್ತೇತ ಸ ಗುಣೋ ಧರ್ಮ ಉಚ್ಯತೇ ।
ಯಥಾ ಮೂರ್ಧಾಭಿಷಿಕ್ತಸ್ಯ ಪ್ರಜಾನಾಂ ಪಾಲನಂ ಪರಂ ॥ ೧೩ ॥

ನಿಮಿತ್ತಮೇಕಮಾಶ್ರಿತ್ಯ ಯೋ ಧರ್ಮಃ ಸಂಪ್ರವರ್ತತೇ ।
ನೈಮಿತ್ತಿಕಃ ಸ ವಿಜ್ಞೇಯೋ ಜಾತಿದ್ರವ್ಯಗುಣಾಶ್ರಯಃ ॥ ೧೪ ॥

ಏಷ ತು ದ್ವಿವಿಧಃ ಪ್ರೋಕ್ತಃ ಸಮಾಸಾದವಿಶೇಷತಃ ।
ನೈಮಿತ್ತಿಕಃ ಸ ವಿಜ್ಞೇಯಃ ಪ್ರಾಯಶ್ಚಿತ್ತವಿಧಿರ್ಯಥಾ ॥ ೧೫ ॥

ಸ ಚತುರ್ಧಾ ನಿರೂಪ್ಯಸ್ತು ಸ್ವರೂಪಫಲಸಾಧನೈಃ ।
ಪ್ರಮಾಣತಸ್ತು ಪ್ರತ್ಯೇಕಂ ಸಮಸ್ತೈಶ್ಚ ಯಥಾಕ್ರಮಂ ॥ ೧೬ ॥

---

೧೨. ವರ್ಣ, ಆಶ್ರಮ ಇವುಗಳಲ್ಲಿ ಆಶ್ರಮತ್ವವನ್ನು ಅಧಿಕರಿಸಿ ಯಾವುದು ಪ್ರವರ್ತಿಸುವುದೋ ಅದು ವರ್ಣಾಶ್ರಮಧರ್ಮವು. ಹೇಗೆಂದರೆ: ದಂಡ, ಮೇಖಲೆ ಇವುಗಳ ಧಾರಣ ಮುಂತಾದುವು ದ್ವಿಜಧರ್ಮಗಳು.

೧೩. ಯಾವ ಧರ್ಮವು ಗುಣನಿಮಿತ್ತದಿಂದ ಪ್ರವರ್ತಿಸುವುದೋ ಅದು ಗುಣ ಧರ್ಮವೆನಿಸುವುದು. ಹೇಗೆಂದರೆ: ಮೂರ್ಧಾಭಿಷಿಕ್ತನಾದ ಪ್ರಭುವಿಗೆ ಪ್ರಜಾಪಾಲನ ಗುಣವು ಪರಮಧರ್ಮವೆಂದು ಉಕ್ತವಾಗಿದೆ.

೧೪. ಹೀಗೆ ನಿಮಿತ್ತವನ್ನಾಶ್ರಯಿಸಿ ಯಾವ ಧರ್ಮವು ಅನುವರ್ತಿತವಾಗು ವುದೋ, ಅದು ಜಾತಿ ದ್ರವ್ಯ ಗುಣಗಳನ್ನು ಆಶ್ರಯಿಸಿರುವ ನೈಮಿತ್ತಿಕಧರ್ಮವೆನಿಸು ವುದು.

೧೫. ಒಳಭೇದಗಳನ್ನು ಗಮನಿಸದೆ ಸ್ಥೂಲದೃಷ್ಟಿಯಿಂದ ನೋಡಿದರೆ ಜಾತಿ ದ್ರವ್ಯಗುಣಾಶ್ರಯ ನೈಮಿತ್ತಿಕ, ಪ್ರಾಯಶ್ಚಿತ್ತವಿಧಿ ನೈಮಿತ್ತಿಕ ಎಂಬದಾಗಿ ಸಂಕ್ಷೇಪತಃ ಎರಡುವಿಧ ಎಂದು ಹೇಳಬಹುದು.

೧೬. ಅದರಲ್ಲಿ ಸ್ವರೂಪ, ಸಾಧನ, ಫಲ, ಪ್ರಮಾಣ ಇವುಗಳಿಗನುಸಾರ ಕ್ರಮವಾಗಿ ಪ್ರತಿಯೊಂದೂ ನಾಲ್ಕುಬಗೆ ಎಂದು ಸಂಕ್ಷೇಪವಾಗಿ ಹೇಳಬೇಕು.

ಶ್ರುತ್ಯಾಸಹ ವಿರೋಧೇ ತು ಬಾಧ್ಯತೇ ವಿಷಯಂ ವಿನಾ ।
ವ್ಯವಸ್ಥಯಾ ವಿರೋಧೇನ ಕಾರ್ಯೋ ಯತ್ನಃ ಪರೀಕ್ಷ್ಯತೇ ॥ ೧೭ ॥

ಸ್ಮೃತ್ಯಾಸಹ ವಿರೋಧೇನ ಚಾರ್ಥಶಾಸ್ತ್ರಸ್ಯ ಸಾಧನಂ ।
ಪರಸ್ಪರವಿರೋಧೇ ತು ಅರ್ಥಶಾಸ್ತ್ರಸ್ಯ ಸಾಧನಂ ॥ ೧೮ ॥

ಅದೃಷ್ಟಾರ್ಥೇ ವಿಕಲ್ಪಸ್ತು ವ್ಯವಸ್ಥಾಸಂಭವೇ ಸತಿ ।
ಸ್ಮೃತಿಶಾಸ್ತ್ರವಿಕಲ್ಪಸ್ತು ಆಕಾಂಕ್ಷಾ ಪೂರಣೇ ಸತಿ ॥ ೧೯ ॥

ವೇದಮೂಲೇ ಸ್ಥಿತಂ ತ್ವೇತದನುಷ್ಠಾನಂ ಕ್ರಿಯಾ ಸತೀ ।
ಏವಂ ಶಕ್ಯವಿಧಾನಂ ತು ನ್ಯಾಯೋ ಹ್ಯೇವಂ ವ್ಯವಸ್ಥಿತಃ ॥ ೨೦ ॥

---

೧೭. ಶ್ರುತಿವಚನಕ್ಕೆ ವಿರೋಧವೇನಾದರೂ ಬಂದರೆ ವಿಷಯವಿಚಾರವಿಲ್ಲದೆಯೇ ವಿರುದ್ಧೋಪಪಾದನೆ ಮಾಡಬಹುದು. ವಿಶೇಷ ಪ್ರಕಾರವಾದ ಅರ್ಥವ್ಯವಸ್ಥೆಯಿಂದ ವಿರೋಧಬರುವುದಾದರೆ, ಮಾಡಬೇಕಾದ ಪ್ರಯತ್ನವನ್ನು ಮಾಡಿ ಪರೀಕ್ಷಿಸಬೇಕು

೧೮. ಸ್ಮೃತಿಯಲ್ಲಿ ಉಕ್ತವಾಗಿರುವ ಕ್ರಮಕ್ಕೆ ವಿರೋಧ ತೋರಿದರೆ ಆಗ ಅರ್ಥ (ನೀತಿ) ಶಾಸ್ತ್ರವನ್ನು ಸಾಧನಮಾಡಿಕೊಳ್ಳಬೇಕಾಗಿ ಬರುವುದು. ಹೀಗೆಯೇ ಪರಸ್ಪರ ವಿರೋಧತೋರಿದರೆ ಅರ್ಥಶಾಸ್ತ್ರದ ಮೂಲಕ ಸಾಧಿತವಾಗಬೇಕು.

೧೯. ಯಾವುದಾದರೂ ವಿಷಯವನ್ನು ವ್ಯವಸ್ಥೆಮಾಡಬೇಕಾಗಿ ಬಂದರೆ ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತಿರುವ ಸಂಭವದಲ್ಲಿ ವಿಕಲ್ಪ (ಸಂಶಯ) ಹುಟ್ಟಲು ಕಾರಣವೇ ಇಲ್ಲ. ವಿಷಯವು ಕಣ್ಣಿಗೆ ಅಗೋಚರವಾಗಿರುವ ಸಂದರ್ಭದಲ್ಲಿ ವಿಕಲ್ಪಕ್ಕೆ ಅವಕಾಶ ಹುಟ್ಟುವುದು. ಯಾವುದಾದರೂ ವಿಷಯವನ್ನು ಹೇಗೋ ? ಹೀಗೋ ? ಎಂದು ಪ್ರಶ್ನಿಸಿ ಉತ್ತರವನ್ನು ಆಕಾಂಕ್ಷಿಸುವ ಸಂಭವ ಬಂದರೆ, " ಸ್ಮೃತಿಯಲ್ಲಿ ಹೀಗೆ ಹೇಳಿದೆ. ಸ್ಮೃತಿಪ್ರಕಾರವಾದರೂ ಮಾಡಿ; " "ಶಾಸ್ತ್ರದಲ್ಲಿ ಹಾಗೆ ಹೇಳಿದೆ. ಶಾಸ್ತ್ರದ ಪ್ರಕಾರವಾದರೂ ಮಾಡಿ " ಎಂದು ವಿಕಲ್ಪವನ್ನು ಹೇಳಬಹುದು.

೨೦. ಇದರಲ್ಲಿ ಅನುಷ್ಠಾನ ಎಂಬುದು ಕಾರ್ಯರೂಪವಾಗಿದ್ದರೂ ಇದರ ನಿರ್ಣಯಕ್ಕೂ ವೇದವೇ ಮೂಲವಾಗಿರುತ್ತದೆ. ಹೀಗೆ ಶಕ್ಯವಾಗಿರುವ ಕೆಲಸವನ್ನು ಮಾಡುವಲ್ಲಿ ಸ್ಮೃತಿ, ಶಾಸ್ತ್ರ ಇವೆರಡಕ್ಕೂ ಅಭಿಪ್ರಾಯ ವಿರೋಧ ಕಂಡುಬಂದಾಗ ವೇದದ ಉಕ್ತಿಯಂತೆಯೇ ಮಾಡಬೇಕು. ನ್ಯಾಯವು ಈ ರೀತಿ ವ್ಯವಸ್ಥಿತವಾಗಿದೆ.

ನಿಷೇಧವಿಧಿರೂಪಂ ತು ದ್ವಿಧಾ ಶಾಸ್ತ್ರಂ ಖಗಾಧಿಪ ।
ಏಕರೂಪಂ ವದಂತ್ಯನ್ಯೇ ಬಹುರೂಪಮಥಾಪರೇ ॥ ೨೦ ॥

ಪಂಚಪ್ರಕಾರಾಃ ಸ್ಮೃತಯ ಏವಂ ಶಿಷ್ಯವ್ಯವಸ್ಥಿತಾಃ ।
ತ್ರಿಧಾ ಚತುರ್ಧಾ ದ್ವೇಧಾ ವಾ ಏಕಧಾ ಬಹುಧಾಖಗ ॥ ೨೨ ॥

ದೃಷ್ಟಾರ್ಥಾ ತು ಸ್ಮೃತಿಃ ಕಾಚಿದದೃಷ್ಟಾರ್ಥಾ ತಥಾಪರಾ ।
ಅನುವಾದಸ್ಮೃತಿಸ್ತ್ವನ್ಯಾ ದೃಷ್ಟಾದೃಷ್ಟಾ ತು ಪಂಚಮೀ ॥
ಸರ್ವಾ ಏತಾ ವೇದಮೂಲಾಃ ಸ್ಮೃತಾ ವೈ ಋಷಿಭಿಃ ಸ್ವಯಂ ॥ ೨೩ ॥

॥ ಅರುಣ ಉವಾಚ ॥

ಯಾ ಏತಾ ಭವತಾ ಪ್ರೋಕ್ತಾಃ ಸ್ಮೃತಯಃ ಪರ್ವಗೋಪನೇ ।
ಏತಾಸಾಂ ಲಕ್ಷಣಂ ಬ್ರೂಹಿ ಸಮಾಸಾದೇವ ಸತ್ತಮ ॥ ೨೪ ॥

---

೨೧. ಅಯ್ಯಾ ಖಗಶ್ರೇಷ್ಠನೇ! ಶಾಸ್ತ್ರದಲ್ಲಿ ವಿಧಿಶಾಸ್ತ್ರ, ನಿಷೇಧಶಾಸ್ತ್ರ ಎಂದು ಎರಡುಬಗೆ ವಿಧಿಶಾಸ್ತ್ರ, ನಿಷೇಧಶಾಸ್ತ್ರ ಎರಡೂ ಏಕಪ್ರಕಾರವಾದ ನಿಷ್ಕರ್ಷೆಯಿಂದ ಹೇಳುತ್ತವೆ. ಕೆಲವರು ಇವೆರಡನ್ನೂ ಏಕರೂಪವೆನ್ನುವರು. ಇನ್ನು ಕೆಲವರು ಬಹು ರೂಪವೆಂದೂ ಹೇಳುವರು.

೨೨ ಈ ಸ್ಮೃತಿಗಳು ಶಿಷ್ಯರಿಗಾಗಿ ವ್ಯವಸ್ಥೆಮಾಡಿಕೊಂಡುವು. ಇದು ಐದು ಬಗೆ, ನಾಲ್ಕುಬಗೆ, ಮೂರುಬಗೆ, ಎರಡುಬಗೆ, ಒಂದೇಬಗೆ, ಎಂದು ಹೀಗೆ ನಾನಾ ವಿಧವಾಗಿ ಅಭಿಪ್ರಾಯಪಡುತ್ತಾರೆ.

೨೩. "ಗೋಚರವಾಗುವಂಥ ಪ್ರಯೋಜನವುಳ್ಳ ದೃಷ್ಟಾರ್ಥ ಸ್ಮೃತಿ ಎಂಬುದು ಒಂದು, ಅಗೋಚರವಾದ ಪ್ರಯೋಜನ ವಿಷಯವನ್ನು ತಿಳಿಸತಕ್ಕ ಅದೃಷ್ಟಾರ್ಥ ಸ್ಮೃತಿ ಎಂಬುದು ಇನ್ನೊಂದು. ಸರ್ವೋತ್ತಮವೂ ನ್ಯಾಯಬದ್ಧವೂ ಆದ ಪರಾಸ್ಮೃತಿ ಎಂಬುದು ಮತ್ತೊಂದು. ಶ್ರುತಿವಿಷಯವನ್ನೇ ಸ್ಮೃತಿಯೂ ಅನುಸರಿಸಿ ಹೇಳುವ ಅನುವಾದಸ್ಮೃತಿ ಎಂಬುದು ನಾಲ್ಕನೆಯದು, ಗೋಚರವೂ, ಅಗೋಚರವೂ ಆದ ಫಲವಿಚಾರವುಳ್ಳ ದೃಷ್ಟಾದೃಷ್ಟಸ್ಮೃತಿ ಎಂಬುದು ಐದನೆಯದು, ಹೀಗೆ ಐದುಬಗೆ. ಇವುಗಳಿಗೆಲ್ಲಾ ವೇದವೇ ಮೂಲ ಎಂದು ಋಷಿಗಳೇ ಹೇಳಿದ್ದಾರೆ" ಎಂದನು.

೨೪-೨೫. ಆಗ ಅರುಣನು ಸೂರ್ಯನನ್ನು ಕುರಿತು—"ಅಯ್ಯಾ ಸತ್ಪುರುಷ ಶ್ರೇಷ್ಠನೇ! " ಪರ್ವವನ್ನು ಗೋಪನಮಾಡಿ (ಗೂಢವಾಗಿ) ಹೇಳುವ ಸಂದರ್ಭದಲ್ಲಿ

ದೃಷ್ಟಾರ್ಥಾ ಕಾ ಮತಾ ದೇವ ಅದೃಷ್ಟಾರ್ಥಾ ಚ ಕಾ ಭವೇತ್ ।
ದೃಷ್ಟಾದೃಷ್ಟಸ್ವರೂಪಾ ಕಾ ನ್ಯಾಯಮೂಲಾ ಚ ಕಾ ಭವೇತ್ ॥
ಅನುವಾದಸ್ಮೃತಿಃ ಕಾ ಸ್ಯಾದ್ದೃಷ್ಟಾದೃಷ್ಟಾ ತು ಕಾ ಭವೇತ್ ॥ ೨೫ ॥

ಏವಮುಕ್ತೋ ಮಹಾತೇಜಾ ಭಾಸ್ಕರೋ ವಾರಿತಸ್ಕರಃ ।
ಉವಾಚ ತಂ ಖಗಂ ವೀರಂ ಪ್ರಣತಂ ವಿನಯಾನ್ವಿತಂ ॥ ೨೬ ॥

॥ ಆದಿತ್ಯ ಉವಾಚ ॥
ಷಡ್ಗುಣಸ್ಯ ಸ್ವರೂಪಂ ತು ಪ್ರಯೋಗಾತ್ಕಾರ್ಯ ಗೌರವಾತ್ ।
ಸಮಯಾನಾಮುಪಾಯಾನಾಂ ಯೋಗೋ ವ್ಯಾಸಸಮಾಸತಃ ॥ ೨೭ ॥

ಅಧ್ಯಕ್ಷಾಣಾಂ ಚ ನಿಕ್ಷೇಪಃ ಕರಣಾನಾಂ ನಿರೂಪಣಂ ।
ದೃಷ್ಟಾರ್ಥೇಯಂ ಸ್ಮೃತಿಃ ಪ್ರೋಕ್ತಾ ಋಷಿಭಿರ್ಗರುಡಾಗ್ರಜ ॥ ೨೮ ॥

---

ಇವು ಪ್ರವೃತ್ತವಾದುವು" ಎಂದು ನೀನು ಕೆಲವನ್ನು ಹೇಳಿದೆಯಷ್ಟೆ? ಅವುಗಳ ಲಕ್ಷಣವನ್ನು ಸಂಕ್ಷೇಪವಾಗಿ ಹೇಳು. ಯಾವುದು ದೃಷ್ಟಾರ್ಥಸ್ಮೃತಿ? ಅದೃಷ್ಟಾರ್ಥಸ್ಮೃತಿ ಯಾವುದು? ದೃಷ್ಟಾದೃಷ್ಟಸ್ಮೃತಿಯ ಸ್ವರೂಪವೇನು? ನ್ಯಾಯಮೂಲಸ್ಮೃತಿಯು ಯಾವುದು? ಅನುವಾದಸ್ಮೃತಿಯೆಂಬುದು ಯಾವುದು?

೨೬. ವಿನಯದಿಂದ ನಮಸ್ಕರಿಸಿ ಹೀಗೆ ಪ್ರಶ್ನೆಮಾಡಿದ ವೀರನಾದ ಅರುಣನಿಗೆ ಮಹಾತೇಜಸ್ವಿಯೂ, ವಾರಿಶೋಷಕನೂ ಆದ ಸೂರ್ಯನು ಉತ್ತರ ಹೇಳುವವನಾಗಿ ಇಂತೆಂದನು.

೨೭-೨೮. ಅಯ್ಯಾ ಗರುಡಾಗ್ರಜ! ಕಾರ್ಯಗೌರವಕ್ಕನುಸಾರವಾಗಿ ಷಡ್ಗುಣಸ್ವರೂಪವನ್ನು ಯಾವ ಸ್ಥಿತಿಯಲ್ಲಿ ಪ್ರಯೋಗಿಸಬೇಕು? ಯಾವರೀತಿ ಪ್ರಯೋಗಿಸಬೇಕು? ಎಂದು ವಿಮರ್ಶಿಸುವುದು ಅದರ ಸಮಯ, ಉಪಾಯ ಇವನ್ನು ಸಂಕ್ಷೇಪವಾಗಿಯೋ, ವಿಸ್ತಾರವಾಗಿಯೋ ಅಲ್ಲಲ್ಲಿಗೆ ಸಂಬಂಧಿಸಿಕೊಳ್ಳುವುದು, ಮತ್ತು ಅಧ್ಯಕ್ಷರನ್ನು ಗೊತ್ತುಮಾಡುವುದು, ಉಪಕರಣಗಳನ್ನು ಏರ್ಪಡಿಸಿಕೊಳ್ಳುವುದು, ಪ್ರಯೋಜನವನ್ನು ಅರಿತುಕೊಳ್ಳುವುದು ಇವೇ ದೃಷ್ಟಾರ್ಥಸ್ಮೃತಿಯೆನಿಸುವುದು.

ಸಂಧ್ಯೋಪಾಸ್ತಿಸ್ತಥಾ ಕಾರ್ಯಾ ಶುನೋಮಾಂಸಂ ನ ಭಕ್ಷಯೇತ್ ।
ಅದೃಷ್ಟಾರ್ಥಾಃ ಸ್ಮೃತಿಃ ಪ್ರೋಕ್ತಾ ಮನುನಾ ವಿನತಾತ್ಮಜ ॥ ೨೯ ॥

ಪಾಲಾಶಂ ಧಾರಯೇದ್ದಂಡಮುಭಯಾರ್ಥಾಂ ವಿದುರ್ಬುಧಾಃ ।
ವಿರೋಧೇ ತು ವಿಕಲ್ಪಃ ಸ್ಯಾದ್ಯಾಗೋ ಹೋಮಸ್ತತೋ ಯಥಾ ॥ ೩೦ ॥

ಶ್ರುತೌ ದೃಷ್ಟಂ ಯಥಾ ಕಾರ್ಯಂ ಸ್ಮೃತೋ ತತ್ತಾದೃಶಂ ಯದಿ ।
ಉಕ್ತಾನುವಾದಿನೀ ಸಾ ತು ಪಾರಿವ್ರಾಜ್ಯಂ ಯಥಾಗೃಹಾತ್ ॥ ೩೧ ॥

---

೨೯. ಅಯ್ಯಾ ವಿನತಾಪುತ್ರನೇ! "ಸಂಧ್ಯಾವಂದನೆ ಮಾಡು ?" ಎಂದು ಬೋಧಿಸುವ ಕರ್ತವ್ಯನಿರೂಪಣವೂ, ಹೀಗೆ "ನಾಯಿಯಮಾಂಸ ತಿನ್ನಬೇಡ" ಎಂಬ ತ್ಯಾಜ್ಯ ವಿಷಯನಿರೂಪಣವೂ ಇವೆರಡೂ ಅದೃಷ್ಟಾರ್ಥಸ್ಮೃತಿ. ಎಂದರೆ ಇದರ ಪ್ರಯೋಜನವು ಆ ಕೂಡಲೇ ಕಾಣಿಸದೆ ಅದೃಷ್ಟಫಲವುಳ್ಳದಾಗಿದೆ, ಆದುದರಿಂದ ಅದನ್ನು ಅದೃಷ್ಟಾರ್ಥಸ್ಮೃತಿಯೆಂದು ಮನುವೇ ಹೇಳಿದ್ದಾನೆ.

೩೦. ಪಾಲಾಶ ಮೊದಲಾದ ದಂಡವನ್ನು ಧರಿಸಿದರೆ ಗೋವು ಮುಂತಾದುವುಗಳ ನಿರ್ಹರಣಮಾಡುವುದು, ದೃಷ್ಟವಾದ ಫಲ. ಶಾಸ್ತ್ರಾನುಸಾರ ಅನುಷ್ಠಾನ ಮಾಡಿದ್ದೇನೆಂಬ ಆತ್ಮತೃಪ್ತಿಯು ಅದೃಷ್ಟವಾದ ಫಲ. ಇವೆರಡೂ ಉಂಟಾಗುವುದರಿಂದ ಅದು ದೃಷ್ಟಾದೃಷ್ಟವೆಂಬ ಉಭಯಾರ್ಥಸ್ಮೃತಿ ಎಂದು ವಿದ್ವಾಂಸರು ತಿಳಿಯುತ್ತಾರೆ. ಎರಡು ಸ್ಮೃತಿಗಳು ಬೇರೆ ಬೇರೆ ಇದ್ದು ಒಂದರಲ್ಲಿ ಮಾಡಬೇಕೆಂತಲೂ, ಮತ್ತೊಂದರಲ್ಲಿ ಮಾಡಬಾರದೆಂತಲೂ ಹೇಳಿದ್ದರೆ; ಆಗ ಬೇಕಾದರೆ, ಮಾಡಬಹುದು. ಅಥವಾ ಬಿಟ್ಟರೂ ಬಿಡಬಹುದು. ಎಂಬ ವಿಕಲ್ಪವುಂಟಾಗುವುದು. ಯಾಗ, ಹೋಮ ಇವುಗಳ ವಿಚಾರ ಹೀಗೆ ವಿಕಲ್ಪವಾಗಿದೆ.

೩೧. ಯಾವ ಕ್ರಮವನ್ನು ಮಾಡಬೇಕೆಂದು ಶ್ರುತಿದಲ್ಲಿ ಹೇಳಿದೆಯೋ ಅದೇ ಕ್ರಮವನ್ನು ಸ್ಮೃತಿಯಲ್ಲೂ ಹೇಳಿದ್ದರೆ: ಶ್ರುತ್ಯುಕ್ತಾರ್ಥವನ್ನೇ ಸ್ಮೃತಿಯು ಅನುವಾದ ಮಾಡಿದುದರಿಂದ ಅದು ಅನುವಾದಿನೀ ಸ್ಮೃತಿಯೆನಿಸುವುದು. "ಗೃಹಾತ್ ಪರಿವ್ರಜೇತ್" ಎಂಬ ಶ್ರುತಿವಾಕ್ಯವನ್ನೇ ಸ್ಮೃತಿಯೂ ಅನುವಾದಮಾಡಿ ಹೇಳುತ್ತಿರುವುದು ಕಾಣುತ್ತಿದೆ.

ಉಕ್ತೋ ಧರ್ಮಶ್ಚ ಸಂಕ್ಷೇಪಾತ್ಪರಿಭಾಷಾ ಚ ತದ್ಗತಾ ।
ತತ್ಸಾಧನಂ ಚ ದೇಶಾದಿ ಇತ್ಥಮಿತ್ಯಬ್ರವೀದ್ರವಿಃ ॥ ೩೨ ॥

ಬ್ರಹ್ಮಾವರ್ತಃ ಪರೋ ದೇಶ ಋಷಿಶಸ್ತಸ್ತ್ವನಂತರಃ ।
ಮಧ್ಯದೇಶಸ್ತತೋಽಪ್ಯನ್ಯ ಆರ್ಯಾವರ್ತಸ್ತ್ವನಂತರಃ ॥ ೩೩ ॥

ಕೃಷ್ಣಸಾರಸ್ತು ವಿಚರೇನ್ಮೃಗೋ ಯತ್ರ ಸ್ವಭಾವತಃ ।
ಯಜ್ಞಿಯಃ ಸ ತು ದೇಶಃ ಸ್ಯಾನ್ಮ್ಲೇಚ್ಛದೇಶಸ್ತ್ವತಃ ಪರಃ ॥ ೩೪ ॥

ಬ್ರಹ್ಮಾದೀನಾಂ ಚ ದೇವಾನಾಂ ಬ್ರಾಹ್ಮಣಾದೇಸ್ತಥೈವ ಚ ।
ಭೂತಗ್ರಾಮಸ್ಯ ಕೃತ್ಸ್ನಸ್ಯ ತ್ರಯಂ ಕೃತ್ಸ್ನಸ್ಯ ಖೇಚರ ॥ ೩೫ ॥

ಸಾಧನತ್ವಂ ಮನುಃ ಪ್ರಾಹ ವೇದಮೂಲಂ ಸನಾತನಂ ।
ಪ್ರಕಾಶಯಜ್ಞಸಂಸಿದ್ಧ್ಯೈ ಯದಶಬ್ದಸ್ಯ ಏವ ತು ॥ ೩೬ ॥

---

೩೨-೩೩. ಹೀಗೆ ಧರ್ಮವನ್ನೂ, ಧರ್ಮಗತವಾದ ಸಂಕೇತವನ್ನೂ, ಸಂಕ್ಷೇಪವಾಗಿ ಹೇಳಿದೆ. ಆ ಧರ್ಮಕ್ಕೆ ಸಾಧನವಾದುದು ಯಾವುದು? ಧರ್ಮಾನುಸರಣಕ್ಕೆ ಅರ್ಹವಾದ ದೇಶಾದಿಗಳು ಯಾವುವು? ಎಂಬುದನ್ನು ಈ ಮುಂದೆ ತಿಳಿಸಿರುವಂತೆ ಸೂರ್ಯನೇ ಹೇಳಿದಾನೆ. ಬ್ರಹ್ಮಾವರ್ತ, ಬ್ರಹ್ಮರ್ಷಿದೇಶ, ಮಧ್ಯದೇಶ, ಆರ್ಯಾವರ್ತ ಎಂಬ ಇವು ಆ ಧರ್ಮಾನುಸರಣಕ್ಕೆ ನಿರ್ದಿಷ್ಟವಾದ ದೇಶಗಳಾಗಿವೆ.

೩೪. ಕೃಷ್ಣಸಾರವೆಂಬ ಜಿಂಕೆಗಳು ಸ್ವಭಾವವಾಗಿ ಈ ಮೂರು ದೇಶಗಳಲ್ಲಿ ಸಂಚರಿಸುತ್ತವೆ. ಆದಕಾರಣ ಅವು ಯಜ್ಞಮಾಡಲು ಅರ್ಹವಾದುವು. ಅದಕ್ಕಿಂತ ಭಿನ್ನವಾದುವು ಮ್ಲೇಚ್ಛದೇಶಗಳೆಂದು ತಿಳಿಯಬೇಕು.

೩೫. ಅಯ್ಯಾ ಖೇಚರನೇ! ಬ್ರಹ್ಮಾದಿದೇವತೆಗಳಿಗೂ, ಬ್ರಾಹ್ಮಣರೇ ಮೊದಲಾದ ವರ್ಣಗಳವರಿಗೂ, ಸಮಸ್ತವಾದ ಪ್ರಾಣಿವರ್ಗಕ್ಕೂ ಈ ಮೂರು ದೇಶಗಳೇ ಆವಾಸಸ್ಥಾನವೆಂದೂ ಅವು ವೇದಮೂಲವೆಂದೂ, ಮತ್ತು ಪುರಾತನವಾದುವು ಎಂದೂ ಈ ದೇಶಗಳು ಫಲಪ್ರಾಪ್ತಿಗೆ ಸಾಧನವಾಗುವುವು ಎಂದೂ ಮನುವೇ ಹೇಳಿದ್ದಾನೆ.

೩೬. ಆ ದೇಶಗಳಲ್ಲಿ ಪ್ರಕಟವಾಗಿ ಮಾಡುವ ಯಜ್ಞಗಳು ಮತ್ತು ಗೋಪ್ಯವಾಗಿ ಮಾಡುವ ಯಜ್ಞಗಳು ಎಲ್ಲವೂ ಸಿದ್ಧಿಸುವುವು.

ಉಪಲಭ್ಯ ಯಥಾತತ್ತ್ವಂ ಸ ಚ ದರ್ಶಿತವಾನ್ ಋಷಿಃ ।
ಸಮ್ಯಕ್ಸಂಸಾಧನಂ ಧರ್ಮಃ ಕರ್ತವ್ಯಸ್ತ್ವಧಿಕಾರಿಣಾ ॥ ೩೭ ॥

ನಿಷ್ಕಾಮೇನ ಸದಾ ವೀರ ಕಾಮ್ಯಂ ರೂಪಾನ್ವಿತೇನ ಚ ।
ಆಚಾರಯುಕ್ತಃ ಶ್ರದ್ಧಾಲುರ್ವೇದಜ್ಞೋಽಧ್ಯಾತ್ಮಚಿಂತಕಃ ॥
ಕರ್ಮಣಾಂ ಫಲಮಾಪ್ನೋತಿ ನ್ಯಾಯಾರ್ಜಿತಧನಶ್ಚ ಯಃ ॥ ೩೮ ॥

॥ ಅರುಣ ಉವಾಚ ॥
ಬ್ರಹ್ಮಾವರ್ತಾದಿ ದೇಶಾನಾಂ ಸಮಸ್ತಾನಾಂ ವಿಭಾವಸೋ ।
ವಿಭಾಗಂ ಬ್ರೂಹಿ ದೇವೇಂದ್ರ ಸಂಮಾನಯ ಗ್ರಹಾಧಿಪ ॥ ೩೯ ॥

॥ ಆದಿತ್ಯ ಉವಾಚ ॥
ಸರಸ್ವತೀದೃಷದ್ವತ್ಯೋರ್ದೇವನದ್ಯೋರ್ಯದಂತರಂ ।
ತಂ ದೇವನಿರ್ಮಿತಂ ದೇಶಂ ಬ್ರಹ್ಮಾವರ್ತಂ ಪ್ರಚಕ್ಷತೇ ॥ ೪೦ ॥

---

೩೭. ಧರ್ಮವೆಂಬುದು ಸರ್ವಇಷ್ಟಾರ್ಥಕ್ಕೂ ಸಂಪೂರ್ಣ ಸಾಧಕವಾದುದು ಶ್ರುತಿಸ್ಮೃತಿಗಳಲ್ಲಿ ಉಕ್ತವಾದ ಇಂಥ ಧರ್ಮವನ್ನು ಅದಕ್ಕೆ ಅಧಿಕಾರಿಯಾದವನೇ ಮಾಡಬೇಕೇ ವಿನಾ ಅನಧಿಕಾರಿಯಾದವನು ಮಾಡಬಾರದು ಎಂಬ ತತ್ತ್ವವನ್ನು ಆ ಋಷಿಯು ಚೆನ್ನಾಗಿ ಮನಗಾಣುವಂತೆ ತೋರಿಸಿದಾನೆ.

೩೮. "ಎಲೈ ವೀರನೇ! ಯಾವಾಗಲೂ ಆಚಾರಯುಕ್ತನೂ, ಶ್ರದ್ಧಾಳುವೂ, ವೇದಜ್ಞನೂ, ಅಧ್ಯಾತ್ಮಚಿಂತಕನೂ, ನ್ಯಾಯಮಾರ್ಗದಲ್ಲಿ ಧನಸಂಪಾದನೆ ಮಾಡಿದವನೂ ಆದ ಮನುಷ್ಯನು, ಒಂದು ರೂಪಯುಕ್ತವಾಗಿ ಇರುವ ಕರ್ಮವನ್ನು ನಿಷ್ಕಾಮವಾಗಿ ಮಾಡಿದರೆ ಆ ಕರ್ಮಗಳ ಫಲವನ್ನು ಹೊಂದುತ್ತಾನೆ" ಎಂದನು.

೩೯. ಆಗ ಅರುಣನು ಕೇಳುತ್ತಾನೆ—"ದೇವಶ್ರೇಷ್ಠನೂ, ವಿಭಾವಸುವೂ ಆದ ಗ್ರಹಾಧಿಪನೇ! ಬ್ರಹ್ಮಾವರ್ತ ಮೊದಲಾದ ಸಮಸ್ತ ದೇಶಗಳ ಎಲ್ಲೆಯ ವಿಭಾಗವನ್ನು ದಯವಿಟ್ಟು ಹೇಳು. ನನ್ನ ಮಾತನ್ನು ಕಡೆಗಣಿಸದೆ ನಡೆಯಿಸು" ಎಂದನು.

೪೦. ಆಗ ಆದಿತ್ಯನು ಹೇಳುತ್ತಾನೆ—"ಸರಸ್ವತೀ ಮತ್ತು ದೃಷದ್ವತೀ ನದಿಗಳ ಮಧ್ಯದಲ್ಲಿರುವ ದೇವನಿರ್ಮಿತವಾದ ದೇಶವನ್ನು ಬ್ರಹ್ಮಾವರ್ತವೆಂದು ಹೇಳುತ್ತಾರೆ.

**ಹಿಮವದ್ವಿಂಧ್ಯಧರಯೋರ್ಯದಂತರಮುದಾಹೃತಂ ।**
**ಪ್ರತ್ಯಗೇವ ಪ್ರಯಾಗಾಚ್ಚ ಮಧ್ಯದೇಶಃ ಪ್ರಕೀರ್ತಿತಃ ॥**
**ಆಸಮುದ್ರಾತ್ತು ವೈ ಪೂರ್ವಾದಾಸಮುದ್ರಾತ್ತು ಪಶ್ಚಿಮಾತ್** ॥ ೪೧ ॥

**ತಯೋರೇವಾಂತರಂ ಗಿರ್ಯೋರಾರ್ಯಾವರ್ತಂ ವಿದುರ್ಬುಧಾಃ ।**
**ಏತಾನ್ವಿಜ್ಞಾಯ ಸದ್ದೇಶಾನ್ಸಂಶ್ರಯೇತ ಪ್ರಯತ್ನತಃ** ॥ ೪೨ ॥

**ಶುದ್ಧಸ್ತು ಯಸ್ಮಿಂಸ್ತಸ್ಮಿನ್ವಾ ನಿವಸೇದ್ವೃತ್ತಿಕರ್ಶಿತಃ ।**
**ಏಷಾ ಧರ್ಮಸ್ಯ ವೈ ಜ್ಯೋತಿಃ ಸಮಾಸಾತ್ಕಥಿತಾ ತವ** ॥ ೪೩ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಅರುಣಾದಿತ್ಯ ಸಂವಾದೇ ಸ್ಮೃತಿಭೇದ ವರ್ಣನಂ ನಾಮ ಏಕಾಶೀತ್ಯುತ್ತರ ಶತತಮೋಽಧ್ಯಾಯಃ.**

---

೪೧. ಹಿಮಾಲಯ, ವಿಂಧ್ಯ, ಇವೆರಡು ಪರ್ವತಗಳ ಮಧ್ಯೆ ಪ್ರಯಾಗಕ್ಕೆ ಪಶ್ಚಿಮದಲ್ಲಿರುವ ಪ್ರದೇಶವು ಮಧ್ಯದೇಶವೆನಿಸಿಕೊಳ್ಳುತ್ತದೆ.

೪೨. " ಪಶ್ಚಿಮಸಮುದ್ರದಿಂದ ಪೂರ್ವಸಮುದ್ರದವರೆಗೆ ಅಥವಾ ಪೂರ್ವ ಸಮುದ್ರದಿಂದ ಪಶ್ಚಿಮಸಮುದ್ರದವರೆಗೆ ಹಿಮಾಲಯ, ವಿಂಧ್ಯ ಈ ಪರ್ವತಗಳ ಮಧ್ಯೆ ಇರುವುದನ್ನು ಆರ್ಯಾವರ್ತವೆನ್ನುವರು."

೪೩. "ಈ ದೇಶಗಳ ಮಹಿಮಾವಿಚಾರವನ್ನು ತಿಳಿದು, ಪ್ರಯತ್ನದಿಂದಲಾದರೂ ಆ ಒಳ್ಳೆಯದೇಶಗಳನ್ನು ಆಶ್ರಯಿಸಬೇಕು. ಅಲ್ಲಿ ಜೀವನಕ್ಕೆ ತೊಂದರೆಯಾಗುವುದಾದರೆ ಇನ್ನು ಯಾವ ದೇಶದಲ್ಲಿಯಾದರೂ ಶುದ್ಧಚರಿತ್ರನಾಗಿ ವಾಸಿಸಬಹುದು. ಹೀಗೆ ಜ್ಯೋತಿಸ್ವರೂಪವಾದ (ಜ್ಞಾನದಾಯಕವಾದ) ಧರ್ಮವಿಷಯವನ್ನು ನಿನಗೆ ಹೇಳಿದುದಾಯಿತು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಅರುಣ ಆದಿತ್ಯ ಸಂವಾದದಲ್ಲಿ ಸ್ಮೃತಿಭೇದ ವರ್ಣನೆಯೆಂಬ ನೂರಎಂಭತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

॥ ಆದಿತ್ಯ ಉವಾಚ ॥

ಉಕ್ತಂ ಧರ್ಮಸ್ವರೂಪಂ ತು ಸಾಧಿಕಾರಂ ಸನಾತನಂ ।
ಅತಃ ಪರಂ ಪ್ರವಕ್ಷ್ಯಾಮಿ ಧರ್ಮಮಾಶ್ರಮಿಣಾಂ ಖಗ ॥ ೧ ॥

ಬ್ರಹ್ಮಚಾರೀ ಗೃಹಸ್ಥಶ್ಚ ವನಸ್ಥೋ ಭಿಕ್ಷುರೇವ ಚ ।
ಚತ್ವಾರ ಆಶ್ರಮಾಃ ಪ್ರೋಕ್ತಾ ಏಕ ಏವ ಚತುರ್ವಿಧಃ ॥ ೨ ॥

ಗಾಯತ್ರೋ ಬ್ರಹ್ಮಚಾರೀ ತು ಪೂಜ್ಯಪಾದೋ ದ್ವಿತೀಯಕಃ ।
ದೇವವ್ರತಸ್ತೃತೀಯಸ್ತು ನೈಷ್ಠಿಕಸ್ತು ಚತುರ್ಥಕಃ ॥ ೩ ॥

---

## ನೂರಎಂಭತ್ತೆರಡನೆಯ ಅಧ್ಯಾಯ

೧. ಆದಿತ್ಯನು ಮುಂದುವರಿಸಿ ಹೇಳುತ್ತಾನೆ—ಅಯ್ಯಾ ಖಗನೇ! ಅಧಿಕಾರ ಪುರಸ್ಸರವೂ, ಆಧಾರಸಹಿತವೂ, ಸನಾತನವೂ ಆದ ಧರ್ಮದ ಸ್ವರೂಪವನ್ನು ಹೇಳಿದುದಾಯಿತು. ಇನ್ನು ಮುಂದೆ ಆಶ್ರಮಿಗಳ ಧರ್ಮವನ್ನು ಹೇಳುವೆನು.

೨–೩. ದ್ವಿಜರಲ್ಲಿ ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಭಿಕ್ಷು ಎಂದು ನಾಲ್ಕು ಆಶ್ರಮಗಳುಂಟು. ಬ್ರಹ್ಮಚರ್ಯ ಒಂದರಲ್ಲೇ ಗಾಯತ್ರ, ಪೂಜ್ಯಪಾದ, ದೇವವ್ರತ, ನೈಷ್ಠಿಕ ಎಂದು ನಾಲ್ಕುಪ್ರಕಾರಗಳಿವೆ.

ಚತ್ವಾರ ಆಶ್ರಮಾಃ ಪ್ರೋಕ್ತಾಃ ಸವೇದಾಃ ಸಮಧರ್ಮಕಾಃ ।
ಅತಃ ಪರಂ ಪ್ರವಕ್ಷ್ಯಾಮಿ ಸಂಸ್ಕಾರಂ ಧರ್ಮಸಿದ್ಧಯೇ ॥ ೪ ॥

ಗರ್ಭಾಧಾನಮೃತೌ ಕಾರ್ಯಂ ಹೃಷ್ಟಯೋಸ್ತು ಸಮಂತ್ರಕಂ ।
ಕಾರ್ಯಂ ಪುಂಸವನಂ ಮಾತುಃ ತೃತೀಯೇ ಮಾಸಿ ಸಂಯತೈಃ ॥ ೫ ॥

ಸೀಮಂತಃ ಸಪ್ತಮೇ ಮಾಸಿ ಷಷ್ಠೇ ವಾ ಚಾಷ್ಟಮೇಽಪಿ ವಾ ।
ಪಾತ್ರಸಂಸ್ಕಾರಕಾ ಇಷ್ಟಾ ಗರ್ಭಾಧಾನಾದಯಸ್ತ್ರಯಃ ॥ ೬ ॥

ಜಾತಕರ್ಮಾದಯಃ ಸರ್ವೇ ಸಂಸ್ಕಾರಾಃ ಪುರುಷಸ್ಯ ತು ।
ಮಧೋಸ್ತು ಪ್ರಾಶನಂ ಯತ್ರ ಸ್ವರ್ಣಾದ್ಯೈಸ್ತು ಸಮಂತ್ರಕಃ ॥ ೭ ॥

---

೪. ನಾಲ್ಕು ಆಶ್ರಮಗಳಿಗೂ ಕ್ಲುಪ್ತವಾದ ವೇದೋಕ್ತಧರ್ಮಗಳನ್ನೂ, ಹೇಳಿದೆ. ಒಂದೊಂದಕ್ಕೂ ಕ್ಲುಪ್ತವಾದ ಧರ್ಮಗಳು ಬೇರೆ ಬೇರೆಯಾಗಿವೆ. ಧರ್ಮ ಸಾಧನಾರ್ಥವಾದ ಈ ಸಂಸ್ಕಾರವಿಚಾರವನ್ನು ಇನ್ನು ಮುಂದೆ ವಿವರಿಸುತ್ತೇನೆ.

೫. ಋತುಕಾಲದಲ್ಲಿ (ರಜಸ್ವಲೆಯಾದ ೪ ನೇ ದಿನದಿಂದ ೧೬ ದಿನಗಳವರೆಗೆ) ದಂಪತಿಗಳು ಹರ್ಷವಾಗಿರುವಾಗ ಮಂತ್ರಾರ್ಥಾನುಸಂಧಾನ ಪೂರ್ವಕವಾಗಿಯೇ ಗರ್ಭಾಧಾನಕರ್ಮವನ್ನು ಮಾಡಬೇಕು. ಗರ್ಭಾಧಾನವಾದ ಮೂರು ತಿಂಗಳಲ್ಲಿ ನಿಯಮಯುಕ್ತತೆಯಿಂದ ಪುಂಸವನವೆಂಬ ಕರ್ಮವನ್ನು ಮಾಡಬೇಕು.

೬ ಗರ್ಭಿಣಿಯಾದ ಆರು, ಏಳು, ಅಥವಾ ಎಂಟನೆಯ ತಿಂಗಳಿನಲ್ಲಿ ಸೀಮಂತ ಕರ್ಮವನ್ನು ಮಾಡಬೇಕು. ಗರ್ಭಾಧಾನ, ಪುಂಸವನ, ಸೀಮಂತ ಇವು ಮೂರೂ ಗರ್ಭನಿಲ್ಲತಕ್ಕ ಪಾತ್ರಕ್ಕೆ (ಗರ್ಭಧರಿಸುವ ಸ್ತ್ರೀಗೆ) ಮಾಡತಕ್ಕ ಸಂಸ್ಕಾರವೆಂದು ತಿಳಿಯಬೇಕು.

೭. ಪುರುಷಶಿಶು ಉತ್ಪನ್ನವಾದರೆ ಜಾತಕರ್ಮ ಮೊದಲಾದ ಸರ್ವಸಂಸ್ಕಾರಗಳನ್ನೂ ಮಾಡಬೇಕು. ಚಿನ್ನದಉಂಗುರ ಮೊದಲಾದ ಉಪಕರಣದಿಂದ ಅದ್ದಿದ ಜೇನುತುಪ್ಪವನ್ನು ಮಂತ್ರಹೇಳಿ ಮಗುವಿಗೆ ನೆಕ್ಕಿಸುವುದೇ ಜಾತಕರ್ಮವು.

ಜಾತಕರ್ಮೇತಿ ತತ್ಪ್ರೋಕ್ತಂ ಗುಹ್ಯಂ ನಾಮ ತದೈವ ತು ।
ಪ್ರಕಾಶಂ ನಾಮ ಕರ್ತವ್ಯಂ ದಿನೇತ್ವೇಕಾದಶೇರ್ಥವತ್ ॥ ೮ ॥

ಧರ್ಮಶಾಸ್ತ್ರಾದಿಸಂಯುಕ್ತಂ ಷಷ್ಠೇऽನ್ನಪ್ರಾಶನಂ ಖಗ ।
ಪ್ರಥಮೇऽಬ್ಧೇ ತೃತೀಯೇ ವಾ ಚೂಡಾಕರ್ಮ ವಿಧೀಯತೇ ॥ ೯ ॥

ಅಷ್ಟಮೇ ದಶಮೇ ವಾಪಿ ಬ್ರಾಹ್ಮಣಸ್ಯೋಪನಾಯನಂ ।
ಪುರುಷಸ್ಯ ತಥಾ ಚಾನ್ಯಜಾತೀಯಾನಾಂ ವಿಶೇಷತಃ ॥ ೧೦ ॥

ಏಕಾದಶೇ ದ್ವಾದಶೇ ವಾ ಕಾರ್ಯಂ ಕ್ಷತ್ರಿಯವೈಶ್ಯಯೋಃ ।
ವೇದಸಂಸ್ಕಾರಕಂ ವಚ್ಮಿ ಮನ್ಯಂತೇ ತ್ವೌಪನಾಯನಂ ॥ ೧೧ ॥

ಪುರುಷಸ್ಯ ತಥಾ ಚಾನ್ಯ ಉಭಯೋಶ್ಚ ಬ್ರವೀಮ್ಯಹಂ ।
ಸಾವಿತ್ರಂ ವೈದಿಕಂ ಚೈವ ಮಹಾನಾಮ್ನೀ ಮಹಾವ್ರತಂ ॥ ೧೨ ॥

---

೮. ಈ ಜಾತಕರ್ಮವೆಂಬ ಕರ್ಮವು ಗುಟ್ಟಾಗಿ ನಡೆಯತಕ್ಕದ್ದು. ಎಂದರೆ ಸೂತಿಕಾಗೃಹದಲ್ಲಿಯೇ ನಡೆಯತಕ್ಕದ್ದು ಎಂದು ಹೇಳಿದೆ. ನಾಮಕರಣವೆಂಬ ಕಾರ್ಯವು ಹುಟ್ಟಿದ ಹನ್ನೊಂದನೆಯದಿನ ಲೋಕವ್ಯವಹಾರದಲ್ಲಿನ ಉಪಯೋಗಕ್ಕಾಗಿ ಪ್ರಕಾಶವಾಗಿ ನಡೆಯತಕ್ಕದು.

೯. ಅಯ್ಯಾ ಖಗನೇ! ಧರ್ಮಶಾಸ್ತ್ರಾನುಸಾರ ಆರನೆಯತಿಂಗಳಿನಲ್ಲಿ ಮಗುವಿಗೆ ಅನ್ನಪ್ರಾಶನಮಾಡಬೇಕು. ಮಗುವಿಗೆ ಒಂದನೆಯ ವರ್ಷದಲ್ಲೋ ಮೂರನೆಯ ವರ್ಷದಲ್ಲೋ ಚೂಡಾಕರ್ಮವು ನಡೆಯಬೇಕೆಂದು ವಿಧಿಸಲ್ಪಟ್ಟಿದೆ.

೧೦-೧೧. ಎಂಟನೆಯವರ್ಷ ಅಥವಾ ಹತ್ತನೆಯವರ್ಷದಲ್ಲಿ ಬ್ರಾಹ್ಮಣನಿಗೆ ಉಪನಯನಮಾಡಬೇಕು. ದ್ವಿಜರಲ್ಲಿ ಇತರರಾದ ಕ್ಷತ್ರಿಯರಿಗೆ ಹನ್ನೊಂದುವರ್ಷಕ್ಕೂ ವೈಶ್ಯರಿಗೆ ಹನ್ನೆರಡುವರ್ಷಕ್ಕೂ ಉಪನಯನಮಾಡಬೇಕು. ವೇದಾಭ್ಯಾಸಕ್ಕಾಗಿ ಯೋಗ್ಯತೆ ಬರುವುವಕ್ಕೋಸ್ಕರ ಸಂಸ್ಕಾರವನ್ನುಂಟುಮಾಡುವ ಈ ಕರ್ಮವನ್ನು ಉಪನಯನವೆಂದು ಹೇಳುವರು. ಅದರ ವಿಚಾರವನ್ನು ವಿವರವಾಗಿ ಹೇಳುತ್ತೇನೆ.

೧೨-೧೩. ಬ್ರಾಹ್ಮಣರಿಗೂ ಮತ್ತು ಕ್ಷತ್ರಿಯ, ವೈಶ್ಯರಿಗೂ ಉಪನಯನ ಕ್ರಮವನ್ನು ಬೇರೆ ಬೇರೆಯಾಗಿ ಹೇಳುತ್ತೇನೆ. ಸವಿತೃದೇವತಾ ಪ್ರೀತಿಕರವೂ,

ತಥೌಪನಿಷದಂ ಚಾಬ್ದಂ ಗೋದಾನಂ ಚ ಸವರ್ಣಕಂ ।
ವ್ರತಾನಿ ಗ್ರಹಣಾಂತಂ ವಾ ವೇದಸ್ಯೇತಿ ಮನೋರ್ಮತಂ ॥ ೧೩ ॥

ವೇದೈಕದೇಶಪಾಠಸ್ಯ ಉಕ್ತಂ ಗೃಹ್ಯೇ ಪ್ರಪಂಚಕಂ ।
ಉಕ್ತಾ ಗುರೋಸ್ತು ಶುಶ್ರೂಷಾ ದೃಷ್ಟಾದೃಷ್ಟಾರ್ಥಸಾಧನಂ ॥ ೧೪ ॥

ಉಭಯೋರ್ವಾ ತಥಾ ಚಾನ್ಯಾ ಯಥಾನ್ಯಾಯಂ ಯಥಾಶ್ರುತಂ ।
ಗುರೋರೇವ ಚ ತಂ ವಿದ್ಯಾತ್ತದ್ಜ್ಞಾನಂ ತ್ರಿವಿಧಂ ಸ್ಮೃತಂ ॥ ೧೫ ॥

ತೋಷಃ ಪರಸ್ಪರಸ್ಯೇತಿ ಏತಾವಾನ್ಧರ್ಮಸಂಗ್ರಹಃ ।
ಕೃತ್ಸ್ನೋ ವೇದೋಽಧಿಗಂತವ್ಯಃ ಸ್ವಧರ್ಮಮನುತಿಷ್ಠತಾ ॥ ೧೬ ॥

---

ವೇದೋಕ್ತವೂ ಆದ ಮಹಾನಾಮ್ನಿ, ಮಹಾವ್ರತ, ಔಪನಿಷದ, ಗೋದಾನ ಎಂಬ ನಾಲ್ಕುವ್ರತಗಳನ್ನು ವರ್ಣಾನುಸಾರ ಮಾಡಬೇಕು. ಈ ವ್ರತಾಚರಣವನ್ನು ಕೆಲವು ಕ್ಲುಪ್ತವರ್ಷಗಳವರೆಗೋ, ಅಥವಾ ವೇದಗ್ರಹಣ ಪೂರೈಸುವ ಪರ್ಯಂತರವೋ, ನಡೆಸ ತಕ್ಕದೆಂದು ಮನುವು ಹೇಳಿದಾನೆ.

೧೪. ವೇದದ ಏಕದೇಶವನ್ನು ಪಠನಮಾಡುವುದಕ್ಕೆ ಬೇಕಾಗುವ ಕಾಲಪರಿಮಾಣವನ್ನು ಆಯಾ ಶಾಖಾಗೃಹ್ಯಸೂತ್ರದಲ್ಲಿ ವಿಶದವಾಗಿ ಹೇಳಿದೆ. ದೃಷ್ಟವಾದ ಅರ್ಥವನ್ನು ಸಾಧನಮಾಡಿಕೊಳ್ಳಬೇಕಾದರೂ ಅಥವಾ ಅದೃಷ್ಟವಾದ ಅರ್ಥವನ್ನು ಸಾಧನಮಾಡಿಕೊಳ್ಳಬೇಕಾದರೂ ಗುರುಶುಶ್ರೂಷೆ ಮಾಡಬೇಕೆಂದು ಹೇಳಿದೆ.

೧೫. ನ್ಯಾಯಾನುಸಾರವಾಗಿ ನೋಡಿದರೂ, ಶಾಸ್ತ್ರಾನುಸಾರವಾಗಿ ನೋಡಿದರೂ ಗುರುಶುಶ್ರೂಷೆಯು ದೃಷ್ಟಾರ್ಥ, ಅದೃಷ್ಟಾರ್ಥ ಎರಡನ್ನೂ ಸಾಧನಮಾಡಿಕೊಡತಕ್ಕದೆಂದು ಹೇಳಬಹುದು. ಆ ಗುರುಶುಶ್ರೂಷಾ ವಿಧಾನವನ್ನು ಗುರುಮುಖದಿಂದಲೇ ತಿಳಿಯಬೇಕು. ಆ ತಿಳಿವಳಿಕೆಯು ಮೂರು ವಿಧವಾಗಿದೆ.

೧೬. ಅನ್ಯೋನ್ಯವಾಗಿ ಸಂತೋಷಪಡಿಸಬೇಕು ಎಂಬ ಒಂದು ಮಾತಿನಲ್ಲಿ ಗುರು ಶಿಷ್ಯಧರ್ಮವನ್ನು ಸಂಗ್ರಹವಾಗಿ ನಿರೂಪಿಸಬಹುದು ಎಂದು ಇಷ್ಟೇ ಹೇಳಬಹುದು ಸ್ವಧರ್ಮವನ್ನು ಆಚರಿಸಬೇಕಾದರೆ ವೇದವನ್ನು ಸಮಗ್ರವಾಗಿ ಅಧ್ಯಯನ ಮಾಡಬೇಕು.

ಜ್ಞಾತ್ವಾ ವೇದಂ ಬ್ರಹ್ಮಚಾರೀ ಗ್ರಂಥಾರ್ಥಾನ್ಯಾನ್ಯಥಾವಿಧಿ ।
ನೈಷ್ಠಿಕಶ್ಚ ವಿಧಾನಂ ತು ಯಾವತ್ಕ್ಲೀಬಂ ವಿಧೀಯತೇ ॥
ವಿದ್ಯಾಂತೇಽಭೀಷ್ಟದಾನಂ ಚ ಅನುಜ್ಞಾತೋ ಗೃಹೀ ಭವೇತ್ ॥ ೧೭ ॥

ನಿಷ್ಕಾಸನಂ ಗುರುಗೃಹಾದ್ಗೃಹಸ್ಥಸ್ಯ ಯಥಾ ಭವೇತ್ ।
ನೈಷ್ಠಿಕಶ್ಚ ತಥಾ ಸ್ನಾನಂ ಕುರ್ಯಾತ್ಸಮ್ಯಗ್ಯಥಾವಿಧಿ ॥ ೧೮ ॥

ಉದ್ವಹೇದ್ದ್ವೈ ತತೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ ।
ಅವಿಪ್ಲುತಬ್ರಹ್ಮಚರ್ಯಶ್ಚಾಧಿಕಾರೀ ಖಗೋತ್ತಮ ॥ ೧೯ ॥

ಸ್ವತಂತ್ರಮನ್ಯೇ ಚೇಚ್ಛಂತಿ ಹ್ಯಧಿಕಾರಂ ದ್ವಿಜೋತ್ತಮಾಃ ।
ಸಪ್ತಮೀಂ ಪಂಚಮೀಂ ಚೈವ ಕನ್ಯಕಾಂ ಪಿತೃಮಾತೃತಃ ॥ ೨೦ ॥

---

೧೭. ಬ್ರಹ್ಮಚಾರಿಯು ವಿಧಿಪ್ರಕಾರ ವೇದವನ್ನೂ ಅನ್ಯಗ್ರಂಥಾರ್ಥಗಳನ್ನೂ ಅಧ್ಯಯನಮಾಡುತ್ತಾ, ಪುಂಸ್ತ್ವಶಕ್ತಿ ಕ್ಷೀಣವಾಗುವವರೆಗೂ ನೈಷ್ಠಿಕ ಬ್ರಹ್ಮಚರ್ಯವನ್ನು ಆಚರಿಸಬೇಕು. ವಿದ್ಯಾಭ್ಯಾಸ ಮುಗಿಯುತ್ತಲೆ; ವಿದ್ಯೆ ಕಲಿಸಿದ ಗುರುವಿಗೆ ಇಷ್ಟವಾದುವೇನೆಂಬುದನ್ನು ತಿಳಿದು, ಅದನ್ನು ಸಂಪಾದಿಸಿ ಗುರುದಕ್ಷಿಣೆಯನ್ನು ಕೊಡಬೇಕು. ಅನಂತರ ಅವರ ಅನುಜ್ಞೆ ಪಡೆದು ಗೃಹಸ್ಥನಾಗಬೇಕು.

೧೮. ಗುರುವು ತನ್ನ ಗೃಹದಿಂದ ಶಿಷ್ಯನನ್ನು ಕಳುಹಿಸಿಕೊಡುವಾಗ ಗೃಹಸ್ಥನಾಗಬೇಕಾದವನಿಗೆ ಹೇಗೆ ಗೌರವ ನಡೆಸತಕ್ಕದೋ ಹಾಗೆ ನಡೆಸಬೇಕು. ನೈಷ್ಠಿಕ ಬ್ರಹ್ಮಚಾರಿಯಾಗಿ ಇರತಕ್ಕವನು ವಿಧ್ಯುಕ್ತವಾದ ಕ್ರಮದಲ್ಲಿ ಚೆನ್ನಾಗಿ ಸ್ನಾತಕನಾಗಬೇಕು.

೧೯ ಅನಂತರ ಸಮಾನ ವರ್ಣದವಳಾಗಿ ಸುಲಕ್ಷಣಗಳಿಂದ ಕೂಡಿದ ಸ್ತ್ರೀಯನ್ನು ಮದುವೆಮಾಡಿಕೊಳ್ಳಬೇಕು. ಅಯ್ಯಾ ಖಗಶ್ರೇಷ್ಠನೇ! ಕನ್ಯೆಯನ್ನು ಸ್ವೀಕರಿಸುವ ಪರ್ಯಂತ ತನ್ನ ಬ್ರಹ್ಮಚರ್ಯಕ್ಕೆ ಭಂಗತಂದುಕೊಳ್ಳದೆ ಇರುವವನೇ ಈ ರೀತಿ ಕನ್ಯಾಗ್ರಹಣಕ್ಕೆ ಅಧಿಕಾರಿಯೆನಿಸುವನು.

೨೦. ಮತ್ತೆ ಕೆಲವು ವಿಪ್ರರು ಕನ್ಯಾಗ್ರಹಣ ಮಾಡುವುದಕ್ಕೆ ಯಾವಾಗ ಬೇಕಾದರೆ ಆಗ (ಇಚ್ಛಾನುಸಾರ) ಸ್ವಾತಂತ್ರ್ಯವುಂಟೆಂದು ಹೇಳುತ್ತಾರೆ. ಪಿತೃಕುಲದ ಏಳು ತಲಾಂತರಗಳನ್ನೂ ಮಾತೃಕುಲದ ಐದು ತಲಾಂತರಗಳನ್ನೂ ಕಳೆದು ಗೋತ್ರ ಪ್ರವರೈಕ್ಯವಿಲ್ಲದ ಸ್ತ್ರೀಯನ್ನು ಮದುವೆಯಾಗಬೇಕು.

ಉದ್ವಹೇತ ದ್ವಿಜೋ ಭಾರ್ಯಾಮಸಮಾನಾರ್ಷಗೋತ್ರಜಾಂ ।
ಸಂಖ್ಯಾವಿಧಿವಿವಾಹೇಷು ಗೋತ್ರಾರ್ಥಂ ವಿಧಿವರ್ಜಿತಂ ॥ ೨೧ ॥

ವಿಕಲ್ಪೇನೈವ ಮಂತವ್ಯಮೃಷೀಣಾಂ ವಿವಿಧಾ ಶ್ರುತಿಃ ।
ಅಷ್ಟೌ ವಿವಾಹಾ ವರ್ಣಾನಾಂ ಸಂಸ್ಕಾರಾಖ್ಯಾ ಇತಿ ಶ್ರುತಿಃ ॥ ೨೨ ॥

ಯಸ್ತು ದೋಷವತೀಂ ಕನ್ಯಾಮನಾಖ್ಯಾಯ ಪ್ರಯಚ್ಛತಿ ।
ತಸ್ಯ ಕುರ್ಯಾನ್ನೃಪೋ ದಂಡಂ ಸ್ವಯಂ ಷಣ್ಣವತಿಂ ಪಣಾನ್ ॥ ೨೩ ॥

ಪಿತುರ್ಗೃಹೇ ತು ಯಾ ಕನ್ಯಾ ರಜಃ ಪಶ್ಯತ್ಯಸಂಸ್ಕೃತಾ ।
ಪತಂತಿ ಪಿತರಸ್ತಸ್ಯ ಕನ್ಯಾ ಚ ವೃಷಲೀ ಭವೇತ್ ॥ ೨೪ ॥

ಯಸ್ತು ತಾಂ ವರಯೇತ್ಕನ್ಯಾಂ ಬ್ರಾಹ್ಮಣೋಽಜ್ಞಾನದುರ್ಬಲಃ ।
ಅಶ್ರಾದ್ಧೇಯ ಮಪಾಂಕ್ತೇಯಂ ತಂ ವಿದ್ಯಾದ್ವೃಷಲೀಪತಿಂ ॥ ೨೫ ॥

---

೨೧. ವಿಧಿವತ್ತಾಗಿ ನಡೆವ ವಿವಾಹಗಳಲ್ಲಿ ಗೋತ್ರವ್ಯವಸ್ಥೆ ತಲಾಂತರ ಸಂಖ್ಯಾ ವಿಧಿ ಇವನ್ನು ನೋಡಬೇಕೇ ವಿನಾ ಸರ್ವತ್ರ ಅಲ್ಲ. ಈ ವಿಚಾರವನ್ನು ಒಬ್ಬೊಬ್ಬ ಋಷಿಯು ಒಂದೊಂದು ಬಗೆಯಾಗಿ ವಿವರಿಸಿರುವುದರಿಂದ ಇದರ ವ್ಯವಸ್ಥೆಯನ್ನು ಸಹ ವಿಕಲ್ಪವಿಧಿಯಿಂದಲೇ ನಿರ್ಣಯಮಾಡಬೇಕು

೨೨ ಜಾತಿಗಳಿಗೆ ಸಂಸ್ಕಾರಪ್ರದವೆಂದು ಹೇಳುವ ಷೋಡಶ ಸಂಸ್ಕಾರಗಳಲ್ಲಿ ಒಂದು ಎನಿಸಿದ ವಿವಾಹವೆಂಬುದು ಜಾತ್ಯನುಸಾರ ಎಂಟು ಬಗೆ ಎಂದು ಹೇಳಿದೆ.

೨೩. ಯಾವನು ತನ್ನ ಕನ್ಯೆಯಲ್ಲಿರುವ ದೋಷವನ್ನು ಹೇಳದೆ ಮರೆಮಾಚಿ ಕನ್ಯಾದಾನಮಾಡುತ್ತಾನೋ ಅಂತಹ ಕನ್ಯಾಪಿತೃವಿಗೆ ರಾಜನು ತೊಂಭತ್ತಾರು ಹಣ ಗಳನ್ನು ದಂಡವಾಗಿ ವಿಧಿಸಬೇಕೆಂದು ಹೇಳಿದೆ.

೨೪. ಯಾವನ ಕನ್ಯೆಯು ವಿವಾಹಸಂಸ್ಕಾರ ನೆರವೇರುವುದಕ್ಕಿಂತ ಮುಂಚೆ, ತಂದೆಯ ಮನೆಯಲ್ಲಿ ರಜಸ್ವಲೆಯಾಗುವಳೋ ಅವನ ಪಿತೃಗಳು ಭ್ರಷ್ಟರಾಗುವರು.

೨೫. ಮತ್ತು ಅಂಥಾ ಕನ್ಯೆಯು ವೃಷಲೀ ಎನಿಸುವಳು. ತಿಳಿವಳಿಕೆ ಸಾಲದ ಬ್ರಾಹ್ಮಣನು ಅವಳನ್ನು ಮದುವೆಯಾದರೆ ವೃಷಲೀಪತಿಯೆಂದೆನಿಸಿಕೊಂಡು ಆತನು ಯಾವ ಬ್ರಹ್ಮಕರ್ಮಗಳಿಗೂ ಶ್ರಾದ್ಧಗಳಲ್ಲಿ ಪಂಕ್ತಿಭೋಜನಕ್ಕೂ ಅನರ್ಹನೆನಿ ಸುವನು.

ಸರ್ವದೋಷಾನ್ಹಿ ವಿಖ್ಯಾಪ್ಯ ಸ್ತ್ರಿಯಾ ವಾ ಪುರುಷಸ್ಯ ವಾ ।
ಉಭಯೋರಪಿ ವಿಖ್ಯಾಪ್ಯ ತತಃ ಸಂಬಂಧಮಾಚರೇತ್ ॥ ೨೬ ॥

ಗೌರೀ ಕನ್ಯಾ ಪ್ರಧಾನಾ ವೈ ಮಧ್ಯಮಾ ಕನ್ಯಕಾ ಸ್ಮೃತಾ ।
ರೋಹಿಣೀ ತತ್ಸಮಾ ಜ್ಞೇಯಾ ಅಥವಾ ತು ರಜಸ್ವಲಾ ॥ ೨೭ ॥

॥ ಅನೂರುರುವಾಚ ॥

ಗೌರೀ ತು ಕಾ ಮತಾ ಕನ್ಯಾ ರೋಹಿಣೀ ಚ ಜಗತ್ಪತೇ ।
ರಜಸ್ವಲಾ ನಗ್ನಿಕಾ ಚ ದೇವಕನ್ಯಾ ಚ ಕಾ ಭವೇತ್ ॥ ೨೮ ॥

॥ ಭಾಸ್ಕರ ಉವಾಚ ॥

ಅಸಂಪ್ರಾಪ್ತರಜಾ ಗೌರೀ ಪ್ರಾಪ್ತೇ ರಜಸಿ ರೋಹಿಣೀ ।
ಅವ್ಯಂಜನಯುತಾ ಕನ್ಯಾ ಕುಚಹೀನಾ ಚ ನಗ್ನಿಕಾ ॥ ೨೯ ॥

---

೨೬. ಸ್ತ್ರೀಯರಲ್ಲಿ ದೋಷವಿದ್ದರೂ ಪುರುಷನಲ್ಲಿ ದೋಷವಿದ್ದರೂ ಅದನ್ನೆಲ್ಲ ಮರೆಮಾಚದೆ ಪ್ರಕಟಿಸಿ ಅನಂತರ ಇಬ್ಬರೂ ಸಂಬಂಧಮಾಡಿಕೊಳ್ಳಬೇಕು.

೨೭. ಗೌರೀಸಂಜ್ಞಕಳು ಹೆಣ್ಣುಮಕ್ಕಳಲ್ಲಿ ಮುಖ್ಯಳು. ಎಂದರೆ ದಾನಕ್ಕೆ ಪ್ರಶಸ್ತಳು, ನಗ್ನಿಕಾಸಂಜ್ಞಕಳು, ಮಧ್ಯಮ; ರೋಹಿಣೀಸಂಜ್ಞಕಳೂ, ಅವಳಂತೆಯೇ ಮಧ್ಯಮ; ರಜಸ್ವಲೆಯಾದ ಹುಡುಗಿಯು ದಾನಕ್ಕೆ ಅಧಮ ಎಂದು ಹೇಳಿದಾನೆ.

೨೮. ಆಗ ಅರುಣನು "ಅಯ್ಯಾ ಜಗತ್ಪತಿಯೇ! ಗೌರೀ ಎಂದರೆ ಯಾರು ? ರೋಹಿಣಿ ಎಂಬುದು ಯಾರಿಗೆ ಸಂಜ್ಞೆ ? ನಗ್ನಿಕಾ, ದೇವಕನ್ಯಾ, ರಜಸ್ವಲಾ ಇವರ ಲಕ್ಷಣವು ಏನು ? " ಎಂದು ಕೇಳಿದನು.

೨೯. ಆಗ ಭಾಸ್ಕರನು ಉತ್ತರ ಹೇಳುವವನಾಗಿ—ರಜಸ್ವಲೆಯಾಗದ ಹುಡುಗಿಯು ಗೌರೀಸಂಜ್ಞಕಳು, ರಜಸ್ವಲೆಯಾದವಳು ರೋಹಿಣೀಸಂಜ್ಞಕಳು, ಯೌವನ ವ್ಯಂಜಕವಾದ ಕಕ್ಷಕೇಶಾದಿಗಳು ವ್ಯಕ್ತವಾಗದಿರುವವಳು ಕನ್ಯಾ, ಸ್ತನೋದಯವಾಗದೆ ಇರುವವಳು ನಗ್ನಿಕಾ.

ಸಪ್ತವರ್ಷಾ ಭವೇದ್ಗೌರೀ ದಶವರ್ಷಾ ತು ನಗ್ನಿಕಾ ।
ದ್ವಾದಶೇ ತು ಭವೇತ್ಕನ್ಯಾ ಅತ ಊರ್ಧ್ವಂ ರಜಸ್ವಲಾ ॥ ೩೦ ॥

ವ್ಯಂಜನೇನ ಸಮೋಪೇತಾಂ ಸೋಮೋ ಭುಂಕ್ತೇ ಹಿ ಕನ್ಯಕಾಂ ।
ಪಯೋಧರೇಷು ಗಂಧರ್ವಾ ರಜಸ್ಯಗ್ನಿಃ ಪ್ರಕೀರ್ತಿತಃ ॥ ೩೧ ॥

ಹಿನಸ್ತಿ ವ್ಯಂಜನೈಃ ಪುತ್ರಾನ್ಕುಲಂ ಹನ್ಯಾತ್ಪಯೋಧರೈಃ ।
ಗತಿಮಿಷ್ಟಾಂ ತಥಾ ಲೋಕಾನ್ಹನ್ಯಾತ್ತು ರಜಸಾ ಪಿತುಃ ॥ ೩೨ ॥

ತಸ್ಮಾದವ್ಯಂಜನೋಪೇತಾಮರಜಸ್ಕಪಯೋಧರಾಂ ।
ನಾನ್ಯೋಪಭುಕ್ತಾಂ ಸೋಮಾದ್ಯೈರ್ದದ್ಯಾದ್ದುಹಿತರಂ ಪಿತಾ ॥ ೩೩ ॥

---

೩೦. ಏಳುವರ್ಷ ತುಂಬಿದ ಹುಡುಗಿಯು ಗೌರೀಸಂಜ್ಞಕಳು ಎಂದೂ, ಹತ್ತುವರ್ಷವಾದವಳು ನಗ್ನಿಕೆಯೆಂದೂ, ಹನ್ನೆರಡುವರ್ಷದವಳು ಕನ್ಯೆಯೆಂದೂ, ಅದಕ್ಕಿಂತ ಹೆಚ್ಚಿನ ವಯಸ್ಸಿನವಳು ರಜಸ್ವಲೆಯೆಂದೂ ಕೆಲವರ ಮತ ;

೩೧. ಕಕ್ಷಕೇಶಾದಿ ಯೌವನ ವ್ಯಂಜಕಗಳಿಂದ ಯುಕ್ತಳಾದ ಬಾಲಿಕೆಯನ್ನು ಸೋಮನು ಅನುಭವಿಸುವನು. (ಎಂದರೆ ಆಕೆಯ ಶರೀರದಲ್ಲಿ ಸೋಮನಾಮಕಧಾತು ಉತ್ಪನ್ನವಾಗುವುದು.) ಸ್ತನೋದಯವಾದ ಬಾಲಿಕೆಯನ್ನು ಗಂಧರ್ವನು ಅನುಭವಿಸುವನು. (ಎಂದರೆ ಅವಳಲ್ಲಿ ಗಂಧರ್ವನಾಮಕವಾದ ಧಾತು ಉತ್ಪನ್ನವಾಗುವುದು.) ರಜಸ್ಸು ಪ್ರಕಟವಾಗುವ ಸಂಭವದಲ್ಲಿ ಅಗ್ನಿಯು ಅನುಭವಿಸುವನು. (ಎಂದರೆ ಅವಳಲ್ಲಿ ಅಗ್ನಿನಾಮಕವಾದ ಧಾತುವು ಉತ್ಪನ್ನವಾಗುವುದು) ಎಂದು ಹೇಳುವರು.

೩೨. ಕಕ್ಷಕೇಶ ಮೊದಲಾದ ಯೌವನ ಲಕ್ಷಣಯುಕ್ತಳಾದ ಕನ್ಯೆಯನ್ನು ದಾನಮಾಡಿದರೆ ದಾತನ ಪುತ್ರರು ಮೃತರಾಗುವರು. ಸ್ತನೋದಯವಾದ ಕನ್ಯೆಯನ್ನು ದಾನಮಾಡಿದರೆ ದಾತೃವಿನ ಕುಲವೇ ಧ್ವಂಸವಾಗುವುದು. ರಜಸ್ವಲೆಯಾದ ಮೇಲೆ ಕನ್ಯಾದಾನಮಾಡಿದರೆ ಅವನಿಗೆ ಇಷ್ಟವಾದ ಸದ್ಗತಿಗಳೂ, ಪರಲೋಕಪ್ರಾಪ್ತಿರೂಪವಾದ ಫಲಗಳೂ ನಾಶವಾಗುವುವು.

೩೩. ಆದುದರಿಂದ ಕನ್ಯಾಪಿತನು ಯೌವನಲಕ್ಷಣಗಳು ತೋರದೆ ಇರುವ ಎಂದರೆ ಸ್ತನೋದವಾಗದೆಯೂ, ರಜಸ್ವಲೆಯಾಗದೆಯೂ ಇರುವವಳಾಗಿ, ಸೋಮ, ಗಂಧರ್ವ, ಅಗ್ನಿ ಇವರಿಂದ ಅನುಪಭುಕ್ತಳೂ, (ಇವರು ಹೊರತು ಇತರರಿಂದ ಉಪಭುಕ್ತಳಾಗದೆ ಇರುವಂಥವಳೂ ಆದ ಕನ್ಯೆಯನ್ನೇ ದಾನಮಾಡಬೇಕು.

ಅನ್ನಂ ತಸ್ಯ ನ ಭೋಕ್ತವ್ಯಂ ವೃಥಾಪಾಕೋ ಹಿ ಸ ಸ್ಮೃತಃ ।
ವೃಥಾಪಾಕಸ್ಯ ಭುಕ್ತ್ವಾನ್ನಂ ಪ್ರಾಯಶ್ಚಿತ್ತಂ ಸಮಾಚರೇತ್ ॥ ೩೪ ॥

ಪ್ರಾಣಾಯಾಮಂ ತ್ರಿರಭ್ಯಸ್ಯ ಘೃತಂ ಪ್ರಾಶ್ಯ ವಿಶುಧ್ಯತಿ ।
ನ ವಿವಾಹಯೇದೇಕಗೋತ್ರಾಂ ಸಮಾನಪ್ರವರಾಂ ಖಗ ॥
ಕೃತ್ವಾ ತಸ್ಯಾಂ ಸಮುತ್ಸರ್ಗಮತಿಕೃಚ್ಛ್ರೇ ವಿಶೋಧನಂ ॥ ೩೫ ॥

ಉದ್ವಾಹಯೇತ್ಸಗೋತ್ರಾಂ ಚ ತನಯಾಂ ಮಾತುಲಸ್ಯ ಚ ।
ಋಷಿಭಿಶ್ಚಾಪಿ ತುಲ್ಯೋಽಸೌ ದ್ವಿಜಶ್ಚಾಂದ್ರಾಯಣಂ ಚರೇತ್ ॥ ೩೬ ॥

---

೩೪. ಅನ್ಯೋಪಭುಕ್ತಳಾದ ಕನ್ಯೆಯನ್ನು ದಾನಮಾಡಿದಂಥವನ ಮನೆಯ ಅನ್ನವನ್ನು ಭೋಜನಮಾಡಬಾರದು. ತನಗೆ ಅನ್ನವನ್ನು ಕೊಟ್ಟು ಸಹಾಯಮಾಡಿದವನನ್ನು ತನ್ನ ಅನ್ನದಿಂದ ಪೋಷಿಸದೆ ಇರುವುದರಿಂದ ಅವನು ವೃಥಾಪಾಕನೆನಿಸಿಕೊಳ್ಳುವನು. "ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂಬ್ರವೀಮಿ ವಧ ಇತ್ಸ ತಸ್ಯನಾರ್ಯಮಣಂ ಪುಷ್ಯಂತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ" ಎಂಬ ಶ್ರುತಿಯನ್ನೇ ಇಲ್ಲಿ ಅನುಸಂಧಾನಮಾಡಬೇಕು. (ಮೋಘ=ವೃಥಾ) ಇಂಥಾ ವೃಥಾಪಾಕನ ಅನ್ನವನ್ನು ಭುಂಜಿಸಿದರೆ ಆ ದೋಷಪರಿಹಾರಕ್ಕೆ ಚಾಂದ್ರಾಯಣ ವ್ರತ ಮಾಡಿ ಶುದ್ಧನಾಗಬೇಕು.

೩೫. ವೃಥಾಪಾಕನ ಮನೆಯಲ್ಲಿ ಭೋಜನಮಾಡಿದವನು ಮೂರಾವೃತ್ತಿ ಪ್ರಾಣಾಯಾಮ ಮಾಡಿ, ತುಪ್ಪವನ್ನು ಪ್ರಾಶನಮಾಡಿದರೆ ಶುದ್ಧನಾಗುತ್ತಾನೆ. ಒಂದೇ ಗೋತ್ರವೂ, ಒಂದೇ ಪ್ರವರವೂ ಉಳ್ಳ ಕನ್ಯೆಯು ಸಗೋತ್ರಳೆನಿಸುವಳು. ಅವಳ ಸಂಬಂಧಮಾಡಿದವನು ಪ್ರಾಯಶ್ಚಿತ್ತ ಮಾಡಿಕೊಂಡರೂ ಸವ್ಯವಹಾರಕ್ಕೆ ಅರ್ಹನಾಗುವುದು ಕಷ್ಟ.

೩೬. ಸಗೋತ್ರ ಕನ್ಯೆಯನ್ನಾಗಲೀ, ಸೋದರಮಾವನ ಮಗಳನ್ನಾಗಲೀ, ಯಾವನು ಮದುವೆಯಾಗುವನೋ ಅವನು ಋಷಿಸಮಾನ ಎಂದೆನಿಸಿಕೊಂಡಿದ್ದರೂ ಪತಿತನಾಗುವನು. ಅವನು ಚಾಂದ್ರಾಯಣ ವ್ರತವನ್ನಾಚರಿಸಿ ಪ್ರಾಯಶ್ಚಿತ್ತ ಮಾಡಿಕೊಂಡ ಬಳಿಕ ಶುದ್ಧನಾಗಬೇಕು.

ಅಸಪಿಂಡಾ ತು ಯಾ ಮಾತುರಸಗೋತ್ರಾ ಚ ಯಾ ಪಿತುಃ ।
ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ೩೭ ॥

॥ ಅರುಣ ಉವಾಚ ॥
ದಾರಕರ್ಮ ಕಿಮುಕ್ತಂ ವೈ ಯದುಕ್ತಂ ಭವತಾ ಇಡಂ ।
ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ೩೮ ॥

॥ ಆದಿತ್ಯ ಉವಾಚ ॥
ಅಗ್ನಿಹೋತ್ರಾದಿ ಯತ್ಕರ್ಮ ವೈದಿಕಂ ವಿನತಾತ್ಮಜ ।
ತದುಕ್ತಂ ದಾರಕರ್ಮೇತಿ ದ್ವಾಭ್ಯಾಂ ಯೋಗಾತ್ತು ಮೈಥುನೇ ॥ ೩೯ ॥

ನೋದ್ವಹೇತ್ಕಪಿಲಾರಂ ಕನ್ಯಾಂ ನಾಧಿಕಾಂಗೀಂ ನ ರೋಗಿಣೀಂ ।
ನಾಲೋಮಿಕಾಂ ನಾತಿಲೋಮಾಂ ನ ಚಾಕೂಟಾಂ ನ ಪಿಂಗಲಾಂ ॥ ೪೦ ॥

---

೩೭. "ಮಾತೃವಿಗೆ ಸಪಿಂಡಳಲ್ಲದವಳೂ, ತಂದೆಗೆ ಸಗೋತ್ರಳಲ್ಲದವಳೂ ಆದ ಕನ್ಯೆಯು ಬ್ರಾಹ್ಮಣನಿಗೆ ವಿವಾಹವಾಗುವುದಕ್ಕೂ, ಮೈಥುನ ಕರ್ಮಕ್ಕೂ ಯೋಗ್ಯಳೆನಿಸುವಳು" ಎಂದನು.

೩೮. ಆಗ ಅರುಣನು "ಎಲೈ ಸೂರ್ಯನೇ ! ಬ್ರಾಹ್ಮಣರಿಗೆ ದಾರಕರ್ಮಕ್ಕೂ, ಮೈಥುನಕ್ಕೂ ಪ್ರಶಸ್ತವೆಂದು ನೀನು ಹೇಳಿದೆಯಷ್ಟೆ. ಈ ದಾರಕರ್ಮವು ಯಾವುದು ? " ಎಂದನು.

೩೯. ಅದಕ್ಕೆ ಆದಿತ್ಯನು ಉತ್ತರ ಹೇಳುವವನಾಗಿ "ಎಲೈ ವೈನತೇಯನೇ ! ಅಗ್ನಿಹೋತ್ರ ಮೊದಲಾದ ಕರ್ಮವನ್ನು ಆಚರಿಸುವುದೇ ದಾರಕರ್ಮ, ದಂಪತಿಗಳಿಬ್ಬರೂ ಸೇರಿ ಭೋಗಮಾಡುವುದೇ ಮೈಥುನವೆನಿಸುವುದು.

೪೦. ಕಪಿಲವರ್ಣದ ಕನ್ಯೆ, ಆರುಬೆರಳು ಮೊದಲಾಗಿ ಅಧಿಕಾಂಗ ಉಳ್ಳವಳು, ರೋಗಗ್ರಸ್ತೆಯಾದವಳು ಮತ್ತು ಲೋಮಗಳಿಲ್ಲದವಳು, ಅತಿಲೋಮಗಳನ್ನುಳ್ಳವಳು, ಆಕೂಟಳು, ಪಿಂಗಳವರ್ಣದವಳು ಇಂಥಾ ಸ್ತ್ರೀಯನ್ನು ಮದುವೆಮಾಡಿಕೊಳ್ಳಬಾರದು.

ಋಕ್ಷವೃಕ್ಷನದೀ ನಾಮ್ನೀಂ ನಾನ್ಯಪರ್ವತನಾಮಿಕಾಂ ।
ನ ಯಕ್ಷಾಹಿಪ್ರೇಷ್ಯನಾಮ್ನೀಂ ಚಾತಿಭೀಷಣನಾಮಿಕಾಂ ॥ ೪೧ ॥

ಯಸ್ಯಾಸ್ತು ನ ಭವೇದ್ಭ್ರಾತಾ ನ ವಿಜ್ಞಾಯೇತ ವೈ ಪಿತಾ ।
ನೋಪಗಚ್ಛೇದ್ಧಿ ತಾಂ ಪ್ರಾಜ್ಞಃ ಪುತ್ರಿಕಾಧರ್ಮಶಂಕಯಾ ॥ ೪೨ ॥

ಹಂಸಸ್ವರಾಮೇಕವರ್ಣಾಂ ಮಧುಪಿಂಗಲಲೋಚನಾಂ ।
ತಾದೃಶೀಂ ವರಯೇತ್ಕನ್ಯಾಂ ಗೃಹಾರ್ಥೀ ಖಗಸತ್ತಮ ॥ ೪೩ ॥

ದಾರಾಗ್ನಿಹೋತ್ರಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ ।
ಪರಿವೇತ್ತಾ ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ॥ ೪೪ ॥

ಪರಿವಿತ್ತಿಃ ಪರಿವೇತ್ತಾ ಚ ಯಯಾ ಸ ಪರಿವಿದ್ಯತೇ ।
ಸರ್ವೇ ತೇ ನರಕಂ ಯಾಂತಿ ದಾತೃಯಾಜಕಪಂಚಮಾಃ ॥ ೪೫ ॥

---

೪೧. ನಕ್ಷತ್ರಗಳ ಹೆಸರಿನ ಸ್ತ್ರೀ, ವೃಕ್ಷದ ಹೆಸರಿನ ಸ್ತ್ರೀ, ನದಿಯ ಹೆಸರಿನವಳು, ಮತ್ತು ಪರ್ವತದ ಹೆಸರಿನವಳು, ಯಕ್ಷರ ಹೆಸರಿನವಳು, ಸರ್ಪದ ಹೆಸರಿನವಳು. ಸೇವಕ ವಾಚಕವಾದ ಶಬ್ದದ ಹೆಸರಿನವಳು, ಅತಿಭಯಂಕರವಾದ ಹೆಸರುಳ್ಳವಳು ಇಂಥ ಸ್ತ್ರೀಯರನ್ನು ಮದುವೆಯಾಗಬಾರದು.

೪೨. ಪ್ರಾಜ್ಞನಾದವನು ಸಹೋದರನಿಲ್ಲದವಳನ್ನೂ, ತಂದೆ ಯಾರೆಂಬುದೇ ಗೊತ್ತಿಲ್ಲದವಳನ್ನೂ, ಮದುವೆಯಾಗಬಾರದು. ನಿಷ್ಕೃಷ್ಟವಾಗಿ ತಂದೆ ಗೊತ್ತಿಲ್ಲದೆ ಇದ್ದರೆ ಧರ್ಮತಃ ಯಾರಪುತ್ರಿಯೋ ಏನೋ ಎಂಬ ಸಂದೇಹ ಹುಟ್ಟುವುದು.

೪೩. ಅಯ್ಯಾ ಖಗಶ್ರೇಷ್ಠನೇ! ಗೃಹಸ್ಥಾಶ್ರಮವನ್ನು ಅಪೇಕ್ಷಿಸುವವನು, ಹಂಸಧ್ವನಿಯಂತೆ ಧ್ವನಿಯುಳ್ಳವಳೂ, ಮೈಯೆಲ್ಲಾ ಒಂದೇ ವರ್ಣವುಳ್ಳವಳೂ, ಜೇನು ತುಪ್ಪದಂತೆ ಪಿಂಗಳವರ್ಣದ ಕಣ್ಣುಳ್ಳವಳೂ ಆದ ಕನ್ಯೆಯನ್ನು ವರಿಸಬೇಕು.

೪೪. ಪುರುಷರಲ್ಲಿ ಅಗ್ರಜನು ಅವಿವಾಹಿತನಾಗಿರುವಾಗ ತಮ್ಮನು ಮದುವೆ ಅಗ್ನಿಪರಿಚರ್ಯ ಇವುಗಳನ್ನು ಮಾಡಿಕೊಳ್ಳಬಾರದು. ಹಾಗೆ ಮಾಡಿದರೆ ತಮ್ಮನು ಪರಿವೇತ್ತನೆಂದೂ, ಅಣ್ಣನಿಗೆ ಪರಿವಿತ್ತಿಯೆಂದೂ ಸಂಜ್ಞೆ.

೪೫. ಹೀಗೆ ಯಾರ ನಿಮಿತ್ತದಿಂದ ಸಹೋದರ ಸಹೋದರಿಯರು ಪರಿವಿತ್ತಿ ಪರಿವೇತ್ತನೆನಿಸಿದರೋ ಅವರು, ಇವಳ ತಂದೆ ತಾಯಿ, ಪೌರೋಹಿತ್ಯ ಮಾಡಿಸಿದ ಯಾಜಕ ಇವರೈದುಮಂದಿಯೂ ನರಕಕ್ಕೆ ಹೋಗುವರು.

ಕ್ಲೀಬೇ ದೇಶಾಂತರಸ್ಥೇ ವಾ ಪತಿತೇ ವ್ರಜಿತೇ ತಥಾ ।
ಯೋಗಶಾಸ್ತ್ರಾಭಿಯುಕ್ತೇ ಚ ನ ದೋಷಃ ಪರಿವೇದನೇ　　　॥ ೪೬ ॥

ಖಂಜವಾಮನಕುಬ್ಜೇಷು ಗದ್ಗದೇಷು ಜಡೇಷು ಚ ।
ಜಾತ್ಯಂಧೇ ಬಧಿರೇ ಮೂಕೇ ನ ದೋಷಃ ಪರಿವೇದನೇ　　　॥ ೪೭ ॥

ನ ಶ್ರಾದ್ಧಂ ತು ಕನಿಷ್ಠಸ್ಯ ವಿಕುಲಾಯ ಚ ಕನ್ಯಕಾ ।
ಹೀನಶ್ಚ ಗುಣಶೀಲಾಭ್ಯಾಂ ನ ಶುದ್ಧ್ಯೇತ ಕದಾಚನ ॥
ನ ಮಂತ್ರಾಃ ಕಾರಣಂ ತತ್ರ ನ ಚ ಕನ್ಯಾ ವೃತಾ ಭವೇತ್　　　॥ ೪೮ ॥

ಉದ್ವಾಹಿತಾ ತು ಯಾ ಕನ್ಯಾ ನ ಚ ಪ್ರಾಪ್ತಾ ತು ಮೈಥುನಂ ।
ಪುನರಭ್ಯೇತಿ ಭರ್ತಾರಂ ಯಥಾ ಕನ್ಯಾ ತಥೈವ ಸಾ　　　॥ ೪೯ ॥

---

೪೬. ಜ್ಯೇಷ್ಠನು ನಪುಂಸಕನಾದರೂ, ದೇಶಾಂತಕ್ಕೆ ಹೋಗಿ ಸೇರಿಬಿಟ್ಟರೂ, ಪತಿತನಾದರೂ, ಸಂನ್ಯಾಪ ಸ್ವೀಕಾರಮಾಡಿದರೂ, ಯೋಗಾಭ್ಯಾಸಿಯಾದರೂ, ಸಹೋದರನು ಪರಿವಿತ್ತಿ ಪರಿವೇತ್ತನಾಗುವ ದೋಷವಿಲ್ಲ. ಸ್ತ್ರೀಪುನರ್ವಿವಾಹ ವಿಚಾರವನ್ನು ಸಕಾರಣವಾಗಿ ಸೂಚಿಸುವ ಗ್ರಂಥಪಂಜ್ತಿಯು "ನಷ್ಟೇ ಮೃತೇ, ಪ್ರವ್ರಜಿತೇ, ಕ್ಲೀಬೇಚ ಪತಿತೇಪತೌ ಪಂಚಸ್ವಾಪತ್ಸುನಾರೀಣಾಂ ಪತಿರನ್ಯೋ ವಿಧೀಯತೇ" ಎಂಬದಾಗಿ ಇವೆ.

೪೭. ಅಣ್ಣನು ಕುಂಟನೋ, ಕುಳ್ಳನೋ, ಗೂನನೋ, ಗದ್ಗದಧ್ವನಿಯುವವನೋ, ಜಡನೋ, ಕುರುಡನೋ, ಕಿವುಡನೋ, ಮೂಗನೋ ಆದರೆ ಆಗ ಅವನಿಗೆ ಮದುವೆಯಾಗುವ ಸಂಭವವೇ ಇಲ್ಲವಾಗಿ ಅಣ್ಣನ ಮದುವೆಯಿಲ್ಲದಿದ್ದರೂ ತಮ್ಮನ ಮದುವೆ ನಡದೇತೀರಬೇಕು. ಆದ್ದರಿಂದ ಅಂಥಾ ಸಂದರ್ಭದಲ್ಲಿ ಪರಿವೇತ್ತ್ರೃತ್ವ ದೋಷವುಂಟಾಗುವುದಿಲ್ಲ.

೪೮. ಕನಿಷ್ಠಪುತ್ರನು ನಡೆಯಿಸಿದ ಶ್ರಾದ್ಧವೂ, ದುಷ್ಕುಲಜನಿಗೆ ಮಾಡಿದ ಕನ್ಯಾದಾನವೂ, ಗುಣಶೀಲ ಹೀನನಾದವನ ಬಾಳ್ವೆಯೂ, ಯಾವಾಗಲೂ ಶುದ್ಧವೆನಿಸುವುದಿಲ್ಲ. ಅಂಥವರ ಶುದ್ಧಿವಿಷಯದಲ್ಲಿ ಮಂತ್ರಗಳೂ ಕಾರಣವಾಗುವುದಿಲ್ಲ. ಅಂಥ ಅಶುದ್ಧನು ಮಾಡಿಕೊಂಡ ಕನ್ಯಾವರಣವು ವಿಧಿವಿಹಿತವಾದ ಕನ್ಯಾವರಣವಲ್ಲ

೪೯. ಕನ್ಯೆಗೆ ಮದುವೆಯಾಗಿದ್ದು ಋತುಶಾಂತಿ ಆಗಿಲ್ಲದಿರುವಾಗ ಅವಳು ಪತಿಹೀನೆಯಾದರೆ ಅವಳಿಗೆ ಬೇರೆ ಮದುವೆಮಾಡಬಹುದು. ಏಕೆಂದರೆ ಅವಳು ಕನ್ಯೆಯಂತೆಯೇ ಪತಿಗ್ರಹಣಯೋಗ್ಯಳಾಗಿರುವಳು.

ಸಮಾಕ್ಷಿಪ್ಯ ಮತಾಂ ಕನ್ಯಾಂ ಪಿತಾ ತ್ವಕ್ಷತಯೋನಿಕಾಂ ।
ಕುಲಶೀಲವತೇ ದದ್ಯಾನ್ನ ಸ್ಯಾದ್ದೋಷಃ ಖಗಾಧಿಪ ॥ ೫೦ ॥

॥ ಅನೂರುರುವಾಚ ॥

ಏತೇಽಷ್ಟೌ ಪ್ರಭವಾಃ ಪ್ರೋಕ್ತಾ ವಿವಾಹಾ ಯೇ ಜಗತ್ಪತೇ ।
ಲಕ್ಷಣಂ ಬ್ರೂಹಿ ಚೈತೇಷಾಂ ಸಮಾಸಾತ್ತಿಮಿರಾಪಹ ॥ ೫೧ ॥

॥ ಆದಿತ್ಯ ಉವಾಚ ॥

ಶುಭಾಂ ಲಕ್ಷಣಸಂಪನ್ನಾಂ ಕುಲಶೀಲಗುಣಾನ್ವಿತಾಂ ।
ಅಲಂಕೃತ್ಯಾರ್ಹತೇ ದಾನಂ ವಿವಾಹೋ ಬ್ರಾಹ್ಮ ಉಚ್ಯತೇ ॥ ೫೨ ॥

ಸಹಧರ್ಮಕ್ರಿಯಾಹೇತೋರ್ದಾನಂ ಸಮಯಬಂಧನಾತ್ ।
ಅಲಂಕೃತ್ಯೈವ ಕನ್ಯಾಯಾಃ ಪ್ರಾಜಾಪತ್ಯಃ ಸ ಉಚ್ಯತೇ ॥ ೫೩ ॥

---

೫೦. ಅಯ್ಯಾ ಖಗಾಧಿಪನೇ! ಕೇಳು; ಅಕ್ಷತಯೋನಿಯಾದ (ನಿಷೇಕಪ್ರಸ್ತವಾಗದ) ಕನ್ಯೆಯನ್ನು ಸಾಮಾನ್ಯನಾದ ಒಬ್ಬನಿಗೆ ಕೊಡುವೆನೆಂದು ಒಪ್ಪಿತವಾಗಿದ್ದರೂ ಕುಲಶೀಲಗಳಲ್ಲಿ ಉತ್ತಮನಾದ ಬೇರೆ ವರ ದೊರೆತರೆ ಆ ವಾಗ್ದಾನವನ್ನು ಕಡೆಗಣಿಸಿ ಆ ಬೇರೆಯವನಿಗೆ ಕೊಟ್ಟರೂ ದೋಷವಿಲ್ಲ ಎಂದು ಹೇಳಿದನು.

೫೧. ಆಗ ಅರುಣನು "ಅಂಧಕಾರವಿನಾಶಕನೂ, ಜಗತ್ಪತಿಯೂ ಆದ ಎಲೈ ಸೂರ್ಯದೇವನೇ! ವಿವಾಹಗಳು ಎಂಟುಬಗೆಯೆಂದು ನೀನು ಹೇಳಿದೆಯಷ್ಟೆ. ಅವುಗಳ ಲಕ್ಷಣಗಳನ್ನು ಹೇಳು" ಎಂದನು.

೫೨. ಬಳಿಕ ಆದಿತ್ಯನು ಉತ್ತರ ಕೊಡುವವನಾಗಿ "ಶುಭಕರವಾದ ಲಕ್ಷಣದಿಂದ ಕೂಡಿದವಳೂ, ಒಳ್ಳೆಯ ಕುಲಶೀಲ ಗುಣಗಳಿಂದ ಕೂಡಿದವಳೂ, ಸರ್ವಾಭರಣಗಳಿಂದ ಅಲಂಕೃತೆಯೂ ಆದ ಕನ್ಯೆಯನ್ನು ಯೋಗ್ಯನಾದ ವರನಿಗೆ ಕೊಟ್ಟು ಮದುವೆಮಾಡುವುದು ಬ್ರಾಹ್ಮವಿವಾಹವೆನಿಸುವುದು."

೫೩. "ಧರ್ಮಕಾರ್ಯವನ್ನು ಇಬ್ಬರೂ ಜತೆಯಲ್ಲೇ ಮಾಡುವಂತೆ ಒಪ್ಪಂದ ಮಾಡಿಕೊಂಡು ಅಲಂಕೃತಳಾದ ಕನ್ಯೆಯನ್ನು ದಾನಮಾಡುವುದು ಪ್ರಾಜಾಪತ್ಯ ವಿವಾಹವೆನಿಸುವುದು.

ಪ್ರದಾನಂ ಯತ್ರ ಕನ್ಯಾ ಯಾಃ ಸಹಗೋಮಿಥುನೇನ ತು ।
ಸುವರ್ಣಾಯಾಃ ಸುಗೋತ್ರಾಯಾಸ್ತಮಾರ್ಷಮ್ಋಷಯೋ ವಿದುಃ ॥ ೫೪ ॥

ಅಂತರ್ವೇದ್ಯಾಂ ಸಮಾನೀಯ ಕನ್ಯಾಂ ಕನಕಮಂಡಿತಾಂ ।
ಋತ್ವಿಜೇ ಚೈವ ಯದ್ದಾನಂ ವಿವಾಹೋ ದೈವಸಂಜ್ಞಕಃ ॥ ೫೫ ॥

ಏತೇ ವಿವಾಹಾಶ್ಚತ್ವಾರೋ ಧರ್ಮಕಾಮಾರ್ಥದಾಯಕಾಃ ।
ಅಶುಲ್ಕಾ ಬ್ರಹ್ಮಣಾ ಪ್ರೋಕ್ತಾಸ್ತಾರಯಂತಿ ಕುಲದ್ವಯಂ ॥ ೫೬ ॥

ಚತುರ್ಷ್ವೇತೇಷು ದತ್ತಾಯಾಮುತ್ಪನ್ನೋ ಯಃ ಸುತಃ ಸ್ತ್ರಿಯಾಮ್ ।
ದಾತುಃ ಪ್ರತಿಗ್ರಹೀತುಶ್ಚ ಪುನಾತ್ಯಾಸಪ್ತಮಾನ್ಪಿತೄನ್ ॥ ೫೭ ॥

ವಿವಿಕ್ತೇ ಸ್ವಯಮನ್ಯೋನ್ಯಂ ಸ್ತ್ರೀಪುಂಸೋರ್ಯಃ ಸಮಾಗಮಃ ।
ಪ್ರೀತಿಹೇತುಃ ಸ ಗಾಂಧರ್ವೋ ವಿವಾಹಃ ಪಂಚಮೋ ಮತಃ ॥ ೫೮ ॥

---

೫೪. ಗೋತ್ರವು ಹೊಂದಿ ಬರುವವನಿಗೆ ಒಳ್ಳೆಯ ಬಣ್ಣವುಳ್ಳ ಕನ್ಯೆಯನ್ನು ಒಂದು ಹಸು ಹೋರಿ ಈ ಎರಡರ ಸಮೇತ ದಾನಮಾಡುವುದು ಆರ್ಷವಿವಾಹವೆನಿಸುವುದು.

೫೫–೫೬. ಸ್ವರ್ಣಾಭರಣಯುತಳಾದ ಕನ್ಯೆಯನ್ನು ಯಜ್ಞಶಾಲೆಯ ಅಂತರ್ವೇದಿ ಎಂಬ ಭಾಗದಲ್ಲಿ ತಂದು ನಿಲ್ಲಿಸಿ, ಯಜ್ಞವನ್ನು ನಡೆಯಿಸುತ್ತಿರುವ ಋತ್ವಿಕ್ಕಿಗೆ ಕನ್ಯಾದಾನಮಾಡುವುದು. ದೇವಪ್ರೀತ್ಯರ್ಥವಾದ ಯಜ್ಞಮಧ್ಯದಲ್ಲಿ ಮಾಡುವ (ದೇವಸಂಬಂಧ) ದೈವವಿವಾಹವೆನಿಸಿಕೊಳ್ಳುವುದು.

೫೭. ಈಗ ಹೇಳಿದ ನಾಲ್ಕುಬಗೆಯ ವಿವಾಹಗಳೂ ಧರ್ಮಾರ್ಥಕಾಮಗಳನ್ನು ಕೊಡತಕ್ಕವು. ಈ ರೀತಿ ಶುಲ್ಕವಿಲ್ಲದೆ ದಾನ, ಸ್ವೀಕಾರ, ಇವು ನಡೆದರೆ ಇಂಥ ಉತ್ತಮ ವಿವಾಹಗಳು ದಾತೃಕುಲ, ಪ್ರತಿಗ್ರಹೀತೃವಿನಕುಲ ಎರಡನ್ನೂ ಪಾರು ಮಾಡಿಸುತ್ತವೆ.

೫೭. ಈ ನಾಲ್ಕುಬಗೆಯ ವಿವಾಹವಿಧಿಗಳಲ್ಲಿ ಯಾವವಿಧಿಯಿಂದ ದಾನಮಾಡಿದ ಸ್ತ್ರೀಯಲ್ಲಿ ಮಗನು ಹುಟ್ಟಿದರೂ, ದಾತೃವಿನ ಮತ್ತು ಪ್ರತಿಗ್ರಹೀತೃವಿನ ಕುಲದವರಾದ ಏಳುತಲೆಯವರೆಗಿನ ಪಿತೃಗಳನ್ನು ಪರಿಶುದ್ಧಮಾಡುವನು.

೫೮. ಸ್ತ್ರೀಗೂ ಪುರುಷನಿಗೂ ಅನ್ಯೋನ್ಯಪ್ರೀತಿಯಿಂದ ನಿರ್ಜನವಾದ ಸ್ಥಳದಲ್ಲಿ ಸಮಾಗಮವುಂಟಾದರೆ ಗಾಂಧರ್ವವಿವಾಹವೆನಿಸುವುದು ಇದು ಐದನೆಯಬಗೆ.

ಹತ್ವಾ ಭಿತ್ವಾ ಚ ಭಿತ್ವಾ ಚ ಕ್ರೋಶಂತೀಂ ರುದತೀಂ ಗೃಹಾತ್ ।
ಪ್ರಸಹ್ಯ ಯದ್ಧರೇತ್ಕನ್ಯಾಂ ರಾಕ್ಷಸೋದ್ವಾಹ ಉಚ್ಯತೇ ॥ ೫೯ ॥

ಶುಲ್ಕಂ ಪ್ರದಾಯ ಕನ್ಯಾಯಾ ಹರಣಂ ವ್ಯಸನಾದಪಿ ।
ಪ್ರಸಾದಹೇತುರುಕ್ತೋಯಮಾಸುರಃ ಸಪ್ತಮಸ್ತಥಾ ॥ ೬೦ ॥

ಸುಪ್ತಾಂ ಮತ್ತಾಂ ಪ್ರಮತ್ತಾಂ ವಾ ರಹೋ ಯತ್ರೋಪಗಚ್ಛತಿ ।
ಸ ಪಾಪಿಷ್ಠೋ ವಿವಾಹಾನಾಂ ಪೈಶಾಚಶ್ಚಾಷ್ಟಮೋಧಮಃ ॥ ೬೧ ॥

ಏತಾನ್ಸಶುಲ್ಕಾನ್ಸಾಮಾನ್ಯಾನ್ವಿವಾಹಾಂಶ್ಚತುರೋ ವಿದುಃ ।
ಕೇವಲಂ ಕ್ಷತ್ರಿಯಸ್ಯೈವ ವೀರ್ಯಂ ಭಿತ್ವಾ ಹಿ ರಾಕ್ಷಸಃ ॥ ೬೨ ॥

ಪ್ರಾಪ್ತೇ ಪೂರ್ವವಿವಾಹೇ ತು ವಿಧಿರ್ವೈವಾಹಿಕಃ ಶಿವಃ ।
ಕರ್ತವ್ಯಸ್ತು ತ್ರಿಭಿರ್ವರ್ಣೈಃ ಸಮಯೇನಾಗ್ನಿಸಾಕ್ಷಿಕಃ ॥ ೬೩ ॥

---

೫೯. ಕನ್ಯೆಯ ಕಡೆಯವರನ್ನು ಹೊಡೆದು, ಕಡಿದು, ಭೇದಿಸಿಹಾಕಿದುದರಿಂದ ಕೂಗಿಕೊಳ್ಳುತ್ತಲೂ, ಅಳುತ್ತಲೂ ಇರುವ ಕನ್ಯೆಯನ್ನು ಬಲಾತ್ಕಾರವಾಗಿ ಮನೆಯಿಂದ ಎತ್ತಿಕೊಂಡುಹೋಗುವುದು ರಾಕ್ಷಸ ವಿವಾಹವೆನಿಸುವುದು.

೬೦. ಕನ್ಯೆಯ ಸಂಬಂಧಿಗಳಿಗೆ ಸಂತೋಷವಾಗುವಂತೆ ಶುಲ್ಕವನ್ನು ಕೊಟ್ಟು ಒಪ್ಪಿಸಿ ಕನ್ಯೆಯು ವ್ಯಸನಪಡುತ್ತಿದ್ದರೂ ಲೆಕ್ಕಿಸದೆ ಎತ್ತಿಕೊಂಡುಹೋಗುವುದು, ಏಳನೆಯದಾದ ಆಸುರ ವಿವಾಹವೆಂದು ಹೇಳಲ್ಪಡುತ್ತದೆ.

೬೧. ಕನ್ಯೆಯು ನಿದ್ರಿಸುತ್ತಿರುವಾಗಲೋ, ಮಲಗಿರುವಾಗಲೋ, (ಪ್ರಮಾದದಿಂದ) ಅಜ್ಞಾನದಿಂದಿರುವಾಗಲೋ ಗುಟ್ಟಾಗಿ ಕನ್ಯೆಯ ಸಮೀಪಕ್ಕೆ ಹೋಗಿ ಅಪಹರಿಸುವುದು ವಿವಾಹಗಳಲ್ಲಿ ಕೇವಲ ಅಧಮವರ್ಗದ ಪೈಶಾಚವಿವಾಹವೆನಿಸುವುದು.

೬೨. ಶುಲ್ಕಯುಕ್ತಗಳಾದ ಈ ನಾಲ್ಕು ವಿವಾಹಗಳೂ ಸಾಮಾನ್ಯದರ್ಜೆಯ ಜನರಿಗೆ ಉಕ್ತವಾದುವು. ಕನ್ಯೆಯ ಕಡೆಯ ಭಟರನ್ನು ಭೇದನೆಮಾಡಿ ಕನ್ಯೆಯನ್ನು ದಕ್ಕಿಸಿಕೊಳ್ಳುವ ರಾಕ್ಷಸವಿವಾಹವು ಕೇವಲ ಕ್ಷತ್ರಿಯರಿಗೆ ಮಾತ್ರ ಉಕ್ತವಾಗಿದೆ.

೬೩. ವರನಿಗೆ ಮಂಗಳಕರವಾದ ಪ್ರಥಮವಿವಾಹ ಮಾಡುವ ಸಂದರ್ಭದಲ್ಲಿ ಅಗ್ನಿಸಾಕ್ಷಿಕವಾದ ವಿಧಿಪ್ರಕಾರ ಮೂರು ವರ್ಣದವರಲ್ಲಿ ಯಾವ ವರ್ಣದ ಕನ್ಯೆಯನ್ನು ಬೇಕಾದರೂ ಒಂದು ಒಪ್ಪಂದದ ರೀತಿಯಿಂದ ಲಗ್ನಮಾಡಬಹುದು.

ದೋಷವತ್ಯಾಃ ಪ್ರದಾನೇ ತು ದಾತುಃ ಷಣ್ಣವತಿರ್ದಮಃ ।
ಸ್ಯಾತ್ತು ಶುಲ್ಕಪ್ರದಾನೇ ಚ ಕನ್ಯಾಯಾಶ್ಚಾಪವರ್ಜನೇ　　॥ ೬೪ ॥

ಮೋಕ್ಷೋಪವರ್ಜನಂ ದ್ವೇಷಃ ಸ್ತ್ರೀಧನಸ್ಯ ನಿವರ್ತನಂ ।
ಆಕಾಂಕ್ಷಾ ತೀರ್ಥಸಂರೋಧಸ್ತ್ಯಾಗಹೇತುಶ್ಚ ವಕ್ಷ್ಯತೇ　　॥ ೬೫ ॥

ಪರಸ್ಪರಸ್ಯ ಸಂಬಂಧಾನ್ಮೋಕ್ಷಃ ಸ್ತ್ರೀಪುಂಸಯೋಃ ಸ್ಮೃತಃ ।
ನ ಸ್ಯಾದನ್ಯತರಃ ಪ್ರೀತೋ ರೋಷಾತ್ಸಾಂಪ್ರತಿಕಾದಪಿ　　॥ ೬೬ ॥

ಭಾಧತೇ ಚೇತ್ಪತಿರ್ಭಾರ್ಯಾಂ ಸ ತು ದ್ವೇಷ ಇತಿ ಸ್ಮೃತಃ ।
ವೃತ್ತಿರಾಭರಣಂ ಶುಲ್ಕಂ ಲಾಭಶ್ಚ ಸ್ತ್ರೀಧನಂ ಭವೇತ್　　॥ ೬೭ ॥

---

೬೪. ಕನ್ಯೆಯ ದೋಷಯುಕ್ತತೆಯನ್ನು ಮರೆಮಾಚಿ ಮೋಸದಿಂದ, ದಾನ ಮಾಡಿದ ದಾತೃ; ಶುಲ್ಕವನ್ನು ತೆಗೆದುಕೊಂಡೋ, ಅಥವಾ ಕೊಟ್ಟೋ, ದಾನಮಾಡಿದವನು; ಗೊತ್ತಾಗಿದ್ದ ಕನ್ಯೆಯನ್ನು ತಿರಸ್ಕಾರಮಾಡಿದವನು; ಇವರುಗಳಿಗೆ ಆ ರಾಜ್ಯದ ಪ್ರಭುವು ಅಥವಾ ಸಮಾಜವು ತೊಂಭತ್ತಾರು ಹಣವನ್ನು ದಂಡವಾಗಿ ವಿಧಿಸಬೇಕು.

೬೫. ಮೋಕ್ಷ ಎಂದರೆ ತೊರೆದುಬಿಡುವುದು, ದ್ವೇಷ, ಸ್ತ್ರೀಧನವನ್ನು ಹಿಂದಕ್ಕೆ ತೆಗೆದುಕೊಳ್ಳುವುದು, ಮಕ್ಕಳಾಗುವ ನಿರೀಕ್ಷಣೆಯಿಂದಲೇ ಕಾಲತಳ್ಳುವುದು, ಸಂಬಂಧಿಗಳಾದ ದೊಡ್ಡವರು ನಿರ್ಬಂಧಪಡಿಸುವುದು, ಇವು ವಿವಾಹಿತೆಯಾಗಿರುವ ಸ್ತ್ರೀಯರನ್ನು ಪರಿತ್ಯಾಗಮಾಡುವುದಕ್ಕೆ ಕಾರಣಗಳೆಂದು ಹೇಳಿದೆ.

೬೬. ಸ್ತ್ರೀಪುರುಷರಿಗೆ ಪರಸ್ಪರ ಸಂಬಂಧದ ಬಿಡುಗಡೆಯೇ ಮೋಕ್ಷವೆನಿಸುವುದು. ದಾತೃ, ಪ್ರತಿಗೃಹೀತೃಗಳಲ್ಲಿ ಯಾರಿಗೆ ಅತೃಪ್ತಿಯಾದರೂ, ತಾತ್ಕಾಲಿಕ ರೋಷದಿಂದ ಈ ವಿಚ್ಛೇದ ಸಂಭವಿಸಬಹುದು.

೬೭. ಪತಿಯು ಪತ್ನಿಯನ್ನು ಹಿಂಸೆಪಡಿಸುವುದು ದ್ವೇಷವೆನಿಸುವುದು, ಕನ್ಯಾಸ್ವೀಕಾರದ ಪ್ರತಿಫಲವಾಗಿ ಕನ್ಯಾಬಂಧುಗಳಿಗೆ ಜೀವನಕಲ್ಪನೆ, ಕನ್ಯೆಗೆ ಇಟ್ಟ ಒಡವೆ, ತೆರದಹಣ, ಇತರ ವಿಧವಾದ ಮುಯ್ಯಿನ ದ್ರವ್ಯ, ಇವೆಲ್ಲಾ ಸ್ತ್ರೀಧನವೆನಿಸುವುದು.

ಭೋಕ್ತುಸ್ತು ಸ್ವಯಮೋ ವೇದಂಪ್ರತಿಜ್ಞಾಹನನಂ ಭವೇತ್ ।
ವೃಥಾ ಮೋಕ್ಷೇಣ ಭೋಗೇನ ಸ್ತ್ರಿಯೈ ದದ್ಯಾತ್ಸವೃದ್ಧಿಕಂ ॥ ೬೮ ॥

ಆಪತ್ತಿಸಮಯೋ ಜಾತೇ ಸ್ತ್ರೀಧನಂ ಭೋಕ್ತುಮರ್ಹತಿ ।
ಆಕಾಂಕ್ಷೇತಾಷ್ಟವರ್ಷಾಣಿ ಭರ್ತಾಪಿ ಪ್ರಸವಂ ಸ್ತ್ರಿಯಾಃ ॥ ೬೯ ॥

ಜಾಯಂತೇ ಯದಿ ನೋ ಪುತ್ರಸ್ತಾಭ್ಯಾಂ ಯತ್ನೇ ಮಹತ್ಯಪಿ ।
ತತೋ ವಿಂದೇತ ಪುತ್ರಾರ್ಥೀ ಧರ್ಮತಃ ಕುಲಜಾಂ ಸ್ತ್ರಿಯಂ ॥ ೭೦ ॥

ಪುತ್ರಲಾಭಾತ್ಪರಂ ಲೋಕೇ ನಾಸ್ತಿ ಹಿ ಪ್ರಸವಾರ್ಥಿನಃ ।
ಏಕಾಂ ಶುಲ್ಕಸ್ಯ ತಾಂ ಭುಕ್ತ್ವಾ ಅನ್ಯಾಂ ಲಬ್ಧುಂ ಯದೀಚ್ಛತಿ ॥
ಸಮಸ್ತಾಂಸ್ತೋಷಯಿತ್ವಾರ್ಥೈಃ ಸೂರ್ಯೋಢಾಂ ಪರಮಾಂ ವರೇತ್
॥ ೭೧ ॥

೬೮. ಇವುಗಳು ಯಾರ ಪ್ರಯೋಜನಕ್ಕೆಂದು ಉದ್ದಿಷ್ಟವಾಗಿತ್ತೋ ಅವರ ಉಪಯೋಗಕ್ಕೆ ಕೊಡದೆ ಅವುಗಳನ್ನು ತಾನೇ ಅನುಭವಿಸುತ್ತಿದ್ದರೆ ಆಡಿದ ಮಾತಿಗೆ ತಪ್ಪಿದಂತೆ ಆಗುವುದು. ನಿರ್ನಿಮಿತ್ತವಾಗಿ ಈ ಸ್ತ್ರೀಧನವನ್ನುಪಯೋಗಿಸಿಕೊಂಡಿದ್ದರೆ ಆ ಹಣವನ್ನೂ ಅದುವರೆಗಿನ ಬಡ್ಡಿಯನ್ನೂ ಸೇರಿಸಿ ವಿಚ್ಛೇದಕಾಲದಲ್ಲಿ ಸ್ತ್ರೀಗೆ ಕೊಡಬೇಕು.

೬೯-೭೦ ನಿರ್ವಾಹವಾಗದಂಥ ಆಪತ್ತು ಒದಗಿದಾಗ ದೇಹಧಾರಣೆಗಾಗಿ ಸ್ತ್ರೀಧನವನ್ನುಪಯೋಗಿಸಿಕೊಳ್ಳಬಹುದು. ಪತಿಯಾದವನು ತನ್ನ ಪತ್ನಿಗೆ ಸಕಾಲದಲ್ಲಿ ಮಕ್ಕಳು ಆಗದೆ ಸಾವಕಾಶವಾದಲ್ಲಿ ಪುತ್ರನನ್ನು ಪ್ರಸುವಿಸಿಯಾಳು ಎಂಬ ಬಗ್ಗೆ ಎಂಟುವರ್ಷಕಾಲ ನಿರೀಕ್ಷಣೆ ಮಾಡಬೇಕು ಏನೇನು ಪ್ರಯತ್ನಮಾಡಿದರೂ ಮಕ್ಕಳಾಗದಿದ್ದರೆ ಆಮೇಲೆ ತನ್ನ ಸಂತಾನಾಭಿವೃದ್ಧಿಗಾಗಿ ಸತ್ಕುಲಪ್ರಸೂತೆಯಾದ ಬೇರೊಬ್ಬಳನ್ನು ಧರ್ಮನಿಮಿತ್ತದಿಂದ ಪರಿಗ್ರಹಿಸಬೇಕು.

೭೧. ಮಕ್ಕಳು ಬೇಕೆನ್ನುವವರಿಗೆ ಪುತ್ರಲಾಭಕ್ಕಿಂತ ಶ್ರೇಷ್ಠವಾದ ಲಾಭವಿಲ್ಲ. ಶುಲ್ಕವನ್ನು ಕೊಟ್ಟು ಒಬ್ಬಳನ್ನು ವರಿಸಿ ಮತ್ತೊಬ್ಬಳನ್ನೂ ಹೊಂದಲು ಅಪೇಕ್ಷಿಸಿದ್ದೇ ಆದರೆ ಎಲ್ಲರನ್ನೂ ದ್ರವ್ಯದಿಂದ ಸಂತೋಷಪಡಿಸಿ ಸೂರ್ಯೋಢೆಯಾದ ಕನ್ಯಾಶ್ರೇಷ್ಠಳನ್ನು ವರಿಸಬೇಕು.

ಏಕಾ ಶೂದ್ರಸ್ಯ ವೈಶ್ಯಸ್ಯ ದ್ವೇ ತಿಸ್ರಃ ಕ್ಷತ್ರಿಯಸ್ಯ ತು ।
ಚತಸ್ರೋ ಬ್ರಾಹ್ಮಣಸ್ಯ ಸ್ಯುರ್ಭಾರ್ಯಾ ರಾಜ್ಞೋ ಯಥೇಷ್ಟತಃ ॥ ೭೨ ॥

ಅತೀರ್ಥಗಮನಾತ್ಪುಂಸಸ್ತೀರ್ಥೇ ಸಂಗಾಹನಾತ್ ಸ್ತ್ರಿಯಾಃ ।
ಉಭಯೋರ್ಧರ್ಮಲೋಪಸ್ಯಾತ್ಸ್ವೇಷ್ವೇವ ತು ವಿಶೇಷತಃ ॥ ೭೩ ॥

ಯೌಗಪದ್ಯೇ ತು ತೀರ್ಥಾನಾಂ ವಿವಾಹಃ ಕ್ರಮಶೋ ವ್ರಜೇತ್ ।
ತತ್ಸಾಮ್ಯಂ ಜೀವಪುತ್ರಾ ವಾ ಗ್ರಹಣಂಕ್ರಮಶೋಽಪಿ ವಾ ॥ ೭೪ ॥

ಬ್ರಾಹ್ಮಾದಿಭಿರ್ವಿವಾಹೈಸ್ತು ಸಂಸ್ಕೃತೌ ತೌ ಖಗಾಧಿಪ ।
ಅಷ್ಟೌ ವಿವಾಹಾ ವರ್ಣಾನಾಂ ವೈನತೇಯ ಉಶಂತಿ ವೈ ॥ ೭೫ ॥

---

೭೨. ಶೂದ್ರನಿಗೆ ಸ್ವಜಾತಿಯವಳಾದ ಒಬ್ಬಳೇ ಹೆಂಡತಿ ಇರಬೇಕು. ವೈಶ್ಯನಿಗೆ ಸ್ವಜಾತಿಯವಳೊಬ್ಬಳು ಅದಕ್ಕಿಂತ ಕಡಿಮೆ ಜಾತಿಯವಳೊಬ್ಬಳು ಹೀಗೆ ಇಬ್ಬರು ಹೆಂಡತಿಯರು ಇರಬಹುದು. ಕ್ಷತ್ರಿಯರಿಗೆ ಸ್ವಜಾತಿಯವಳೊಬ್ಬಳು, ಅದಕ್ಕಿಂತ ಕಡಿಮೆಯ ಎರಡು ಜಾತಿಯವರು ಇಬ್ಬರು ಹೀಗೆ ಮೂವರು, ಹೆಂಡತಿಯರು ಇರಬಹುದು. ಬ್ರಾಹ್ಮಣನಿಗೆ ಪ್ರತಿಯೊಂದು ಜಾತಿಯಲ್ಲೂ ಒಬ್ಬೊಬ್ಬಳಂತೆ ನಾಲ್ಕು ಜಾತಿಯ ನಾಲ್ವರು ಹೆಂಡತಿಯರು ಆಗಬಹುದು. ರಾಜನಾದವನಿಗೆ ತನ್ನ ಜಾತಿಯವರು, ಮತ್ತು ಕೆಳಗಿನ ಜಾತಿಗಳವರು ಬೇಕಾದಷ್ಟು ಜನ ಸ್ತ್ರೀಯರು ಹೆಂಡತಿಯರಾಗಿರಬಹುದು.

೭೩. ಪುರುಷರು ತಾವು ಶ್ರೇಷ್ಠರೆಂದು ಭಾವಿಸಿ ನೀಚ ಪಾತ್ರದಲ್ಲಿ ಸಂಗಮ ಮಾಡುವುದರಿಂದಲೂ, ಸ್ತ್ರೀಯರು ತಾವು ನೀಚರಾದರೂ ತಮ್ಮೊಡನೆ ಸೇರುವವರು ಶ್ರೇಷ್ಠರೆಂದು ಭಾವಿಸಿ ಅವರೊಡನೆ ವಿಹರಿಸುವುದರಿಂದಲೂ, ಇಬ್ಬರಿಗೂ ಧರ್ಮ ಹಾನಿಯುಂಟಾಗುವುದು, ಆದುದರಿಂದ ಪ್ರತಿ ವರ್ಣದವರೂ ತಮತಮಗೆ ಯೋಗ್ಯ ವರ್ಣದವರ ಸಹವಾಸಮಾಡುವುದೇ ಉಚಿತವಾದುದು.

೭೪. ಎರಡುಕಡೆಯ ಹಿರಿಯರೂ ಏಕಕಾಲದಲ್ಲಿ ಒಟ್ಟಿಗೆ ಸೇರುವ ಸಂದರ್ಭದಲ್ಲಿ, ಉಭಯರ ಒಪ್ಪಿಗೆಯಿಂದ ಕ್ರಮವಾಗಿ ವಿವಾಹವು ನೆರವೇರಿಬಿಡುವುದು. ಮಕ್ಕಳೊಂದಿಗಿತ್ತಿಯರಾದ ಹೆಂಗಸರು ಈ ಎರಡುಕಡೆ ಗುಂಪಿನಲ್ಲೂ ಇದ್ದು ಶಾಸ್ತ್ರಾಚಾರ ವ್ಯವಸ್ಥೆ ಮಾಡಿದ ಮೇಲೆ ಕ್ರಮದಿಂದ ಪಾಣಿಗ್ರಹಣವಾಗತಕ್ಕದ್ದು.

೭೫. ಅಯ್ಯಾ ಖಗಾಧಿಪನೇ! ಬ್ರಾಹ್ಮ ಮೊದಲಾದ ಯಾವುದಾದರೂ ಒಂದು ವಿವಾಹಕ್ರಮದಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸಂಸ್ಕಾರನಡೆದಿರಬೇಕು. ಅಯ್ಯಾ ವೈನತೇ

ಬ್ರಾಹ್ಮೋ ದೈವಸ್ತಥಾರ್ಷಶ್ಚ ಪ್ರಾಜಾಪತ್ಯಃ ಖಗಾಧಿಪ ।
ಗಾಂಧರ್ವಶ್ಚಾಸುರೋ ರಕ್ಷಃ ಪೈಶಾಚಸ್ತ್ವಷ್ಟಮೋಽಧಮಃ ॥ ೭೬ ॥

ಪ್ರಶಸ್ತಾಃ ಕ್ಷತ್ರಿಯಾದೀನಾಂ ವಿಪ್ರಾದೀನಾಂ ತು ಮಾನತಃ ।
ಪ್ರತಿಗ್ರಹಾದಯೋ ಬದ್ಧಾ ವಿವಾಹಾ ಬ್ರಾಹ್ಮಣಸ್ಯ ತು ॥ ೭೭ ॥

ಕ್ಷತ್ರಿಯಸ್ಯಾಪಿ ದೇಯಾ ತು ಪ್ರತಿಗ್ರಹವಿವರ್ಜಿತಾ ।
ಪ್ರವೃತ್ತಿಂ ಕೇಚಿದಿಚ್ಛಂತಿ ದಾನಮಿತ್ಯಪರೇ ಸ್ತ್ರಿಯಾಃ ॥
ಪಾವನಂ ಪುರುಷಾಣಾಂ ತು ವಿವಾಹಂ ಪರಿಚಕ್ಷತೇ ॥ ೭೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೂರ್ಯಾರುಣ ಸಂವಾದೇ ವಿವಾಹ ವಿಧಿವರ್ಣನಂ ನಾಮ ದ್ವ್ಯಶೀತ್ಯುತ್ತರ ಶತತಮೋಽಧ್ಯಾಯಃ.

---

ಯನೇ! ಎಂಟುಬಗೆಯ ವಿವಾಹಗಳು ಎಲ್ಲ ವರ್ಣಗಳವರಿಗೂ ಆಗಬಹುದೆಂದು ಅಂಗೀಕೃತವಾಗಿದೆ,

೭೬. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಗಾಂಧರ್ವ, ಆಸುರ, ರಾಕ್ಷಸ, ಪೈಶಾಚ ಎಂಬವು ವಿವಾಹದ ಎಂಟುಭೇದಗಳು, ಎಂಟನೆಯದಾದ ಪೈಶಾಚವು ಅಧಮವಾದುದು.

೭೭. ಈ ಎಂಟು ವಿಧೂ ವಿವಾಹಗಳ ಕ್ಷತ್ರಿಯರಿಗೆ ಪ್ರಶಸ್ತಗಳೇ ಸರಿ. ಬ್ರಾಹ್ಮಣರಿಗಾದರೋ ಶಾಸ್ತ್ರಪ್ರಮಾಣವನ್ನನುಸರಿಸಿ ಪ್ರಾಶಸ್ತ್ಯವನ್ನು ತಿಳಿಯಬೇಕು. ಬ್ರಾಹ್ಮಣರ ವಿವಾಹಗಳು ವಿಚ್ಛೇದರಹಿತವಾದುವು. ಮತ್ತು ನಿರ್ಬಂಧಯುಕ್ತಗಳು. ಕ್ಷತ್ರಿಯರಿಗಿಂತ ಕೆಳಜಾತಿಯವರು ಕ್ಷತ್ರಿಯರಿಗೆ ತಮ್ಮ ಕನ್ಯೆಯನ್ನು ದಾನಮಾಡಬೇಕಾದಾಗ ಅವರಿಂದ ಮತ್ತೇನನ್ನೂ ಪ್ರತಿಗ್ರಹಮಾಡಬಾರದು

೭೮. ಸ್ತ್ರೀಯರು ಈ ಕಾರ್ಯದಲ್ಲಿ ತಾವೇ ಪ್ರವರ್ತಿಸಿ ಇಷ್ಟನಾದ ವರನನ್ನು ಮದುವೆಯಾಗಬಹುದು ಎಂಬುದು ಕೆಲವರಮತ. ತಾಯಿತಂದೆಗಳು ಯೋಗ್ಯನಾದ ವರನನ್ನು ಆರಿಸಿ ಅವನಿಗೆ ಮಾಡುವ ಕನ್ಯಾದಾನವೇ ಶ್ರೇಷ್ಠವೆಂದು ಕೆಲವರಮತ, ಈ ವಿಧವಾದ ಕ್ರಮಬದ್ಧವಾದ ವಿವಾಹವು ಪುರುಷನಿಗೆ ಪಾವನವೆಂದು ಹೇಳುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿಸೌರಧರ್ಮದಲ್ಲಿ ಸೂರ್ಯಾರುಣಸಂವಾದದಲ್ಲಿ ವಿವಾಹ ವಿಧಿವರ್ಣನವೆಂಬ ನೂರ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

॥ ಭಾಸ್ಕರ ಉವಾಚ ।
ಕುರ್ಯಾತ್ಪಂಚಮಹಾಯಜ್ಞಾನಧಿಕಾರೋ ದ್ವಿಜಸ್ಯ ಸಃ ।
ಭೂತಪಿತ್ರಮರಬ್ರಹ್ಮಮನುಷ್ಯಾಣಾಂ ಯಥಾವಿಧಿ ॥ ೧ ॥

ಸದಾ ಸದಾನಕೃತ್ಯಾನಾಂ ಫಲಾರ್ಥಮಪರೇ ಸ್ಥಿತಾಃ ।
ನಿತ್ಯಾನಿತ್ಯಮಿತಿ ಪ್ರಾಹುರನುಷಂಗಾತ್ಫಲಂ ಪರೇ ॥ ೨ ॥

ಅತಿಥೇಃ ಪರಿತೋಷಾಯ ಪರಿಚರ್ಯಾ ವಿಧೀಯತೇ ।
ನದೃಷ್ಟನಿಯಮಾ ದೃಷ್ಟ ಮಾರೋಗ್ಯಾಂತಂ ಚ ವರ್ಜನಂ ॥ ೩ ॥

---

### ನೂರಎಂಭತ್ತಮೂರನೆಯ ಅಧ್ಯಾಯ

೧. ಸೂರ್ಯನು ಹೇಳುತ್ತಾನೆ—"ವಿಧಿಗನುಸಾರವಾಗಿ ಭೂತಯಜ್ಞ, ಪಿತೃಯಜ್ಞ ದೇವಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ ಎಂಬ ಪಂಚ ಮಹಾಯಜ್ಞಗಳನ್ನು ಮಾಡುವುದಕ್ಕೆ ಬ್ರಾಹ್ಮಣನು ಅಧಿಕಾರಿಯಾಗಿದ್ದಾನೆ

೨. ಮೇಲಿನ ಪಂಚಮಹಾಯಜ್ಞಗಳಲ್ಲದೆ ಫಲೋದ್ದೇಶಕಗಳಾದ ದಾನಕರ್ಮಗಳು, ಮಹಾದಾನಾನುದಾನಾದಿಗಳು, ಅನೇಕವಾಗಿ ಉಕ್ತವಾಗಿವೆ. ಅವು ಪರಸ್ಪರ ಸಂಬಂಧದಿಂದ ನಿತ್ಯ ಮತ್ತು ಅನಿತ್ಯರೂಪವಾದ ಫಲಗಳನ್ನು ಕೊಡಲು ಸಮರ್ಥವಾಗುತ್ತವೆ.

೩. ಮನೆಗೆ ಬಂದ ಅತಿಥಿಯನ್ನು ಸಂತೋಷಪಡಿಸುವುದಕ್ಕಾಗಿ ಸತ್ಕಾರಮಾಡಬೇಕೆಂಬ ವಿಧಿಯಿದೆ. ಫಲವು ಅಗೋಚರವಾದಂಥ ಕಾರ್ಯವನ್ನು ಮಾಡಲೇಬೇಕೆಂಬು

**ತಿಸ್ರೋsಷ್ಟಕಾಸ್ತು ಕರ್ತವ್ಯಾ ಮಧ್ಯಾವರ್ತಾ ಚತುರ್ಥಿಕಾ ।**
**ಶಾಕಪಾಯಸಪೂಪೈಸ್ತು ಮಾಂಸೇನ ತು ಚತುರ್ಥಿಕಾ ॥ ೪ ॥**

**ಪ್ರತಿಪದಿ ಕ್ರಿಯತೇ ಯತ್ತು ಚತುಷ್ಪಾರ್ವಣಮುಚ್ಯತೇ ।**
**ಸ್ವಗೃಹ್ಯೋಕ್ತವಿಧಾನೇನ ತತ್ತು ಪಕ್ಷಾದಿ ಕೀರ್ತ್ಯತೇ ॥ ೫ ॥**

**ನಿತ್ಯಂ ನೈಮಿತ್ತಿಕಂ ಕಾಮ್ಯಂ ವೃದ್ಧಿಶ್ರಾದ್ಧಂ ಸಪಿಂಡನಂ ।**
**ಪಾರ್ವಣಂ ವತ್ಸರಂ ಚಾಪಿ ಗೋಷ್ಠಂ ಶುದ್ಧ್ಯರ್ಥಮುತ್ತಮಂ ॥**
**ಕರ್ಮಾಂಗಂ ನವಮಂ ಪ್ರೋಕ್ತಂ ವೈದಿಕಂ ದಶಮಂ ಸ್ಮೃತಂ ।**
**ಯತ್ರಾರ್ಥಮೇಕಾದಶಕಂ ದ್ವಾದಶಂ ಚೌಪಚಾರಿಕಂ ॥ ೬ ॥**

**॥ ಅನೂರು ಉವಾಚ ॥**

**ಯದೇತ್ಭವತಾ ಪ್ರೋಕ್ತಂ ಶ್ರಾದ್ಧಂ ದ್ವಾದಶಧಾ ವಿಭೋ ।**
**ತಸ್ಯ ಸರ್ವಸ್ಯ ಮಾಂ ಬ್ರೂಹಿ ಲಕ್ಷಣಂ ವೈ ಪೃಥಕ್ ಪೃಥಕ್ ॥ ೭ ॥**

---

ದಕ್ಕಿಂತ, ಫಲವು ದೃಷ್ಟವಾಗಿರುವುದಾದರೆ ಕಾರ್ಯವನ್ನು ಮಾಡಬೇಕು ಎಂದು ಒತ್ತಿ ಹೇಳಬಹುದು. ಹಾಗೆ ಇದನ್ನು ಮಾಡುವುದರಲ್ಲಿ ತನ್ನ ಆರೋಗ್ಯಕ್ಕೆ ಕುಂದುಂಟಾಗುವುದಾದರೆ ಅದನ್ನು ಮಾಡದೆ ಬಿಟ್ಟುಬಿಡಬಹುದು.

೪. ಶಾಕ, ಪಾಯಸ ಪೂಪ ಇವುಗಳಿಂದ ಮೂರು ಅಷ್ಟಕಾಶ್ರಾದ್ಧಗಳನ್ನು ಮಾಡಬೇಕು. ಮಧ್ಯಾವರ್ತವಾದ ಚತುರ್ಥಿಕಾಶ್ರಾದ್ಧವನ್ನು ಮಾಂಸದಿಂದ ಮಾಡತಕ್ಕದ್ದು

೫. ಪ್ರತಿಪತ್ತಿತಿಥಿಯಲ್ಲಿ ಮಾಡುವ ಶ್ರಾದ್ಧವು ಚತುಷ್ಪಾರ್ವಣವೆನಿಸುವುದು. ಅದನ್ನು ಸ್ವಶಾಖೆಯ ಗೃಹ್ಯಸೂತ್ರದಲ್ಲಿ ಹೇಳಿದ ವಿಧಾನದಿಂದ ಪಕ್ಷಾದಿಯಲ್ಲೇ ಮಾಡತಕ್ಕದ್ದು.

೬ "ಒಟ್ಟಿನಲ್ಲಿ ನಿತ್ಯಶ್ರಾದ್ಧ, ನೈಮಿತ್ತಿಕಶ್ರಾದ್ಧ, ಕಾಮ್ಯಶ್ರಾದ್ಧ, ವೃದ್ಧಿಶ್ರಾದ್ಧ ಸಪಿಂಡನಶ್ರಾದ್ಧ, ಸಾಂವತ್ಸರ ಅಥವಾ ಪಾರ್ವಣಶ್ರಾದ್ಧ, ಉತ್ತಮವಾದ ಶುದ್ಧ್ಯರ್ಥ ಶ್ರಾದ್ಧ, ಗೋಷ್ಠಶ್ರಾದ್ಧ, ಕರ್ಮಾಂಗಶ್ರಾದ್ಧ, ವೈದಿಕಶ್ರಾದ್ಧ, ಯತ್ರಾರ್ಥಶ್ರಾದ್ಧ, ಔಪಚಾರಿಕಶ್ರಾದ್ಧ ಎಂದು ಶ್ರಾದ್ಧದಲ್ಲಿ ಹನ್ನೆರಡು ವಿಧಗಳಿವೆ" ಎಂದನು.

೭. ಆಗ ಅರುಣನು ಸೂರ್ಯನನ್ನು ಕುರಿತು ಪ್ರಶ್ನೆ ಮಾಡುವವನಾಗಿ "ಸ್ವಾಮಿ! ಶ್ರಾದ್ಧವು ಹನ್ನೆರಡು ಬಗೆಯಾಗಿದೆ ಎಂದು ಹೇಳಿದೆ. ಅವುಗಳಿಗೆಲ್ಲಾ ಲಕ್ಷಣಗಳನ್ನು ಬೇರೆಬೇರೆಯಾಗಿ ತಿಳಿಯುವಂತೆ ಹೇಳು ಎಂದನು."

**ನಿತ್ಯಂ ಕಿಮುಚ್ಯತೇ ಶ್ರಾದ್ಧಂ ಕಿಂ ವಾ ನೈಮಿತ್ತಿಕಂ ಭವೇತ್ ।**
**ಕಾಮ್ಯಾದಿ ದೇವದೇವೇಶ ಏತೇಷಾಂ ಲಕ್ಷಣಂ ವದ ॥ ೮ ॥**

**॥ ಆದಿತ್ಯ ಉವಾಚ ॥**

**ಅಹನ್ಯಹನಿ ಯಚ್ಛ್ರಾದ್ಧಂ ತನ್ನಿತ್ಯಂ ಖಗ ಕೀರ್ತಿತಂ ।**
**ವೈಶ್ವದೇವವಿಹೀನಂ ತು ಅಶಕ್ತಾವುದಕೇನ ತು ॥ ೯ ॥**

**ಏಕೋದ್ದಿಷ್ಟಂ ತು ಯಚ್ಛ್ರಾದ್ಧಂ ತನ್ನೈಮಿತ್ತಿಕಮುಚ್ಯತೇ ।**
**ತತ್ಸದೈವ ಪ್ರಕರ್ತವ್ಯಮಯುಗ್ಮಾನ್ ಭೋಜಯೇದ್ದ್ವಿಜಾನ್ ॥ ೧೦ ॥**

**ಕಾಮಯುಕ್ತಂ ಹಿ ತತ್ಕಾಮ್ಯಮಭಿಪ್ರೇತಾರ್ಥಸಿದ್ಧಯೇ ।**
**ಪಾರ್ವಣೇನ ವಿಧಾನೇನ ತದಪ್ಯುಕ್ತಂ ಖಗಾಧಿಪ ॥ ೧೧ ॥**

**ವೃದ್ಧೌ ಯತ್ಕ್ರಿಯತೇ ಶ್ರಾದ್ಧಂ ವೃದ್ಧಿಶ್ರಾದ್ಧಂ ತದುಚ್ಯತೇ ।**
**ಸರ್ವಂ ಪ್ರದಕ್ಷಿಣಂ ಕಾರ್ಯಂ ಪೂರ್ವಾಹ್ಣೇ ತೂಪವೀತಿನಾ ॥ ೧೨ ॥**

---

೮. ಎಲೈ ದೇವದೇವನೇ! ನಿತ್ಯಶ್ರಾದ್ಧವೆಂದರೆ ಯಾವುದು ? ನೈಮಿತ್ತಿಕ ಶ್ರಾದ್ಧವಾವುದು? ಕಾಮ್ಯ ಮೊದಲ್ಗೊಂಡು ಉಳಿದವುಗಳೆಲ್ಲದರ ಲಕ್ಷಣವನ್ನೂ ಹೇಳು ಎಂದನು.

೯. ಆಗ ಸೂರ್ಯನು ಹೇಳತೊಡಗಿದನು. "ಎಲೈ ಖಗನೇ! ದಿನದಿನವೂ ಮಾಡುವ ಶ್ರಾದ್ಧವು ನಿತ್ಯಶ್ರಾದ್ಧ, ಅದು ವೈಶ್ವದೇವರಹಿತವಾದುದು. ಅನ್ನಾದಿಗಳಿಂದ ನೆರವೇರಿಸಲು ಶಕ್ತಿಯಿಲ್ಲದಿದ್ದರೆ ಜಲತರ್ಪಣರೂಪದಿಂದಲಾದರೂ ಇದನ್ನು ಮಾಡಬಹುದು.

೧೦. ಏಕೋದ್ದಿಷ್ಟ ಶ್ರಾದ್ಧವೆಂಬುದು ನೈಮಿತ್ತಿಕಶ್ರಾದ್ಧ. ಅದನ್ನು ಯಾವಾಗಲೂ ವಿಷಮಸಂಖ್ಯೆಯ ಬ್ರಾಹ್ಮಣರಿಗೆ ಭೋಜನಕ್ಕೆ ಹೇಳಿಯೇ ಮಾಡಿಸಬೇಕು.

೧೧. ಇಷ್ಟಾರ್ಥ ಸಿದ್ಧಿಗೋಸ್ಕರ ಮಾಡತಕ್ಕಶ್ರಾದ್ಧವು ಕಾಮಯುಕ್ತವಾದುದರಿಂದ ಅದು ಕಾಮ್ಯಶ್ರಾದ್ಧವೆನಿಸುವುದು. ಎಲೈ ಖಗಾಧಿಪನೇ! ಅದೂ ಪಾರ್ವಣ ವಿಧಾನದಿಂದಲೇ ಮಾಡತಕ್ಕದ್ದು.

೧೨. ವಿವಾಹೋಪನಯನಾದಿ ವೃದ್ಧಿಕರ್ಮಗಳಲ್ಲಿ ಮಾಡುವ ನಾಂದೀಶ್ರಾದ್ಧವನ್ನು ವೃದ್ಧಿಶ್ರಾದ್ಧವೆನ್ನುತ್ತಾರೆ. ಇವು ಪ್ರಕೃಷ್ಟವಾದ ದಕ್ಷಿಣೆಯಿಂದಲೇ ಆಗಬಹುದು. ಎಲ್ಲಾ ವೃದ್ಧಿಶ್ರಾದ್ಧಗಳನ್ನೂ ಪೂರ್ವಾಹ್ಣದಲ್ಲಿ ಯಜ್ಞೋಪವೀತಿಯಾಗಿ (ಸವ್ಯದಿಂದಲೇ) ಮಾಡತಕ್ಕದ್ದು.

ಗಂಧೋದಕತಿಲೈರ್ಯುಕ್ತಂ ಕುರ್ಯಾತ್ಪಾತ್ರಚತುಷ್ಟಯಂ ।
ಅರ್ಘ್ಯಾರ್ಥಂ ಪಿತೃಪಾತ್ರೇಷು ಪ್ರೇತಪಾತ್ರಂ ಪ್ರಯೋಜಯೇತ್ ॥ ೧೩ ॥

ಯೇ ಸಮಾನಾ ಇತಿ ದ್ವಾಭ್ಯಾಮೇತಜ್ಜ್ಞೇಯಂ ಸಪಿಂಡನಂ ।
ನಿತ್ಯೇನ ತುಲ್ಯಂ ಶೇಷಂ ಸ್ಯಾದೇಕೋದ್ದಿಷ್ಟಂ ಸ್ತ್ರಿಯಾ ಅಪಿ ॥ ೧೪ ॥

ದರ್ಶೇ ವೈ ಕ್ರಿಯತೇ ಯತ್ತು ತತ್ಪಾರ್ವಣಮುದಾಹೃತಂ ।
ಪರ್ವಣಿ ಕ್ರಿಯತೇ ಯಚ್ಚ ತತ್ಪಾರ್ವಣಮಿತಿ ಸ್ಥಿತಿಃ ॥
ಗೋಭ್ಯಶ್ಚ ಕ್ರಿಯತೇ ಶ್ರಾದ್ಧಂ ತದ್ಗೋಷ್ಠಶ್ರಾದ್ಧಮುಚ್ಯತೇ ॥ ೧೫ ॥

ಬಹೂನಾಂ ವಿದುಷಾಂ ಸಂಪತ್ಸುಖಾರ್ಥಂ ಪಿತೃತೃಪ್ತಯೇ ।
ಕ್ರಿಯತೇ ಶುದ್ಧಯೇ ಯದ್ವೈ ಬ್ರಾಹ್ಮಣಾನಾಂ ಚ ಭೋಜನಂ ॥
ಶುದ್ಧ್ಯರ್ಥಮಿತಿ ತತ್ಪ್ರೋಕ್ತಂ ವೈನತೇಯ ಮುನೀಷಿಭಿಃ ॥ ೧೬ ॥

---

೧೩. ಗಂಧೋದಕದಿಂದ ಕೂಡಿದ ಅರ್ಘ್ಯಾರ್ಥವಾಗಿ ಪಾತ್ರಚತುಷ್ಟಯವನ್ನು ಇಟ್ಟುಕೊಂಡು ಪ್ರೇತಾರ್ಘ್ಯ ಪಾತ್ರೋದಕವನ್ನು ಪಿತ್ರರ್ಘ್ಯ ಪಾತ್ರೋದಕದೊಡನೆ ಯೋಜನೆಮಾಡಬೇಕು.

೧೪. 'ಯೇ ಸಮಾನಾಃ' "ಸಮಾನೀವ ಆಕೂತಿಃ" ಇತ್ಯಾದಿ ಎರಡು ಮಂತ್ರಗಳಿಂದ ಪಿಂಡಸಂಯೋಜನಮಾಡುವುದಕ್ಕೆ ಎಂದರೆ ಭಿನ್ನವಾದ ಪ್ರೇತಪಿಂಡದ ಮೂರು ಭಾಗಗಳನ್ನು ಒಂದೊಂದಾಗಿ ಪಿತೃ, ಪಿತಾಮಹ, ಪ್ರಪಿತಾಮಹ ಪಿಂಡಗಳಲ್ಲೊಂದೊಂದರೊಡನೆ ಸೇರಿಸುವುದಕ್ಕೆ ಸಪಿಂಡಶ್ರಾದ್ಧವೆನಿಸುವುದು. ಮಿಕ್ಕ ವಿಚಾರಗಳಲ್ಲೆಲ್ಲಾ ನಿತ್ಯಶ್ರಾದ್ಧದಂತೆ ನಡೆಸಬೇಕು. ಸ್ತ್ರೀಗೂ ಏಕೋದ್ದಿಷ್ಟಶ್ರಾದ್ಧವುಂಟು.

೧೫. ಪ್ರತಿಸಂವತ್ಸರದಲ್ಲಿನ ಅಮಾವಾಸ್ಯೆಯಲ್ಲಿ ಮಾಡುವ ಶ್ರಾದ್ಧಕ್ಕೆ ಪಾರ್ವಣ ಶ್ರಾದ್ಧವೆಂದು ಹೆಸರು. ಪರ್ವಕಾಲದಲ್ಲಿ ಮಾಡುವುದರಿಂದ ಇದಕ್ಕೆ ಪಾರ್ವಣಶ್ರಾದ್ಧವೆಂದು ಹೆಸರಾಗಿದೆ. ಗೋವುಗಳಿಗಾಗಿ ಮಾಡುವ ಶ್ರಾದ್ಧವು ಗೋಷ್ಠಶ್ರಾದ್ಧವೆನಿಸುವುದು.

೧೬. ಪಿತೃತೃಪ್ತ್ಯರ್ಥವಾಗಿಯೂ, ಸಂಪತ್ಸುಖಗಳಿಗಾಗಿಯೂ, ಶುದ್ಧಿಗಾಗಿಯೂ, ಅನೇಕ ಮಂದಿ ಅಭಿಜ್ಞರಾದ ವಿಪ್ರರಿಗೆ ಮಾಡಿಸುವ ಭೋಜನಕ್ಕೆ ಶುದ್ಧ್ಯರ್ಥ ಶ್ರಾದ್ಧವೆಂದು ಹೆಸರು.

ನಿಷೇಕಕಾಲೇ ಸೋಮೇ ಚ ಸೀಮಂತೋನ್ನಯನೇ ತಥಾ ।
ಜ್ಞೇಯಂ ಪುಂಸವನೇ ಶ್ರಾದ್ಧಂ ತಚ್ಚ ಕರ್ಮಾಂಗ ಮೇವಚ ॥ ೧೭ ॥

ಕ್ರಿಯತೇ ದೇವಮುದ್ದಿಶ್ಯ ಸಪ್ತಮ್ಯಾದಿಷು ಯತ್ನತಃ ।
ಗಚ್ಛೇದ್ದೇಶಾಂತರೇ ಯಸ್ತು ಶ್ರಾದ್ಧಂ ಕುರ್ಯಾತ್ತು ಸರ್ಪಿಷಾ ।
ತದ್ಯತ್ರಾರ್ಥಮಿತಿ ಪ್ರೋಕ್ತಂ ಪ್ರದಿಶೇಚ್ಚ ನ ಸಂಶಯಃ ॥ ೧೮ ॥

ಶರೀರೋಪಚಯೇ ಶ್ರಾದ್ಧಮಶ್ವವೃದ್ಧ್ಯರ್ಥಮೇವ ಚ ।
ಪುಷ್ಟ್ಯರ್ಥಮೇತದ್ವಿಜ್ಞೇಯಮೌಪಚಾರಿಕಮುಚ್ಯತೇ ॥ ೧೯ ॥

ಸರ್ವೇಷಾಮೇವ ಶ್ರಾದ್ಧಾನಾಂ ಶ್ರೇಷ್ಠಂ ಸಾಂವತ್ಸರಂ ಮತಂ ।
ಕ್ರಿಯತೇ ಯತ್ಖಗಶ್ರೇಷ್ಠ ಮೃತೇऽಹನಿ ಬುಧೈಃ ಸಹ ॥ ೨೦ ॥

ಮೃತೇऽಹನಿ ಪುನರ್ಯಸ್ತು ನ ಕುರ್ಯಾಚ್ಛ್ರಾದ್ಧಮಾದರಾತ್ ।
ಮಾತುಶ್ಚ ಖಗಶಾರ್ದೂಲ ವತ್ಸರಾಂತೇ ಮೃತೇऽಹನಿ ॥ ೨೧ ॥

---

೧೭. ನಿಷೇಕಕಾಲ (ಗರ್ಭಾಧಾನ) ದಲ್ಲಿಯೂ, ಸೋಮಯಾಗದಲ್ಲೂ, ಸೀಮಂತೋನ್ನಯನದಲ್ಲೂ, ಪುಂಸವನದಲ್ಲೂ ಕರ್ಮಾಂಗಶ್ರಾದ್ಧವು ವಿಹಿತವಾಗಿದೆ.

೧೮. ದೇಶಾಂತರಕ್ಕೆ ಹೋಗಿದ್ದಾಗ ಸಪ್ತಮ್ಯಾದಿ ತಿಥಿಗಳಲ್ಲಿ ಯತ್ನಪೂರ್ವಕವಾಗಿ ದೇವನನ್ನುದ್ದೇಶಮಾಡಿ ಆಜ್ಯದಿಂದ ಶ್ರಾದ್ಧವನ್ನು ಮಾಡಿದರೆ ಅದು ಯತ್ರಾರ್ಥ ಶ್ರಾದ್ಧವೆಂದು ಹೇಳಿದೆ. ಅದನ್ನು ಅವಶ್ಯವಾಗಿ ಮಾಡಬೇಕು ಇದರಲ್ಲಿ ಸಂಶಯವಿಲ್ಲ.

೧೯. ಶರೀರ ವೃದ್ಧಿಗಾಗಿಯೂ, ಅಶ್ವವೃದ್ಧಿಗಾಗಿಯೂ, ಪುಷ್ಟ್ಯರ್ಥವಾಗಿಯೂ ಮಾಡುವ ಶ್ರಾದ್ಧವು ಔಪಚಾರಿಕಶ್ರಾದ್ಧವೆನಿಸುವುದು.

೨೦. ಶ್ರಾದ್ಧಗಳಲ್ಲೆಲ್ಲಾ ಸಾಂವತ್ಸರಿಕಾಶ್ರಾದ್ಧವು ಶ್ರೇಷ್ಠವೆಂದು ತಿಳಿಯಬೇಕು. ಎಲೈ ಖಗನೇ! ಆ ಶ್ರಾದ್ಧವನ್ನು ವಿದ್ವಾಂಸರು ಆಯಾ ಸಂವತ್ಸರದಲ್ಲಿ ಬರುವ ಮೃತ ತಿಥಿಯಲ್ಲಿ ಮಾಡುತ್ತಾರೆ ?

೨೧ ಯಾವನು ಪ್ರತಿ ವರ್ಷದಲ್ಲಿ ಬರುವ ಮೃತದಿನದಲ್ಲಿ ಮಾತೃಶ್ರಾದ್ಧ ವನ್ನೂ, ಪಿತೃಶ್ರಾದ್ಧವನ್ನೂ ಮಾಡುವುದಿಲ್ಲವೋ ಅಂಥವನು ಮಾಡುವ ಪೂಜೆಯನ್ನು ನಾನೂ ಸ್ವೀಕರಿಸುವುದಿಲ್ಲ.

ನಾಹಂ ತಸ್ಯ ಖಗಶ್ರೇಷ್ಠ ಪೂಜಾಂ ಗೃಹ್ಣಾಮಿ ನೋ ಹರಿಃ ।
ನ ಬ್ರಹ್ಮಾ ನ ಚ ವೈ ರುದ್ರೋ ನ ಚಾನ್ಯೇ ದೇವತಾಗಣಾಃ ॥ ೨೨ ॥

ತಸ್ಮಾದ್ಯತ್ನೇನ ಕರ್ತವ್ಯಂ ವರ್ಷೇವರ್ಷೇ ಮೃತೇಽಹನಿ ।
ನರೇಣ ಖಗಶಾರ್ದೂಲ ಭೋಜಕೇನ ವಿಶೇಷತಃ ॥ ೨೩ ॥

ಭೋಜಕೋ ಯಸ್ತು ವೈ ಶ್ರಾದ್ಧಂ ನ ಕರೋತಿ ಖಗಾಧಿಪ ।
ಮಾತಾಪಿತೃಭ್ಯಾಂ ಸತತಂ ವರ್ಷೇವರ್ಷೇ ಮೃತೇಽಹನಿ ॥ ೨೪ ॥

ಸ ಯಾತಿ ನರಕಂ ಘೋರಂ ತಾಮಿಸ್ರಂ ನಾಮ ನಾಮತಃ ।
ತತೋ ಭವತಿ ದುಷ್ಟಾತ್ಮಾ ನಗರೇ ಸೂಕರಃ ಖಗ ॥ ೨೫ ॥

---

೨೨. ಅಲ್ಲದೆ ಅಂತಹ ಪೂಜೆಯನ್ನು ಹರಿಯೂ ಬ್ರಹ್ಮನೂ, ರುದ್ರನೂ, ಇತರ ದೇವತಾಗಣಗಳೂ ಕೂಡ ಸ್ವೀಕರಿಸುವುದಿಲ್ಲ. ಎಂದರೆ ಅವನು ಪತಿತನಾಗಿ ನಿಫಲಕರ್ಮನಾಗುವನು. ಆದುದರಿಂದ ಪ್ರತಿವರ್ಷವೂ ಯತ್ನದಿಂದ ಮೃತದಿನದಲ್ಲಿ ಶ್ರಾದ್ಧಮಾಡಲೇಬೇಕು.

೨೩. "ಅಯ್ಯಾ ಖಗಶ್ರೇಷ್ಠನೇ! ಕೇಳು; ಸಾಮಾನ್ಯ ದ್ವಿಜರು ಹೀಗೆ ಮಾಡಿದರೆ ಸಾಕು. ಭೋಜಕನು ವಿಶೇಷವಾದ ನಿಯಮದಿಂದ ತಪ್ಪದೆ ಮಾಡಬೇಕು.

೨೪. ಎಲೈ ಪಕ್ಷಿರಾಜನೇ! ಕೇಳು; ಮಾತಾಪಿತೃಗಳಿಗೆ ಪ್ರತಿವರ್ಷವೂ ಮೃತತಿಥಿಯಲ್ಲಿ ನಿಯಮಪೂರ್ವಕವಾಗಿ ಶ್ರಾದ್ಧಮಾಡದೆ ಇರುವ ಭೋಜಕನು ಪತಿತನೆನಿಸುವನು.

೨೫. ಅಂಥವನು ತಾಮಿಸ್ರವೆಂಬ ಹೆಸರಿನಿಂದ ಪ್ರಸಿದ್ಧವೂ, ಭಯಂಕರವೂ, ಆದ ನರಕವನ್ನು ಹೊಂದುತ್ತಾನೆ. ಅಯ್ಯಾ ಖಗನೇ! ಕೇಳು; ಅನಂತರ ಆ ದುಷ್ಟನು ಗ್ರಾಮಸೂಕರನಾಗಿ (ಊರಹಂದಿಯಾಗಿ) ಹುಟ್ಟುತ್ತಾನೆ" ಎಂದನು.

॥ ಅನೂರುರುವಾಚ ॥

ನ ಜಾನಾತಿ ದಿನಂ ಯಸ್ತು ನ ಮಾಸಂ ವಿಬುಧಾಧಿಪ ।
ಮೃತೌ ಯತ್ರ ಮಹಾಪ್ರಾಜ್ಞ ಪಿತರೌ ಸ ಕಥಂ ನರಃ ॥
ಶ್ರಾದ್ಧಂ ಕರೋತು ವೈ ತಾಭ್ಯಾಂ ವಿಧಿವದ್ವತ್ಸರಾತ್ಮಕಂ ॥ ೨೬ ॥

॥ ಆದಿತ್ಯ ಉವಾಚ ॥

ನ ಜಾನಾತಿ ನರೋಽಯಸ್ತು ಮೃತಾನಾಂ ವಿನತಾತ್ಮಜ ।
ಮಾಸಂ ದಿನಂ ಮೃತಾನಾಂ ತು ಪಿತ್ರ್ಯಾಣಾಂ ಖಗಸತ್ತಮ ॥ ೨೭ ॥

ಯಥಾ ಕುರ್ಯಾತ್ಖಗಶ್ರೇಷ್ಠ ಶೃಣು ಕೃತ್ಸ್ನಂ ಸಮಾಸತಃ ।
ಮೃತಾಹಂ ಯೋ ನ ಜಾನಾತಿ ಮಾನವೋ ವಿನತಾತ್ಮಜ ॥ ೨೮ ॥

ತೇನ ಕಾರ್ಯಮಮಾಯಾಂ ಚ ಶ್ರಾದ್ಧಂ ಸಾಂವತ್ಸರಂ ಖಗ ।
ಮಾಸೇ ಮಾರ್ಗಶಿರೇ ವೀರ ಮಾಘೇ ವಾ ವಿಧಿವತ್ಖಗ ॥ ೨೯ ॥

---

೨೬. ಇದನ್ನು ಕೇಳಿ ಅರುಣನು ಪುನಃ ಪ್ರಶ್ನಿಸುವವನಾಗಿ—"ಪ್ರಾಜ್ಞನಾದ ದೇವಶ್ರೇಷ್ಠನೇ! ಮಾತಾಪಿತೃಗಳು ಮೃತರಾದ ದಿನವನ್ನೂ ಮಾಸವನ್ನೂ ತಿಳಿಯದವನು, ಆ ಪಿತೃಗಳಿಗೆ ಸಾಂವತ್ಸರಿಕ ಶ್ರಾದ್ಧವನ್ನು ವಿಧಿಪೂರ್ವಕವಾಗಿ ಮಾಡುವುದು ಹೇಗೆ?" ಎಂದನು.

೨೭. ಆ ಮಾತಿಗೆ ಆದಿತ್ಯನು ಉತ್ತರ ಹೇಳುವವನಾಗಿ—ಅಯ್ಯಾ ವಿನತಾಪುತ್ರನೇ! ಕೇಳು; ಯುದ್ಧ, ಶತ್ರುಗಳ ಆಕ್ರಮಣ, ಮುಂತಾದುವುಗಳಿಗೆ ಸಿಕ್ಕಿಹೋಗಿ ಮಾತಾಪಿತೃಗಳು ಮೃತರಾದ ಮಾಸವನ್ನಾಗಲೀ, ಮೃತದಿನದ ತಿಥಿಯನ್ನಾಗಲೀ ತಿಳಿಯದೆಹೋಗುವ ಸಂಭವವುಂಟು.

೨೮. ಯಾವನಿಗೆ ಅವರ ಮೃತಮಾಸ, ತಿಥಿ ಮುಂತಾದುವು ತಿಳಿದಿರುವುದಿಲ್ಲವೋ ಅವನು ಹೇಗೆ ಮಾಡಬೇಕು ಎಂಬುದನ್ನು ಸಂಕ್ಷೇಪವಾಗಿ ಹೇಳುತ್ತೇನೆ.

೨೯. ಅಯ್ಯಾ ವಿನತಾಪುತ್ರನೇ! ಕೇಳು; ಯಾವನು ತನ್ನ ಮಾತಾಪಿತೃಗಳ ಮೃತತಿಥಿ ಇಂಥದೆಂದು ತಿಳಿಯನೋ, ಅವನು ಸಂವತ್ಸರಶ್ರಾದ್ಧವನ್ನು ಅಮಾವಾಸ್ಯೆಯ ದಿನ ವಿಧಿವತ್ತಾಗಿ ಮಾಡಬೇಕು. ಹೀಗೆ ಶ್ರಾದ್ಧಮಾಡುವ ಅಮಾವಾಸ್ಯೆಯು ಮಾರ್ಗಶೀರ್ಷಮಾಸಕ್ಕಾಗಲಿ, ಮಾಘಮಾಸಕ್ಕಾಗಲಿ ಸಂಬಂಧಿಸಿರಬೇಕು.

ವಿಶೇಷತೋ ಭೋಜನೇನ ಯೋ ಮಾಂ ಪೂಜಯತೇ ಸದಾ ।
ಪ್ರೀತಯೇ ಮಮ ವೈ ತೇನ ಸಂಪೂಜ್ಯಾಃ ಪಿತರಃ ಸದಾ ॥ ೩೦ ॥

ಮಮೇಷ್ಟಾಃ ಪಿತರೋ ನಿತ್ಯಂ ಗಾವೋ ವಿಪ್ರಾಶ್ಚ ಸುವ್ರತ ।
ತಸ್ಮಾಚ್ಚ ತೇ ಸದಾ ಪೂಜ್ಯಾ ಮದ್ಭಕ್ತೇನ ವಿಶೇಷತಃ ॥ ೩೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸೌರಧರ್ಮೇ ಶ್ರಾದ್ಧ ವಿಧಿಕಥನಂ ನಾಮ ತ್ರ್ಯಶೀತ್ಯುತ್ತರ
ಶತತಮೋಽಧ್ಯಾಯಃ.



---

೩೦. ಅಯ್ಯಾ ಸುವ್ರತನೇ ! ಆ ಅಮಾವಾಸ್ಯೆಯಲ್ಲಿ ನನ್ನ ಪ್ರೀತ್ಯರ್ಥವಾಗಿ ಬ್ರಾಹ್ಮಣ ಭೋಜನಮಾಡಿಸಿ ಆ ಮೂಲಕ ನನ್ನನ್ನು ಸದಾ ಪೂಜಿಸಬೇಕು.

೩೧. ಆ ಪ್ರಕಾರ ಪೂಜಿಸುವವನು ತನ್ನ ಮಾತಾಪಿತೃಗಳನ್ನು ಪೂಜಿಸಿದಂತೆಯೇ ಆಗುವುದು. ಅಯ್ಯಾ ನಿಯಮಶಾಲಿಯೇ ! ಕೇಳು ; ಗೋವುಗಳು, ಬ್ರಾಹ್ಮಣರು, ಪಿತೃಗಳು ಎಲ್ಲರೂ ನನಗೆ ಇಷ್ಟರಾದವರು. ಆದುದರಿಂದ ನನ್ನ ಭಕ್ತನಾದವನು ಗೋವುಗಳನ್ನೂ, ಬ್ರಾಹ್ಮಣರನ್ನೂ, ಪಿತೃಗಳನ್ನೂ ವಿಶೇಷವಾಗಿ ಪೂಜಿಸಬೇಕು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ಸೌರಧರ್ಮದಲ್ಲಿ ಶ್ರಾದ್ಧವಿಧಾನವೆಂಬ ನೂರಎಂಭತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಶ್ರೀ ಭವಿಷ್ಯಮಹಾಪುರಾಣಂ
### ಬ್ರಾಹ್ಮೇ ಪರ್ವಣಿ
### ಚತುರಶೀತ್ಯುತ್ತರಶತತಮೋಽಧ್ಯಾಯಃ

ಪ್ರಖ್ಯಾತೇ ಪ್ರತ್ಯಯೇ ನೈವ ಪ್ರಶ್ನಪೂರ್ವಂ ಪ್ರತಿಗ್ರಹಃ ।
ಯಜನೇಽಧ್ಯಾಪನೇ ವಾದೇ ಷಡ್ವಿಧೋ ವೇದವಿಕ್ರಯಃ ॥ ೧ ॥

ವೇದವಿಕ್ರಯನಿರ್ದಿಷ್ಟಂ ಸ್ತ್ರಿಯಾ ಚಾವರ್ಜಿತಂ ಧನಂ ।
ನ ದೇಯಂ ಪಿತೃದೇವೇಭ್ಯೋ ಯಚ್ಚ ಕ್ಲೀಬಾತ್ಖಗಾಧಿಪ ॥ ೨ ॥

ಅನುಯೋಗೇನ ಯೋ ದದ್ಯಾದ್ಬ್ರಾಹ್ಮಣಾಯ ಪ್ರತಿಗ್ರಹಂ ।
ಸ ಪೂರ್ವಂ ನರಕಂ ಯಾತಿ ಬ್ರಾಹ್ಮಣಾಸ್ತದನಂತರಂ ॥ ೩ ॥

---

### ನೂರಎಂಭತ್ತನಾಲ್ಕನೆಯ ಅಧ್ಯಾಯ

೧. ದಾತೃವು ಸಜ್ಜನನೆಂದು ನಂಬಿಕೆ ಇದ್ದರೆ, ಪ್ರತಿಗ್ರಹೀತೃವು ಪ್ರತಿಗ್ರಹ ಮಾಡುವುದಕ್ಕೆ ಸಂಶಯಪಡಬೇಕಾಗಿಲ್ಲ. ಯಾಜನ, ಅಧ್ಯಾಪನ, ವಾದ ಇವುಗಳನ್ನು ಆಚರಿಸುವ ಮುಖಾಂತರ ಆರು ವಿಧದಲ್ಲಿ ವೇದವಿಕ್ರಯವು ಆಗುವುದು.

೨. ವೇದವಿಕ್ರಯದಿಂದ ಸಂಪಾದಿತವಾದ ಧನ, ನಪುಂಸಕನು ಸಂಪಾದಿಸಿದ ಧನ, ಇವುಗಳು ಪಿತೃಪ್ರೀತ್ಯರ್ಥವಾದ ಶ್ರಾದ್ಧದಾನಾದಿಗಳಿಗೂ, ದೇವತಾಪೂಜಾದಿಗಳಿಗೂ ಕೊಡಲು ಅರ್ಹವಲ್ಲ.

೩. ಬ್ರಾಹ್ಮಣರನ್ನು "ದಾನತೆಗೆದುಕೊಳ್ಳುತ್ತೀರಾ?" ಎಂದು ಪ್ರಶ್ನೆಮಾಡಿ ದಾನಕೊಟ್ಟರೆ ಹಾಗೆ ದಾನಕೊಟ್ಟವನೂ, ತೆಗೆದುಕೊಂಡವನೂ, ಇಬ್ಬರೂ ನರಕಕ್ಕೆ ಹೋಗುತ್ತಾರೆ.

ವೇದಾಕ್ಷರಾಣಿ ಯಾವಂತಿ ನಿಯುಜ್ಯಂತೇರ್ಥಕಾರಣಾತ್ ।
ತಾವತೀರ್ಭ್ರೂಣಹತ್ಯಾ ವೈ ವೇದವಿಕ್ರಯಮಾಪ್ನುಯಾತ್ ।

ವೈಶ್ವದೇವೇನ ಯೋ ಹೀನ ಆದಿತ್ಯಸ್ಯ ಚ ಕರ್ಮಣಃ ।
ಸರ್ವೇ ತೇ ವೃಷಲಾ ಜ್ಞೇಯಾಃ ಪ್ರಾಪ್ತವೇದಾಶ್ಚ ಬ್ರಾಹ್ಮಣಾಃ ॥ ೫ ॥

ಯೇಷಾಮಧ್ಯಯನಂ ನಾಸ್ತಿ ಯೇ ಚ ಕೇಚಿದನಗ್ನಯಃ ।
ಕುಲಂ ವಾ ಶ್ರೋತ್ರಿಯಂ ಯೇಷಾಂ ಸರ್ವೇ ತೇ ಶೂದ್ರಧರ್ಮಣಃ ॥ ೬ ॥

ಅಕೃತ್ವಾ ವೈಶ್ವದೇವಂ ತು ಯೋಽಭುಂಕ್ತೇ ಸೋಽಬುಧಃ ಖಗ ।
ವೃಥಾ ತೇನಾನ್ನಪಾಕೇನ ಯಮಯೋನಿಂ ವ್ರಜೇತ್ತು ಸಃ ॥ ೭ ॥

ಪ್ರಿಯೋ ವಾ ಯದಿ ವಾ ದ್ವೇಷ್ಯೋ ಮೂರ್ಖಃ ಪಂಡಿತ ಏವ ಚ ।
ವೈಶ್ವದೇವೇ ತು ಸಂಪ್ರಾಪ್ತೇ ಸೋಽತಿಥಿಃ ಸ್ವರ್ಗಸಂಕ್ರಮಃ ॥ ೮ ॥

---

೪. ವೇದವನ್ನು ವಿಕ್ರಯಮಾಡಿದವನು ವಿಕ್ರಯಿಸಿದ ವೇದಭಾಗದಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಭ್ರೂಣಹತ್ಯೆಗಳನ್ನು ಮಾಡಿದ ಪಾಪವನ್ನು ಹೊಂದುವನು.

೫. ಬ್ರಾಹ್ಮಣರು ವೇದಾಭ್ಯಾಸ ಮಾಡಿದ್ದರೂ ವೈಶ್ವದೇವರಹಿತರೂ ಆದಿತ್ಯ ಕರ್ಮದಿಂದ ಹೀನರೂ ಆದರೆ ಅವರೆಲ್ಲರೂ ವೃಷಲರೆಂದು ತಿಳಿಯತಕ್ಕದ್ದು.

೬. ವೇದಾಧ್ಯಯನ ಮಾಡದಿರುವವರು, ಔಪಾಸನಮಾಡದೆ ಇರುವವರು. ಶ್ರೋತ್ರಿಯಕುಲ ಜಾತರಲ್ಲದವರು ಇವರೆಲ್ಲರೂ ಶೂದ್ರಧರ್ಮಿಗಳೆನಿಸುವರು.

೭. ಎಲೈ ಪಕ್ಷಿರಾಜನೇ! ಕೇಳು; ವೈಶ್ವದೇವ ಮಾಡದೆ ಭೋಜನಮಾಡುವವನು ಅಜ್ಞಾನಿ. ವೈಶ್ವದೇವವಿಲ್ಲದ ಅಪಕ್ವಾನ್ನದಿಂದ ಅವನು ಯಮಲೋಕಕ್ಕೆ ಹೋಗುತ್ತಾನೆ.

೮. ತನಗೆ ಪ್ರಿಯನಾಗಲಿ, ದ್ವೇಷ್ಯನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ, ಅತಿಥಿಯಾಗಿ ವೈಶ್ವದೇವಕಾಲಕ್ಕೆ ಸರಿಯಾಗಿ ಬಂದರೆ ಅವನನ್ನು ಸತ್ಕರಿಸಬೇಕು. ಹೀಗೆ ಮಾಡಿದರೆ ಅವನಿಗೆ ಸ್ವರ್ಗಪ್ರಾಪ್ತಿಯಾಗುವುದು.

ನೈಕಗ್ರಾಮೀಣಮತಿಥಿಂ ವಿಪ್ರಸಾಂಗತಿಕಂ ತಥಾ ।
ಅಚಿಂತ್ಯೋಽಭ್ಯಾಗತೋ ಯಸ್ಮಾತ್ತಸ್ಮಾದತಿಥಿರುಚ್ಯತೆ ॥ ೯ ॥

ಅಚಿಂತ್ಯಃ ಸ ತು ವೈ ನಾವ್ನೋ ವೈಶ್ವದೇವ ಉಪಾಗತಃ ।
ಅತಿಥಿಂ ತಂ ವಿಜಾನೀಯಾನ್ನ ಪುನಃ ಪೂರ್ವಮಾಗತಃ ॥ ೧೦ ॥

ಯಾವಚ್ಚ ಪ್ರಾಪ್ನುಯಾದನ್ನಂ ಕೃತಾಶೀಃ ಸ್ನಾತಕೋ ದ್ವಿಜಃ ।
ತಸ್ಯಾನ್ನಸ್ಯ ಚತುರ್ಭಾಗಂ ಹಂತಕಾರಂ ವಿದುಃ ಖಗ ॥ ೧೧ ॥

ಗ್ರಾಸಮಾತ್ರಾ ಭವೇದ್ಭಿಕ್ಷಾ ಪುಷ್ಕಲಂ ಚ ಚತುರ್ಗುಣಂ ।
ಪುಷ್ಕಲಾನಿ ಚ ಚತ್ವಾರಿ ಹಂತಕಾರೋ ವಿಧೀಯತೇ ॥ ೧೨ ॥

---

೯. ಒಂದೇ ಊರಿನಲ್ಲಿ ನೆಲಸದೆ, ಸದಾ ಸಂಚರಿಸುವವನೂ, ಬ್ರಾಹ್ಮಣನ ಸಂಗಡ ಭೋಜನದ ವೇಳೆಗೆ ಸರಿಯಾಗಿ ಬಂದವನೂ, ಅತಿಥಿಯೆನಿಸುವನು. ಗೃಹಸ್ಥನಿಗೆ ಪೂರ್ವಭಾವಿಸೂಚನೆಯಿಲ್ಲದೆಯೇ ಬಂದವನಾದ್ದರಿಂದ ಅವನು ಅಭ್ಯಾಗತನೆಂದೂ ಅತಿಥಿಯೆಂದೂ ಹೇಳಲ್ಪಡುವನು.

೧೦. ಅದೇ ಊರಿನಲ್ಲಿದ್ದು ವೈಶ್ವದೇವಕಾಲಕ್ಕೆ ಸರಿಯಾಗಿ ಬಂದವನು ಅತಿಥಿಯಲ್ಲವಲ್ಲಾ ಎಂದು ಯೋಚಿಸಬೇಕಾಗಿಲ್ಲ. ಅವನು ಒಂದುಸಾರಿ ಬಂದವನಾಗಿದ್ದೂ ಪುನಃ ಬಂದರೆ ಅವನನ್ನೂ ಅಭ್ಯಾಗತನೆಂಬ ಭಾವನೆಯಿಂದ ಸತ್ಕಾರಮಾಡಬೇಕು.

೧೧. ಅಯ್ಯಾ ಖಗನೇ! ಕೇಳು; ಸ್ನಾತಕನಾದ ಬ್ರಾಹ್ಮಣನು ಬಂದು ಗೃಹಸ್ಥನಿಗೆ ಆಶೀರ್ವಾದ ಮಾಡಿ, ಎಷ್ಟು ಅನ್ನವನ್ನು ಪಡೆಯುತ್ತಾನೋ ಅದರ ನಾಲ್ಕರಷ್ಟಕ್ಕೆ ಹಂತಕಾರವೆಂದು ಹೆಸರು.

೧೨. ಗ್ರಾಸಪ್ರಮಾಣವಾದ (ಒಂದು ತುತ್ತಿನಷ್ಟು) ಅನ್ನವನ್ನು 'ಭಿಕ್ಷೆ'ಯೆನ್ನಬೇಕು. ಅದರ ನಾಲ್ಕರಷ್ಟು ಭಾಗವು ಪುಷ್ಕಲವೆನಿಸುವುದು. ಪುಷ್ಕಲದ ನಾಲ್ಕರಷ್ಟಾದರೆ ಹಂತಕಾರವೆನಿಸುವುದು.

ಆರೂಢೋ ನೈಷ್ಠಿಕಂ ಧರ್ಮಂ ಯಸ್ತು ಪ್ರಚ್ಯವತೇ ಪುನಃ ।
ಚಾಂದ್ರಾಯಣಂ ಚರೇನ್ಮಾಸಮಿತಿ ವಿದ್ಧಿ ಖಗಾಧಿಪ ॥ ೧೩ ॥

ಆರೂಢಾಪತಿತಾಪತ್ಯಾ ಬ್ರಾಹ್ಮಣೀ ವೃಷಲೇನ ಚ ।
ದ್ವಾ ವೇತೌ ವಿದ್ಧಿ ಚಂಡಾಲೌ ವೇದಿತ್ರಾದ್ಯಶ್ಚ ಜಾಯತೇ ॥ ೧೪ ॥

ಬ್ರಾಹ್ಮಣೀ ಕುಲಟಾ ನಿತ್ಯಂ ಸ್ವಕಂ ತ್ಯಕ್ತ್ವಾ ಪತಿಂ ಖಗ ।
ಅನ್ಯಸ್ಯ ವಿಶತೇ ಗೇಹೇ ಬ್ರಾಹ್ಮಣಸ್ಯ ಖಗಾಧಿಪ ॥ ೧೫ ॥

ಉತ್ಪದ್ಯತೇ ತು ಯಸ್ತಸ್ಯಾಂ ಬ್ರಾಹ್ಮಣೇನ ಮಹಾಮತೇ ।
ಸ ಚಂಡಾಲೋ ಮಹಾನ್ ಪ್ರೋಕ್ತೋ ಮಹಾಚಂಡಾಲ ಇತ್ಯುತ ॥ ೧೬ ॥

---

೧೩. ಅಯ್ಯಾ ಪಕ್ಷಿರಾಜನೇ ! ಕೇಳು ; ನೈಷ್ಠಿಕಧರ್ಮವನ್ನು ಕೆಲವುಕಾಲ ಆಚರಿಸಿ(ಏರಿ) ಆ ಧರ್ಮದಿಂದ ಚ್ಯುತನಾದರೆ ಅದಕ್ಕೆ ಪ್ರಾಯಶ್ಚಿತ್ತವಾಗಿ ಒಂದು ತಿಂಗಳವರೆಗೆ ಚಾಂದ್ರಾಯಣವ್ರತವನ್ನು ಆಚರಿಸಬೇಕು.

೧೪. ಆರೂಢಸ್ಥಿತಿಯನ್ನು ಅನುಭವಿಸುತ್ತಾ ಅಲ್ಲಿಂದ ಪತಿತನಾದವನ ತಾಯಿಯೂ, ಪತಿತನಾಗಿ ವೃಷಲನೆನಿಸಿದವನ ಸಂಸರ್ಗಹೊಂದಿದ ಬ್ರಾಹ್ಮಣಿಯೂ ಇವರಿಬ್ಬರೂ ಚಂಡಾಲರೆಂದು ತಿಳಿಯಬೇಕು. ವೇದಿತ್ರನಿಂದ ಜನಿಸಿದವನನ್ನೂ ಹಾಗೆಯೇ ತಿಳಿಯಬೇಕು.

೧೫. ಬ್ರಾಹ್ಮಣಿಯು ತನ್ನ ಪತಿಯನ್ನು ತ್ಯಜಿಸಿ, ಬೇರೆ ಕುಲದ ಬ್ರಾಹ್ಮಣನನ್ನೇ ಆಶ್ರಯಿಸಿ ಆ ಬ್ರಾಹ್ಮಣನ ಗೃಹವನ್ನು ಪ್ರವೇಶಿಸಿ ಅಲ್ಲಿದ್ದರೂ, ಅವಳೂ ಕುಲಟೆಯೆನಿಸುವಳು.

೧೬. ಅಯ್ಯೊ ಮಹಾಮತಿಯೇ! ಕೇಳು; ಆ ಕುಲಟೆಯ ಉದರದಲ್ಲಿ ಬ್ರಾಹ್ಮಣನಿಂದಲೇ ಜನಿಸಿದವನಾದರೂ ಅವನೂ ದೊಡ್ಡ ಚಂಡಾಲನೇ. ಅವನನ್ನು ಮಹಾಚಂಡಾಲನೆಂದರೂ ಸರಿ.

ಯಸ್ತು ಪ್ರವ್ರಜಿತೋ ಭೂತ್ವಾ ಪುನಃ ಸೇವತಿ ಮೈಥುನಂ ।
ಷಷ್ಟಿ ವರ್ಷಸಹಸ್ರಾಣಿ ವಿಷ್ಠಾಯಾಂ ಜಾಯತೇ ಕ್ರಿಮಿಃ ॥
ಪಂಚಗವ್ಯೇನ ಶುದ್ಧಿಃ ಸ್ಯಾದಿತ್ಯಾಹ ಮಮ ದೇಹಕೃತ್ ॥ ೧೭ ॥

ಅಭೋಜ್ಯಂ ಬ್ರಾಹ್ಮಣಸ್ಯಾನ್ನಂ ವೃಷಲೇನ ನಿಮಂತ್ರಿತಂ ।
ತಥೈವ ವೃಷಲಸ್ಯಾನ್ನಂ ಬ್ರಾಹ್ಮಣೇನ ನಿಮಂತ್ರಿತಂ ॥ ೧೮ ॥

ಬ್ರಾಹ್ಮಣಾನ್ನಂ ದದಚ್ಛೂದ್ರಃ ಶೂದ್ರಾನ್ನಂ ಬ್ರಾಹ್ಮಣೋ ದದತ್ ।
ಉಭಾವೇತಾವಭೋಜ್ಯಾನ್ನೌ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೧೯॥

ಉಪನಿಕ್ಷೇಪಧರ್ಮೇಣ ಶೂದ್ರಾನ್ನಂ ಚ ಪಚೇದ್ದ್ವಿಜಃ ।
ಅಭೋಜ್ಯಂ ತದ್ಭವೇದನ್ನಂ ಸ ಚ ವಿಪ್ರಃ ಪುರೋಹಿತಃ ॥ ೨೦ ॥

---

೧೭. ಯಾವನು ಸಂನ್ಯಾಸ ಸ್ವೀಕಾರಮಾಡಿ ಮನೆಯನ್ನು ಬಿಟ್ಟುಹೋಗಿದ್ದು ಪುನಃ ಗೃಹಣಿಯೊನ್ನಡಗೂಡಿ ಸಂಸಾರಮಾಡುವನೋ, ಅವನು ಅರವತ್ತುಸಾವಿರ ವರ್ಷದವರೆಗೆ ಅಮೇಧ್ಯದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ. ಈ ಪಾಪವು ಪಂಚಗವ್ಯ ಪ್ರಾಶನದಿಂದ ಪರಿಹಾರವಾಗಿ ಶುದ್ಧವಾಗುವುದೆಂದು ನನ್ನ ತಂದೆ ಹೇಳಿದ್ದಾನೆ.

೧೮. ಬ್ರಾಹ್ಮಣನ ಮನೆಯ ಭೋಜನಕ್ಕೆ ಶೂದ್ರನು ಬಂದು ಕರೆದರೂ ; ಶೂದ್ರನು ಮಾಡಿಸುವ ಅನ್ನಸಂತರ್ಪಣೆಗೆ ಬ್ರಾಹ್ಮಣನು ಬಂದು ಕರೆದರೂ, ಆ ಅನ್ನಗಳನ್ನು ಭೋಜನಮಾಡಬಾರದು.

೧೯. ಬ್ರಾಹ್ಮಣಾನ್ನಕ್ಕೆ ಶೂದ್ರನು ಆಹ್ವಾನಮಾಡಿದರೂ ಶೂದ್ರನು ಮಾಡಿಸುವ ಸಂತರ್ಪಣೆಗೆ ಬ್ರಾಹ್ಮಣನು ಕರೆದರೂ ಹೀಗೆ ಮಾಡಿದ ಇಬ್ಬರೂ ಪಾಪಿಗಳೇ. ಇವರ ಮನೆಯ ಅನ್ನವು ಭೋಜ್ಯಾರ್ಹವಲ್ಲ. ಹಾಗೆ ಭೋಜನಮಾಡಿದವನು ಚಾಂದ್ರಾಯಣವ್ರತವನ್ನು ಆಚರಿಸಿ ಪರಿಶುದ್ಧನಾಗಬೇಕು.

೨೦. ಪಾಕಾರ್ಹವಾದ ಶೂದ್ರನ ಸಾಮಾನುಗಳನ್ನು ತೆಗೆದುಕೊಂಡು ಪುರೋಹಿತನಾದವನು ಪಾಕಮಾಡಿದರೂ, ಅದ ಶೂದ್ರಾನ್ನಪಾಕವೇ ಆದುದರಿಂದ ಅಂಥ ಅನ್ನವೂ ಭೋಜನಾರ್ಹವಲ್ಲ. ಹೀಗೆ ಶೂದ್ರನಿಗಾಗಿ ಪಾಕಮಾಡಿದ ಪುರೋಹಿತನೂ ತ್ಯಾಜ್ಯನೆನಿಸುವನು.

ಶೂದ್ರಾನ್ನಂ ಶೂದ್ರಸಂಪರ್ಕಂ ಶೂದ್ರೇಣ ಸಹವಾಸನಂ ।
ಶೂದ್ರಾಜ್ಞಾನಾಗಮಃ ಕಶ್ಚಿತ್ ಜ್ವಲಂತಮಪಿ ಪಾತಯೇತ್ ॥ ೨೧ ॥

ಶೂದ್ರಾನ್ನೋಪಹತಾ ವಿಪ್ರಾ ವಿಹ್ವಲಾ ರತಿಲಾಲನಾಃ ।
ಕುಪಿತಾಃ ಕಿಂ ಕರಿಷ್ಯಂತಿ ನಿರ್ವಿಷಾ ಇವ ಪನ್ನಗಾಃ ॥ ೨೨ ॥

ಹಸ್ತದತ್ತಾಸ್ತು ಯೇ ಸ್ನೇಹಾಲ್ಲವಣವ್ಯಂಜನಾದಯಃ ।
ದಾತಾರಂ ನಾಧಿತಿಷ್ಠಂತಿ ಭೋಕ್ತಾ ಭುಂಕ್ತೇ ತು ಕಿಲ್ಬಿಷಂ ॥ ೨೩ ॥

ಆಯಸೇನ ತು ಪಾತ್ರೇಣ ಯದನ್ನಮುಪದೀಯತೇ ।
ಭೋಕ್ತಾ ವಿಷ್ಠಾಶನಂ ಭುಂಕ್ತೇ ದಾತಾ ತು ನರಕಂ ವ್ರಜೇತ್ ॥ ೨೪ ॥

ಅಂಗುಲ್ಯಾ ದಂತಕಾಷ್ಠಂ ಯತ್ಪ್ರತ್ಯಕ್ಷಲವಣಂ ಚ ಯತ್ ।
ಮೃತ್ತಿಕಾಭಕ್ಷಣಂ ಚೈವ ತುಲ್ಯಂ ಗೋಮಾಸಂಭಕ್ಷಣೈಃ ॥ ೨೫ ॥

---

೨೧. ಶೂದ್ರಾನ್ನ, ಶೂದ್ರಸ್ಪರ್ಶದ ಮೈಲಿಗೆ, ಶೂದ್ರರಸಹವಾಸ, ಕದಾಚಿತ್ ಶೂದ್ರನಿಂದ ಬಂದಜ್ಞಾನ ಇವುಗಳು ಆರೂಢನಾದ ಮಹಾತೇಜಸ್ವಿಗೂ ಪಾತಿತ್ಯವುಂಟುಮಾಡುತ್ತವೆ.

೨೨. ಶೂದ್ರಾನ್ನಭೋಜನದಿಂದ ತಾವೂ ಕೆಟ್ಟು, ಮನಸ್ಸನ್ನೂ ಕೆಡಸಿಕೊಂಡು, ವಿಷಯಾಸಕ್ತರಾದ ಬ್ರಾಹ್ಮಣರು, ಕ್ರೋಧಾವಿಷ್ಟರಾದಾಗ್ಯೂ ವಿಷವಿಲ್ಲದ ಸರ್ಪದಂತೆ ತನಗೆ ಪ್ರತಿಭಟಿಸಿದವರನ್ನು ಏನೂ ಮಾಡಲಾರರು.

೨೩. ಕೇವಲ ಪ್ರೀತಿಯ (ಸದರದ) ವರಿಗೂ ಸಹ ಲವಣ ವ್ಯಂಜನ ಮೊದಲಾದುವನ್ನು ಕೈಯಲ್ಲಿ ಕೊಡಬಾರದು. ಹಾಗೆ ಕೊಟ್ಟರೆ ದಾತೃವಿಗೆ ಫಲವುಂಟಾಗುವುದಿಲ್ಲ. ಅದನ್ನು ಭೋಜನಮಾಡಿದವನು ಪಾಪವನ್ನೇ ಭುಂಜಿಸಿದಂತಾಗುವುದು.

೨೪. ಕಬ್ಬಿಣದ ಪಾತ್ರೆಯಲ್ಲಿ ಅನ್ನವನ್ನು ಬಡಿಸಿದರೆ, ಭೋಜನಮಾಡಿದವನು ಅಮೇಧ್ಯವನ್ನು ತಿಂದಂತೆ ಆಗುವುದು. ಅಲ್ಲದೆ ಆ ರೀತಿ ಬಡಿಸಿದ ದಾತೃವಿಗೂ ನರಕಪ್ರಾಪ್ತಿಯಾಗುವುದು.

೨೫. ಬೆರಳಿನಿಂದ ಹಲ್ಲುಜ್ಜುವುದು, ಪ್ರತ್ಯಕ್ಷವಾಗಿ ಮೇಲುಪ್ಪು ಸೇವಿಸುವುದು, ಮಣ್ಣನ್ನು ತಿನ್ನುವುದು, ಈ ಮೂರೂ ಗೋಮಾಂಸವನ್ನು ತಿಂದುದಕ್ಕೆ ಸಮಾನವೆನಿಸುವುವು.

ಮುಖೇ ಪರ್ಯುಷಿತೇ ನಿತ್ಯಂ ಭವತ್ಯಪ್ರಯತೋ ದ್ವಿಜಃ ।
ತಸ್ಮಾಚ್ಛುಷ್ಕಮಥಾದ್ರ್ರಂ ವಾ ಯೋಜಯೇದ್ದಂತಧಾವನೇ ॥ ೨೬ ॥

ಪುಷ್ಪಾಲಂಕಾರವಸ್ತ್ರಾಣಿ ಗಂಧಮಾಲ್ಯಾನುಲೇಪನಂ ।
ಉಪವಾಸೇನ ದುಷ್ಯಂತಿ ದಂತಧಾವನಮಂಜನಂ ॥ ೨೭ ॥

ಗೃಹಾಂತೇ ವಸತೇ ಮೂರ್ಖೋ ದೂರೇ ಚಾಸ್ಯ ಗುಣಾನ್ವಿತಃ ।
ಗುಣಾನ್ವಿತೇ ಚ ದಾತವ್ಯಂ ನಾಸ್ತಿ ಮೂರ್ಖವ್ಯತಿಕ್ರಮಃ ॥ ೨೮ ॥

ಬ್ರಾಹ್ಮಣಾತಿಕ್ರಮೋ ನಾಸ್ತಿ ವಿಪ್ರೇ ವೇದವಿವರ್ಜಿತೇ ।
ಜ್ವಲಂತಮಗ್ನಿಮುತ್ಸೃಜ್ಯ ನಹಿ ಭಸ್ಮನಿ ಹೂಯತೆ ॥ ೨೯ ॥

---

೨೬. ದ್ವಿಜ ಮುಂತಾದ ಯಾರೇ ಆಗಲಿ ಮುಖ ತೊಳೆಯದೆ ಇರುವವರು ಅಪರಿಶುದ್ಧರಾಗುವರು. ಆದುದರಿಂದ ಒಣಗಿದುದೋ ಹಸಿಯದೋ ಆದ ಯಾವುದಾದರೂ ಕಾಷ್ಟವನ್ನು ಅಗಿದು ಉಜ್ಜಿ ದಂತಶುದ್ಧಿ ಮುಖಶುದ್ಧಿಗಳನ್ನು ಮಾಡಿಕೊಳ್ಳಬೇಕು.

೨೭. ಉಪವಾಸಮಾಡುವ ಕಾಲದಲ್ಲಿ ಪುಷ್ಪಾಲಂಕಾರ, ಶ್ರೇಷ್ಠವಸ್ತ್ರಾಲಂಕಾರ ಮಾಲ್ಯ ಗಂಧಾನುಲೇಪನ, ಅಂಜನಲೇಪನ ಮುಂತಾದುವು ಕೂಡದು.

೨೮. ದಾನಕೊಡುವ ಸಂದರ್ಭದಲ್ಲಿ ಮೂರ್ಖನಾದ ದ್ವಿಜನು ಮನೆಯ ಸಮೀಪದಲ್ಲಿದ್ದು, ಗುಣವಂತನಾದ ದ್ವಿಜನು ಮನೆಗೆ ದೂರದಲ್ಲಿದ್ದಾಗ ಆ ಮೂರ್ಖನನ್ನು ವರ್ಜ್ಯಮಾಡಿ ದೂರದಲ್ಲಿರುವ ಗುಣವಂತನನ್ನೇ ಕರೆದು ದಾನಾದಿಗಳನ್ನು ಕೊಡಬೇಕು. ಹಾಗೆ ಮೂರ್ಖನನ್ನು ಅತಿಕ್ರಮಿಸುವುದರಿಂದ ಬ್ರಾಹ್ಮಣಾತಿಕ್ರಮ ದೋಷ ಸಂಭವಿಸುವುದಿಲ್ಲ.

೨೯. ವೇದಾಧ್ಯಯನ ಮಾಡದೆ ಇರುವ ಬ್ರಾಹ್ಮಣನು ಸಮೀಪದಲ್ಲಿದ್ದರೂ ಅವನನ್ನು ಆಲಕ್ಷಿಸಿ, ವೇದಸಂಪನ್ನನೂ, ತೇಜಸ್ವಿಯೂ ಆದ ಬ್ರಾಹ್ಮಣನು ದೂರದಲ್ಲಿದ್ದರೂ ಅವನನ್ನೇ ಕರೆದು ದಾನಾದಿಗಳನ್ನು ಕೊಡಬೇಕು. ಹೀಗೆ ಮಾಡಿದಾಗಲೂ ಸಮೀಪಸ್ಥನಾದ ಬ್ರಾಹ್ಮಣನನ್ನು ಅತಿಕ್ರಮ ಮಾಡಿದ ದೋಷ ಸಂಭವಿಸುವುದಿಲ್ಲ. ಜ್ವಲಿಸುತ್ತಿರುವ ಅಗ್ನಿ ದೂರದಲ್ಲಿದೆ ಎಂದು ಅದನ್ನು ಬಿಟ್ಟು ಸಮೀಪವಾಗಿದೆಯೆಂದು ಯಾರಾದರೂ ಬೂದಿಯಲ್ಲಿ ಹೋಮಮಾಡುತ್ತಾರೆಯೇ ?

ಸನ್ನಿಕೃಷ್ಟಮಧೀಯಾನಂ ಬ್ರಾಹ್ಮಣಂ ಯೋ ವ್ಯತಿಕ್ರಮೇತ್ ।
ಭೋಜನೇನೈವ ದಾನೇನ ದಹತ್ಯಾಸಪ್ತಮಂ ಕುಲಂ ॥ ೩೦ ॥

॥ ಅನೂರುರುವಾಚ ॥

ಏವಮೇಪ ಜಗನ್ನಾಥ ದೇವದೇವ ಜಗತ್ಪತೇ ।
ಕಿಂತು ಯತ್ತ್ವೇ ಪುರಾ ದೇವ ಶ್ರುತಂ ವಾಕ್ಯಂ ಮಹಾತ್ಮನಃ ॥ ೩೧ ॥

ಗದತೋ ನಾರದಸ್ಯೈವ ಶೃಣು ತ್ವಂ ವಿಬುಧಾಧಿಪ ।
ಗದತೋ ಮೇ ಸುರಶ್ರೇಷ್ಠ ಧರ್ಮ್ಯಮರ್ಥ್ಯಂ ಸುಖಾವಹಂ ॥ ೩೨ ॥

ಸತ್ಯನಿಷ್ಠಂ ದ್ವಿಜಂ ಯಸ್ತು ಶುಕ್ಲಜಾತಿಂ ಪ್ರಿಯಂವದಂ ।
ಮೂರ್ಖಂ ಪಾಖಂಡಿನಂ ವಾಪಿ ವೃತ್ತಿಹೀನಮಥಾಪಿ ವಾ ॥ ೩೩ ॥

ಅತಿಕ್ರಮ್ಯ ನರೋ ಘೋರೇ ನರಕೇ ಪಾತಯೇತ್ಖಗ ।
ಸಪ್ತಪರಾನ್ ಸಪ್ತಪೂರ್ವಾನ್ ಪುರುಷಾನಾತ್ಮನಾ ಸಹ ॥ ೩೪ ॥

---

೩೦. ಸಮೀಪಸ್ಥನೂ, ವೇದಾಧ್ಯಯನಸಂಪನ್ನನೂ ಆದ ಬ್ರಾಹ್ಮಣನನ್ನು ಭೋಜನಾದಿಗಳಿಗೆ ಹೇಳದೆ ಅಲಕ್ಷಿಸಿದರೆ; ಹಾಗೆ ಮಾಡಿದವನ ಕುಲದವರು ಏಳುತಲೆ ಮಾರು ಪರ್ಯಂತ ದುರ್ಗತಿಹೊಂದುತ್ತಾರೆ. (ಸಮೀಪ, ದೂರ, ಇವು ಅತಿಕ್ರಮಕ್ಕೆ ಕಾರಣವಾಗಬಾರದು. ಅವರ ಯೋಗ್ಯತೆಯು ಕಾರಣವಾಗಬೇಕು) ಎಂದನು.

೩೧-೩೨. ಆಗ ಅರುಣನು ಸೂರ್ಯನನ್ನು ಕುರಿತು "ಜಗನ್ನಾಥನೇ! ದೇವ ದೇವನೇ! ಜಗತ್ಪತಿಯೇ! ನೀನು ಹೇಳಿದುದು ಸರಿ. ಹಿಂದೆ ಮಹಾತ್ಮನಾದ ನಾರದನ ಮೂಲಕ ನಾನೂ ಇದನ್ನೇ ಕೇಳಿ ತಿಳಿದಿದ್ದೆನು. ಧರ್ಮವನ್ನು ಮೀರದೆ ಇರುವುದೂ, ಅರ್ಥವನ್ನು ಮೀರದಿರುವುದೂ, ಸುಖಕರವೂ ಆದ ಆ ಮಾತನ್ನು ಹೇಳುತ್ತೇನೆ.

೩೩-೩೪. ಸತ್ಯನಿಷ್ಠನೂ, ಪ್ರಿಯವಾದಿಯೂ, ಶುದ್ಧಚಿತ್ತನೂ ಆದ ಬ್ರಾಹ್ಮಣನನ್ನು ಅತಿಕ್ರಮಿಸಿ, ಮೂರ್ಖನನ್ನೋ, ಪಾಷಂಡಿಯನ್ನೋ, ಜೀವನಕ್ಕೆ ಗತಿಯಿಲ್ಲದವನನ್ನೋ ಪುರಸ್ಕರಿಸಿದರೆ, ಆ ಅತಿಕ್ರಮದೋಷವು ಹಿಂದಿನ ಏಳುತಲೆ, ಮುಂದಿನ ಏಳುತಲೆಯ ವಂಶೀಯರೊಡನೆ ಆತನಿಗೆ ಭಯಂಕರ ನರಕವನ್ನುಂಟುಮಾಡುವುದು.

ತಸ್ಮಾನ್ನಾತಿಕ್ರಮೇದ್ರಾಜಾ ಬ್ರಾಹ್ಮಣಂ ಪ್ರಾತಿವೇಶಿಕಂ ।
ಸಂಬಂಧತಸ್ತಥಾಸನ್ನಂ ದೌಹಿತ್ರಂ ವಿದ್ಯತೇ ತಥಾ ॥ ೩೫ ॥

ಭಾಗಿನೇಯಂ ವಿಶೇಷೇಣ ತಥಾ ಬಂಧುಂ ಗ್ರಹಾಧಿಪ ।
ನಾತಿಕ್ರಮೇನ್ನರಸ್ತ್ವೇತಾನ್ಸುಮೂರ್ಖಾನಪಿ ಗೋಪತೇ ॥
ಅತಿಕ್ರಮ್ಯ ಮಹದ್ರೌದ್ರಂ ರೌರವಂ ನರಕಂ ವ್ರಜೇತ್ ॥ ೩೭ ॥

॥ ಆದಿತ್ಯ ಉವಾಚ ॥
ಏವಮೇತನ್ನ ಸಂದೇಹೋ ಯಥಾ ವದಸಿ ಖೇಚರ ।
ಮಮಾಪ್ಯವಗತಂ ವೀರ ಬ್ರಾಹ್ಮಣಂ ನ ಪರಿತ್ಯಜೇತ್ ॥ ೩೬ ॥

ಸರ್ವದೇವಮಯಂ ವಿಪ್ರಂ ಸರ್ವಲೋಕಮಯಂ ತಥಾ ।
ತಸ್ಮಾತ್ಸಂಪೂಜಯೇದೇನಂ ನ ಗುಣಾಂಸ್ತಸ್ಯ ಚಿಂತಯೇತ್ ॥ ೩೮ ॥

---

೩೫. ಆದುದರಿಂದ ರಾಜನಾದವನು ನೆರೆಮನೆಯಲ್ಲಿಯೇ ಇರುವ ಬ್ರಾಹ್ಮಣನನ್ನು ಅತಿಕ್ರಮಮಾಡಬಾರದು. ಅಯ್ಯಾ ಗ್ರಹಾಧಿಪನೇ! ಸಂಬಂಧದಲ್ಲಿ ಮಗಳ ಮಗನು ಅತಿಸಮೀಪಸಂಬಂಧಿಯೆಂದು ತಿಳಿಯಬೇಕು.

೩೬. ಅಯ್ಯಾ ಗೋಪತಿಯೇ! ಮಗಳಮಗ, ತಂಗಿಯಮಗ, ಬಂಧು ಇವರು ಮೂರ್ಖರಾಗಿದ್ದರೂ ಆಲಕ್ಷ್ಯದಿಂದ ಅವರನ್ನು ತಿರಸ್ಕರಿಸಿ ವರ್ತಿಸಬಾರದು. ಹಾಗೆ ಅತಿಕ್ರಮಮಾಡಿದವನು ಭಯಂಕರವಾದ ರೌರವನರಕವನ್ನು ಹೊಂದುವನು" ಎಂದನು.

೩೭. ಆಗ ಆದಿತ್ಯನು ಅರುಣನನ್ನು ಕುರಿತು "ಅಯ್ಯಾ ವೀರನಾದ ಖೇಚರನೇ! ನೀನು ಹೇಳಿದುದೇ ಸರಿ. ಸಂಶಯವಿಲ್ಲ. ಯೋಗ್ಯನಾದ ಬ್ರಾಹ್ಮಣನನ್ನು ಬುದ್ಧಿಪೂರ್ವಕವಾಗಿ ಪರಿತ್ಯಾಗ ಮಾಡಬಾರದೆಂದು ನನಗೂ ಗೊತ್ತು.

೩೮. ಸಮಸ್ತ ದೇವರನ್ನು ತನ್ನಲ್ಲಿ ಉಳ್ಳವನೂ, ಸರ್ವಲೋಕವನ್ನೂ ತನ್ನಲ್ಲಿ ಉಳ್ಳವನೂ ಆದ ಈ ವಿಪ್ರನನ್ನು ಪೂಜಿಸಬೇಕು. ಅವನ ಗುಣಗಳನ್ನು ವಿಚಾರಮಾಡುವುದಕ್ಕೆ ಹೋಗಬಾರದು.

ಕೇವಲಂ ಚಿಂತಯೇಜ್ಜಾತಿಂ ನ ಗುಣಾನ್ ವಿನತಾತ್ಮಜ ।
ತಸ್ಮಾದಾಮಂತ್ರಯೇತ್ಪೂರ್ವಮಾಸನ್ನಂ ಬ್ರಾಹ್ಮಣಂ ಬುಧಃ ॥ ೩೯ ॥

ಯಸ್ತ್ವಾಸನ್ನಮತಿಕ್ರಮ್ಯ ಬ್ರಾಹ್ಮಣಂ ಪತಿತಾದೃತೇ ।
ದೂರಸ್ಥಾನ್ ಪೂಜಯೇನ್ಮೂಢೋ ಗುಣಾಢ್ಯಾನ್ನರಕಂ ವ್ರಜೇತ್ ॥ ೪೦ ॥

ದೇವಕರ್ಮವಿನಾಶೇನ ಬ್ರಹ್ಮಸ್ವಹರಣೇನ ಚ ।
ದೇವದ್ರವ್ಯಂ ದ್ವಿಜಾನ್ನಂ ಚ ಬ್ರಹ್ಮಸ್ವಂ ಬ್ರಾಹ್ಮಣಾರ್ಜಿತಂ ॥ ೪೧ ॥

ವಿಯೋನ್ಯಾಂ ಕ್ಷಿಪತೇ ಯಸ್ತು ವಿಯೋನಿಮಧಿಗಚ್ಛತಿ ॥ ೪೨ ॥

ಮಾ ದದಸ್ವೇತಿ ಯೋ ಬ್ರೂಯಾದ್ಗವಾಗ್ನಿಬ್ರಾಹ್ಮಣೇಷು ವೈ ।
ತಿರ್ಯಗ್ಯೋನಿಶತಂ ಗತ್ವಾ ಚಾಂಡಾಲೇಷ್ವಭಿಜಾಯತೇ ॥ ೪೨ ॥

---

೩೯. ಅಯ್ಯಾ ವಿನತಾಪುತ್ರನೇ! ಅವನ ಜಾತಿಯ ವಿಚಾರವನ್ನು ಕುರಿತು ಆಲೋಚಿಸಬೇಕೇ ವಿನಾ ಗುಣಗಳನ್ನಲ್ಲ. ಆದುದರಿಂದ ಪ್ರಾಜ್ಞನಾದ ವಿಪ್ರನು ತನ್ನ ನಿವಾಸಕ್ಕೆ ಸಮೀಪದಲ್ಲಿರುವ ಬ್ರಾಹ್ಮಣನನ್ನು ಮೊದಲು ಆಹ್ವಾನಿಸಬೇಕು.

೪೦. ಪತಿತನಾಗದೆ ಶುದ್ಧನಾದ ವಿಪ್ರನು ಸಮೀಪದಲ್ಲಿದ್ದರೂ ಅವನನ್ನು ಅತಿಕ್ರಮಿಸಿ, ಗುಣಾಢ್ಯರೆಂಬ ಕಾರಣದಿಂದ ದೂರಸ್ಥಿತರಾದವರನ್ನು ಸತ್ಕರಿಸುವ ಮೂಢನುನರಕವನ್ನು ಹೊಂದುತ್ತಾನೆ.

೪೧. ದೇವಕಾರ್ಯವನ್ನು ವಿಘಾತಮಾಡಿದವನೂ, ಬ್ರಹ್ಮಸ್ವತ್ತನ್ನು ಅಪಹರಿಸಿ ದವನೂ; ದೇವರ ದ್ರವ್ಯ, ಬ್ರಾಹ್ಮಣಾನ್ನ, ವಿಪ್ರಾರ್ಜಿತವಾದ ಬ್ರಹ್ಮಸ್ವತ್ತು ಇವನ್ನು ಕಿತ್ತು, ದುಷ್ಕುಲದಲ್ಲಿ ಹುಟ್ಟಿದವರಿಗೆ ಕೊಟ್ಟವನೂ, ಮುಂದೆ ದುಷ್ಕುಲ ವಲ್ಲಿಯೇ ಹುಟ್ಟುತ್ತಾರೆ.

೪೨ ಗೋವುಗಳಿಗೆ, ಅಗ್ನಿಗಳಿಗೆ, ಮನುಷ್ಯರಿಗೆ, ಬ್ರಾಹ್ಮಣರಿಗೆ. ಕೊಡಬೇಡ ವೆಂದು ಹೇಳುವವನು ತಿರ್ಯ್ಗಂತುಗಳ ಉದರದಲ್ಲಿ ನೂರುಸಾರಿ ಹುಟ್ಟಿ ಬಳಿಕ ಚಂಡಾಲಜಾತಿಯಲ್ಲಿ ಹುಟ್ಟುತ್ತಾನೆ.

ಯತ್ತು ವಾಚಾ ಪ್ರತಿಜ್ಞಾತಂ ಕರ್ಮಣಾ ನೋಪಪಾದಿತಂ ।
ತದೃಣಂ ಧರ್ಮಸಂಯುಕ್ತಮಿಹಲೋಕೇ ಪರತ್ರ ಚ　　॥ ೪೩ ॥

ವೇದವಿದ್ಯಾವ್ರತಸ್ನಾತೇ ಶ್ರೋತ್ರಿಯೇ ಗೃಹಮಾಗತೇ ।
ಕ್ರೀಡಂತ್ಯೋಷಧಯಃ ಸರ್ವಾ ಯಾಸ್ಯಾಮಃ ಪರಮಾಂ ಗತಿಂ　　॥ ೪೪ ॥

ಮಧು ಮಾಂಸಂ ಸುರಾಂ ಸೋಮಂ ಲಾಕ್ಷಾದ್ಯಂ ಲವಣಂ ತಥಾ ।
ವಿಕ್ರೀಯಾನ್ಯತಮಂ ತೇಷಾಂ ದ್ವಿಜಶ್ಚಾಂದ್ರಾಯಣಂ ಚರೇತ್　　॥ ೪೫ ॥

ಗುಡಂ ತಿಲಂ ತಥಾ ನೀಲಂ ಕೇಶಾನ್ಗೋಧೂಮಕಾನ್ಯವಾನ್ ।
ವಿಕ್ರೀಯ ಬ್ರಾಹ್ಮಣೋ ಗಾಂ ಚ ಕೃಚ್ಛ್ರಂ ಸಾಂತಪನಂ ಚರೇತ್ ॥ ೪೬ ॥

ಔಷ್ಟ್ರಮಾವಿಕದುಗ್ಧಂ ಚ ಅನ್ನಂ ಮೃತಕಸೂತಕೇ ।
ಚೋರಸ್ಯಾನ್ನಂ ಮೃತಶ್ರಾದ್ಧೇ ಭುಕ್ತ್ವಾ ಚಾಂದ್ರಾಯಣಂ ಚರೇತ್ ॥೪೭॥

---

೪೩. ಮಾತಿನಲ್ಲಿ ಯಾವುದನ್ನಾದರೂ ಪ್ರತಿಜ್ಞೆಮಾಡಿ ಕೆಲಸದಲ್ಲಿ ನೆರವೇರಿಸದೆ ಹೋದರೆ ಅದು ಇಹಲೋಕದಲ್ಲೂ, ಪರಲೋಕದಲ್ಲೂ ಧರ್ಮಪ್ರಕಾರ ಋಣವೆನಿಸುತ್ತದೆ.

೪೪. ವೇದವಿದ್ಯೆಯಿಂದ ಸ್ನಾತಕನಾದ ಶ್ರೋತ್ರಿಯನು ಮನೆಗೆ ಬಂದರೆ ಆ ಮನೆಯಲ್ಲಿ ಬೆಳೆದಿರುವ ಸರ್ವೌಷಧಿಗಳೂ "ನಾವು ಸದ್ಗತಿಯನ್ನು ಹೊಂದುತ್ತೇವೆಂದು" ಆನಂದದಿಂದ ಕ್ರೀಡಿಸುವುವು.

೪೫. ಬ್ರಾಹ್ಮಣನು ಮದ್ಯ, ಮಾಂಸ, ಸುರೆ, ಸೋಮಲತಾರಸ, ಅರಗು, ಉಪ್ಪು, ಇವುಗಳಲ್ಲಿ ಯಾವುದನ್ನು ಮಾರಿದರೂ ದೋಷವು ಪ್ರಾಪ್ತಿಯಾಗುವುದು. ಅದರ ಪ್ರಾಯಶ್ಚಿತ್ತಕ್ಕಾಗಿ ಚಾಂದ್ರಾಯಣವ್ರತವನ್ನು ಮಾಡಬೇಕು.

೪೬. ಎಳ್ಳು, ಬೆಲ್ಲ, ನೀಲೀಬಣ್ಣ, ಕೇಶಗಳು, ಗೋಧೂಮಧಾನ್ಯ ಗೋವು ಇವುಗಳನ್ನು ವಿಕ್ರಯಿಸಿದ ಬ್ರಾಹ್ಮಣನು ದೋಷಯುಕ್ತನಾಗುವನು. ಅವನು ಕೃಚ್ಛ್ರ, ಸಾಂತಪನ ಎಂಬ ತಪೋವ್ರತಗಳನ್ನು ಮಾಡಿದರೆ ಶುದ್ಧನಾಗುವನು.

೪೭. ಒಂಟೆಯುಹಾಲು, ಕುರಿಯುಹಾಲು, ಮೃತಾಶೌಚದವರ ಅನ್ನ, ಕಳ್ಳನು ಸಂಪಾದಿಸಿದಅನ್ನ, ಔರ್ಧ್ವದೇಹಿಕಶ್ರಾದ್ಧದಲ್ಲಿ ಕೊಟ್ಟಅನ್ನ, ಇವನ್ನು ತಿಂದರೆ, ಚಾಂದ್ರಾಯಣವ್ರತಾಚರಣ ಮಾಡಬೇಕು.

ಗವಾಂ ಶೃಂಗೋದಕೇ ಸ್ನಾತೋ ಮಹಾನದ್ಯಾಶ್ಚ ಸಂಗಮೇ ।
ಸಮುದ್ರದರ್ಶನಾದ್ವಾಪಿ ಶುನಾ ದಷ್ಟಃ ಶುಚಿರ್ಭವೇತ್ ॥ ೪೮ ॥

ವೇದವಿದ್ಯಾವ್ರತಸ್ನಾತಃ ಶುನಾ ದಷ್ಟೋ ದ್ವಿಜಃ ಖಗ ।
ಹಿರಣ್ಯೋದಕಮಿಶ್ರಂ ತು ಘೃತಂ ಪ್ರಾಶ್ಯ ವಿಶುಧ್ಯತಿ ॥ ೪೯ ॥

ತಿಷ್ಠನ್ ವಾಪ್ಯಥ ವಾ ಗಚ್ಛನ್ ಶುನಾ ದಷ್ಟೋ ದ್ವಿಜಃ ಖಗ ।
ವಜ್ರಂ ಪ್ರಾಶ್ಯ ಶುಚಿಃ ಸ್ಯಾದ್ವೈ ಯಥಾಹ ಭಗವಾನ್ಮನುಃ ॥ ೫೦ ॥

ವ್ರತಿನಶ್ಚಾಪಿ ದಷ್ಟಸ್ಯ ತ್ರಿರಾತ್ರಂ ಕ್ಷಪಣಂ ಸ್ಮೃತಂ ।
ಸ ಘೃತಂ ಚ ತತೋ ಭುಕ್ತ್ವಾ ವ್ರತಶೇಷಂ ಸಮಾಚರೇತ್ ॥ ೫೧ ॥

ಬ್ರಾಹ್ಮಣೀ ತು ಶುನಾ ದಷ್ಟಾ ಸೋಮೇ ದೃಷ್ಟಂ ಸಮಾಚರೇತ್ ।
ಯದಾ ನ ದೃಶ್ಯತೇ ಸೋಮಃ ಪ್ರಾಯಶ್ಚಿತ್ತಂ ಕಥಂ ಭವೇತ್ ॥ ೫೨ ॥

---

೪೮. ನಾಯಿಕಚ್ಚಿದ ಬ್ರಾಹ್ಮಣನು ಗೋಶೃಂಗೋದಕದಲ್ಲಿ ಸ್ನಾನಮಾಡಿದರೂ, ಮಹಾನದೀಸಂಗಮದಲ್ಲಿ ಸ್ನಾನಮಾಡಿದರೂ, ಸಮುದ್ರ ದರ್ಶನಮಾಡಿದರೂ ಶುದ್ಧನಾಗುತ್ತಾನೆ.

೪೯. ಅಯ್ಯಾ ಖಗನೇ! ಕೇಳು; ವೇದವಿದ್ಯಾವ್ರತದಿಂದ ಸ್ನಾತಕನಾದ ಬ್ರಾಹ್ಮಣನನ್ನು ನಾಯಿಕಚ್ಚಿದರೆ ಆತನು ಹಿರಣ್ಯೋದಕವನ್ನು ಬೆರಸಿದ ತುಪ್ಪವನ್ನು ಪ್ರಾಶನಮಾಡಿದರೆ ಶುದ್ಧನಾಗುತ್ತಾನೆ.

೫೦. ನಿಂತಿರುವಾಗ ಅಥವಾ ಹೋಗುತ್ತಿರುವಾಗ ಬ್ರಾಹ್ಮಣನನ್ನು ನಾಯಿ ಕಚ್ಚಿದರೆ ಆತನು ಆಜ್ಯವನ್ನು ತಿಂದರೆ ಶುಚಿಯಾಗುವನೆಂದು ಮನು ಹೇಳಿದಾನೆ.

೫೧-೫೨. ವ್ರತಿಯಾದವನನ್ನು ವ್ರತಾಚರಣದಿನಗಳ ಮಧ್ಯೆ ನಾಯಿಕಚ್ಚಿ ದಾಗ, ಮೂರುರಾತ್ರಿ ಅವನು ಘೃತಪ್ರಾಶನಮಾಡಿದರೆ ಶುದ್ಧಿಯಾಗುವುದೆಂದು ಹೇಳಿದೆ. ಅನಂತರ ಉಳಿದ ವ್ರತವನ್ನು ಆಚರಿಸಬೇಕು. ಬ್ರಾಹ್ಮಣಸ್ತ್ರೀಯನ್ನು ನಾಯಿಕಚ್ಚಿದರೆ ಚಂದ್ರದರ್ಶನವನ್ನು ಮಾಡಬೇಕು. ಚಂದ್ರದರ್ಶನವಾಗದಿದ್ದರೆ ಪ್ರಾಯಶ್ಚಿತ್ತವು ಆಗಲಾರದು.

ಯಾಂ ದಿಶಂ ವ್ರಜತೇ ಸೋಮಸ್ತಾಂ ದಿಶಂ ಚಾವಲೋಕಯೇತ್ ।
ಸೋಮಮಾರ್ಗೇಣ ಸಾ ಪೂರ್ವಾ ಪಂಚಭೂತೇನ ಶುಧ್ಯತಿ ॥ ೫೩ ॥

ಬ್ರಾಹ್ಮಣಸ್ಯ ಬ್ರಹ್ಮರಂಧ್ರೇ ಪೂಯಶೋಣಿತಸಂಭವೇ ।
ಕ್ರಿಮಿಭಿರ್ದಶ್ಯತೇ ಯಶ್ಚ ನಿಷ್ಕೃತಿಂ ತಸ್ಯ ವಚ್ಮಿ ತೇ ॥ ೫೪ ॥

ಗವಾಂ ತತ್ರ ಪುರೀಷೇಣ ತ್ರಿಕಾಲಂ ಸ್ನಾನಮಾಚರೇತ್ ।
ದಧಿಕ್ಷೀರಂ ಘೃತಂ ಪೀತ್ವಾ ಕ್ರಿಮಿದಷ್ಟೋ ವಿಶುಧ್ಯತಿ ॥ ೫೫ ॥

ಅಥ ನಾಭ್ಯಾಃ ಪ್ರದಷ್ಟಸ್ಯ ಆಪಾದಾದ್ವಿನತಾತ್ಮಜ ।
ಏತದ್ವಿನಿರ್ದಿಶೇತ್ಪ್ರಾಜ್ಞಃ ಪ್ರಾಯಶ್ಚಿತ್ತಂ ಖಗಾಧಿಪ ॥ ೫೬ ॥

ನಾಭಿಕಂಠಾಂತರೇ ವೀರ ಯಥಾ ಚೋತ್ಪದ್ಯತೇ ಕ್ರಿಮಿಃ ।
ಷಡ್ರಾತ್ರಂ ತು ತದಾ ಪ್ರೋಕ್ತಂ ಪ್ರಾಯಶ್ಚಿತ್ತಂ ಮನೀಷಿಭಿಃ ॥ ೫೭ ॥

---

೪೩. ಆ ವೇಳೆ ಪ್ರಾಪ್ತವಾಗದೆ, ಚಂದ್ರನು ಗೋಚರನಾಗದೆ ಇದ್ದಾಗ ಸೋಮನು ಇರುವ ಆ ದಿಕ್ಕನ್ನಾದರೂ ನೋಡಬೇಕು. ಪಂಚಭೂತಮಯವಾದ ಸೋಮಮಾರ್ಗವನ್ನು ಎಂದರೆ ಅದೇ ಪೂರ್ವದಿಕ್ಕನ್ನೇ ನೋಡಿದರೂ, ಆಕೆ ಪರಿಶುದ್ಧಳಾಗುವಳು.

೫೪. ಬ್ರಾಹ್ಮಣನ ಬ್ರಹ್ಮರಂಧ್ರದಲ್ಲಿ ಗಾಯವಾಗಿ ರಕ್ತವು ಕೀವಾಗಿ ಕ್ರಿಮಿಗಳುಂಟಾಗಿದ್ದರೆ ಅವನಿಗೆ ಮಾಡಬೇಕಾದ ಪ್ರಾಯಶ್ಚಿತ್ತವನ್ನು ಹೇಳುತ್ತೇನೆ.

೫೫. ಆತನು ಗೋಮೂತ್ರದಿಂದಲೂ, ಗೋಮಯದಿಂದಲೂ, ತ್ರಿಕಾಲದಲ್ಲೂ ಸ್ನಾನಮಾಡಬೇಕು. ಕ್ರಿಮಿದಷ್ಟನು ಮೊಸರು, ಹಾಲು, ತುಪ್ಪ ಇವನ್ನು ಕುಡಿದರೆ ಶುದ್ಧನಾಗುತ್ತಾನೆ.

೫೬. ಅಯ್ಯಾ ವಿನತಾತ್ಮಜನೇ! ಕೇಳು; ಹೊಕ್ಕಳಿನಿಂದ ಪಾದಗಳವರೆಗೆ ಎಲ್ಲಾದರೂ ಕ್ರಿಮಿಗಳು ಉಂಟಾದವನಿಗೆ ಪ್ರಾಜ್ಞನಾದವನು ಈ ಪ್ರಾಯಶ್ಚಿತ್ತವನ್ನು ವಿಧಿಸತಕ್ಕದ್ದು.

೫೭. ಖಗಾಧಿಪನಾದ ಎಲೈ ವೀರನೇ! ನಾಭಿ ಕಂಠ ಇವುಗಳ ಮಧ್ಯದಲ್ಲಿ ವ್ರಣವಾಗಿ ಕ್ರಿಮಿ ಕಾಣಿಸಿಕೊಂಡಾಗ ಆರು ರಾತ್ರಿಗಳವರೆಗೆ ಈ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ತಿಳಿದವರು ಹೇಳಿದ್ದಾರೆ.

ಯದಾ ದಶಂತಿ ಶಿರಸಿ ಕ್ರಿಮಯೋ ವಿನತಾತ್ಮಜ ।
ಕೃಚ್ಛ್ರಂ ತದಾಚರೇತ್ಪ್ರಾಜ್ಞಃ ಶುದ್ಧಯೇ ಕಶ್ಯಪಾತ್ಮಜ ॥ ೫೮ ॥

ಮೃತಾನ್ನಂ ಮಧು ಮಾಂಸಂ ಚ ಯಸ್ತು ಭುಂಜೀತ ಬ್ರಾಹ್ಮಣಃ ।
ಸ ತ್ರೀಣ್ಯಹಾನ್ಯುಪವಸೇದೇಕಾಹಂ ಚೋದಕೇ ವಸೇತ್ ॥ ೫೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಅನೂರ್ವಾದಿತ್ಯ ಸಂವಾದೇ ಬ್ರಾಹ್ಮಣಧರ್ಮ ವರ್ಣನಂ ನಾಮ
ಚತುರಶೀತ್ಯುತ್ತರ ಶತತಮೋಽಧ್ಯಾಯಃ.



---

೫೮. ವಿನತಾಪುತ್ರನೂ, ಕಶ್ಯಪಪುತ್ರನೂ ಆದ ಎಲೈ ಗರುಡನೇ! ಕ್ರಿಮಿಗಳು ಶಿರಸ್ಸಿನಲ್ಲಿ ಕಾಣಿಸಿದ ಸಂದರ್ಭದಲ್ಲಿ ಆಗ ಶುದ್ಧಿಯಾಗುವುದಕ್ಕೆ ಕೃಚ್ಛ್ರವನ್ನಾಚರಿಸಬೇಕು.

೫೯. ಯಾವ ಬ್ರಾಹ್ಮಣನು ಸೂತಕದವರ ಮನೆಯ ಅನ್ನವನ್ನೂ, ಮದ್ಯ ಮಾಂಸಗಳನ್ನೂ ಭುಂಜಿಸುವನೋ ಅವನು ಅದರ ಪ್ರಾಯಶ್ಚಿತ್ತಕ್ಕಾಗಿ ಮೂರುರಾತ್ರಿಗಳು ಉಪವಾಸಮಾಡಬೇಕು. ಒಂದು ಹಗಲೆಲ್ಲಾ ನೀರಿನಲ್ಲಿ ನಿಂತಿರಲೂಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಬ್ರಾಹ್ಮಣಧರ್ಮವರ್ಣನೆಯೆಂಬ ನೂರಎಂಭತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಶೀತ್ಯುತ್ತರಶತತಮೋಽಧ್ಯಾಯಃ

॥ ಆದಿತ್ಯ ಉವಾಚ ॥

ರಾತ್ರೌ ಶ್ರಾದ್ಧಂ ನ ಕುರ್ವೀತ ರಾಕ್ಷಸೀ ಕೀರ್ತಿತಾ ಹಿ ಸಾ ।
ಸಂಧ್ಯಯೋರುಭಯೋರ್ವೀರ ಸೂರ್ಯೇ ಚೈವ ತಿರೋಹಿತೇ ॥ ೧ ॥

ಅಕೃತ್ವಾ ಮಾತೃಯಜ್ಞಂ ತು ಯಃ ಶ್ರಾದ್ಧಂ ಪರಿವೇಷಯೇತ್ ।
ತಾಂ ತಸ್ಯ ಕ್ರೋಧಸಂಯುಕ್ತಾಂ ಹಿಂಸಾಮಿಚ್ಛಂತಿ ದಾರುಣಾಂ ॥ ೨ ॥

---

## ನೂರಎಂಭತ್ತೈದನೆಯ ಅಧ್ಯಾಯ

೧. ಆದಿತ್ಯನು ಅರುಣನನ್ನು ಕುರಿತು ಮುಂದುವರಿಸಿ ಹೇಳುವವನಾಗಿ— “ ಪ್ರಾತಃಸಂಧ್ಯೆ ಮತ್ತು ಸಾಯಂಸಂಧ್ಯಾಕಾಲಗಳಲ್ಲಿಯೂ ಸೂರ್ಯನು ಅಸ್ತಂಗತನಾದ ಮೇಲೆ (ಎಂದರೆ ಮರೆಯಾಗಿರುವಾಗ) ರಾತ್ರಿಯಲ್ಲಿಯೂ, ಶ್ರಾದ್ಧವನ್ನು ಮಾಡ ಬಾರದು ಹಾಗೆ ಮಾಡಿದ ಶ್ರಾದ್ಧವು ರಾಕ್ಷಸೀಶ್ರಾದ್ಧವೆನಿಸುವುದು.

೨. ನಾಂದೀಮುಖದಲ್ಲಿ ಆಚರಿಸಬೇಕಾದ ಮಾತೃಯಜ್ಞವನ್ನು ಪೂರ್ವಾಹ್ಣ ದಲ್ಲಿಯೇ ಮಾಡಬೇಕು. ಇತರ ಶ್ರಾದ್ಧವನ್ನು ಪೂರ್ವಾಹ್ಣದಲ್ಲಿ ಮಾಡುವವನಿಗೆ ಕ್ರೋಧಯುಕ್ತವೂ, ದಾರುಣವೂ ಆದ ಹಿಂಸೆಯುಂಟಾಗುವುದೆಂದು ಹೇಳುವರು ” ಎಂದನು.

॥ ಅನೂರುರುವಾಚ ॥
ಮಾತೃಶ್ರಾದ್ಧಂ ಕಥಂ ಕಾರ್ಯಂ ಕಾಶ್ಚ ತಾ ಮಾತರಃ ಸ್ಮೃತಾಃ ।
ನಾಂದೀಮುಖಾಶ್ಚ ಪಿತರಃ ಕಥಂ ಪೂಜಾಮವಾಪ್ನುಯುಃ ॥ ೩ ॥

॥ ಆದಿತ್ಯ ಉವಾಚ ॥
ಹಂತ ತೇ ಸಂಪ್ರವಕ್ಷ್ಯಾಮಿ ಮಾತೃಶ್ರಾದ್ಧವಿಧಿಂ ಖಗ ।
ಶೃಣು ತ್ವಂ ಖಗಶಾರ್ದೂಲ ಗದತೋ ಮಮ ಕೃತ್ಸ್ನಶಃ ॥ ೪ ॥

ಪೂರ್ವಾಹ್ಣೇ ಭೋಜಯೇದ್ವಿಪ್ರಾನಷ್ಟೌ ಸರ್ವಾನ್ ಪ್ರದಕ್ಷಿಣಾನ್ ।
ತಥಾನ್ಯಂ ನವಮಂ ವಿಪ್ರಂ ಚತುರಶ್ಚ ಖಗಾಧಿಪ ॥ ೫ ॥

ಋಜೂನ್ವೈ ಕುತಪಾನ್ ದತ್ವಾ ಸತ್ಯೇನ ವಿಧಿವತ್ಖಗ ।
ಕೃತ್ವಾ ಯವೈಸ್ತಿಲಾರ್ಥಂ ತು ದಧಿಮಿಶ್ರಂ ಕ್ರಮೇಣ ಚ ॥ ೬ ॥

---

೩. ಆಗ ಅರುಣನು ಸೂರ್ಯನನ್ನು ಕುರಿತು ಪ್ರಶ್ನಿಸುವವನಾಗಿ "ಮಾತೃಶ್ರಾದ್ಧ ಮಾಡುವುದು ಹೇಗೆ? ಆ ಮಾತೃಗಳು ಯಾರು ಎಂದು ಹೇಳಿದೆ? ನಾಂದೀಮುಖದಲ್ಲಿ ಪಿತೃಗಳಿಗೆ ಹೇಗೆ ಪೂಜೆಯನ್ನು ಮಾಡಬೇಕು ? " ಎಂದನು.

೪. ಆದಿತ್ಯನು ಉತ್ತರ ಹೇಳುತ್ತಾನೆ—ಎಲೈ ಪಕ್ಷಿಶ್ರೇಷ್ಠನೇ! ಮಾತೃಶ್ರಾದ್ಧ ಮಾಡುವ ವಿಧಿಯನ್ನು ಸಮಗ್ರವಾಗಿ ನಿನಗೆ ಹೇಳುವೆನು. ಅದನ್ನು ಕೇಳು.

೫. ಅಯ್ಯಾ ಖಗಾಧಿಪನೇ! ಪೂರ್ವಾಹ್ಣದಲ್ಲಿ ಎಂಟುಮಂದಿ ಬ್ರಾಹ್ಮಣರನ್ನು ಭೋಜನಕ್ಕೆ ಆಹ್ವಾನಿಸಿ, ಅವರಿಗೆ ಪ್ರದಕ್ಷಿಣ (ಸವ್ಯ) ದಿಂದ ಬಡಿಸಿ ಭೋಜನಮಾಡಿಸ ಬೇಕು. ಒಂಬತ್ತನೆಯವನಾದ ಬೇರೆ ಒಬ್ಬ ಬ್ರಾಹ್ಮಣನಿಗೂ, ಮತ್ತೆ ನಾಲ್ವರಿಗೂ ಅನ್ಯತ್ರ ಭೋಜನ ಮಾಡಿಸಬೇಕು.

೬. " ಅಷ್ಟಮೋಽಹ್ನಃ ಕುತಪೋಽಸ್ತ್ರಿಯಾಂ " ಎಂದು ಕುತಪಕಾಲ ಸ್ವರೂಪ ವನ್ನು ಹೇಳಿದೆ. ಅಯ್ಯಾ ಖಗನೇ ! ಅವಶಿಷ್ಟ ಬ್ರಾಹ್ಮಣಭೋಜನ ಶ್ರಾದ್ಧದಲ್ಲಿ ಅನೇಕಾವೃತ್ತಿ ವಿಧಿವತ್ತಾಗಿ ಶ್ರಾದ್ಧಗಳನ್ನು ಕ್ರಮವಾಗಿ ಮಾಡಬೇಕಾಗಿ ಬಂದಾಗ ಸತ್ಯದಿಂದ ಸರಿಯಾದ ಕುತಪಕಾಲಗಳನ್ನು ಅನುಸರಿಸಿ, ಎಳ್ಳಿನಬದಲು ದಧಿಮಿಶ್ರ ವಾದ ಅಕ್ಕಿಯನ್ನು ಉಪಯೋಗಿಸಬೇಕು.

ಗಂಧಪುಷ್ಪಾದಿಕಂ ಸರ್ವಂ ಕುರ್ಯಾದ್ವಿಪ್ರಪ್ರದಕ್ಷಿಣಾಮ್ ।
ಬ್ರಾಹ್ಮಣೇಭ್ಯಸ್ತತೋ ದದ್ಯಾನ್ಮಧುರಂ ಭೋಜನಂ ಖಗ ॥ ೭ ॥

ಗುಡಮಿಶ್ರಂ ಖಗಶ್ರೇಷ್ಠ ಸವಸ್ತ್ರಮೋದನಂ ಪರಂ ।
ರಸಾನಾಂ ಮೋದಕಾಂಶ್ಚೈವ ನ ಚ ತಾನ್ಕಟುಕಾಂಸ್ತಥಾ ॥ ೮ ॥

ಏವಂ ಭುಕ್ತೇಷು ವಿಪ್ರೇಷು ದದ್ಯಾತ್ಪಿಂಡಾನ್ಸಮಾಹಿತಃ ।
ದಧ್ಯಕ್ಷತವಿಮಿಶ್ರಾಂಸ್ತು ಬದರೈಶ್ಚ ಖಗಾಧಿಪ ॥ ೯ ॥

ಕೃತ್ವಾ ತು ಮಂಡಲಂ ವೀರ ಚತುರಸ್ರಂ ಪ್ರದಕ್ಷಿಣಂ ।
ಪೂರ್ವಾಗ್ರಾಂಶ್ಚ ಕುಶಾನ್ದತ್ವಾ ಪುಷ್ಪಾಣಾಂ ಪ್ರಕರಂ ತಥಾ ॥ ೧೦ ॥

ಸವ್ಯೇನ ಪಾಣಿನಾ ವೀರ ವಿಧಿವತ್ಖಗಸತ್ತಮ ।
ಮಾತ್ರೇ ಪ್ರಮಾತ್ರೇ ತನ್ಮಾತ್ರೇ ನಿರ್ವಪೇತ್ಪೂರ್ವತೋಮುಖಃ ॥ ೧೧ ॥

---

೭. ಬಳಿಕ ಕ್ರಮಪ್ರಕಾರ ಗಂಧ, ಹೂ, ಎಲ್ಲವನ್ನೂ ಕೊಟ್ಟು ಬ್ರಾಹ್ಮಣರನ್ನು ಪ್ರದಕ್ಷಿಣೆಮಾಡಬೇಕು. ಆ ಮೇಲೆ ಬ್ರಾಹ್ಮಣರಿಗೆ ಮಧುರವಾದ ಭೋಜನವನ್ನು ಮಾಡಿಸಬೇಕು

೮. ಎಲೈ ಪಕ್ಷಿಶ್ರೇಷ್ಠನೇ ! ಗುಢಮಿಶ್ರವಾದ ಶ್ರೇಷ್ಠವಾದ ಅನ್ನವನ್ನೂ, ಕಹಿಯಾಗಿಲ್ಲದೆ ಮಧುರವೂ, ಉತ್ತಮವೂ ಆದ ರಸಗಳನ್ನೂ, ಮೋದಕಗಳನ್ನೂ ಭೋಜನಮಾಡಿಸಿ ವಸ್ತ್ರವನ್ನೂ ಕೊಡಬೇಕು.

೯. ಹೀಗೆ ಬ್ರಾಹ್ಮಣರು ಭೋಜನಮಾಡಿದ ಮೇಲೆ, ಸಮಾಧಾನದಿಂದ ಪಿಂಡ ಪ್ರದಾನ ಮಾಡಬೇಕು. ದಧಿ, ಅಕ್ಷತ, ಬದರ, ಇವುಗಳಿಂದ ರಚಿಸಿ ಪಿಂಡಗಳನ್ನು ಪ್ರದಾನಮಾಡಬೇಕು.

೧೦. ಅಯ್ಯಾ ವೀರನೇ ! ಚತುರಸ್ರವಾದ ಮಂಡಲವನ್ನು ಪ್ರದಕ್ಷಿಣ ರೀತಿಯಿಂದ ಮಾಡಿ ಪೂರ್ವಾಗ್ರವಾಗಿ ದರ್ಭೆಗಳನ್ನು ಹಾಸಿ, ಪುಷ್ಪಸಮೂಹವನ್ನು ಅದರ ಮೇಲೆ ಹರಡಬೇಕು,

೧೧. ವೀರನಾದ ಎಲೈ ಪಕ್ಷಿಶ್ರೇಷ್ಠನೇ! ಪೂರ್ವಾಭಿಮುಖವಾಗಿ ಕುಳಿತು ವಿಧಿಪ್ರಕಾರ ಯಜ್ಞೋಪವೀತವನ್ನು ಪ್ರಾಚೀನಾವೀತಿಯಾಗಿ ಹಾಕಿಕೊಂಡು ಮಾತೃ, ಮಾತಾಮಹಿ, ಮಾತುಃಪಿತಾಮಹಿ ಈ ಮೂವರಿಗೂ ಪಿಂಡಪ್ರದಾನ ಮಾಡಬೇಕು.

ಪಿತುರ್ಮಾತ್ರೇ ತು ತನ್ಮಾತ್ರೇ ನಿರ್ವಪೇದ್ವಿಧಿವತ್ಖಗ ।
ವೃದ್ಧಾಯೈ ಪ್ರಪಿತಾಮಹ್ಯೈ ತಥಾನ್ಯಂ ನಿರ್ವಪೇದ್ಪೃಥಃ ॥ ೧೨ ॥

ಏವಮುದ್ದಿಶ್ಯ ವೈ ಮಾತೃಃ ಷಟ್ಪಿಂಡಾನ್ನಿರ್ವಪೇತ್ಖಗ ।
ಅಷ್ಟಾಶಯೇದ್ದ್ವಿಜಾನ್ವೀರ ಮಾತೃಶ್ರಾದ್ಧೇ ಖಗಾಧಿಪ ।
ನವಮಂ ಸರ್ವದೈವತ್ಯಂ ಭೋಜಯೇದ್ವಿಧಿವತ್ಖಗ ॥ ೧೩ ॥

ನಾಂದೀಮುಖಾಂಸ್ತಾನುದ್ದಿಶ್ಯ ಪಿತ್ರ್ಯಾನ್ಪಂಚ ದ್ವಿಜೋತ್ತಮಾನ್ ।
ಭೋಜಯೇದ್ವಿಧಿವಚ್ಛ್ರಾದ್ಧೇ ವೃದ್ಧಿಶ್ರಾದ್ಧೇ ಪ್ರದಕ್ಷಿಣಂ ॥ ೧೪ ॥

ಇತ್ಥಂ ಶ್ರಾದ್ಧದ್ವಯಂ ಕುರ್ಯಾದ್ವೃದ್ಧೌ ಕಶ್ಯಪನಂದನ ।
ತಥಾನ್ಯಮಪಿ ತೇ ವಚ್ಮಿ ಪರಂ ಶ್ರಾದ್ಧವಿಧಿಂ ತವ ॥ ೧೫ ॥

---

೧೨. ಅಯ್ಯಾ ಖಗನೇ! ತಿಳಿದವನು ಪಿತಾಮಹಿ ಪ್ರಪಿತಾಮಹಿಯರಿಗೆ ಒಂದೊಂದನ್ನೂ ವೃದ್ಧ ಪ್ರಪಿತಾಮಹಿಗೆ ಮತ್ತೊಂದು ಪಿಂಡವನ್ನೂ ಪ್ರದಾನಮಾಡಬೇಕು. ಈ ರೀತಿ ಆರು ಮಾತೃಗಳನ್ನುದ್ದೇಶಿಸಿ ಆರುಪಿಂಡಗಳನ್ನು ಪ್ರಧಾನ ಸಿದ್ಧಮಾಡಬೇಕು.

೧೩. ನಾಂದೀ ಮಾತೃಸ್ಥಾನದಲ್ಲಿ ಎಂಟುಮಂದಿ ಬ್ರಾಹ್ಮಣರಿಗೆ ವಿಧಿವತ್ತಾಗಿ ಭೋಜನಮಾಡಿಸಬೇಕು. ಒಂಬತ್ತನೆಯವನಾಗಿ ಮತ್ತೊಬ್ಬ ಬ್ರಾಹ್ಮಣನನ್ನು ಸರ್ವದೇವಾತ್ಮಕನೆಂದು ಭಾವಿಸಿ ಅವನಿಗೂ ಭೋಜನಮಾಡಿಸಬೇಕು.

೧೪. ನಾಂದೀಮುಖ ಶ್ರಾದ್ಧದಲ್ಲಿ ಪಿತೃಗಳನ್ನುದ್ದೇಶಿಸಿ ಐವರು ಬ್ರಾಹ್ಮಣರಿಗೆ ವಿಧಿವತ್ತಾಗಿ ಭೋಜನಮಾಡಿಸಬೇಕು ಎಂಬುದು ಕೆಲವರ ಮತ. ವೃದ್ಧಿಶ್ರಾದ್ಧದಲ್ಲಿ ಎಲ್ಲವನ್ನೂ ಸವ್ಯದಿಂದ ಮಾಡಬೇಕೇ ವಿನಾ ಅಪಸವ್ಯದಿಂದ ಅಲ್ಲ.

೧೫. ಅಯ್ಯಾ ಕಶ್ಯಪನಂದನನೇ! ಹೀಗೆ ವೃದ್ಧಿಕರ್ಮದಲ್ಲಿ ಮಾತೃಶ್ರಾದ್ಧ ಪಿತೃಶ್ರಾದ್ಧ ಎಂಬ ಎರಡು ಶ್ರಾದ್ಧವನ್ನು ಮಾಡಬೇಕು. ಮತ್ತು ಉತ್ತಮವಾದ ಬೇರೆ ಒಂದು ಶ್ರಾದ್ಧವಿಧಿಯನ್ನು ನಿನಗೆ ಹೇಳುತ್ತೇನೆ.

ಅಥೈವಂ ಭೋಜಯೇಚ್ಛ್ರಾದ್ಧೇ ತತ್ಪೂರ್ವಂ ತು ಪ್ರವರ್ತಯೇತ್ ।
ಅನ್ಯಥಾ ತತ್ರ ಲುಂಪಂತಿ ಸದೇವಾಸುರಮಾನುಷಾಃ ॥ ೧೬ ॥

ಅಗ್ನ್ಯಭಾವೇ ತು ವಿಪ್ರಸ್ಯ ಪಾಣಾವೇವೋಪಪಾದಯೇತ್ ।
ಯೋ ಹ್ಯಗ್ನಿಃ ಸ ದ್ವಿಜೋ ವೀಂದ್ರ ಮಂತ್ರದರ್ಶಿಭಿರುಚ್ಯತೆ ॥ ೧೭ ॥

ಪೂರ್ವಂ ಪಾತ್ರೇ ಯದನ್ನಂ ಚ ಯಚ್ಚಾನ್ನಮುಪಕಲ್ಪಿತಂ ।
ತೇನೈವ ಸಹ ಭೋಕ್ತವ್ಯಂ ಪೃಥಗ್ಭಾವೋ ನ ವಿದ್ಯತೆ ॥ ೧೮ ॥

ದೈವೇ ಚಾಥರ್ವಣೌ ವಿಪ್ರೌ ಪ್ರಾಙ್ಮುಖಾವುಪವೇಶಯೇತ್ ।
ಪಿತ್ರ್ಯೇ ತ್ರೀನುದಗಾಸ್ಯಾಂಶ್ಚ ವೃದ್ಧೌ ಚಾಧ್ವರ್ಯುಸಂಗಮಾತ್ ॥ ೧೯ ॥

ತ್ರೀಣಿ ಶ್ರಾದ್ಧೇ ಪವಿತ್ರಾಣಿ ದೌಹಿತ್ರಃ ಕುತುಪಾಸ್ತಿಲಾಃ ।
ತ್ರೀಣಿ ಚಾತ್ರ ಪ್ರಶಂಸಂತಿ ಶೌಚಮಕ್ರೋಧಮತ್ವರಂ ॥ ೨೦ ॥

---

೧೬. ಭೋಜನಕ್ಕೆ ಶ್ರಾದ್ಧಮಾಡುವಾಗ ಯಾವಾಗಲೂ ಪೂರ್ವಭಾವಿಯಾಗಿ ಕೆಲವರಿಗೆ ನಿಮಂತ್ರಣಕ್ಕೆ ಹೇಳಿ ಅವರು ಭೋಜನದಲ್ಲಿ ಪ್ರವೃತ್ತರಾಗುವಂತೆ ಮಾಡಬೇಕು. ಹಾಗೆ ಮಾಡದೇ ಹೋದರೆ ದೇವತೆಗಳು, ಅಸುರರು, ಮನುಷ್ಯರು ಅದನ್ನು ಲೋಪಗೊಳಿಸುತ್ತಾರೆ.

೧೭. ಅಯ್ಯಾ ಪಕ್ಷಿರಾಜನೇ! ಅಗ್ನಿಪ್ರತಿಷ್ಠಾಪನೆ ಮಾಡುವ ಸಂಪ್ರದಾಯವಿಲ್ಲದಿದ್ದರೆ ಬ್ರಾಹ್ಮಣನ ದಕ್ಷಿಣಹಸ್ತದಲ್ಲೇ ಪಾಣಿಹೋಮವನ್ನು ಮಾಡಬೇಕು. ಅಗ್ನಿಯೇ ಬ್ರಾಹ್ಮಣನೆಂದು ಮಂತ್ರಜ್ಞರು ಹೇಳುತ್ತಾರೆ.

೧೮. ಭೋಜನಪಾತ್ರದಲ್ಲಿ ಮೊದಲು ಸ್ವಧಾರೂಪದಲ್ಲಿ ಹಾಕಿದ ಅನ್ನವನ್ನೂ ಆ ಮೇಲೆ ಭೋಜನಕ್ಕಾಗಿ ಬಡಿಸಿದ ಅನ್ನವನ್ನೂ ಈ ಎರಡನ್ನೂ ಬೆರಸಿಕೊಳ್ಳಬೇಕು ಅವೆರಡನ್ನೂ ಬೇರೆ ಬೇರೆಯಾಗಿಯೇ ಭೋಜನಮಾಡಬೇಕೆಂಬ ನಿಯಮವಿಲ್ಲ.

೧೯. ವೃದ್ಧಿಶ್ರಾದ್ಧದಲ್ಲಿ ವಿಶ್ವೇದೇವಸ್ಥಾನದಲ್ಲಿ ಇಬ್ಬರು ಅಥರ್ವಣವೇದಿಗಳನ್ನು ಪೂರ್ವಾಭಿಮುಖವಾಗಿಯೂ ವೇದತ್ರಯನಿಪುಣರಾದ ಮೂವರನ್ನು ಪಿತೃಸ್ಥಾನದಲ್ಲಿ ಉತ್ತರಾಭಿಮುಖವಾಗಿಯೂ ಭೋಜನಕ್ಕೆ ಕೂರಿಸಬೇಕು.

೨೦. ಶ್ರಾದ್ಧದಲ್ಲಿ ಮಗಳಮಗ, ಕುತುಪಕಾಲ, ಎಳ್ಳು, ಇವು ಮೂರೂ ಪರಿಶುದ್ಧವೆನಿಸಿದುವು. ಅಲ್ಲದೆ ಶ್ರಾದ್ಧಮಾಡುವಾಗ ಶುಚಿಯಾಗಿಯೂ, ಕೋಪವಿಲ್ಲದೆಯೂ, ಆತುರಪಡದೆಯೂ ಕೆಲಸಗಳನ್ನು ನಡೆಯಿಸಬೇಕು.

ದೌಹಿತ್ರಂ ಖಂಡಮಿತ್ಯುಕ್ತಂ ಲಲಾಟಾಯ ಪ್ರಜಾಪತೇ ।
ತತ್ರ ಶೃಂಗಸ್ಯ ಯತ್ಪಾತ್ರಂ ತದ್ದೌಹಿತ್ರಮಿತಿಸ್ಮೃತಂ ॥ ೨೧ ॥

ಸವ್ಯಾದಂಸಾತ್ಪರಿಭ್ರಷ್ಟಂ ನಾಭಿದೇಶೇ ವ್ಯವಸ್ಥಿತಂ ।
ಏಕವಸ್ತ್ರಂ ತು ತಂ ವಿದ್ಯಾದ್ದೈವೇ ಪಿತ್ರ್ಯೇ ಚ ವರ್ಜಯೇತ್ ॥ ೨೨ ॥

ಪಿತೃದೇವಮನುಷ್ಯಾಣಾಂ ಪೂಜನಂ ಭೋಜನಂ ತಥಾ ।
ನೋತ್ತರೀಯಂ ವಿನಾ ಕಾರ್ಯಂ ಕೃತಂ ಸ್ಯಾನ್ನಿಷ್ಫಲಂ ಯತಃ ॥ ೨೩ ॥

ಪರಿಧಾನಕೃತೇ ಸ್ಕಂಧೇ ಗೃಹಸ್ಥೋ ಯೋಽರ್ಚಯೇತ್ಪಿತೄನ್ ।
ನ ಸ ತತ್ಫಲಮಾಪ್ನೋತಿ ಯದಾ ಯೋಗಪಟಾವೃತಃ ॥ ೨೪ ॥

ವನಸ್ಥಾನಾಂ ಖಗಶ್ರೇಷ್ಠ ಯತೀನಾಂ ಚ ಮಹಾಮತೇ ।
ಸಿದ್ಧಯೇ ಕರ್ಮಣಾಂ ವೀರ ಯೋಗಪಟ್ಟಕಮುಚ್ಯತೇ ॥ ೨೫ ॥

---

೨೧. ಎಲೈ ರಾಜನೇ! ಬ್ರಹ್ಮನ ಹಣೆಗೆ ದೌಹಿತ್ರಖಂಡವೆಂದು ಹೆಸರಾಗಿದೆ ಶೃಂಗಮಯವಾದ ಪಾತ್ರವೇ ದೌಹಿತ್ರವೆನಿಸುವುದು.

೨೨. ಉತ್ತರೀಯ ವಸ್ತ್ರವು ಎಡದ ಹೆಗಲಿನಿಂದ ಜೋತು ನಾಭಿದೇಶದವರೆಗೆ ವ್ಯಾಪಿಸಿ ನಿಂತರೆ ಅಂಥವನನ್ನು ಏಕವಸ್ತ್ರನೆಂದು ತಿಳಿಯಬೇಕು. ಹೀಗೆ ಏಕವಸ್ತ್ರವನ್ನು ಧರಿಸಿ ದೇವಕಾರ್ಯ ಪಿತೃಕಾರ್ಯಗಳನ್ನು ಮಾಡಬಾರದು.

೨೩. ಪಿತೃಪೂಜೆ, ದೇವಪೂಜೆ, ಮನುಷ್ಯಪೂಜೆ ಇವುಗಳಲ್ಲಿಯೂ, ಅವರಿಗೆ ಭೋಜನಾದಿಗಳನ್ನು ಮಾಡಿಸುವಾಗಲೂ, ಉತ್ತರೀಯವಿಲ್ಲದೆ ಮಾಡಬಾರದು. ಒಂದುಪಕ್ಷ ಹಾಗೆ ಮಾಡಿದ್ದೇ ಆದರೆ ಅದು ನಿಷ್ಫಲವೆನಿಸುವುದು.

೨೪. ಉಟ್ಟಪಂಚೆಯ ಸೆರಗನ್ನೇ ಹೆಗಲಮೇಲೆ ಹಾಕಿಕೊಂಡು ಪಿತೃಗಳನ್ನು ಪೂಜಿಸುವ ಗೃಹಸ್ಥನೂ, ಯೋಗಪಟ್ಟವನ್ನು ಸುತ್ತಿಕಟ್ಟಿಕೊಂಡು ದೇವಪಿತೃಪೂಜೆ ಮಾಡಿದವನೂ, ಆ ಪೂಜೆಯ ಫಲವನ್ನು ಹೊಂದುವುದಿಲ್ಲ.

೨೫. ಅಯ್ಯಾ ಮಹಾಬುದ್ಧಿಶಾಲಿಯಾದ ಖಗಶ್ರೇಷ್ಠನೇ! ವನಸ್ಥರಾದವರಿಗೂ, ಯತಿಗಳಿಗೂ ಯೋಗಪಟ್ಟವನ್ನು ಧರಿಸುವುದರಿಂದ ಕರ್ಮಸಿದ್ಧಿಯಾಗುವುದೆಂದು ಹೇಳಿದೆ. ಅಷ್ಟೇ ಹೊರತು ಗೃಹಸ್ಥನ ಕರ್ಮಗಳಿಗೆ ಅದು ಹೇಳಿಲ್ಲ.

ಹಸ್ತೌ ಪ್ರಕ್ಷಾಲ್ಯ ಗಂಡೂಷಂ ಯಃ ಪಿಬೇದವಿಚಕ್ಷಣಃ ।
ಸ ತು ದೈವಂ ಚ ಪಿತ್ರ್ಯಂ ಚ ಆತ್ಮಾನಂ ಚೋಪಘಾತಯೇತ್ ॥ ೨೬ ॥

ಭೋಜನೇಷ್ವೇವ ಚಾಸಕ್ತಾ ನ ಸ್ವಸ್ತಿಂ ಕುರ್ವತೇ ದ್ವಿಜಾಃ ।
ಶ್ರಾದ್ಧೇಷು ಕೀರ್ತಿತಹವಿರ್ಗುಣಂ ಕುರ್ವಂತಿ ಯೇ ದ್ವಿಜಾಃ ॥
ಆಸುರಂ ತದ್ಭವೇಚ್ಛ್ರಾದ್ಧಂ ಪಿತೄಣಾಂ ನೋಪತಿಷ್ಠತೇ ॥ ೨೭ ॥

ದಾತಾರೋ ನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ।
ಶ್ರದ್ಧಾ ಚ ನೋ ಮಾ ವ್ಯಗಮದ್ಬಹುದೇಯಂ ಚ ನೋಽಸ್ತ್ವಿತಿ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ ಅರುಣಾದಿತ್ಯಸಂವಾದೇ ಮಾತೃಶ್ರಾದ್ಧ ವಿಧಿವರ್ಣನಂ ನಾಮ ಪಂಚಾಶೀತ್ಯುತ್ತರ ಶತತಮೋಽಧ್ಯಾಯಃ.

---

೨೬. ಕೈತೊಳೆದುಕೊಂಡು ಬಾಯಿಮುಕ್ಕಳಿಸಲು ಹಾಕಿಕೊಂಡ ನೀರನ್ನು ತಿಳಿವಳಿಕೆಯಿಲ್ಲದೆ ಕುಡಿದುಬಿಡಬಾರದು. ಹಾಗೆ ಕುಡಿದುಬಿಡುವವನು ದೇವಕರ್ಮವನ್ನೂ ಪಿತೃಕರ್ಮವನ್ನೂ ಕುಲಗೆಡಿಸಿ ತನ್ನನ್ನೂ ತೊಂದರೆಗೆ ಈಡುಮಾಡಿಕೊಳ್ಳುತ್ತಾನೆ.

೨೭. ಅನ್ನಸೂಕ್ತ ರಕ್ಷೋಘ್ನಸೂಕ್ತಾದಿಗಳ ಪಠನವನ್ನು ಆಲಿಸದೆ ಭೋಜನದ ಮೇಲೇ ಮನಸ್ಸಿಟ್ಟು ಪಾಕಶ್ಲಾಘನಾದಿಗಳನ್ನು ಯಾರು ಮಾಡುವರೋ ಅಂತಹ ಕರ್ತೃಭೋಕ್ತೃಗಳಿಂದ ನಿರ್ವಹಿಸಲ್ಪಡುವ ಶ್ರಾದ್ಧವು ಆಸುರಶ್ರಾದ್ಧವೆನಿಸುವುದು. ಸೂಕ್ತಶ್ರವಣದಿಂದ ಇಬ್ಬರಿಗೂ ಬ್ರಹ್ಮದ ಮೇಲೆ ಗಮನವಿರಬೇಕೇ ವಿನಾ ಇತರತ್ರ ಗಮನವಿರಬಾರದು.

೨೮. ಭೋಜನಾನಂತರ "ನನಗೆ ಅನ್ನದಾನಮಾಡಿದವರು ಅಭಿವೃದ್ಧಿಹೊಂದಲಿ ವೇದಗಳು ಅಭಿವೃದ್ಧಿಯಾಗಲಿ, ಸಂತತಿ ಅಭಿವೃದ್ಧಿಯಾಗಲಿ. ನಮ್ಮಶ್ರದ್ಧೆ ಕಮ್ಮಿಯಾಗದೇಇರಲಿ, ಕೊಡುವುದಕ್ಕೆ ಅರ್ಹವಾದ ವಸ್ತುಗಳು ನಮ್ಮಲ್ಲಿ ಸಮೃದ್ಧಿಯಾಗಿರಲಿ" ಎಂದು ಬೋಕ್ತೃಗಳು ಹೇಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೌರಧರ್ಮದಲ್ಲಿ ಅರುಣಾದಿತ್ಯ ಸಂವಾದದಲ್ಲಿ ಮಾತೃಶ್ರಾದ್ಧ ವಿಧಿವರ್ಣನೆಯೆಂಬ ನೂರಎಂಬತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಡಶೀತ್ಯುತ್ತರಶತತಮೋಽಧ್ಯಾಯಃ

॥ ಭಾಸ್ಕರ ಉವಾಚ ॥

ಶ್ರಾವಣ್ಯಾಂ ತು ಬಲಿಃ ಕಾರ್ಯಃ ಸರ್ಪಾಣಾಂ ಮಂತ್ರಪೂರ್ವಕಂ ।
ಶಯನಾರೋಹಣೇ ಚೈವ ಕಾರ್ಯೇ ಸುಖಮಭೀಪ್ಸತಾ ॥ ೧ ॥

ಕಾರ್ಯಃ ಪ್ರತ್ಯವರೋಹಸ್ತು ಮಾರ್ಗಶೀರ್ಷ್ಯಾಂ ನ ಸಂಶಯಃ ।
ಫಲಂ ವಿನಾ ತ್ವನುಷ್ಠಾನಂ ನಿತ್ಯಾನಾಮಿಷ್ಯತೇ ಸ್ಫುಟಂ ॥ ೨ ॥

ಕಾಮ್ಯಾನಾಂ ಸಫಲಾರ್ಥಂ ತು ದೋಷಾಪ್ರಾಪ್ತ್ಯರ್ಥಮೇವ ಚ ।
ನೈಮಿತ್ತಿಕಾನಾಂ ಕರಣಂ ತ್ರಿವಿಧಂ ಕರ್ಮಣಾಂ ಫಲಂ ॥ ೩ ॥

---

### ನೂರಎಂಭತ್ತಾರನೆಯ ಅಧ್ಯಾಯ

೧. ಭಾಸ್ಕರನು ಹೇಳುತ್ತಾನೆ—"ಸುಖವಾಗಿರಬೇಕೆಂದು ಅಪೇಕ್ಷೆಯುಳ್ಳ ಪುರುಷನು ಶ್ರಾವಣಮಾಸದಲ್ಲಿ ಸರ್ಪಗಳಿಗೆ ಮಂತ್ರಪೂರ್ವಕವಾಗಿ ಬಲಿಯನ್ನು ಸಮರ್ಪಣೆಮಾಡಿ ಆ ನಾಗಗಳಿಗೆ ಶಯನ ಮತ್ತು ಆರೋಹಣ ಎಂಬ ಎರಡು ಕರ್ಮಗಳನ್ನಾಚರಿಸಬೇಕು.

೨. ಬಳಿಕ ಮಾರ್ಗಶೀರ್ಷ ಶುಕ್ಲಪೂರ್ಣಿಮೆಯಲ್ಲಿ ಪ್ರತ್ಯವರೋಹ ಎಂಬ ಕರ್ಮವನ್ನು ಆಚರಿಸಬೇಕು ಇದರಲ್ಲಿ ಸಂಶಯವಿಲ್ಲ. ಫಲಾಭಿಲಾಷೆಯಿಲ್ಲದೆ ಮಾಡುವ ಕಾರ್ಯಗಳಿಗೆ ನಿತ್ಯಕರ್ಮವೆಂದು ಹೆಸರು.

೩. ಫಲಾಭಿಲಾಷೆಯಿಂದ ಮಾಡುವ ಕರ್ಮವು ಕಾಮ್ಯಕರ್ಮವೆನಿಸುವುದು. ಕೇವಲ ದೋಷಪರಿಹಾರಕ್ಕೋಸ್ಕರ ಆಚರಿಸುವ ಕರ್ಮಗಳು ನೈಮಿತ್ತಿಕಕರ್ಮಗಳು.

ಫಲಂ ಕೇಚಿದುಪಾತ್ತಸ್ಯ ದುರಿತಸ್ಯ ಪ್ರಚಕ್ಷತೇ ।
ಅನುತ್ಪತ್ತಿಂ ತಥಾ ಚಾನ್ಯೇ ಪ್ರತೀತ್ಯಾಭ್ಯುಪಮಂತ್ರ್ಯ ಚ ॥ ೪ ॥

ನಿತ್ಯಕ್ರಿಯಂ ತಥಾ ಚಾನ್ಯೇ ಅನುಷಂಗಾತ್ಫಲಂ ಶ್ರುತೀಃ ।
ಅಗ್ನ್ಯಾಧೇಯಂ ತಥಾ ದರ್ಶಂ ಪೌರ್ಣಮಾಸಂ ದ್ವಿತೀಯಕಂ ॥ ೫ ॥

ಚಾತುರ್ಮಾಸ್ಯಮಗ್ನಿಹೋತ್ರಂ ಪಶುಬಂಧೋ ನಿರೂಢಕಾ ।
ಸೌತ್ರಾಮಣೀ ಚ ಸಂಸ್ಥಾಃ ಸ್ಯುರ್ಹವಿಷಃ ಶ್ರುತಿನೋದಿತಾಃ ॥ ೬ ॥

ಅಗ್ನಿಷ್ಟೋಮೋಽತ್ಯಗ್ನಿಷ್ಟೋಮ ಉಕ್ಥ್ಯಃ ಸಂಷೋಡಶೀ ತಥಾ ।
ವಾಜಪೇಯಾತಿರಾತ್ರಶ್ಚ ಆಪ್ತೋರ್ಯಾಮಃ ಶ್ರುತೌ ಶ್ರುತಃ ॥ ೭ ॥

---

ಈ ರೀತಿ ನಿತ್ಯ, ಕಾಮ್ಯ, ನೈಮಿತ್ತಿಕ ಎಂಬ ಮೂರು ಕರಣಗಳಿಗೂ ಫಲಾಭಾವ (ಫಲವಿಲ್ಲದಿರುವಿಕೆ) ಫಲಪ್ರಾಪ್ತಿ (ಫಲಹೊಂದುವುದು) ದೋಷನಿವೃತ್ತಿ (ಬಂದಿರುವ ದೋಷನಿವಾರಣೆ) ಎಂಬ ಈ ಮೂರು ಫಲಗಳೂ ಕ್ರಮವಾಗಿ ಹೇಳಲ್ಪಟ್ಟಿರುವುವು.

೪. ಕೆಲವರು ಸಂಘಟಿಸಿದ ಪಾಪವು ಕ್ಷಯವಾಗುವುದೇ ಫಲವೆಂದು ಹೇಳುವರು. ಇನ್ನು ಕೆಲವರು ಪಾಪವು ಉತ್ಪತ್ತಿಯಾಗುವುದಿಲ್ಲವೆಂದು ನಂಬಿ ನಿತ್ಯಕರ್ಮವನ್ನು ಮಾಡಬೇಕೆಂದು ಹೇಳುವರು.

೫ ಮತ್ತೆ ಕೆಲವರು ಪುಣ್ಯಕರ್ಮ ಮಾಡಿದರೆ ಆ ಸಂಬಂಧದಿಂದಲೇ ಫಲಪ್ರಾಪ್ತಿಯೆಂದು ಶ್ರುತಿವಚನವನ್ನು ಹೇಳುವರು.

೬. ಅಗ್ನ್ಯಾಧಾನ, (ಅಗ್ನಿಹೋತ್ರ) ದರ್ಶೇಷ್ಟಿ, ಪೌರ್ಣಮಾಸೇಷ್ಟೀ, ಚಾತುರ್ಮಾಸೇಷ್ಟಿ, ನಿರೂಢಪಶುಬಂಧ, ಮತ್ತು ಸೌತ್ರಾಮಣಿ ಎಂಬಿವು ಹವಿಸ್ಸಂಸ್ಥೆಗಳಾದ ಯಜ್ಞಗಳು ಎಂದು ವೇದದಲ್ಲಿ ಹೇಳಿದೆ.

೭. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಸಂಷೋಡಶೀ, ವಾಜಪೇಯ ಅತಿರಾತ್ರ, ಆಪ್ತೋರ್ಯಾಮ ಎಂಬಿವು ವೇದೋಕ್ತವಾದ ಮಹಾಯಜ್ಞಗಳು.

ದಯಾ ಸ್ಯಾತ್ಸರ್ವಭೂತೇಷು ಅನಸೂಯಾಥ ಮಂಗಲಂ ।
ಕ್ಷಾಂತಿರ್ದಯಾತ್ವನಾಯಾಸಃ ಶೌಚಮಸ್ಪೃಹತಾ ವ್ರತಂ ॥ ೮ ॥

ಸಮ್ಯಗುಕ್ತಾಸ್ತು ಸಂಸ್ಕಾರಾ ಬ್ರಹ್ಮಪ್ರಾಪ್ತಿನಿಮಿತ್ತಕಾಃ ।
ಅನಂತರಂ ಪ್ರವಕ್ಷ್ಯಾಮಿ ವಿಪ್ರಾಣಾಂ ವೃತ್ತಯಃ ಶುಭಾಃ ॥ ೯ ॥

ಋತಾಮೃತೇ ಚ ವಿಪ್ರಾಣಾಮೃತಂ ಪ್ರಮೃತಮೇವ ಚ ।
ಪ್ರತಿಗ್ರಹವಣಿಜ್ಯಾದಿ ಶ್ರೇಯಸೀ ನೋತ್ತರೋತ್ತರಾ ॥ ೧೦ ॥

ಆಜೀವಿಕಾವೃತ್ತಯಸ್ತು ಇತ್ಯಾದ್ಯಾಃ ಸಂಪ್ರವರ್ತಿತಾಃ ।
ತಾಸಾಂ ಕಯಾಪಿ ಜೀವೇತ್ತು ಅನುತಿಷ್ಠೇದ್ಯಥಾವಿಧಿ ॥ ೧೧ ॥

ನಿತ್ಯಂ ಶುಚಿಃ ಸುಗಂಧಶ್ಚ ಸ್ನಾನಶೀಲಃ ಪ್ರಿಯರಿವದಃ ।
ಪೂಜ್ಯಶ್ಚ ಪೂಜಯೇದ್ದೇವಾನ್ಕಾರ್ಯಾಣಿ ಸ್ವಯಮಾಚರೇತ್ ॥ ೧೨ ॥

---

೮. ಭೂತದಯೆ, ಅಸೂಯೆಪಡದಿರುವುದು, ಶುಭವಾಕ್ಕು, ಕ್ಷಮೆ, ದಯಾ, ಅನಾಯಾಸ, ಶುಚಿತ್ವ, ಅಸ್ಪೃಹತಾ, ವ್ರತಾಚರಣ,

೯. ಈ ಗುಣಗಳು ಬ್ರಹ್ಮಪ್ರಾಪ್ತಿಗೆ ಕಾರಣವಾದುವುಗಳೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿವೆ. ಇನ್ನು ಶುಭಕರಗಳಾಗಿರುವ ಬ್ರಾಹ್ಮಣರ ವೃತ್ತಿಗಳಾವುವೆಂಬುದನ್ನು ಹೇಳುವೆನು.

೧೦. ಸತ್ಪಾತ್ರದಲ್ಲಿ ವೇದಾಭ್ಯಾಸ, ಶಾಸ್ತ್ರಾಭ್ಯಾಸ, ಸತ್ಯ, ಸುಳ್ಳಾಡದಿರುವುದು, ದಾನಸ್ವೀಕಾರ, ವ್ಯಾಪಾರ ಇವು ಬ್ರಾಹ್ಮಣನ ವೃತ್ತಿಗಳು. ಆದರೆ ಆ ಆರುವೃತ್ತಿಗಳಲ್ಲಿ ಉತ್ತರೋತ್ತರ (ಕಡೆಕಡೆಯ) ವೃತ್ತಿಯನ್ನು ಅನುಸರಿಸುವುದು ಅಷ್ಟು ಶ್ರೇಷ್ಠವಲ್ಲ

೧೧ ಮೇಲೆ ಹೇಳಿದ ಪ್ರತಿಗ್ರಹವಾಣಿಜ್ಯಾದಿ ವೃತ್ತಿಗಳು ಬ್ರಾಹ್ಮಣರಿಗೆ ಜೀವನನಿರ್ವಾಹಕವಾದ ವೃತ್ತಿಯೆಂದು ಹೇಳಿದೆ. ಇವುಗಳಲ್ಲಿ ಯಾವುದೊಂದನ್ನಾದರೂ ಆಶ್ರಯಿಸಿ ಜೀವನಯಾತ್ರೆಯನ್ನು ನಡೆಯಿಸಬಹುದು. ಆದರೆ ಅದನ್ನೂ ಶಾಸ್ತ್ರೋಕ್ತವಾಗಿ ಆಚರಣೆಮಾಡಬೇಕು.

೧೨. ಪ್ರತಿದಿನವೂ ಸ್ನಾನಮಾಡಿ ಶುಚಿಯೂ ಸುಗಂಧಯುಕ್ತನೂ, ಪೂಜ್ಯನೂ ಆಗಿದೇವತೆಗಳನ್ನು ಪೂಜಿಸಬೇಕು. ದೇವಪೂಜಾಕಾರ್ಯಗಳನ್ನೆಲ್ಲಾ ಇನ್ನೊಬ್ಬರ ಸಹಾಯವಿಲ್ಲದೆ ತಾನೇ ಮಾಡಿಕೊಳ್ಳಬೇಕು.

ನೇಕ್ಷೇತಾರ್ಕಂ ನ ನಗ್ನಾಂ ಸ್ತ್ರೀಂ ನ ಚ ಸಂಸ್ಪೃಷ್ಟಮೈಥುನಂ ।
ನಾಪ್ಸು ಮೂತ್ರಂ ಪುರೀಷಂ ವಾ ನಾ ಶುಚೀ ರಾತ್ರಿತಾರಕಾಃ ॥ ೧೩ ॥

ಶಾಸ್ತ್ರೋಕ್ತಾ ಯಂತ್ರಣಾ ಯಾ ತು ನಾನುಕ್ತಾನಿ ವ್ರತಾನಿ ತು ।
ಸ್ವರ್ಗಾರ್ಥಂ ಸಾಧಯೇತ್ತೈಶ್ಚ ಶಕ್ತಿಮಾನ್ಮನಸಸ್ತಥಾ ॥ ೧೪ ॥

ನಿತ್ಯಾನಿ ಕೇಚಿದಿಚ್ಛಂತಿ ಕಾಮ್ಯಾನಿ ಚ ತಥಾಽಪರೇ ।
ಕಾಮ್ಯಪ್ರವೃತ್ತೌ ಸಂಗೇ ಚ ಪ್ರಾಯಶ್ಚಿತ್ತಂ ವಿಧೀಯತೇ ॥ ೧೫ ॥

ವ್ರತಾನಿ ಮನಸಾತ್ವಿಷ್ಟಸಂಕಲ್ಪ ಇತಿ ಮಾನಸಃ ।
ಅಂತರಾನುಫಲಂ ಯತ್ತದೃಷಿವಾದಃ ಪ್ರಕೀರ್ತಿತಃ ॥ ೧೬ ॥

---

೧೩. ಸೂರ್ಯನನ್ನು ದೃಷ್ಟಿಸಿನೋಡಬಾರದು, ಬತ್ತಲೆಯಾಗಿರುವ ಸ್ತ್ರೀಯನ್ನು ನೋಡಬಾರದು, ರತಿಕ್ರೀಡಾವಿಹಾರಕ್ಕೋಸ್ಕರ ಉದ್ಯುಕ್ತರಾಗಿರುವ ದಂಪತಿಗಳನ್ನು ನೋಡಬಾರದು, ನೀರಿನಲ್ಲಿ ಮೂತ್ರ ಮತ್ತು ಮಲ ಇವನ್ನು ವಿಸರ್ಜನೆಮಾಡಬಾರದು ರಾತ್ರಿವೇಳೆಯಲ್ಲಿ ಅಶುಚಿಯಾಗಿ ನಕ್ಷತ್ರಗಳನ್ನೂ ಸಹ ನೋಡಬಾರದು.

೧೪. ಬ್ರಾಹ್ಮಣನಿಗೆ ಆಚರಿಸತಕ್ಕದೆಂದು ಹೇಳಿರುವ ವ್ರತಗಳನ್ನೇ ಶಾಸ್ತ್ರೋಕ್ತನಿಯಮದಿಂದ ಮನಃಪೂರ್ವಕವಾಗಿಯೂ, ತನ್ನ ಶಕ್ತ್ಯನುಸಾರವಾಗಿಯೂ ಸ್ವರ್ಗಪ್ರಾಪ್ತಿಗೋಸ್ಕರ ಆಚರಿಸಬೇಕು.

೧೫. ಕೆಲವರು ನಿತ್ಯಕರ್ಮಗಳನ್ನೂ ಮುಖ್ಯವಾಗಿ ಮಾಡಬೇಕೆಂದು ಕೆಲವರು ಕಾಮ್ಯಕರ್ಮಗಳನ್ನೂ ಮಾಡಬೇಕೆಂದೂ ಇಚ್ಛಿಸುತ್ತಾರೆ. ಕಾಮ್ಯಕರ್ಮಗಳನ್ನು ಮಾಡುವ ಸಂಭವದಲ್ಲಿ ನಿತ್ಯಕರ್ಮಗಳಿಗೆ ತಡೆಯುಂಟಾದರೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.

೧೬. ವ್ರತಗಳನ್ನು ಮನಸ್ಸಿನಲ್ಲಿಯೇ ಆಚರಿಸಬೇಕೆಂದು ಸಂಕಲ್ಪಿಸುವುದು ಮಾನಸವ್ರತವು. ಈ ಮಾನಸವ್ರತವು ಫಲರಹಿತ (ಅಂತರಾನುಫಲ)ವಾಗಿರಬೇಕೆಂದು ಋಷಿಗಳು ಹೇಳುವರು.

**ಅನಧ್ಯಾಯಂ ಸ್ವಯಂ ಸಮ್ಯಗ್ವರ್ಜಯೇತ್ಫಲಸಾಧನಂ ।**
**ಆತ್ಮಾ ಶುದ್ಧಸ್ತಥಾ ದೇಶೋ ಹ್ಯಸುಹಾರಃ ಪ್ರಜಾಪದಃ ॥ ೧೭ ॥**

**ಅಶುಭಾನಿ ನಿಮಿತ್ತಾನಿ ಉತ್ಪಾತೋ ವಿಕೃತಂ ತಥಾ ।**
**ಪರ್ವಾಣಿ ಮನಸೋಽಶುದ್ಧಿರನಧ್ಯಾಯ ಇತಿ ಸ್ಮೃತಃ ॥ ೧೮ ॥**

**ಅನಧ್ಯಾಯಾಶ್ಚ ದೃಷ್ಟಾರ್ಥಾ ಅದೃಷ್ಟಾರ್ಥಾಸ್ತಥಾಽಪರೇ ।**
**ವೇದಾನಧ್ಯಯನಂ ಚೇತಿ ತ್ರಿಧಾ ಮಧ್ಯಾನದರ್ಶನಂ ॥ ೧೯ ॥**

**ಅಭಕ್ಷ್ಯಂ ಸರ್ವವರ್ಣಾನಾಂ ಶಾವಾಶೌಚಂ ಜಗಾಧಿಪ ।**
**ದ್ರವ್ಯಶುದ್ಧಿಸ್ತಥೈವ ಸ್ಯಾದನ್ಯಥಾ ತ್ವಸಮಂಜಸಂ ॥ ೨೦ ॥**

---

೧೭. ಫಲಸಾಧನವಾದ ಅನಧ್ಯಯನಗಳನ್ನು ನಿಷ್ಕರ್ಷೆಯಾಗಿತಿಳಿದುಕೊಂಡು ಆ ಕಾಲಗಳಲ್ಲಿ ಅಧ್ಯಯನಾದಿಯಾದ ವ್ರತಾಚರಣೆ ಮಾಡಬಾರದು. ಪರಪ್ರೇರಣೆಯಿಲ್ಲದೆ ತಾನೇ ತಿಳಿದು ಈ ಅನಧ್ಯಾಯಗಳನ್ನು ಆಚರಿಸಬೇಕು. ಆತ್ಮಶುದ್ಧಿಯಿಲ್ಲದಿರುವಿಕೆ, ದೇಶವು ಅಶುದ್ಧವಾಗಿರುವುದು, ಪ್ರಾಣಾಪಾಯವೊದಗಿದ ಸಂದರ್ಭ, ಪ್ರಜೆಗಳಿಗೆ ಆಪತ್ತುಂಟಾಗಿರುವ ಕಾಲ, ಇವೂ ಅನಧ್ಯಯನಕಾಲಗಳೆಂದು ತಿಳಿಯಬೇಕು.

೧೮. ಅಶುಭನಿಮಿತ್ತಸೂಚಕವಾದ ಶಕುನಗಳು, ಧೂಮಕೇತು ಉಲ್ಕಾಪಾತ ಮೊದಲಾದುವು ಕಾಣಿಸುವುದು, ವಿಕೃತಕಾಲಗಳು, ಗ್ರಹಣ ಮೊದಲಾದ ಪರ್ವಕಾಲಗಳು, ಮನಸ್ಸು ಶುಚಿಯಾಗಿಲ್ಲದಿರುವಿಕೆ ಇವೂ ಸಹ ಅನಧ್ಯಯನವೆಂದು ಹೇಳಿದೆ.

೧೯. ಅನಧ್ಯಯನಗಳಲ್ಲಿ ದೃಷ್ಟಾರ್ಥಾನಧ್ಯಯನ, ಅದೃಷ್ಟಾರ್ಥಾನಧ್ಯಯನ, ವೇದಾನಧ್ಯಯನ ಎಂಬದಾಗಿ ಮೂರುವಿಧವಾಗಿದೆ ಇಂಥಾ ದಿನಗಳಲ್ಲಿ ನನ್ನನ್ನು ನಿಯಮದಿಂದ ಧ್ಯಾನಮಾಡಬಾರದು.

೨೦. ಎಲೈ ಖೇಚರಾಧಿಪತಿಯಾದ ಅರುಣ! ಶವವನ್ನು ಸಾಗಿಸದೇ ಇರುವಾಗ, ಆಶೌಚಾನ್ನವು ಎಲ್ಲವರ್ಣಗಳವರಿಗೂ ನಿಷೇಧವಾದುದು. ಆದರೆ ಪಕ್ವವಾಗದೆ ಇರುವ ದ್ರವ್ಯಗಳು ಮಾತ್ರ ನಿಷೇಧವಲ್ಲ. ಅದೇ ದ್ರವ್ಯಗಳು ರೂಪಾಂತರವನ್ನು ಹೊಂದಿದರೆ ಮಾತ್ರ ಅವು ಅಭಕ್ಷ್ಯಗಳೆನಿಸುವುವು.

**ಜಾತಿದುಷ್ಟಂ ಕ್ರಿಯಾದುಷ್ಟಂ ಕಾಲದುಷ್ಟಂ ವಿದೂಷಿತಂ ।**
**ಸಂಸರ್ಗಾಶ್ರಯದುಷ್ಟಂ ಚ ಸಹೃಲ್ಲೇಖಂ ಸ್ವಭಾವತಃ ॥ ೨೧ ॥**

**ಲಶುನಂ ಗೃಂಜನಂ ಚೈವ ಪಲಾಂಡುಂ ಕನಕಾನಿ ಚ ।**
**ವಾರ್ತಾಕಂ ನಾಲಿಕೇರಂ ತು ಮೂಲಕಂ ಜಾತಿದುಷ್ಟಕಂ ॥ ೨೨ ॥**

**ನೋ ಭುಂಜೀತ ಕ್ರಿಯಾದುಷ್ಟಂ ದುಷ್ಟಂ ಚ ಪತಿತೈಃ ಪೃಥಕ್ ।**
**ಕಾಲದುಷ್ಟಂ ತು ವಿಜ್ಞೇಯಂ ಹಾನಿದಂ ಚಿರಸಂಸ್ಥಿತಂ ॥ ೨೩ ॥**

**ದಧಿಭಕ್ಷ್ಯವಿಕಾರಾಶ್ಚ ಮಧುವರ್ಜ್ಯಾಸ್ತ್ರದಿಷ್ಯತೇ ।**
**ಸುರಾಲಶುನಸಂಸ್ಪೃಷ್ಟಂ ಪೇಯೂಷಾದಿಸಮನ್ವಿತಂ ॥ ೨೪ ॥**

**ಸಂಸರ್ಗದುಷ್ಟಮೇತದ್ಧಿ ಶುನೋಚ್ಛಿಷ್ಟಂ ಖಗೇಶ್ವರ ॥ ೨೫ ॥**

---

೨೧. ಪದಾರ್ಥಗಳಲ್ಲಿ ಜಾತಿದುಷ್ಟ, ಕ್ರಿಯಾದುಷ್ಟ, ಕಾಲದುಷ್ಟ, ಸಂಸರ್ಗದಿಂದ ದುಷ್ಟವಾದುವು, ಸ್ವಭಾವತಃ ಮನಸ್ಸಿಗೆ ರುಚಿಸದೇ ಇರುವುವು ಎಂದು ದುಷ್ಟ ಪದಾರ್ಥಗಳು ಅನೇಕ ವಿಧವಾಗಿರುವುವು.

೨೨. ಸಣ್ಣಬೆಳ್ಳುಳ್ಳಿ, ದಪ್ಪಬೆಳ್ಳುಳ್ಳಿ, ಈರುಳ್ಳಿ, ಕನಕ, (ಉನ್ಮತ್ತಿ) ಬದನೇ ಕಾಯಿ, ತೆಂಗಿನಕಾಯಿ, ಮೂಲಂಗಿ ಇವು ಜಾತಿದುಷ್ಟವೆನಿಸಿದ ಪದಾರ್ಥಗಳು.

೨೩. ಕ್ರಿಯಾದುಷ್ಟವೆನಿಸಿದ ಪದಾರ್ಥಗಳನ್ನು ಉಪಯೋಗಿಸಬಾರದು. ಪತಿತರ ಸೋಂಕಿನಿಂದ ದೂಷಿತವಾದುದನ್ನೂ ಭುಂಜಿಸಬಾರದು. ಪಕ್ವವಾಗಿ ಬಹಳ ಕಾಲದಿಂದಲೂ ಮಿಕ್ಕಿರುವ ಹಾನಿಕರವಾದ ವಸ್ತುಗಳು ಎಂದರೆ ಹಳಸಿದ ಪದಾರ್ಥಗಳು ಇವುಗಳೆಲ್ಲ ಕಾಲದುಷ್ಟಗಳೆನಿಸುವುವು; ಆದುದರಿಂದ ಇವನ್ನೂ ಭಕ್ಷಿಸಬಾರದು.

೨೪. ಮೊಸರಿನೊಡನೆ ಕೆಲವು ಭಕ್ಷ್ಯಗಳಿಗೆ ಸಂಸರ್ಗವಾದರೆ (ಎಂದರೆ ತೈರೊಡೆ ಇತ್ಯಾದಿಗಳು) ತಿನ್ನಲು ಯೋಗ್ಯವಾಗುವುವು. ಆದರೆ ಆ ಪದಾರ್ಥಕ್ಕೆ ಜೇನುತುಪ್ಪದ ಸಂಬಂಧವಿದ್ದರೆ ಮಾತ್ರ ಅದನ್ನು ಭಕ್ಷಣೆಮಾಡಬಾರದು.

೨೫. ಮದ್ಯ ಮತ್ತು ಬೆಳ್ಳುಳ್ಳಿ ಇವು ಸೋಕಿದ ಪೇಯದ್ರವ್ಯಗಳನ್ನು ವರ್ಜ್ಯ ಮಾಡಬೇಕು. ನಾಯಿಯು ತಿಂದು ಉಳಿದುದನ್ನು ತಿನ್ನಬಾರದು. ಎಲೈ ಪಕ್ಷಿ ರಾಜನೇ ! ಕೇಳು ; ಇವೆಲ್ಲವೂ ಸಂಸರ್ಗದುಷ್ಟವಾದ ಪದಾರ್ಥಗಳು.

ಶೂದ್ರಸಕ್ತಂ ಖಂಡಸಕ್ತಂ ಜ್ಞೇಯಮಾಶ್ರಯದೂಷಿತಂ ।
ವಿಚಿಕಿತ್ಸಾ ತು ಹೃದಯೇ ಭಕ್ಷ್ಯೇ ಯಸ್ಮಿನ್ನ ಜಾಯತೇ ॥ ೨೬ ॥

ಸಹೃಲ್ಲೇಖಂ ತು ತಜ್ಜ್ಞೇಯಂ ಪುರೀಷಂ ತು ಸ್ವಭಾವತಃ ।
ರಸದುಷ್ಟೇ ವಿಕಾರೋಽಪಿ ರಸಸ್ಯೇತಿ ಪ್ರದರ್ಶಿತಃ ॥ ೨೭ ॥

ಪಾಯಸಂ ಕ್ಷೀರಪಾಕಾದಿ ತಸ್ಮಿನ್ನೇವ ದಿನೇ ತಥಾ ।
ಯಥಾಶಾಸ್ತ್ರಂ ಖಗಶ್ರೇಷ್ಠ ಭಕ್ಷ್ಯಾಭಕ್ಷ್ಯೇ ನಿರೂಪಯೇತ್ ॥ ೨೮ ॥

ಪ್ರಾಣಾತ್ಯಯೇ ಪ್ರೋಕ್ಷಿತಂ ಚ ಶ್ರಾದ್ಧೇ ಚ ದ್ವಿಜಕಾಮ್ಯಯಾ ।
ಪಿತೃನ್ದೇವಾಂಶ್ಚಾರ್ಚಯಿತ್ವಾ ಭುಂಜನ್ಮಾಂಸಂ ನ ದೋಷಭಾಕ್ ॥ ೨೯ ॥

---

೨೬. ಶೂದ್ರನು ಮುಟ್ಟಿದ ಪಕ್ವಪದಾರ್ಥವೂ, ಮಾಂಸಸಂಬಂಧವುಳ್ಳ ಪದಾರ್ಥವೂ ಸಹ ಆಶ್ರಯದೂಷಿತವಾದುವುಗಳೆಂದು ತಿಳಿಯಬೇಕು. ಪದಾರ್ಥಗಳು ದುಷ್ಟವೋ ಅದುಷ್ಟವೋ ಎಂಬ ವಿಷಯದಲ್ಲಿ ಸಂದೇಹವುಂಟಾಗುವ ಹಾಗಿದ್ದರೆ ಮನಸ್ಸಿಗೆ ಒಗ್ಗುವುದೋ ಇಲ್ಲವೋ ಎಂಬುದನ್ನು ನೋಡಿ ಗ್ರಾಹ್ಯಾಗ್ರಾಹ್ಯವನ್ನು ನಿಶ್ಚಯಿಸಬೇಕು.

೨೭. ಈ ವಿಧವಾಗಿ ನಿಶ್ಚಯಿಸುವುದಕ್ಕೆ ಹೃಲ್ಲೇಖವೆಂದು ಹೇಳುವರು. ಅಮೇಧ್ಯವು ಸ್ವಭಾವತಃ ದೂಷಿತವಾದುದು. ರಸವಿಕಾರಗಳೂ ರಸದುಷ್ಟಗಳಲ್ಲಿ ಪರಿಗಣಿಸಲ್ಪಟ್ಟಿವೆ.

೨೮. ಅಯ್ಯಾ ಖಗಶ್ರೇಷ್ಠನೇ! ಕ್ಷೀರಪಾಕ ಮೊದಲಾದವುಗಳಿಂದ ಸಿದ್ಧವಾದ ಪಾಯಸವು ಶಾಸ್ತ್ರಾನುಸಾರವಾಗಿ ಆ ದಿವಸ ತಿನ್ನಲುಮಾತ್ರ ಯೋಗ್ಯವಾದುದು. ಮಾರನೆಯದಿನ ಅವನ್ನು ತಿನ್ನಬಾರದು. ಹೀಗೆ ಭಕ್ಷ್ಯ, ಅಭಕ್ಷ್ಯ ಇವುಗಳನ್ನು ವಿಚಾರದಿಂದ ತಿಳಿದುಕೊಂಡು ಉಪಯೋಗಿಸಬೇಕು.

೨೯. ಪ್ರಾಣಹೋಗುವ ಸಂದರ್ಭವೊದಗಿದಾಗ ಎಂದರೆ ಇತರ ಆಹಾರಪದಾರ್ಥಗಳಾವುವೂ ದೊರೆಯದೆ ಕೇವಲ ಮಾಂಸವೊಂದೇ ಸಮಯದಲ್ಲಿ ದೊರೆತು, ತುಂಬಾ ಹಸಿವಿನಿಂದ ಕೂಡಿ ಮರಣಾವಸ್ಥೆಯುಂಟಾಗಿರುವ ಸಮಯವಾಗಿದ್ದರೆ ಮಾಂಸವನ್ನು ತಿನ್ನಬಹುದು. ಮತ್ತು ಶ್ರಾದ್ಧಕಾಲದಲ್ಲಿ ಪಿತೃಗಳಿಗೂ, ದೇವತೆಗಳಿಗೂ ನಿವೇದನಮಾಡಿ ಅವರಿಗೆ ಸಮರ್ಪಿಸಿದನಂತರ ಉಳಿದಿರುವ ಮಾಂಸವನ್ನು ತಿಂದರೆ ದೋಷಭಾಗಿಯಾಗುವುದಿಲ್ಲ.

**ಪ್ರೇತಾಶುದ್ಧಿಃ ಸಪಿಂಡಾನಾಂ ತಸ್ಮಿನ್ನೇವ ಮೃತೇಽಹನಿ ।**
**ದಶಾಹಂ ದ್ವಾದಶಾಹಂ ವಾ ಪಕ್ಷಂ ಮಾಸಂ ತ್ವಶುದ್ಧತಾ ॥ ೩೦ ॥**

**ದಶಾಹಾದಿಕ್ರಿಯಾಭಾಗಾ ವರ್ಣಶೋ ನ ಭವಂತಿ ಹಿ ।**
**ದಶಾಹೇನ ತು ಭೋಜ್ಯಾಃ ಸ್ಯುಃ ಸೂತಕಾಶೌಚಯೋಸ್ತಥಾ ॥ ೩೧ ॥**

**ಊರ್ಧ್ವಂ ದಶಾಹಾದೇಕಾಹಶ್ರವಣೇ ಸತಿ ಜಾಯತೇ ।**
**ಸಂವತ್ಸರೇ ವ್ಯತೀತೇ ತು ಸ್ನಾನಾದೇವ ವಿಶುದ್ಧ್ಯತಿ ॥ ೩೨ ॥**

**ಸಮಾನೋದಕತಾ ಪ್ರೋಕ್ತಾ ಜನ್ಮನಾಮ್ನೋರಪರ್ಯಯೇ ।**
**ಸಪಿಂಡಾಃ ಸಪ್ತ ಪುರುಷಾಃ ಶ್ರುತಾವೇತನ್ನಿದರ್ಶನಂ ॥ ೩೩ ॥**

---

೩೦. ಯಾರಾದರೂ ಮೃತರಾದರೆ ಸಪಿಂಡರಿಗೆ ಆ ಮೃತದಿನದಿಂದಲೇ ಅಶುದ್ಧಿಯುಂಟಾಗುವುದು. ಹತ್ತುದಿವಸ ಪರ್ಯಂತ, ಹನ್ನೆರಡುದಿನ, ಹದಿನೈದುದಿನ, ಅಥವಾ ಮೂವತ್ತುದಿನಗಳವರೆಗೆ ಕೆಲಕೆಲವರಿಗೆ ಅಶೌಚವಿರುವುದು. ಇದು ಸಪಿಂಡೀಕರಣ ಸಂಬಂಧವಾದ ಅಶೌಚ.

೩೧. ಜಾತಾಶೌಚದಲ್ಲಾಗಲಿ ಅಥವಾ ಮೃತಾಶೌಚದಲ್ಲಾಗಲಿ ಹತ್ತು ದಿವಸಗಳವರೆಗೆ ತಮಗೆ ಮೈಲಿಗೆ ಇರುವ ಕಾರಣ ಇತರರನ್ನು ಭೋಜನಕ್ಕೆ ಕರೆಯಬಾರದು ದಶಾಹಾದಿ ಕ್ರಿಯಾಭಾಗಗಳು ಎಲ್ಲಾ ವರ್ಣಗಳಿಗೂ ಒಂದೇ ರೀತಿ ಇರುವುದಿಲ್ಲ. ಬೇರೆಬೇರೆ ವರ್ಣಗಳವರಿಗೆ ಬೇರೆಬೇರೆರೀತಿ ಕರ್ಮಗಳು ಉಕ್ತವಾಗಿವೆ.

೩೨. ಹತ್ತುದಿವಸ ಕಳೆದಮೇಲೆ ಆಶೌಚವಿಚಾರ ತಿಳಿದರೆ ಒಂದುದಿನ ಆಶೌಚವಿದ್ದಮೇಲೆ ಶುದ್ಧಿಯುಂಟಾಗುವುದು. ಸಂವತ್ಸರ ಕಳೆದಮೇಲೆ ತಿಳಿದರೆ ಕೇವಲ ಸ್ನಾನಮಾತ್ರದಿಂದಲೇ ಶುದ್ಧಿಯುಂಟಾಗುವುದೆಂದು ತಿಳಿಯಬೇಕು.

೩೩. ಜಾತಿ ಮತ್ತು ಹೆಸರು ಇವುಗಳು ಬದಲಾಯಿಸದೆ ಇದ್ದರೆ ಏಳುತಲೆಗಳವರೆಗೆ ಸಮಾನೋದಕತ್ವವುಂಟೆಂದೂ ಸಂಪಿಂಡರೆಂದೂ ಶ್ರುತಿಯಲ್ಲಿ ಹೇಳಿದೆ.

ಆ ದಂತಜನ್ಮನಃ ಸದ್ಯ ಆಚೂಡಾನ್ನೈಶಿಕೀ ಸ್ಮೃತಾ ।
ತ್ರಿರಾತ್ರಮಾವ್ರತಾದೇಶಾತ್ಸಪಿಂಡೇಷು ಮೃತೇಷು ಚ ॥ ೩೪ ॥

ತೇಷಾಮಪಿ ತದೇಕಂ ಸ್ಯಾದ್ವಯೋವಸ್ಥಾಪ್ಯಪೇಕ್ಷ್ಯತೇ ।
ಸಮಾನೋದಸ್ತ್ರಿರಾತ್ರೇಣ ಶುದ್ಧ್ಯೇದ್ವೈ ಮೃತ್ಯುಜನ್ಮನೋಃ ॥ ೩೫ ॥

ಗರ್ಭಸ್ರಾವೇ ತ್ರಿರಾತ್ರೇಣ ಉದಕ್ಯಾ ಶುದ್ಧ್ಯತೇ ತಥಾ ।
ಅನಂತಜನ್ಮಮರಣೇ ತಚ್ಛೇಷೇಣ ವಿಶುದ್ಧ್ಯತಿ ॥ ೩೬ ॥

ದ್ವಿಜಾನಾಂತ್ವೇವಮೇವ ಸ್ಯಾತ್ಪಿತ್ರರ್ಥಂ ಮಾತುರೇವ ವಾ ।
ಅಗ್ನಿಹೋತ್ರಾರ್ಥಂ ವಿಜ್ಞೇಯಂ ಸದ್ಯಃ ಶೌಚಮಿತಿ ಸ್ಥಿತಿಃ ॥ ೩೭ ॥

---

೩೪. ಮಗುವು ಹಲ್ಲುಹುಟ್ಟುವುದರೊಳಗೆ ಮೃತವಾದರೆ ಆಕ್ಷಣ ಸ್ನಾನಮಾತ್ರ ದಿಂದ ಶುದ್ಧಿಯಾಗುವುದು. ಚೂಡಾಕರ್ಮವಾಗುವ ವಯಸ್ಸಿನವರೆಗೂ ಎಂದರೆ ಮೂರುವರ್ಷ ಅಥವಾ ಐದುವರ್ಷಗಳವರೆಗೆ ಬದುಕಿದ್ದು ಮೃತವಾದರೆ ಒಂದುರಾತ್ರಿ ಆಶೌಚವುಂಟೆಂದೂ, ಉಪನಯನಕಾಲ ಮೀರುವವರೆಗೆ ಎಂದರೆ ಎಂಟುವರ್ಷ ಬೆಳೆದು ಮೃತವಾದರೆ ಮೂರುದಿವಸ ಆಶೌಚವುಂಟೆಂದೂ ತಿಳಿಯಬೇಕು. ಹೀಗೆಯೇ ಸಪಿಂಡರು ಮೃತರಾದಾಗಲು ಆಶೌಚವನ್ನು ನಿರ್ಣಯಿಸಿ ಅನುಷ್ಠಾನಮಾಡಬೇಕು.

೩೫. ಅವರುಗಳೂ ಆಶೌಚಾನುಷ್ಠಾನಕ್ಕೂ ವಯಸ್ಸಿನ ಪರಿಣಾಮವನ್ನು ತಿಳಿಯಬೇಕು. ಸಮಾನೋದಕಳಾದ ಸ್ತ್ರೀಯಾದರೋ ಜಾತಾಶೌಚ ಮೃತಾಶೌಚ ಗಳಲ್ಲಿ ಮೂರುರಾತ್ರಿಗಳು ಆಶೌಚಾನುಷ್ಠಾನದಿಂದಲೇ ಪರಿಶುದ್ಧಳಾಗುವಳು.

೩೬. ಗರ್ಭಸ್ರಾವವಾದಾಗಲೂ ಸಹ, ಸ್ತ್ರೀಯು ಋತುಮತಿಯಾದಾಗಿನಂತೆ ಮೂರುರಾತ್ರಿಗಳನ್ನು ಕಳೆದಮೇಲೆ ಪರಿಶುದ್ಧಳಾಗುವಳು. ಪ್ರಬಲವಾದ ಒಂದು ಜಾತಾಶೌಚ ಅಥವಾ ಮೃತಾಶೌಚ ಮುಗಿಯುವುದರ ಮಧ್ಯದಲ್ಲಿ ದುರ್ಬಲವಾದ ಬೇರೆ ಜಾತಾಶೌಚ ಮೃತಾಶೌಚಗಳು ಬಂದುಒದಗಿದರೆ ಅದಕ್ಕೋಸ್ಕರ ಅದು ತಿಳಿದ ದಿನದಿಂದ ಆರಂಭಿಸಿ ಪೂರ್ಣವಾಗಿ ಆಶೌಚಾನುಷ್ಠಾನಮಾಡಬೇಕಾದ ಅಗತ್ಯವಿಲ್ಲ ಪ್ರಬ ಲಾಶೌಚದಿನಗಳ ಶೇಷದಿನಗಳ ಅನುಷ್ಠಾನದಿಂದಲೇ ಅದೂ ನಿವೃತ್ತಿಯಾಗುವುದು.

೩೭. ಬ್ರಾಹ್ಮಣರಿಗೆ ಮಾತೃಮೃತಿಯ ವಿಷಯವು ಪಿತೃವಿನ ಆಶೌಚದೊಳಗೇ ಸೇರಿಹೋಗುವುದು. ಇವೆಲ್ಲಾ ಅಗ್ನಿಹೋತ್ರಾನುಷ್ಠಾನ ಮಾಡುವುದಕ್ಕೆ ಏರ್ಪಡಿಸಿ ರುವ ಸದ್ಯಃಶೌಚವೆಂದು ತಿಳಿಯಬೇಕು.

ಅಸಪಿಂಡೇ ತು ನಿರ್ಹಾರಾ ತ್ರಿರಾತ್ರಮಪಿ ಮಾನವಃ ।
ತಸ್ಯೈವಾನುಗತೌ ಜ್ಞೇಯಂ ಸದ್ಯಃ ಶೌಚಂ ಖಗಾಧಿಪ ॥ ೩೮ ॥

ಶುದ್ಧ್ಯೇದ್ದ್ವಿಜೋ ದಶಾಹೇನ ಜನ್ಮಹಾನೌ ದ್ವಿಯೋನಿಷು ।
ಷಡ್ಭಿಸ್ತ್ರಿಭಿರಹ್ನೈಕೇನ ಕ್ಷತ್ರವಿಟ್ಛೂದ್ರಯೋನಿಷು ॥ ೩೯ ॥

ಉಕ್ತಾಶೌಚಂ ಯಥಾನ್ಯಾಯಂ ಶರೀರಂ ತತ್ತ್ವದರ್ಶಿಭಿಃ ।
ದ್ರವ್ಯಶುದ್ಧಿವಿಧಾನಂ ತು ಯಥಾವದಭಿಧೀಯತೇ ॥ ೪೦ ॥

ತೈಜಸೀಮಾರ್ತಿಕೀ ವೀರ ವಾರಿಶುದ್ಧಿಃ ಸ್ಮೃತಾ ತಥಾ ।
ನಿರ್ಲೇಪಕ್ಷಾಲನೇನೈವ ಸ್ಪರ್ಶೇ ತು ಪ್ರೋಕ್ಷಣೇನ ವೈ ॥ ೪೧ ॥

---

೩೮. ಅಯ್ಯಾ ಖಗಶ್ರೇಷ್ಠನೇ! ಅಸಪಿಂಡನು ಎಂದರೆ ಗೋತ್ರಜನು ಮೃತನಾದರೆ ಆ ಮನುಷ್ಯನು ಮೂರುರಾತ್ರಿಗಳು ಆಹಾರ ತೆಗೆದುಕೊಳ್ಳದೆ ಆಶೌಚವಿರಬೇಕು. ಶವದ ಹಿಂದೆ ಅನುಸರಿಸಿ ಸ್ಮಶಾನಭೂಮಿಗೆ ಹೋಗುವ ಜನರು ಕೇವಲ ಸ್ನಾನಮಾತ್ರದಿಂದಲೂ, ವಿಪ್ರರಲ್ಲಿ ಪುರುಷರು ಸ್ನಾನ ಉಪವೀತಧಾರಣದಿಂದಲೂ ಶುದ್ಧರಾಗುವರು ಎಂದು ತಿಳಿಯಬೇಕು.

೩೯. ಬ್ರಾಹ್ಮಣನು ಜಾತಾಶೌಚ, ಮೃತಾಶೌಚಗಳನ್ನು ಹತ್ತುದಿನ ಆಚರಿಸಿದ ಅನಂತರ ಶುದ್ಧನಾಗುವನು. ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಕ್ರಮವಾಗಿ ಆರು ಮೂರು ಮತ್ತು ಒಂದು ದಿನಗಳ ಆಶೌಚಾನುಷ್ಠಾನದಿಂದ ಪರಿಶುದ್ಧರಾಗುವರೆಂದು ತಿಳಿಯಬೇಕು.

೪೦. ನ್ಯಾಯಾನುಸಾರವಾಗಿ ಆಶೌಚನಿವೃತ್ತಿಯಾಗಿ ಶರೀರಕ್ಕೆಶುದ್ಧಿಯುಂಟಾಗುವ ವಿಧಿಯನ್ನು ತತ್ತ್ವಜ್ಞರು ಈ ಪ್ರಕಾರ ಹೇಳಿದ್ದಾರೆ. ಇನ್ನು ದ್ರವ್ಯಶುದ್ಧಿಯಾಗುವ ವಿಧಾನವನ್ನು ಕ್ರಮವಾಗಿ ಹೇಳುತ್ತೇನೆ.

೪೧. ಎಲೈ ವೀರನೇ! ಅಗ್ನಿಶುದ್ಧಿ, ಮೃತ್ತಿಕಾಶುದ್ಧಿ, ಜಲಶುದ್ಧಿ, ದ್ರವ್ಯಶುದ್ಧಿ ಎಂದು ನಾಲ್ಕುವಿಧ. ಅಶುದ್ಧ ದ್ರವ್ಯದ ಸಂಪರ್ಕವುಂಟಾದರೆ ಸಂಪರ್ಕವಾಗಿ ಮೆತ್ತಿಕೊಂಡಿರುವುದು ಹೋಗುವಂತೆ ಉಜ್ಜಿ ತೊಳೆದರೆ ಶುದ್ಧಿಯಾಗುವುದು. ಮೆತ್ತಿಕೊಳ್ಳದೆ ಸ್ಪರ್ಶಮಾತ್ರವಾಗಿದ್ದರೆ ಕೇವಲ ಜಲಪ್ರೋಕ್ಷಣೆ ಮಾಡುವುದರಿಂದಲೇ ಪರಿಶುದ್ಧಿಯಾಗುವುದೆಂದು ತಿಳಿಯಬೇಕು.

ಅಶುದ್ಧಂ ನೈವ ಕಿಂಚಿದ್ಧಿ ದ್ರವ್ಯಮಸ್ತೀತಿ ಖೇಚರ ।
ವಚನಾಚ್ಛುದ್ಧ್ಯಶುದ್ಧೀ ತು ದ್ರವ್ಯಾಣಾಮಿಹ ಖೇಚರ ॥ ೪೨ ॥

ಸ್ನಾನಂ ಶೌಚಂ ಚ ಕರ್ತವ್ಯಂ ದ್ರವ್ಯಶೌಚಾದನಂತರಂ ।
ಪ್ರಾತಃಸ್ನಾನಂ ತು ನಿತ್ಯಂ ಸ್ಯಾದ್ಗ್ರಹಣೇ ಕಾಮ್ಯಮೇವ ಚ ॥ ೪೩ ॥

ನೈಮಿತ್ತಿಕಂ ಕ್ಷುರಾಶೌಚಂ ತೇನ ಪಾಪಾದ್ವಿಶುದ್ಧ್ಯತಿ ।
ಉಕ್ತಂ ತು ಶೌಚಂ ವಿಜ್ಞೇಯಂ ದೋಷಕ್ಷಯಕರಂ ಖಗ ॥ ೪೪ ॥

ಕರ್ಮಾಂಗಂ ಚೇತಿ ವಿಜ್ಞೇಯಂ ಷಟ್ಪ್ರಕಾರಾಃ ಸಮಾಸತಃ ।
ಏವಮಾಚಮನಂ ವಿದ್ಯಾದ್ವಿಶಿಷ್ಟಂ ತು ದ್ವಿಜನ್ಮನಾಂ ॥ ೪೫ ॥

---

೪೨. ಎಲೈ ಖೇಚರನೇ ! ಸ್ವತಃ ಅಶುದ್ಧವಾದ ದ್ರವ್ಯವು ಯಾವುದೂ ಇಲ್ಲವೆಂದು ತಿಳಿಯಬೇಕು. ವಸ್ತುಗಳಿಗೆ ಶುದ್ಧಿ, ಅಶುದ್ಧಿ, ಇವುಗಳನ್ನು ವಚನಗಳಿಂದ ನಿರ್ಣಯಿಸಬೇಕು. ಒಣಗಿ ಶುಭ್ರವಾದ ವಸ್ತ್ರವನ್ನು ಮೈಲಿಗೆಯು ಸೋಕಿದೆ ಎಂದು ಹೇಳುವವರ ಮಾತಿನ ಮೇಲೆ ಅದು ಅಶುದ್ಧವೆಂದು ನಿರ್ಣಯಿಸುವಂತೆ ಎಲ್ಲಾ ದ್ರವ್ಯಗಳ ಶುದ್ಧಿ ಮತ್ತು ಅಶುದ್ಧಿ ಇವುಗಳನ್ನು ತಿಳಿದವರ ಮಾತಿನಂತೆ ನಿರ್ಣಯಿಸಬೇಕು.

೪೩. ಪಾತ್ರೆಗಳನ್ನು ತೊಳೆದುಕೊಂಡು ಬಟ್ಟೆ ಮುಂತಾದುವುಗಳನ್ನು ಒಗೆದು ಶುದ್ಧಿಮಾಡಿದ ಮೇಲೆ ಸ್ನಾನಮಡಿಗಳನ್ನು ಮಾಡಿಕೊಳ್ಳಬೇಕು. ನಿತ್ಯವೂ ಪ್ರಾತಃಸ್ನಾನವನ್ನು ಮಾಡಲೇಬೇಕು. ಗ್ರಹಣಕಾಲದಲ್ಲಿ ಮಾಡುವ ಸ್ನಾನವು ಕಾಮ್ಯಸ್ನಾನವೆನಿಸುವುದು.

೪೪. ಕ್ಷೌರಮಾಡಿಸಿಕೊಂಡಾಗಿನ ಮೈಲಿಗೆಯು ನೈಮಿತ್ತಿಕವಾದುದು. ಆಗ ಸ್ನಾನಮಾಡುವುದರಿಂದ ಅದರ ಮೈಲಿಗೆ ಪರಿಹಾರವಾಗುವುದು. ಎಲೈ ಖಗನೇ ! ಈಗ ಹೇಳಿದ ಶೌಚವು ದೋಷನಾಶಕರವಾದುದೆಂದು ತಿಳಿಯಬೇಕು. ಅಲ್ಲದೆ ಇದು ಕರ್ಮಾಂಗವೆಂದೂ ತಿಳಿಯಬೇಕು.

೪೫. ಇದು ಒಟ್ಟಿನಲ್ಲಿ ಆರುಬಗೆಯೆಂದು ಹೇಳಿದೆ. ಆದುದರಿಂದ ಬ್ರಾಹ್ಮಣರಿಗೆ ಆಚಮನವು ಶುಚಿತ್ವಕ್ಕೆ ವಿಶೇಷ ಆವಶ್ಯಕವೆಂದು ತಿಳಿಯತಕ್ಕದ್ದು.

ತದಾ ಮೃತಾನಾಂ ತದ್ವತ್ಸ್ಯಾದನ್ಯೇಷಾಂ ತು ಯಥಾಸುಖಂ ।
ಕನ್ಯಾನಿವೃತ್ತಿಂ ಪುತ್ರೈಸ್ತು ಯಥಾನ್ಯಾಯ್ಯಂ ಸಮಾಚರೇತ್ ॥ ೪೬ ॥

ಕಲಾಶಿಲ್ಪಾನಿ ಸರ್ವಾಣಿ ಗೃಹ್ಣೀಯಾತ್ಪರಿತುಷ್ಟಯೇ ॥ ೪೭ ॥

ಶುಶ್ರೂಷೇತ ಪತಿಂ ಭಾರ್ಯಾ ಪರಿತೋಷಂ ಯಥಾ ವ್ರಜೇತ್ ।
ಗುರೂಣಾಂ ಪರಿತೋಷಶ್ಚ ಧರ್ಮಃ ಸ್ತ್ರೀಣಾಂ ಸನಾತನಃ ॥ ೪೮ ॥

ವೃದ್ಧಾ ಽ ಪುತ್ರಾ ಯದಿ ಮೃತಾ ತದಭಾವೇ ನೃಪಸ್ಯ ತು ।
ಮೃತಾಪತ್ಯಾಪ್ಯಗರ್ಭಾ ಚ ವೃದ್ಧಾಪತ್ಯಾ ಪತಿವ್ರತಾ ॥ ೪೯ ॥

ಕುರ್ಯಾದನಿವರ್ತಂ ಭರ್ತುರ್ಗತೇ ಸನ್ನಿಹಿತೇಽಪಿ ವಾ ।
ಏತಾಂ ಧರ್ಮಸಮಾಂ ನಿಷ್ಠಾಂ ಭರ್ತೃಲೋಕಮವಾಪ್ನುಯಾತ್ ॥ ೫೦ ॥

---

೪೬. ಮೃತರಾದವರ ಪಾಪನಾಶಕ್ಕೂ ಇತರರಿಗೆ ಸುಖವುಂಟಾಗುವುದಕ್ಕೂ ಹೀಗೆ ಆಶೌಚಾನುಷ್ಠಾನವು ವಿಹಿತವಾಗಿದೆ. ತಂದೆಯು ಮೃತನಾದ ಮೇಲೆ ಅವನ ಪುತ್ರರೇ ತಮ್ಮ ಸಹೋದರಿಯರಿಗೆ ವಿವಾಹ ಮುಂತಾದ್ದನ್ನು ನಡೆಯಿಸಬೇಕು.

೪೭. ಆಶೌಚಕಾಲದಲ್ಲಿ ಮೃತಿನಿಮಿತ್ತಿಕವಾದ ದುಃಖವನ್ನು ಮರೆಯುವುದಕ್ಕಾಗಿಯೂ, ಮನಸ್ತುಷ್ಟಿಗಾಗಿಯೂ ಕಲಾಶಿಲ್ಪಾದಿಗಳನ್ನು ಪರಿಗ್ರಹಿಸಬೇಕು.

೪೮. ಹೆಂಡತಿಯು ಪತಿಗೆ ಸಂತೋಷವಾಗುವಂತೆ ಶುಶ್ರೂಷೆಮಾಡಬೇಕು. ಸ್ತ್ರೀಯರಿಗೆ ಮಾವ ಮೊದಲಾದ ಗುರುಜನರನ್ನು ಶುಶ್ರೂಷೆಮಾಡಿ ಸಂತೋಷಪಡಿಸುವುದೂ ಸಹ ಪುರಾತನ ಧರ್ಮವಾಗಿದೆ.

೪೯. ಗಂಡನೂ ಮಕ್ಕಳೂ ಇಲ್ಲದೆ ಮುದುಕಿಯು ಮೃತಳಾದರೆ ಅವಳನ್ನು ಸಂಸ್ಕರಿಸುವ ಧರ್ಮವು ರಾಜನಿಗೇ ಸೇರಿದುದು. ಜನಿಸಿದ್ದ ಪುತ್ರನು ಮರಣವಾಗಿ ಮುಂದೆ ಗರ್ಭಿಣಿಯಾಗುವ ವಯಸ್ಸು ಮೀರಿದ ವೃದ್ಧೆಯೂ, ಪತಿವ್ರತೆಯೂ, ಆದ ನಾರಿಗೆ ಆದ ಗಂಡನಿದ್ದು ಮೃತಳಾದರೆ ಅವಳನ್ನು ಪತಿಯೇ ಸಂಸ್ಕರಿಸಬೇಕು.

೫೦. ಗಂಡನು ದೂರಹೋಗಿದ್ದರೂ, ಸಮೀಪದಲ್ಲಿದ್ದರೂ ಅವನಿಗೆ ಸುಖವಾಗಲೆಂದು ಪ್ರಾರ್ಥಿಸಿ ಪತ್ನಿಯು ಧರ್ಮಕಾರ್ಯಗಳನ್ನು ಆಚರಿಸಬೇಕು. ಈ ರೀತಿ ಧರ್ಮಕಾರ್ಯಗಳನ್ನು ಮಾಡಿದ ಸ್ತ್ರೀಯು ಪತಿಲೋಕವನ್ನು ಪಡೆಯುವಳು.

ಸ್ತ್ರೀಧರ್ಮಚಾರಿಣೀ ಸಾಧ್ವೀ ಮೃತಾ ದಾಹ್ಯಾ ತಥಾಽಗ್ನಿಭಿಃ ।
ವಿಪರೀತಾ ನ ದಾಹ್ಯಾ ತು ಪುನರ್ದಾರಕ್ರಿಯಾ ತಥಾ ॥ ೫೧ ॥

ಸ್ತ್ರೀಣಾಂ ನಿಯೋಗೋ ವಿಹಿತೋ ಮರಣಾದ್ಬ್ರಹ್ಮಚಾರಕಂ ।
ಪ್ರಾಪ್ಯಶ್ಚೈ ಯಥಾಧರ್ಮೋ ದೃಷ್ಟಾದೃಷ್ಟಫಲಪ್ರದಃ ॥ ೫೨ ॥

ತಸ್ಮಾದ್ಧರ್ಮಂ ಸದಾ ಕುರ್ಯಾತ್ಕುರ್ವತೀ ಸ್ವರ್ಗಮಾಪ್ನುಯಾತ್ ॥ ೫೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು
ಶುದ್ಧಿಪ್ರಕರಣ ವರ್ಣನಂ ನಾಮ ಷಡಶೀತ್ಯುತ್ತರ
ಶತತಮೋಽಧ್ಯಾಯಃ.



೫೧. ಸ್ತ್ರೀಧರ್ಮವನ್ನಾಚರಿಸುವ ಪತಿವ್ರತೆಯಾದ ಪತ್ನಿಯು ಮೃತಳಾದರೆ ಆಹಿತಾಗ್ನಿಯಾದ ಪತಿಯು ಅವಳನ್ನು ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ, ಎಂಬ ಮೂರು ಅಗ್ನಿಗಳಿಂದ ದಹನಮಾಡಬೇಕು. ಆದರೆ ಆಕೆ ಪತಿವ್ರತಾಧರ್ಮವನ್ನಾಚರಿಸದೆ ವಿಪರೀತಧರ್ಮಾವಲಂಬಿನಿಯಾಗಿದ್ದರೆ ಆ ರೀತಿ ದಹನಮಾಡಬಾರದು. ಆತನು ಬೇರೆ ಮದುವೆಮಾಡಿಕೊಳ್ಳಬೇಕು.

೫೨. ಸ್ತ್ರೀಯರು ಸಾಧ್ವಿಯಾದರೆ ಮರಣಪರ್ಯಂತವಾಗಿಯೂ ಬ್ರಹ್ಮಚರ್ಯೆಯನ್ನು ನಡೆಯಿಸಬೇಕೆಂದು ವಿಹಿತವಾಗಿದೆ. ದೃಷ್ಟಾದೃಷ್ಟಫಲ ಪ್ರಾಪ್ತಿಯನ್ನುಂಟು ಮಾಡುವಂತಹ ಈ ಧರ್ಮಾಚರಣೆಮಾಡಬೇಕು.

೫೩. ಆದುದರಿಂದ ಯಾವಾಗಲೂ ಧರ್ಮವನ್ನು ಬಿಡದೆ ಅನುಸರಿಸಬೇಕು ಹೀಗೆ ಮಾಡುವ ಸ್ತ್ರೀಯು ಸ್ವರ್ಗವನ್ನು ಹೊಂದುವಳು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದಲ್ಲಿ ಸೌರಧರ್ಮದ ಸಪ್ತಮೀ ಕಲ್ಪ
ದಲ್ಲಿ ಶುದ್ಧಿಪ್ರಕರಣ ವರ್ಣನೆಯೆಂಬ ನೂರಎಂಭತ್ತಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಸಪ್ತಾಶೀತ್ಯುತ್ತರಶತತಮೋಽಧ್ಯಾಯಃ

॥ ಅನೂರುರುವಾಚ ॥

ಕಾನಿ ಪುಣ್ಯಾನಿ ಕೃತ್ವೇಹ ಸ್ವರ್ಗಂ ಗಚ್ಛಂತಿ ಮಾನವಾಃ ।
ಮನುಷ್ಯಲೋಕೇ ಸಂಭೂತಾಃ ಸ್ವರ್ಲೋಕೇ ಗಾಮಿನಃ ಪರಂ ॥ ೧ ॥

ಕರ್ಮಯಜ್ಞಸ್ತಪೋಯಜ್ಞಃ ಸ್ವಾಧ್ಯಾಯೋ ಧ್ಯಾನನಿರ್ಮಿತಃ ।
ಜ್ಞಾನಯಜ್ಞಶ್ಚ ಪಂಚೈತೇ ಮಹಾಯಜ್ಞಾಃ ಪ್ರಕೀರ್ತಿತಾಃ ॥ ೨ ॥

ಏತೇಷಾಮೇವ ಯಜ್ಞಾನಾಮುತ್ತಮಃ ಕತಮಃ ಸ್ಮೃತಃ ।
ಏತದ್ಯಜ್ಞಫಲಾನಾಂ ಚ ಕಿಂ ಫಲಂ ಕಾ ಗತಿರ್ಭವೇತ್ ॥ ೩ ॥

---

## ನೂರಎಂಭತ್ತೇಳನೆಯ ಅಧ್ಯಾಯ

೧. "ಮನುಷ್ಯಲೋಕದಲ್ಲಿ ಹುಟ್ಟಿದ ಮಾನವರು ಯಾವ ಪುಣ್ಯಕರ್ಮಗಳನ್ನು ಮಾಡಿದರೆ ಉತ್ತಮವಾದ ಸ್ವರ್ಗಲೋಕವನ್ನು ಪಡೆಯುವರು ?"

೨. "ಕರ್ಮಯಜ್ಞ, ತಪೋಯಜ್ಞ, ವೇದಾಧ್ಯಯನಯಜ್ಞ, ಧ್ಯಾನಯಜ್ಞ, ಮತ್ತು ಜ್ಞಾನಯಜ್ಞ ಈ ಐದೂ ಮಹಾಯಜ್ಞಗಳೆಂದು ಹೇಳುವರಷ್ಟೆ."

೩. "ಈ ಐದು ಯಜ್ಞಗಳಲ್ಲಿ ಯಾವ ಯಜ್ಞವು ಉತ್ತಮವಾದುದು ? ಈ ಯಜ್ಞಗಳನ್ನು ಮಾಡುವುದರಿಂದ ಉಂಟಾಗುವ ಫಲವಾವುದು ? ಅವರಿಗೆ ಎಂತಹ ಗತಿಯುಂಟಾಗುವುದು ?"

ಧರ್ಮಾಽಧರ್ಮಪ್ರಭೇದಾಶ್ಚ ಕಿಯಂತಃ ಪರಿಕೀರ್ತಿತಾಃ ।
ತತ್ಸಾಧನಾನಿ ಕತಿಧಾ ಗತಯಶ್ಚ ಯಥಾ ವದ ॥ ೪ ॥

ಖಗ ನಾರಕಿಣಾಂ ಪುಂಸಾಮಾಗತಾನಾಂ ಪುನಃ ಕ್ಷಿತೌ ।
ಕಾನಿ ಚಿಹ್ನಾನಿ ಜಾಯಂತೇ ಭುಕ್ತಶೇಷೇಣ ಕರ್ಮಣಾ ॥ ೫ ॥

ಮಹಾಭವಾರ್ಣವಾದ್ಘೋರಾದ್ಧರ್ಮಾಧರ್ಮೋರ್ಮಿಸಂಕುಲಾತ್ ।
ಗರ್ಭಾದಿದುಃಖಫೇನಾಢ್ಯಾನ್ಮುಚ್ಯಂತೇ ದೇಹಿನಃ ಕಥಂ ॥ ೬ ॥

ಇತ್ಯುಕ್ತೋ ಭಗವಾನ್ಭಾನುಃ ಸರ್ವಪ್ರಶ್ನಾರ್ಥಮಾದರಾತ್ ।
ಪ್ರತ್ಯುವಾಚ ಮಹಾತೇಜಾಃ ಸಮಾಸವ್ಯಾಸಯೋಗತಃ ॥ ೭ ॥

॥ ಆದಿತ್ಯ ಉವಾಚ ॥

ಸ್ವರ್ಗಾಪವರ್ಗಫಲದಂ ನರಕಾರ್ಣವತಾರಣಂ ।
ಧರ್ಮಂ ಪಾಪಹರಂ ಪುಣ್ಯಂ ಶೃಣು ಶೂರ ಪ್ರಭಾಷತಃ ॥ ೮ ॥

---

೪. "ಧರ್ಮಾಧರ್ಮ ಪ್ರಭೇದಗಳು ಎಷ್ಟುವಿಧ ? ಅವುಗಳ ಸಾಧನಗಳು ಎಷ್ಟುಬಗೆ ? ಗತಿಗಳ ವಿಷಯವೇನು ? "

೫. ಮತ್ತು ನರಕದಿಂದ ಪುನಃ ಭೂಮಿಗೆ ಬಂದ ಮಾನವರಿಗೆ ತಾವು ಅನುಭವಿಸಿ ಉಳಿದ ಕರ್ಮಶೇಷದಿಂದ ಯಾವಚಿಹ್ನೆಗಳು ಉಂಟಾಗುತ್ತವೆ ?

೬. ಧರ್ಮಾಧರ್ಮಗಳೆಂಬ ಅಲೆಗಳಿಂದ ಅಲ್ಲೋಲಕಲ್ಲೋಲವಾಗಿಯೂ, ಗರ್ಭವಾಸವೇ ಮೊದಲಾದ ಅನೇಕದುಃಖಗಳೆಂಬ ನೊರೆಗಳಿಂದ ಕೂಡಿಯೂ, ಇರುವ ಸಂಸಾರವೆಂಬ ಮಹಾಸಮುದ್ರವನ್ನು ದಾಟಿ, ಪ್ರಾಣಿಗಳು ಬಿಡುಗಡೆ ಹೊಂದುವುದು ಹೇಗೆ ? ಎಲೈ ಅಂತರಿಕ್ಷದಲ್ಲಿ ಸಂಚರಿಸುವ ಸೂರ್ಯದೇವನೇ ! ಇವೆಲ್ಲವನ್ನೂ ನನಗೆ ದಯವಿಟ್ಟು ತಿಳಿಸು " ಎಂದು ಅರುಣನು ಸೂರ್ಯನನ್ನು ಪ್ರಶ್ನೆಮಾಡಿದನು.

೭. ಅರುಣನು ಹೀಗೆ ಪ್ರಶ್ನೆಮಾಡಲು ಮಹಾತೇಜಸ್ವಿಯೂ, ಭಗವಂತನೂ ಆದ ಸೂರ್ಯನು ಎಲ್ಲ ಪ್ರಶ್ನೆಗಳನ್ನೂ ಆದರದಿಂದ ಲಾಲಿಸಿ ಆ ಎಲ್ಲ ಪ್ರಶ್ನೆಗೂ ಉತ್ತರಗಳನ್ನು ಒಳಗೊಂಡಿರುವಂತೆ ಸಮಾಧಾನವನ್ನು ಸಂಕ್ಷೇಪವಾಗಿ ಹೇಳಿದನು.

೮. ಸೂರ್ಯನು ಹೇಳುತ್ತಾನೆ—"ಅಯ್ಯಾ ಶೂರನೇ! ಸ್ವರ್ಗಮೋಕ್ಷಫಲಗಳನ್ನು ಕೊಡುವುದಾಗಿಯೂ, ನರಕಸಮುದ್ರವನ್ನು ದಾಟಿಸುವುದಾಗಿಯೂ, ಪಾಪನಾಶಕರವಾಗಿಯೂ, ಪುಣ್ಯಪ್ರದವಾಗಿಯೂ ಇರುವ ಧರ್ಮವನ್ನು ಹೇಳುತ್ತೇನೆ ಕೇಳು."

ಶ್ರದ್ಧಾಪೂರ್ವಃ ಸದಾ ಧರ್ಮಃ ಶ್ರದ್ಧಾಮಧ್ಯಾಂತಸಂಸ್ಥಿತಃ ।
ಶ್ರದ್ಧಾನಿಷ್ಠಪ್ರತಿಷ್ಠಶ್ಚ ಧರ್ಮಃಶ್ರದ್ಧಾ ಪ್ರಕೀರ್ತಿತಾ ॥ ೯ ॥

ಶ್ರುತಿಮಂತ್ರರಸಾಃ ಸೂಕ್ಷ್ಮಾಃ ಪ್ರಧಾನಪುರುಷೇಶ್ವರಃ ।
ಶ್ರದ್ಧಾಮಾತ್ರೇಣ ಗೃಹ್ಯಂತೇ ನ ಪರೇಣ ಚ ಚಕ್ಷುಷಾ ॥ ೧೦ ॥

ಕಾಯಕ್ಲೇಶೈರ್ನ ಬಹುಭಿರ್ನ ಚೈವಾರ್ಥಸ್ಯ ರಾಶಿಭಿಃ ।
ಧರ್ಮಃ ಸಂಪ್ರಾಪ್ಯತೇ ಸೂಕ್ಷ್ಮಃ ಶ್ರದ್ಧಾಹೀನೈಃ ಸುರೈರಪಿ ॥ ೧೧ ॥

ಶ್ರದ್ಧಾ ಧರ್ಮಃ ಪರಃ ಸೂಕ್ಷ್ಮಃ ಶ್ರದ್ಧಾ ಯಜ್ಞಾಹುತಂ ತಪಃ ।
ಶ್ರದ್ಧಾ ಮೋಕ್ಷಶ್ಚ ಸ್ವರ್ಗಶ್ಚ ಶ್ರದ್ಧಾ ಸರ್ವಮಿದಂ ಜಗತ್ ॥ ೧೨ ॥

ಸರ್ವಸ್ವಂ ಜೀವಿತಂ ವಾಪಿ ದದ್ಯಾದಶ್ರದ್ಧಯಾ ಚ ಯಃ ।
ನಾಪ್ನುಯಾತ್ಸ ಫಲಂ ಕಿಂಚಿತ್ತಸ್ಮಾಚ್ಛ್ರದ್ಧಾಪರೋ ಭವೇತ್ ॥ ೧೩ ॥

---

೯. ಧರ್ಮವು ಶ್ರದ್ಧಾಪೂರ್ವ ಶ್ರದ್ಧಾಮಧ್ಯ, ಶ್ರದ್ಧಾಂತ್ಯ ಎಂದು ಬಗೆಬಗೆಯಾಗಿರುವುದು. ಶ್ರದ್ಧೆಯಲ್ಲಿ ನಿಷ್ಠೆಯೂ, ಪ್ರತಿಷ್ಠೆಯೂ ಉಳ್ಳವನಾಗಬೇಕು. ಅಂತಹ ಶ್ರದ್ಧೆಯು ಧರ್ಮವೆಂದು ಹೇಳಿದೆ.

೧೦. ಸೂಕ್ಷ್ಮಗಳಾದ ಶ್ರುತಿಮಂತ್ರರಸಗಳೂ, ಪ್ರಧಾನಪುರುಷೇಶ್ವರನಾದ ಪರಮಾತ್ಮನೂ, ಶ್ರದ್ಧಾಮಾತ್ರದಿಂದ ಗ್ರಹಿಸಲ್ಪಡುತ್ತಾರೆಯೇ ಹೊರತು, ಬೇರೆ ಸಾಧನದಿಂದಾಗಲಿ, ಚರ್ಮಚತುಸ್ಸಿನಿಂದಾಗಲಿ ಗ್ರಹಿಸಲ್ಪಡುವುದಿಲ್ಲ.

೧೧. ಎಂತಹ ದೇವತೆಗಳೇ ಆಗಿರಲಿ ಬಹುವಿಧಗಳಾದ ಕಾಯಕ್ಲೇಶಪಟ್ಟರೂ ಅಥವಾ ಧನರಾಶಿಯನ್ನೇ ವ್ಯಯಮಾಡಿದರೂ ಶ್ರದ್ಧೆಯಿಲ್ಲದಿದ್ದರೆ ಸೂಕ್ಷ್ಮಧರ್ಮವನ್ನು ಸಹ ಸಂಪಾದಿಸಲಾರದು.

೧೨. ಶ್ರದ್ಧೆಯೇ ಶ್ರೇಷ್ಠವೂ, ಸೂಕ್ಷ್ಮವೂ ಆದ ಧರ್ಮ. ಶ್ರದ್ಧಾ ಎಂಬುದೇ ಯಜ್ಞಗಳು, ಮತ್ತು ಹೋಮದ್ರವ್ಯಗಳು, ಶ್ರದ್ಧೆಯೇ ತಪಸ್ಸು, ಶ್ರದ್ಧೆಯೇ ಮೋಕ್ಷ ಮತ್ತು ಸ್ವರ್ಗವು, ಸರ್ವಜಗತ್ತೂ ಶ್ರದ್ಧಾಮಯವೇ ಆಗಿದೆ.

೧೩. ಶ್ರದ್ಧೆಯಿಲ್ಲದೆ ಸರ್ವಸ್ವವನ್ನು ಕೊಟ್ಟರೂ, ಅಥವಾ ಪ್ರಾಣವನ್ನೇ ದಾನಮಾಡಿದರೂ ಯಾವಫಲವೂ ಉಂಟಾಗುವುದಿಲ್ಲ. ಆದುದರಿಂದ ಯಾವಾಗಲೂ ಮನುಷ್ಯನು ಶ್ರದ್ಧಾಪರನಾಗಿರಬೇಕು.

ಏವಂ ಶ್ರದ್ಧಾಮಯಾಃ ಸರ್ವೇ ಮಮಧರ್ಮಾಃ ಪ್ರಕೀರ್ತಿತಾಃ ।
ಪೂಜ್ಯಸ್ತು ಶ್ರದ್ಧಯಾ ಪುಂಸಾ ಧ್ಯೇಯಃ ಪೂಜ್ಯಶ್ಚ ಶ್ರದ್ಧಯಾ ॥ ೧೪ ॥

ಅಧಿಕಾರಸ್ಯ ಪ್ರಾಪ್ತ್ಯರ್ಥಂ ಮಹಾಸಾರವಿಮುಕ್ತಿದಂ ।
ಅಜ್ಞಾತಾರ್ಥಂ ಸಸಂದಿಗ್ಧಂ ವಾಕ್ಯಮೇತನ್ಮಮಾದ್ಭುತಂ ॥ ೧೫ ॥

ನಾನಾಸಿದ್ಧಿಕರಂ ರಮ್ಯಂ ಲೋಕಚಿತ್ತಾನುರಂಜನಂ ।
ಸುನಿಶ್ಚಿತಾರ್ಥಗಂಭೀರಂ ವಾಕ್ಯಂ ಮಮ ಮನೋರಮಂ ॥ ೧೬ ॥

ಮನ್ಮಾನಸಸಮುದ್ರೋ ಹಿ ದ್ವಿಪದೋಽಯಂ ವಿದುರ್ಬುಧಾಃ ।
ಸ ಖಷೋಲ್ಕೇತಿ ವಿಖ್ಯಾತಃ ಶಿವಂ ಮಂಡಲಂ ಖಗ ॥ ೧೭ ॥

---

೧೪. ಈ ರೀತಿ ನನ್ನ ಧರ್ಮಗಳೆಲ್ಲಾ ಶ್ರದ್ಧಾಮಯವೇ ಆಗಿವೆ ಎಂದು ಹೇಳಿವೆ. ಪೂಜೆಮಾಡುವಾಗಲೂ ಮತ್ತು ಧ್ಯಾನಮಾಡುವಾಗಲೂ ಪುರುಷನು ಶ್ರದ್ಧಾಳುವಾಗಿರಬೇಕು.

೧೫. ಈಗ ನಾನು ನಿನಗೆ ಹೇಳಿದ ಮಾತುಗಳು ಅಧಿಕಾರಪ್ರಾಪ್ತಿಯನ್ನುಂಟು ಮಾಡಿಕೊಡುವುವು. ಮಹಾಸಾರಸ್ವರೂಪವಾದ ಮೋಕ್ಷವೂ ಸಹ ಈ ವಚನಾರ್ಥದ ಪರಿಶೀಲನದಿಂದ ಪ್ರಾಪ್ತವಾಗುವುದು. ನಾನು ಹೇಳಿದ ಈ ಅದ್ಭುತವಾದ ವಚನವು ಇತರರಿಗೆ ಸುಲಭವಾಗಿ ತಿಳಿಯದ, ಗೂಢವಾದ ಅರ್ಥಗಳಿಂದ ಯುಕ್ತವಾಗಿದೆ. ಸಾಮಾನ್ಯವಾಗಿ ನೋಡುವವರಿಗೆ ಸಂದೇಹವನ್ನುಂಟುಮಾಡುತ್ತದೆ.

೧೬. ನಾನಾಸಿದ್ಧಿಕರವೂ, ಶ್ರೇಷ್ಠವೂ, ಜನರಮನಸ್ಸನ್ನು ಸಂತೋಷಪಡಿಸುವುದೂ, ಸುನಿಶ್ಚಿತಾರ್ಥವೂ, ಗಂಭೀರವೂ, ಮನೋರಮವೂ ಆದ ನನ್ನ ವಾಕ್ಯವನ್ನು ಲಾಲಿಸು.

೧೭. ಅಯ್ಯಾ ಖಗಶ್ರೇಷ್ಠನೇ! ನನ್ನ ಮಾನಸಸಮುದ್ರವು ದ್ವಿಪದವೆಂದು ಪಂಡಿತರು ಹೇಳುವರು. ಇದು ಖಷೋಲ್ಕವೆಂದು ಪ್ರಸಿದ್ಧಿಪಡೆದ ಮಂಗಳಕರವಾದ ಮಂಡಲವಾಗಿದೆ.

ಲೋಕತ್ರಯಗುಣಾತೀತಃ ಸರ್ವಜ್ಞಃ ಸರ್ವವಿತ್ಪ್ರಭುಃ ।
ಓಮಿತ್ಯೇಕಾಕ್ಷರೇ ಮಂತ್ರೇ ಸ್ಥಿತಃ ಸ ಪರಮೋ ಮಮ ॥ ೧೮ ॥

ಯಥಾನಾದಿಪ್ರವೃತ್ತೋऽಯಂ ಘೋರಃ ಸಂಸಾರಸಾಗರಃ ।
ಖಷೋಲ್ಕೋಽಪಿ ತಥಾನಾದಿಃ ಸಂಸಾರಾರ್ಣವಶೋಷಣಃ ॥ ೧೯ ॥

ವ್ಯಾಧೀನಾಂ ಭೇಷಜಂ ಯದ್ವತ್ಪ್ರತಿಪಕ್ಷಃ ಸ್ವಭಾವತಃ ।
ಮೋಕ್ಷಿಣಾಂ ಮುಕ್ತಿಹೇತುಶ್ಚ ಸಿದ್ಧಿಃ ಸರ್ವಾರ್ಥಸಾಧಕಃ ॥ ೨೦ ॥

ಮಮಾಭಿಧಾನಮಂತ್ರೋಽಯಮಭಿಧೇಯಃ ಸದಾ ಸ್ಮೃತಃ ।
ಅಭಿಧಾನಾಭಿಧೇಯೋಽಹಂ ಮಂತ್ರಸಿದ್ಧೋऽಸ್ಮಿ ಖೇಚರ ॥ ೨೧ ॥

ವೇದೇ ಮನೋಗಮೇ ಚಾತ್ರ ಸ್ಥಿತೋ ಮಂತ್ರಃ ಷಡಕ್ಷರಃ ।
ಯದ್ವಾ ಮುಕ್ತೋऽಕ್ಷರೈಕೇನ ಲೋಕೇ ಪಂಚಾಕ್ಷರಃ ಸ್ಮೃತಃ ॥ ೨೨ ॥

---

೧೮. ಬ್ರಹ್ಮವಿಷ್ಣುಮಹೇಶ್ವರರೆಂಬ ತ್ರಿಮೂರ್ತಿಗಳ ಗುಣಕ್ಕಿಂತಲೂ ಅತೀತವಾದ ಗುಣವುಳ್ಳವನೂ, ಸರ್ವಜ್ಞನೂ, ಸರ್ವಸಮರ್ಥನೂ ಆದ ಪರಮಪುರುಷನು ನನಗಿಂತಲೂ ಉತ್ಕೃಷ್ಟನಾಗಿ "ಓಮ್" ಎಂಬ ಒಂದಕ್ಷರದಲ್ಲಿರುವನು.

೧೯. ಭಯಂಕರವಾದ ಸಂಸಾರಸಾಗರವು ಹೇಗೆ ಅನಾದಿಯಿಂದಲೂ ಬಂದಿದೆಯೋ, ಹಾಗೆಯೇ ಸಂಸಾರಸಾಗರವನ್ನು ಒಣಗಿಸುವ ಖಷೋಲ್ಕವೂ ಅನಾದಿಯಾದುದು.

೨೦. ಔಷಧವು ರೋಗಗಳಿಗೆ ಸ್ವಭಾವವಾಗಿಯೇ ಹೇಗೆ ಪ್ರತಿಪಕ್ಷವಾಗಿರುವುದೋ, ಹಾಗೆಯೇ ಸರ್ವಾರ್ಥಸಾಧಕವಾದ ಸಿದ್ಧಿಯು ಮೋಕ್ಷಾಭಿಲಾಷೆಯುಳ್ಳವರಿಗೆ ಮೋಕ್ಷಸಾಧಕವಾದುದು.

೨೧. ಅಯ್ಯಾ ಖೇಚರನೇ! ಇದು ನನ್ನ ಅಭಿಧಾನಮಂತ್ರ. ನಾನು ಸದಾ ಅಭಿಧೇಯನಾಗಿದ್ದೇನೆ. ನಾನು ಈ ಮಂತ್ರದಿಂದ ಅಭಿಧಾನವೂ, ಅಭಿಧೇಯವೂ ಆಗಿ ಸಿದ್ಧನಾಗುವೆನು.

೨೨. ಜ್ಞಾನಗಮ್ಯವಾದ ವೇದದಲ್ಲಿ ಷಡಕ್ಷರಮಂತ್ರವಿರುವುದು. ಅದರಲ್ಲಿ ಪ್ರಣವರೂಪವಾದ ಒಂದಕ್ಷರವನ್ನು ಬಿಟ್ಟರೆ ಅದು ಪಂಚಾಕ್ಷರಮಂತ್ರವಾಗುವುದು.

ಕಿಂ ತಸ್ಯ ಬಹುಭಿರ್ಮಂತ್ರೈಃ ಶಾಸ್ತ್ರೈರ್ವಾ ಬಹುವಿಸ್ತರೈಃ ।
ಯಸ್ಯೋಂ ನಮಃ ಖಷೋಲ್ಕೇತಿ ಮಂತ್ರೋಽಯಂ ಹೃದಿ ಸಂಸ್ಥಿತಃ॥೨೩॥

ತೇನಾಧೀತಂ ಶ್ರುತಂ ತೇನ ತೇನ ಸರ್ವಮನುಷ್ಠಿತಂ ।
ಯೇನೋಂ ನಮಃ ಖಷೋಲ್ಕೇತಿ ಮಮ ವಾಕ್ಯಂ ಷಡಕ್ಷರಂ ॥ ೨೪ ॥

ವಿಧಿವಾಕ್ಯಮಿದಂ ಸರ್ವಂ ನಾರ್ಥವಾದಂ ವಚೋ ಮಮ ।
ಏತತ್ತೇ ವಕ್ಷ್ಯತೇಽಶೇಷಂ ಮಮ ವಾಕ್ಯಾರ್ಥಮುತ್ತಮಂ ॥
ಪೃಚ್ಛಸ್ವೇಮಂ ಪ್ರಣಮ್ಯಾಶು ವೈನತೇಯ ಮಹಾಮತೇ ॥ ೨೫ ॥

॥ ಸುಮಂತುರುವಾಚ ॥

ಶ್ರುತ್ವಾ ತು ವಚನಂ ಭಾನೋರ್ವೈನತೇಯೋ ಮಹಾಬಲಃ ।
ಸಪ್ತಾಶ್ವತಿಲಕಂ ಭಕ್ತ್ಯಾ ಪ್ರಣಮ್ಯೋವಾಚ ಭಾರತ ॥ ೨೬ ॥

---

೨೩. ಯಾರ ಹೃದಯದಲ್ಲಿ "ಓಂ ನಮಃ ಖಷೋಲ್ಕ" ಎಂಬ ಮಂತ್ರವಿರುವುದೋ ಅವನಿಗೆ ಬೇರೆ ಅನೇಕ ಮಂತ್ರಗಳಿಂದಲಾಗಲಿ ಅಥವಾ ಬಹುವಿಸ್ತಾರವಾದ ಶಾಸ್ತ್ರಗಳಿಂದಲಾಗಲಿ ಯಾವ ಪ್ರಯೋಜನವೂ ಇಲ್ಲ. ಎಂದರೆ ಆ ಮಂತ್ರದಿಂದಲೇ ಇತರ ಎಲ್ಲಾ ಫಲಗಳೂ ದೊರೆಯುವುವು.

೨೪. ಯಾರು "ಓಂ ನಮಃ ಖಷೋಲ್ಕ" ಎಂಬ ಷಡಕ್ಷರಗಳುಳ್ಳ ನನ್ನ ಮಂತ್ರವನ್ನು ಉಚ್ಚರಿಸುವರೋ ಅವರು ಎಲ್ಲ ವೇದವನ್ನೂ ಅಧ್ಯಯನಮಾಡಿದಂತೆಯೇ ಆಗುವುದು. ಮತ್ತು ಎಲ್ಲಾ ಶಾಸ್ತ್ರಗಳನ್ನೂ ಅಭ್ಯಾಸಮಾಡಿದಂತೆಯೇ ಆಗುವುದು ಎಂದು ತಿಳಿಯಬೇಕು. ಎಂದರೆ ಸಕಲ ವೇದಶಾಸ್ತ್ರಾಧ್ಯಯನಗಳಿಂದ ಉಂಟಾಗುವ ಫಲವೆಲ್ಲವೂ ಈ ಮಂತ್ರೋಚ್ಚಾರಣದಿಂದಲೇ ಉಂಟಾಗುವುದು.

೨೫ ಮಹಾಬುದ್ಧಿಶಾಲಿಯಾದ ವಿನತಾಪುತ್ರನೇ! ಈ ಮಾತೆಲ್ಲವೂ ವಿಧಿವಾಕ್ಯವೇ ಹೊರತು ಅರ್ಥವಾದವಲ್ಲ, ಉತ್ತಮವಾದ ಈ ವಾಕ್ಯಾರ್ಥವನ್ನು ನಿನಗೆ ಸಮಗ್ರವಾಗಿ ಹೇಳಲಾಗುವುದು ಜಾಗ್ರತೆಯಾಗಿ ಈತನಿಗೆ ನಮಸ್ಕಾರಮಾಡಿ ಇದನ್ನು ಬೇಗ ಕೇಳಿಕೋ" ಎಂದನು.

೨೬. ಸುಮಂತುಮುನಿವರ್ಯರು ವಿಚಾರವನ್ನು ಮುಂದುವರಿಸಿ ಹೇಳುತ್ತಾರೆ ಅಯ್ಯಾ ಭರತವಂಶಜನೇ! ಮಹಾಬಲನಾದ ಅರುಣನು ಆ ಮಾತನ್ನು ಕೇಳಿ ಸಪ್ತಾಶ್ವತಿಲಕನಿಗೆ ಭಕ್ತಿಯಿಂದ ನಮಸ್ಕಾರಮಾಡಿ ಮುಂದೆ ಹೇಳುವಂತೆ ಮಾತನಾಡಿದನು.

॥ ಅನೂರುರುವಾಚ ॥

ಬ್ರೂಹಿ ಮಾಂ ದೇವಶಾರ್ದೂಲ ಯತ್ಪೃಚ್ಛಾಮಿ ಮಹಾಮತೇ ।
ಕೀದೃಗ್ವಾಕ್ಯಮಿದಂ ಭಾನೋರ್ವಾಕ್ಯಾರ್ಥಂ ಬ್ರೂಹಿ ಚ ಪ್ರಭೋ ॥ ೨೭ ॥

॥ ಸಪ್ತಾಶ್ವತಿಲಕ ಉವಾಚ ॥

ವಿಮುಕ್ತಾಶೇಷದೋಷೇಣ ಸರ್ವಜ್ಞೇನ ಭಗೇನ ಯತ್ ।
ಪ್ರಣೀತಮಮಲಂ ವಾಕ್ಯಂ ತತ್ಪ್ರಮಾಣಂ ನ ಸಂಶಯಃ ॥ ೨೮ ॥

ಯಸ್ಮಾನ್ಮಾರ್ತಂಡನಾಮಾಸೌ ಕಥ್ಯತೇ ಚ ಮನೀಷಿಭಿಃ ।
ಯಥಾರ್ಥಂ ಪುಣ್ಯಮಾಪ್ನೋತಿ ಪತತ್ಯಶ್ರದ್ಧಯಾತ್ವಧಃ ॥ ೨೯ ॥

ಸೌರವಾಕ್ಯಪ್ರವಕ್ತಾರಂ ಸೂರವತ್ಪೂಜಯೇದ್ಗುರುಂ ।
ಸಂಸಾರಾರ್ಣವನಿರ್ಮಗ್ನಂ ಯಃ ಸಮುದ್ಧರತೇ ಜನಂ ॥ ೩೦ ॥

---

೨೭. ಅರುಣನು ಸಪ್ತಾಶ್ವತಿಲಕನನ್ನು ಕುರಿತು " ಮಹಾಬುದ್ಧಿಶಾಲಿಯಾದ ಎಲೈ ದೇವಶ್ರೇಷ್ಠನೇ ! ಸೂರ್ಯನ ವಾಕ್ಯವೆಂತಹುದು ? ಆ ವಾಕ್ಯದ ಅರ್ಥವೇನು ? ಈ ಪ್ರಶ್ನೆಗಳಿಗೆ ದಯವಿಟ್ಟು ಉತ್ತರವನ್ನು ಹೇಳು ? " ಎಂದು ಪ್ರಶ್ನೆಮಾಡಿದನು.

೨೮. ಸಪ್ತಾಶ್ವತಿಲಕನು ಹೇಳುವನು—ಸರ್ವದೋಷವಿನಿರ್ಮುಕ್ತನೂ, ಸರ್ವಜ್ಞನೂ ಆದ ಭಗನು ಹೇಳಿದ ಪವಿತ್ರವಾದ ವಾಕ್ಯವು ಪ್ರಮಾಣವಾದುದು. ಇದರಲ್ಲಿ ಸಂಶಯವಿಲ್ಲ.

೨೯. ವಿದ್ವಾಂಸರು ಅವನನ್ನು ಮಾರ್ತಂಡನಾಮದಿಂದ ಕರೆಯುವ ಕಾರಣದಿಂದ ಈ ಮಾರ್ತಂಡನನ್ನು ಶ್ರದ್ಧೆಯಿಂದ ಪೂಜೆಮಾಡುವವನು ಯಥಾರ್ಥವಾಗಿ ಪುಣ್ಯವನ್ನು ಹೊಂದುತ್ತಾನೆ. ಅವನ ವಿಷಯದಲ್ಲಿ ಅಶ್ರದ್ಧೆಯಿಂದ ನಡೆಯುವವನು ಕೆಳಗೆಬೀಳುವನು ಎಂದರೆ ಅಧೋಗತಿಯನ್ನು ಹೊಂದುವನು.

೩೦. ಸೂರ್ಯಸಂಬಂಧವಾದ ವಾಕ್ಯಾರ್ಥವನ್ನು ಹೇಳುವ ಗುರುವನ್ನು ಸೂರ್ಯನನ್ನು ಪೂಜಿಸುಂತೆಯೇ ಪೂಜಿಸಬೇಕು. ಏಕೆಂದರೆ ಆತನು ತನ್ನ ಬೋಧನೆಯಿಂದ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ ಏಳುತ್ತಿರುವ ಜನಗಳನ್ನು ಉದ್ಧರಿಸುವನು.

ಸೌರಧರ್ಮಾಂಬುಹಸ್ತೇನ ಕಸ್ತೇನ ಸದೃಶೋ ಗುರುಃ ।
ಅಜ್ಞಾನವಹ್ನಿಸಂತಪ್ತಂ ನಿರ್ವಾಪಯತಿ ಯಃ ಶನೈಃ ॥ ೩೧ ॥

ಜ್ಞಾನಾಮೃತೇನ ವೈ ಭಕ್ತ್ಯಾನ್ಕಸ್ತಂ ನ ಪ್ರತಿಪೂಜಯೇತ್ ।
ನೈವ ರಾಜ್ಯೇನ ಮಹತಾ ನ ಚೈವಾರ್ಥಸ್ಯ ರಾಶಿಭಿಃ ॥
ಪ್ರಾಪ್ತಮಜ್ಞಾನಶಮನಂ ಪರಲೋಕೇ ಸುಖಾವಹಂ ॥ ೩೨ ॥

ಸ್ವರ್ಗಾಪವರ್ಗಸಿದ್ಧ್ಯರ್ಥಂ ಭಾಷಿತಂ ಯತ್ತು ಶೋಭನಂ ।
ವಾಕ್ಯಂ ತು ದೇವದೇವಶ್ಯ ತದ್ವಿಜ್ಞೇಯಂ ಸುಭಾಷಿತಂ ॥ ೩೩ ॥

ರಾಗದ್ವೇಷಕ್ಷಮಾಕ್ರೋಧಕಾಮತೃಷ್ಣಾನುಸಾರಿಣಾಂ ।
ವಾಕ್ಯಂ ನಿರಯಹೇತುತ್ವಾತ್ತದ್ದುರ್ಭಾಷಿತಮುಚ್ಯತೇ ॥ ೩೪ ॥

ಸಂಸ್ಕೃತೇನಾಪಿ ಕಿಂ ತೇನ ಮೃದುಲಾಲಾಪಸಂಗಿನಾ ।
ಅವಿದ್ಯಾರಾಮವಾಕ್ಯೇನ ಸಂಸಾರಕ್ಲೇಶಹೇತುನಾ ॥ ೩೫ ॥

---

೩೧. ಅಜ್ಞಾನಾಗ್ನಿಯಿಂದ ತಪ್ತರಾದವರನ್ನು ಜ್ಞಾನಾಮೃತದಿಂದ ಮೆಲ್ಲನೆ ತಣ್ಣಗೊಳಿಸುವ ಸೌರಧರ್ಮವೆಂಬ ಉದಕವನ್ನು ಕೈಯಲ್ಲಿ ಸಿದ್ಧವಾಗಿ ಹಿಡಿದಿರುವ ಅವನಿಗೆ ಸಮಾನನಾದ ಗುರುವು ಯಾರುಂಟು? ಅಂತಹವನನ್ನು ಪೂಜಿಸದೇ ಇರುವವರು ಯಾರು ?

೩೨. ಅಜ್ಞಾನಶಮನಪೂರ್ವಕವಾದ ಜ್ಞಾನಪ್ರಾಪ್ತಿಯು ಪರಲೋಕದಲ್ಲಿ ಶಾಶ್ವತಸುಖವನ್ನುಂಟುಮಾಡುವುದು. ಇಂತಹ ಪರಲೋಕಸುಖವು ದೊಡ್ಡರಾಜ್ಯವನ್ನು ಸಂಪಾದಿಸುವುದರಿಂದಲಾಗಲಿ, ದ್ರವ್ಯರಾಶಿಗಳನ್ನೇ ಸಂಪಾದಿಸುವುದರಿಂದಲಾಗಲಿ ಲಭ್ಯವಾಗುವುದಿಲ್ಲ.

೩೩. ನರರಿಗೆ ಸ್ವರ್ಗವೂ, ಮುಕ್ತಿಯೂ, ಲಭಿಸುವುದಕ್ಕಾಗಿ ದೇವದೇವನು ಹೇಳಿರುವ ಶುಭಕರವಾದ ಆ ವಾಕ್ಯವನ್ನು ಸುಭಾಷಿತವೆಂದು ತಿಳಿಯಬೇಕು.

೩೪. ರಾಗ, ದ್ವೇಷ, ಅಸಹನ, ಕ್ರೋಧ, ಕಾಮ, ತೃಷ್ಣಾ ಇವನ್ನು ಅನುಸರಿಸುವವರ ಎಂದರೆ ಈ ಸ್ವಭಾವಗಳುಳ್ಳವರ ಬೋಧನೆಯು ನರಕಕ್ಕೆ ಕಾರಣವಾದುದರಿಂದ ಅದು ದುರ್ಭಾಷಿತವೆನಿಸುವುದು.

೩೫. ಅವು ಕೇಳುವುದಕ್ಕೆ ಮೃದುವಾಗಿರುತ್ತಾ ಬಾಯಿನೀರುಕರೆಯುವ ಮಟ್ಟಿಗೆ ಆಶೆಹುಟ್ಟಿಸುವಂತೆ ಸಂಸ್ಕಾರಯುಕ್ತವಾಗಿದ್ದರೂ, ಸಂಸಾರ ಕ್ಲೇಶಕ್ಕೆ

ಯಚ್ಛ್ರುತ್ವಾ ಜಾಯತೇ ಪುಣ್ಯಂ ರಾಗಾದೀನಾಂ ಚ ಸಂಕ್ಷಯಃ ।
ವಿರೂಪಮಪಿ ತದ್ವಾಕ್ಯಂ ವಿಜ್ಞೇಯಮತಿಶೋಭನಂ ॥ ೩೬ ॥

ಸ್ಮೃತಯೋ ಭಾರತಂ ವೇದಾಃ ಶಾಸ್ತ್ರಾಣಿ ಸುಮಹಾಂತಿ ಚ ।
ಸ್ವಾಯುಷಃ ಕ್ಷಪಣಾಯೈವ ಧರ್ಮೋಽರ್ಥಸಮುಗ್ರಂಥಿನಃ ॥ ೩೭ ॥

ಪುತ್ರದಾರಾದಿಸಂಸಾರೇ ನರಾಣಾಂ ಮೂಢಚೇತಸಾಂ ।
ಸಂಸಾರವಿದುಷಾಂ ಶಾಸ್ತ್ರಮನಾದಿ ಮುಖನಿರ್ಗತಂ ॥ ೩೮ ॥

ಇದಂ ಶ್ರೇಷ್ಠಮಿದಂ ಜ್ಞೇಯಂ ಸರ್ವಂ ತ್ವಂ ಜ್ಞಾತುಮಿಚ್ಛಸಿ ।
ಅಪಿ ವರ್ಷಸಹಸ್ರಾಯುಃ ಶಾಸ್ತ್ರಾಂತಂ ನಾಧಿಗಚ್ಛತಿ ॥ ೩೯ ॥

---

ಕಾರಣವಾಗಿ ಅವಿದ್ಯೆಯಲ್ಲಿ ಕ್ರೀಡಿಸುವಂಥದಾದರೆ ಅಂತಹ ಭಾಷಿತದಿಂದಲೂ ಫಲವಿಲ್ಲ.

೩೬. ಯಾವ ಭಾಷಿತವನ್ನು ಕೇಳುವುದರಿಂದ ಪುಣ್ಯಪ್ರಾಪ್ತಿಯೂ, ರಾಗ ದ್ವೇಷಾದಿಗಳ ನಾಶವೂ ಆಗುವುದೋ, ಅಂತಹ ವಾಕ್ಯವು ಕೇಳುವುದಕ್ಕೆ ವಿರೂಪ ವಾಗಿ ತೋರಿದರೂ ಅದು ಅತಿಶುಭವೆಂದೇ ತಿಳಿಯಬೇಕು.

೩೭. ಧರ್ಮ ಅರ್ಥ ಇವನ್ನು ಸಮಗ್ರವಾಗಿ ಗ್ರಥನಮಾಡಿರುವ ಸ್ಮೃತಿಗಳು ಭಾರತ, ವೇದಗಳು, ಬಹುದೊಡ್ಡದಾದ ಶಾಸ್ತ್ರಗಳು ತಿಳಿವಳಿಕೆಯು ಇವುಗಳ ತತ್ವ ರಹಿತವಾದರೆ ಅದು ಆಯುಸ್ಸನ್ನು ಕಳೆಯುವುದಕ್ಕೆ ಕಾರಣವಲ್ಲದೆ ಬೇರೆಯಲ್ಲ.

೩೮. ಮಕ್ಕಳು ಹೆಂಡಿರು ಮೊದಲಾದವರಿಂದ ಕೂಡಿದ ಸಂಸಾರದಲ್ಲಿ ಮೋಹ ಗೊಂಡ ಮನಸ್ಸುಳ್ಳ ನರನಿಗೆ, ಜ್ಞಾನವನ್ನು ತಿಳಿಸುವುದಕ್ಕಾಗಿ ಸಂಸಾರಸ್ವರೂಪವನ್ನು ಬಲ್ಲವರ ಮುಖದಿಂದ ಅತಿಪ್ರಾಚೀನವಾಗಿ ಹೊರಟ ಉಕ್ತಿಗಳೇ ಶಾಸ್ತ್ರಗಳೆನಿಸಿವೆ.

೩೯. ಈ ಶಾಸ್ತ್ರವು ಬಹುಶ್ರೇಷ್ಠವಾದುದು. ಮತ್ತು ಇದು ತಿಳಿಯಲು ಅರ್ಹ ವಾದುದು. ಇದನ್ನು ನೀನು ಸಮಗ್ರವಾಗಿ ತಿಳಿಯಲಿಚ್ಛಿಸುತ್ತೀ; ಸಹಸ್ರವರ್ಷಗಳ ಆಯುಸ್ಸಿದ್ದರೂ ಈ ಶಾಸ್ತ್ರವನ್ನು ವ್ಯಾಸಂಗಮಾಡಿ ಕೊನೆಮುಟ್ಟಿಸಲು ಆಗುವುದಿಲ್ಲ.

ವಿಜ್ಞಾಯಾಕ್ಷರತನ್ಮಾತ್ರಂ ಜೀವಿತಂ ಚಾತಿವಂಚನಂ ।
ವಿಹಾಯ ಸರ್ವಶಾಸ್ತ್ರಾಣಿ ಪರಲೋಕಂ ಸಮಾಚರೇತ್ ॥ ೪೦ ॥

ಪಂಡಿತೇನಾಪಿ ಕಿಂ ತೇನ ಸಮರ್ಥೇನ ಚ ದೇಹಿನಾಂ ।
ಯಃ ಪುಣ್ಯಭಾರಮುದ್ವೋಢುಮಶಕ್ತಃ ಪಾರಲೌಕಿಕೆ ॥ ೪೧ ॥

ಪಂಡಿತೋऽಪಿ ಸ ಮೂರ್ಖಃ ಸ್ಯಾಚ್ಛಕ್ತಿಯುಕ್ತೋऽಪ್ಯಶಕ್ತಿಕಃ ।
ಯಃ ಸೌರಜ್ಞಾನಮಾಹಾತ್ಮ್ಯಮುಚ್ಚಾರಯಿತುಮಕ್ಷಮಃ ॥ ೪೨ ॥

ತಸ್ಮಾತ್ಸಪಂಡಿತಃ ಶಕ್ತಃ ಸ ತಪಸ್ವೀ ಜಿತೇಂದ್ರಿಯಃ ।
ಯಃ ಸೌರಜ್ಞಾನಸದ್ಭಾವಮಾಲೋಚಯಿತುಮುದ್ಯತಃ ॥ ೪೩ ॥

ಯಃ ಪ್ರದದ್ಯಾನ್ನೃಪಃ ಕೃತ್ಸ್ನಾಂ ಕ್ಷ್ಮಾಂ ಧನಂ ಕಾಂಚನಂ ತಥಾ ।
ಸರ್ವಮನ್ಯಾಯತಃ ಪೃಚ್ಛೇನ್ನ ತಸ್ಯೋಪದಿಶೇದ್ಗುರುಃ ॥ ೪೪ ॥

---

೪೦. ಜೀವಿತಕಾಲವನ್ನೆಲ್ಲಾ ಸರ್ವಶಾಸ್ತ್ರಜ್ಞಾನ ಸಂಪಾದನದಲ್ಲಿ ವ್ಯಯಮಾಡಿದರೂ ಮೋಕ್ಷಪ್ರಾಪ್ತಿ ಮಾಡಿಸದೆ ವಂಚನೆಮಾಡುವುದು. ಆದುದರಿಂದ ಈ ಇತರ ಶಾಸ್ತ್ರಜ್ಞಾನವನ್ನು ಬಿಟ್ಟು, ನಾಶರಹಿತವಾದ ಆ ಬ್ರಹ್ಮವನ್ನು ಮಾತ್ರ ತಿಳಿದುಕೊಂಡು ಲೋಕವನ್ನು ಸಾಧಿಸಬೇಕು.

೪೧. ಯಾವನು ಪರಲೋಕಪ್ರಾಪ್ತಿಗೆ ಸಾಧನವಾದ ಪುಣ್ಯದಭಾರವನ್ನು ವಹಿಸಲಶಕ್ತನೋ ಅವನು ಮಾನವರಲ್ಲಿ ಪಂಡಿತನೂ. ಸಮರ್ಥನೂ ಆಗಿದ್ದರೆ ತಾನೆ ಫಲವೇನು ? ಏನೂಪ್ರಯೋಜನವಿಲ್ಲ.

೪೨. ಯಾವನು ಸೌರಜ್ಞಾನಮಾಹಾತ್ಮ್ಯವನ್ನು ಉಚ್ಚರಿಸಲಾರನೋ, ಅವನು ಪಂಡಿತನಾಗಿದ್ದರೂ ಮೂರ್ಖನು; ಶಕ್ತಿವಂತನಾಗಿದ್ದರೂ ದುರ್ಬಲನು, ಎನಿಸುವನು.

೪೩. ಆದುದರಿಂದ ಯಾವನು ಸೌರಜ್ಞಾನದ ಸದ್ಭಾವವನ್ನು ಆಲೋಚಿಸ ಲುದ್ಯುಕ್ತನೋ ಅವನೇ ಪಂಡಿತನು, ಅವನೇ ಶಕ್ತನು, ಅವನೇ ತಪಸ್ವಿ, ಮತ್ತು ಅವನೇ ಜಿತೇಂದ್ರಿಯನು.

೪೪. ರಾಜನು ಬೇಕಾದಷ್ಟು ಭೂಮಿಯನ್ನೂ, ಸುವರ್ಣವನ್ನೂ ಕೊಟ್ಟು ನ್ಯಾಯವಿರುದ್ಧವಾದ ರೀತಿಯಿಂದ ಈ ಜ್ಞಾನವನ್ನು ಉಪದೇಶಮಾಡು ಎಂದು ಕೇಳಿದರೆ ಅವನಿಗೆ ಗುರುವು ಉಪದೇಶಮಾಡಬಾರದು.

**ಯಃ ಶೃಣೋತಿ ರವೇರ್ಧರ್ಮಂ ನ್ಯಾಯತಃ ಸ ಚ ವಕ್ತಿ ಚ ।**
**ತತೋ ಗಚ್ಛತಿ ಸುಸ್ಥಾನಂ ನರಕಂ ತದ್ವಿಪರ್ಯಯೇ ॥ ೪೫ ॥**

**ದತ್ತಗೋದೋಹಸಂಭೂತಃ ಷಡಕ್ಷರವಿಧಾನತಃ ।**
**ರವಿಃ ಸಂಪೂಜಿತಃ ಶೀಘ್ರಂ ನರಾಣಾಂ ತುಲ್ಯತಾ ಭೃಶಂ ॥ ೪೬ ॥**

**ಸುರಾಸುರೈರ್ಮಥ್ಯಮಾನಾತ್ಕ್ಷೀರೋದಾತ್ಸಾಗರಾತ್ಪುರಾ ।**
**ಪಂಚಗಾವಃ ಸಮುತ್ಪನ್ನಾ ಸರ್ವಲೋಕಸ್ಯ ಮಾತರಃ ॥ ೪೭ ॥**

**ನಂದಾ ಸುಭದ್ರಾ ಸುರಭೀ ಸುಮನಾ ಶೋಭನಾವತೀ ।**
**ಗಾವಃ ಸೂರ್ಯಸಮಾ ಭಾಸಾ ಉತ್ಪನ್ನಾಃ ಕೃತಿಮಾಗತಾಃ ॥ ೪೮ ॥**

**ಸರ್ವಲೋಕೋಪಕಾರಾರ್ಥಂ ದೇವಾನಾಂ ತರ್ಪಣಾಯ ಚ ।**
**ಮಾಮಾಶ್ರಿತ್ಯ ಸ್ಥಿತಾ ಗಾವಃ ಸ್ನಾನಾರ್ಥಂ ಭಾಸ್ಕರಸ್ಯ ತು ॥ ೪೯ ॥**

---

೪೫. ಸೂರ್ಯಧರ್ಮವನ್ನು ನ್ಯಾಯವಾದರೀತಿಯಿಂದ ಶ್ರವಣಮಾಡಿದವರೂ ಮತ್ತು ಹೇಳಿದವರೂ ಒಳ್ಳೆಯ ಸ್ಥಾನವನ್ನು ಪಡೆಯುತ್ತಾರೆ. ಅದಕ್ಕೆ ವ್ಯತ್ಯಾಸವಾಗಿ ನಡೆದರೆ ನರಕವನ್ನು ಹೊಂದುವರು.

೪೬. ಷಡಕ್ಷರಮಂತ್ರದ ವಿಧಾನರೀತಿಯಲ್ಲಿ ಪೂಜಾರ್ಥವಾಗಿ ಕೊಟ್ಟ ಹಸುವಿನ ಹಾಲನ್ನು ಕರೆದು ಅದರಿಂದುತ್ಪನ್ನವಾದ ತುಪ್ಪದಿಂದ ಸೂರ್ಯನಿಗೆ ಅಭಿಷೇಕ ಮಾಡಿದರೆ ಆ ಮನುಷ್ಯರು ತೇಜಸ್ಸಿನಲ್ಲಿ ಸೂರ್ಯನಿಗೆ ಸಮನಾಗುವರು.

೪೭. ಪೂರ್ವದಲ್ಲಿ ದೇವತೆಗಳೂ ಮತ್ತು ರಾಕ್ಷಸರೂ ಕೂಡಿ ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ, ಸರ್ವಲೋಕಕ್ಕೂ ತಾಯಿಯರಾದ, ನಂದಾ, ಸುಭದ್ರಾ, ಸುರಭಿ, ಸುಮನಾ (ಎಂಬಿವೂ)

೪೮. ಮತ್ತು ಶೋಭನಾವತೀ ಎಂಬುದೂ ಒಟ್ಟು ಐದು ಗೋವುಗಳು ಹುಟ್ಟಿದುವು. ಇವು ಸೂರ್ಯ ಸಮಾನವಾಗಿ ಪ್ರಕಾಶಿಸುತ್ತಾ ಸೂರ್ಯಪೂಜಾ ಕಾರ್ಯಕ್ಕೆ ನೆರವಾಗಿ ಬಂದುವು.

೪೯. ಸರ್ವಲೋಕಗಳ ಉಪಕಾರಕ್ಕಾಗಿಯೂ, ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿಯೂ ಸೂರ್ಯನಿಗೆ ಘೃತಸ್ನಾನ ಮಾಡಿಸಬೇಕಾಗುವುದು. ಸೂರ್ಯನ ಸ್ನಾನೋಪಯೋಗಾರ್ಥವಾಗಿ ಈ ಗೋವುಗಳು ನನ್ನಲ್ಲಿ ಇದ್ದವು.

ತಾಸಾಮಂಗಾನಿ ಪುಣ್ಯಾನಿ ಷಡ್ರಸಾಃ ಖಗಸತ್ತಮ ।
ಖಗಾದಿಷು ಚ ಸರ್ವೇಷು ಸ್ಥಿರಾಣೀತ್ಯುಪಧಾರಯ ॥ ೫೦ ॥

ಗೋಮಯಂ ರೋಚನಂ ಮೂತ್ರಂ ಕ್ಷೀರಂ ದಧಿ ಘೃತಂ ಗವಾಂ ।
ಷಡಂಗಾನಿ ಪವಿತ್ರಾಣಿ ಸರ್ವಸಿದ್ಧಿಕರಾಣಿ ಚ ॥ ೫೧ ॥

ಗೋಮಯಾದುತ್ಥಿತಃ ಶ್ರೀಮಾನ್ಬಿಲ್ವವೃಕ್ಷೋಽರ್ಕವಲ್ಲಭಃ ।
ತತ್ರಾಽಽಸ್ತೇ ಪದ್ಮಹಸ್ತಾ ಶ್ರೀರ್ವೃಕ್ಷಸ್ತೇನ ಚ ಸ ಸ್ಮೃತಃ ॥ ೫೨ ॥

ಪಂಕಾನ್ಯುತ್ಪಲಪದ್ಮಾನಿ ಪುನರ್ಜಾತಾನಿ ಗೋಮಯಾತ್ ।
ಗೋರೋಚನಂ ಚ ಮಂಗಲ್ಯಂ ಪವಿತ್ರಂ ಸರ್ವಕಾಮದಂ ॥ ೫೩ ॥

---

೫೦. ಅಯ್ಯಾ ಖಗನೇ! ಅವುಗಳಿಂದ ಉತ್ಪನ್ನವಾಗುವ ವಸ್ತುಗಳು ಪುಣ್ಯಕರಗಳೂ, ಷಡ್ರಸಜನಕಗಳೂ ಆದುವು. ಅಂತರಿಕ್ಷ ಸಂಚಾರಿಗಳಾದ ಸಕಲಪಕ್ಷಿಗಳಲ್ಲೂ ಮತ್ತು ಇತರ ಎಲ್ಲಾ ವಸ್ತುಗಳಲ್ಲೂ ಈ ಧೇನುವಿನ ಸ್ಥಿರವಾದ ಅಂಗಗಳು ಇವೆ ಎಂದು ತಿಳಿದುಕೊ ?

೫೧. ಗೋಮಯ, ಗೋರೋಚನ, ಗೋಮೂತ್ರ, ಗೋವಿನಹಾಲು, ಮೊಸರು, ತುಪ್ಪ ಎಂಬದಾಗಿ ಗೋವಿನಿಂದ ಉಂಟಾದ ಈ ಆರು ವಸ್ತುಗಳೂ, ಪವಿತ್ರಗಳೂ, ಸರ್ವಸಿದ್ಧಿಕರಗಳೂ ಆಗಿವೆ.

೫೨. ಸಂಪದ್ಯುಕ್ತವಾದ ಬಿಲ್ವವೃಕ್ಷವು ಗೋಮಯದಿಂದ ಹುಟ್ಟಿತು. ಇದು ಸೂರ್ಯನಿಗೆ ಪ್ರಿಯವಾದುದು. ಆ ವೃಕ್ಷದಲ್ಲಿ ಪದ್ಮಹಸ್ತೆಯಾದ ಲಕ್ಷ್ಮಿಯು ಇರುವಳು. ಆದರಿಂದ ಆ ಬಿಲ್ವವೃಕ್ಷಕ್ಕೆ ಶ್ರೀವೃಕ್ಷವೆಂದು ಹೆಸರುಬಂದಿದೆ.

೫೩. ಪಂಕಜಗಳು, ಉತ್ಪಲ, ಪದ್ಮ, ಇವುಗಳೂ ಕೂಡ ಗೋಮಯದಿಂದಲೇ ಹುಟ್ಟಿದುವು. ಗೋರೋಚನವೆಂಬ ಧಾತುವಸ್ತುವು, ಮಂಗಲಕರವೂ, ಪರಿಶುದ್ಧವೂ ಸರ್ವಕಾಮಪ್ರದವೂ ಆದುದು.

ಗೋಮೂತ್ರಾದ್ಗುಗ್ಗುಲುರ್ಜಾತಃ ಸುಗಂಧಿಃ ಪ್ರಿಯದರ್ಶನಃ ।
ಆಹಾರಃ ಸರ್ವದೇವಾನಾಂ ಭಾಸ್ಕರಸ್ಯ ವಿಶೇಷತಃ ॥ ೫೪ ॥

ಯದ್ಬೀಜಂ ಜಗತಃ ಕಿಂಚಿತ್ತಜ್ಜ್ಞೇಯಂ ಕ್ಷೀರಸಂಭವಂ ।
ದಧ್ನಃ ಸರ್ವಾಣಿ ಜಾತಾನಿ ಮಾಂಗಲ್ಯಾನ್ಯರ್ಥಸಿದ್ಧಯೇ ॥ ೫೫ ॥

ಘೃತಾದಮೃತಮುತ್ಪನ್ನಮಮರಾಣಾಮತಿಪ್ರಿಯಂ ।
ತಸ್ಮಾದ್ಘೃತೇನ ಪಯಸಾ ದಧ್ನಾ ಯಃ ಸ್ನಾಪಯೇದ್ರವಿಂ ॥ ೫೬ ॥

ತದಂತೇ ಚೋಷ್ಣತೋಯೇನ ಕಷಾಯೈಶ್ಚ ನಿರೂಪಯೇತ್ ।
ಸ್ನಾಪ್ಯ ಶೀತಾಂಬುನಾ ಪಶ್ಚಾದ್ಭಾನುಂ ರೋಚನಯಾಲಭೇತ್ ॥ ೫೭ ॥

ಪೂಜಯೇದ್ಬಿಲ್ವಪತ್ರೈಶ್ಚ ಪದ್ಮೈರ್ನೀಲೋತ್ಪಲೈಸ್ತಥಾ ।
ಅರ್ಘ್ಯಂ ದದ್ಯಾತ್ತತಃ ಪಶ್ಚಾತ್ಸವಜ್ರಂ ಗುಗ್ಗುಲಂ ಖಗ ॥ ೫೮ ॥

---

೫೪. ಸುಗಂಧಯುತವೂ, ನೋಡುವುದಕ್ಕೆ ಅಂದವೂ, ಆಘ್ರಾಣಿಸಲು ಪ್ರಿಯವೂ ಆದ ಗುಗ್ಗುಲವು ಗೋಮೂತ್ರದಿಂದ ಹುಟ್ಟಿದುದಾಗಿದೆ. ಗೋಕ್ಷೀರವು ಸರ್ವದೇವತೆಗಳಿಗೂ, ವಿಶೇಷವಾಗಿ ಸೂರ್ಯನಿಗೂ ಆಹಾರವಾಗತಕ್ಕದು.

೫೫. ಮತ್ತು ಜಗದ್ಬೀಜವೆನಿಸಿದ ವಸ್ತುವೆಲ್ಲವೂ ಕ್ಷೀರದಿಂದ ಹುಟ್ಟಿದುವೆಂದು ತಿಳಿಯಬೇಕು. ಮೊಸರಿನಿಂದ ಹುಟ್ಟಿದುವೆಲ್ಲವೂ ಮಂಗಳಕರಗಳೂ, ಕಾರ್ಯಸಿದ್ಧಿಯಾಗತಕ್ಕವುಗಳೂ ಆಗಿವೆ.

೫೬. ತುಪ್ಪದಿಂದ ಹುಟ್ಟಿದ ಅಮೃತವು ದೇವತೆಗಳಿಗೆ ಅತಿಪ್ರಿಯವಾದ ಆಹಾರ. ಆದುದರಿಂದ ತುಪ್ಪ, ಹಾಲು, ಮೊಸರು ಇವುಗಳಿಂದ ಮಾನವನು ಸೂರ್ಯನಿಗೆ ಸ್ನಾನ ಮಾಡಿಸಿ ಆ ಮೇಲೆ ಬಿಸಿನೀರಿನಿಂದಲೂ, ಕಷಾಯದ್ರವ್ಯಗಳಿಂದಲೂ ಸ್ನಾನಮಾಡಿಸಬೇಕು. ಅನಂತರ ತಣ್ಣೀರಿನಿಂದ ಸೂರ್ಯನಿಗೆ ಸ್ನಾನಮಾಡಿಸಿ ಗೋರೋಚನವನ್ನು ಉಜ್ಜಬೇಕು.

೫೮. ಅಯ್ಯಾ ಖಗನೇ! ಸ್ನಾನಾನಂತರ ಬಿಲ್ವಪತ್ರಗಳಿಂದಲೂ, ಪದ್ಮಗಳಿಂದಲೂ, ನೀಲೋತ್ಪಲಗಳಿಂದಲೂ ಪೂಜಿಸಬೇಕು. ಅನಂತರ ತುಪ್ಪದಲ್ಲಿ ಗುಗ್ಗುಲವನ್ನು ನೆನೆಯಿಸಿ ಧೂಪಹಾಕಬೇಕು.

ಪಾಯಸಂ ದಧಿ ಭಕ್ತಂ ಚ ವಜ್ರಂ ಚ ಮಧುನಾ ಸಹ ।
ನಿವೇದಯೇಚ್ಚ ಸದ್ಭಕ್ತ್ಯಾ ಭಕ್ಷ್ಯಾಣಿ ವಿವಿಧಾನಿ ಚ ॥ ೫೯ ॥

ಕೃತ್ವಾ ಪ್ರದಕ್ಷಿಣಂ ಪಶ್ಚಾತ್ಪ್ರಣಿಪತ್ಯ ಕ್ಷಮಾಪಯೇತ್ ।
ಅನೇನ ವಿಧಿನಾ ಭಾನುಂ ಷಡಂಗೇನ ದಿವಸ್ಪತಿಂ ॥ ೬೦ ॥

ಇಹಲೋಕೇ ಪರೇ ಚೈವ ಸರ್ವಾನ್ಕಾಮಾನ್ಸಮಗಚ್ಛತಿ ।
ಷಡಂಗವಿಧಿನಾ ತಂ ಚ ಪೂಜ್ಯೈವಂ ಸುಮನಾ ರವಿಂ ॥ ೬೧ ॥

ಸ್ವರ್ಗಂ ನಯೇತ್ಸ ಧೀಮಾಂಸ್ತು ಕುಲಾನಾಮೇಕವಿಂಶತಿಂ ।
ಸ್ವರ್ಗೇ ಸ್ಥಾಪ್ಯ ಸ್ವಯಂ ಗಚ್ಛೇತ್ ಜ್ಯೋತಿಷಂ ನಾಮ ತತ್ಪದಂ ॥ ೬೨ ॥

ಅಂಶೇನ ಭೋಜಕಾ ವೀರ ದೇವಕಾರ್ಯೇ ನಿಯೋಜಿತಾಃ ।
ಪ್ರಯಾಂತಿ ಸ್ವಾಮಿನಾ ಸಾರ್ಧಂ ಶ್ರೀಮದ್ಭಾನುಂ ಪರಂ ಮಹಃ ॥ ೬೩ ॥

---

೫೯. ಒಳಿಕ ಪಾಯಸ, ದಧ್ಯನ್ನ, ಮಧುಸಹಿತವಾದ ಆಜ್ಯ, ಇವುಗಳನ್ನೂ, ಬಗೆಬಗೆಯಾದ ಭಕ್ಷ್ಯಗಳನ್ನೂ ಭಕ್ತಿಯಿಂದ ನಿವೇದನಮಾಡಬೇಕು ಅನಂತರ ಪ್ರದಕ್ಷಿಣ ನಮಸ್ಕಾರಮಾಡಿ ಕ್ಷಮಾಪಣೆ ಕೇಳಬೇಕು.

೬೦. ದಿವಸ್ಪತಿಯಾದ ಭಾನುವನ್ನು ಈ ಷಡಂಗವಿಧಿಯಿಂದ ಪೂಜಿಸಿದವನು, ಇಹಲೋಕ ಮತ್ತು ಪರಲೋಕಗಳೆರಡರಲ್ಲೂ ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

೬೧. ಹೀಗೆ ಷಡಂಗವಿಧಿಯಿಂದ ಆ ಸೂರ್ಯನನ್ನು ಪೂಜಿಸಿ ಒಳ್ಳೆಯ ಮನಸ್ಸಿನಿಂದ ಕೂಡಿದವನಾಗಿರಬೇಕು.

೬೨. ಈ ಪ್ರಕಾರ ಆಚರಿಸಿದ ಬುದ್ಧಿವಂತನು ತನ್ನ ಇಪ್ಪತ್ತೊಂದು ತಲೆಮಾರಿನವರನ್ನು ಸ್ವರ್ಗಕ್ಕೆ ಒಯ್ಯುತ್ತಾನೆ. ಸ್ವರ್ಗದಲ್ಲಿ ಅವರನ್ನು ಸ್ಥಿರವಾಗಿ ಸ್ಥಾಪಿಸಿ ತಾನು ಜ್ಯೋತಿಷವೆಂಬ ಸ್ಥಾನಕ್ಕೆ ಹೋಗುವನು.

೬೩. ಎಲೈ ವೀರನೇ! ಆ ಸೂರ್ಯನ ಅಂಶದಿಂದ ಜನಿಸಿದ ಭೋಜಕರನ್ನು ಸೂರ್ಯಪೂಜಾಕಾರ್ಯದಲ್ಲಿ ನಿಯೋಜಿಸಬೇಕು. ಹೀಗೆ ನಿಯುಕ್ತರಾದ ಅವರು ತಮ್ಮನ್ನು ನಿಯೋಜಿಸಿದ ಯಜಮಾನನ ಸಂಗಡ ಮಹಾತೇಜಃಸ್ವರೂಪನಾದ ಶ್ರೀಮದ್ಭಾನುದೇವನನ್ನು ಹೊಂದುತ್ತಾರೆ.

**ಭುಕ್ತ್ವಾ ಭೋಗಾಂಸ್ತು ವಿಪುಲಾನ್ಭೋಜಕೋ ಭೋಗಸಂಮಿತಃ ।**
**ಕಾಲಾತ್ಪುನರಿಹಾಯಾತಃ ಪೃಥಿವ್ಯಾ ಏಕರಾಡ್ಭವೇತ್ ॥ ೬೪ ॥**

**ಪುಷ್ಪಂ ಪತ್ರಂ ಫಲಂ ತೋಯಂ ಯದ್ಗತಂ ಭಾಸ್ಕರಾರ್ಚನೇ ।**
**ಸೌರಾ ಗಾವಶ್ಚ ಗಚ್ಛಂತಿ ಸೂರ್ಯಲೋಕಂ ನ ಸಂಶಯಃ ॥ ೬೫ ॥**

**ಯಃ ಪಿಬೇದ್ಭೋಜನೇ ಧೇನೋರದತ್ತಂ ಭಾನವೇ ಪಯಃ ।**
**ಸ ಗಚ್ಛೇನ್ನರಕಂ ಘೋರಮಕುರ್ವಂಸ್ತರ್ಪಣಂ ರವೇಃ ॥ ೬೬ ॥**

**ಏಕಕಾಲಂ ಪಿಬೇತ್ಕ್ಷೀರಂ ಧೇನೂನಾಂ ಭಾಸ್ಕರಸ್ಯ ತು ।**
**ಅನೇನ ಸ್ನಾಪಯೇದ್ದೇವಂ ಕ್ಷೀರೇಣ ಖಗಸತ್ತಮ ॥ ೬೭ ॥**

**ಪ್ರತ್ಯೂಷೇ ಯದ್ಭವೇತ್ಕ್ಷೀರಂ ಧೇನೂನಾಂ ಭಾಸ್ಕರಸ್ಯ ತು ।**
**ಅನೇನ ಸ್ನಾಪಯೇದ್ದೇವಂ ಕೃತ್ಸ್ನೇನ ಗರುಡಾಗ್ರಜ ॥ ೬೮ ॥**

---

೬೪. ಆ ಭೋಜಕನು ಭೋಗಯುಕ್ತನಾಗಿ ವಿಪುಲ ಭೋಗಗಳನ್ನು ಅನುಭವಿಸಿ ಕೆಲವುಕಾಲದ ಮೇಲೆ ಪುನಃ ಇಲ್ಲಿಗೆ ಬಂದು ಭೂಮಿಗೆ ರಾಜನಾಗುತ್ತಾನೆ.

೬೫. ಸೂರ್ಯಾರ್ಚನಕ್ಕಾಗಿ ಒದಗಿದ ಪತ್ರ, ಪುಷ್ಪ, ಫಲ, ಜಲ ಇವುಗಳೂ, ಸೂರ್ಯನಿಗೆ ಸಂಬಂಧಪಟ್ಟ ಪೂಜಾದ್ರವ್ಯಸಿದ್ಧಿಗೋಸ್ಕರ ದೊರೆತ ಗೋವುಗಳೂ ಕೂಡ, ಸೂರ್ಯಲೋಕಕ್ಕೆ ಹೋಗುತ್ತವೆ. ಇದರಲ್ಲಿ ಸಂಶಯವಿಲ್ಲ.

೬೬. ಭೋಜನಮಾಡುವಾಗ ಸೂರ್ಯನಿಗೆ ಸಮರ್ಪಿಸದೆ ಕ್ಷೀರವನ್ನು ಪಾನಮಾಡಿದ ಮನುಷ್ಯನು ಸೂರ್ಯತರ್ಪಣಮಾಡದೆ ಇದ್ದವರಿಗೆ ಒದಗುವ ಭಯಂಕರವಾದ ನರಕವನ್ನು ಹೊಂದುತ್ತಾನೆ.

೬೭. ಎಲೈ ಖಗನೇ! ಸೂರ್ಯಪೂಜಾರ್ಥವಾಗಿ ಉಪಲಬ್ಧವಾದ ಹಸುಗಳ ಒಂದುಹೊತ್ತಿನ ಹಾಲನ್ನು ಕುಡಿಯಬೇಕು. ಇನ್ನೊಂದುಹೊತ್ತಿನ ಹಾಲಿನಿಂದ ದೇವನಿಗೆ ಸ್ನಾನಮಾಡಿಸಬೇಕು.

೬೮. ಎಲೈ ಅರುಣನೇ! ಕೇಳು; ಬೆಳಗಿನ ಹೊತ್ತಿನಲ್ಲಿ ಆ ಹಸುಗಳಿಂದ ದೊರೆತ ಹಾಲನ್ನೆಲ್ಲಾ ಸೂರ್ಯದೇವನಿಗೆ ಅಭಿಷೇಕಮಾಡಬೇಕು.

ಯಸ್ತು ಲೋಕೇ ಭಜೇತ್ಸರ್ವಂ ನ ದೇವಾಯ ನಿವೇದಯೇತ್ ।
ಯಾವಂತೋ ರೋಮಕೂಪಾಶ್ಚ ಗವಾಂ ದೇಹೇ ಖಗಾಧಿಪ ॥
ತಾವದ್ವರ್ಷಸಹಸ್ರಾಣಿ ನರಕೇ ಪಚ್ಯತೇ ಖಗ ॥ ೭೯ ॥

ಪೂಜಿತಂ ಪೂಜ್ಯಮಾನಂ ವಾ ಯಃ ಕಶ್ಚಿಚ್ಛೃಣುಯಾದ್ರವಿಂ ।
ಶ್ರುತ್ವಾನುಮೋದತೇ ಯಸ್ತು ಸ ಯಜ್ಞಫಲಮಶ್ನುತೇ ॥ ೮೦ ॥

ಭಾಸ್ಕರಂ ಪೂಜಿತಂ ದೃಷ್ಟ್ವಾ ಸರ್ವಪಾಪೈಃ ಪ್ರಮುಚ್ಯತೇ ।
ಹರ್ಷಾತ್ಪ್ರಣಮ್ಯ ವೈ ಭಾನುಂ ತಸ್ಯಲೋಕೇ ಮಹೀಯತೇ ॥ ೮೧ ॥

ಪೂಜ್ಯಮಾನಂ ರವಿಂ ಭಕ್ತ್ಯಾ ಯಃ ಪಶ್ಯೇನ್ಮಾನವಃ ಖಗ ।
ಸೋಽಪಿ ಯಜ್ಞಫಲಂ ಕೃತ್ಸ್ನಂ ಪ್ರಾಪ್ನುಯಾನ್ನಾತ್ರ ಸಂಶಯಃ ॥ ೮೨ ॥

ಶ್ರುತ್ವಾನುಮೋದತೇ ಯಸ್ತು ಪೂಜ್ಯಮಾನಂ ದಿವಾಕರಂ ।
ತತ್ಸರ್ವಂ ಫಲಮಾಪ್ನೋತಿ ಪ್ರಸಾದಾದ್ಭಾಸ್ಕರಸ್ಯ ತು ॥ ೮೩ ॥

---

೭೯. ಅಯ್ಯಾ ಖಗಾಧಿಪನೇ! ಹಸುಗಳಲ್ಲಿ ಸಮೃದ್ಧಿಯಾಗಿ ಹಾಲುಸಿಕ್ಕಿದರೂ ಅದನ್ನು ಸೂರ್ಯದೇವನಿಗೆ ಸಮರ್ಪಿಸದೇಹೋದರೆ, ಅಂತಹವನು ಹಸುಗಳ ದೇಹದಲ್ಲಿ ಎಷ್ಟು ರೋಮಕೂಪಗಳಿವೆಯೋ, ಅಷ್ಟು ಸಹಸ್ರವರ್ಷಗಳವರೆಗೆ ನರಕದಲ್ಲಿ ಬೇಯುತ್ತಾನೆ.

೮೦. ಸೂರ್ಯನನ್ನು ಪೂಜಿಸಿರುವುದನ್ನೂ, ಪೂಜೆಮಾಡುತ್ತಿರುವುದನ್ನೂ ನೋಡಿ, ಕೇಳಿ, ಸಂತೋಷಿಸುವ ಮನುಷ್ಯನು, ಯಜ್ಞಮಾಡಿದುದರಿಂದ ಲಭಿಸುವಷ್ಟು ಫಲವನ್ನು ಹೊಂದುತ್ತಾನೆ.

೮೧. ಪೂಜಿತನಾದ ಭಾಸ್ಕರನನ್ನು ನೋಡಿದವನು ಸರ್ವಪಾಪಗಳಿಂದಲೂ ಬಿಡುಗಡೆಹೊಂದುತ್ತಾನೆ. ಸಂತೋಷದಿಂದ ಸೂರ್ಯನಿಗೆ ನಮಸ್ಕಾರಮಾಡಿದವನು ಸೂರ್ಯಲೋಕವನ್ನು ಹೊಂದಿ ಅಲ್ಲಿ ಪೂಜಿಸಲ್ಪಡುತ್ತಾನೆ.

೮೨. ಸೂರ್ಯದೇವನ ಪೂಜೆ ನಡೆಯುತ್ತಿರುವಾಗ ಸೂರ್ಯಮೂರ್ತಿಯನ್ನು ಭಕ್ತಿಯಿಂದ ನೋಡಿದ ಮನುಷ್ಯನು ಸಂಪೂರ್ಣವಾದ ಯಜ್ಞಫಲವನ್ನು ಹೊಂದುವನು. ಇದರಲ್ಲಿ ಸಂಶಯವಿಲ್ಲ.

೮೩. ಸೂರ್ಯನ ಪೂಜೆಯಾಗುತ್ತಿರುವುದನ್ನು ಕೇಳಿ ಸಂತೋಷಪಡುವ ಮನುಷ್ಯನು ಸೂರ್ಯನ ಅನುಗ್ರಹದಿಂದ ಹಿಂದೆ ಹೇಳಿದ ಸಕಲಫಲಗಳನ್ನೂ ಹೊಂದುತ್ತಾನೆ.

ವಿಕೀಜನ್ಮಾನುಗಂ ದಾನಂ ಭಕ್ತ್ಯಾ ಯಚ್ಚ ನಿವೇದಿತಂ ।
ಜಪಯಜ್ಞಾದ್ವಿಯುಕ್ತೇಭ್ಯಃ ಸಹಸ್ರಭವಿಕಂ ಸ್ಮೃತಂ ॥ ೭೪ ॥

ಆಭೂತಸಂಪ್ಲವಸ್ಥಾಯಿ ಪ್ರದಾನಂ ಜಪಜೀವಿನಾಂ ।
ಅತ್ಯಲ್ಪಮಪಿ ಯದ್ದತ್ತಂ ವಾಚಕಾಯ ಖಗಾಧಿಪ ॥
ತನ್ಮಹಾಪ್ರಲಯಂ ಯಾವದ್ದಾತುರ್ಭೋಗಾಯ ಕಲ್ಪತೇ ॥ ೭೫ ॥

ನ ದಾನಮಲ್ಪಂ ಬಹುಧಾ ಕಿಂಚಿದಸ್ತಿ ವಿಜಾನತಾಂ ।
ದೇಶಕಾಲವಿಧಿಶ್ರದ್ಧಾಪಾತ್ರಯುಕ್ತಂ ತದಕ್ಷಯಂ ॥ ೭೬ ॥

ಪಾತ್ರೇ ದೇಶೇ ಚ ಕಾಲೇ ಚ ವಿಧಿನಾ ಶ್ರದ್ಧಯಾ ಚ ಯತ್ ।
ದತ್ತಂ ಹುತಂ ಕೃತಂ ಚೈವ ತದನಂತಫಲಂ ಭವೇತ್ ॥ ೭೭ ॥

---

೭೪. ಸೂರ್ಯಪ್ರೀತಿಗಾಗಿ ದಾನಮಾಡದವರು, ಭಕ್ತಿಪೂರ್ವಕವಾಗಿ ಭೋಜ್ಯ ವಸ್ತುಗಳನ್ನು ಸೂರ್ಯನಿಗೆ ಸಮರ್ಪಿಸದವರು ಮತ್ತು ಜಪ, ಯಜ್ಞ ಇವುಗಳನ್ನಾಚರಿಸ ದವರು, ಇಂಥವರಿಗೆ ಒಂದು ಜನ್ಮದಲ್ಲಿ ಕೊಟ್ಟರೂ ಸಹಸ್ರಜನ್ಮಗಳಲ್ಲಿ ದಾನಮಾಡಿ ದಷ್ಟು ಫಲವಾಗುವುದು.

೭೫. ಎಲೈ ಖೇಚರಶ್ರೇಷ್ಠನೇ! ವಾಚಕನಿಗೆ ದಾನಕೊಟ್ಟುದು ಅತ್ಯಲ್ಪವಾ ದರೂ, ಅದು ದಾನಮಾಡಿದವನಿಗೆ ಮಹಾಪ್ರಳಯಪರ್ಯಂತ ಭೋಗವನ್ನುಂಟುಮಾ ಡಲು ಸಹಾಯವಾಗುತ್ತದೆ.

೭೬. ಯಾವ ದಾನವೇ ಆಗಲಿ ಜ್ಞಾನಿಗಳಿಗೆ "ಇದು ಅಲ್ಪ; ಇದು ಮಹತ್ತರ ವಾದುದು" ಎಂಬ ಭೇದವಿಲ್ಲ. ಅಲ್ಪ ದಾನವಾದರೂ ಸರಿಯಾದ ದೇಶ, ಕಾಲ, ವಿಧಿ, ಶ್ರದ್ಧೆ, ಇವುಗಳಿಂದ ಕೂಡಿದುದಾಗಿ ಸತ್ಪಾತ್ರದಲ್ಲಿ ವಿನಿಯೋಗವಾದರೆ ಅದೇ ಅಕ್ಷಯ ಫಲಪ್ರದವಾಗುವುದು.

೭೭. ಪಾತ್ರ, ದೇಶ, ಕಾಲ, ಶ್ರದ್ಧೆ ಇವುಗಳ ಔಚಿತ್ಯಸಹಿತವಾಗಿ ಕೊಡುವ ದಾನವು; ಮಾಡುವಹೋಮ, ಆಚರಿಸುವಕಾರ್ಯ ಇವೆಲ್ಲವೂ ಅನಂತವಾದ ಫಲ ದಾಯಕವಾಗುವುದು.

ತಿಲಾರ್ಧಮಪಿ ಯದ್ವೀರ ದೀಯತೇ ಶ್ರದ್ಧಯಾ ದ್ವಿಜ ।
ಸತ್ಪಾತ್ರೇ ವಿಧಿವದ್ಭಕ್ತ್ಯಾ ತದ್ಭವೇತ್ಸರ್ವಕಾಮಿಕಂ ॥ ೭೮ ॥

ಯತ್ಸ್ನಾತಂ ಸ್ನಾನಸಲಿಲೈಃ ಶೀಲಭಸ್ಮಪ್ರಮಾರ್ಜಿತಂ ।
ತತ್ಪಾತ್ರಂ ಸರ್ವಪಾತ್ರೇಭ್ಯ ಉತ್ತಮಂ ಪರಿಕೀರ್ತಿತಂ ॥ ೭೯ ॥

ಜಪೋ ದಮೋ ಯಮಃ ಪುಂಸಾಂ ತ್ರಾತಾ ಸಂಸಾರಸಾಗರಾತ್ ।
ಅಜ್ಞಾನಾಂ ಪಾಪನೇತ್ರಾಣಾಂ ತತ್ಪಾತ್ರಂ ಪರಮಂ ಸ್ಮೃತಂ ॥ ೮೦ ॥

ಜ್ಞಾನಪ್ಲವೇನ ಚೋಪೇತಂ ಶಾಸ್ತ್ರಂ ಪಾಪಮಹಾರ್ಣವಾತ್ ।
ಅಜ್ಞಾನ್ಸಂತಾರಯೇನ್ನೂನಂ ಕಿಂ ಶಿಲಾ ತಾರಯೇಚ್ಛಿಲಾಂ ॥ ೮೧ ॥

---

೭೮. ಎಲೈ ವೀರನೇ! ತಾನು ದಾನಮಾಡುವುದು ಅರ್ಧಎಳ್ಳುಕಾಳಿನಷ್ಟಾದರೂ, ಶ್ರದ್ಧೆಯಿಂದ ಸತ್ಪಾತ್ರದಲ್ಲಿ ವಿಧಿಪ್ರಕಾರ ಕೊಟ್ಟರೆ, ಅದೇ ಸರ್ವೇಷ್ಟಾರ್ಥಗಳನ್ನೂ ಕೊಡುವುದು.

೭೯. ಜ್ಞಾನವೆಂಬ ಜಲದಿಂದ ಸ್ನಾನಮಾಡಿ, ಶೀಲವೆಂಬ ಭಸ್ಮವನ್ನು ಧರಿಸಿರುವ ಪಾತ್ರವು ಸರ್ವಪಾತ್ರಗಳಿಗಿಂತ ಉತ್ತಮವೆಂದು ಹೇಳಿದೆ.

೮೦ ಜಪ, ಯಮ, ದಮ ಇವು ಪುರುಷರನ್ನು ಸಂಸಾರಸಾಗರದಿಂದ ದಾಟಿಸತಕ್ಕವು. ಇವೊಂದನ್ನೂ ತಿಳಿಯದೆ ಪಾಪಮಾರ್ಗದಲ್ಲಿ ನಡೆಯುತ್ತಿರುವವರಿಗಿಂತ ಜಪಾದಿಗಳನ್ನು ತಿಳಿದವರು ದಾನಕ್ಕೆ ಉತ್ತಮಪಾತ್ರರೆಂದು ತಿಳಿದುಕೊಳ್ಳಬೇಕು.

೮೧. ಶಾಸ್ತ್ರಜ್ಞಾನವೆಂಬ ಹಡಗು, ಅಜ್ಞರನ್ನು ಪಾಪವೆಂಬ ಮಹಾಸಮುದ್ರದಿಂದ ನಿಜವಾಗಿಯೂ ದಾಟಿಸುವುದು. ತಾನೇ ಭಾರದಿಂದ ಕೂಡಿದ ಕಲ್ಲು, ಮುಳುಗುತ್ತಿರುವ ಮತ್ತೊಂದು ಕಲ್ಲನ್ನು ಹೇಗೆ ತೇಲಿಸಲು ಸಾಧ್ಯವಿಲ್ಲವೋ, ಅದರಂತೆ ತಾನೇ ಅಜ್ಞಾನಿಯಾದ ಪುರುಷನು ಇನ್ನೊಬ್ಬ ಅಜ್ಞಾನಿಯನ್ನು ಉದ್ಧಾರಮಾಡುವುದೂ ಸರ್ವಥಾ ಅಸಂಭವ.

ದ್ವಿಜಾನಾಂ ವೇದವಿದುಷಾಂ ಕಟಸಂಭೋಗಿ ಯತ್ಫಲಂ ।
ಹಂತಕಾರಪ್ರದಾನೇನ ತತ್ಫಲಂ ಜಪಜೀವಿನೇ ॥ ೮೨ ॥

ಗೃಹಂ ಯಸ್ಯೈತ್ಯ ಜೀವೋಽಯಂ ಭುಂಕ್ತೇ ಸತ್ಕೃತಿಸತ್ಕೃತಃ ।
ಕುಲಮುತ್ತಾರಯೇತ್ತಸ್ಯ ನರಕಾರ್ಣವಸಂಸ್ಥಿತಂ ॥ ೮೩ ॥

ಯಜ್ಞಾಗ್ನಿಹೋಮತೀರ್ಥೇಷು ಯತ್ಫಲಂ ಪರಿಕೀರ್ತಿತಂ ।
ಜಪಿನಾಮನ್ನದಾನೇನ ತತ್ಸಮಗ್ರಂ ಫಲಂ ಲಭೇತ್ ॥ ೮೪ ॥

ಭೋಜನೇ ಶಾಂತಚಿತ್ತಾಯ ಪರಿಧ್ಯಾನರತಾಯ ಚ ।
ಶ್ರದ್ಧಯಾನ್ನಂ ಸಕೃದ್ದತ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೮೫ ॥

ಜಪತಃ ಶಾಂತಿಸಂಯುಕ್ತಾನಾದಿತ್ಯಾರ್ಪಿತಚೇತಸಃ ।
ಭೋಜಯಿತ್ವಾ ಸಕೃದ್ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥ ೮೬ ॥

---

೮೨. ವೇದಜ್ಞರು ಎನಿಸಿಕೊಂಡು ಜಪಾದಿಗಳನ್ನು ಅನುಷ್ಠಾನಮಾಡದೆ ಇರುವ ಬ್ರಾಹ್ಮಣರಿಗೆ ಸೊಂಟಮುಳುಗುವಷ್ಟು ಎಂದರೆ ಸಮೃದ್ಧಿಯಾಗಿ ಕೊಟ್ಟರೆ ಬರುವಷ್ಟು ಫಲವು; ಜಪಮಾಡಿಕೊಂಡು ಜೀವಿಸುವವರಿಗೆ ಹಂತಕಾರಪ್ರಮಾಣದಷ್ಟು ಕೊಟ್ಟರೂ ಬರುವುದು.

೮೩. ಆ ಜಪಜೀವಿಯನ್ನು ಮನೆಗೆ ಕರೆದುತಂದು ಉಕ್ತರೀತಿಯಿಂದ ಸತ್ಕಾರ ಮಾಡಿ ಭೋಜನಮಾಡಿಸುವುದು ಬಹುಪುಣ್ಯಕರವು; ಈ ಮನುಷ್ಯನ ಕುಲದವರು ನರಕಸಮುದ್ರದಲ್ಲಿ ಬಿದ್ದಿದ್ದರೂ ಆ ಪುಣ್ಯದಿಂದ ಉದ್ಧಾರವಾಗುವರು.

೮೪. ಯಜ್ಞ, ಹೋಮ, ತೀರ್ಥಸ್ನಾನ ಇವುಗಳನ್ನು ಮಾಡಿದರೆ ಬರುವಷ್ಟು ಫಲವು ಜಪಜೀವಿವಿಪ್ರನಿಗೆ ಅನ್ನದಾನಮಾಡುವುದರಿಂದಲೇ ಸಮಗ್ರವಾಗಿ ಬರುವುದು.

೮೫. ಭೋಜನಕಾಲದಲ್ಲಿ ಶಾಂತಚಿತ್ತನೂ, ಭಗವದ್ಧ್ಯಾನರತನೂ ಆದವನಿಗೆ ಶ್ರದ್ಧೆಯಿಂದ ಒಂದಾವರ್ತಿ ಅನ್ನದಾನಮಾಡಿದರೂ ಅಂತಹವನು ಸರ್ವಪಾಪಗಳಿಂದಲೂ ಮುಕ್ತನಾಗುವನು.

೮೬. ಜಪಶೀಲನೂ, ಶಾಂತಿಯುಕ್ತನೂ, ಸೂರ್ಯಾರ್ಪಿತಚಿತ್ತನೂ ಆದವನಿಗೆ ಒಂದಾವೃತ್ತಿ ಭೋಜನಮಾಡಿಸಿದ ಭಕ್ತನು ತನ್ನ ಸರ್ವಕಾಮಗಳನ್ನೂ ಹೊಂದುವನು.

ಧ್ಯಾಯಮಾನೋ ರವೇಃ ಸೂಕ್ತಂ ಭೋಜಯೇತ್ಸತತಂ ಚ ಯಃ ।
ತತಃ ಸಾಕ್ಷಾದನೇನೈವ ತದ್ಭುಕ್ತಮಶನಂ ಭವೇತ್ ॥ ೮೭ ॥

ಪಿತೄನುದ್ದಿಶ್ಯ ಯಃ ಶ್ರಾದ್ಧೇ ಭೋಜಯೇದ್ಭೋಜಕಂ ನರಃ ।
ಸ ಸ್ಥಾನಂ ಸಮವಾಪ್ನೋತಿ ಭಾನವೀಯಮಸಂಶಯಃ ॥ ೮೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ
ಧೇನುಮಾಹಾತ್ಮ್ಯವರ್ಣನಂ ನಾಮ ಸಪ್ತಾಶೀತ್ಯಧಿಕ
ಶತತಮೋಽಧ್ಯಾಯಃ.



೮೭. ಸೂರ್ಯಸೂಕ್ತವನ್ನು ಸದಾ ಚಿಂತನಮಾಡುತ್ತಾ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಸೂರ್ಯನೇ ಸಾಕ್ಷಾತ್ತಾಗಿಬಂದು ಆ ಅನ್ನವನ್ನು ಸೇವಿಸಿದಹಾಗಾಗುವುದು.

೮೮. ಪಿತೃಗಳನ್ನುದ್ದೇಶಿಸಿ ಮಾಡುವ ಶ್ರಾದ್ಧದಲ್ಲಿ ಭೋಜಕನಿಗೆ ಭೋಜನ ಮಾಡಿಸಿದವನು ಸೂರ್ಯಲೋಕವನ್ನು ಹೊಂದುವನು ಇದರಲ್ಲಿ ಸಂಶಯವಿಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೌರಧರ್ಮಾಂತರ್ಗತವಾದ ಧೇನುಮಾಹಾತ್ಮ್ಯವರ್ಣನೆಯೆಂಬ ನೂರ
ಎಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾಶೀತ್ಯುತ್ತರಶತತಮೋಽಧ್ಯಾಯಃ

---

॥ ಸಪ್ತಾಶ್ವ ಉವಾಚ ॥

ಸೂರ್ಯಾಯ ಸರ್ವಪಾಕಾನ್ನಂ ನಿವೇದ್ಯಾಗ್ನೌ ಚ ಹೋಮಯೇತ್ ।
ಹುತ್ವಾಗ್ನೌ ಪ್ರಕ್ಷಿಪೇದ್ವೀರ ಬಲಿಂ ದಿಕ್ಷು ಸಮಂತತಃ ॥ ೧ ॥

ಸೂರ್ಯಾಗ್ನಿಗುರುವಿಪ್ರಾಣಾಂ ಸರ್ವಪಾಕಾನ್ನಮನ್ವಹಂ ।
ಯೋಽನಿವೇದ್ಯಾತ್ಮನಾ ಭುಂಕ್ತೇ ಸ ಭುಂಕ್ತೇ ಕಿಲ್ಬಿಷಂ ನರಃ ॥ ೨ ॥

ಕೃಷಿಪಾಲ್ಯೇ ಚ ವಾಣಿಜ್ಯೇ ಕ್ರೋಧಸತ್ಯಕ್ಷಯಾದಿಭಿಃ ।
ಪುಂಸಾಂ ಪಾಪಾನಿ ವರ್ಧಂತೇ ಸೂನಾದೋಷೈಶ್ಚ ಪಂಚಭಿಃ ॥ ೩ ॥

---

## ನೂರಎಂಭತ್ತೆಂಟನೆಯ ಅಧ್ಯಾಯ

೧. ಸಪ್ತಾಶ್ವನು ಹೇಳುತ್ತಾನೆ—ಎಲೈ ವೀರನೇ! ಅನ್ನ ಮೊದಲಾದ ಪಾಕ ವಸ್ತುಗಳನ್ನು ಸೂರ್ಯನಿಗೆ ನಿವೇದನಮಾಡಬೇಕಲ್ಲದೆ ಅಗ್ನಿಯಲ್ಲಿ ಹವಿಸ್ಸಿನ ಹೋಮವನ್ನೂ ಮಾಡಬೇಕು. ಅಗ್ನಿಯಲ್ಲಿ ಹೋಮಮಾಡಿದ ಬಳಿಕ ಸುತ್ತಲೂ ದಿಕ್ಕುಗಳಲ್ಲಿ ಬಲಿಯನ್ನು ಸಮರ್ಪಿಸಬೇಕು.

೨. ಪ್ರತಿದಿನವೂ ಅನ್ನ ಮುಂತಾದ ಸಮಸ್ತ ಪಾಕವಸ್ತುಗಳನ್ನೂ ಸೂರ್ಯ ಅಗ್ನಿ, ಗುರು, ವಿಪ್ರರುಗಳಿಗೆ ನಿವೇದನಮಾಡದೆ ತಾನೇ ಭೋಜನಮಾಡುವವನು ಪಾಪವನ್ನೇ ಭೋಜನಮಾಡಿದಂತೆ ಆಗುತ್ತದೆಂದು ತಿಳಿಯಬೇಕು.

೩. ಕೃಷಿ, ಪಶುಪಾಲನೆ, ವಾಣಿಜ್ಯ ಇವುಗಳನ್ನು ಅವಲಂಬಿಸುವಾಗ, ಕ್ರೋಧ ಸತ್ಯಕ್ಷಯ ಮೊದಲಾದುವುಗಳನ್ನು ಆಚರಿಸಬೇಕಾಗುವುದರಿಂದ ಮನುಷ್ಯರ ಪಾಪ

ಕಂಡನೀ ಪೋಷಣೀ ಚುಲ್ಲೀ ಉದಯಕುಂಭಃ ಪ್ರಮಾರ್ಜನೀ ।
ಪಂಚಸೂನಾ ಗೃಹಸ್ಥಸ್ಯ ತೇನ ಸ್ವರ್ಗಂ ನ ಗಚ್ಛತಿ ॥ ೪ ॥

ಸೂರ್ಯಾಗ್ನಿಗುರುಪೂಜಾಭಿಃ ಪಾಪೈರೇತೈರ್ನಲಿಪ್ಯತೇ ।
ಅನ್ಯೈಶ್ಚ ಪಾತಕೈರ್ಘೋರೈಸ್ತಸ್ಮಾತ್ಸಂಪೂಜಯೇತ್ಸದಾ ॥ ೫ ॥

ಸೂರ್ಯಾಗ್ನಿಗುರುನೈವೇದ್ಯಂ ಯಾವತ್ಸ್ಯಾದನ್ನಸಂಖ್ಯಯಾ ।
ತಾವದ್ವರ್ಷಸಹಸ್ರಾಣಿ ದಾತಾ ಸೂರ್ಯಪುರೇ ವಸೇತ್ ॥ ೬ ॥

ಘೃತಾಪೂಪಯುಕ್ತೈಃ ಸಿಕ್ತೈಃ ಪುಣ್ಯಂ ದಶಗುಣೋತ್ತರಂ ।
ಅವದಂಶಗುಣೈರ್ಯುಕ್ತಂ ಪುಣ್ಯಂ ಶತಗುಣಂ ಖಗ ॥ ೭ ॥

---

ಗಳು ವೃದ್ಧಿಯಾಗುತ್ತವೆ. ಅಲ್ಲದೆ ಐದು ವಿಧವಾದ ಸೂನಾದೋಷಗಳಿಂದಲೂ ಇವನ ಪಾಪವೃದ್ಧಿಯಾಗುವುದು.

೪. ೧ ಕಂಡನೀ, (ಕುಟ್ಟುವುದು) ೨ ಪೇಷಣೀ, (ಹಿಟ್ಟುಬೀಸುವುದು) ೩ ಚುಲ್ಲೀ (ಬೇಯಿಸುವುದು) ೪ ಉದಕುಂಭಃ (ಪಾತ್ರೆಯಲ್ಲಿ ನೀರನ್ನು ತುಂಬಿಡುವುದು) ೫ ಪ್ರಮಾರ್ಜನೀ, (ಕಸಗುಡಿಸುವುದು ಮತ್ತು ಸಾರಿಸುವುದು) ಇವುಗಳ ಮೂಲಕ ಗೃಹಸ್ಥನಿಗೆ ಪಂಚಸೂನಾದೋಷಗಳು ಪ್ರಾಪ್ತವಾಗುವುವು. ಹಾಗೆ ಪ್ರಾಪ್ತವಾದರೆ ಸ್ವರ್ಗಪ್ರಾಪ್ತಿಯಾಗುವುದಿಲ್ಲ.

೫. ಸೂರ್ಯ, ಅಗ್ನಿ, ಗುರು, ಇವರ ಪೂಜೆಮಾಡಿದರೆ ಈ ಪಂಚಸೂನಾಸಂಬಂಧವಾದ ಪಾಪಗಳು ಸೋಕುವುದಿಲ್ಲ. ಅಲ್ಲದೆ ಬೇರೆ ಭಯಂಕರವಾದ ಇತರ ಯಾವ ಪಾಪಗಳೂ ಉಂಟಾಗುವುದಿಲ್ಲ. ಆದುದರಿಂದ ಅವರನ್ನು ಚೆನ್ನಾಗಿ ಭಕ್ತಿಯಿಂದ ಪೂಜೆ ಮಾಡಬೇಕು.

೬. ಸೂರ್ಯ, ಗುರು, ಅಗ್ನಿ ಇವರುಗಳಿಗೆ ಸಮರ್ಪಿಸಿದ ಅನ್ನದ ಅಗುಳಿನ ಸಂಖ್ಯೆಯಷ್ಟು ಸಹಸ್ರವರ್ಷಗಳವರೆಗೆ ಪೂಜಿಸಿದ ಯಜಮಾನನು ಸೂರ್ಯಲೋಕದಲ್ಲಿ ವಾಸಿಸುವನು.

೭. ಸೂರ್ಯ,ಅಗ್ನಿ,ಗುರು ಇವರಿಗೆ ತುಪ್ಪದಲ್ಲಿ ಮಾಡಿದ ಅಪೂಪ(ಕಜ್ಜಾಯ) ವನ್ನು ಸಮರ್ಪಣೆಮಾಡುವುದರಿಂದ ಅನ್ನದಾನದ ಹತ್ತರಷ್ಟು ಪುಣ್ಯಬರುವುದು.

ಷಷ್ಟಿಕೌದನನೈವೇದ್ಯಂ ಸಹಸ್ರಗುಣಿತಂ ಫಲಂ ।
ಸುಗಂಧಶಾಲಿನೈವೇದ್ಯಂ ವಿಜ್ಞೇಯಮಯುತೋತ್ತರಂ ॥ ೮ ॥

ಭಕ್ಷ್ಯಾನ್ನಪಾನದಾನಾನಿ ತತ್ಫಲಾನಿ ತಥಾ ತಥಾ ।
ಯದ್ವಾ ತದ್ವಾ ಸದಾ ದೇಯಂ ಸೂರ್ಯಾಗ್ನಿಗುರುಸಾಧುಷು ॥ ೯ ॥

ಭಕ್ಷ್ಯಂ ನಿವೇದ್ಯ ಪೂರ್ವೋಕ್ತಮಕ್ಷಯಂ ಲಭತೇ ಫಲಂ ।
ಏವಂ ಯಃ ಕುರುತೇ ಭಕ್ತಿಂ ದೇವದೇವೇ ದಿವಾಕರೇ ॥
ಸ ಪಿತೄನ್ಸರ್ವಪಾಪೇಭ್ಯಃ ಸಮುದ್ಧೃತ್ಯ ದಿವಂ ನಯೇತ್ ॥ ೧೦ ॥

ಗಂಗಾಸ್ನಾನಮಿದಂ ಪುಣ್ಯಂ ದರ್ಶನಾತ್ಪ್ರಾಪ್ನುಯಾದ್ರವೇಃ ।
ಸರ್ವತೀರ್ಥಾಭಿಷೇಕಂ ಚ ಪ್ರಣಾಮಾದ್ವಿಂದತೇ ಖಗ ॥ ೧೧ ॥

---

ಖಾದ್ಯಗಳಿಂದ ಕೂಡಿದ ಪದಾರ್ಥಗಳನ್ನು ಸೂರ್ಯ, ಅಗ್ನಿ, ಗುರು ಇವರುಗಳಿಗೆ ಸಮರ್ಪಿಸಿದರೆ ನೂರರಷ್ಟು ಫಲಬರುವುದು.

೮. ಷಷ್ಟಿಕಧಾನ್ಯದಿಂದ ಅನ್ನಮಾಡಿ ನೈವೇದ್ಯಮಾಡಿದರೆ, ಸಾವಿರದಷ್ಟು ಫಲಬರುವುದು. ಸುಗಂಧರಾಜಭತ್ತದಿಂದ ಸಿದ್ಧವಾದ ಅನ್ನವನ್ನು ನೈವೇದ್ಯಮಾಡಿದರೆ ಹತ್ತುಸಾವಿರಪಾಲು ಫಲವನ್ನುಂಟುಮಾಡುವುದೆಂದು ತಿಳಿಯಬೇಕು.

೯. ಭಕ್ಷ್ಯ, ಅನ್ನ, ಪಾನ, ಇವುಗಳನ್ನು ದಾನಮಾಡುವುದರಿಂದ ಅದದಕ್ಕೆ ಅನುಗುಣವಾಗಿ ಫಲವು ಅಭಿವೃದ್ಧಿಯಾಗುವುದು. ಹೀಗೆ ಸೂರ್ಯ, ಅಗ್ನಿ, ಗುರು, ಮತ್ತು ಸಾಧು ಇವರಿಗೆ ಹಿಂದೆ ಹೇಳಿದಂತೆ ಭಕ್ಷ್ಯವನ್ನೂ, ಅನ್ನವನ್ನೂ ಸಮರ್ಪಣೆ ಮಾಡಿದರೆ ಅಕ್ಷಯವಾದ ಫಲವನ್ನು ಹೊಂದುತ್ತಾನೆ.

೧೦. ಹೀಗೆ ದೇವದೇವನಾದ ದಿವಾಕರನನ್ನು ಭಕ್ತಿಯಿಂದ ಸೇವೆಮಾಡಿದವನು ತನ್ನ ಪಿತೃಗಳನ್ನು ಸರ್ವಪಾಪಗಳಿಂದಲೂ ಉದ್ಧಾರಮಾಡಿ, ಅವರಿಗೆ ಸ್ವರ್ಗಪ್ರಾಪ್ತಿಯಾಗುವಂತೆ ಮಾಡುವನು.

೧೧. ಎಲೈ ಖಗನೇ! ಸೂರ್ಯದರ್ಶನಮಾಡುವುದರಿಂದ ಗಂಗಾಸ್ನಾನಮಾಡಿದಷ್ಟು ಪುಣ್ಯಫಲವನ್ನು ಹೊಂದುತ್ತಾನೆ. ಸೂರ್ಯನಮಸ್ಕಾರ ಮಾಡುವುದರಿಂದ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದಷ್ಟು ಫಲವನ್ನು ಹೊಂದುತ್ತಾನೆ.

ಮುಚ್ಯತೇ ಸರ್ವಪಾಪೇಭ್ಯಃ ಪ್ರಣಮ್ಯ ಶಿರಸಾ ರವಿಂ ।
ಶುಶ್ರೂಷಯಾ ಚ ಸಂಧ್ಯಾಯಾಂ ಸೂರ್ಯಲೋಕೇ ಮಹೀಯತೇ ॥ ೧೨ ॥

ಯುಗಪತ್ಪೂಜಿತಾಸ್ತೇನ ಬ್ರಹ್ಮವಿಷ್ಣುಮಹೇಶ್ವರಾಃ ।
ಪಿತರಃ ಸರ್ವದೇವಾಶ್ಚ ಭವೇಯುಃ ಪೂಜಿತೇ ರವೌ ॥ ೧೩ ॥

ತುಷ್ಯಂತಿ ಪಿತರಸ್ತಸ್ಯ ಸುಕೃಷ್ಟೇನೇವ ಕರ್ಷಕಾಃ ।
ಯಃ ಶ್ರಾದ್ಧೇ ಭೋಜಯೇದ್ಭಕ್ತ್ಯಾ ಬ್ರಾಹ್ಮಣಂ ಜಪಜೀವಿನಂ ॥ ೧೪ ॥

ಅಪಿನಃ ಸ ಕುಲೇ ಕಿಂಚಿದುದ್ಧರೇತ್ಕಿಂ ಖಗೇಶ್ವರ ।
ಯಃ ಸಂಪೂಜ್ಯ ರವಿಂ ಶ್ರಾದ್ಧೇ ಭೋಜಯೇಜ್ಜಪಜೀವಿನಂ ॥ ೧೫ ॥

---

೧೨. ಸೂರ್ಯನಿಗೆ ದಂಡಪ್ರಣಾಮಮಾಡಿದವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ. ಮೂರು ಸಂಧ್ಯಾಕಾಲಗಳಲ್ಲಿಯೂ ಸೂರ್ಯನನ್ನು ಸೇವೆಮಾಡುವುದರಿಂದ ಆ ಭಕ್ತನು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ.

೧೩. ಸಂಧ್ಯಾಸಮಯಗಳಲ್ಲಿ ಸೂರ್ಯನು ಪೂಜಿತನಾದರೆ ಬ್ರಹ್ಮ,ವಿಷ್ಣು,ಮಹೇಶ್ವರರೂ ಪಿತೃದೇವತೆಗಳೂ, ಇತರ ಸರ್ವದೇವತೆಗಳೂ ಸಹ ಒಟ್ಟಿಗೆ ಪೂಜಿತರಾದಂತೆಯೇ ಎಂದು ತಿಳಿಯಬೇಕು.

೧೪. ಒಕ್ಕಲಿಗರು ಭೂಮಿಗೆ ಒಳ್ಳೆಯ ಉಳುಮೆಯಾದರೆ ಸಂತೋಷಪಡುವಂತೆ, ಸೂರ್ಯಭಕ್ತನು ಜಪಜೀವಿಯಾದ ಬ್ರಾಹ್ಮಣನಿಗೆ ಭಕ್ತಿಪೂರ್ವಕವಾಗಿ ಭೋಜನಮಾಡಿಸಿದರೆ ಆತನ ಪಿತೃಗಳು ಸಂತೋಷಹೊಂದುವರು.

೧೫. ಅಯ್ಯಾ ಖಗಶ್ರೇಷ್ಠನೇ! ಸೂರ್ಯಪ್ರೀತ್ಯರ್ಥವಾಗಿ ಆಚರಿಸುವ ಶ್ರಾದ್ಧದಲ್ಲಿ ಜಪಜೀವಿಗಳಾದ ಬ್ರಾಹ್ಮಣರಿಗೆ ಭೋಜನಮಾಡಿಸುವ ಭಕ್ತನು ತನ್ನ ಪಿತೃಗಳನ್ನು ಉದ್ಧಾರಮಾಡುವನು. ನಮ್ಮ ಕುಲದಲ್ಲಿಯೂ ಅಂತಹವನು ಜನಿಸಿದರೆ ಹಾಗೆಯೇ ನಮ್ಮ ಪಿತೃಗಳನ್ನೂ ಉದ್ಧಾರಮಾಡಿಯೇ ಮಾಡುವನು. ಇದರಲ್ಲಿ ಸಂದೇಹವಿಲ್ಲ.

ನೃತ್ಯಂತಿ ಪಿತರಸ್ತಸ್ಯ ಗಾಯಂತಿ ಚ ಪಿತಾಮಹಾಃ ।
ಅಸ್ಮಾಕಂ ಸ ಕುಲೇ ಪ್ರಾಜ್ಞೋ ವಾಚಕಂ ಭೋಜಯಿಷ್ಯತಿ ॥ ೧೬ ॥

ಪುರಾಣವಿದಮಾಯಾಂತಂ ದೃಷ್ಟ್ವೈವ ಸಹಸಂಸ್ಥಿತಾಃ ।
ಕ್ರೀಡಂತ್ಯೋಷಧಯಃ ಸರ್ವಾ ಯಾಸ್ಯಾಮಃ ಸ್ವರ್ಗಮಕ್ಷಯಂ ॥ ೧೭ ॥

ಅನುಗ್ರಹಾಯ ಲೋಕಾನಾಂ ಶ್ರದ್ಧಾಯಾಶ್ಚ ಪರೀಕ್ಷಣೇ ।
ಚರಂತ್ಯತಿಥಿರೂಪೇಣ ಪಿತರೋ ದೇವತಾಸ್ತಥಾ ॥ ೧೮ ॥

ತಸ್ಮಾದತಿಥಿಮಾಯಾಂತಮಗ್ರೇ ಗಚ್ಛೇತ್ಕೃತಾಂಜಲಿ ।
ಸ್ವಾಗತಾಸನಪಾದಾರ್ಘ್ಯಸ್ನಾನಾನ್ನಶಯನಾದಿಭಿಃ ॥ ೧೯ ॥

---

೧೬. "ನಮ್ಮ ಕುಲದಲ್ಲಿ ಪ್ರಾಜ್ಞನಾದವನು ಹುಟ್ಟಿ ಈಗ ವಾಚಕನಿಗೆ ಭೋಜನಮಾಡಿಸುವನೆಂ"ದು ಪಿತೃಲೋಕದಲ್ಲಿ ಅವನ ಪಿತೃಗಳು ನರ್ತನಮಾಡುತ್ತಾರೆ ಪಿತಾಮಹರು ಗಾನಮಾಡುತ್ತಾರೆ.

೧೭. ಲತಾವೃಕ್ಷಾದಿಗಳು ಇರುವಲ್ಲಿಗೆ ಪುರಾಣವಾಚಕನು ಬರುತ್ತಿದ್ದರೆ ಅದನ್ನು ನೋಡಿದ ಮಾತ್ರದಿಂದಲೇ ಓಷಧಿಗಳೆಲ್ಲವೂ ಒಟ್ಟುಸೇರಿ ನಮಗೆಲ್ಲಾ ಅಕ್ಷಯವಾದ ಸ್ವರ್ಗಪ್ರಾಪ್ತಿಯಾಗುವುದೆಂದು ಹರ್ಷಿಸುತ್ತಾ ಕುಣಿಯುತ್ತಿರುತ್ತವೆ.

೧೮. ಲೋಕಕ್ಕೆ ಅನುಗ್ರಹಮಾಡುವುದಕ್ಕಾಗಿಯೂ, ಮಾನವರ ಶ್ರದ್ಧೆಯನ್ನು ಪರೀಕ್ಷಿಸುವುದಕ್ಕಾಗಿಯೂ, ಪಿತೃಗಳೂ, ಮತ್ತು ದೇವತೆಗಳೂ ಸಹ, ಅತಿಥಿಗಳ ಸ್ವರೂಪದಿಂದ ಈ ಲೋಕದಲ್ಲಿ ಸಂಚರಿಸುತ್ತಿರುತ್ತಾರೆ.

೧೯. ಆದುದರಿಂದ ಅತಿಥಿಯು ಮನೆಗೆ ಬರುವುದನ್ನು ಕಂಡರೆ ಕೈಮುಗಿದುಕೊಂಡು ಅವನೆದುರಿಗೆ ಹೋಗಿ ಎದುರುಗೊಳ್ಳಬೇಕು. ಸುಖಾಗಮನವನ್ನು ಪ್ರಶ್ನಿಸಿ ಆಸನವನ್ನು ಹಾಕಿ ಕೂರಿಸಿ, ಕಾಲುತೊಳೆಯುವುದು, ಅರ್ಘ್ಯಕೊಡುವುದು, ಸ್ನಾನಮಾಡಿಸುವುದು, ಭೋಜನಮಾಡಿಸುವುದು, ಅನಂತರ ವಿಶ್ರಾಂತಿಗೋಸ್ಕರ ಮಂದಲಿಗೆ ಹಾಸಿಗೆ ಮೊದಲಾದುವುಗಳನ್ನು ಕಲ್ಪಿಸಿಕೊಡುವುದು, ಇವುಗಳಿಂದ ಉಪಚರಿಸಬೇಕು

ರೂಪಾನ್ವಿತಂ ವಿರೂಪಂ ವಾ ಮಲಿನಂ ಮಲಿನಾಂಬರಂ ।
ವೇಲಾಯಾಮತಿಥಿಂ ಪ್ರಾಪ್ತಂ ಪಂಡಿತೋ ನ ವಿಚಾರಯೇತ್ ॥ ೨೦ ॥

ಭೋಜಕಾನಾಂ ಶರೀರೇಷು ನಿತ್ಯಂ ಸನ್ನಿಹಿತೋ ರವಿಃ ।
ಯೇ ಭೋಜಕಾಂಸ್ತ್ಯಜಂತೋಽನ್ಯೇ ಸರ್ವಪಾಪೇಷ್ವವಸ್ಥಿತಾಃ ॥
ಅಧೋಮುಖೋರ್ಧ್ವಪಾದಾಸ್ತೇ ಪತಂತಿ ನರಕಾಗ್ನಿಷು ॥ ೨೧ ॥

ಕ್ರಿಮಿಭಿರ್ಭಿನ್ನವದನಾಸ್ತಪ್ಯಮಾನಾಶ್ಚ ವಹ್ನಿನಾ ।
ಪೀಡ್ಯಂತೇ ಚಾಯುಧೈರ್ಘೋರೈರ್ಯಾವದಿಂದ್ರಾಶ್ಚತುರ್ದಶ ॥ ೨೨ ॥

ಯೇ ಚಾಪವಾದಂ ಶೃಣ್ವಂತಿ ವಿಮೂಢಾ ಬ್ರಾಹ್ಮಣೇಷು ವೈ ।
ತೇ ವಿಶೇಷೇಣ ಪಚ್ಯಂತೇ ನರಕೇಷು ಮದಿಚ್ಛಯಾ ॥ ೨೩ ॥

---

೨೦. ಸರಿಯಾದ ಕಾಲದಲ್ಲಿ ಬಂದ ಅತಿಥಿಯು ಸುಂದರನಾಗಿರಲಿ, ಅಥವಾ ಕುರೂಪಿಯಾಗಿರಲಿ ಕೊಳಕನಾಗಿರಲಿ ಅಥವಾ ಪರಿಶುದ್ಧನಾಗಿರಲಿ, ಜ್ಞಾನಿಯಾದವನು ಇವುಗಳನ್ನು ವಿಚಾರಮಾಡದೆ ಅವನನ್ನು ಒಳ್ಳೆಯಮನಸ್ಸಿಂದ ಉಪಚರಿಸಬೇಕು.

೨೧. ಭೋಜಕರ ಶರೀರಗಳಲ್ಲಿ ಯಾವಾಗಲೂ ಸೂರ್ಯನು ಸನ್ನಿಹಿತನಾಗಿರುತ್ತಾನೆ. ಅಂತಹ ಭೋಜಕಬ್ರಾಹ್ಮಣರನ್ನು ತ್ಯಜಿಸಿ, ಸರ್ವಕಾರ್ಯಗಳನ್ನೂ ಮಾಡುವವರು, ಸಕಲ ಪಾಪಗಳಿಗೂ ಗುರಿಯಾಗುವರಲ್ಲದೆ ನರಕಾಗ್ನಿಗಳಲ್ಲಿ ತಲೆಕೆಳಗಾಗಿ ಬಿದ್ದು ಪೇಚಾಡುವರು.

೨೨. ಅಲ್ಲದೆ ಅಲ್ಲಿ ಹದಿನಾಲ್ಕು ಇಂದ್ರಪಟ್ಟಗಳು ಕಳೆಯುವರೆಗೂ ಕ್ರಿಮಿಗಳು ಮುಖಗಳನ್ನು ಕಚ್ಚುವುದು, ಅಗ್ನಿಯಿಂದ ತಪಿಸುವುದು, ಭಯಂಕರವಾದ ಆಯುಧದೇಟಿನ ನೋವು, ಈ ಕ್ಲೇಶಗಳನ್ನು ಅನುಭವಿಸುತ್ತಾರೆ.

೨೩. ಅಂಥಾ ಭೋಜಕಬ್ರಾಹ್ಮಣರ ವಿಷಯದಲ್ಲಿ ನೀಚರು ಆರೋಪಿಸುವ ಅಪವಾದವನ್ನು ಯಾರು ಅಜ್ಞಾನಿಗಳಾಗಿ ಕೇಳುತ್ತಾರೋ, ಅವರು ವಿಶೇಷವಾಗಿ ನರಕಗಳಲ್ಲಿ ದುಃಖದಿಂದ ನರಳುತ್ತಾರೆ. ಇದು ನನ್ನ ಅಭಿಮತ.

**ಸರ್ವೇಷಾಮೇವ ಪಾತ್ರಾಣಾಂ ಸತ್ಪಾತ್ರಂ ಜಾಪಕಃ ಪರಃ ।**
**ತಸ್ಮಾತ್ಸರ್ವಪ್ರಯತ್ನೇನ ಪೂಜಯೇತ್ಸುಸಮಾಹಿತಃ                ॥ ೨೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು ಭೋಜಕಸತ್ಕಾರವರ್ಣನಂ ನಾಮ ಅಷ್ಟಾಶೀತ್ಯಧಿಕ ಶತತಮೋಽಧ್ಯಾಯಃ.**



---

೨೪. ಜಪಶೀಲನಾದ ಬ್ರಾಹ್ಮಣನು ಎಲ್ಲಾ ಪಾತ್ರಗಳಿಗಿಂತಲೂ ಉತ್ತಮ ಪಾತ್ರನು. ಆದುದರಿಂದ ಏಕಾಗ್ರಚಿತ್ತನಾಗಿ ಸರ್ವಪ್ರಯತ್ನದಿಂದಲೂ ಅಂಥ ಬ್ರಾಹ್ಮಣನನ್ನು ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದೊಳಗೆ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೌರಧರ್ಮದಲ್ಲಿ ಭೋಜಕರನ್ನು ಸತ್ಕರಿಸುವಪ್ರಕಾರ ವರ್ಣನವೆಂಬ ನೂರೆಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ಆಮಪಾತ್ರರಸಾ ಯದ್ವನ್ನಶ್ಯಂತೇ ನಶ್ಯಭಾಜನೇ ।
ಜಪೋಪೇಕ್ಷೇ ತಥಾ ದಾನಂ ಸಹ ಪಾತ್ರೇಣ ನಶ್ಯತಿ ॥ ೧ ॥

ಸದ್ಬೀಜಮೂಷರೇ ಯದ್ವತ್ಸಮುಪ್ತಂ ನಿಷ್ಫಲಂ ಭವೇತ್ ।
ಭಸ್ಮನೀವ ಹುತಂ ಹವ್ಯಂ ಯಥಾ ಹೋತುಶ್ಚ ನಿಷ್ಫಲಂ ॥ ೨ ॥

---

### ನೂರಎಂಭತ್ತೊಂಭತ್ತನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಹೇಳುತ್ತಾನೆ—ದ್ರವಸೋಕಿದರೆ ನಾಶಹೊಂದುವುದು, ಹಸಿಯಮಡಿಕೆಯ ಗುಣ. ಅಂಥ ಹಸಿಯ ಮಡಕೆಯಲ್ಲಿ ಇರಿಸಿದ ರಸಗಳೂ ಆ ಪಾತ್ರೆಯೊಡನೆ ಹೇಗೆ ನಾಶಹೊಂದುವುವೋ ಹಾಗೆಯೇ ಜಪವನ್ನು ಉಪೇಕ್ಷೆಮಾಡಿದನಿಗೆ ದಾನಕೊಟ್ಟರೆ ಆ ದಾನಫಲವು ಅದನ್ನು ಪ್ರತಿಗ್ರಹಿಸಿದ ಪಾತ್ರನೊಂದಿಗೆ ನಾಶಹೊಂದುವುದು.

೨. ಬೀಜವು ಒಳ್ಳೆಯದಾದರೂ ಕರಲುಭೂಮಿಯಲ್ಲಿ ನೆಟ್ಟರೆ ಅಂಕುರಿಸದೆ ನಿಷ್ಪ್ರಯೋಜನವಾಗುವ ಹಾಗೂ, ಬೂದಿಯಲ್ಲಿ ಹೋಮಮಾಡಿದ ಹವಿಸ್ಸು ಅಗ್ನಿಗೆ ಅರ್ಪಿತವಾಗದೆ ವ್ಯರ್ಥವಾಗುವಂತೆಯೂ, ಜಪರಹಿತನಾದ ಬ್ರಾಹ್ಮಣನಿಗೆ ಕೊಟ್ಟ ದಾನವು ನಿಷ್ಫಲವೆಂದು ತಿಳಿಯಬೇಕು.

ಜಪೇನ ರಹಿತೇ ವಿಪ್ರೇ ಯಥಾ ದಾನಂ ನಿರರ್ಥಕಂ ।
ಯಥಾ ಷಂಡೋಽಫಲಃ ಸ್ತ್ರೀಷು ಯಥಾ ಗೌರ್ಗವಿ ಚಾಫಲಾ ॥
ಬ್ರಾಹ್ಮಣಸ್ಯ ತಥಾ ಜನ್ಮ ಜಪಹೀನಸ್ಯ ನಿಷ್ಫಲಂ ॥ ೩ ॥

ಲೋಹೋಡುಪೇನ ಪ್ರತರನ್ನಿಮಜ್ಜತ್ಯುದಕೇ ಯಥಾ ।
ತಥಾಽದಾತಾ ಗ್ರಹೀತಾ ಚ ಪತತ್ಯಂಧೇ ತಮಸ್ಯಧಃ ॥ ೪ ॥

ಕಾರುಣ್ಯಾತ್ಸರ್ವಭೂತೇಷು ಶ್ರದ್ಧಯಾ ಯತ್ಪ್ರದೀಯತೇ ।
ದಾನಂ ತದ್ವೈ ಖಗ ಜ್ಞೇಯಂ ಸಾರ್ವಕಾಮಿಕಮುತ್ತಮಂ ॥ ೫ ॥

ದೀನಾಂಧಕೃಪಣಾನಾಂ ಚ ಬಾಲವೃದ್ಧಾತುರೇಷು ಚ ।
ಯದ್ದೀಯತೇ ಖಗಶ್ರೇಷ್ಠ ತಸ್ಯಾನಂತಫಲಂ ಭವೇತ್ ॥ ೬ ॥

ನ ಹಿ ಸ್ವಾರ್ಥಂ ಸಮುದ್ದಿಶ್ಯ ಪ್ರತಿಗೃಹ್ಣಂತಿ ಸಾಧವಃ ।
ದಾತುರೇವೋಪಕಾರಾಯ ಜಗೃಹುಃ ಶ್ರಾವಣಾದಯಃ ॥ ೭ ॥

---

೩. ಸ್ತ್ರೀಯೊಡನೆ ಸಂಗಮಮಾಡುವುದಕ್ಕೆ ನಪುಂಸಕನು ಹೇಗೆ ನಿಷ್ಪ್ರಯೋಜಕನೋ, ಗೊಡ್ಡುಹಸುವಿಗೆ ಗೂಳಿಹಾರಿಸುವುದು ಹೇಗೆ ನಿಷ್ಫಲವೋ, ಹಾಗೆ ಜಪಪರನಾಗದೇ ಇದ್ದರೆ ಅವನು ಬ್ರಾಹ್ಮಣಜನ್ಮವೆತ್ತಿದುದೂ ನಿಷ್ಫಲವೆಂದೇ ತಿಳಿಯಬೇಕು.

೪. ಲೋಹದ ತೆಪ್ಪದಿಂದ ಜಲವನ್ನು ದಾಟಲು ಪ್ರಯತ್ನಿಸಿದವನು ತೆಪ್ಪಸಹಿತ ತಾನೂ ಹೇಗೆ ಮುಳುಗುವನೋ, ಹಾಗೆಯೇ ಅಪ್ರಶಸ್ತನಾದ ದಾತೃವೂ ಅಪ್ರಯೋಜಕನಾದ ಪ್ರತಿಗೃಹೀತೃವೂ ಸಹ ಅಂಧಕಾರಮಯವಾದ ನರಕದಲ್ಲಿ ಬೀಳುವರು.

೫. ಎಲ್ಲಾ ಪ್ರಾಣಿಗಳಲ್ಲೂ ದಯೆಯಿಂದ ಕೂಡಿ, ಶ್ರದ್ಧಾಪೂರ್ವಕವಾಗಿ ಮಾಡುವ ದಾನವೇ ಉತ್ತಮವೂ, ಸರ್ವಕಾಮಪ್ರದವೂ ಆದ ದಾನವೆಂದು ತಿಳಿಯಬೇಕು.

೬. ಎಲೈ ಖಗನೇ! ದೀನರು, ಕುರುಡರು, ಕೃಪಣರು, ಬಾಲರು, ವೃದ್ಧರೂ ರೋಗಿಗಳು ಇವರುಗಳಿಗೆ ದಾನಮಾಡಿದರೆ ಅದರಿಂದ ಅನಂತವಾದ ಫಲವಾಗುವುದು.

೭. ಸತ್ಪುರುಷರು ತಮ್ಮ ಪ್ರಯೋಜನಕ್ಕಾಗಿ ಅಂದರೆ ಸ್ವಾರ್ಥಕ್ಕಾಗಿ ಏನನ್ನೂ ಪ್ರತಿಗ್ರಹಮಾಡುವುದಿಲ್ಲ. ಶ್ರವಣರು ಮೊದಲಾದವರು ದಾತೃವನ್ನು ಧನ್ಯನನ್ನಾಗಿ ಮಾಡುವುದಕ್ಕಾಗಿಯೇ ದಾನವನ್ನು ತೆಗೆದುಕೊಳ್ಳುತ್ತಾರೆ.

ದಾತುರೇವೋಪಕಾರಾಯ ವದತ್ಯರ್ಥೀ ದದಸ್ವ ಮೇ ।
ಯಸ್ಮಾದ್ದಾತಾ ಪ್ರಯಾತ್ಯೂರ್ಧ್ವಮಧಸ್ತಿಷ್ಠೇತ್ಪ್ರತಿಗ್ರಹೀ ॥ ೮ ॥

ದೇಹೀತಿ ಸುವದನ್ನರ್ಥೀ ಧನಂ ಬೋಧಯತೀವ ಸಃ ।
ಯನ್ಮಯಾ ಕೃತಮರ್ಥಿತ್ವಂ ಪ್ರಗೇऽದಾನಫಲಂ ಹಿ ತತ್ ॥ ೯ ॥

ಬೋಧಯಂತಿ ನ ಯಾಚಂತೇ ದೇಹೀತಿ ಕೃಪಣಾ ಜನಾಃ ।
ಅವಸ್ಥೇಯಮದಾನಸ್ಯ ಯದ್ಯಾಚಾಮೋ ಗೃಹೇ ಗೃಹೇ ॥ ೧೦ ॥

---

೮. ಯಾಚಕನು "ನನಗೆ ಕೊಡು'' ಎಂದು ಹೇಳುವುದೂ ದಾತೃವಿನ ಉಪಕಾರಕ್ಕಾಗಿಯೇ ಎಂದು ಹೇಳಬೇಕು. ಅದಕ್ಕೆ ತಕ್ಕಂತೆ ದಾತೃವು ಮೇಲ್ಗಡೆಗೆ ನಡೆಯುವನು. (ಸ್ವರ್ಗವನ್ನು ಪಡೆಯುವನು) (ಕೊಡುವ ಕೈ ಮೇಲುಗಡೆ ಇರುವುದು ) ಪ್ರತಿಗ್ರಹಮಾಡುವವನು ಕೆಳಗೇ ನಿಲ್ಲುವನು. (ಇಸುಕೊಳ್ಳುವವನ ಕೈ ಕೆಳಗಡೆ ಇರುವುದು.)

೯. ಬೆಳಗಾವರೆ 'ದೇಹಿ' ಎಂದು ಯಾಚಕವೃತ್ತಿಗೆ ಹೋಗಬೇಕಾದ ದುರವಸ್ಥಾಪ್ರಾಪ್ತಿಯು ಹಿಂದೆ ತಾನು ದಾನಮಾಡದೆ ಇದ್ದುದರ ಫಲವೆಂದೇ ತಿಳಿಯಬೇಕು. ಯಾಚಕನಿಗೆ ಯಾಚಕವೃತ್ತಿ ಪ್ರಾಪ್ತವಾಗಿರುವಿಕೆಯು ನಮಗೆ ಇದನ್ನು ಬೋಧಿಸುವಂತಿದೆ. "ಅದಾನದೋಷೇಣ ಭವೇದ್ದರಿದ್ರಃ" ಎಂಬ ಉಕ್ತಿಯೂ ಇದನ್ನೇ ಸ್ಥಿರಪಡಿಸುವುದು.

೧೦. ಹಿಂದೆ ಕೃಪಣತನದಿಂದ ದಾನವನ್ನೇ ಮಾಡದೆ ಅಲಕ್ಷ್ಯದಿಂದಿದ್ದು ಈಗ ತಿರುಪಕ್ಕೆ ಬಂದಿರುವ ಯಾಚಕರು ದಾನಮಾಡುವವರನ್ನು ಕುರಿತು "ಎಲೈ ದಾನಶೀಲರಾದ ಜನಗಳಿರಾ! ನಾವು ಹಿಂದೆ ದಾನಮಾಡದೆ ಹೋದಕಾರಣ ಈಗ ಮನೆಮನೆಗೂ ಬಂದು ಬೇಡುವ ಈ ಅವಸ್ಥೆಯುಂಟಾಗಿದೆ. ಈಗ ದಾನಮಾಡದೇ ಹೋದರೆ ಮುಂದಿನ ಜನ್ಮದಲ್ಲಿ ನೀವೂ ನಮ್ಮಂತೆಯೇ ಆಗುವಿರಿ. ಆದುದರಿಂದ ದಾನಮಾಡಿ ಸುಖಪಡೆಯಿರಿ" ಎಂದು ಬೋಧನೆಮಾಡುವರೇ ವಿನಾ ಸುಮ್ಮನೆ ಯಾಚನೆಮಾಡುವರೆಂದು ತಿಳಿಯಬಾರದು.

ಅತಿಥ್ಯರ್ಥೀ ಗೃಹಂ ಯಸ್ತು ಕಸ್ತಂ ನ ಪ್ರತಿಪೂಜಯೇತ್ ।
ಕೋsಪ್ಯಯಮರ್ಥೀ ನಪೂಜ್ಯಃ ಸ್ಯಾದ್ಯಾಚಮಾನೋ ದಿನೇ ದಿನೇ ॥ ೧೧ ॥

ಯೇ ಬಲಾದಪ್ಯನಿಚ್ಛಂತಂ ಯೋಜಯಂತಿ ನರಾ ಶ್ರಿಯಂ ।
ಅಹನ್ಯಹನಿ ಯಾಚಂತೇ ದಾತುಸ್ತೇ ದರ್ಶಯಂತಿ ಹಿ ॥ ೧೨ ॥

ಏಕಸ್ತಿಷ್ಠತಿ ಚಾಧಸ್ತಾದನ್ಯಶ್ಚೋಪರಿ ತಿಷ್ಠತಿ ।
ದಾತೃಯಾಚಕಯೋರ್ಭೇದಃ ಕರಾಭ್ಯಾಮೇವ ಸೂಚಿತಃ ॥ ೧೩ ॥

ಯಃ ಪ್ರಾಪ್ತಾಯಾರ್ಥಿನೇ ದಾನಂ ತ್ಯಕ್ತ್ವಾ ಪಾತ್ರಮುದೀಕ್ಷ್ಯತೇ ।
ಸರ್ವಕರ್ಮಸು ಯುಕ್ತತ್ವಾನ್ನ ದಾತಾ ಪಾರಮಾರ್ಥಿಕಃ ॥ ೧೪ ॥

---

೧೧. ಮನೆಗೆ ಬರುವ ಯಾಚಕನನ್ನು ಯಾರುತಾನೆ ಪೂಜಿಸುವುದಿಲ್ಲ? ಎಲ್ಲರೂ ಪೂಜಿಸುವರು. ಹೀಗೆಂದು ಪ್ರತಿದಿನವೂ ಬೇಡಲು ಬರುವ ಯಾಚಕನನ್ನು ಜನಗಳು ಅಷ್ಟು ಚೆನ್ನಾಗಿ ಪೂಜಿಸುವುದಿಲ್ಲ. ಯಾಚಕನಿಗೆ ಪೂಜೆಮಾಡಿಸಿಕೊಳ್ಳುವ ಯೋಗ್ಯತೆಯಿದ್ದರೂ, ಪ್ರತಿದಿನವೂ ಬಂದರೆ ಅವನನ್ನು ಗೌರವಿಸುವವರು ಬಹಳ ಕಡಿಮೆಯೆಂದೇ ತಿಳಿಯಬೇಕು.

೧೨. ನಿತ್ಯ ಯಾಚಕರಾದವರು; ಸಂಪತ್ತನ್ನಪೇಕ್ಷಿಸದಿರುವ ಮನುಷ್ಯನಿಗೂ, ಬಲಾತ್ಕಾರದಿಂದ ಸಂಪತ್ತು ಕೊಡುವಂತೆ ಮಾಡುತ್ತಾರೆ. ಈಗ ನಾವು ಯಾಚನೆ ಮಾಡುವ ದಾರಿದ್ರ್ಯಸ್ಥಿತಿ ಪ್ರಾಪ್ತಿಗೆ, ಹಿಂದೆ ನಾವು ದಾನಮಾಡದೆ ಇದ್ದುದೇ ಕಾರಣವೆಂದು ದಾತೃವಿಗೆ ಸೂಚಿಸುತ್ತಾರೆ.

೧೩. ದಾನಕೊಡುವಾಗ ಒಬ್ಬನ ಕೈ ಕೆಳಗಡೆ, ಮತ್ತೊಬ್ಬನ ಕೈ ಮೇಲುಗಡೆ ಇರುತ್ತದೆ. ಈ ರೀತಿ ಯಾಚಕ ಮತ್ತು ದಾತೃ ಇವರುಗಳಿಗೆ ಇರುವ ವ್ಯತ್ಯಾಸವು ಅವರ ಕೈಗಳ ಸ್ಥಿತಿಯಿಂದಲೇ ಸೂಚಿತವಾಗುತ್ತದೆ.

೧೪. ಬೇಡಲು ಬಂದಿರುವ ಯಾಚಕನಿಗೆ ದಾನಮಾಡುವುದನ್ನು ಬಿಟ್ಟು ಪಾತ್ರಸ್ವರೂಪವನ್ನು ನಿರೀಕ್ಷಿಸಲು ತೊಡಗಿರೆ ವಿವೇಚನೆಯಿಲ್ಲದೆ ಸರ್ವಕರ್ಮಗಳಲ್ಲೂ ಯುಕ್ತನಾದಂತೆ ಆಗುವುದರಿಂದ ಆತನು ಪಾರಮಾರ್ಥಿಕತೆಯ ದಾತೃವೆನಿಸುವುದಿಲ್ಲ.

ಯದ್ಯರ್ಥಿನೋ ನರಾ ನಸ್ಯುರ್ದಾನಧರ್ಮಃ ಕಥಂ ಭವೇತ್ ।
ತದರ್ಥಿಷು ಭವೇದ್ದಾನಂ ಸ್ವಾಗತಂ ಸ್ವಾಗತಂ ಪ್ರಿಯಂ ॥ ೧೫ ॥

ಪಾದೋದಕಮನುವ್ರಜ್ಯಾತ್ಸ್ವರ್ಗಸೋಪಾನಸಪ್ತಕಂ ।
ಚಿಂತಾ ಚಿಂತಾನುರೂಪೇಣ ಕದಾ ಕಸ್ಯ ವಿನಶ್ಯತಿ ॥ ೧೬ ॥

ಗ್ರಾಸಾದರ್ಧಮಪಿ ಗ್ರಾಸಂ ಯುಕ್ತಂ ದಾತುಂ ಸದಾರ್ಥಿನಾಂ ।
ದಾನಂ ಪ್ರಿಯವಿನಿರ್ಮುಕ್ತಂ ನಷ್ಟಮಾಹುರ್ಮನೀಷಿಣಃ ॥ ೧೭ ॥

ತಸ್ಮಾತ್ಸತ್ಕೃತ್ಯ ದಾತವ್ಯಮನಂತಫಲಮಿಚ್ಛತಾ ।
ಏತ್ಯಾಖ್ಯಾನಮಪಿ ಶ್ರೇಯಃ ಪ್ರಿಯಾನುನಯಪೇಶಲಂ ॥ ೧೮ ॥

---

೧೫. ಯಾವ ಮನುಷ್ಯನೂ ಯಾಚನೆಯನ್ನೇ ಮಾಡದೆಯೂ, ಪ್ರತಿಗ್ರಹವನ್ನೇ ಮಾಡದೆಯೂ ಇದ್ದರೆ ದಾತೃಗಳ ದಾನರೂಪವಾದ ಧರ್ಮವು ಹೇಗೆ ನಡೆದೀತು ? ಆದುದರಿಂದ ಯಾಚಕರು ಬಂದಾಗ ಹಿತವಾಗುವಂತೆ ಸುಖಾಗಮನ ಪ್ರಶ್ನೆಯನ್ನು ಮಾಡಬೇಕು. ಈ ರೀತಿ ಮಾಡಿದ ಸ್ವಾಗತವಚನವೂ ಹಿತವಾಕ್ಯಗಳೂ ದಾನಕೊಟ್ಟುದಕ್ಕೆ ಸಮಾನವೇ ಆಗುವುದು.

೧೬. ಯಾಚಕರ ಪಾದವನ್ನು ತೊಳೆದು ಆ ಪಾದೋದಕವನ್ನು ತಲೆಗೆ ಪ್ರೋಕ್ಷಣೆಮಾಡಿಕೊಳ್ಳುವುದೆಂಬುದು ಸ್ವರ್ಗಕ್ಕೆ ಹತ್ತುವುದಕ್ಕೆ ಮೆಟ್ಟಲು ಕಟ್ಟಿದಂತಾಗುವುದು. ಕೊಡಲೋ ? ಬೇಡವೋ ? ಯಾವಾಗ ಕೊಡಲಿ ? ಯಾರಿಗೆಕೊಡಲಿ ? ಎಂಬ ಚಿಂತೆಯಿಂದ ಕೊಡಿದವನಿಗೆ ಚಿಂತೆಯೊಂದೇ ಫಲವಾಗುವುದೇ ಹೊರತು ಉಳಿದ ಫಲವೆಲ್ಲವೂ ನಾಶವಾಗುವುದು.

೧೭. ಅರ್ಥಿಗಳಿಗೆ ತನ್ನ ಗ್ರಾಸದಲ್ಲಿ ಅರ್ಧಭಾಗವನ್ನಾದರೂ ಸದಾ ಕೊಡುವುದು ಯುಕ್ತವಾದುದು. ಹಿತವಚನಗಳಿಲ್ಲದೆ ಕಠಿಣವಾಗಿ ಮಾತಾಡಿ ದಾನಕೊಟ್ಟರೂ ಆ ದಾನವು ಯಜಮಾನನಿಗೆ ಯಾವ ಫಲವನ್ನೂ ಉಂಟುಮಾಡದೆ ಪುಣ್ಯನಾಶವಾಗುವುದೆಂದು ವಿದ್ವಾಂಸರು ಹೇಳುವರು.

೧೮. ಆದುದರಿಂದ ಅಪರಿಮಿತಫಲವನ್ನು ಹೊಂದಲು ಅಪೇಕ್ಷಿಸುವವನು ಅತಿಥಿಯನ್ನು ಹಿತವಚನಗಳಿಂದ ಸತ್ಕರಿಸಿ ದಾನಮಾಡಬೇಕು. ಅಲ್ಲದೆ ಅವರಿಗೆ ಸಂತೋಷವಾಗುವಂತೆ ಮೃದುಮಧುರ ವಾಕ್ಯಗಳಿಂದ ಸತ್ಕಾರಮಾಡಿದರೆ ಅವನಿಗೆ ಶ್ರೇಯಸ್ಸುಂಟಾಗುವುದು.

ನ ತದ್ದಾನಮಸತ್ಕಾರಪಾರುಷ್ಯಮಲಿನೀಕೃತಂ ।
ವರಂ ನ ದತ್ತಮರ್ಥಿಭ್ಯಃ ಸಂಕ್ರುದ್ಧೇನಾಂತರಾತ್ಮನಾ ॥ ೧೯ ॥

ನ ತದ್ಧನಂ ನ ಚ ಪ್ರೀತಿರ್ನ ಧರ್ಮಃ ಪ್ರಿಯವರ್ಜಿತಃ ।
ದಾನಪ್ರದಾನನಿಯಮಯಜ್ಞಧ್ಯಾನಂ ಹುತಂ ತಪಃ ॥
ಯತ್ನೇನಾಪಿ ಕೃತಂ ಸರ್ವಂ ಕ್ರೋಧೋತ್ಥಂ ನಿಷ್ಫಲಂ ಖಗ ॥ ೨೦ ॥

ಯಃ ಶ್ರದ್ಧಯಾರ್ಚಿತಂ ದದ್ಯಾತ್ಪ್ರತಿಗೃಹ್ಣಾತಿ ಚಾರ್ಚಿತಂ ।
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತದ್ವಿಪರ್ಯಯಾತ್ ॥ ೨೧ ॥

ಔದಾರ್ಯಂ ಸ್ವಾಗತಂ ಮೈತ್ರೀ ಹ್ಯನುಕಂಪಾಹ್ಯಮತ್ಸರಃ ।
ಪಂಚಭಿಸ್ತು ಗುರೌ ದಾನಂ ದಾತುರ್ದಾನೇ ಮಹತ್ಫಲಂ ॥ ೨೨ ॥

---

೧೯. ಬಂದ ಅತಿಥಿಯನ್ನು ಸತ್ಕಾರಮಾಡದೆ ಮನೋಮಲಿನತೆಯಿಂದ ಕಠಿನ ವಾಕ್ಕುಗಳನ್ನಾಡಿ, ಆಗ್ರಹಯುಕ್ತವಾದ ಮನಸ್ಸಿನಿಂದ ದಾನಮಾಡಿದರೂ, ಅದು ದಾನವೆನಿಸುವುದಿಲ್ಲ. ಹಾಗೆ ಕೊಡುವುದಕ್ಕಿಂತ ಕೊಡದೇ ಇರುವುದೇ ಮೇಲೆಂದು ನಿಶ್ಚಯವಾಗಿಯೂ ತಿಳಿಯಬೇಕು.

೨೦. ಪ್ರಿಯವಾಕ್ಕು ಇಲ್ಲದೆ ಧರ್ಮಮಾಡಿದರೆ ಅದು ಶ್ರೇಷ್ಠವಲ್ಲ, ಹಿತವೂ ಅಲ್ಲ, ದಾನಪ್ರದಾನ ನಿಯಮ, ಯಜ್ಞ, ಧ್ಯಾನ, ಹುತ, ತಪಸ್ಸು ಇವೆಲ್ಲವನ್ನೂ ಯತ್ನದಿಂದ ಆಚರಿಸಿದರೂ ಕ್ರೋಧಯುಕ್ತನಾಗಿದ್ದರೆ ಅವೆಲ್ಲ ನಿಷ್ಫಲ.

೨೧. ಅರ್ಥಿಯನ್ನು ಶ್ರದ್ಧೆಯಿಂದ ಅರ್ಚಿಸಿ ದಾನಕೊಡುವಾತನೂ, ಮತ್ತು ಅರ್ಚಿತನಾಗಿ ಪ್ರತಿಗ್ರಹಮಾಡುವವನೂ ಇಬ್ಬರೂ ಸ್ವರ್ಗಕ್ಕೆ ಹೋಗುತ್ತಾರೆ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡರೆ ಅವರು ನರಕಕ್ಕೆ ಹೋಗುತ್ತಾರೆ.

೨೨. ಔದಾರ್ಯ, ಸ್ವಾಗತ, ಮೈತ್ರಿ, ಅನುಕಂಪೆ, ಅಮತ್ಸರ ಈ ಐದರಿಂದ ಯುಕ್ತನಾಗಿ ಪೂಜ್ಯನಾದ ಪಾತ್ರನಿಗೆ ದಾನಮಾಡಿದರೆ ಆ ದಾನಮಾಡಿದ ದಾತೃವಿಗೆ ಮಹತ್ತಾದ ಫಲವು ಬರುವುದು.

ವಾರಾಣಸೀ ಕುರುಕ್ಷೇತ್ರಂ ಪ್ರಯಾಗಂ ಪುಷ್ಕರಾಣಿ ಚ ।
ಗಂಗಾತಟಂ ಸಮುದ್ರಶ್ಚ ನೈಮಿಷಾರಣ್ಯಮೇವ ಚ ॥ ೨೩ ॥

ಮೂಲಸ್ಥಾನಂ ಮಹಾಪುಣ್ಯಂ ಪುಂಡೀರಸ್ವಾಮಿಕಂ ತಥಾ ।
ಕಾಲಪ್ರಿಯಂ ಖಗಶ್ರೇಷ್ಠ ಕ್ಷೀರಿಕಾವಾಸ ಏವ ಚ ॥ ೨೪ ॥

ಇತ್ಯೇತೇ ಕೀರ್ತಿತಾ ದೇಶಾಃ ಸುರಸಿದ್ಧನಿಷೇವಿತಾಃ ।
ಸರ್ವೇ ಸೂರ್ಯಾಶ್ರಮಾಃ ಪುಣ್ಯಾಃ ಸರ್ವಾ ನದ್ಯಃ ಸಪರ್ವತಾಃ ॥
ಗೋಸಿದ್ಧಮುನಿವಾಸಾಶ್ಚ ದೇಶಾಃ ಪುಣ್ಯಾಃ ಪ್ರಕೀರ್ತಿತಾಃ ॥ ೨೫ ॥

ಸೂರ್ಯಾಯತನಸಂಸ್ಥಾನಾಂ ಯದ್ಯದಲ್ಪಂ ತು ದೀಯತೇ ।
ತದನಂತಫಲಂ ಜ್ಞೇಯಂ ವಚಃಕ್ಷೇತ್ರಾನುಭಾವತಃ ॥ ೨೬ ॥

ಗ್ರಹಣಂ ಚಂದ್ರಸೂರ್ಯಾಭ್ಯಾಮುತ್ತರಾಯಣಮುತ್ತಮಂ ।
ವಿಷುವಂ ಸವ್ಯತೀಪಾತಂ ಷಡಶೀತಿಮುಖಂ ತಥಾ ॥ ೨೭ ॥

---

೨೩=೨೪. ಎಲೈ ಖಗನೇ ! ವಾರಾಣಸೀ, ಕುರುಕ್ಷೇತ್ರ, ಪ್ರಯಾಗ, ಪುಷ್ಕರ ಕ್ಷೇತ್ರ, ಗಂಗಾತೀರ, ಸಮುದ್ರ, ನೈಮಿಷಾರಣ್ಯ; ಮಹಾಪುಣ್ಯಕರವಾದ ಗಂಗಾಮೂಲ, ಪುಂಡೀರಕ್ಷೇತ್ರ, ಕಾಲಪ್ರಿಯಕ್ಷೇತ್ರ (ಉಜ್ಜಯಿನಿ) ಕ್ಷೀರಿಕಾವಾಸ ಎಂಬಿವೆಲ್ಲವೂ,

೨೫. ಸುರರು, ಸಿದ್ಧರು ಇವರಿಂದ ಸೇವಿತಗಳಾದ ಪ್ರದೇಶಗಳು ; ಪುಣ್ಯಕರ ಗಳಾದ ಸೂರ್ಯಾಶ್ರಮಗಳು, ಪರ್ವತಗಳಿಂದ ಸಹಿತಗಳಾದ ಎಲ್ಲಾ ನದಿಗಳು, ಗೋ ಸ್ವಾಮಿಗಳು, ಸಿದ್ಧರು, ಮುನಿಗಳು, ಇವರ ವಾಸಸ್ಥಾನಗಳಾದ ದೇಶಗಳು ; ಇವು ಗಳೆಲ್ಲಾ ಪುಣ್ಯಕ್ಷೇತ್ರಗಳೆಂದು ಪ್ರಸಿದ್ಧವಾಗಿವೆ.

೨೬. ಸೂರ್ಯದೇವಾಲಯದಲ್ಲಿರುವವರಿಗೆ ಸ್ವಲ್ಪವಸ್ತುಗಳನ್ನು ದಾನಕೊಟ್ಟರೂ ಅವು ವಚನ, ಕಾಲ, ಕ್ಷೇತ್ರ ಇವುಗಳ ಮಹಿಮೆಯಿಂದ ಅನಂತಫಲಪ್ರದಗಳಾಗುವುವು.

೨೭. ಅಯ್ಯಾ ಖಗನೇ! ಸೂರ್ಯಚಂದ್ರ ಗ್ರಹಣಗಳು, ಉತ್ತರಾಯಣ, ವ್ಯತೀ ಪಾತಯುಕ್ತವಾದ ವಿಷುವತ್ಪುಣ್ಯಕಾಲ, ಇವು ದಾನಕ್ಕೆ ಉತ್ತಮವಾದ ಕಾಲ.

ಷಡಶೀತ್ಯಾಣೆ ಸಂಕ್ರಾಂತಿಃ ಪುಣ್ಯಂ ವಿಷ್ಣುಪದಂ ಖಗ ।
ದಾನಕಾಲಃ ಸಮಾಖ್ಯಾತಃ ಪುಂಸಾಂ ಪುಣ್ಯವಿವರ್ಧನಃ ॥ ೨೮ ॥

ಭಕ್ತಿಭಾವಃ ಪರಾ ಪ್ರೀತಿರ್ಧರ್ಮೇ ಧರ್ಮೈಕಭಾವನಃ ।
ಪ್ರತಿಪತ್ತಿರಿತಿ ಜ್ಞೇಯಂ ಶ್ರದ್ಧಾಪರ್ಯಾಯಪಂಚಕಂ ॥ ೨೯ ॥

ಶ್ರದ್ಧಯಾ ವಿಧಿವತ್ಪಾತ್ರೇ ಪ್ರತಿಪಾದಿಕಮುತ್ತಮಂ ।
ತಸ್ಮಾಚ್ಛ್ರದ್ಧಾಂ ಸಮಾಸ್ಥಾಯ ದೇಯಮಕ್ಷಯಮಿಚ್ಛತಾ ॥ ೩೦ ॥

ಯದ್ದಾನಂ ಶ್ರದ್ಧಯಾ ಪಾತ್ರೇ ವಿಧಿವತ್ಪ್ರತಿಪಾದಿತಂ ।
ತದನಂತಫಲಂ ಜ್ಞೇಯಮಪಿ ವಾ ಭಾರಮಾತ್ರಕಂ ॥ ೩೧ ॥

ಆರ್ತೇಷು ದೀನೇಷು ಗುಣಾನ್ವಿತೇಷು ।
ಯಃ ಶ್ರದ್ಧಯಾ ಸ್ವಲ್ಪಮಪಿ ಪ್ರದದ್ಯಾತ್ ॥
ಸ ಸರ್ವಕಾಮಾನ್ಸಮುಪೈತಿ ಲೋಕಾನ್ ।
ಶ್ರದ್ಧೈವ ಜ್ಞಾನಂ ಪ್ರವದಂತಿ ತಜ್ಞಾಃ ॥ ೩೨ ॥

---

೨೮. ಮತ್ತು ಷಡಶೀತಿ ಪುಣ್ಯಕಾಲ, ದಿನಚ್ಛಿದ್ರಗಳು, ಸಂಕ್ರಾಂತಿ, ವಿಷ್ಣುಪದ ಪುಣ್ಯಕಾಲ ಈ ದಿನಗಳಲ್ಲಿ ದಾನಮಾಡೋಣವು ಪುರುಷರಿಗೆ ಪುಣ್ಯವನ್ನು ಅಭಿವೃದ್ಧಿ ಮಾಡತಕ್ಕದಾಗಿದೆ.

೨೯. ಭಕ್ತಿಭಾವ, ಹೆಚ್ಚಾದ ಪ್ರೀತಿ, ಧರ್ಮಾಸಕ್ತಿ, ಧರ್ಮೈಕಭಾವನೆ ಮತ್ತು ಪ್ರತಿಪತ್ತಿ ಎಂಬ ಐದೂ ಶ್ರದ್ಧಾರ್ಥವನ್ನು ತಿಳಿಸುವ ಪ್ರತ್ಯೇಕಪದಗಳು.

೩೦. ಆದುದರಿಂದ ದಾನದ ಫಲವು ಅಕ್ಷಯವಾಗಬೇಕೆನ್ನುವವರು ಶ್ರದ್ಧೆಯ ವಿಷಯದಲ್ಲಿ ತುಂಬಾ ಆಸಕ್ತಿಯಿಂದ ನಡೆದುಕೊಳ್ಳಬೇಕು. ಶ್ರದ್ಧಾಯುಕ್ತನಾಗಿ ಶಾಸ್ತ್ರೋಕ್ತರೀತಿ ಸತ್ಪಾತ್ರದಲ್ಲಿ ದಾನಮಾಡಿದರೆ ಉತ್ತಮಫಲ ಲಭಿಸುವುದು.

೩೧. ವಿಧಿಪೂರ್ವಕವಾಗಿ ಶ್ರದ್ಧೆಯಿಂದ ಸತ್ಪಾತ್ರನಿಗೆ ದಾನವನ್ನು ಕೊಟ್ಟರೆ ಅದು ಭಾರಪ್ರಮಾಣ ಮಾತ್ರವಿದ್ದರೂ ಅನಂತಫಲವೆಂದು ತಿಳಿಯಬೇಕು. (ಭಾರವೆಂದರೆ ಅಲ್ಪಪರಿಮಾಣದ ತೂಕದ ಸಣ್ಣಭಾಗ)

೩೨. ದುಃಖಿತರು, ಬಡವರು, ಗುಣವಂತರು, ಇವರಿಗೆ ಸ್ವಲ್ಪವನ್ನು ಕೊಟ್ಟರೂ ಹಾಗೆ ಕೊಟ್ಟವನು ಸರ್ವಕಾಮಪ್ರದಗಳಾದ ಲೋಕಗಳನ್ನು ಹೊಂದುತ್ತಾನೆ. ತಿಳಿದವರು ಶ್ರದ್ಧೆಯೇ ಜ್ಞಾನವೆಂದು ಹೇಳುತ್ತಾರೆ.

ಶ್ರದ್ಧಾ ದಾನಂ ಪರಂ ಜ್ಞೇಯಂ ಶ್ರದ್ಧಾ ಏವ ತಪಃ ಪರಂ ।
ಶ್ರದ್ಧಾಂ ಯಜ್ಞಮುಶಂತೀಹ ಶ್ರದ್ಧಾ ಪರಮುಪೋಷಿತಂ ॥ ३३ ॥

ಅಥಾಹಿಂಸಾ ಕ್ಷಮಾ ಸತ್ಯಂ ಹ್ರೀಃ ಶ್ರದ್ಧೇಂದ್ರಿಯಸಂಯಮಃ ।
ದಾನಮಿಷ್ಟಂ ತಪೋ ಧ್ಯಾನಂ ದಶಕಂ ಧರ್ಮಸಾಧನಂ ॥ ३४ ॥

ಹಂತ ವ್ಯಸ್ತೈಃ ಸಮಸ್ತೈರ್ವಾ ಸೂರ್ಯಧರ್ಮೈರನುಷ್ಠಿತೈಃ ।
ಸೂರ್ಯಾಕಸಾಂ ಚ ಸಂಪ್ರಾಪ್ತಿರ್ಗತಿರೇಕಾ ಪ್ರಕೀರ್ತಿತಾ ॥ ३५ ॥

ಯಥಾ ಭೂಃ ಸರ್ವಭೂತಾನಾಂ ಶಾಂತೇರತಿಶಯಃ ಸ್ಮೃತಃ ।
ಕುರ್ಯಾತ್ಪುಣ್ಯಂ ಮಹತ್ತಸ್ಮಾನ್ಮಮ ಲೋಕೇಪ್ಸಯಾ ಸುಧೀಃ ॥ ३६ ॥

ಪರಸ್ತ್ರೀ ದ್ರವ್ಯಸಂಕಲ್ಪಂ ಯಃ ಸಾಪೇಕ್ಷಂ ಕರೋತಿ ಚ ।
ಗುರುಮಾರ್ತಮಶಕ್ತಂ ವಾ ವಿದೇಶೇ ಪ್ರಸ್ಥಿತಂ ತಥಾ ॥
ಅರಿಭಿಃ ಪರಿಭೂತಂ ಚ ಸಂತ್ಯಜೇಚ್ಚೈವ ಪಾಪಕೃತ್ ॥ ३७ ॥

---

३३. ಶ್ರದ್ಧೆಯೇ ಶ್ರೇಷ್ಠವಾದ ದಾನವು, ಶ್ರದ್ಧೆಯೇ ಶ್ರೇಷ್ಠವಾದ ತಪಸ್ಸು, ಶ್ರದ್ಧೆಯೇ ಯಜ್ಞವು, ಶ್ರದ್ಧೆಯನ್ನು ಶ್ರೇಷ್ಠವಾದ ಉಪೋಷಣವೆನ್ನಬೇಕು.

३४. ಅಹಿಂಸೆ, ಕ್ಷಮೆ, ಸತ್ಯ, ಲಜ್ಜೆ, ಶ್ರದ್ಧೆ, ಇಂದ್ರಿಯನಿಗ್ರಹ, ದಾನ, ಯಜ್ಞ, ತಪಸ್ಸು, ಧ್ಯಾನ, ಇವು ಹತ್ತೂ ಧರ್ಮಕ್ಕೆ ಸಾಧನಗಳೆನಿಸುವುವು.

३५. ಸೂರ್ಯಧರ್ಮವೆನಿಸಿದ ಇವುಗಳನ್ನು ಒಂದೊಂದಾಗಿಯೋ, ಒಟ್ಟಾಗಿಯೋ ಅನುಷ್ಠಾನಮಾಡಿದವರಿಗೆ ಸೂರ್ಯಲೋಕಗಳ ಪ್ರಾಪ್ತಿಯೇ ಮುಖ್ಯವಾದ ಗುರಿಯೆಂದು ಹೇಳಿದೆ.

३६. ಸರ್ವಭೂತಗಳಲ್ಲಿ ಭೂಮಿಯು ಶಾಂತಿಗೆ ಅತಿಶಯಾಸ್ಪದಸ್ಥಾನವೆಂದು ಭಾವಿತವಾಗಿದೆ. ನನ್ನ ಲೋಕವು ಇದಕ್ಕೂ ಮೇಲಾದುದು. ಅದನ್ನು ಪಡೆಯಲಿಚ್ಛೆಪಡುವ ಜ್ಞಾನಿಯು ಹೆಚ್ಚು ಪುಣ್ಯ ಮಾಡಬೇಕು.

३७. ಪರಸ್ತ್ರೀ ಪರಧನಗಳನ್ನು ಇಚ್ಛಾಪೂರ್ವಕವಾಗಿ ಹೊಂದಲು ಸಂಕಲ್ಪಿಸುವವನು ಪಾಪಾತ್ಮನು. ರೋಗದಿಂದ ಸ್ಥೂಲಶರೀರವುಳ್ಳ ದುಃಖಿತನು, ಅಶಕ್ತ, ಪರದೇಶಕ್ಕೆ ಹೊರಟಿರುವವನು, ಶತ್ರುಗಳಿಂದ ತಿರಸ್ಕರಿಸಲ್ಪಟ್ಟವನು, ಇವರುಗಳನ್ನು ಕೈಬಿಟ್ಟವನೂ ಪಾಪಿಯೆನಿಸುವನು.

ಆಚಾರ್ಯಮಿತ್ರಪುತ್ರೇಷು ಯಶ್ಚಾವಜ್ಞಾಂ ಕರೋತಿ ಚ ।
ಪಾತಕಂ ಜ್ಞೇಯಂ ಗುರುನಿಂದಾಸಮಂ ಭವೇತ್ ॥ ೩೮ ॥

ಬ್ರಹ್ಮಘ್ನಶ್ಚ ಸುರಾಪಶ್ಚ ಸ್ತೇಯೀ ಚ ಗುರುತಲ್ಪಗಃ ।
ಮಹಾಪಾತಕಿನಸ್ತ್ವೇತೇ ತತ್ಸಂಯೋಗೀ ಚ ಪಂಚಮಃ ॥ ೩೯ ॥

ಕ್ರೋಧಾದ್ದ್ವೇಷಾದ್ಭಯಾಲ್ಲೋಭಾದ್ಬ್ರಾಹ್ಮಣಸ್ಯ ವದೇತ ಯಃ ।
ಪ್ರಾಣಾಂತಿಕಂ ಮಹಾದೋಷಂ ಪ್ರಾಪ್ನುಯಾತ್ಸ ಉದಾಹೃತಃ ॥ ೪೦ ॥

ಬ್ರಾಹ್ಮಣಂ ಚ ಸಮಾಹೂಯ ಯಾಚಮಾನಮಕಿಂಚನಂ ।
ಯನ್ನಾಸ್ತೀತಿ ಚ ಯೋ ಬ್ರೂಯಾತ್ಸ ಚಾಂಡಾಲ ಉದಾಹೃತಃ ॥ ೪೧ ॥

ದೇವದ್ವಿಜಗವಾಂ ಭೂಮಿಂ ಪೂರ್ವದತ್ತಾಂ ಹರೇತ ಯಃ ।
ಪ್ರನಷ್ಟಾಮಪಿ ಕಾಲೇ ತು ತಮಾಹುರ್ಬ್ರಹ್ಮಘಾತಕಂ ॥ ೪೨ ॥

---

೩೮ ಹಾಗೆ ಕಷ್ಟಕ್ಕೆ ಗುರಿಯಾದವರ ಹೆಂಡತಿ, ಸ್ನೇಹಿತರು, ಮಕ್ಕಳು ಇವರುಗಳನ್ನು ಅವಮಾನಮಾಡುವವನಿಗೆ ಉಂಟಾಗುವ ಪಾಪವು ಗುರುನಿಂದಾಪಾಪಕ್ಕೆ ಸಮಾನವಾದುದು.

೩೯. ಬ್ರಹ್ಮಹತ್ಯೆಮಾಡಿದವನು, ಸುರಾಪಾನಮಾಡಿದವನು, ಸುವರ್ಣವನ್ನು ಕದಿಯುವವನು, ಗುರುಪತ್ನಿಯ ಸಮಾಗಮಮಾಡಿದವನು, ಈ ನಾಲ್ಕು ಮಂದಿಯೊಡನೆ ಸಹವಾಸಮಾಡಿದವನು ಒಟ್ಟು ಈ ಐದು ಮಂದಿಯೂ ಪಂಚಮಹಾಪಾತಕಿಗಳೆನಿಸುವರು.

೪೦. ಕೋಪದಿಂದಲೋ, ದ್ವೇಷದಿಂದಲೋ, ಭಯದಿಂದಲೋ, ಲೋಭದಿಂದಲೋ ಬ್ರಾಹ್ಮಣನನ್ನು ಯಾವನು ಹೀಯಾಳಿಸಿ ದೂಷಿಸುವನೋ ಅವನು ಕೊಲೆಪಾತಕನಿಗೆ ಬರುವ ಮಹಾದೋಷವನ್ನು ಹೊಂದುವನೆಂದು ಹೇಳಿದೆ.

೪೧. ಯಾಚಿಸುತ್ತಿರುವ ದರಿದ್ರನಾದ ಬ್ರಾಹ್ಮಣನನ್ನು ಯಾವನು ಹತ್ತಿರ ಕರೆದು ಏನೂ ಇಲ್ಲವೆಂದು ನಿರಾಶೆಪಡಿಸುವನೋ ಅವನು ಚಂಡಾಲಸಮನೆಂದು ಹೇಳಿದೆ.

೪೨. ದೇವರು, ಬ್ರಾಹ್ಮಣರು, ಗೋವುಗಳು ಇವುಗಳ ಉಪಯೋಗಕ್ಕೆ ತಾನು ಮೊದಲು ಬಿಟ್ಟುಕೊಟ್ಟಿದ್ದ ಭೂಮಿಯನ್ನು ಅಪಹರಿಸುವವನನ್ನು ಬ್ರಹ್ಮಘಾತಕನೆಂದು ಹೇಳುತ್ತಾರೆ.

ಅಧೀತ್ಯ ಯೋ ರವೇಜ್ಞಾನಂ ಪರಿತ್ಯಜತಿ ಮಂದಧೀಃ ।
ಸುರಾಪೇನ ಸಮಂ ಜ್ಞೇಯಂ ತಸ್ಯ ಪಾಪಂ ಚ ಸುವ್ರತ ॥ ೪೩ ॥

ಅಗ್ನಿಹೋತ್ರಪರಿತ್ಯಾಗಃ ಪಂಚಯಜ್ಞಿಯಕರ್ಮಣಾಂ ।
ಮಾತಾಪಿತೃಪರಿತ್ಯಾಗಃ ಕುಟಸಾಕ್ಷ್ಯಂ ಸುಹೃದ್ವಧಃ ॥ ೪೪ ॥

ಅಪ್ರಿಯಂ ಸೂರ್ಯಭಕ್ತಾನಾಮಭಕ್ಷ್ಯಸ್ಯ ಚ ಭಕ್ಷಣಂ ।
ಏವಂ ನಿರಪರಾಧಾನಾಂ ಪ್ರಾಣಿನಾಂ ಚ ಪ್ರಮಾರಣಂ ॥ ೪೫ ॥

ಸರ್ವಾಧಿಪತ್ಯಮೇತೇಷಾಂ ನಾಸ್ತಿ ದೇವಪುರೋತ್ತಮೇ ।
ಆತ್ಮಲೋಕಾಧಿಪತ್ಯಂ ತು ಯಚ್ಛೇತ್ಸರ್ವಜಗತ್ಪತಿಃ ॥ ೪೬ ॥

ಕೇಚಿದತ್ರೈವ ಮುಚ್ಯಂತೇ ಜ್ಞಾನಯೋಗಪರಾ ನರಾಃ ।
ಆವರ್ತಂತೇ ಪುನಶ್ಚಾನ್ಯೇ ಸಂಸಾರೇ ಭೋಗತತ್ಪರಾಃ ॥ ೪೭ ॥

---

೪೩. ಸೂರ್ಯತತ್ವಜ್ಞಾನಬೋಧಕವಾದ ಶಾಸ್ತ್ರಭಾಗವನ್ನು ಅಧ್ಯಯನ ಮಾಡಿದ್ದರೂ, ಮೂಢಬುದ್ಧಿಯಿಂದ ಆ ಶಾಸ್ತ್ರವನ್ನು ತ್ಯಜಿಸಿದವನಿಗೆ ಮದ್ಯಪಾನ ಮಾಡಿದ ಪಾಪಕ್ಕೆ ಸಮಾನವಾದ ಪಾಪವು ಬರುವುದು.

೪೪. ಅಗ್ನಿಹೋತ್ರ, ಪಂಚಯಜ್ಞಗಳಿಗೆ ಸಂಬಂಧಿಸಿದ ಕರ್ಮ ಇವುಗಳನ್ನು ತ್ಯಜಿಸುವುದು, ತಾಯಿತಂದೆಗಳನ್ನು ತ್ಯಜಿಸುವುದು, ಸುಳ್ಳುಸಾಕ್ಷಿ ಹೇಳುವುದು, ಮಿತ್ರರನ್ನು ಕೊಲ್ಲುವುದು,

೪೫. ಸೂರ್ಯಭಕ್ತರಿಗೆ ಅಪ್ರಿಯವನ್ನು ಮಾಡುವುದು. ತಿನ್ನಬಾರದ ವಸ್ತುಗಳನ್ನು ತಿನ್ನುವುದು, ನಿರಪರಾಧಿಗಳಾದ ಪ್ರಾಣಿಗಳನ್ನು ಚೆನ್ನಾಗಿ ಹಿಂಸಿಸಿ ಕೊಲ್ಲುವುದು;

೪೬. ಮೇಲೆ ಹೇಳಿದ ಇಂಥ ಕೃತ್ಯಗಳನ್ನು ಆಚರಿಸುವವರಿಗೆ ಉತ್ತಮವಾದ ಸೂರ್ಯಲೋಕದಲ್ಲಿ ಸರ್ವಾಧಿಪತ್ಯವು ದೊರೆಯುವುದಿಲ್ಲ. ಜಗತ್ಪತಿಯಾದ ಸೂರ್ಯನು ಸತ್ಪುರುಷರಿಗೆ ಶ್ರೇಷ್ಠವಾದ ದೇವಪುರದಲ್ಲಿ ಆತ್ಮಲೋಕಾಧಿಪತ್ಯವನ್ನೇ ಕೊಡುವನು.

೪೭. ಜ್ಞಾನಯೋಗಪರರಾದ ಕೆಲವರು ಈ ಲೋಕದಲ್ಲೇ ಮುಕ್ತರಾಗುವರು. ಭೋಗಾಸಕ್ತರಾದ ಇತರರು ಮತ್ತೆ ಮತ್ತೆ ಸಂಸಾರದಲ್ಲಿ ಸುತ್ತುತ್ತಿರುತ್ತಾರೆ.

ತಸ್ಮಾದ್ವಿಮೋಕ್ಷಮನ್ವಿಚ್ಛೇ ಭೋಗಾಸಕ್ತಿಂ ವಿವರ್ಜಯೇತ್ ।
ವಿರಕ್ತಃ ಶಾಂತಚಿತ್ತಾತ್ಮಾ ಸೌರಲೋಕಮವಾಪ್ನುಯಾತ್ ॥ ೪೮ ॥

ಯಚ್ಚಾಪ್ಯಸಕ್ತಹೃದಯಾ ಜಪಂತೀಮಂ ಪ್ರಸಂಗತಃ ।
ತೇಷಾಮಪಿ ವದತ್ಯೇಕಃ ಸ್ವಾನುಭಾವಾನುರೂಪತಃ ॥ ೪೯ ॥

ತನ್ನಾರ್ಚಯಂತಿ ಯೇ ಭಾನುಂ ಸಕೃದುಚ್ಛಿಷ್ಟದೇಹಿನಃ ।
ತೇಷಾಂ ಪಿಶಾಚಲೋಕೇ ತು ಭೋಗಾನ್ಭಾನುಃ ಪ್ರಯಚ್ಛತಿ ॥ ೫೦ ॥

ದ್ವಿರ್ಜಪಂತಿ ಚ ಯೇ ಭಾನುಂ ಕ್ರೂರಾಃ ಸಂಕ್ರುದ್ಧಲೋಚನಾಃ ।
ರಕ್ಷೋಲೋಕೇ ರವಿಸ್ತೇಷಾಂ ಮಹಾಭಾಗ್ಯಂ ಪ್ರಯಚ್ಛತಿ ॥ ೫೧ ॥

ತ್ರಿರರ್ಚಯಂತಿ ಯೇ ಭಾನುಂ ಮದ್ಯಮಾಂಸರತಾಃ ನರಾಃ ।
ಋಷಿಲೋಕೇ ರವಿಸ್ತೇಷಾಂ ಭೋಗಾನ್ ದಿವ್ಯಾನ್ಪ್ರಯಚ್ಛತಿ ॥ ೫೨ ॥

---

೪೮ ಆದುದರಿಂದ ಮೋಕ್ಷವನ್ನಪೇಕ್ಷಿಸುವವನು ಭೋಗಾಸಕ್ತಿಯನ್ನು ತೊರೆಯಬೇಕು. ಹೀಗೆ ವಿರಕ್ತನೂ, ಶಾಂತಚಿತ್ತನೂ ಆದ ಮಾನವನು ಸೂರ್ಯಲೋಕವನ್ನು ಹೊಂದುವನು.

೪೯. ಯಾರು ತನಗೆ ಮನಸ್ಸಿಲ್ಲದಿದ್ದರೂ ಪ್ರಸಂಗವಶದಿಂದ ಎಲ್ಲೋ ಒಂದು ಸಲ ಸೂರ್ಯಮಂತ್ರ ಜಪಮಾಡಿದರೆ ಅವನಿಗೂ ಒಂದು ಫಲವನ್ನು ಭಗವಂತನು ಕರುಣಿಸುವನೆಂದು ಪ್ರಾಜ್ಞರು ಹೇಳುವರು. ಹಾಗೆ ಬರುವ ಆ ಫಲವು ಅವನ ಭಾವನೆಯನ್ನು ಅನುಸರಿಸಿ ಪ್ರಾಪ್ತಿಯಾಗುವುದು.

೫೦. ಆ ಪ್ರಕಾರ ಉಚ್ಛಿಷ್ಟದೇಹವುಳ್ಳವರಾಗಿ ಸೂರ್ಯನನ್ನು ಪೂಜಿಸದೆ ಇರುವವರಿಗೆ, ಸೂರ್ಯನು ಪಿಶಾಚಲೋಕವಾಸವನ್ನುಂಟುಮಾಡುವನಾದ್ದರಿಂದ ಅವರು ಅಲ್ಲಿಯೇ ಬಿದ್ದು ಅಲ್ಲಿನ ಸುಖವನ್ನು ಅನುಭವಿಸಲೇಬೇಕಾಗುವುದು.

೫೧. ಮಹಾಕ್ರೂರಿಗಳು ಕೋಪದಿಂದ ಕೆಂಪಾದ ಕಣ್ಣುಗಳಿಂದ ಕೂಡಿದವರಾಗಿ ಎರಡುಸಲ ಸೂರ್ಯನಮಂತ್ರವನ್ನು ಜಪಮಾಡಿದರೆ, ಅವರಿಗೆ ಸೂರ್ಯನು ರಾಕ್ಷಸಲೋಕದಲ್ಲಿ ಮಹಾಭಾಗ್ಯವುಂಟಾಗುವಂತೆ ಅನುಗ್ರಹಮಾಡುವನು.

೫೨. ಮದ್ಯಮಾಂಸ ಸೇವನೆಯಲ್ಲಿ ಆಸಕ್ತರಾಗಿದ್ದವರು ಸೂರ್ಯನನ್ನು ಮೂರಾವರ್ತಿ ಪೂಜಿಸಿದರೆ, ಅವರಿಗೆ ಸೂರ್ಯನು ಋಷಿಲೋಕವಲ್ಲಿ ದಿವ್ಯಭೋಗಗಳನ್ನು ಕೊಡುತ್ತಾನೆ.

ಯೇ ನೃತ್ಯಗೀತಂ ಕುರ್ವಂತಿ ತ್ರಿಚತುರ್ಧಾಯದೃಚ್ಛಯಾ ।
ಸೂರ್ಯಸ್ಯಾಗ್ರೇ ತು ತೇ ಯಾಂತಿ ಗಂಧರ್ವಭವನಂ ಖಗ ॥ ೫೩ ॥

ಲೋಕಾಃ ಖ್ಯಾತಿಂ ಸಮುದ್ದಿಶ್ಯ ಪೂಜಯಂತಿ ಚ ಗೋಪತಿಂ ।
ತೇಷಾಂ ಶಕ್ರಾಲಯೇ ಭಾನುಃ ಕಾಮಾನ್ ಸರ್ವಾನ್ಪ್ರಯಚ್ಛತಿ ॥ ೫೪ ॥

ಕಾಮಾಸಕ್ತೇನ ಚಿತ್ತೇನ ಯಃ ಷಡರ್ಚಯತೇ ರವಿಂ ।
ಪ್ರಾಜಾಪತ್ಯೇ ರವಿಸ್ತಸ್ಯ ಲೋಕೇ ಭೋಗಾನ್ಪ್ರಯಚ್ಛತಿ ॥ ೫೫ ॥

ನವಕೃತ್ವೋಽರ್ಚಯೇದ್ಯಸ್ತು ಚಿತ್ರಭಾನುಂ ಖಗಾಧಿಪ ।
ಸ ಯಾತಿ ವಿಷ್ಣುಸಾಲೋಕ್ಯಂ ವಿಷ್ಣುನಾ ಸಹ ಮೋದತೇ ॥ ೫೬ ॥

ತಸ್ಮಾದಪಿ ವರಂ ಸ್ಥಾನಂ ಯದ್ಭೂತಾನಾಂ ಮನೋಹರಂ ।
ಅಪ್ರಮೇಯಗುಣೈರ್ದಿವ್ಯೈರ್ವಿಮಾನೈಃ ಸಾರ್ವಕಾಮಿಕೈಃ ॥ ೫೭ ॥

---

೫೩. ಸೂರ್ಯನ ಸಂಮುಖದಲ್ಲಿ ಸ್ವೇಚ್ಛೆಯಿಂದ ಮೂರಾವರ್ತಿ ಅಥವಾ ನಾಲ್ಕಾವರ್ತಿ ನರ್ತನ ಮತ್ತು ಗಾನವನ್ನು ಮಾಡುವವರು ಗಂಧರ್ವಲೋಕಕ್ಕೆ ಹೋಗುತ್ತಾರೆ.

೫೪. ತಮಗೆ ಪ್ರಖ್ಯಾತಿ ದೊರೆಯಬೇಕೆಂದುದ್ದೇಶಿಸಿ, ಕಿರಣಗಳಿಗೆ ಅಧಿಪತಿಯಾದ ಸೂರ್ಯನನ್ನು ಪೂಜಿಸುವವರಿಗೆ ಸೂರ್ಯನು ಇಂದ್ರಲೋಕದಲ್ಲಿ ಸರ್ವಇಷ್ಟಾರ್ಥಗಳನ್ನೂ ಕೊಡುತ್ತಾನೆ.

೫೫. ಕಾಮಾಸಕ್ತವಾದ ಮನಸ್ಸಿನಿಂದ ಕೂಡಿದ್ದರೂ ಹಾಗೆಯೇ ಆರಾವರ್ತಿ ಸೂರ್ಯನನ್ನು ಪೂಜಿಸುವವನಿಗೆ ಸೂರ್ಯನು ಪ್ರಾಜಾಪತ್ಯಲೋಕದಲ್ಲಿ ಸರ್ವಭೋಗಗಳನ್ನೂ ಕೊಡುತ್ತಾನೆ.

೫೬. ಎಲೈ ಖಗನೇ! ಚಿತ್ರಭಾನುವನ್ನು ಒಂಭತ್ತುಸಲ ಪೂಜೆಮಾಡುವವನು ವಿಷ್ಣುಸಾಲೋಕ್ಯವನ್ನು ಪಡೆದು ವಿಷ್ಣುವಿನೊಡನೆ ವಿಹರಿಸುತ್ತಾ ಸಂತೋಷಪಡುವನು.

೫೭. ಅಸಂಖ್ಯಾತಗುಣಗಳುಳ್ಳದೂ, ಸರ್ವ ಇಷ್ಟಾರ್ಥಗಳನ್ನೂ ನೆರವೇರಿಸಿಕೊಡುವ ಮಹಿಮೆಯುಳ್ಳದೂ ಆದ ವಿಮಾನಗಳಲ್ಲಿ ಕುಳಿತು, ಪ್ರಾಣಿಗಳಿಗೆ ಅತ್ಯಂತ

ಅಸಂಖ್ಯೈರ್ವಸ್ತುಭಿರ್ವ್ಯಾಪ್ತಂ ಗೈರಿಕೈ ರಕ್ತಚಿತ್ರಕೈಃ ।
ನಾನಾಗೃಹಸಮಾಕೀರ್ಣೈಃ ಸೂರ್ಯಕೋಟಿಸಮುಪ್ರಭಂ ॥ ೫೮ ॥

ತತ್ಸ್ಥಾನಂ ತೇ ಪ್ರಯಚ್ಛಂತಿ ಅರ್ಚಯಂತಿ ಚ ಯೇ ದ್ವಿಜಾನ್ ।
ತತ್ರ ಲೋಕೇ ಖಗಶ್ರೇಷ್ಠ ವಸಂತಿ ವಿಹರಂತಿ ಚ ॥
ತಸ್ಮಾದಪಿ ಪರಂ ಸ್ಥಾನಂ ಜ್ಯೋತಿಷ್ಕಂ ಸೌರಮುಚ್ಯತೆ ॥ ೫೯ ॥

ಏವಂ ಸೂರ್ಯಾನುಭಾವೇನ ನಿಕೃಷ್ಟೇನಾಪಿ ಕರ್ಮಣಾ ।
ನರೈಃ ಸ್ಥಾನಾನ್ಯವಾಪ್ಯಂತೇ ಶ್ರದ್ಧಾಭಾವಾನುರೂಪತಃ ॥ ೬೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು ಸಪ್ತಾಶ್ವಾರುಣ ಸಂವಾದೋ ನಾಮೈಕೋನನವತ್ಯಧಿಕ ಶತತಮೋಽಧ್ಯಾಯಃ.

---

ಮನೋಹರವೂ, ಶ್ರೇಷ್ಠವೂ ಆದ ಸ್ಥಾನವನ್ನು ಪಡೆದು, ಅಲ್ಲಿ ದೇವನೊಡನೆ ಸಂತೋಷದಿಂದ ಸಂಚರಿಸುತ್ತಾನೆ.

೫೮. ಎಲೈ ಖಗನೇ! ಬ್ರಾಹ್ಮಣರನ್ನು ಭಕ್ತಿಯಿಂದ ಅರ್ಚಿಸುವವರಿಗೆ ಲೆಕ್ಕವಿಲ್ಲದಷ್ಟು ವಸ್ತುಗಳಿಂದ ತುಂಬಿದುದೂ, ಕೆಂಪುಬಣ್ಣದ ಗೈರಿಕಧಾತುಗಳಿಂದ ಚಿತ್ರಿತವಾದುದೂ, ನಾನಾಬಗೆಯಗೃಹಗಳಿಂದ ಕೂಡಿದುದೂ,

೫೯. ಕೋಟಿಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳುದೂ ಆದ ಸ್ಥಾನವನ್ನು ಆ ಬ್ರಾಹ್ಮಣರು ಕೊಡುತ್ತಾರೆ. ಆ ಲೋಕದಲ್ಲಿ ವಾಸಮಾಡುತ್ತಾ ಅವರು ಸಂತೋಷಪಡುತ್ತಾರೆ. ಅದಕ್ಕಿಂತಲೂ ಸೂರ್ಯಸಂಬಂಧವುಳ್ಳ ಜ್ಯೋತಿಷ್ಕವೆಂಬ ಸ್ಥಾನವು ಇನ್ನೂ ಉತ್ಕೃಷ್ಟವಾದುದು.

೬೦. ಹೀಗೆ ಸೂರ್ಯನನ್ನುದ್ದೇಶಿಸಿ ನಿಕೃಷ್ಟವಾದ ರೀತಿಯಲ್ಲಿ ಕರ್ಮಾಚರಣೆಯನ್ನು ಮಾಡುವ ಮನುಜರೂ ಅವರವರ ಭಕ್ತಿಶ್ರದ್ಧೆಗಳಿಗನುಗುಣವಾಗಿ ಯೋಗ್ಯವಾದ ಸ್ಥಾನಗಳನ್ನು ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀ ಕಲ್ಪದ ಸೌರಧರ್ಮದಲ್ಲಿ ಸಪ್ತಾಶ್ವಾರುಣ ಸಂವಾದವೆಂಬ ನೂರೆಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ತಾರಾರೂಪಾ ವಿಮಾನಾನಾಮಿಮಾಃ ಸಂತಿ ಚ ಕೋಟಯಃ ।
ಯಃ ಕುರ್ಯಾತ್ತು ನಮಸ್ಕಾರಂ ತಸ್ಯೈವ ಚ ಫಲಂ ಭವೇತ್ ॥ ೧ ॥

ಇತ್ಯೇತಾ ಗತಯಃ ಪ್ರೋಕ್ತಾ ಮಹತ್ಯಃ ಸೌರಧರ್ಮಿಣಾಂ ।
ತಸ್ಮಾತ್ಸೌರಃ ಸದಾ ಧರ್ಮಃ ಕರ್ತವ್ಯಃ ಸುಖಮಿಚ್ಛತಾ ॥ ೨ ॥

ಇದಾನೀಂ ಪಾಪನಿಚಯಾಃ ಸ್ಥೂಲಾ ನರಕಹೇತವಃ ।
ತೇ ಸಮಾಸೇನ ಕಥ್ಯಂತೇ ಮನೋವಾಕ್ಕಾಯಸಾಧನೈಃ ॥ ೩ ॥

---

### ನೂರತೊಂಭತ್ತನೆಯ ಅಧ್ಯಾಯ

೧. ಬಳಿಕ ಸಪ್ತಾಶ್ವತಿಲಕನು ಹೇಳತೊಡಗಿ "ಅಯ್ಯಾ ಅರುಣ! ಕೇಳು ; ತಾರಾರೂಪವಾದ ವಿಮಾನಗಳು ಕೋಟ್ಯಾಂತರವಿವೆ. ಆ ವಿಮಾನಗಳಿಗೆ ನಮಸ್ಕಾರ ಮಾಡಿದವನು ಅದಕ್ಕೆ ತಕ್ಕ ಫಲ ಹೊಂದುವನು.

೨. ಹೀಗೆ ಈ ಸೌರಧರ್ಮಗಳು ಮಹತ್ತಾದುವೆಂದು ಹೇಳಿದೆ. ಆದುದರಿಂದ ಸುಖವನ್ನು ಬಯಸುವವನು ಸದಾ ಸೌರಧರ್ಮವನ್ನು ಆಚರಿಸಬೇಕು.

೩. ಮನೋವಾಕ್ಕಾಯ ಎಂಬ ಸಾಧನಗಳ ಮೂಲಕವಾದ ನಡವಳಿಕೆಯಿಂದ ನರಕಕ್ಕೆ ಕಾರಣವಾಗುವ ಕೆಲವು ಪಾಪರಾಶಿಗಳುಂಟಾಗುವುವು. ಅದನ್ನು ಈಗ ಸಂಕ್ಷೇಪವಾಗಿ ಹೇಳುತ್ತೇನೆ.

ಗವಾಂ ಮಾರ್ಗೇ ವನೇ ಚಾಗ್ನೇಃ ಪುರೇ ಗ್ರಾಮೇ ಸಮರ್ಪಣಂ ।
ಇತ್ಯೇತಾನೀಹ ಪಾಪಾನಿ ಸುರಾಪಾನಸಮಾನಿ ಚ ॥ ೪ ॥

ವನೇ ಸರ್ವಸ್ವ ಹರಣಂ ನರಸ್ತ್ರೀಗಜವಾಜಿನಾಂ ।
ಗೋಭೂಸಮೀಪಜಾತಾನಾಮೋಷಧೀನಾಂ ಚ ಖೇಚರ ॥ ೫ ॥

ಚಂದನಾಗುರುಕರ್ಪೂರಕಸ್ತೂರೀಪಟ್ಟವಾಸಸಾಂ ।
ಹಸ್ತನ್ಯಾಸಾಪಹರಣಂ ರುಕ್ಮಸ್ತೇಯಸಮಂ ಸ್ಮೃತಂ ॥ ೬ ॥

ಕನ್ಯಾನಾಂ ವರಯೋಗ್ಯಾನಾಮಾಕರ್ಷಣಮಸಂಗತಃ ।
ಪುತ್ರಮಿತ್ರಕಲತ್ರೇಷು ಗಮನಂ ಭಗಿನೀಷು ಚ ॥ ೭ ॥

ಕುಮಾರೀಸಾಹಸಂ ಘೋರಮಂತ್ಯಜಸ್ತ್ರೀನಿಷೇವಣಂ ।
ಸಗೋತ್ರಾಯಾಶ್ಚ ಗಮನಂ ಗುರುತಲ್ಪಸಮಂ ಸ್ಮೃತಂ ॥ ೮ ॥

---

೪. ಗೋವುಗಳು ತಿರುಗುವ ಮಾರ್ಗ, ಕಾಡು (ಹುಲ್ಲುಗಾವಲು), ಗ್ರಾಮ ಇವುಗಳಿಗೆ ಬೆಂಕಿ ಇಡುವ ಕೃತ್ಯವು, ಸುರಾಪಾನ ಮಾಡಿದರೆ ಉಂಟಾಗುವ ಮಹಾ ಪಾಪಕ್ಕೆ ಸಮಾನವೆಂದು ತಿಳಿಯಬೇಕು.

೫. ವನದಲ್ಲಿ ಪುರುಷರು, ಸ್ತ್ರೀಯರು, ಆನೆ, ಕುದುರೆ ಇವುಗಳನ್ನು ಸರ್ವಸ್ವವನ್ನೂ ಅಪಹರಿಸುವುದೂ, ಗೋವುಗಳು ಮೇಯುವ ಭೂಮಿಯ ಸಮೀಪದಲ್ಲಿ ಬೆಳೆದಿರುವ ಔಷಧಿ ಸಸ್ಯಗಳನ್ನು ಪರಿಹರಿಸುವುದೂ ;

೬. ಗಂಧ, ಅಗಿಲು, ಕರ್ಪೂರ, ಕಸ್ತೂರಿ, ರೇಷ್ಮೆಯ ಬಟ್ಟೆಗಳು ಇವನ್ನಪಹರಿಸುವುದು, "ಜೋಪಾನವಾಗಿಟ್ಟಿರು" ಎಂದು ಅನ್ಯರು ತನ್ನ ಕೈಲಿ ಕೊಟ್ಟಿದ್ದುದನ್ನು ಅಪಹರಿಸುವುದು, ಇವು ಸ್ವರ್ಣಸ್ತೇಯಮಾಡಿದ ಪಾಪಕ್ಕೆ ಸಮಾನವಾದ ಪಾಪಗಳು.

೭. ವಿವಾಹಯೋಗ್ಯರಾದ ಕನ್ಯೆಯರನ್ನು ಬಲಾತ್ಕರಿಸಿ ಎಳೆದುತರುವುದು, ಮಕ್ಕಳು, ಸ್ನೇಹಿತರು ಇವರ ಹೆಂಡಿರಲ್ಲಿಯೂ, ಸಹೋದರಿಯರಲ್ಲಿಯೂ ಸಂಗಮ ಮಾಡುವುದು,

೮. ರಜಸ್ವಲೆಯಾಗದ ಹುಡುಗಿಯನ್ನು ಬಲಾತ್ಕಾರದಿಂದ ಭೋಗಿಸುವುದು, ಭಯಂಕರವಾದ ಅಂತ್ಯಜಾತಿಸ್ತ್ರೀಯಲ್ಲಿ ಸಂಗಮವು, ತನ್ನ ಗೋತ್ರೋತ್ಪನ್ನಳಾದ

ಮಹಾಪಾತಕತುಲ್ಯಾನಿ ಪಾಪಾನ್ಯುಕ್ತಾನಿ ಯಾನಿ ತು ।
ತಾನಿ ಪಾತಕಸಂಜ್ಞಾನಿ ಬ್ರೂಮಹೇ ಚೋಪಪಾತಕಂ ॥ ೯ ॥

ದ್ವಿಜಾಯಾರ್ಥಂ ಪರಿಶ್ರುತ್ಯ ನ ಪ್ರಯಚ್ಛತಿ ಯೋ ದ್ವಿಜ ।
ಸದ್ಭಾರ್ಯಾಣಾಂ ಚ ಸಂತ್ಯಾಗಃ ಸಾಧುಬಂಧುತಪಸ್ವಿನಾಂ ॥ ೧೦ ॥

ಗೋ ಭೂಹಿರಣ್ಯವಸ್ತ್ರಾಣಾಮುಪಹಾರಃ ಪ್ರಯತ್ನತಃ ।
ಈಶ್ವರಾರ್ಪಿತಬುದ್ಧೀನಾಂ ಪೀಡನಂ ಸುಮಹತ್ಕೃತಂ ॥ ೧೧ ॥

ಯಃ ಪೀಡಾಮಾಶ್ರಮಸ್ಥಾನಾಮಾಚರೇದಲ್ಪಿಕಾಮಪಿ ।
ತದ್ಭೃತ್ಯಪರಿಭೂತಸ್ಯ ಪಶುಧಾನ್ಯಧನಸ್ಯ ಚ ॥ ೧೨ ॥

---

ಸ್ತ್ರೀಯೊಡನೆ ಸಂಭೋಗಮಾಡುವುದು, ಇವೆಲ್ಲಾ ಗುರುತಲ್ಪಗಮನ ಮಾಡಿದ ದೋಷಕ್ಕೆ ಸಮಾನವಾದ ಮಹಾಪಾಪಗಳೆಂದು ತಿಳಿಯಬೇಕು.

೯. ಮಹಾಪಾತಕಗಳಿಗೆ ಸಮಾನವಾದ ಪಾತಕಗಳನ್ನು ಈಗ ಹೇಳಿ ಆಯಿತು. ಈಗ ಉಪಪಾತಕಗಳಾವುವೆಂಬುದನ್ನು ತಿಳಿಸುವೆನು.

೧೦. ಅಯ್ಯಾ ಖಗನೇ! ಬ್ರಾಹ್ಮಣನಿಗೆ ದ್ರವ್ಯವನ್ನು ಕೊಡುತ್ತೇನೆಂದು ಪ್ರತಿಜ್ಞೆಮಾಡಿ ಹಾಗೆ ಕೊಡದೆಹೋಗುವುದು, ಒಳ್ಳೆಯ ಹೆಂಡಿರನ್ನು ವರ್ಜ್ಯಮಾಡುವುದು; ಸಾಧುಗಳು, ಬಂಧುಗಳು, ತಪಸ್ವಿಗಳು ಇವರನ್ನು ಪರಿತ್ಯಾಗಮಾಡುವುದು ;

೧೧. ಗೋವು, ಭೂಮಿ, ಹಿರಣ್ಯ, ವಸ್ತ್ರಗಳು ಇವುಗಳನ್ನು ಪ್ರಯತ್ನದಿಂದ ಅಪಹರಿಸುವುದು, ಮತ್ತು ಈಶ್ವರ ಧ್ಯಾನಾಸಕ್ತರನ್ನು ಬಹುವಾಗಿ ಪೀಡಿಸುವುದು, ಇವೆಲ್ಲಾ ಪಾಪ.

೧೨. ಆಶ್ರಮವಾಸಿಗಳಾದ ಜನರಿಗೆ ಹಿಂಜರಿಯದೆ ಸ್ವಲ್ಪಮಾತ್ರವಾದರೂ ತೊಂದರೆ ಕೊಡುವಂಥವನೂ, ಆ ಆಶ್ರಮವಾಸಿಗಳ ಐಶ್ವರ್ಯಸ್ವರೂಪಗಳಾದ ಪಶುಗಳು, ಧಾನ್ಯಗಳು ಮತ್ತು ದ್ರವ್ಯ ಇವುಗಳನ್ನು ಅಪಹರಿಸುವವನೂ ಸಹ, ಪಾತಕಿಗಳೆನಿಸುವರು.

ಧನಧಾನ್ಯಪಶುಸ್ತೇಯಮಯೋಜ್ಯಾನಾಂ ಚ ಯೋಜನಂ ।
ಯಜ್ಞಾರಾಮತಡಾಗಾನಾಂ ದಾರಾಪತ್ಯಸ್ಯ ವಿಕ್ರಯಃ ॥ ೧೩ ॥

ತೀರ್ಥಯಾತ್ರೋಪವಾಸಾನಾಂ ಬ್ರೂತೇ ಚ ಜಪಕರ್ಮಣಃ ।
ಸ್ತ್ರೀಧನಾನ್ಯುಪಕರ್ಷಂತಿ ಯೇ ಜನಾಃ ಪಾಪಕರ್ಮಣಾ ॥ ೧೪ ॥

ಅರಕ್ಷಣಂ ಚ ನಾರೀಣಾಂ ಮದ್ಯಪಸ್ತ್ರಿನಿಷೇವಣಂ ।
ಋಷೀಣಾಮಪ್ರದಾನಂ ಚ ಧಾನ್ಯವೃದ್ಧ್ಯುಪಸೇವನಂ ॥ ೧೫ ॥

ದೇವಾಗ್ನಿಸಾಧುಸಾಧ್ವೀನಾಂ ನಿಂದಾ ಗೋಬ್ರಾಹ್ಮಣಸ್ಯ ಚ ।
ಪ್ರತ್ಯಕ್ಷಂ ವಾ ಪರೋಕ್ಷಂ ವಾ ರಾಜಮಾಂಡಲಿಕಾನಪಿ ॥ ೧೬ ॥

---

೧೩. ಪರರ ಧನ, ಧಾನ್ಯ ಪಶುಗಳು ಇವುಗಳನ್ನು ಅಪಹರಿಸುವವನೂ, ಕೇಳಬಾರದ ಪದಾರ್ಥಗಳನ್ನು ಕೇಳಿ ಪೀಡಿಸುವವನೂ, ಯಜ್ಞ, ಆರಾಮ (ಉದ್ಯಾನವನ) ಕೆರೆ ಇವುಗಳನ್ನೂ, ತನ್ನ ಹೆಂಡತಿ ಮಕ್ಕಳುಗಳನ್ನು ಸಹ ವಿಕ್ರಯಮಾಡುವವನೂ

೧೪. ಜಪಕರ್ಮದ ಫಲವನ್ನೂ, ತೀರ್ಥಯಾತ್ರೋಪವಾಸಗಳ ಫಲವನ್ನೂ ವಿಕ್ರಯಮಾಡುವವನೂ, ಇವರೆಲ್ಲರನ್ನೂ ಪಾಪಿಗಳೆಂದೇ ತಿಳಿಯಬೇಕು. ಪಾಪ ಕರ್ಮಗಳ ಮೂಲಕ ಯಾರು ಸ್ತ್ರೀದ್ರವ್ಯವನ್ನು ಅಪಹರಿಸಿ ಅದರಿಂದ ಜೀವಿಸುವರೋ ಅವರನ್ನೂ ಪಾಪಿಗಳೆಂದೇ ತಿಳಿಯಬೇಕು.

೧೫. ತನ್ನ ಧರ್ಮಪತ್ನಿಯನ್ನು ರಕ್ಷಣೆಮಾಡದೆ ಮದ್ಯಪಾನದಲ್ಲಿ ನಿರತಳಾದ ವೇಶ್ಯಾದಿ ಇತರ ಸ್ತ್ರೀಯರ ಸಹವಾಸ ಮಾಡುವುದು, ಋಷಿಗಳು ಮುಂತಾದ ಜ್ಞಾನಿಗಳಿಗೆ ದಾನಮಾಡದೆ ಇರುವುದು, ಧಾನ್ಯವನ್ನು ಬಡ್ಡಿಗೆ ಹಾಕಿ ಅದರಿಂದ ಜೀವನ ಮಾಡುವುದೂ ಇವೆಲ್ಲವೂ ಪಾಪಕಾರ್ಯಗಳೆಂದು ತಿಳಿಯಬೇಕು.

೧೬. ದೇವತೆಗಳು, ಅಗ್ನಿಗಳು, ಸಾಧುಗಳು, ಪತಿವ್ರತೆಯರು, ಗೋವುಗಳು, ಬ್ರಾಹ್ಮಣರು ಇವರನ್ನೂ, ರಾಜನನ್ನೂ ಮತ್ತು ಅವನ ಮಂಡಲಿಕರನ್ನೂ ಸಹ ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ನಿಂದಿಸುವವರು ಪಾಪಿಗಳೆನಿಸುವರು.

ಉತ್ಸನ್ನಪಿತೃದೇವಾಶ್ಚ ಸ್ವಕರ್ಮತ್ಯಾಗಿನಶ್ಚ ಯೇ ।
ದುಃಶೀಲಾ ನಾಸ್ತಿಕಾಃ ಪಾಪಾಃ ಸದಸಚ್ಛೂನ್ಯವಾದಿನಃ ॥ ೧೭ ॥

ಏವಂ ಕಾಮೇ ಪ್ರವೃತ್ತೇ ತು ವಿಯೋನೌ ಪಶುಯೋನಿಷು ।
ರಜಸ್ವಲಾ ಸ್ವಯೋನೌ ತು ಮೈಥುನಂ ಯಃ ಸಮಾಚರೇತ್ ॥ ೧೮ ॥

ಸ್ತ್ರೀಪುತ್ರಮಿತ್ರೇಷ್ವಪ್ರೀತಾ ಆರಾಮೋಚ್ಛೇದಕಾಶ್ಚ ಯೇ ।
ಜನಸ್ಯಾಪ್ರಿಯವಕ್ತಾರೋ ಜನಾಭಿಪ್ರಾಯಭೇದಿನಃ ॥ ೧೯ ॥

ಭೇದೀ ತಡಾಗವಪ್ರಾಣಾಂ ಸಂಕ್ರಮಾಣಾಂ ರಸಸ್ಯ ಚ ।
ಏಕಪಂಕ್ತಿಸ್ಥಿತಾನಾಂ ಚ ಪಂಕ್ತಿಭೇದಂ ಕರೋತಿ ಯಃ ॥ ೨೦ ॥

---

೧೭. ಸಕಾಲದಲ್ಲಿ ದೇವಯಜ್ಞ, ಪಿತೃಯಜ್ಞಗಳನ್ನು ನೆರವೇರಿಸದೆ ದೇವತೆಗಳನ್ನೂ, ಪಿತೃಗಳನ್ನೂ ತೊಂದರೆಗೆ ಗುರಿಮಾಡಿದವನು, ತಾನು ಮಾಡಬೇಕಾದ ಕರ್ಮವನ್ನು ಬಿಟ್ಟು ಭ್ರಷ್ಟನಾಗಿರುವವನು, ದೇವರು ಮತ್ತು ಪರಲೋಕಗಳಿಲ್ಲವೆನ್ನುವ ನಾಸ್ತಿಕಸ್ವಭಾವದವನು ಸತ್ಪದಾರ್ಥವನ್ನು ಅಸತ್ಪದಾರ್ಥವೆಂದು ಹೇಳುವ ಶೂನ್ಯವಾದಿಗಳು ಇವರೆಲ್ಲರನ್ನೂ ಪಾಪಿಗಳೆಂದೇ ತಿಳಿಯಬೇಕು.

೧೮. ಕಾಮವಿಕಾರವನ್ನು ಸಹಿಸಲಾರದೆ ಸಂಗಮಯೋಗ್ಯವಲ್ಲದವರಲ್ಲಿಯೂ, ಮೃಗಾದಿ ಜಂತುಗಳಲ್ಲಿಯೂ, ರಜಸ್ವಲೆಯಾಗಿರುವ ತನ್ನ ಪತ್ನಿಯಲ್ಲಿಯೂ, ಸಂಗಮ ಮಾಡುವವನು ಪಾಪಿಯೆನಿಸುವನು.

೧೯. ತಮ್ಮ ಸ್ತ್ರೀ, ಪುತ್ರ, ಮಿತ್ರ ಇವರುಗಳಲ್ಲಿ ಪ್ರೀತಿಯಿಲ್ಲದವನು, ಉದ್ಯಾನವನ್ನು ಧ್ವಂಸಮಾಡುವವನು, ಜನರಿಗೆ ಅಪ್ರಿಯವನ್ನು ಹೇಳತಕ್ಕವನು, ಜನರ ಅಭಿಪ್ರಾಯವನ್ನು ಕೆಡಿಸಿ ಭಿನ್ನಾಭಿಪ್ರಾಯ ಹುಟ್ಟುವಂತೆ ಮಾಡುವವನು,

೨೦. ಕೆರೆ, ಕೋಟೆಯಗೋಡೆ ಇವುಗಳನ್ನು ಒಡೆಯುವವನು, ಸ್ವಾರಸ್ಯವಾದ ಮಾತಿನ ರಸವನ್ನು ಕೆಡಿಸುವವನು, ಒಂದೇ ಪಂಕ್ತಿಯಲ್ಲಿ ಊಟಕ್ಕೆ ಕುಳಿತಿರುವವರಿಗೆ ಒಬ್ಬೊಬ್ಬರಿಗೆ ಒಂದೊಂದುತರಹ ಬಡಿಸುತ್ತಾ ಪಂಕ್ತಿಭೇದಮಾಡತಕ್ಕವನು,

**ಇತ್ಯೇತೈಸ್ತು ನರಾಃ ಪಾಪೈರುಪಪಾತಕಿನಃ ಸ್ಮೃತಾಃ　　　　॥ ೨೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾ ಕಲ್ಪೇ ಸೌರಧರ್ಮೇಷು ಸೂರ್ಯಾನೂರು ಸಂವಾದೇ ನವತ್ಯಧಿಕ ಶತತಮೋಽಧ್ಯಾಯಃ.**



---

೨೧. ಇಂತಹ ಪಾಪಕಾರ್ಯಗಳನ್ನು ಆಚರಿಸುವ ಮನುಷ್ಯರೆಲ್ಲ ಉಪಪಾತಕಿಗಳೆನಿಸಿಕೊಳ್ಳುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಾ ಕಲ್ಪದಲ್ಲಿ ಸೂರ್ಯಾರುಣ ಸಂವಾದರೂಪವಾದ. ನೂರತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕನವತ್ಯಧಿಕಶತತಮೋಽಧ್ಯಾಯಃ

---

॥ ಸಪ್ತಾಶ್ವತಿಲಕ ಉವಾಚ ॥

ಯೋ ಗೋಬ್ರಾಹ್ಮಣಸಸ್ಯಾನಾಂ ಸಾಧೂನಾಂ ತು ತಪಸ್ವಿನಾಂ ।
ದೂಷಕಾಶ್ಚೈವ ವರ್ತಂತೇ ನರಾ ನರಕಗಾಮಿನಃ ॥ ೧ ॥

ಪರಿಶ್ರಮೇಣ ತಪ್ಯಂತೇ ಯೇಽಪರೇ ತಸ್ಯ ಸೂಚಕಾಃ ।
ಪರದಾರರತಾನಾಂ ಚ ಕನ್ಯಾಯಾ ದೂಷಕಾಶ್ಚಯೇ ॥ ೨ ॥

ಗೋಷ್ಠಾಗ್ನಿಜಲರಮ್ಯಾಸು ತರುಚ್ಛಾಯಾನಗೇಷು ಚ ।
ತ್ಯಜಂತಿ ಯೇ ಪುರೀಷಾಣಿ ಆರಾಮಾಯತನೇಷು ಚ ॥ ೩ ॥

---

### ನೂರತೊಂಭತ್ತೊಂದನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಹೇಳುತ್ತಾನೆ—ಗೋವು, ಬ್ರಾಹ್ಮಣರು, ಸಸ್ಯಗಳು ಇವುಗಳನ್ನೂ, ಸಾಧುಗಳಾದ ತಪಸ್ವಿಗಳನ್ನೂ ದೂಷಿಸುವ ಮನುಷ್ಯರು ನರಕಕ್ಕೆ ಹೋಗುವರು.

೨. ಮೊದಲೇ ಶ್ರಮದಿಂದ ಸಂಕಟಪಡುತ್ತಾ ಇರುವವರನ್ನು ಮತ್ತೆ ಹಿಂಸೆ ಪಡಿಸುವವರೂ, ಪರಸ್ತ್ರೀಯಲ್ಲಿ ಆಸಕ್ತರಾದವರೂ, ಕನ್ಯಾದೂಷಣಮಾಡತಕ್ಕವರೂ,

೩. ದನಗಳ ಕೊಟ್ಟಿಗೆ, ಅಗ್ನಿಶಾಲೆ,(ಒಲೆ)ಜಲಾಶಯಸಮೀಪದ ರಮ್ಯಸ್ಥಾನಗಳು ಇವುಗಳಲ್ಲಿಯೂ, ತರುಚ್ಛಾಯೆಯಲ್ಲಿಯೂ ಮತ್ತು ಬೆಟ್ಟಗಳಮೇಲೂ ಪುರೀಷವಿಸರ್ಜನ ಮಾಡುವವರು, ಉದ್ಯಾನಗಳಲ್ಲೂ, ದೇವಾಲಯಗಳಲ್ಲೂ, ಮನೆಯೊಳಗೂ ಪುರೀಷವಿಸರ್ಜನ ಮಾಡುವವರು ಇವರೆಲ್ಲರೂ ನರಕಕ್ಕೆ ಹೋಗುವರು.

ಮದ್ಯಪಾನರತಾ ನಿತ್ಯಂ ಗೀತವಾದ್ಯರತಾ ನರಾಃ ।
ಕಾಮಕ್ರೋಧಮದಾವಿಷ್ಟಾ ರಂಧ್ರಾನ್ವೇಷಣತತ್ಪರಾಃ ॥ ೪ ॥

ಪಾಖಂಡಮತಸಂಯುಕ್ತಾ ವೃಥಾಸಂಲಾಪಕೌತುಕಾಃ ।
ಯೇ ಮಾರ್ಗಾನುಪರುಂಧಂತಿ ಪರಸೀಮಾಂ ಹರಂತಿ ಚ ॥ ೫ ॥

ಕೂಟಶಾಸನಕರ್ತಾರಃ ಕೂಟಕರ್ಮಕೃತೋ ನರಾಃ ।
ಧನುಷಃ ಶಿಲ್ಪಿಶಸ್ತ್ರಾಣಾಂ ಯಃ ಕರ್ತಾ ಯಶ್ಚ ವಿಕ್ರಯೀ ॥ ೬ ॥

ನಿರ್ದಯೋಽತೀವಭೃತ್ಯೇಷು ಪಶೂನಾಂ ದಮಕಶ್ಚ ಯಃ ।
ಮಿಥ್ಯಾಪ್ರವದತೋ ವಾಚಮಾಕರ್ಣಯತಿ ಯಃ ಶನೈಃ ॥
ಸ್ವಾಮಿಮಿತ್ರಗುರುದ್ರೋಹೀ ಮಾಯಾವೀ ಚಪಲಃ ಶಠಃ ॥ ೭ ॥

---

೪. ಅಂತಹ ಜನರು ಯಾವಾಗಲೂ ಮದ್ಯಪಾನಮಾಡುವುದರಲ್ಲಿ ಆಸಕ್ತರು; ಸದಾ ಗೀತ, ವಾದ್ಯವಾದನ, ಇವುಗಳಲ್ಲಿ ಆಸಕ್ತರು; ಕಾಮ ಕ್ರೋಧ ಮದ ಇವುಗಳಿಂದ ಆವೇಶಹೊಂದಿದವರು; ಇತರರ ಹುಳುಕನ್ನೇ ಹುಡುಕುವುದರಲ್ಲಿ ಆಸಕ್ತರು ಈ ಪ್ರಕಾರ ಇರುವರು.

೫. ಪಾಷಂಡಮತದಲ್ಲಿ ಆಸಕ್ತಿಯುಳ್ಳವರು, ವ್ಯರ್ಥವಾದ ಸಂಭಾಷಣೆಯಲ್ಲಿ ಕುತೂಹಲಿಗಳಾದವರು, ದಾರಿಕಟ್ಟಿ ತಲೆಹೊಡೆಯುವವರು, ಇತರರ ಭೂಮಿಯನ್ನು ಒತ್ತರಿಸಿಕೊಳ್ಳುವವರು ಇವರೆಲ್ಲಾ ಪಾಪಿಗಳು.

೬. ಕಪಟವಾದ ಆಜ್ಞೆಯನ್ನು ಕೊಡುವವರು, ಕಪಟದಿಂದ ಕಾರ್ಯಾಚರಣೆ ಮಾಡುವವರು, ಧನುಸ್ಸು, ಕೈಗಾರಿಕೆಯ ಸಾಮಗ್ರಿ, ಇತರ ಆಯುಧ (ಶಸ್ತ್ರ) ಗಳು ಇವನ್ನು ನಿರ್ಮಿಸುವವರು, ಮತ್ತು ಅವುಗಳನ್ನು ಮಾರುವವರು, ಸೇವಕರಲ್ಲಿ ಅತಿ ನಿಷ್ಕರುಣೆಯಿಂದಿರುವವರು, ದನಕರುಗಳನ್ನು ನಿಗ್ರಹಿಸುವವರು ಇವರೆಲ್ಲಾ ಪಾಪಿಗಳು.

೭. ಸುಳ್ಳುಹೇಳುವವನು, ಮಾತನ್ನು ಸಂಚುಕೇಳುವವನು, ಯಜಮಾನ, ಸ್ನೇಹಿತ, ಗುರು ಇವರಿಗೆ ದ್ರೋಹಮಾಡುವವನು, ಮೋಸಮಾಡುವವನು, ಚಪಲಚಿತ್ತವುಳ್ಳವನು, ವಂಚನೆಮಾಡುವವನು, ಇವರೆಲ್ಲಾ ನರಕಕ್ಕೆ ಹೋಗುವರು.

ಯೇಭಾರ್ಯಾಪುತ್ರಮಿತ್ರಾಣಿ ಬಾಲವೃದ್ಧಕೃಶಾತುರಾ‌ನ್ ।
ಭೃತ್ಯಾನತಿಥಿಬಂಧೂಂಶ್ಚ ತ್ಯಜಂತಿ ಚ ಬುಭುಕ್ಷಿತಾ‌ನ್ ॥ ೮ ॥

ಯಃ ಸ್ವಯಂ ಪಕ್ವಮಶ್ನಾತಿ ವಿಪ್ರಾಯಾನ್ನಂ ನ ಯಚ್ಛತಿ ।
ವೃಥಾಪಾಕಃ ಸ ವಿಜ್ಞೇಯೋ ಬ್ರಹ್ಮವಾದಿಷು ಗರ್ಹಿತಃ ॥ ೯ ॥

ನಿಯಮಂ ಸ್ವಯಮಾದಾಯ ಯೇ ತ್ಯಜಂತ್ಯಜಿತೇಂದ್ರಿಯಾಃ ।
ಪ್ರವ್ರಜ್ಯಾವಸಿತಾ ಯೇ ಚ ರಹಸ್ಯಾನಾಂ ತು ಭೇದಕಾಃ ॥ ೧೦ ॥

ಯೇ ತಾಡಯಂತಿ ಗಾಂ ಮೂಢಾಃ ತ್ರಾಸಯಂತಿ ಮುಹುರ್ಮುಹುಃ ।
ದುರ್ಬಲಂ ನ ಚ ಪುಷ್ಣಂತಿ ಪ್ರಣಷ್ಟಾನ್ನಾನ್ವಿಷಂತಿ ಚ ॥ ೧೧ ॥

ಪೀಡಯಂತ್ಯತಿಭಾರೇಣ ಅಶಕ್ಯಂ ವಾಹಯಂತಿ ಚ ।
ವೃಷಾಣಾಂ ವೃಷಣಾನ್ಯನ್ಯೇ ಪಾಪಿಷ್ಠಾ ಗಾಲಯಂತಿ ಹಿ ॥ ೧೨ ॥

---

೮. ಹೆಂಡತಿ, ಮಕ್ಕಳು, ಸ್ನೇಹಿತರು, ಬಾಲಕರು, ವೃದ್ಧರು, ರೋಗಗ್ರಸ್ತರು, ದುರ್ಬಲರು, ಕೂಲಿಯವರು, ಅತಿಥಿಗಳು, ಬಂಧುಗಳು ಇವರು ಹಸಿದಿದ್ದರೂ ಅವರನ್ನು ಬಿಟ್ಟು ಭೋಜನಮಾಡುವವನು,

೯. ಅಡಿಗೆ ಮಾಡಿದ ಅನ್ನವನ್ನು ಅಭ್ಯಾಗತರು ಬಂದಿದ್ದರೂ ಆ ಬ್ರಾಹ್ಮಣರಿಗೆ ಬಡಿಸದೆ ತಾನೇ ಭೋಜನಮಾಡುವವನು, ಇಂಥವನು ಬ್ರಹ್ಮವಾದಿಗಳಲ್ಲಿ ನಿಂದಿತವಾದ ವೃಥಾಪಾಕನೆನಿಸುವನು.

೧೦. ಕುತೂಹಲಿಯಾಗಿ ತಾನೇ ಸನ್ಯಾಸವನ್ನು ಪರಿಗ್ರಹಿಸಿ ಅನಂತರ ಇಂದ್ರಿಯಗಳನ್ನು ಜಯಿಸಲಾರದೆ ತಾನು ಹಿಡಿದ ನಿಯಮದಿಂದ ಭ್ರಷ್ಟನಾಗಿ ಸನ್ಯಾಸವನ್ನು ತ್ಯಜಿಸಿ ಪುನಃ ಗೃಹಸ್ಥನಾಗಿರುವವನು, ರಹಸ್ಯಗಳನ್ನು ಹೊರಗೆಡಹತಕ್ಕವನು,

೧೧. ಪಶುವನ್ನು ಪದೇಪದೇ ಹೊಡೆದು ಹೆದರಿಸತಕ್ಕವರು, ಬಲಹೀನವಾದ ಹಸುಗಳನ್ನು ಸರಿಯಾಗಿ ಪೋಷಿಸದೆ ಇರುವವರು, ತಪ್ಪಿಸಿಕೊಂಡುಹೋದ ದನಗಳನ್ನು ಹುಡುಕದೆ ಅಲಕ್ಷ್ಯಮಾಡುವವರು, ಇವರು ಮೂಢರು.

೧೨ ಹೆಚ್ಚಾದ ಭಾರವನ್ನು ಹೇರಿ ದನಗಳನ್ನು ಪೀಡಿಸುವವರು, ಗೂಳಿಗಳ ವೃಷಣವನ್ನು ಕಳಚಿ ಹಿಡಹೊಡೆಯುವವರು, ಮೂಕಜಂತುಗಳ ವಿಷಯದಲ್ಲಿ ನಿರ್ದಯೆಯಿಂದ ನಡೆದುಕೊಳ್ಳುವವರು,

**ವಾಹಯಂತಿ ಚ ಗಾಂ ವಂಧ್ಯಾಂ ತೇ ಪಾಪಿಷ್ಠಾ ನರಾಧಮಾಃ ।**
**ಆನರ್ಥಂ ವಿಕಲಂ ಹೀನಂ ಬಾಲವೃದ್ಧಕೃಶಾನಪಿ ॥**
**ನಾನುಕಂಪಂತಿ ಯೇ ಮೂಢಾಸ್ತೇ ಯಾಂತಿ ನರಕಂ ನರಾಃ ॥ ೧೩ ॥**

**ಅಜಾವಿಕಾ ಮಾಹಿಷಿಕಾಃ ಸವಿತ್ರೀವೃಷಲೀಪತಿಃ ।**
**ಕ್ಷತ್ರವಿಟ್‌ಶೂದ್ರವೃದ್ಧಾಶ್ಚ ಸ್ವಧರ್ಮವಿಹತಾಃ ಸದಾ ॥ ೧೪ ॥**

**ಶಿಲ್ಪಿನಃ ಕಾರುಕಾ ವೇಶ್ಯಾಃ ಕ್ಷೇಮಕಾರನೃಪಧ್ವಜಾಃ ।**
**ನರ್ತಕ್ಯೋ ಜ್ಯೋತಿಷಿ ಹತಾಃ ಸರ್ವೇ ನರಕಗಾಮಿನಃ ॥ ೧೫ ॥**

**ಘೃತತೈಲಾನುಪಾನಾನಿ ಮಧುಮಾಂಸರಸಾಸವಂ ।**
**ಗುಡೇಕ್ಷುಕ್ಷೀರಶಾಕಾನಿ ದಧಿಮೂಲಫಲಾನಿ ಚ ॥ ೧೬ ॥**

---

೧೩. ಗೊಡ್ಡುಹಸುವನ್ನು ಗಾಡಿಗೋ. ನೇಗಿಲಿಗೋ ಕಟ್ಟಿ ಎಳೆಯಿಸುವವರು, ಇವರುಗಳೆಲ್ಲಾ ಪಾಪಿಷ್ಠರಾದ ನರಾಧಮರೆನಿಸುವರು. ಕೇಡುಸಂಭವಿಸಿ ಅಂಗಹೀನತೆಯುಂಟಾಗಿ ಕೃಶರಾಗಿ ಹೋಗಿರುವವರು, ಬಾಲಕರು, ವೃದ್ಧರು, ದುರ್ಬಲರು ಇವರಲ್ಲಿ ದಯೆತೋರಿಸದೆ ಇರುವ ಮೂಢಮಾನವರು ನರಕಕ್ಕೆ ಹೋಗುವರು.

೧೪. ಆಡುಕುರಿಗಳನ್ನು, ಸಾಕತಕ್ಕವನು, ಎಮ್ಮೆಕೋಣಗಳನ್ನು ಸಾಕತಕ್ಕವನು, (ಪ್ರಸವಿತ್ರೀ-ಹೆತ್ತತಾಯಿ) ಮಾತೃಗಮನ ಮಾಡುವವನು, ವೃಷಲಸ್ತ್ರೀಯನ್ನು ಆಕ್ರಮಿಸಿರುವವನು, ಕ್ಷತ್ರಿಯ, ವೈಶ್ಯ, ಶೂದ್ರ ಈ ಜನಾಂಗದಲ್ಲಿ ವೃದ್ಧರಾಗಿದ್ದೂ ಸ್ವಧರ್ಮ ಹೀನರಾದವರು, ಇವರೆಲ್ಲಾ ನರಕಕ್ಕೆ ಹೋಗುವರು.

೧೫. ಸ್ವಧರ್ಮವನ್ನರಿಯದ ಕೆಲಸಗಾರರು, ಸೂಳೆಯರು, ಪ್ರಜಾ ಕ್ಷೇಮಾಸಕ್ತನಾದ ರಾಜನಂತೆ ನಟಿಸುವ ವೇಷಧಾರಿಗಳು, ನರ್ತನಮಾಡುವ ಸ್ತ್ರೀಯರು, ಜ್ಯೋತಿಸ್ಸನಿಂದ ಹತರಾದವರು (ಸುಳ್ಳುಹೇಳಿದವರು) ಇವರೆಲ್ಲರೂ ನರಕಗಾಮಿಗಳು.

೧೬. ತುಪ್ಪ, ಎಣ್ಣೆ, ಮೊದಲಾದ ಅನುಪಾನದ್ರವ್ಯಗಳು, ಮಧುರಸ, ಮಾಂಸರಸ, ಮದ್ಯಸಾರ, ಬೆಲ್ಲ, ಕಬ್ಬಿನಹಾಲು, ತರಕಾರಿ, ಮೊಸರು, ಗೆಣಸು, ಇವನ್ನು ಅಪಹರಿಸುವವರು.

ತೃಣಾನಿ ಕಾಷ್ಠಂ ಪುಷ್ಪಾಣಿ ಬೀಜೌಷಧಮನುತ್ತಮಾಂ ।
ಉಪಾನಚ್ಛತ್ರಶಕಟಮಾಸನಂ ಶಯನಂ ಮೃದಃ ॥ ೧೭ ॥

ತಾಮ್ರಂ ಸೀಸಂ ತ್ರಪುಂ ಕಾಂಸ್ಯಂ ಶಂಖಾದ್ಯಂ ಚ ಜಲೋದ್ಭವಂ ।
ಪಾರ್ಕ್ಷಂ ವಾ ವೈಣವಂ ವಾಪಿ ಗೃಹೋಪಕರಣಾನಿ ಚ ॥ ೧೮ ॥

ಔರ್ಣಕಾರ್ಪಾಸಕೌಶೇಯಭಂಗಪಟ್ಟೋದ್ಭವಾನಿ ಚ ।
ಸ್ಥೂಲಸೂಕ್ಷ್ಮಾಣಿ ಸಂಮೂಢಾ ಯೇ ಚ ಲೋಕಾ ಹರಂತಿ ವೈ ॥ ೧೯ ॥

ಏವಮಾದೀನಿ ಚಾನ್ಯಾನಿ ದ್ರವ್ಯಾಣಿ ವಿವಿಧಾನಿ ಚ ।
ನರಕೇಷು ಧ್ರುವಂ ಗಚ್ಛೇದ್ಯೋ ಹರೇತ ಪುಮಾನ್ ಬಲಾತ್ ॥ ೨೦ ॥

ಯದ್ವಾ ತದ್ವಾ ತು ಪಾರೋಕ್ಷ್ಯಮಪಿ ಸರ್ಷಪಮಾತ್ರಕಂ ।
ಅಪಹೃತ್ಯ ನರೋ ಯಾತಿ ನರಕಂ ನಾತ್ರ ಸಂಶಯಃ ॥ ೨೧ ॥

---

೧೭. ಮತ್ತು ಹಣ್ಣುಗಳು, ಹುಲ್ಲು, ಸೌದೆ, ಹೂವು, ಕಾಳುಕಡ್ಡಿ, ಉತ್ತಮವಾದ ಮೂಲಿಕೆಗಳು, ಪಾದರಕ್ಷೆ, ಛತ್ರಿ, ಭಂಡಿ, ಪೀಠ, ಹಾಸಿಗೆ, ಬಗೆಬಗೆಯ ಬಣ್ಣದ ಮಣ್ಣುಗಳು ಮುಂತಾದುವನ್ನು ಅಪಹರಿಸುವವರು.

೧೮. ತಾಮ್ರ, ಸೀಸ, ಸತು, ಕಂಚು, ಮುಂತಾದ ಲೋಹಪಾತ್ರೆಗಳನ್ನೂ ನೀರಿನಲ್ಲಿ ಉತ್ಪತ್ತಿಯಾಗಿರುವ ಶಂಖ, ಕವಡೆ, ಮುಂತಾದುವನ್ನೂ ಮರಗೆ ಮುಂತಾದ ಮರದ ಪದಾರ್ಥ, ಬಿದರಿನ ಅಂಡೆ ಮುಂತಾದ ಮನೆಗೆ ಉಪಯುಕ್ತವಾದ ಉಪಕರಣಗಳನ್ನೂ ಅಪಹರಿಸುವವರು.

೧೯. ಉಣ್ಣೆಯ ಬಟ್ಟೆ, ಹತ್ತಿಯ ಬಟ್ಟೆ, ರೇಷ್ಮೆಯ ಬಟ್ಟೆ, ಚಿತ್ರಿತವಾದ ಪಟ್ಟೆಯ ಬಟ್ಟೆಗಳು, ಮುಂತಾದ ಒರಟು ಬಟ್ಟೆಯನ್ನೂ ನವುರು ಬಟ್ಟೆಯನ್ನೂ ಅಪಹರಿಸುವ ಮೂಢರು.

೨೦. ಇದರಂತೆಯೇ ಬಗೆಬಗೆಯ ವಸ್ತುಗಳನ್ನು ಬಲಾತ್ಕಾರದಿಂದ ಅಪಹರಿಸುವ ಮಾನವರು ಇವರೆಲ್ಲ ಖಂಡಿತವಾಗಿ ನರಕಗಳನ್ನು ಹೊಂದುತ್ತಾರೆ.

೨೧. ಒಂದು ಸಾಸುವೆಯ ಕಾಳಿನಷ್ಟು ಪರಿಮಾಣದ ಸಣ್ಣವಸ್ತುವನ್ನೇ ಆಗಲಿ ಆ ಪದಾರ್ಥದ ಮಾಲೀಕರ ಪರೋಕ್ಷದಲ್ಲಿ ಅಪಹರಿಸಿದವನು ನರಕಕ್ಕೆ ಹೋಗುತ್ತಾನೆ ಇದರಲ್ಲಿ ಸಂಶಯವಿಲ್ಲ.

ವಿನಿವಮಾದ್ಯೈರ್ನರಃ ಪ್ರಾಪ್ತೈರುತ್ಕ್ರಾಂತೇಃ ಸಮನಂತರಃ ।
ಶರೀರಯಾತನಾರ್ಥಂ ತತ್ಪೂರ್ವಕಾಯಮವಾಪ್ನುಯಾತ್ ॥ ೨೨ ॥

ಯಮಲೋಕೇ ವ್ರಜೇದೇವಂ ಶರೀರೇಣ ಯಮಾಜ್ಞಯಾ ।
ಯಮದೂತೈರ್ಮಹಾಘೋರೈರ್ನೀಯಮಾನಸ್ಸುದುಃಖಿತಃ ॥ ೨೩ ॥

ದೇವಮಾನುಷಜೀವಾನಾಮಧರ್ಮನಿರತಾತ್ಮನಾಂ ।
ಧರ್ಮರಾಜಃ ಸ್ಮೃತಃ ಶಾಸ್ತಾ ಸುಘೋರೈರ್ವಿವಿಧೈರ್ವಧೈಃ ॥ ೨೪ ॥

ವಿನಯಾಭಾವಯುಕ್ತಾನಾಂ ಪ್ರಮಾದಾತ್ಸ್ಖಲಿತಾತ್ಮನಾಂ ।
ಪ್ರಾಯಶ್ಚಿತ್ತೈರ್ಬಹುವಿಧೈಃ ಪಾತಕಂ ನಶ್ಯತಾಮಿಯಾತ್ ॥ ೨೫ ॥

ಪಾರದಾರಿಕಚೋರಾಣಾಮನ್ಯಾಯವ್ಯವಹಾರಿಣಾಂ ।
ಶಾಸ್ತಾ ಕ್ಷಿತಿಪತಿಃ ಪ್ರೋಕ್ತಃ ಪ್ರಚ್ಛನ್ನಾನಾಂ ಚ ಧರ್ಮರಾಟ್ ॥ ೨೬ ॥

---

೨೨. ಮನುಷ್ಯನು ಉತ್ಕ್ರಾಂತಿ ಹೊಂದಿದಮೇಲೆ ತಾನುಮಾಡಿದ ಪಾಪಗಳ ಯಾತನಾನುಭವ ಮಾಡುವುದಕ್ಕಾಗಿ ಪೂರ್ವಶರೀರವನ್ನು ಹೊಂದುತ್ತಾನೆ.

೨೩. ಆಗ ಯಮನ ಆಜ್ಞೆಯಿಂದ ಮಹಾ ಭಯಂಕರರಾದ ಯಮದೂತರು ಕರೆದುಕೊಂಡು ಹೋಗುವಾಗ ಅತಿದುಃಖಕ್ಕೀಡಾಗಿ ಯಮಲೋಕಕ್ಕೆ ಹೋಗುತ್ತಾನೆ.

೨೪. ದೇವಶರೀರವನ್ನು ಪಡೆದ ಜೀವರು, ಮಾನುಷ ಶರೀರದ ಜೀವರು, ಇವರು ಪಾಪಕೃತ್ಯದಲ್ಲಿ ಆಸಕ್ತವಾದ ಮನಸ್ಸುಳ್ಳವರಾಗಿದ್ದರೆ, ಅಂಥವರಿಗೂ ಧರ್ಮರಾಜನು ಮಹಾ ಭಯಂಕರಗಳಾದ ಬಗೆಬಗೆಯ ಹಿಂಸೆಗಳನ್ನು ಕೊಟ್ಟು ಶಾಸನ ಮಾಡುವ ಶಿಕ್ಷಕನಾಗಿದ್ದಾನೆ.

೨೫. ಅವಿನಯ ಯುಕ್ತರಾಗುವುದು, ಅವಧಾನ ಕಡಿಮೆಯಾಗಿ, (ಎಚ್ಚರವಿಲ್ಲದೆ) ತಪ್ಪಿನಡೆಯುವುದು, ಇದರಿಂದುಂಟಾದ ಪಾಪವು ಬಗೆಬಗೆಯ ಪ್ರಾಯಶ್ಚಿತ್ತ ಮಾಡಿಕೊಳ್ಳೋಣದರಿಂದ ಪರಿಹಾರವಾಗುತ್ತವೆ.

೨೬–೨೭. ಪರಸ್ತ್ರೀಯಲ್ಲಿ ಆಸಕ್ತರಾದವರಿಗೂ, ಕಳ್ಳರಿಗೂ, ಅನ್ಯಾಯ ಮಾರ್ಗದಲ್ಲಿ ವ್ಯವಹರಿಸುವವರಿಗೂ ರಾಜನೇ ಶಿಕ್ಷೆಮಾಡತಕ್ಕವನು. ಲೋಕವು ಕಾಣ

ತಸ್ಮಾತ್ಕೃತಸ್ಯ ಪಾಪಸ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।
ನಾಭುಕ್ತಸ್ಯಾನ್ಯಥಾ ನಾಶಃ ಕಲ್ಪಕೋಟಿಶತೈರಪಿ ॥ ೨೭ ॥

ಯಃ ಕರೋತಿ ಶುಭಂ ಕರ್ಮ ಕಾರಯೇದನುಮೋದಯೇತ್ ।
ಕಾಯೇನ ಮನಸಾ ವಾಚಾ ನ ವಿಂದೇತೋತ್ತಮಂ ಸುಖಂ ॥ ೨೮ ॥

ಇತಿ ಸಂಕ್ಷೇಪತಃ ಪ್ರೋಕ್ತಾ ಪಾಪಭೇದಾತ್ತ್ರಿಧಾ ಗತಿಃ ।
ತಥಾನ್ಯಾಗತಯಶ್ಚಿತ್ರಾಃ ಕಥ್ಯಂತೇ ಕರ್ಮಭೇದತಃ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾ ಕಲ್ಪೇ ಸೌರಧರ್ಮೇ ಸಪ್ತಾಶ್ವತಿಲಕಾರುಣ ಸಂವಾದೇ ಏಕನವತ್ಯಧಿಕ ಶತತಮೋಽಧ್ಯಾಯಃ.

---

ದಂತೆ ಗುಟ್ಟಿನಲ್ಲಿ ಮಾಡಿದ ಪಾಪಕ್ಕೆ ಯಮನು ಶಿಕ್ಷೆ ಮಾಡುವನು. ಆದುದರಿಂದ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವಾಗಲೇಬೇಕು. ಕರ್ಮದಫಲವನ್ನು ಅನುಭವಿಸದೆ ಹೋದರೆ ನೂರಾರು ಕಲ್ಪಕೋಟಿಗಳಾದರೂ ಆದು ತಪ್ಪುವುದಿಲ್ಲ (ಬೆನ್ನು ಹತ್ತುವುದು).

೨೮. ಮನೋವಾಕ್ಕಾಯಗಳಿಂದ ಶುಭಕರ್ಮವನ್ನು ಮಾಡುವವನು. ಅಥವಾ ಇತರರಿಂದ ಹಾಗೆ ಮಾಡಿಸುವವನು; ಮತ್ತು ಇತರರು ಮಾಡಿದ ಶುಭಕರ್ಮ ವನ್ನು ಶ್ಲಾಘಿಸಿ ಅನುಮೋದಿಸುವವನು; ಇವರೆಲ್ಲ ಉತ್ತಮವಾದ ಸುಖವನ್ನು ಹೊಂದು ವರು.

೨೯. ಪಾಪದ ಪ್ರಭೇದಕ್ಕೆ ಅನುಸಾರವಾಗಿ ಮೂರು ಪ್ರಕಾರವಾದ ಗತಿ ಯನ್ನು ಸಂಕ್ಷೇಪವಾಗಿ ಹೇಳಿಯಾಯಿತು ಇನ್ನು ಕರ್ಮಭೇದಕ್ಕನುಸಾರವಾಗಿ ಸಂಭ ವಿಸುವ ವಿಚಿತ್ರಗಳಾದ ಅನೇಕ ಗತಿಗಳನ್ನು ಹೇಳುತ್ತೇನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮಿಾ ಕಲ್ಪದಲ್ಲಿ ಸೌರಧರ್ಮದಲ್ಲಿ ಸಪ್ತಾಶ್ವತಿಲಕ ಅರುಣರ ಸಂವಾದವೆಂಬ ನೂರತೊಂಭ ತ್ತೊಂದನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ಸಂತ್ರಾಸಜನನಂ ಘೋರಪಾಪಾನಾಂ ಪಾಪಕಾರಿಣಾಂ ।
ಗರ್ಭಸ್ಥೈರ್ಜಾಯಮಾನೈಶ್ಚ ಬಾಲೈಸ್ತರುಣಮಧ್ಯಮೈಃ ॥ ೧ ॥

ಸ್ತ್ರೀಪುಂನಪುಂಸಕೈರ್ವೃದ್ಧೈಃ ಗಂತವ್ಯಂ ಸರ್ವಜಂತುಷು ।
ಶುಭಾಶುಭಫಲಂ ತತ್ರ ಭೋಕ್ತವ್ಯಂ ದೇಹಿಭಿಸ್ತಥಾ ॥ ೨ ॥

ಚಿತ್ರಗುಪ್ತಾದಿಭಿಸ್ಸರ್ವೈರ್ಧರ್ಮಸ್ಥೈಸ್ಸತ್ಯವಾದಿಭಿಃ ।
ಪ್ರೋಕ್ತಂ ವೈ ಧರ್ಮರಾಜಸ್ಯ ನಿಕಟೇ ಯಚ್ಛುಭಾಶುಭಂ ॥
ಅವಶ್ಯಂ ಹಿ ಕೃತಂ ಕರ್ಮ ಭೋಕ್ತವ್ಯಂ ತದ್ವಿಚಾರಿತಂ ॥ ೩ ॥

---

## ನೂರತೊಂಭತ್ತೆರಡನೆಯ ಅಧ್ಯಾಯ

೧-೨. ಸಪ್ತಾಶ್ವತಿಲಕನು ಹೇಳುತ್ತಾನೆ—ಘೋರವಾದ ಪಾಪಾಚರಣೆ ಮಾಡಿ ಪಾಪಕಾರಿಗಳೆನಿಸಿದ ಸ್ತ್ರೀಪುನ್ನಪುಂಸಕ ದೇಹಿಗಳು ಭಯಜನಕವಾದ ಗರ್ಭದಲ್ಲಿರುವಾಗಲೂ, ಜನನವಾದಾಗಲೂ, ಬಾಲರಾಗಿರುವಾಗಲೂ, ಮಧ್ಯವಯಸ್ಸಿನವರಾಗಿರುವಾಗಲೂ, ವೃದ್ಧರಾಗಿರುವಾಗಲೂ ಕರ್ಮಾನುಸಾರ ಹೊಂದಬೇಕಾದ ಶುಭಾಶುಭಫಲಗಳನ್ನು ಅಲ್ಲಲ್ಲಿ ಅನುಭವಿಸಲೇಬೇಕು.

೩. ಧರ್ಮಮಾರ್ಗಾನುಯಾಯಿಗಳೂ, ಸತ್ಯವಾದಿಗಳೂ ಆದ ಚಿತ್ರಗುಪ್ತ ಮೊದಲಾದವರೆಲ್ಲರೂ ಧರ್ಮರಾಜ (ಯಮ)ನ ಸಮ್ಮುಖದಲ್ಲಿ, ದೇಹಿಯು ಆಚರಿಸಿದ ಶುಭಾಶುಭಕರ್ಮಗಳನ್ನು ತಿಳಿಸುವರು. ಅಲ್ಲ ವಿಚಾರಣೆ ನಡೆದಮೇಲೆ ಅದರ ಫಲವನ್ನು ಅವಶ್ಯವಾಗಿ ಅನುಭವಿಸಬೇಕು.

ಅತ್ರ ಯೇ ಶುಭಕರ್ಮಾಣಃ ಸೌಮ್ಯ ಚಿತ್ತಾ ದಯಾನ್ವಿತಾಃ ।
ತೇ ಸದಾ ಯಾಂತಿ ಸೌಮ್ಯೇನ ಪಥಾ ಯಮನಿಕೇತನಂ ॥ ೪ ॥

ಯಃ ಪ್ರದದ್ಯಾದ್ದ್ವಿಜೇಂದ್ರಾಣಾಮುಪಾನತ್ಕಾಷ್ಠಛತ್ರಕಂ ।
ಸ ಚ ಧರ್ಮೇಣ ಮಹತಾ ಸುಖಂ ಯಾತಿ ಯಮಾಲಯಂ ॥ ೫ ॥

ಸೋಽಪಾನತ್ಕೋ ನರೋ ಯಸ್ತು ದೇವಾಯತನಮಾವಿಶೇತ್ ।
ವಿಶೇಷತೋ ಗರ್ಭಗೃಹಂ ಸ ಸಂತ್ರಾಸಮುಪಾಶ್ನುತೇ ॥ ೬ ॥

ಸೋಽಪಾನತ್ಕಾನಿ ದಾನಾನಿ ತಥಾನ್ನಂ ತು ವಿಶೇಷತಃ ।
ಏವಂ ದಾನವಿಶೇಷೇಣ ಧರ್ಮರಾಜಪುರಂ ನರಃ ॥
ಯಸ್ಮಾದ್ಯಾತಿ ಸುಖೇನೈವ ತಸ್ಮಾದ್ಧರ್ಮಂ ಸಮಾಚರೇತ್ ॥ ೭ ॥

---

೪. ಈ ಲೋಕದಲ್ಲಿ ಶುಭಕರ್ಮವನ್ನು ಆಚರಿಸುವವರೂ, ಸೌಮ್ಯಚಿತ್ತರೂ ದಯಾವಂತರೂ ಆಗಿದ್ದವರು, ಸುಗಮವಾದ ಮಾರ್ಗದಿಂದ ಸುಖವಾಗಿ ಯಮಲೋಕಕ್ಕೆ ಹೋಗುವರು.

೫. ಬ್ರಾಹ್ಮಣಶ್ರೇಷ್ಠರಿಗೆ ಎಕ್ಕಡ, ಛತ್ರಿ, ಊರುಗೋಲು ಇವುಗಳನ್ನು ದಾನಮಾಡಿರುವವನು, ತಾನು ಮಾಡಿದ ಆ ಮಹಾಧರ್ಮವಶದಿಂದ ಸುಖವಾಗಿ ಯಮಲೋಕವನ್ನು ಸೇರುವನು.

೬. ಯಾವನು ಪಾದರಕ್ಷೆಯನ್ನು ಮೆಟ್ಟಿಕೊಂಡೇ ದೇವಾಲಯವನ್ನು ಪ್ರವೇಶಿಸುವನೋ, ಅದರಲ್ಲೂ ಗರ್ಭಗೃಹಕ್ಕೆ ಪ್ರವೇಶ ಮಾಡುವನೋ ಅವನು ಬಹಳ ಭಯಂಕರವಾದ ತೊಂದರೆಯನ್ನು ಅನುಭವಿಸಬೇಕಾಗುವುದು.

೭. ಪಾದರಕ್ಷಾದಾನದ ಜೊತೆಗೆ ಇತರ ದಾನಮಾಡುವುದು ಶ್ರೇಷ್ಠ. ವಿಶೇಷವಾಗಿ ಅನ್ನದಾನ, ಮುಂತಾದ ಬಗೆಬಗೆಯ ದಾನಗಳನ್ನು ಮಾಡುವುದರಿಂದ ಮನುಷ್ಯನು ದೇಹಾಂತ್ಯದಲ್ಲಿ ಯಮಧರ್ಮರಾಜನ ಪಟ್ಟಣಕ್ಕೆ ಸುಖವಾಗಿ ಹೋಗಿ ಸೇರುತ್ತಾನೆ. ಆದಕಾರಣ ದಾನಧರ್ಮಗಳನ್ನು ಎಲ್ಲರೂ ಮಾಡಬೇಕು.

ಯೇ ಪುನಃ ಕ್ರೂರಕರ್ಮಾಣೋ ನರಾಃ ಪಾಪರತಾಃ ಖಗ ।
ತೇ ಘೋರೇಣ ತಥಾ ಯಾಂತಿ ದಕ್ಷಿಣೇನ ಯಮಾಲಯಂ ॥೮॥

ಷಡಶೀತಿಸಹಸ್ರಾಣಿ ಯೋಜನಾನಾಮಶೀತಿ ಚ ।
ವೈವಸ್ವತಪುರಂ ಜ್ಞೇಯಂ ನಾನಾರೂಪಮಿತಿ ಸ್ಥಿತಂ ॥ ೯ ॥

ಸಮೀಪಸ್ಥಮಿವಾಭಾತಿ ನರಾಣಾಂ ಶುಭಚಾರಿಣಾಂ ।
ಪಾಪಾನಾಮತಿದೂರಸ್ಥಂ ತಥಾ ರೌದ್ರೇಣ ಗಚ್ಛತಾಂ ॥ ೧೦ ॥

ತೀಕ್ಷ್ಣಕಂಟಕಯುಕ್ತೇನ ಶರ್ಕರಾನಿಚಿತೇನ ಚ ।
ಕ್ಷುರಧಾರಾತಿನಿಸ್ತ್ರಿಂಶೈಃ ಪಾಷಾಣೈಶ್ಚ ಚಿತೇನ ಚ ॥ ೧೧ ॥

ಕ್ವಚಿದರ್ಕೇಣ ಮಹತಾ ದುರಂತೈಶ್ಚೈವ ಖಾತಕೈಃ ।
ಲೋಹಶಂಕುಭಿರಾಚ್ಛನ್ನಾಸ್ತಥಾ ಖಡ್ಗೈಃ ಸಮನ್ವಿತಾಃ ॥ ೧೨ ॥

---

೮. ಎಲೈ ಖಗನೇ! ಕ್ರೂರವಾದ ದುಷ್ಕರ್ಮಗಳನ್ನಾಚರಿಸಿದ ಮನುಷ್ಯರು ಭಯಂಕರವಾದ ದಕ್ಷಿಣದಿಕ್ಕಿನ ಬಾಗಿಲಿನಿಂದ ಯಮಲೋಕವನ್ನು ಪ್ರವೇಶಿಸುವರು.

೯ ಆ ಯಮಪುರಿಯು ಎಂಭತ್ತಾರುಸಾವಿರದ ಎಂಭತ್ತುಯೋಜನಗಳ ದೂರದಲ್ಲಿದೆ. ಅಲ್ಲದೆ ಆ ಮಾರ್ಗವು ನಾನಾಜನರಿಗೆ ನಾನಾಪ್ರಕಾರವಾಗಿ ಕಾಣುತ್ತದೆ ಎಂಬುದು ವಸ್ತುಸ್ಥಿತಿ.

೯. ಅಷ್ಟುದೂರವಿದ್ದರೂ ಶುಭಕರ್ಮ ಮಾಡಿದವರಿಗೆ ದಾರಿ ಸುಗಮವಾಗಿರುವುದರಿಂದ ಸಮೀಪದಲ್ಲಿ ಇರುವಂತೆ ತೋರುತ್ತದೆ. ಪಾಪಿಷ್ಠರು ತಮ್ಮ ಪಾಪಕರ್ಮ ವಶದಿಂದ ದುರ್ಗಮವಾದ ಮಾರ್ಗದಲ್ಲಿ ಹೋಗಬೇಕಾಗುವುದು. ಆಗ ಅವರಿಗೆ ಅತಿ ದೂರವಿರುವಂತೆ ಕಾಣುತ್ತದೆ.

೧೧. ಆ ದಾರಿಯು ಕೆಲವುದೂರ ಮೊನಚಾದ ಮುಳ್ಳು, ನೊರೆಜುಗಲ್ಲುಗಳಿಂದ ಕೂಡಿದುದೂ, ಕೆಲವುದೂರ ಕ್ಷೌರಕತ್ತಿಯ ಅಲಗನ್ನು ಮೀರಿಸುವಷ್ಟು ಚೂಪಾದ ಕಲ್ಲುಗಳಿಂದ ಕೂಡಿದುದಾಗಿಯೂ ಇರುವುದು.

೧೨. ಆ ಮಾರ್ಗವು ಕೆಲವುಕಡೆ ಅತಿ ಬಿಸಿಲಿನ ಹೊಡೆತದಿಂದ ಕೂಡಿ ದುಷ್ಪರಿಣಾಮಕಾರಿಗಳಾದ ಕೊರಕಲುಗಳುಳ್ಳದ್ದಾಗಿರುವುದು, ಕೆಲವುಕಡೆ ಮಾರ್ಗದಲ್ಲಿ ಲೋಹದ ಗೂಟಗಳನ್ನೂ ಖಡ್ಗಗಳನ್ನೂ ನಾಟಿರುವರು.

ತತಃ ಪತದ್ಭಿರ್ವಿಮಲ್ಯೈಃ ಪರ್ವತೈರ್ವೃಕ್ಷಸಂಕುಲೈಃ ।
ಪ್ರೇತಪ್ರಾಕಾರಯುಕ್ತೇನ ಯಾಂತಿ ಮಾರ್ಗೇಣ ದುಃಖಿತಾಃ ॥ ೧೩ ॥

ಕ್ವಚಿದ್ವಿಷಮಗರ್ತೌಘೈಃ ಕ್ವಚಿಲ್ಲೋಷ್ಟೈಃಸಪಿಚ್ಛಿಲೈಃ ।
ಸುತಪ್ತವಾಲುಕಾಭಿಶ್ಚ ತಥಾ ತೀಕ್ಷ್ಣೈಶ್ಚ ಶಂಕುಭಿಃ ॥ ೧೪ ॥

ಅನೇಕಶಾಖಾನಿಚಯವ್ಯಾಪ್ತೈರ್ವಂಶವನೈಃ ಕ್ವಚಿತ್ ।
ಕಷ್ಟೇಽಂಧತಮಸಾ ಮಾರ್ಗೇ ನಿರಾಲಂಬೇ ಸುದಾರುಣೆ ॥ ೧೫ ॥

ಅಥ ಶೃಂಗಾಟಕೈರ್ವ್ಯಾಪ್ತೈಃ ಕ್ವಚಿದ್ದಾವಾಗ್ನಿನಾ ಪುನಃ ।
ಕ್ವಚಿತ್ತಪ್ತಶಿಲಾಭಿಶ್ಚ ಕ್ವಚಿದ್ವ್ಯಾಪ್ತಂ ಹಿಮೇನ ತು ॥ ೧೬ ॥

ಕ್ವಚಿದ್ವಾಲುಕಯಾ ವ್ಯಾಪ್ತಮಾಕಂಠಾಂತಂ ಪ್ರವೇಶಯೇತ್ ।
ಕ್ವಚಿದುಷ್ಣಾಂಬುನಾ ವ್ಯಾಪ್ತಂ ಕ್ವಚಿಚ್ಚ ಕರಿಷಾಗ್ನಿನಾ ॥ ೧೭ ॥

---

೧೩. ಕೆಲವುಕಡೆ ವೃಕ್ಷರಾಶಿಸಹಿತವಾದ ಮಹಾಪರ್ವತಗಳು ಕುಸಿದುಬೀಳು ತ್ತಿರುತ್ತವೆ, ಕೆಲವುಕಡೆ ಪ್ರೇತಪ್ರಾಕಾರದಿಂದ ಕೂಡಿರುವುದು. ಇಂತಹ ಮಾರ್ಗದಲ್ಲಿ ಆ ವ್ಯಕ್ತಿಯು ದುಃಖಪಡುತ್ತಾ ಹೋಗುತ್ತಾನೆ.

೧೪. ಕೆಲವುಕಡೆ ಭಯಂಕರವಾದ ಹಳ್ಳಗಳ ಸಮೂಹದಿಂದಲೂ, ಕೆಲವುಕಡೆ ಕೆಸರಿನಿಂದ ಕೂಡಿದ ಮಣ್ಣುಕುಂಟೆಗಳಿಂದಲೂ, ಕೆಲವುಕಡೆ ಕಾಯ್ದಮರಳು ಗಳಿಂದಲೂ ಮೊನಚಾದ ಗೂಟಗಳಿಂದಲೂ ಕೂಡಿರುವುದು.

೧೫. ಮತ್ತು ಅನೇಕ ಕವಲುಗಳು ಹಾಯ್ದಿರುವ ಬಿದಿರುಮೆಳೆಯ ಅರಣ್ಯಗ ಳಿಂದ ಅಂಧಕಾರ ಕವಿದು ಯಾರ ಅವಲಂಬನವೂ ದೊರೆಯದೆ ಇರುವುದು. ಇಂತಹ ಬಹು ಕಠಿಣವಾದ ಮಾರ್ಗದಲ್ಲಿ ಹೋಗಬೇಕು.

೧೬ ಮಧ್ಯೆ ಮಧ್ಯೆ ಕಾಡುಗಿಚ್ಚು ಆವರಿಸಿರುವುದು, ಅಲ್ಲಲ್ಲಿ ನಾಲ್ಕುಕಡೆಗೂ ಕವಲೊಡೆಯುವ ಮಾರ್ಗಗಳಿರುವುವು, ಕೆಲವುಕಡೆ ಕಾದಕಲ್ಲು; ಮತ್ತೆ ಕೆಲವುಕಡೆ ಮಹತ್ತರವಾದ ಹಿಮಗಡ್ಡೆ ಇವುಗಳಿರುವುವು.

೧೭. ಇನ್ನು ಕೆಲವುಕಡೆ ಕುತ್ತಿಗೆಯವರೆಗೆ ಹೂತುಕೊಳ್ಳುವ ಉಸುಬು ಮರಳು, ಮತ್ತೆ ಕೆಲವುಕಡೆ ಕುದಿಯುವ ನೀರುಳ್ಳ ಮಡು ಇನ್ನು ಕೆಲವುದೂರ ಬೆರಣಿಯ ಕೆಂಡದ ವ್ಯಾಪನೆ ಈ ಪ್ರಕಾರವಾಗಿರುವುದು.

ಕ್ವಚಿತ್ಸಿಂಹೈಃ ಕ್ವಚಿದ್ವ್ಯಾಘ್ರೈರ್ದಂಶೈಃ ಕೀಟೈಶ್ಚ ದಾರುಣೈಃ ।
ಕ್ವಚಿನ್ಮಹಾಜಲೌಕಾಭಿಃ ಕ್ವಚಿದ್ವಾಜಗರೈಃ ಪುನಃ ॥ ೧೮ ॥

ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪೈರ್ವಿಷೋಲ್ಬಣೈಃ ।
ಮಹಾಗಜೇಂದ್ರಯೂಥೈಶ್ಚ ಬಲೋನ್ಮತ್ತೈಃ ಪ್ರಮಾಥಿಭಿಃ ॥ ೧೯ ॥

ಪಂಥಾನಮುಲ್ಲಿಖದ್ಭಿಶ್ಚ ತೀಕ್ಷ್ಣಶೃಂಗೈರ್ಮಹಾವೃಷೈಃ ।
ಮಹಾಶೃಂಗೈಶ್ಚ ಮಹಿಷೈರುಷ್ಟ್ರೈರ್ಮತ್ತೈರ್ಮದಾತುರೈಃ ॥ ೨೦ ॥

ಡಾಕಿನೀಭಿಶ್ಚ ರೌದ್ರಾಭಿರ್ವಿಕರಾಲೈಶ್ಚ ರಾಕ್ಷಸೈಃ ।
ವ್ಯಾಧಿಭಿಶ್ಚ ಮಹಾಘೋರೈಃ ಪೀಡ್ಯಮಾನಾ ವ್ರಜಂತಿ ಹಿ ॥ ೨೧ ॥

ಮಹಾಪಾಶವಿಮಿಶ್ರೇಣ ಮಹಾಚಂಡೇನ ವಾಯುನಾ ।
ಮಹಾಪಾಷಾಣವರ್ಷೇಣ ಹನ್ಯಮಾನಾ ನಿರಾಶ್ರಯಾಃ ॥ ೨೨ ॥

---

೧೮. ಕೆಲವುಕಡೆ ಹುಲಿ ಸಿಂಹಗಳು, ಭಯಂಕರವಾದ ಕಚ್ಚುವ ಹುಳುಗಳು, ಕೆಲವುಕಡೆ ಜಿಗಣೆಗಳು, ಕೆಲವುಕಡೆ ಹೆಬ್ಬಾವುಗಳು.

೧೯. ಇನ್ನು ಕೆಲವುಕಡೆ ಭಯಂಕರವಾದ ಕಾಡುನೊಣಗಳು, ಮತ್ತು ಕೆಲವೆಡೆ ಕ್ರೂರ ವಿಷಸರ್ಪಗಳು, ಮತ್ತು ಹೆಚ್ಚಾದ ಬಲವುಳ್ಳದ್ದಾಗಿ ಚೆನ್ನಾಗಿ ಭೇದಿಸಬಲ್ಲ ದೊಡ್ಡಆನೆಗಳ ಹಿಂಡುಗಳು.

೨೦. ದಾರಿಯಲ್ಲಿ ಕೆಲವುಕಡೆ ನೆಲವನ್ನು ಕಾಲಿನಿಂದ ಕೆರೆಯುತ್ತಿರುವ ಮೊನೆಯಾದ ಕೊಂಬುಗಳುಳ್ಳ ದೊಡ್ಡಗೂಳಿಗಳೂ, ದೊಡ್ಡಕೋಡುಗಳುಳ್ಳ ಮದಿಸಿದ ಕಾಡುಕೋಣಗಳೂ, ಮದವೇರಿ ತವಕಿಸುತ್ತಿರುವ ಒಂಟೆಗಳೂ ಸೇರಿಕೊಂಡು ಭಯಂಕರವಾಗಿರುವುವು. ಇವುಗಳಿಂದ ಕೂಡಿದ ದಾರಿಯಲ್ಲಿ ಹೋಗಬೇಕು.

೨೧. ಅಲ್ಲದೆ ಆ ದಾರಿಯಲ್ಲಿ ಕ್ರೂರಡಾಕಿನಿಯರು, ಭಯಂಕರ ರಾಕ್ಷಸರು, ಮಹಾಭಯಜನಕಗಳಾದ ವ್ಯಾಧಿಗಳು, ಇವುಗಳಿಂದ ಪೀಡಿಸಲ್ಪಡುತ್ತಾ ಹೋಗುತ್ತಾರೆ.

೨೨. ಮಹಾಪಾಶಸಮೇತವಾಗಿ ಬೀಸುವ ಮಹಾಕ್ರೂರವಾದ ವಾಯುವಿನಿಂದ ದೊಡ್ಡಕಲ್ಲುಗಳು ಮಳೆಯಂತೆ ಸುರಿಯಲಾಗಿ ನಿರಾಶ್ರಯರಾದುದರಿಂದ ಅದರ ಏಟುಗಳಿಗೆ ಗುರಿಯಾಗುತ್ತಾ ಸಾಗುವರು.

ಕ್ವಚಿದ್ವಿದ್ಯುತ್ಪ್ರಪಾತೇನ ದೀರ್ಯಮಾಣಾ ವ್ರಜಂತಿ ಹಿ ।
ಪತದ್ಭಿರ್ವಜ್ರಸಂಘಾತೈರುಲ್ಕಾಪಾತೈಶ್ಚ ದಾರುಣೈಃ ॥ ೨೩ ॥

ಪ್ರದೀಪ್ತಾಂಗಾರವರ್ಷೇಣ ದಹ್ಯಮಾನಾ ವ್ರಜಂತಿ ಹಿ ।
ಮಹಾಂಧಕಾರಶುಕ್ರೇಣ ಪೀಡ್ಯಮಾನಾ ವ್ರಜಂತಿ ಹಿ ॥ ೨೪ ॥

ಮಹಾಘೋರರವೈರ್ಘೋರೈರ್ವಿತ್ರಾಸ್ಯಂತೇ ಮುಹುರ್ಮುಹುಃ ।
ತೀಕ್ಷ್ಣಪಾಷಾಣಯುಕ್ತೇನ ಪೂರ್ಯಮಾಣಾಃ ಸಮಂತತಃ ॥ ೨೫ ॥

ಮಹಾಕ್ಷುರಾಂಬುಧಾರಾಭಿಃ ಸೀವ್ಯಮಾನಾ ವ್ರಜಂತಿ ಹಿ ।
ಮಹಾಮೇಘರವೈರ್ಘೋರೈರ್ವಿತ್ರಾಸ್ಯಂತೇ ಮುಹುರ್ಮುಹುಃ ॥ ೨೬ ॥

ಭೃಶಂ ಶೀತೇನ ತೀಕ್ಷ್ಣೇನ ರೂಕ್ಷೇಣ ಮರುತಾ ತಥಾ ।
ಇತ್ಥಂ ಮಾರ್ಗೇಣ ರೌದ್ರೇಣ ಪಾಥೇಯರಹಿತೇನ ಚ ॥ ೨೭ ॥

---

೨೩. ಕೆಲವು ಕಡೆಗಳಲ್ಲಿ ಹೊಡೆಯುತ್ತಿರುವ ಸಿಡಿಲುಗಳ ಸಮೂಹಗಳಿಂದಲೂ, ಭಯಂಕರಗಳಾದ ಉಲ್ಕಾಪಾತಗಳಿಂದಲೂ ಸೀಳಲ್ಪಡುತ್ತಾ ಮಾರ್ಗದಲ್ಲಿ ಸಾಗುತ್ತಾರೆ.

೨೪. ಉರಿಯುತ್ತಿರುವ ಕೆಂಡಗಳ ಮಳೆ ಸುರಿಯುವುದರಿಂದ ಕಿಚ್ಚಿನಿಂದ ಬೇಯುತ್ತಾ ಹೋಗುತ್ತಾರೆ. ಮತ್ತು ಕುರುಡನ್ನುಂಟುಮಾಡುವ ಮಹಾಂಧಕಾರದಲ್ಲಿ ತೊಂದರೆಪಡುತ್ತಾ ಹೋಗುತ್ತಾರೆ.

೨೫. ಅಲ್ಲದೆ ಭಯಂಕರವಾಗಿ ಕೇಳಿಸುವ ಮಹಾಧ್ವನಿಗಳಿಂದ ಪದೇ ಪದೇ ಹೆದರಿ ನಡುಗುತ್ತಾರೆ. ಎಲ್ಲ ಕಡೆಯಿಂದಲೂ ತೀಕ್ಷ್ಣವಾಗಿ ಬೀರುತ್ತಿರುವ ಕಲ್ಲುಗಳ ಏಟಿಗೆ ಗುರಿಯಾಗುತ್ತಾರೆ.

೨೬. ಹಾಗೆ ಹೋಗುವಾಗ ಜಲಧಾರಾಸದೃಶವಾಗಿ ಥಳಥಳಿಸುವ ತೀಕ್ಷ್ಣವಾದ ಅಲಗುಗಳು ಚುಚ್ಚುತ್ತಿರುತ್ತವೆ. ಭಯಂಕರವಾದ ಮಹಾಮೇಘಧ್ವನಿಗಳು ಪದೇ ಪದೇ ದಿಗಿಲುಪಡಿಸುತ್ತವೆ.

೨೭. ಬಹಳ ತಣ್ಣಗೋ ಅಥವಾ ಬಹು ಬಿಸಿಯಾಗಿ ಕ್ರೂರವಾಗಿಯೋ ಬೀಸುವ ಗಾಳಿಯಿಂದ ಪೀಡಿತರಾಗುತ್ತಾ ಹೀಗೆ ಭಯಂಕರವಾದ ಮಾರ್ಗದಲ್ಲಿ ಹೊಟ್ಟೆಗೆ ಅನ್ನವಿಲ್ಲದೆ ಹೋಗುತ್ತಾರೆ.

**ನಿರಾಲಂಬೇನ ದುರ್ಗೇಣ ನಿರ್ಜನೇನ ಸಮಂತತಃ ।**
**ಅವಿಶ್ರಾಮೇಣ ಮಹತಾ ವಿಗತಾಪಾಯದುರ್ಧರೈಃ ॥ ೨೮ ॥**

**ನೀಯಂತೇ ದೇಹಿನಸ್ಸರ್ವೇ ಯೇಮೂಢಾಃ ಪಾಪಕಾರಿಣಃ ।**
**ಇತಿ ಜ್ಞಾತ್ವಾ ನರಃ ಕುರ್ಯಾತ್ಪುಣ್ಯಂ ಪಾಪಂ ಚ ವರ್ಜಯೇತ್ ॥**
**ಪುಣ್ಯೇನ ಯಾತಿ ದೇವತ್ವಂ ಪಾಪೇನ ನರಕಂ ವ್ರಜೇತ್ ॥ ೨೯ ॥**

**ಯೈರ್ವಾರ್ಚನಾಗಪಿ ದೇವೇಶೋ ಮನಸಾ ಪೂಜಿತೋ ರವಿಃ ।**
**ತೇ ಕದಾಪಿ ನ ಪಶ್ಯಂತಿ ಯಮಸ್ಯ ವದನಂ ಖಗ ॥ ೩೦ ॥**

**ಕಿಂ ತು ಪಾಪೈರ್ಮಹಾಘೋರೈಃ ಕಿಂಚಿತ್ಕಾಲಂ ತವಾಜ್ಞಯಾ ।**
**ಭವಂತಿ ಪ್ರೇತರಾಜಾನಸ್ತತೋ ಯಾಂತಿ ರವೇಃ ಪುರಂ ॥ ೩೧ ॥**

**ಯೇಪುನಸ್ಸರ್ವಭಾವೇನ ಭಜಂತೇ ಭುವಿ ಭಾಸ್ಕರಂ ।**
**ನ ತೇ ಲಿಂಪಂತಿ ಪಾಪೇನ ಪದ್ಮಪತ್ರಮಿವಾಂಭಸಾ ॥ ೩೨ ॥**

---

೨೮. ಎಂಥ ಅಪಾಯವನ್ನೂ ಲೆಕ್ಕಿಸದೆ ದುರ್ಧರರಾದವರು ಅವಿಶ್ರಾಮವಾಗಿ ಸಾಗಬಹುದಾದ ಆ ಮಾರ್ಗದಲ್ಲಿ ಮೂಢರೂ, ಪಾಪಿಗಳೂ ಆದ ಪ್ರಾಣಿಗಳೆಲ್ಲರೂ ಸುತ್ತಲೂ ಎಲ್ಲಿಯೂ ಜನರ ಸುಳಿವನ್ನೇ ಕಾಣದೆ ನಿರಾಲಂಬರಾಗಿ ಮಹಾಕಷ್ಟದಿಂದ ಸಾಗುತ್ತಾರೆ.

೨೯. ಇದನ್ನು ತಿಳಿದುಕೊಂಡು ಮನುಷ್ಯನು ಪಾಪಾಚರಣೆಯನ್ನು ಬಿಟ್ಟು ಪುಣ್ಯಕರ್ಮವನ್ನೇ ಮಾಡಬೇಕು. ಪುಣ್ಯಕರ್ಮದಿಂದಲೇ ದೇವತ್ವವನ್ನು ಹೊಂದಬಹುದು. ಹಾಗೆಯೇ ಪಾಪಕರ್ಮದಿಂದ ನರಕವನ್ನು ಹೊಂದುತ್ತಾನೆ.

೩೦ ದೇವೇಶನಾದ ಸೂರ್ಯನನ್ನು ಮನಸ್ಸಿನಲ್ಲೇ ಸ್ವಲ್ಪಮಟ್ಟಿಗಾದರೂ ಪೂಜಿಸುವವರಿಗೆ ಯಾವಾಗಲೂ ಯಮದರ್ಶನವಾಗುವುದಿಲ್ಲ.

೩೧ ಆದರೆ ಮಹಾಘೋರಪಾಪಗಳ ಫಲವಾಗಿ ನಿನ್ನ ಆಜ್ಞೆಯಿಂದ ಕೆಲವು ಕಾಲ ಪ್ರೇತರಾಜರಾಗಿದ್ದು ಆ ಮೇಲೆ ಸೂರ್ಯಲೋಕಕ್ಕೆ ಹೋಗುತ್ತಾರೆ.

೩೨. ಭಾಸ್ಕರನನ್ನು ಸರ್ವತೋಮುಖವಾಗಿ ಸರ್ವಸ್ವರೂಪನೆಂದು ಭಜಿಸುವವರು ತಾವರೆಯೆಲೆಯು ನೀರಿನಲ್ಲಿದ್ದರೂ ನೀರಿನಿಂದ ಒದ್ದೆಯಾಗದೆ ಇರುವಂತೆ ಸಂಸಾರಯುಕ್ತರಾಗಿದ್ದರೂ ಪಾಪಸಂಪರ್ಕವುಳ್ಳವರಾಗುವುದಿಲ್ಲ.

ತಸ್ಮಾತ್ಪ್ರಕುರ್ಯಾದ್ಭಕ್ತಿಂ ವೈ ಭಾಸ್ಕರೇ ಸತತಂ ನರಃ ।
ಶ್ರದ್ಧಯಾ ಪೂಜಯೇದ್ಭಾನುಂ ಯ ಇಚ್ಛೇದ್ವಿಪುಲಂ ಧನಂ ॥ ೩೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ಸಪ್ತಾಶ್ವತಿಲಕಾನೂರು ಸಂವಾದೇ ದ್ವಿನವತ್ಯಧಿಕ ಶತತಮೋಽಧ್ಯಾಯಃ.



---

೩೩. ಆದುದರಿಂದ ಮನುಷ್ಯನು ಯಾವಾಗಲೂ ಸೂರ್ಯನಲ್ಲಿ ಭಕ್ತಿಯನ್ನು ಇಡಬೇಕು. ಹೆಚ್ಚಾದ ಧನವನ್ನು ಅಪೇಕ್ಷಿಸುವವನು ಶ್ರದ್ಧೆಯಿಂದ ಸೂರ್ಯನನ್ನು ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀ ಕಲ್ಪದಲ್ಲಿ ಸಪ್ತಾಶ್ವತಿಲಕ ಮತ್ತು ಅರುಣರ ಸಂವಾದವೆಂಬ ನೂರತೊಂಭತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರಿನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ಅಯನೇ ವಿಷುವೇ ವಾರೇ ಸಂಕ್ರಾಂತೌ ಗ್ರಹಣೇ ತಥಾ ।
ಪೂಜಯೇತ್ಸತತಂ ಭಾನುಂ ಸಪ್ತಮ್ಯಾಂ ತು ವಿಶೇಷತಃ ॥ ೧ ॥

ವೈನತೇಯ ನಿಬೋಧ ತ್ವಂ ವಿಧಾನಂ ಸಪ್ತಮೀವ್ರತಂ ।
ಏತದ್ಧಿ ಪರಮಂ ಗುಹ್ಯಂ ರವೇರಾರಾಧನಂ ಪರಂ ॥ ೨ ॥

ಸಿದ್ಧಾರ್ಥಕೈಸ್ತು ಪ್ರಥಮಾ ದ್ವಿತೀಯಾ ಚಾರ್ಕಸಂಪುಟೈಃ ।
ತೃತೀಯಾ ಮರಿಚೈಃ ಕಾರ್ಯಾ ಚತುರ್ಥೀ ತಿಲಸಪ್ತಮೀ ॥ ೩ ॥

---

## ನೂರತೊಂಭತ್ತಮೂರನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಹೇಳುತ್ತಾನೆ— ಉತ್ತರಾಯಣ, ದಕ್ಷಿಣಾಯನಗಳ ಸಂಕ್ರಮಣಗಳಲ್ಲೂ, ಭಾನುವಾರಗಳಲ್ಲೂ, ಸೂರ್ಯಗ್ರಹಣದ ದಿನಗಳಲ್ಲೂ, ಇತರ ಸಂಕ್ರಮಣದಲ್ಲೂ ಸೂರ್ಯನನ್ನು ಪೂಜಿಸಬೇಕು. ಯಾವಾಗಲೂ ವಿಷುವ ಪುಣ್ಯಕಾಲ ದಲ್ಲೂ, ಸಪ್ತಮಿಯಲ್ಲಿಯೂ ವಿಶೇಷವಾಗಿ ಪೂಜಿಸಬೇಕು.

೨. ಎಲೈ ಅರುಣನೇ! ಸಪ್ತಮೀವ್ರತದಲ್ಲಿ ನಡೆಸಬೇಕಾದ ವಿಧಾನವನ್ನು ಕೇಳು. ಇದು ಶ್ರೇಷ್ಠವಾದ ಮತ್ತು ರಹಸ್ಯವಾದ ಸೂರ್ಯಪೂಜೆಯೆನಿಸಿದೆ.

೩. ಪ್ರಥಮ ಸಪ್ತಮೀವ್ರತದಲ್ಲಿ ಬಿಳಿಯ ಸಾಸುವೆ, ಎರಡನೆಯ ಸಪ್ತಮಿ ಯಲ್ಲಿ ಎಕ್ಕದೆಲೆಗಳ ದೊನ್ನೆ, ಮೂರನೆಯದರಲ್ಲಿ ಮೆಣಸಿನಕಾಳು, ಇವುಗಳನ್ನುಪ ಯೋಗಿಸಿ ವ್ರತಮಾಡಬೇಕು. ನಾಲ್ಕನೆಯದರಲ್ಲಿ ತಿಲವನ್ನುಪಯೋಗಿಸಬೇಕು.

ಸಪ್ತಮೀ ಚೌದನೈರ್ವೀರ ಸಪ್ತಮೀ ಪರಿಕೀರ್ತಿತಾ ।
ಇತ್ಯೇತಾಃ ಸಪ್ತ ಸಪ್ತಮ್ಯಃ ಕರ್ತವ್ಯಾ ಭೂತಿಮಿಚ್ಛತಾ ॥ ೪ ॥

ತಥಾ ಚಾನುಕ್ರಮೇಣಾಸಾಂ ಲಕ್ಷಣಂ ಕಥಯಾಮ್ಯಹಂ ।
ಮಾಘೇ ವಾ ಮಾರ್ಗಶೀರ್ಷೇ ವಾ ಕಾರ್ಯಾ ಶುಕ್ಲಾ ತು ಸಪ್ತಮೀ ॥ ೫ ॥

ಆರ್ತಸ್ಯ ತು ನ ನಿಯಮಃ ಪಕ್ಷಮಾಸಕೃತೋ ಭವೇತ್ ।
ಅರ್ಧಪ್ರಹರಶೇಷೇ ತು ಕುರ್ಯಾದ್ವೈ ದಂತಧಾವನಂ ॥ ೬ ॥

ಪಂಚಮ್ಯಾಂ ತತ್ರ ಯೇ ವೃಕ್ಷಾಃ ಕಾಮಿತಾಸ್ತಾನ್ವದಾಮ್ಯಹಂ ।
ಮಧೂಕೇ ಪುತ್ರಲಾಭಃ ಸ್ಯಾದ್ದುಃಖಹಾ ಮಾರ್ಕವೋ ಭವೇತ್ ॥ ೭ ॥

---

೪. ಅಯ್ಯಾ ವೀರನೇ! ಹೀಗೆ ಬಗೆಬಗೆಯ ಆಹಾರ ಸೇವನೆಮಾಡುವ ಕಾರಣದಿಂದ ಸಪ್ತಮೀವ್ರತಕ್ಕೆ ವಿವಿಧವಾದ ಸಪ್ತಮೀ ಎಂದು ಹೆಸರಾಗಿದೆ. ಸಂಪತ್ಕಾಮನು ಈ ಏಳುಬಗೆಯ ಸಪ್ತಮೀವ್ರತಗಳನ್ನೂ ಆಚರಿಸಬೇಕು.

೫. ಈಗ ಕ್ರಮವಾಗಿ ಅವುಗಳ ಲಕ್ಷಣವನ್ನು ಹೇಳುತ್ತೇನೆ. ಮಾಘಮಾಸದ ಅಥವಾ ಮಾರ್ಗಶಿರಮಾಸದ ಶುಕ್ಲಸಪ್ತಮಿಯಲ್ಲಿ ವ್ರತವನ್ನು ಪ್ರಾರಂಭಿಸಬೇಕು. ರೋಗಗ್ರಸ್ತರಾದವರಿಗೆ ಶುಕ್ಲಪಕ್ಷವೇ ಆಗಬೇಕೆಂಬ ನಿಯಮವಾಗಲಿ ಅಥವಾ ಮಾಘ, ಮಾರ್ಗಶಿರಮಾಸಗಳೇ ಆಗಬೇಕೆಂಬ ನಿಯಮವಾಗಲಿ ಇಲ್ಲ. ರೋಗಪರಿಹಾರಕ್ಕಾಗಿ ಕೂಡಲೇ ಮಾಡಬಹುದು.

೬ ವ್ರತದ ಪೂರ್ವದಿನ ಬೆಳಕು ಹರಿಯುವುದಕ್ಕೆ ಅರ್ಧಯಾಮ ಉಳಿದಿರುವಾಗಲೇ ಎದ್ದು ಹಲ್ಲನ್ನು ಉಜ್ಜಬೇಕು. ದಂತಧಾವನಕ್ಕೆ ಅರ್ಹವಾದ ಕಾಷ್ಠಗಳನ್ನು ಪಂಚಮೀದಿನವೇ ಸಿದ್ಧಮಾಡಿಕೊಳ್ಳಬೇಕು.

೭. ಈ ಕಾಷ್ಠಕ್ಕೆ ಅರ್ಹವಾದ ವೃಕ್ಷಗಳನ್ನೂ ಆಯಾ ವೃಕ್ಷಗಳ ಕಾಷ್ಠದಿಂದ ದಂತಧಾವನಮಾಡಿದರೆ ಲಭಿಸುವ ಫಲಗಳನ್ನೂ ಹೇಳುತ್ತೇನೆ. ಹಿಪ್ಪೆಯ ಕಡ್ಡಿಯಿಂದ ಹಲ್ಲನ್ನುಜ್ಜಿದರೆ ಪುತ್ರಲಾಭವೂ, ಮಾರ್ಕವವೃಕ್ಷದ ಕಡ್ಡಿಯಿಂದ ಉಜ್ಜಿದರೆ ದುಃಖನಾಶನವೂ ಆಗುವುದು.

ಬದರ್ಯ್ಯಾ ಚ ಬೃಹತ್ಯಾ ಚ ಕ್ಷಿಪ್ರಂ ರೋಗಾತ್ಪ್ರಮುಚ್ಯತೇ ।
ಐಶ್ವರ್ಯಂ ಚ ಭವೇದ್ಬಿಲ್ವೈಃ ಖದಿರೇಣ ಚ ಸಂಚಯಃ ॥ ೮ ॥

ಶತ್ರುಕ್ಷಯಃ ಕದಂಬೇಷು ಅರ್ಥಲಾಭೋsತಿಮುಕ್ತಕೇ ।
ಗುರುತಾಂ ಯಾತಿ ಸರ್ವತ್ರ ಅಟರೂಷಕಸಂಭವೈಃ ॥ ೯ ॥

ಜ್ಞಾತಿಪ್ರಧಾನತಾಂ ಯಾತಿ ಅಶ್ವತ್ಥೇ ಯಚ್ಛತೇ ಯಶಃ ।
ಕರವೀರಾತ್ಪರಿಜ್ಞಾನಮಚಲಂ ಸ್ಯಾನ್ನ ಸಂಶಯಃ ॥ ೧೦ ॥

ಶ್ರಿಯಂ ಪ್ರಾಪ್ನೋತಿ ವಿಪುಲಾಂ ಶಿರೀಷಸ್ಯ ನಿವೇಶನೇ ।
ಪ್ರಿಯಂಗುಂ ಸೇವಮಾನಸ್ಯ ಸೌಭಾಗ್ಯಂ ಪರಮಂ ಭವೇತ್ ॥ ೧೧ ॥

---

೮. ಎಗಚೀ, ಬೃಹತೀ ಇವುಗಳ ಕಡ್ಡಿಯಿಂದ ಹಲ್ಲನ್ನುಜ್ಜಿದರೆ ರೋಗವಿದ್ದವರಿಗೆ ಅದು ಬೇಗ ವಾಸಿಯಾಗುವುದು. ಬಿಲ್ವವೃಕ್ಷದ ಕಡ್ಡಿಯಿಂದ ಉಜ್ಜಿದರೆ ಐಶ್ವರ್ಯ ಲಾಭವುಂಟಾಗುತ್ತದೆ.

೯. ಕಗ್ಗಲಿಯ ಕಡ್ಡಿಯನ್ನು ಹಲ್ಲನ್ನುಜ್ಜುವುದಕ್ಕೆ ಉಪಯೋಗಿಸುವುದರಿಂದ ವಸ್ತುಸಂಚಯವಾಗುವುದು. ಕದಂಬವೃಕ್ಷದ ಕಡ್ಡಿಯನ್ನು ಉಪಯೋಗಿಸಿದರೆ ಶತ್ರುಕ್ಷಯವಾಗುವುದು. ಅತಿಮುಕ್ತಿಕವೆಂಬ ವೃಕ್ಷದ ಕಡ್ಡಿಯಿಂದ ಉಜ್ಜಿದರೆ ಧನಲಾಭವು ಉಂಟಾಗುವುದು. ಆಡುಸೋಗೆಯ ಕಡ್ಡಿಯಿಂದ ಹಲ್ಲನ್ನುಜ್ಜಿದರೆ ಸರ್ವತ್ರ ಗೌರವವು ಲಭಿಸುವುದು.

೧೦. ಅಶ್ವತ್ಥವೃಕ್ಷದ ಕಡ್ಡಿಯಿಂದ ಹಲ್ಲುಜ್ಜಿದವನು ಜ್ಞಾತಿಗಳಲ್ಲಿ ಪ್ರಾಧಾನ್ಯವನ್ನು ಹೊಂದುವನು. ಅಲ್ಲದೆ ಯಶಃಪ್ರಾಪ್ತಿಯಾಗುವುದು. ಕಣಗಿಲೆ ಕಡ್ಡಿಯಿಂದ ಹಲ್ಲುಜ್ಜಿದರೆ ಅಚಂಚಲವೂ, ವಿಶೇಷ ಪ್ರಕಾರವೂ ಆದ ಜ್ಞಾನವುಂಟಾಗುವುದು.

೧೧. ಬಾಗೆಯ ಕಡ್ಡಿಯಿಂದ ಹಲ್ಲನ್ನುಜ್ಜಿದವನು ತುಂಬ ಸಂಪತ್ತನ್ನು ಹೊಂದುತ್ತಾನೆ. ಪ್ರಿಯಂಗು (ನವಣೆ) ಕಡ್ಡಿಯಿಂದ ಹಲ್ಲುಜ್ಜಿದರೆ ತುಂಬ ಶ್ರೇಷ್ಠವಾದ ಸೌಭಾಗ್ಯವುಂಟಾಗುವುದು.

ಅಭೀಪ್ಸಿತಾರ್ಥಸಿದ್ಧ್ಯರ್ಥಂ ಸುಖಾಸೀನೋಽಥ ವಾಗ್ಯತಃ ।
ಕಾಮಂ ಯಥೇಷ್ಟಂ ಹೃದಯೇ ಕೃತ್ವಾ ಸಮಭಿಮಂತ್ರ್ಯ ಚ ॥
ಮಂತ್ರೇಣಾನೇನ ಮತಿಮಾನ್ಕುರ್ಯಾದ್ವೈ ದಂತಧಾವನಂ ॥ ೧೨ ॥

ವರಂ ದತ್ವಾಭಿಜಾನಾಸಿ ಮೇ ಕಾಮಂ ಚ ವನಸ್ಪತೇ ।
ಸಿದ್ಧಿಂ ಪ್ರಯಚ್ಛ ಮೇ ನಿತ್ಯಂ ದಂತಕಾಷ್ಠ ನಮೋಽಸ್ತು ತೇ ॥ ೧೩ ॥

ತ್ರೀನ್ ವಾರಾನ್ ಪರಿಜಪ್ಯೇವಂ ಕುರ್ಯಾದ್ವೈ ದಂತಧಾವನಂ ।
ಪಶ್ಚಾತ್ಪ್ರಕ್ಷಾಲ್ಯ ಕಾಷ್ಠಂ ತು ಶುಚೌ ದೇಶೇ ವಿನಿಕ್ಷಿಪೇತ್ ॥ ೧೪ ॥

ಊರ್ಧ್ವಂ ನಿಪತಿತೇ ಸಿದ್ಧಿಸ್ತಥಾ ಚಾಭಿಮುಖೇ ಸ್ಥಿತೇ ।
ಅತೋಽನ್ಯಥಾ ತು ಪತಿತೇ ಆನೀಯ ಪುನರುತ್ಸೃಜೇತ್ ॥ ೧೫ ॥

---

೧೨. ಬುದ್ಧಿಶಾಲಿಯಾದ ಮನುಷ್ಯನು ಹಲ್ಲುಜ್ಜುವುದಕ್ಕೆ ಮುಂಚೆ, ಇಷ್ಟಾರ್ಥ ಸಿದ್ಧಿಯಾಗುವುದಕ್ಕಾಗಿ ಸುಖವಾಗಿ ಕುಳಿತು, ಮೌನದಿಂದ ಮನಸ್ಸಿನಲ್ಲಿ ತನಗೆ ಬೇಕಾದ ಅಭೀಷ್ಟವನ್ನು ಕುರಿತುಕೊಂಡು, ಆ ಕಾಷ್ಠವನ್ನು ಹಿಡಿದು ಮುಂದೆ ಹೇಳುವ ಮಂತ್ರದಿಂದ ಅಭಿಮಂತ್ರಣಮಾಡಿ ಬಳಿಕ ಹಲ್ಲನ್ನು ಉಜ್ಜಬೇಕು.

೧೩. "ಎಲೈ ವನಸ್ಪತಿಯೇ! ನನ್ನ ಇಷ್ಟಾರ್ಥವನ್ನು ನೀನು ತಿಳಿದಿದ್ದೀ. ವರವನ್ನು ಕರುಣಿಸಿ ನನಗೆ ನಿತ್ಯವೂ ಇಷ್ಟಾರ್ಥಸಿದ್ಧಿಯನ್ನುಂಟುಮಾಡು. ಎಲೈ ದಂತಕಾಷ್ಠವೇ! ನಿನಗೆ ನಮಸ್ಕಾರ."

೧೪. ಈ ಮಂತ್ರದಿಂದ ಮೂರುಸಾರಿ ಅಭಿಮಂತ್ರಿಸಿ ಅನಂತರ ಹಲ್ಲುಜ್ಜಬೇಕು. ಆ ಮೇಲೆ ಆ ಕಡ್ಡಿಯನ್ನು ತೊಳೆದು ಪರಿಶುದ್ಧವಾದ ಪ್ರದೇಶದಲ್ಲಿ ಹಾಕಬೇಕು.

೧೫. ಆ ಕಾಷ್ಠವು ಮೇಲ್ಮುಖವಾಗಿ ಬಿದ್ದರೂ, ಅಭಿಮುಖವಾಗಿ ಬಿದ್ದರೂ ಕಾರ್ಯಸಿದ್ಧಿಯು. ಹಾಗಿಲ್ಲದೆ ಬೇರೆ ರೀತಿಯಾಗಿ ಬಿದ್ದರೆ ಆ ಕಾಷ್ಠವನ್ನು ತಂದು ಪುನಃ ಮೇಲಕ್ಕೆ ಎಸೆಯಬೇಕು.

ಪರಾಙ್ಮುಖಂ ಯದಿ ಭವೇತ್ತ್ರೀಣಿ ವಾರಾಣಿ ದಂತಧಾವನಂ ।
ಅಸಿದ್ಧಂ ತು ವಿಜಾನೀಯಾನ್ನಗ್ರಾಹ್ಯಾ ಸಾ ತು ಸಪ್ತಮೀ ॥ ೧೬ ॥

ಬ್ರಹ್ಮಚಾರೀ ತು ತಾಂ ರಾತ್ರಿಂ ಸ್ವಸ್ಯಾನ್ಮಂಗಲಸೇವಯಾ ।
ಬಿಭ್ರದ್ವಾಸೋಽನುಪಹತಂ ಶುಚಿರಾಚಾರಸಂಯುತಃ ॥ ೧೭ ॥

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಪ್ರಾತರುತ್ಥಾಯ ವೈ ಖಗ ।
ಪ್ರಕ್ಷಾಲಯೇನ್ಮುಖಂ ಧೀಮಾನಶ್ನೀಯಾದ್ದಂತಧಾವನಂ ॥ ೧೮ ॥

ಉಪವಿಶ್ಯ ಶುಚಿರ್ಭೂತ್ವಾ ಪ್ರಣಮ್ಯ ಶಿರಸಾ ರವಿಂ ।
ಜಪಂ ಯಥೇಷ್ಟಂ ಕೃತ್ವಾ ತು ಜುಹುಯಾಚ್ಚ ಹುತಾಶನೇ ॥ ೧೯ ॥

ತತೋಽಪರಾಹ್ಣಸಮಯೇ ಸ್ನಾತ್ವಾ ಮೃದ್ಗೋಮಯಾಂಬುಭಿಃ ।
ವಿಧಿವನ್ನಿಯಮಂ ಕೃತ್ವಾ ಮೌನೀ ಶುಕ್ಲಾಂಬರಃ ಶುಚಿಃ ॥ ೨೦ ॥

---

೧೬. ಮೂರುಸಲ ಎಸೆದಾಗಲೂ ಹಿಮ್ಮೊಗವಾಗಿ ಬಿದ್ದರೆ ದಂತಧಾವನವು ಅಸಿದ್ಧವೆಂದು ತಿಳಿದು ಆ ಸಪ್ತಮಿಯನ್ನು ಗ್ರಹಿಸಬಾರದು.

೧೭. ಮಂಗಳಸೇವೆಯನ್ನು ಮಾಡಿಕೊಂಡು ಆ ರಾತ್ರಿ ಬ್ರಹ್ಮಚರ್ಯನಿಯಮದಿಂದ ಅಹತವಾದ ವಸ್ತ್ರವನ್ನು ಧರಿಸಿಕೊಂಡು ಶುಚಿಯಾಗಿ ಆಚಾರಯುಕ್ತನಾಗಿ ಮಲಗಬೇಕು.

೧೮. ಅಯ್ಯಾ ಖಗನೇ ! ಬುದ್ಧಿವಂತನಾದವನು ಆ ರಾತ್ರಿ ಕಳೆದಮೇಲೆ ಮಾರನೆಯದಿನ ಬೆಳಗ್ಗೆ ಎದ್ದು ಮುಖವನ್ನು ತೊಳೆದುಕೊಳ್ಳುವಾಗ ದಂತಧಾವನ ಮಾಡಿಕೊಳ್ಳಬೇಕು.

೧೯. ಸ್ನಾನಾದಿಗಳಾದ ಮೇಲೆ ಶುಚಿಯಾಗಿ ಕುಳಿತುಕೊಂಡು ಯಥೇಷ್ಟವಾಗಿ ಜಪಮಾಡಿದ ಬಳಿಕ ದೇವದೇವನಾದ ದಿವಾಕರನನ್ನು ಸಾಷ್ಟಾಂಗವಾಗಿ ನಮಸ್ಕರಿಸಿದ ಮೇಲೆ ಅಗ್ನಿಯಲ್ಲಿ ಹೋಮಮಾಡಬೇಕು.

೨೦. ಅನಂತರ ಮಧ್ಯಾಹ್ನ ಸಮಯದಲ್ಲಿ ಮಣ್ಣು ಗೋಮಯ, ಜಲ ಇವುಗಳಿಂದ ಮತ್ತೆ ಸ್ನಾನಮಾಡಿ ವಿಧಿಯಂತೆ ವಾಙ್ನಿಯಮವುಳ್ಳವನೂ, ಪರಿಶುದ್ಧನೂ ಆಗಿ ಶುಭ್ರವಸ್ತ್ರವನ್ನು ಧರಿಸಬೇಕು.

ಪೂಜಯಿತ್ವಾ ವಿಧಿಂ ಭಕ್ತ್ಯಾ ದೇವದೇವಂ ದಿವಾಕರಂ ।
ಸ್ವಪ್ಯಾದ್ದೇವಸ್ಯ ಪುರತೋ ಗಾಯತ್ರೀಜಪತತ್ಪರಃ ॥ ೨೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ
ದಂತಕಾಷ್ಠವಿಧಿವರ್ಣನಂ ನಾಮ ತ್ರಿನವತ್ಯಧಿಕ
ಶತತಮೋಽಧ್ಯಾಯಃ.



---

೨೧. ಬಳಿಕ ವಿಧಿಸದೃಶನೂ, ದೇವದೇವನೂ ಆದ ಸೂರ್ಯನನ್ನು ಭಕ್ತಿಯಿಂದ ಪೂಜಿಸಿ ಗಾಯಿತ್ರೀಜಪ ಮಾಡುತ್ತಾ ಪೂಜಿಸಿದ ದೇವರ ಮುಂದೆ ಮಲಗಿಕೊಳ್ಳಬೇಕು. (ನಿದ್ರಿಸಬೇಕು.)

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ದಂತಕಾಷ್ಠ ವಿಧಿವರ್ಣನವೆಂಬ ನೂರತೊಂಭತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರ್ನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ಅತಃಪರಂ ಪ್ರವಕ್ಷ್ಯಾಮಿ ಯೈರ್ಯೈರ್ಯತ್ಫಲಮುಚ್ಯತೇ ।
ಸ್ವಪ್ನೇ ದೃಷ್ಟೇ ತು ಸಪ್ತಮ್ಯಾಂ ಪುರುಷೋ ನಿಯತವ್ರತಃ ॥ ೧ ॥

ಸಮಾಪ್ಯ ವಿಧಿವತ್ಸರ್ವಾಂ ಜಪಹೋಮಾದಿಕಾಂ ಕ್ರಿಯಾಂ ।
ಭೂಮೌ ಶಯ್ಯಾಂ ಸಮಾಸ್ಥಾಯ ದೇವದೇವಂ ವಿಚಿಂತಯೇತ್ ॥ ೨ ॥

ಹಂತ ಸುಪ್ತೋ ಯದಿ ನರಃ ಪಶ್ಯೇತ್ಸ್ವಪ್ನೇ ದಿವಾಕರಂ ।
ಶಕ್ರಧ್ವಜಂ ವಾ ಚಂದ್ರಂ ವಾ ತಸ್ಯ ಸರ್ವಾಸ್ಸಮೃದ್ಧಯಃ ॥ ೩ ॥

---

## ನೂರತೊಂಭತ್ತನಾಲ್ಕನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಅರುಣನಿಗೆ ಹೇಳುತ್ತಾನೆ—ಸಪ್ತಮಿಯದಿನ ಈ ವ್ರತವನ್ನು ನಿಯಮದಿಂದ ಆಚರಿಸಿ ಮಲಗಿದವರು ಸ್ವಪ್ನವನ್ನು ಕಾಣಬಹುದು. ಆ ಸ್ವಪ್ನದಲ್ಲಿ ಯಾವಯಾವುದನ್ನು ಕಂಡುದರಿಂದ ಏನೇನು ಫಲವೆಂಬುದನ್ನು ಹೇಳುವೆನು.

೨. ವಿಧಿಪ್ರಕಾರವಾಗಿ ಜಪ, ಹೋಮ ಮೊದಲಾದ ಎಲ್ಲ ಕಾರ್ಯಗಳನ್ನೂ ಮುಗಿಸಿ ನೆಲವನ್ನೇ ಹಾಸಿಗೆಯನ್ನಾಗಿ ಮಾಡಿಕೊಂಡು ಮಲಗಿ ದೇವದೇವನನ್ನು ಧ್ಯಾನಿಸಬೇಕು.

೩. ಹೀಗೆ ಮಲಗಿಕೊಂಡಮೇಲೆ ಕನಸಿನಲ್ಲಿ ಸೂರ್ಯಧ್ವಜವನ್ನೋ, ಇಂದ್ರಧ್ವಜವನ್ನೋ, ಚಂದ್ರನನ್ನೋ ನೋಡಿದರೆ ಸರ್ವವೂ ಸಮೃದ್ಧಿಯಾಗಿ ಲಭಿಸುವುದು.

ಭೃಂಗಾರಚಮರಾದರ್ಶಕನಕಾಭರಣಾನಿ ಚ ।
ರುಧಿರಸ್ಯ ಸ್ರುತಿಃ ಕೇಶಪಾತ ಐಶ್ವರ್ಯಕಾರಕಃ ॥
ಸ್ವಪ್ನೇ ವೃಕ್ಷಾಧಿರೋಹೇ ತು ಕ್ಷಿಪ್ರಮೈಶ್ವರ್ಯಮಾಹವೇ ॥ ೪ ॥

ದೋಹನಂ ಮಹಿಷೀಸಿಂಹೀಗೋಧೇನೂನಾಂ ಕರೇ ಸ್ವಕೇ ।
ಬಂಧಶ್ಚಾಸಾಂ ರಾಜ್ಯಲಾಭೋ ನಾಭೇಃ ಸ್ಪರ್ಶೇ ತು ದುರ್ಮತಿಃ ॥ ೫ ॥

ಅವಿಂ ಹತ್ವಾ ಸ್ವಯಂ ಖಾದೇತ್ಸಿಂಹಮಂಬುಜಮೇವ ಚ ।
ಸ್ವಾಂಗಮಸ್ಥಿಹುತಾಶಂ ಚ ಸುರಾಪಾನಂ ಖಗಾಧಿಪ ॥ ೬ ॥

ಹೈಮೇ ವಾ ರಾಜತೇ ವಾಪಿ ಯೋ ಭುಂಕ್ತೇ ಪಾಯಸಂ ನರಃ ।
ಪಾತ್ರೇ ತು ಪದ್ಮಪತ್ರೇ ವಾ ತಸ್ಯೈಶ್ವರ್ಯಂ ಸಮಂ ಭವೇತ್ ॥ ೭ ॥

---

೪. ಗಿಂಡಿ, ಚಾಮರ, ಕನ್ನಡಿ, ಚಿನ್ನದಒಡವೆಗಳು, ರಕ್ತಸ್ರವಿಸುವುದು, ಕೂದಲುಉದುರುವುದು ಇಂಥದ್ದನ್ನು ಕಂಡರೆ ಐಶ್ವರ್ಯವುಂಟಾಗುವುದು. ಸ್ವಪ್ನದಲ್ಲಿ ತಾನು ಮರಹತ್ತಿದಂತೆ ಕಂಡರೆ ಶೀಘ್ರವಾಗಿ ಯುದ್ಧದಲ್ಲಿ ಐಶ್ವರ್ಯಲಾಭವುಂಟಾಗುವುದು.

೫. ಎಮ್ಮೆಗಳನ್ನೂ, ಹೆಣ್ಣುಸಿಂಹಗಳನ್ನೂ, ಹಸುಗಳನ್ನೂ ತನ್ನ ಕೈಯಿಂದ ಹಾಲುಕರೆಯುವಂತೆ ಕಂಡರೂ, ಇವುಗಳನ್ನು ಕಟ್ಟಿದುದನ್ನು ಕಂಡರೂ, ರಾಜ್ಯಲಾಭವಾಗುವುದು. ಹೊಕ್ಕಳನ್ನು ಸ್ಪರ್ಶಿಸಿದರೆ ದುರ್ಬುದ್ಧಿಯುಂಟಾಗುವುದು.

೬. ಎಲೈ ಪಕ್ಷಿಗಳೊಡೆಯನೇ! ಕೇಳು; ಕುರಿಯನ್ನು ಕೊಂದು ತಾನೇ ತಿನ್ನುವ ಹಾಗೆ ಕಂಡರೂ, ಸಿಂಹವನ್ನೂ ಮಾಸನ್ನೂ ಕೊಂದು ತಿನ್ನುವ ಹಾಗೆ ಕಂಡರೂ. ತನ್ನ ಅವಯುವ, ಮೂಳೆ ಇವನ್ನೂ, ಅಗ್ನಿಯನ್ನೂ, ಕಂಡರೂ ಮದ್ಯಪಾನ ಮಾಡುತ್ತಿರುವುದನ್ನು ಕಂಡರೂ,

೭. ಚಿನ್ನದತಟ್ಟೆಯಲ್ಲೋ, ಬೆಳ್ಳಿಯತಟ್ಟೆಯಲ್ಲೋ, ಅಥವಾ ಮತ್ತಾವ ಪಾತ್ರೆಯಲ್ಲೋ, ತಾವರೆಯೆಲೆಯಲ್ಲೋ ಮನುಷ್ಯನು ಪಾಯಸವನ್ನು ಭುಂಜಿಸಿದಂತೆ ಕಂಡರೂ ಅವನಿಗೆ ಅದಕ್ಕೆ ಸದೃಶವಾದ ಐಶ್ವರ್ಯವು ಲಭಿಸುವುದು.

ದ್ಯೂತೇ ಚ ವಾಥವಾ ಯುದ್ಧೇ ವಿಜಯೋ ಹಿ ಸುಖಾವಹಃ ।
ಗಾತ್ರಸ್ಯ ಸ್ವಸ್ಯ ಜ್ವಲನಂ ಶಿರೋಬಂಧಶ್ಚ ಭೂತಯೇ ॥ ೮ ॥

ಮಾಲ್ಯಾಂಬರಾಣಾಂ ಶುಕ್ಲಾನಾಂ ಹಯಾನಾಂ ಪಶುಪಕ್ಷಿಣಾಂ ।
ಸದಾ ಲಾಭಂ ಪ್ರಶಂಸಂತಿ ವಿಷ್ಟಾನಾಂ ಚಾನುಲೇಪನಂ ॥ ೯ ॥

ಹಯಯಾನೇ ಭವೇತ್ಕ್ಷಿಪ್ರಂ ರಥಯಾನೇ ಪ್ರಜಾಗಮಃ ।
ನಾನಾಶಿರೋಬಾಹುತಾ ಚ ಗೃಹಸ್ಥಾಂ ಕುರುತೇ ಶ್ರಿಯಂ ॥ ೧೦ ॥

ಅಗಮ್ಯಾಗಮನಂ ಧನ್ಯಂ ವೇದಾಧ್ಯಯನಮುತ್ತಮಂ ।
ದೇವದ್ವಿಜಶ್ರೇಷ್ಠವೀರಗುರುವೃದ್ಧತಪಸ್ವಿನಃ ॥ ೧೧ ॥

ಯದ್ವದಂತಿ ನರಂ ಸ್ವಪ್ನೇ ಸತ್ಯಮೇವೇತಿ ತದ್ವಿದುಃ ।
ಪ್ರಶಸ್ತಂ ದರ್ಶನಂ ಚೈಷಾಮಾಶೀರ್ವಾದಂ ಖಗಾಧಿಪ ॥ ೧೨ ॥

---

೮. ಜೂಜು, ಅಥವಾ ಯುದ್ಧ ಇವುಗಳಲ್ಲಿ ಜಯವುಂಟಾದಂತೆ ಕಂಡರೆ ಸುಖ ವುಂಟಾಗುವುದು. ತನ್ನ ಶರೀರವು ಹತ್ತಿ ಉರಿಯುತ್ತಿರುವ ಹಾಗೂ, ತಲೆಯು ಸಿಕ್ಕಿ ಕೊಂಡ ಹಾಗೂ ಕಂಡರೆ ಸಂಪತ್ತು ಪ್ರಾಪ್ತವಾಗುವುದು.

೯. ಬಿಳಿಯ ಹೂಮಾಲೆಗಳು, ಬಿಳಿಯಬಟ್ಟೆಗಳು, ಬಿಳಿಯಕುದುರೆಗಳು, ಬಿಳಿಯಬಣ್ಣದ ಪಶುಪಕ್ಷಿಗಳು, ಇವನ್ನು ಕಂಡರೂ, ಮತ್ತು ಅಮೇಧ್ಯವನ್ನು ಬಳಿದುಕೊಂಡಹಾಗೆ ಕಂಡರೂ ಸದಾಲಾಭವೆಂದು ಹೇಳುತ್ತಾರೆ.

೧೦. ತಾನು ಕುದುರೆಯಮೇಲೆ ಸವಾರಿಮಾಡಿಕೊಂಡೋ, ಅಥವಾ ರಥವನ್ನೇರಿಕೊಂಡೋ ಹೋದಹಾಗೆ ಕಂಡರೆ ತನ್ನ ಮಕ್ಕಳು ಬೇಗನೆ ಬರುವರು. ತನಗೆ ಅನೇಕ ತಲೆಗಳೂ, ತೋಳುಗಳೂ ಇದ್ದಂತೆ ಕಂಡರೆ ಲಕ್ಷ್ಮಿಯನ್ನು ಮನೆಯಲ್ಲಿ ನಿಲ್ಲಿಸುವುದು.

೧೧. ಅಗಮ್ಯಾಗಮನ ಮಾಡಿದಂತೆ ಕಂಡರೆ ಶ್ರೇಷ್ಠವು, ವೇದಾಧ್ಯಯನ ಮಾಡಿದುದನ್ನು ಕಂಡರೆ ಉತ್ತಮ, ದೇವತೆಗಳೂ, ಬ್ರಾಹ್ಮಣಶ್ರೇಷ್ಠರೂ, ಶೂರರೂ, ಗುರುಗಳೂ, ವೃದ್ಧರೂ, ತಪಸ್ವಿಗಳೂ ಸ್ವಪ್ನದಲ್ಲಿ ಕಾಣಿಸಿಕೊಂಡಂತೆ ಆಗಿ

೧೨. ಅವರು ತನಗೆ ಏನು ಹೇಳುತ್ತಾರೋ, ಅದೆಲ್ಲವೂ ಸತ್ಯವೇ ಆಗುವು ದೆಂದು ತಿಳಿದವರು ಹೇಳುತ್ತಾರೆ. ಹಾಗೆ ಅವರ ದರ್ಶನವಾಗುವುದೂ, ಆಶೀರ್ವಾದ ಲಭಿಸುವುದೂ ಪ್ರಶಸ್ತವೆಂದು ಹೇಳುವರು.

ರಾಜ್ಯಂ ಸ್ಯಾತ್ಸ್ವಶಿರಶ್ಛೇದೇ ಧನಂ ಬಹುವಧೇ ಭವೇತ್ ।
ರುದಿತೇ ಭಕ್ಷ್ಯಸಂಪ್ರಾಪ್ತೀ ರಾಜ್ಯಂ ನಿಗಡಬಂಧನೇ ॥ ೧೩ ॥

ಪರ್ವತಂ ತುರಗಂ ಸಿಂಹಂ ವೃಷಭಂ ಗಜಮೇವ ಚ ।
ಮಹದೈಶ್ವರ್ಯಮಾಪ್ನೋತಿ ಯೋ ವಿಕ್ರಮ್ಯಾಧಿರೋಹತಿ ॥ ೧೪ ॥

ಆಗೃಹ್ಣಾನೋ ಗ್ರಹಾಂಸ್ತಾರಾ ಮರೀಚಿಂ ಪರಿವರ್ತಯನ್ ।
ಉನ್ಮೂಲಯತಿ ಪರ್ವತಾಂಶ್ಚ ರಾಜಾ ಭವತಿ ಭೂತಲೇ ॥ ೧೫ ॥

ದೇಹಾನ್ನಿಷ್ಕ್ರಾಂತಿರಂತ್ರಾಣಾಂ ಸರ್ವೇಷಾಂ ಚ ಖಗಾಧಿಪ ।
ಪಾನಂ ಸಮುದ್ರಸರಿತಾಮೈಶ್ವರ್ಯಸುಖಕಾರಕಂ ॥ ೧೬ ॥

ಜಲಂ ಚಾಂಬುನಿಧಿಂ ವಾಪಿ ತೀರ್ಥಪಾರಂ ಪ್ರಯಾತಿ ಯಃ ।
ತಸ್ಯಾಪತ್ಯಂ ಭವೇದ್ವೀರ ಅಚಲಂ ಚ ಖಗಾಧಿಪ ॥ ೧೭ ॥

---

೧೩. ತನ್ನ ತಲೆಕತ್ತರಿಸಿದಂತೆ ಕಂಡರೆ ದೊರೆತನ ಪ್ರಾಪ್ತಿಯಾಗುವುದು, ತಾನು ಅನೇಕ ಜನರನ್ನು ಕೊಂದಂತೆ ಕಂಡರೆ ಧನಪ್ರಾಪ್ತಿಯು. ಅಳುತ್ತಿರುವಂತೆ ಕಂಡರೆ ಭಕ್ಷ್ಯಪ್ರಾಪ್ತಿಯೂ, ಸಂಕೋಲೆಯ ಬಂಧನಕ್ಕೆ ಸಿಕ್ಕಿದಂತೆ ಕಂಡರೆ ರಾಜ್ಯ ಲಾಭವೂ ಆಗುವುದು.

೧೪. ತಾನು ಪರ್ವತವನ್ನೂ, ಕುದುರೆಯನ್ನೂ, ಸಿಂಹವನ್ನೂ, ಎತ್ತನ್ನೂ, ಆನೆಯನ್ನೂ, ಪರಾಕ್ರಮದಿಂದ ಸವಾರಿ ಮಾಡಿದಂತೆ ಕಂಡರೆ ಮಹದೈಶ್ವರ್ಯವನ್ನು ಹೊಂದುವನು. ಇದಕ್ಕೆ ಸಂಶಯವಿಲ್ಲ.

೧೫. ಗ್ರಹಗಳನ್ನೂ, ನಕ್ಷತ್ರಗಳನ್ನೂ, ಸೂರ್ಯನನ್ನೂ ಆಗ್ರಹಯುಕ್ತನಾಗಿ ಪ್ರತಿಭಟಿಸಿ ಹಿಂದಕ್ಕೆ ತಿರುಗಿಸಿದಂತೆ ಕಂಡರೂ, ಪರ್ವತಗಳನ್ನು ಬುಡಸಹಿತ ಕೀಳುವಂತೆ ಕಂಡರೂ ಭೂಮಿಯಲ್ಲಿ ರಾಜನಾಗುತ್ತಾನೆ.

೧೬. ಶರೀರದಿಂದ ಕರುಳುಗಳೆಲ್ಲಾ ಈಚೆಗೆ ಹೊರಟಿದ್ದಂತೆ ಕಂಡರೆ ಐಶ್ವರ್ಯ ಪ್ರಾಪ್ತಿಯೂ, ಸಮುದ್ರ, ನದಿಗಳು ಇವುಗಳನ್ನು ಪಾನಮಾಡಿದಂತೆ ಕಂಡರೆ ಸುಖ ಪ್ರಾಪ್ತಿಯೂ ಆಗುವುದು.

೧೭. ತಾನು ನೀರನ್ನು ಪ್ರವೇಶಿಸಿದಂತೆಯೂ, ಸಮುದ್ರವನ್ನು ಹೊಕ್ಕಂತೆಯೂ, ಜಲಾಶಯದ ಆಚೆಯ ದಡಕ್ಕೆ ಹೋದಂತೆಯೂ ಕಂಡರೆ ಅವನಿಗೆ ಸ್ಥಿರಾಯುಷ್ಯದ ಶಿಶುವು ಜನಿಸುವುದು.

**ಭವತ್ಯರ್ಥಾಗಮಃ ಶೀಘ್ರಂ ಕೃಮಿರ್ವಾ ಯದಿ ಭಕ್ಷಯೇತ್ ।**
**ಅಂಗಾನಾಂ ಚ ಸುರೂಪಾಣಾಂ ಲಾಭೋ ದರ್ಶನಮೇವ ಚ ॥**
**ಸಂಯೋಗಶ್ಚೈವ ಮಾಂಗಲ್ಯೈರಾರೋಗ್ಯಂ ಧನಮೇವ ಚ ॥ ೧೮ ॥**

**ಐಶ್ವರ್ಯಂ ಧನಲಾಭಶ್ಚ ಯಸ್ಮಿನ್ಸ್ವಪ್ನ ಉದಾಹೃತಃ ।**
**ಸಪ್ತ ಸ್ಯಾನ್ನಾತ್ರ ಸಂದೇಹಶ್ಚತುರ್ಭಿಃ ಶ್ರುತ ಉತ್ತಮಃ ॥ ೧೯ ॥**

**ಪಂಚಭಿಃ ಪುತ್ರಬಾಹುಲ್ಯಂ ಷಡ್ಭಿರಾಯುಃ ಸುತಾನ್ಧನಂ ।**
**ಸಪ್ತಭಿರ್ವಿವಿಧಾನ್ ಕಾಮಾನಷ್ಟಭಿರ್ವಿವಿಧಂ ಯಶಃ ॥ ೨೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೂರ್ಯಾರುಣ ಸಂವಾದೇ ಸ್ವಪ್ನವರ್ಣನಂ ನಾಮ ಚತುರ್ನವತ್ಯಧಿಕ ಶತತಮೋಽಧ್ಯಾಯಃ.**

---

೧೮. ಸ್ವಪ್ನದಲ್ಲಿ ಕ್ರಿಮಿಯನ್ನು ಭಕ್ಷಣಮಾಡಿದಂತೆ ಕಂಡರೆ ಶೀಘ್ರವಾಗಿ ಧನ ಪ್ರಾಪ್ತಿಯಾಗುವುದು. ತನಗೆ ಸುರೂಪಗಳಾದ ಅಂಗಗಳ ಲಾಭವೂ, ಇತರರ ಸುರೂಪಾಂಗಗಳ ದರ್ಶನವೂ, ಮಾಂಗಲ್ಯವಸ್ತುಗಳ ಸಂಯೋಗವೂ ಆದಂತೆ ಕಂಡರೆ ಆರೋಗ್ಯವೂ, ಧನಪ್ರಾಪ್ತಿಯೂ, ಐಶ್ವರ್ಯವೂ, ರಾಜ್ಯಲಾಭವೂ ಆಗುವುದು.

೧೯. ಸ್ವಪ್ನದ ವಿಷಯವನ್ನು ನಾಲ್ಕುಜನರ ಕಿವಿಗೆ ಹಾಕಿದರೆ ಉತ್ತಮ, ಐದುಜನಕ್ಕೆ ಹೇಳಿದರೆ ಅನೇಕ ಪುತ್ರರಾಗುವರು.

೨೦. ಆರುಜನರಿಗೆ ಹೇಳಿದರೆ ಧನಲಾಭ, ಏಳುಮಂದಿಗೆ ತಿಳಿಸಿದರೆ ನಾನಾ ವಿಧವಾದ ಇಷ್ಟಗಳು ಸಿದ್ಧಿಸುವುವು. ಎಂಟುಮಂದಿಗೆ ತಿಳಿಸಿದರೆ ಬಹುಪ್ರಕಾರವಾದ ಯಶಸ್ಸು ಲಭಿಸುವುದು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೂರ್ಯಾರುಣ ಸಂವಾದದಲ್ಲಿ ಸ್ವಪ್ನವರ್ಣನವೆಂಬ ನೂರತೊಂಭತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚನವತ್ಯಧಿಕಶತತಮೋಽಧ್ಯಾಯಃ

॥ ಅನೂರುರುವಾಚ ॥

ಭಗವನ್ ಶ್ರೋತುಮಿಚ್ಛಾಮಿ ಸಪ್ತಮೀನಾಂ ಪರಂ ವಿಧಿಂ ।
ಸರ್ವಸಾಮನುರೂಪಾಣಾಂ ಕಥಯಸ್ವ ಮಹಾಮುನೇ ॥ ೧ ॥

॥ ಸಪ್ತಾಶ್ವತಿಲಕ ಉವಾಚ ॥

ಶೃಣು ವೀರ ಖಗಶ್ರೇಷ್ಠ ಸಪ್ತಮೀನಾಂ ಪರಂ ವಿಧಿಂ ।
ಕೀರ್ತಯಿಷ್ಯಾಮಿ ತೇ ಸರ್ವಂ ಯಥಾವತ್ಪರಿಪೃಚ್ಛತೇ ॥ ೨ ॥

ತುಲ್ಯಂ ಕಿಲ ಖಗಶ್ರೇಷ್ಠ ಯಥಾಖ್ಯಾತಂ ವಿವಸ್ವತಾ ।
ಶುಕ್ಲಪಕ್ಷೇ ರವಿದಿನೇ ಪ್ರವೃತ್ತೇ ಚೋತ್ತರಾಯಣೇ ॥ ೩ ॥

---

## ನೂರತೊಂಭತ್ತೈದನೆಯ ಅಧ್ಯಾಯ

೧. ಆಗ ಅರುಣನು "ಸ್ವಾಮೀ ಮಹಾಮುನಿವರ್ಯ! ಆಚರಿಸಲು ತಕ್ಕುದೂ, ಶ್ರೇಷ್ಠವೂ ಆದ ಎಲ್ಲ ಸಪ್ತಮಿಗಳ ವಿಧಿಯನ್ನೂ ಕೇಳಿ ತಿಳಿದುಕೊಳ್ಳಲು ಆಶೆಯಾಗಿದೆ ಕೃಪೆಮಾಡಿ ಹೇಳು" ಎಂದನು.

೨. ಆಗ ಸಪ್ತಾಶ್ವತಿಲಕನು ಹೇಳುತ್ತಾನೆ—ವೀರನಾದ ಖಗಶ್ರೇಷ್ಠನೇ! ಸಪ್ತಮಿಗಳ ಶ್ರೇಷ್ಠವಾದ ವಿಧಿಯನ್ನು ಕೇಳು. ಕುತೂಹಲದಿಂದ ಪ್ರಶ್ನೆಮಾಡುತ್ತಿರುವ ನಿನಗೆ ಎಲ್ಲವನ್ನೂ ಹೇಳುತ್ತೇನೆ.

೩. ಅಯ್ಯಾ ಖಗಶ್ರೇಷ್ಠನೇ! ಹಿಂದೆ ನನಗೆ ವಿವಸ್ವಂತನೇ ಇದನ್ನು ಹೇಳಿದ್ದನು. ಆದುದರಿಂದ ಈಗ ನಾನು ಹೇಳುವುದು, ಸೂರ್ಯನು ಹೇಳಿದುದಕ್ಕೆ ಸಮವೇ

ಪುತ್ರದಾರಧನಕ್ಷೇತ್ರೇ ಗೃಹ್ಣೀಯಾತ್ಸಪ್ತಮೀವ್ರತಂ ।
ಋಷಿಭಿರ್ಜ್ಞಾನಸಂಪನ್ನೈಃ ಸರ್ವಕಾಮಫಲಪ್ರದೈಃ ॥ ೪ ॥

ಸಪ್ತಮ್ಯಃ ಸಪ್ತ ಆಖ್ಯಾತಾಸ್ತಾಸಾಂ ನಾಮಾನಿ ಮೇ ಶೃಣು ।
ಅರ್ಕಸಂಪುಟಕೈರೇಕಾ ದ್ವಿತೀಯಾ ಮರಿಚೈಸ್ತಥಾ ॥ ೫ ॥

ತೃತೀಯಾ ನಿಂಬಪತ್ರೈಶ್ಚ ಚತುರ್ಥೀ ಫಲಸಪ್ತಮೀ ।
ಸಪ್ತಮೀ ಕಾಮಿಕಾ ನಾಮ್ನಾ ವಿಧಿಮಾಸಾಂ ನಿಬೋಧ ಮೇ ॥ ೬ ॥

ಪಂಚಮ್ಯಾಮೇಕಭಕ್ತಂ ತು ಕುರ್ಯಾನ್ನಿಯತಮಾನಸಃ ।
ಅಲ್ಪಾಹಾರಂ ಚ ಕುರ್ವೀತ ಮೈಥುನಂ ದೂರತಸ್ತ್ಯಜೇತ್ ॥ ೭ ॥

---

ಅಲ್ಲವೇ? ಉತ್ತರಾಯಣದಲ್ಲಿ ಶುಕ್ಲಪಕ್ಷದ ಸಪ್ತಮೀ ದಿವಸವು, ಭಾನುವಾರವಾದರೆ ಬಹುಶ್ರೇಷ್ಠ.

೪. ಭಕ್ತನಾದವನು ತನ್ನ ಹೆಂಡತಿ ಮಕ್ಕಳು ಧನ ಮುಂತಾದುವು ಇರುವ ಸ್ವಕ್ಷೇತ್ರದಲ್ಲಿ (ಸ್ವಗ್ರಾಮದಲ್ಲಿ) ಅಂಥ ಸಪ್ತಮಿಯಲ್ಲಿ ಈ ವ್ರತವನ್ನು ಗ್ರಹಣಮಾಡಬೇಕು. ಜ್ಞಾನಸಂಪನ್ನರೂ, ಇಷ್ಟಕಾಮ್ಯಫಲಗಳನ್ನು ಕೊಡತಕ್ಕವರೂ ಆದವರು ಮಹರ್ಷಿಗಳು.

೫. ಅಂಥ ಋಷಿಗಳು ಏಳುವಿಧವಾದ ಸಪ್ತಮಿಗಳು ಆಚರಣೀಯಗಳೆಂದು ಹೇಳಿದ್ದಾರೆ. ಅವುಗಳ ಹೆಸರನ್ನು ಹೇಳುತ್ತೇನೆ ಕೇಳು. ಪ್ರಥಮ ಸಪ್ತಮಿಯನ್ನು ಎಕ್ಕದೆಲೆಗಳ ದೊನ್ನೆಯ ಉಪಕರಣಗಳಿಂದಲೂ, ಎರಡನೆಯದನ್ನು ಮೆಣಸಿನಕಾಳುಗಳಿಂದಲೂ, ಮೂರನೆಯದನ್ನು ಬೇವಿನಎಲೆಗಳ ಸೇವನೆಯಿಂದಲೂ ಆಚರಿಸಬೇಕು.

೬. ನಾಲ್ಕನೆಯದು ಫಲಸಪ್ತಮಿ. ಇದೇರೀತಿ ಏಳನೆಯದು ಕಾಮಿಕಾಸಪ್ತಮಿ ಈ ಸಪ್ತಮಿಗಳ ವಿಧಿಯನ್ನು ಹೇಳುತ್ತೇನೆ ತಿಳಿದುಕೊ.

೭. ಪಂಚಮಿಯಲ್ಲಿ ಮನಸ್ಸನ್ನು ನಿಗ್ರಹಿಸಿಕೊಂಡು ಒಪ್ಪೊತ್ತು ಭೋಜನ ಮಾಡಬೇಕು. ಆ ಒಪ್ಪೊತ್ತಿನಲ್ಲೂ ಸ್ವಲ್ಪವೇ ಆಹಾರವನ್ನು ಸೇವಿಸಿ ಆ ದಿನ ಮೈಥುನವನ್ನು ವರ್ಜ್ಯಮಾಡಬೇಕು.

ವರ್ಜಯೇನ್ಮಧುಮಾಂಸಂ ಚ ಅತ್ಯಮ್ಲಂ ಚ ಖಗಾಧಿಪ ।
ಪ್ರಭಾತೇ ಚೈವ ಷಷ್ಠ್ಯಾಂ ತು ಏಕೈಕಪರ್ಣ ಸಂಪುಟೇ ॥ ೮ ॥

ಘೃತಶಾಲ್ಯೋದನಂ ಕೃತ್ವಾ ಭಕ್ಷಯೇತ್ತು ವಿಧಾನತಃ ।
ಅನ್ಯದನ್ನಮಭುಂಜಾನಃ ಸಪ್ತಮ್ಯಾಂ ಭೋಜನಂ ಭವೇತ್ ॥ ೯ ॥

ಏಕೈಕವೃದ್ಧ್ಯಾಭಿಯುಕ್ತೈರ್ಯೋ ವಸೇತ್ತು ಖಗೇಶ್ವರ ।
ಅನ್ಯತ್ರ ಮರಿಚಂ ಭಕ್ಷೇನ್ನಿಂಬಪತ್ರಾಣ್ಯತಃ ಪರಂ ॥ ೧೦ ॥

ಏವಂ ಲಬ್ಧಫಲಾನೀಹ ಪಕ್ಷಯೋರುಭಯೋರಪಿ ।
ಅನ್ನಾದ್ಯೈ ರಹಿತೋ ಯತ್ನಾದನೋದನ ಇತಿ ಸ್ಮೃತಃ ॥ ೧೧ ॥

---

೮. ಮದ್ಯಮಾಂಸಗಳು, ಅತಿಹುಳಿಯಾದ ಪದಾರ್ಥ ಇವನ್ನು ಬಿಡಬೇಕು. ಷಷ್ಠಿಯ ದಿನ ಪ್ರಾತಃಕಾಲದಲ್ಲಿ ವಿಧಿಪ್ರಕಾರ ಒಂದೊಂದು ಬಿಡಿ ಎಕ್ಕದೆಲೆಯ ದೊನ್ನೆಯಲ್ಲಿ ಘೃತಮಿಶ್ರವಾದ ಶಾಲ್ಯನ್ನವನ್ನು ಇಟ್ಟುಕೊಂಡು ಭಕ್ಷಿಸಬೇಕು.

೯. ಷಷ್ಠಿಯದಿನ ಇದು ಹೊರತು ಬೇರೆ ಅನ್ನವನ್ನು ತಿನ್ನಬಾರದು.ಅಯ್ಯಾ ಖಗೇಶ್ವರನೇ ! ಸಪ್ತಮಿಯದಿನ ಭೋಜನವನ್ನು ಮಾಡಬೇಕು.

೧೦. ಮುಂದಿನ ಷಷ್ಠಿಗಳಲ್ಲಿ ಒಂದೊಂದರಂತೆ ಹೆಚ್ಚಿಸಿಕೊಂಡ ಕಬಳವನ್ನು ಒಂದೊಂದರಂತೆ ಹೆಚ್ಚಿಸಿದ ಪರ್ಣಸಂಪುಟಗಳಲ್ಲಿಟ್ಟುಕೊಂಡು ಸೇವಿಸಿದರೆ ಪಾಪ ವಿಮುಕ್ತನಾಗುತ್ತಾನೆ. ಮರಿಚ ಸಪ್ತಮಿಯೆಂಬ ಇನ್ನೊಂದು ಸಪ್ತಮೀವ್ರತದಲ್ಲಿ ಒಂದು ಎರಡು ಮೂರು ಈ ಪ್ರಕಾರ ಮೆಣಸಿನಕಾಳುಗಳನ್ನು ಕ್ರಮವಾಗಿ ಹೆಚ್ಚಿಸಿಕೊಂಡು ಸೇವಿಸಬೇಕು ಅದರ ಹಾಗೆಯೇ ನಿಂಬಸಪ್ತಮಿಯಲ್ಲಿ ಬೇವಿನಎಲೆಗಳನ್ನು ಒಂದೊಂದರಂತೆ ಹೆಚ್ಚಿಸಿಕೊಂಡು ತಿನ್ನಬೇಕು.

೧೧. ಹಿಂದೆ ಹೇಳಿದಂತೆ ಎರಡು ಪಕ್ಷಗಳ ಸಪ್ತಮಿಯಲ್ಲೂ ಹೀಗೆ ಅನ್ನ ಮೊದಲಾದ ಆಹಾರಗಳಾವನ್ನೂ ಸೇವಿಸದೆ ಕೇವಲ ಹಣ್ಣುಗಳನ್ನು ಸೇವಿಸುತ್ತಾ ಇರುವವನನ್ನು ಆಹಾರ ತೆಗೆದುಕೊಳ್ಳದೆ ಇದ್ದಂತೆಯೇ ಭಾವಿಸಬೇಕು.

ಆಚರೇದ್ವಿಧಿವದ್ಭಕ್ತ್ಯಾ ಪೂಜಯಿತ್ವಾ ವಿಭಾವಸುಂ ।
ಅಹೋರಾತ್ರಂ ವಾಯುಭಕ್ಷಃ ಕುರ್ಯಾದ್ವಿಜಯಸಪ್ತಮೀಂ ॥ ೧೨ ॥

ಏಕೈಕಂ ಸಪ್ತಸಪ್ತಮೀರತ್ರ್ಯೈವ ವಿಧಿವಚ್ಚರೇತ್ ।
ಪ್ರಾಲೇಖ್ಯ ತಾಸಾಂ ನಾಮಾನಿ ಪತ್ರಕೇಷು ಪೃಥಕ್ ಪೃಥಕ್ ॥ ೧೩ ॥

ತಾನಿ ಸರ್ವಾಣಿ ನಾಮಾನಿ ವಿಲೇಖ್ಯ ಸುಸಮಾಹಿತಃ ।
ಶ್ವೇತಚಂದನದಿಗ್ಧಾಂಗೇ ಮಾಲ್ಯದಾಮೋಪಶೋಭಿತೇ ॥ ೧೪ ॥

ಸಪ್ತಧಾನ್ಯಹಿರಣ್ಯಾಢ್ಯೇ ಶಶಿಕುಂದೇಂದುಸನ್ನಿಭೇ ।
ಅಶ್ವತ್ಥಾಶೋಕಪತ್ರಾಢ್ಯೇ ದಧ್ಯೋದನಸಮನ್ವಿತೇ ॥ ೧೫ ॥

ತದರ್ಥಂ ಪೂಜಯೇದ್ಭಕ್ತ್ಯಾ ತೈಸ್ತೈರ್ದೃಷ್ಟೈರ್ನ ಸಂಶಯಃ ।
ದೃಷ್ಟ್ವಾ ತು ಶೋಭನಂ ಸ್ವಪ್ನಂ ನ ಭೂಯಃ ಶಯನಂ ಸ್ವಪೇತ್ ॥ ೧೬ ॥

---

೧೨. ವಿಜಯಸಪ್ತಮೀ ವ್ರತವನ್ನು ವಿಧಿಪ್ರಕಾರ ಭಕ್ತಿಯಿಂದ ಮಾಡಬೇಕಾದವನು ಸೂರ್ಯನನ್ನು ಪೂಜಿಸಿ ಹಗಲು, ರಾತ್ರಿ ಕೂಡ ಇನ್ನಾವ ಆಹಾರವನ್ನೂ ಸೇವಿಸದೆ ವಾಯುವೇ ಆಹಾರವುಳ್ಳವನಾಗಿ ವ್ರತಮಾಡಬೇಕು.

೧೩-೧೪. ಈ ಏಳುಸಪ್ತಮಿಗಳಲ್ಲಿ ಪ್ರತಿಯೊಂದನ್ನೂ ವಿಧಿವತ್ತಾಗಿಯೇ ಮಾಡಬೇಕು. ಈ ಸಪ್ತಮಿಗಳ ಹೆಸರುಗಳನ್ನು ಪ್ರತ್ಯೇಕಪತ್ರಗಳಲ್ಲಿ ಬೇರೆಬೇರೆಯಾಗಿ ಬರೆಯಬೇಕು. ಏಕಾಗ್ರಚಿತ್ತವುಳ್ಳವನಾಗಿ ಎಲ್ಲಾ ಹೆಸರುಗಳನ್ನೂ ಬರೆದು ಶ್ರೀಗಂಧವನ್ನು ಪತ್ರಗಳಿಗೆ ಲೇಪಿಸಿ ಹೊಸ ಕುಂಭದಲ್ಲಿ ಹಾಕಬೇಕು.

೧೫. ಅದನ್ನು ಹೂವಿನ ಮಾಲಿಕೆಗಳಿಂದ ಅಲಂಕರಿಸಬೇಕು. ಅದರೊಳಗೆ ಏಳುಬಗೆಯ ಧಾನ್ಯಗಳು, ಸುವರ್ಣ ಇವುಗಳನ್ನು ಹಾಕಬೇಕು. ಅದಕ್ಕೆ ಸುಣ್ಣ ಬಳಿದು ಚಂದ್ರ, ಮಲ್ಲಿಯ ಹೂ ಇವುಗಳ ಬಣ್ಣದಂತೆ ಸ್ವಚ್ಛವಾಗಿ ಮಾಡಿ, ಅರಳಿ, ಅಶೋಕ ಈ ಎಲೆಗಳನ್ನು ಆ ಕಲಶಕ್ಕೆ ಅಲಂಕರಿಸಿ ಬಳಿಕ ದಧ್ಯನ್ನನಿವೇದನ ಮಾಡಿ ಪೂಜಿಸಬೇಕು.

೧೬. ಪೂಜೆಗೋಸ್ಕರ ಭಕ್ತಿಯಿಂದ ಹುಡುಕಿನೋಡಿ ಕಣ್ಣಿಗೆಬಿದ್ದ ಶ್ರೇಷ್ಠ ವಸ್ತುಗಳನ್ನು ಸಂಪಾದಿಸಿ ಪೂಜಿಸಬೇಕು. ಆ ದಿನ ಮಲಗಿದ್ದಾಗ ಒಳ್ಳೆಯ ಕನಸನ್ನು ಕಂಡರೆ ಆಮೇಲೆ ಪುನಃ ಮಲಗಬಾರದು.

ಪ್ರಾತಶ್ಚ ಕೀರ್ತಯೇತ್ಸ್ವಪ್ನಂ ಯಥಾದೃಷ್ಟಂ ಖಗಾಧಿಪ ।
ಪ್ರಾಜ್ಞಭೋಜಕವಿಪ್ರೇಭ್ಯಃ ಸುಹೃದ್ಭ್ಯಶ್ಚ ಖಗಾಧಿಪ ॥ ೧೭ ॥

ತತೋ ಮಧ್ಯಾಹ್ನಸಮಯೇ ಸ್ನಾತಃ ಪ್ರಯತಮಾನಸಃ ।
ತಂ ಚೈವ ದೈವಂ ವಿಧಿವತ್ಪೂಜಯಿತ್ವಾ ದಿವಾಕರಂ ॥ ೧೮ ॥

ಸಮ್ಯಕ್ಕೃತಜಪೋ ಮೌನೀ ನರೋ ಹುತಹುತಾಶನಃ ।
ನಿಷ್ಕ್ರಮ್ಯ ದೇವಾಯತನಾದ್ಭೋಜಕಾಯ ನಿವೇದಯೇತ್ ॥ ೧೯ ॥

ಭವೇದಲಾಭೋ ಯದಿ ಭೋಜಕಾನಾಂ ।
ವಿಪ್ರಾಸ್ತಮರ್ಹಂತಿ ಪುರಾಣವಿಜ್ಞಾಃ ॥
ಯೇ ಮಂತ್ರವೇದಾವಯವೇಷು ನಿಶ್ಚಿತಾ ।
ವಿಭುಂ ಸಮಭ್ಯರ್ಚ್ಯ ದಿವಂ ವ್ರಜೇಯುಃ ॥ ೨೦ ॥

---

೧೭. ತಾನು ಕಂಡ ಕನಸನ್ನು ಪ್ರಾತಃಕಾಲದಲ್ಲಿ ಅನುಭವಶಾಲಿಗಳು, ಭೋಜಕರು, ಬ್ರಾಹ್ಮಣರು, ಮಿತ್ರರು ಇವರಿಗೆಲ್ಲ ತಿಳಿಸಬೇಕು.

೧೮. ಮಧ್ಯಾಹ್ನ ಕಾಲದಲ್ಲಿ ಸ್ನಾನಮಾಡಿ ಶುದ್ಧಮನಸ್ಸುಳ್ಳವನಾಗಿ ದೇವಾಲಯಕ್ಕೆ ಹೋಗಿ ವಿಧಿಯಂತೆ ಆ ಸೂರ್ಯದೇವನಿಗೆ ಪೂಜೆಮಾಡಬೇಕು.

೧೯. ಬಳಿಕ ಅಲ್ಲಿಯೇ ಮೌನದಿಂದ ಜಪಮಾಡಿ ಔಪಾಸನ ಮೊದಲಾದ, ಅಗ್ನಿಪರಿಚರ್ಯೆಯನ್ನೂ ನೆರವೇರಿಸಿ ಭೋಜಕನಿಗೆ ತಿಳಿಸಿ ದೇವಾಲಯದಿಂದ ಬರಬೇಕು.

೨೦. ಆ ಸಮಯದಲ್ಲಿ ಭೋಜಕರು ಅಲ್ಲಿಲ್ಲದಿದ್ದರೆ ಪುರಾಣಜ್ಞರಾದ ಬ್ರಾಹ್ಮಣರಿಗಾದರೂ ತಿಳಿಸಬೇಕು. ಹೀಗೆ ಮಾಡಿದರೆ ಅವರು ಮಂತ್ರಗಳೆಂಬ ವೇದಾವಯವಗಳಲ್ಲಿ ನಿಶ್ಚಯಜ್ಞಾನ ಹೊಂದಿದವರಂತೆ ಆಗಿ ಸ್ವಾಮಿಯನ್ನು ಪೂಜಿಸಿ ಸ್ವರ್ಗಕ್ಕೆ ಹೋಗುವರು.

ಕೃತ್ವೈವಂ ಸಪ್ತಮೀಃ ಸಪ್ತ ನರೋ ಭಕ್ತಿಸಮನ್ವಿತಃ ।
ಶ್ರದ್ದಧಾನೋಽಪಿ ಸೂರ್ಯಸ್ಯ ಸ ಕಥಂ ನಾಪ್ನುಯಾತ್ಫಲಂ　　॥ ೨೧ ॥

ದಶಾನಾಮಶ್ವಮೇಧಾನಾಂ ಕೃತಾನಾಂ ಯತ್ಫಲಂ ಭವೇತ್ ।
ತತ್ಫಲಂ ಸಪ್ತಮೀಃ ಸಪ್ತ ಕೃತ್ವಾ ಭಕ್ತ್ಯಾ ಲಭೇತ ನಾ　　॥ ೨೨ ॥

ದುಷ್ಪಾಪಂ ನಾಸ್ತಿ ತದ್ವೀರ ಸಪ್ತಮ್ಯಾಂ ಯನ್ನ ದಹ್ಯತೆ ।
ನ ಚ ರೋಗೋಽಸ್ತ್ಯಸೌ ಲೋಕೇ ಯ ಏತಾಭಿರ್ನ ಶಾಮ್ಯತಿ　　॥ ೨೩ ॥

ಕುಷ್ಠಾನಿ ಯಾನಿ ರೌದ್ರಾಣಿ ದುಶ್ಛೇದ್ಯಾನಿ ಭಿಷಗ್ವರೈಃ ।
ನೀಯಂತೇ ತಾನಿ ಸರ್ವಾಣಿ ಗರುಡೇನೇವ ಪನ್ನಗಾಃ　　॥ ೨೪ ॥

ಸಕಲವಿಬುಧಮಾನ್ಯಂ ಸ್ವಪ್ರಕಾಶಂ ಜನಾನಾಂ ।
ಅಭಿಮತಫಲದಾನೇ ದೀಕ್ಷಿತಂ ತಂ ಸುಪೂಜ್ಯಂ ॥

---

೨೧. ಹೀಗೆ ಮನುಷ್ಯನು ಸೂರ್ಯನಲ್ಲಿ ಶ್ರದ್ಧೆಯುಳ್ಳವನಾಗಿ ಈ ಏಳುಸಪ್ತಮಿಗಳನ್ನು ಭಕ್ತಿಯಿಂದ ಆಚರಿಸಿದ ಮೇಲೆ ಅವನಿಗೆ ಫಲವು ಹೇಗೆ ಸಿಕ್ಕದೇ ಹೋದೀತು?

೨೨. ಮನುಷ್ಯನು ಹತ್ತು ಅಶ್ವಮೇಧಯಾಗಗಳನ್ನು ಮಾಡಿದರೆ ಯಾವ ಫಲವನ್ನು ಹೊಂದುತ್ತಾನೋ ಅದೇ ಫಲವನ್ನು ಈ ಏಳು ಸಪ್ತಮೀವ್ರತಗಳನ್ನೂ ಭಕ್ತಿಯಿಂದ ಆಚರಿಸಿದರೆ ಹೊಂದುತ್ತಾನೆ.

೨೩. ಅಯ್ಯಾ ವೀರನೇ! ಸಪ್ತಮೀ ವ್ರತವನ್ನು ಆಚರಿಸುವುದರಿಂದ ನಾಶವಾಗದೇ ಇರುವ ಪಾಪವೇ ಇಲ್ಲ ಮತ್ತು ನಾಶಹೊಂದದ ರೋಗವೂ ಲೋಕದಲ್ಲಿಲ್ಲ.

೨೪. ವೈದ್ಯರು ನಾಶಮಾಡಲು ಕಷ್ಟಕರವೂ, ಕ್ರೂರಗಳೂ ಆದ ಕುಷ್ಠ ಮೊದಲಾದ ರೋಗಗಳೆಲ್ಲವೂ ಗರುಡನ ಕೈಗೆ ಸಿಕ್ಕಿದ ಸರ್ಪದಂತೆ ಕ್ಷಣಮಾತ್ರದಲ್ಲಿ ನಾಶಹೊಂದುವುವು.

೨೫. ದೇವತೆಗಳಿಗೆಲ್ಲ ಪೂಜ್ಯನಾದವನೂ, ಸ್ವಪ್ರಕಾಶನೂ, ಜನರಿಗೆ ಇಷ್ಟವಾದ ಫಲ ಕೊಡುವುದರಲ್ಲಿ ದೀಕ್ಷೆ ವಹಿಸಿದವನೂ ಆದ ಸೂರ್ಯನನ್ನು ಪೂಜಿಸಿ

**ಸುತಧನಕುಲಭೋಗೈಃ ಸೌಖ್ಯಪುಣ್ಯೈರುಪೇತೋ ।**
**ವ್ರಜತಿ ಚ ಸುತನುಂ ತಾಂ ಶಾಶ್ವತಾಂ ತಿಗ್ಮರಶ್ಮೇಃ ॥ ೨೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ಸಪ್ತಾಶ್ವತಿಲಕಾರುಣ ಸಂವಾದೇ ಸ್ವಪ್ನವರ್ಣನಂ ನಾಮ ಪಂಚನವತ್ಯಧಿಕ ಶತತಮೋಽಧ್ಯಾಯಃ.**



---

ದರೆ ಮಕ್ಕಳು, ಧನ, ಕುಲ, ಭೋಗಗಳು, ಸೌಖ್ಯ, ಪುಣ್ಯ ಇವುಗಳಿಂದ ಕೂಡಿ ಪೂಜ್ಯನೂ ಆಗಿ ಸೂರ್ಯನ ಶಾಶ್ವತವಾದ ದಿವ್ಯಶರೀರವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೌರಧರ್ಮದಲ್ಲಿ ಸ್ವಪ್ನ ವರ್ಣನವೆಂಬ ನೂರತೊಂಭತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷಣ್ಣವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

**ಅತೀತ್ಯ ಭುಕ್ತಂ ಪುರುಷಃ ಸಪ್ತಮ್ಯಾಂ ಗರುಡಾಗ್ರಜ ।**
**ಮೈತ್ರೀಂ ವಿದಧ್ಯಾತ್ಸರ್ವತ್ರ ಜೀವಹಿಂಸಾಂ ವಿವರ್ಜಯೇತ್ ॥ ೧ ॥**

**ಸಪ್ತಮ್ಯಾಂ ನಸ್ಪೃಶೇತ್ತೈಲಂ ನೀಲಂವಸ್ತ್ರಂ ನ ಧಾರಯೇತ್ ।**
**ನ ಶಯೀತ ಸ್ತ್ರಿಯಾ ಸಾರ್ಧಂ ನ ಸೇವೇತ ದುರೋದರಂ ॥ ೨ ॥**

**ನ ರುದ್ಯಾದಶ್ರುಪಾತೇನ ನ ವಾ ಧ್ಯಾಯೇತ್ಪಿಶಾಚಕಾನ್ ।**
**ನಾಕರ್ಷೇಚ್ಛಿರಸೋ ಯೂಕಾಂ ನ ವೃಥಾವಾದಮಾಚರೇತ್ ॥ ೩ ॥**

---

### ನೂರತೊಂಭತ್ತಾರನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಹೇಳುತ್ತಾನೆ—ಎಲೈ ಅರುಣನೇ! ಸೂರ್ಯಭಕ್ತನು ಸಪ್ತಮಿಯದಿನ ಹೊತ್ತುಮೀರಿ ಭೋಜನಮಾಡಬೇಕು. ಮತ್ತು ಎಲ್ಲರಲ್ಲೂ ಮೈತ್ರಿಯನ್ನು ಮಾಡಬೇಕು. ಪ್ರಾಣಿಗಳ ಹಿಂಸೆಯನ್ನು ಮಾಡಬಾರದು.

೨. ಸಪ್ತಮಿಯದಿನ ಎಣ್ಣೆಯನ್ನು ಸೇವಿಸಬಾರದು, ಅದನ್ನು ಮುಟ್ಟಲೂ ಬಾರದು, ನೀಲಿಯಬಟ್ಟೆಯನ್ನು ಧರಿಸಬಾರದು, ಸ್ತ್ರೀಸಂಗಮಾಡಬಾರದು, ಜೂಜಾಡಬಾರದು.

೩. ಕಣ್ಣೀರನ್ನು ಸುರಿಸುವುದು, ಅಳುವುದು, ಹೀಗೆಲ್ಲಾ ಮಾಡಬಾರದು, ಪಿಶಾಚಗಳನ್ನು ಧ್ಯಾನಿಸಬಾರದು, ತಲೆಯಿಂದ ಹೇನುಗಳನ್ನು ತೆಗೆಯಬಾರದು, ನಿಷ್ಫಲವಾಗಿ ವಾದವನ್ನು ಮಾಡಬಾರದು,

ಪರಸ್ಯಾನಿಷ್ಟಕಥನಮತಿವಾದಂ ಚ ವರ್ಜಯೇತ್ ।
ನ ಕಂಚಿತ್ತಾಡಯೇಜ್ಜಂತುಂ ನ ವಿಶೇತ ಕದಾಚನ ॥
ಬ್ರಹ್ಮಹತ್ಯಾಮವಾಪ್ನೋತಿ ವಿಶಮಾನೋ ರವೇರ್ಗೃಹಂ ॥ ೪ ॥

ಇತ್ಯೇತೇ ಸಮಯಾಃ ಪ್ರೋಕ್ತಾ ಸೌರಾಣಾಂ ಗರುಡಾಗ್ರಜ ।
ಭೋಜಕಾನಾಂ ವಿಶೇಷೇಣ ಪುರಾ ಮೇ ಭಾನುನಾನಘ ॥ ೫ ॥

ಭೋಜಕಃ ಖಗಶಾರ್ದೂಲ ಯೋ ಲೋಭಾದ್ದ್ರವ್ಯಮುತ್ಸೃಜೇತ್ ।
ವೃದ್ಧ್ಯೈ ತು ಸತತಂ ವೀರ ಸ ಗಚ್ಛೇನ್ನರಕಂ ಧ್ರುವಂ ॥ ೬ ॥

ವಿಶೇಷೇ ಚಾಲ್ಪಕಶತಂ ಕಾಮ್ಯಮಾನೇ ಖಗಾಧಿಪ ।
ಪ್ರಯುಜ್ಯಮಾನೋ ಭೋಜಕಸ್ತು ಪಂಚಕೇನ ಶತೇನ ವೈ ॥ ೭ ॥

ಪ್ರಾಯಶ್ಚಿತ್ತೀ ಭವೇದ್ವೀರ ನಚಾರ್ಹಃ ಪೂಜನೇ ರವೇಃ ।
ಕೃತ್ವಾ ಸಾಂತಪನಂ ಕೃಚ್ಛ್ರಂ ತತಸ್ಸಂಪೂಜಯೇದ್ರವಿಂ ॥ ೮ ॥

---

೪. ಪರರಿಗೆ ಅನಿಷ್ಟವನ್ನು ಹೇಳುವುದು, ಅತಿಯಾಗಿ ವಾದಮಾಡುವುದು, ಇವುಗಳನ್ನೆಲ್ಲ ಬಿಟ್ಟುಬಿಡಬೇಕು. ಯಾವ ಜಂತುವನ್ನೂ ಹೊಡೆಯಬಾರದು, ಕನಿಷ್ಟನಡವಳಿಕೆಗಳನ್ನು ಆಚರಿಸಿ ಅಶುದ್ಧನಾಗಿ ಸೂರ್ಯಗೃಹವನ್ನು ಪ್ರವೇಶಿಸಬಾರದು, ಹಾಗೆ ಪ್ರವೇಶಿಸಿದವನಿಗೆ ಬ್ರಹ್ಮಹತ್ಯಾದೋಷ ಬರುವುದು.

೫ ಎಲೈ ಅನಘನಾದ ಅರುಣನೇ! ಈ ಪರಿಯಾಗಿ ಸೌರರ ಸಂಕೇತಗಳನ್ನು ಭೋಜಕರ ಸಂಕೇತಗಳನ್ನು ನಿನಗೆ ಹೇಳಿದುದಾಯಿತು. ಪೂರ್ವದಲ್ಲಿ ಸೂರ್ಯನು ನನಗೆ ಇವುಗಳನ್ನು ಹೇಳಿದ್ದನು.

೬. ಅಯ್ಯಾ ವೀರನೇ! ಕೇಳು; ಯಾವ ಭೋಜಕನು ಬಡ್ಡಿಗಾಗಿ ದ್ರವ್ಯವನ್ನು ಸಾಲ ಕೊಡುತ್ತಾನೋ ಅವನು ನಿಜವಾಗಿ ನರಕಕ್ಕೆ ಹೋಗುತ್ತಾನೆ.

೭-೮. ಅಯ್ಯಾ ಖಗಶ್ರೇಷ್ಠನೇ! ಕೇಳು; ದ್ರವ್ಯವನ್ನು ಸಾಲವಾಗಿ ಅಪೇಕ್ಷಿಸುವವರಿಗೆ ಹೆಚ್ಚಾದ ಬಡ್ಡಿಯ ಆಶೆಯಿಂದ ಅವರು ಕೇಳಿದಷ್ಟನ್ನೆಲ್ಲಾ ಕೊಡದೆ ಭೋಜಕನಾದವನು ಕೆಲವು ನೂರುಗಳನ್ನು ಮಾತ್ರ ಕೊಡಬೇಕು. ಅದನ್ನು ನೂರಕ್ಕೆ ಐದರಂತೆ ಬಡ್ಡಿಯ ದರದಲ್ಲಿ ಕೊಡಬೇಕು. ಹಾಗೆ ಅಲ್ಪಬಡ್ಡಿ ತೆಗೆದುಕೊಂಡು ಜೀವನ ಮಾಡಿದರೂ ಆಗಲೂ ಪ್ರಾಯಶ್ಚಿತ್ತಮಾಡಿಕೊಳ್ಳಲೇಬೇಕು. ಆಗ ಸಾಂತಪನ, ಕೃಚ್ಛ್ರ ಎಂಬ ಪ್ರಾಯಶ್ಚಿತ್ತವನ್ನು ಆಚರಿಸಿ ಶುದ್ಧನಾಗಿ ಸೂರ್ಯಪೂಜೆ ಮಾಡಬಹುದು.

**ನಾನ್ಯದೇವಪ್ರತಿಷ್ಠಾ ತು ಕರ್ತವ್ಯಾ ಭೋಜಕೇನ ತು ।**
**ಕೃತ್ವಾ ತು ತಾಂ ಖಗಶ್ರೇಷ್ಠ ಪ್ರಾಯಶ್ಚಿತ್ತೀಯತೇ ನರಃ ॥ ೯ ॥**

**ತಸ್ಮಾತ್ತು ತಾಂ ನ ಕುರ್ಯಾದ್ವೈ ಭೋಜಕಃ ಖಗಸತ್ತಮ ।**
**ಮುಕ್ತ್ವಾ ತು ಭಾಸ್ಕರಂ ದೇವಂ ನಾನ್ಯಂ ದೇವಂ ಹಿ ಪೂಜಯೇತ್॥ ೧೦ ॥**

**ಕೃತ್ವಾಧಿವೇಶಂ ದೇವಾನಾಂ ಬ್ರಹ್ಮಾದೀನಾಂ ಖಗಾಧಿಪ ।**
**ಭೋಜಕೋ ನ ಸ್ಪೃಶೇದ್ಭಾನುಂ ಕುರ್ಯಾತ್ ಕೃಚ್ಛ್ರಂ ಚ ಶುದ್ಧಯೇ ॥ ೧೧ ॥**

**ಕೃತ್ವಾ ತು ಕೃಚ್ಛ್ರಂ ವಿಧಿವಚ್ಛುದ್ಧೇರ್ಹೇತುಂ ಖಗಾಧಿಪ ।**
**ತತಃ ಪೂಜಯಿತುಂ ಭಾನುಮಧಿಕಾರೀ ಭವೇನ್ನರಃ ॥ ೧೨ ॥**

**ನ ವಿಜ್ಞಾತಂ ಪ್ರದಾತವ್ಯಂ ನ ಮ್ಲಾನಂ ಚ ನ ದೂಷಿತಂ ।**
**ನ ಚ ಪರ್ಯುಷಿತಂ ಮಾಲ್ಯಂ ದಾತವ್ಯಂ ವೃದ್ಧಿಮಿಚ್ಛತಾ ॥ ೧೩ ॥**

---

೯. ಅಯ್ಯಾ ಖಗನೇ! ಕೇಳು ; ಭೋಜಕನು ಇನ್ನು ಯಾವ ದೇವರ ಪ್ರತಿಷ್ಠಾಕಾರ್ಯವನ್ನೂ ಮಾಡಕೂಡದು. ಹಾಗೆ ಇತರ ದೇವಮೂರ್ತಿ ಪ್ರತಿಷ್ಠಾಕಾರ್ಯವನ್ನು ನಡೆಯಿಸಿದರೆ ಭೋಜಕನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

೧೦. ಓ ಖಗಶ್ರೇಷ್ಠನೇ! ಕೇಳು ; ಈ ಕಾರಣದಿಂದ ಭೋಜಕನು ಇತರ ದೇವಮೂರ್ತಿಗಳ ಪ್ರತಿಷ್ಠೆಯನ್ನು ಮಾಡಬಾರದು. ಸೂರ್ಯಭಗವಂತನ ಹೊರತು ಬೇರೆ ದೇವರನ್ನು ಪೂಜಿಸಬಾರದು.

೧೧-೧೨. ಅಯ್ಯಾ ಖಗಶ್ರೇಷ್ಠನೇ! ಬ್ರಹ್ಮಾದಿದೇವರುಗಳನ್ನು ಪ್ರತಿಷ್ಠೆಮಾಡಿ ಬಳಿಕ ಹಾಗೆಯೇ ಸೂರ್ಯದೇವಾಲಯಕ್ಕೆ ಬಂದು ಸೂರ್ಯಮೂರ್ತಿಯನ್ನು ಪೂಜಿಸಬಾರದು. ಇತರ ದೇವಮೂರ್ತಿಯ ಪ್ರತಿಷ್ಠಾಕಾರ್ಯಕರಣದಿಂದ ಶುದ್ಧನಾಗುವುದಕ್ಕಾಗಿ ವಿಧಿಯ ಪ್ರಕಾರ ಕೃಚ್ಛ್ರಾಚರಣರೂಪವಾದ ಪ್ರಾಯಶ್ಚಿತ್ತ ಮಾಡಿಕೊಂಡರೆ ಭಾನುಪೂಜೆಗೆ ಅರ್ಹನಾಗುತ್ತಾನೆ.

೧೩. ತನ್ನ ಅಭಿವೃದ್ಧಿಯನ್ನು ಬಯಸುವ ಮನುಷ್ಯನು ಬಾಡಿಹೋದುದೂ (ಕಾಲುಸೋಂಕಿ) ದೂಷಿತವಾದುದೂ, ಹಳಸಲಾದುದೂ, ಆದ ಪುಷ್ಪಮಾಲಿಕೆಯನ್ನು ಅವಿಜ್ಞಾತವಾಗಿಯೂ ದೇವರಿಗೆ ಧರಿಸುವುದಕ್ಕೆ ಕೊಡಬಾರದು. ಅಂತಹ ಹೂವಿನಿಂದ ಮೇಲ್ಕಟ್ಟನ್ನು ರಚಿಸುವುದು ಸಹ ನೀಚತನ.

ದೇವಮುಲ್ಲೋಚಯೇದ್ಯಸ್ತು ಸ ಖಲಃ ಪುಷ್ಪಲೋಭತಃ ।
ಪುಷ್ಪಾಣಿ ಚ ಸುಗಂಧೀನಿ ಭೋಜಕೋ ನೇನತರಾಣಿ ಚ ॥ ೧೪ ॥

ಬ್ರಹ್ಮಹತ್ಯಾಮವಾಪ್ನೋತಿ ಭೋಜಕೋ ಲೋಭಮೋಹಿತಃ ।
ಮಹಾರೌರವಮಾಸಾದ್ಯ ಪಚ್ಯತೇ ಶಾಶ್ವತೀಃ ಸಮಾಃ ॥ ೧೫ ॥

ಹಂತ ತೇ ಕೀರ್ತಯಿಷ್ಯಾಮಿ ಧೂಪದಾನವಿಧಿಂ ಪರಂ ।
ಪ್ರದಾನೇ ದೇವದೇವಸ್ಯ ಯಸ್ಯ ಧೂಪಸ್ಯ ಯತ್ಫಲಂ ॥ ೧೬ ॥

ಸದಾ ಚಂದನಧೂಪೇನ ಸಾನ್ನಿಧ್ಯಂ ಕುರುತೇ ರವಿಃ ।
ಪ್ರದದ್ಯಾನ್ಮಾನಸೇ ಚೈವ ಯದ್ಯದಿಚ್ಛತಿ ಮಾನವಃ ॥ ೧೭ ॥

ತಥೈವಾಗುರುಧೂಪೇನ ಪರಂ ದದ್ಯಾದಭೀಪ್ಸಿತಂ ।
ಆರೋಗ್ಯಂ ವಾ ಸ್ತ್ರಿಯಂ ಪ್ರೇಪ್ಸುರ್ನಿತ್ಯದಾ ಗುಗ್ಗುಲಂ ದಹೇತ್ ॥ ೧೮ ॥

---

೧೪. ಉತ್ತಮನಾದ ಭೋಜಕನು ಸುವಾಸನೆಯ ಪುಷ್ಪಗಳನ್ನೇ ಮೇಲ್ಕಟ್ಟಿಗೂ ಉಪಯೋಗಿಸಬೇಕೇ ಹೊರತು ನಿರ್ಗಂಧ ಕುಸುಮಗಳನ್ನು ಉಪಯೋಗಿಸಬಾರದು.

೧೫. ಭೋಜಕನು ಲೋಭದಿಂದ ವೆಚ್ಚಕ್ಕೆ ಹಿಂಜರಿದು ನಿಕೃಷ್ಟವಸ್ತುವೇ ಸಾಕೆಂದು ಭಾವಿಸಿದರೆ ಬ್ರಹ್ಮಹತ್ಯಾದೋಷವನ್ನು ಪಡೆಯುತ್ತಾನೆ. ಮತ್ತು ಮಹಾರೌರವನರಕವನ್ನು ಹೊಂದಿ ಅಲ್ಲಿ ಅನೇಕ ವರ್ಷಗಳಕಾಲ ಬೇಯುತ್ತಾನೆ.

೧೬. ಇನ್ನು ದೇವದೇವನಿಗೆ ಯಾವ ಧೂಪವನ್ನು ಹಾಕಿದರೆ ಏನು ಫಲವುಂಟಾಗುವುದು ಎಂಬುದನ್ನು ತಿಳಿಸುವ ಉತ್ಕೃಷ್ಟವಾದ ಧೂಪದಾನ ವಿಧಿಯನ್ನು ಹೇಳುತ್ತೇನೆ ಕೇಳು.

೧೭. ಶ್ರೀಗಂಧದ ಚಕ್ಕೆಯ ಧೂಪಹಾಕುವುದರಿಂದ ಸೂರ್ಯನು ಅಲ್ಲಿ ಸಾನ್ನಿಧ್ಯವನ್ನು ಕರುಣಿಸುತ್ತಾನೆ. ಮತ್ತು ಆ ಧೂಪಹಾಕಿದವನಿಗೆ ಅವನ ಮನಸ್ಸಿನ ಅಪೇಕ್ಷೆಯೆಲ್ಲವನ್ನೂ ಈಡೇರಿಸುವನು.

೧೮. ಅಗುರುಧೂಪವನ್ನು ಹಾಕಿದರೆ ಅಭೀಪ್ಸಿತವಾದ ವರವನ್ನು ಕೊಡುವನು. ಸಂಪೂರ್ಣ ಆರೋಗ್ಯವನ್ನಾಗಲಿ, ಉತ್ತಮ ಸ್ತ್ರೀಯನ್ನಾಗಲಿ, ಹೊಂದಲು ಅಪೇಕ್ಷೆಯಿರುವವನು ಯಾವಾಗಲೂ ಗುಗ್ಗುಳಧೂಪವನ್ನೇ ಸಮರ್ಪಿಸಬೇಕು.

ಮಂಗಲಂ ಧೂಪದಾನೇನ ಸದಾ ಯಚ್ಛತಿ ಭಾನುಮಾನ್ ।
ಆರೋಗ್ಯಂ ಚ ಸ್ತ್ರಿಯಂ ದದ್ಯಾತ್ಸೌಖ್ಯಂ ಚ ಪರಮಂ ಭವೇತ್ ॥ ೧೯ ॥

ಸದಾ ಕುಂಕುಮಧೂಪೇನ ಸೌಭಾಗ್ಯಂ ಲಭತೇ ನರಃ ।
ಶ್ರೀವಾಸಕಸ್ಯ ಧೂಪೇನ ವಾಣಿಜ್ಯಂ ಸಫಲಂ ಭವೇತ್ ॥ ೨೦ ॥

ರಸಂ ಸರ್ಜರಸೋಪೇತಂ ದದತೋಽರ್ಥಾಗಮಂ ಧ್ರುವಂ ।
ದೇವದಾರುಂ ಚ ದಹತೋ ಭವತ್ಯನ್ನಮಥಾಕ್ಷಯಂ ॥ ೨೧ ॥

ವಿಲೇಪನಂ ಕುಂಕುಮೇನ ಸರ್ವಕಾಮಫಲಪ್ರದಂ ।
ಇಹಲೋಕೇ ಸುಖೀ ಭೂತ್ವಾ ದಾತಾ ಸ್ವರ್ಗಮವಾಪ್ನುಯಾತ್ ॥ ೨೨ ॥

ಚಂದನಸ್ಯ ಪ್ರದಾನೇನ ಶ್ರಿಯಮಾಯುಶ್ಚ ವಿಂದತಿ ।
ರಕ್ತಚಂದನದಾನೇನ ಸರ್ವಂ ದದ್ಯಾದ್ದಿವಾಕರಃ ॥ ೨೩ ॥

---

೧೯. ಈ ಧೂಪದಾನದಿಂದ ಸೂರ್ಯನು, ಭಕ್ತನಿಗೆ ಸದಾ ಶುಭಪರಂಪರೆಯನ್ನೂ ಆರೋಗ್ಯವನ್ನೂ, ಸ್ತ್ರೀಲಾಭವನ್ನೂ ದೊರಕಿಸಿ ಪರಮಸೌಖ್ಯವನ್ನು ಕೊಡುತ್ತಾನೆ.

೨೦. ಕುಂಕುಮಕೇಸರಿಯ ಧೂಪವನ್ನು ಹಾಕಿದ ಮನುಷ್ಯನು ಸದಾ ಸೌಭಾಗ್ಯನನ್ನು ಹೊಂದುತ್ತಾನೆ. ಶ್ರೀವಾಸಕಧೂಪವನ್ನು ಹಾಕಿದ ಮನುಷ್ಯನು ವ್ಯಾಪಾರದಲ್ಲಿ (ವಾಣಿಜ್ಯದಲ್ಲಿ) ಸಫಲಮನೋರಥನಾಗುವನು.

೨೧. ಸರ್ಜರಸ ಎಂದರೆ ಹಾಲುಮಡ್ಡಿಯ ಧೂಪಸಾರವನ್ನು ಹಾಕತಕ್ಕವನಿಗೆ ನಿಜವಾಗಿಯೂ ದ್ರವ್ಯಪ್ರಾಪ್ತಿಯುಂಟಾಗುವುದು. ದೇವದಾರುಚಕ್ಕೆಯ ಧೂಪವನ್ನು ಹಾಕಿದವನಿಗೆ ಅಕ್ಷಯವಾಗಿ (ಸಮೃದ್ಧಿ) ಅನ್ನ ದೊರೆಯುವುದು.

೨೨. ಕೇಸರಿಯ ಗಂಧವನ್ನು ಲೇಪನಮಾಡಿದವನಿಗೆ ಸರ್ವಕಾಮಫಲಗಳೂ ಲಭಿಸುವುವು. ಈ ವಿಲೇಪನ ದಾತೃವು ಈ ಲೋಕದಲ್ಲಿ ಸುಖಾನುಭವ ಮಾಡಿ ಸ್ವರ್ಗವನ್ನೂ ಪಡೆಯುತ್ತಾನೆ.

೨೩. ಚಂದನವನ್ನು ಸಮರ್ಪಿಸುವುದರಿಂದ ನರನು ಸಂಪತ್ತನ್ನೂ, ದೀರ್ಘಾಯುಸ್ಸನ್ನೂ ಹೊಂದುತ್ತಾನೆ. ರಕ್ತಚಂದನವನ್ನು ದಾನಮಾಡಿದವನಿಗೆ ಸೂರ್ಯನು ಸರ್ವವನ್ನೂ ಕೊಡುತ್ತಾನೆ.

ಅಪಿ ರೋಗಶತೈರ್ಗ್ರಸ್ತಃ ಕ್ಷಿಪ್ರಾರೋಗ್ಯಮವಾಪ್ನುಯಾತ್ ।
ವರ್ತಿಗಂಧೈಶ್ಚ ಸೌಗಂಧ್ಯಂ ಪರಮಂ ವಿಂದತೇ ನರಃ ॥ ೨೪ ॥

ಕಸ್ತೂರಿಕಾಲೇಪನಕೈರೈಶ್ವರ್ಯಮತುಲಂ ಲಭೇತ್ ।
ಕರ್ಪೂರರಸಂಯುಕ್ತೈರ್ಗಂಧೈಃ ಕ್ಷ್ಮಾಧಿಪಾಧಿಪತಿರ್ಭವೇತ್ ॥ ೨೫ ॥

ಚತುಸ್ಸಮೇನ ಗಂಧೇನ ಕಿಂ ತುಲ್ಯಂ ಪ್ರಾಪ್ನುಯಾನ್ನರಃ ।
ದೇವಾಗಾರಂ ತು ತನ್ಮನ್ಯೇ ಭಕ್ತ್ಯಾ ಯ ಉಪಲೇಪಯೇತ್ ॥ ೨೬ ॥

ಸ ರೋಗಾನ್ಮುಚ್ಯತೇ ಕ್ಷಿಪ್ರಂ ಪುರುಷೋ ಭೋಗವಾನ್ ಭವೇತ್ ।
ಅಷ್ಟಾದಶೇಹ ಕುಷ್ಠಾನಿ ಯೇ ಚಾನ್ಯೇ ವ್ಯಾಧಯೋ ನೃಣಾಂ ॥
ಪ್ರಲಯಂ ಯಾಂತಿ ತೇ ಸರ್ವೇ ಮೃದಾ ಯದ್ಯುಪಲೇಪಯೇತ್ ॥ ೨೭ ॥

---

೨೪. ಅಲ್ಲದೆ ನಾನಾರೋಗಗಳಿಂದ ಪೀಡಿತನಾಗಿದ್ದರೂ ಬೇಗನೆ ಆರೋಗ್ಯ ಹೊಂದುತ್ತಾನೆ. ವರ್ತಿಗಂಧವನ್ನು ಸಮರ್ಪಿಸಿದ ಮನುಷ್ಯನು ತಾನು ಹೋದಕಡೆ ಮಹಾಸುವಾಸನೆಯನ್ನು ಹೊಂದುತ್ತಾನೆ.

೨೫ ಕಸ್ತೂರಿಯನ್ನು ಲೇಪನಮಾಡುವುದರಿಂದ ಅಪಾರವಾದ ಐಶ್ವರ್ಯವನ್ನು ಪಡೆಯುವನು. ಸೂರ್ಯನಿಗೆ ಪಚ್ಚಕರ್ಪೂರಮಿಶ್ರಿತವಾದ ಗಂಧಲೇಪನವನ್ನು ಮಾಡಿದರೆ ಆ ಮನುಷ್ಯನು ರಾಜಾಧಿರಾಜನಾಗುತ್ತಾನೆ.

೨೬. ಕರ್ಪೂರ, ಅಗಿಲು, ಕಸ್ತೂರಿ, ತಕ್ಕೋಲ ಈ ನಾಲ್ಕನ್ನೂ ಸಮಪ್ರಮಾಣದಲ್ಲಿ ಮಿಶ್ರಮಾಡಿದ ಗಂಧ (ಎಂದರೆ ಯಕ್ಷಕರ್ದಮ) ದ ಸಮರ್ಪಣದಿಂದ ಪಡೆಯುವ ಫಲಕ್ಕೆ ಇನ್ನು ಯಾವ ಫಲವು ತಾನೇ ಸಮವಾದೀತು ? ಧೂಪಫಲವು ಈ ರೀತಿ ಅಮೋಘವಾಗಿದೆ. ಇನ್ನು ಭಕ್ತಿಯಿಂದ ದೇವಾಲಯನ್ನು ಸಾರಿಸುವ ಮನುಷ್ಯನಿಗೆ ಲಭಿಸುವ ಫಲವನ್ನು ಹೇಳುತ್ತೇನೆ.

೨೭. ಆ ಮನುಷ್ಯನು ಜಾಗ್ರತೆಯಾಗಿ ಸರ್ವರೋಗಗಳಿಂದಲೂ ವಿಮುಕ್ತನಾಗಿ ಸುಖಿಯಾಗುವನು. ಯಾವನು ದೇವಾಲಯವನ್ನು ಮೃತ್ತಿಕೆಯಿಂದ ಸಾರಿಸುವನೋ ಅವನಿಗೆ ಹದಿನೆಂಟು ಬಗೆಯ ಕುಷ್ಠರೋಗಗಳಿದ್ದರೂ ಅವುಗಳೂ ಇತರ ರೋಗಗಳೂ ಎಲ್ಲವೂ ನಾಶಹೊಂದುತ್ತವೆ.

ಪ್ರಲೇಪನಾನಾಂ ಸರ್ವೇಷಾಂ ರಕ್ತಚಂದನಮುತ್ತಮಂ ।
ನಾತಃ ಪರತರಂ ಕಿಂಚಿದ್ಭಾನೋಸ್ತುಷ್ಟಿಕರಂ ಪರಂ ॥ ೨೮ ॥

ಕಿಂ ತಸ್ಯ ನ ಭವೇಲ್ಲೋಕೋ ಯೋಹ್ಯನೇನ ಪ್ರಲೇಪಯೇತ್ ।
ಸರ್ವಕಾಮಸಮೃದ್ಧೋಽಸೌ ಸೂರ್ಯಲೋಕೇ ಮಹೀಯತೇ ॥ ೨೯ ॥

ಉಪಲಿಪ್ಯ ರವೇರ್ಗೇಹಂ ಕುರ್ಯಾದ್ವೈ ಮಂಡಲಂ ಪುನಃ ।
ಏಕೇನಾಥ ಸಮಾಪ್ನೋತಿ ಭಾಗ್ಯಮಾರೋಗ್ಯಮುತ್ತಮಂ ॥ ೩೦ ॥

ತ್ರಿಭಿಸ್ಸಪ್ತಭಿರಚ್ಛಿನ್ನಾ ಬಾಲೋ ವಾನ್ಯೋಽಪಿ ಯೋ ನರಃ ।
ತೇನ ಪ್ರಧೂಪಯೇದ್ದೇವಂ ಕುರ್ವಂತಂ ನ ನಿವಾರಯೇತ್ ॥
ಅನೇನ ವಿಧಿನಾ ಕುರ್ಯಾದ್ಯಾವತೀಃ ಸಪ್ತಸಪ್ತಮೀಃ ॥ ೩೧ ॥

---

೨೮–೨೯. ಲೇಪನಗಂಧಗಳಲ್ಲಿ ರಕ್ತಚಂದನವು ಶ್ರೇಷ್ಠವಾದುದು. ಸೂರ್ಯನಿಗೆ ಅದಕ್ಕಿಂತ ತುಷ್ಟಿಕರವಾದುದು ಮತ್ತೊಂದಿಲ್ಲ. ಯಾವನು ರಕ್ತಚಂದನವನ್ನು ಲೇಪನಮಾಡುವನೋ ಅವನಿಗೆ ಫಲಿಸದೆ ಇರುವ ವಸ್ತುವೇ ಇಲ್ಲ. ಆತನು ಸರ್ವಕಾಮ್ಯವಸ್ತುಗಳನ್ನೂ ಸಮೃದ್ಧಿಯಾಗಿ ಪಡೆದು ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ

೩೦. ಸೂರ್ಯದೇವಾಲಯವನ್ನು ಸಾರಿಸಿದ ಮೇಲೆ ಅಲ್ಲಿ ರಂಗವಲ್ಲಿಯಿಂದ ಮಂಡಲವನ್ನು (ಹಸೆಯನ್ನು) ರಚಿಸಬೇಕು. ಇದರಿಂದ ಅವನು ಭಾಗ್ಯವನ್ನೂ, ಉತ್ತಮವಾದ ಆರೋಗ್ಯವನ್ನೂ ಹೊಂದುತ್ತಾನೆ.

೩೧. ಹೀಗೆ ಮಾಡಿದ ಮನುಷ್ಯನು ಹುಡುಗನಾಗಲಿ, ದೊಡ್ಡವನಾಗಲಿ ತನ್ನ ಮುಂದಿನ ಮೂರುತಲೆಮಾರಿನವರು, ತನಗಿಂತ ಹಿಂದಿನ ಏಳುತಲೆಮಾರುಗಳವರಿಗೆ ಅವಿಚ್ಛಿನ್ನವಾಗಿ ಸದ್ಗತಿಯನ್ನುಂಟುಮಾಡುತ್ತಾನೆ. ಆದುದರಿಂದ ದೇವನಿಗೆ ಮೇಲೆ ಹೇಳಿದ ಪ್ರಕಾರದಲ್ಲಿಯೂ ಧೂಪವನ್ನು ಸಮರ್ಪಿಸಬೇಕು. ಧೂಪದಾಕುವವನನ್ನು ಯಾವಾಗಲೂ ಅಡ್ಡಿಪಡಿಸಬಾರದು, ಏಳುಸಪ್ತಮಿಗಳಲ್ಲಿಯೂ ಈ ವಿಧಿಪ್ರಕಾರ ಆಚರಿಸಬೇಕು.

ಏತಾ ವೈ ಸಪ್ತಸಪ್ತಮ್ಯೋ ಯಥಾಪ್ರೋಕ್ತಾ ವಿವಸ್ವತಾ ।
ಕುರ್ವೀತ ಯೋ ನರೋ ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥ ೩೨ ॥

ಅರ್ಕಸಂಪುಟಕೈರ್ವಿತ್ತಂ ಮರಿಚೈಃ ಪ್ರಿಯಸಂಗಮಂ ।
ನಿಂಬಪತ್ರೈ ರೋಗನಾಶಂ ಫಲೈಃ ಪುತ್ರಾನ್ಯಥೇಪ್ಸಿತಾನ್ ॥
ಧನಂ ಧಾನ್ಯಂ ಸುವರ್ಣಂ ಚ ತತೋ ದದ್ಯಾದ್ವಿವಸ್ವತೆ ॥ ೩೩ ॥

ಕೃತ್ವಾ ತು ವಿಜಯಂ ವೀರ ಪ್ರಾಪ್ನೋತಿ ಚ ಫಲಂ ಮಹತ್ ।
ಸರ್ವಾನ್ ಕಾಮಾನ್ ಕಾಮಿಕಯಾ ಪ್ರಾಪ್ನುಯಾನ್ನಾತ್ರ ಸಂಶಯಃ॥ ೩೪ ॥

ನರೋ ವಾ ಯದಿ ವಾ ನಾರೀ ಯಥೋಕ್ತಂ ಸಪ್ತಮೀವ್ರತಂ ।
ಯಃ ಕರೋತಿ ಖಗಶ್ರೇಷ್ಠ ಸ ಯಾತಿ ಪರಮಂ ಪದಂ ॥ ೩೫ ॥

---

೩೨. ಈ ಏಳುಸಪ್ತಮಿಗಳ ಶ್ರೇಷ್ಠತೆಯನ್ನು ಸೂರ್ಯನೇ ಹೇಳಿದಾನೆ ಈ ಸಪ್ತಮಿಗಳನ್ನು ಭಕ್ತಿಯಿಂದ ಯಾವನು ಆಚರಿಸುವನೋ ಅವನು ಸಮಸ್ತ ಪಾಪಗಳಿಂದಲೂ ಮುಕ್ತನಾಗುತ್ತಾನೆ.

೩೩. ಈ ಸಪ್ತಮೀ ಸೂರ್ಯಪೂಜೆಯಲ್ಲಿ ಎಕ್ಕದೆಲೆಯ ದೊನ್ನೆಯನ್ನು ಪಯೋಗಿಸಿ ವ್ರತಮಾಡಿದವನಿಗೆ ದ್ರವ್ಯಪ್ರಾಪ್ತಿಯೂ, ಮರಿಚಗಳನ್ನು ಪಯೋಗಿಸಿ ವ್ರತಮಾಡಿದವನಿಗೆ ಪ್ರೀತಿಪಾತ್ರರೊಡಗೂಡುವಿಕೆಯೂ ಉಂಟಾಗುವುದು. ಬೇವಿನೆಲೆಗಳನ್ನು ಉಪಯೋಗಿಸಿ ವ್ರತಮಾಡಿದವನ ರೋಗಗಳೆಲ್ಲವೂ ನಾಶವಾಗುವುವು. ಫಲಗಳನ್ನು ಉಪಯೋಗಿಸಿದರೆ ಅಪೇಕ್ಷೆಪಟ್ಟಂಥ ಪುತ್ರರನ್ನು ಪಡೆಯುವನು. ಈ ಪ್ರಕಾರವಾಗಿ ಸೂರ್ಯಪ್ರೀತ್ಯರ್ಥವಾಗಿ ಧನ, ಧಾನ್ಯ, ಸುವರ್ಣ ಇವನ್ನೆಲ್ಲಾ ದಾನಮಾಡಬೇಕು.

೩೪ ಜಯಸಪ್ತಮೀವ್ರತವನ್ನು ಮಾಡಿದವನು ಸಮೃದ್ಧಿಯಾಗಿ ಸತ್ಫಲಗಳನ್ನು ಹೊಂದುವನು. ಕಾಮಿಕಾಸಪ್ತಮೀವ್ರತವನ್ನು ಆಚರಿಸುವುದರಿಂದ ತನ್ನ ಸರ್ವ ಇಷ್ಟಗಳನ್ನೂ ಹೊಂದುವುದರಲ್ಲಿ ಸಂಶಯವಿಲ್ಲ.

೩೫. ಅಯ್ಯಾ ಖಗನೇ! ಕೇಳು; ಹೆಂಗಸಾಗಲಿ, ಗಂಡಸಾಗಲಿ ಮೇಲೆಹೇಳಿದ ಪ್ರಕಾರ ಈ ಸಪ್ತಮೀವ್ರತವನ್ನು ಸಾಂಗವಾಗಿ ಮಾಡಿದರೆ ಅವರು ಪರಮಪದವನ್ನು ಹೊಂದುತ್ತಾರೆ.

**ನ ತೇಷಾಂ ತ್ರಿಷು ಲೋಕೇಷು ಕಿಂಚಿದಸ್ತೀತಿ ದುರ್ಲಭಂ ।**
**ಯೇ ಭಕ್ತ್ಯಾ ಲೋಕನಾಥಸ್ಯ ವ್ರತಿನಃ ಸಂಯತೇಂದ್ರಿಯಾಃ ॥ ೩೬ ॥**

**ಸರ್ವಯಜ್ಞಫಲಂ ತೇಷಾಂ ಯಥಾ ವೇದೋದಿತಂ ಭವೇತ್ ।**
**ಬ್ರಹ್ಮೇಂದ್ರವಿಷ್ಣವಸ್ತೇನ ಪೂಜಿತಾ ನಾತ್ರ ಸಂಶಯಃ ॥ ೩೭ ॥**

**ನಾಂಧೋ ನ ಕುಷ್ಠೀ ನ ಕ್ಲೀಬೋ ನ ವ್ಯಂಗೋ ನ ಚ ನಿರ್ಧನಃ ।**
**ಕದಾಪಿ ಚ ಭವೇತ್ಕಶ್ಚಿದ್ಯಶ್ಚರೇತ್ಸಪ್ತಮೀವ್ರತಂ ॥ ೩೮ ॥**

**ಪುತ್ರಾರ್ಥೀ ಶ್ರುತಿಸಂಪನ್ನಾಲ್ಲಭೇತ್ಪುತ್ರಾಂಶ್ಚಿರಾಯುಷಃ ।**
**ನ ತೇಷಾಂ ತ್ರಿಷು ಲೋಕೇಷು ಕಿಂಚಿದಸ್ತೀತಿ ದುರ್ಲಭಂ ॥**
**ಭೋಗಾರ್ಥೀ ಲಭತೇ ಭೋಗಾನ್ವ್ರತೇನಾನೇನ ಸುವ್ರತ ॥ ೩೯ ॥**

**ಕ್ರೋಧಾತ್ಪ್ರಮಾದಾಲ್ಲೋಭಾಚ್ಚ ವ್ರತಭಂಗೋ ಯದಾ ಭವೇತ್ ।**
**ಪ್ರಾಯಶ್ಚಿತ್ತಮಿದಂ ಕೃತ್ವಾ ಪುನರೇವ ವ್ರತೀ ಭವೇತ್ ॥ ೪೦ ॥**

---

೩೬. ಲೋಕೇಶನಾದ ಸೂರ್ಯನಲ್ಲಿ ಭಕ್ತಿಯಿಂದ ನಿಗ್ರಹೀತೇಂದ್ರಿಯರಾಗಿ ವ್ರತಾಚರಣಮಾಡಿದವರಿಗೆ ಮೂರುಲೋಕಗಳಲ್ಲಿ ದುರ್ಲಭವಾದುದು ಯಾವುದೂ ಇಲ್ಲ.

೩೭. ಅವರಿಗೆ ವೇದೋಕ್ತವಾದ ಸರ್ವಯಜ್ಞಗಳ ಫಲವೂ ಬರುವುದು. ಅವರು, ಬ್ರಹ್ಮ; ಇಂದ್ರ, ವಿಷ್ಣು ಇವರನ್ನೂ ಪೂಜಿಸಿದ ಹಾಗೆಯೇ ಆಯಿತು.

೩೮. ಸಪ್ತಮೀವ್ರತವನ್ನು ಆಚರಿಸುವವನಿಗೆ ಕುರುಡು, ಕುಷ್ಠರೋಗ, ನಪುಂಸಕತ್ವ, ವಿಕೃತಾಂಗತ್ವ, ನಿರ್ಧನತ್ವ ಮುಂತಾದುವು ಎಂದಿಗೂ ಸಂಭವಿಸುವುದಿಲ್ಲ.

೩೯. ವೇದಸಂಪನ್ನನಾದ ಸೂರ್ಯನ ಕೃಪೆಯೊದಗಿದರೆ ಪುತ್ರಾಪೇಕ್ಷೆಯುಳ್ಳವನು ದೀರ್ಘಾಯುಷ್ಮಂತರಾದ ಪುತ್ರರನ್ನು ಪಡೆಯುವನು ಅವರಿಗೆ ಮೂರುಲೋಕಗಳಲ್ಲೂ ದುರ್ಲಭವಾದುದೇ ಇಲ್ಲ. ಎಲೈ ಸುವ್ರತನೇ! ಕೇಳು; ಈ ವ್ರತ ಮಾಡುವುದರಿಂದ ಭೋಗಾರ್ಥಿಯು ಸಮಸ್ತಭೋಗಗಳನ್ನೂ ಹೊಂದುತ್ತಾನೆ.

೪೦. ಕ್ರೋಧದಿಂದಲೋ, ಮರವೆಯಿಂದಲೋ, ಲೋಭದಿಂದಲೋ ವ್ರತಾಚರಣೆಗೆ ಭಂಗಪ್ರಾಪ್ತಿಯಾದರೆ ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡು ಪುನಃ ವ್ರತವನ್ನು ಆಚರಿಸಬೇಕು.

ಸಪ್ತೈವ ಯಾವತ್ಸಪ್ತಮ್ಯಃ ಸಂಪ್ರಾಪ್ತಾ ಗುರುಣಾ ಖಗ ।
ತಾಸು ಭಾಸ್ಕರಮಭ್ಯರ್ಚ್ಯ ಮಾಲ್ಯಧೂಪಾದಿಭಿರ್ನರಃ ॥
ಭೋಜಯಿತ್ವಾ ದ್ವಿಜಾಂಛಕ್ತ್ಯಾ ಪ್ರಾಪ್ನುಯಾತ್ಸ್ವರ್ಗಮಕ್ಷಯಂ ॥ ೪೧ ॥

ಸಪ್ತಮ್ಯಾಂ ವಿಪ್ರಮುಖ್ಯೇಭ್ಯೋ ಯೋಽನ್ನಂ ದದ್ಯಾತ್ಖಗೇಶ್ವರ ।
ತದಕ್ಷಯಂ ಭವೇತ್ತಸ್ಯ ಸ ಚ ಸೂರ್ಯಗ್ರಹಂ ವ್ರಜೇತ್ ॥ ೪೨ ॥

ಇತಿ ತೇ ಕೀರ್ತಿತಂ ವೀರ ಸಪ್ತಮೀವ್ರತಮುತ್ತಮಂ ।
ಭೂಯಃ ವಿವಾಭಿಧಾಸ್ಯಾಮಿ ಶೃಣು ಮೇ ವದತೋಽನಘ ॥ ೪೩ ॥

ಯೇನ ವ್ರತಪ್ರಭಾವೇಣ ಕಾಮಿಕಂ ಫಲಮಶ್ನುತೇ ।
ಸಪ್ತಮೀಂ ಖಗಶಾರ್ದೂಲ ಶುಕ್ಲಾಂ ದ್ವಾದಶನಾಮಿಕಾಂ ॥ ೪೪ ॥

---

೪೧. ಎಲೈ ಖಗನೇ! ಕೇಳು ; ಉಕ್ತಲಕ್ಷಣವುಳ್ಳ ಏಳುಸಪ್ತಮಿಗಳು ಒದಗಿ ಬಂದ ಸಂದರ್ಭದಲ್ಲಿ ಆ ಸಪ್ತಮಿಗಳಲ್ಲಿ ಮಾಲ್ಯ, ಧೂಪ ಮೊದಲಾದುವುಗಳಿಂದ ಸೂರ್ಯನನ್ನು ಪೂಜಿಸಿ, ಬ್ರಾಹ್ಮಣರಿಗೆ ತನ್ನ ಶಕ್ತಿಗನುಸಾರವಾಗಿ ಭೋಜನಮಾಡಿಸಿದರೆ ಅಕ್ಷಯವಾದ ಸ್ವರ್ಗಲೋಕವನ್ನು ಹೊಂದುವನು.

೪೨. ಯಾವನು ಸಪ್ತಮಿಯ ದಿನದಲ್ಲಿ ಬ್ರಾಹ್ಮಣಶ್ರೇಷ್ಠರಿಗೆ ಅನ್ನದಾನ ಮಾಡುವನೋ, ಅವನಿಗೆ ಅದರ ಫಲವು ಅಕ್ಷಯವಾಗುವುದಲ್ಲದೆ; ಅವನು ಸೂರ್ಯಲೋಕವನ್ನು ತಲಪುತ್ತಾನೆ.

೪೩. ಎಲೈ ವೀರನೇ! ಕೇಳು ; ಹೀಗೆ ಉತ್ತಮವಾದ ಸಪ್ತಮೀವ್ರತವನ್ನು ನಿನಗೆ ಹೇಳಿದುದಾಯಿತು. ಎಲೈ ನಿರ್ದೋಷಿಯೇ! ಈಗ ಇನ್ನೊಂದು ಪ್ರಕಾರವಾದ ವ್ರತವನ್ನು ಹೇಳುವೆನು ಕೇಳು.

೪೪. ವ್ರತಿಗೆ ಇಚ್ಛಾನುಸಾರ ಫಲವನ್ನು ಕೊಡುವ ಮಹಿಮೆಯುಳ್ಳದಾಗಿ ನಾನಾಪ್ರಕಾರದ ಪ್ರಾಶನದ್ರವ್ಯವುಳ್ಳದೆನಿಸಿ ಅದಕ್ಕನುಸಾರ ಹನ್ನೆರಡು ಹೆಸರುಗಳುಳ್ಳ ಶುಕ್ಲಸಪ್ತಮಿ ವ್ರತಗಳಿವೆ, ಅವುಗಳನ್ನು ಆಚರಿಸಿದವನು ಕಾಮಿತವಾದ ಫಲವನ್ನು ಹೊಂದುತ್ತಾನೆ.

ಗೋಮೂತ್ರಗೋಮಯಾಹಾರಃ ಷಡ್ವ್ರತಾಹಾರ ಏವ ಚ ।
ಅಥವಾ ಯಾವಕಾಹಾರಃ ಶೀರ್ಣಪರ್ಣಾಶನೋಽಪಿ ವಾ ॥ ೪೫ ॥

ಕ್ಷೀರಾಶೀ ಚೈವ ಭಕ್ತಂ ವಾ ಸಿಕ್ಥಾಹಾರೋಽಥ ವಾ ಪುನಃ ।
ಜಲಾಹಾರೋಽಥ ವಾ ವಿದ್ವಾನ್ ಪೂಜಯೇತ ದಿವಾಕರಂ ॥ ೪೬ ॥

ಪುಷ್ಪೋಪಹಾರೈರ್ವಿವಿಧೈಃ ಪದ್ಮಸೌಗಂಧಿಕೋತ್ಪಲೈಃ ।
ನಾನಾಪ್ರಕಾರೈರ್ಗಂಧೈಶ್ಚ ಧೂಪೈರ್ಗುಗ್ಗುಲಚಂದನೈಃ ॥ ೪೭ ॥

ಕೃಶರೈಃ ಪಾಯಸಾನ್ನೈರ್ವಾ ಭಕ್ಷ್ಯೈಶ್ಚ ವಿವಿಧೈರಪಿ ।
ಅರ್ಚಯಿತ್ವಾ ದ್ವಿಜಶ್ರೇಷ್ಠ ರಮ್ಯವಸ್ತ್ರವಿಭೂಷಣೈಃ ॥ ೪೮ ॥

ಸರ್ವಪಕ್ಷಫಲಂ ಪ್ರಾಪ್ಯ ಸೂರ್ಯಲೋಕಂ ತತೋ ವ್ರಜೇತ್ ।
ತಪಸೋಽಂತೇ ತತೋ ವೀರ ಕುಲೇ ಮಹತಿ ಜಾಯತೇ ॥ ೪೯ ॥

ಯಥಾಕ್ರಮಂ ಪ್ರಯತ್ನೇನ ನಾಮಾನಿ ಪರಿಕೀರ್ತಯೇತ್ ।
ಮಾಘೇ ಚ ಫಾಲ್ಗುನೇ ಮಾಸಿ ಚೈತ್ರೇ ಚ ಗರುಡಾಗ್ರಜ ॥ ೫೦ ॥

---

೪೫-೪೬. ವಿದ್ವಾಂಸನಾದವನು ಮಾಸಾನುಕ್ರಮದಲ್ಲಿ ಗೋಮೂತ್ರ, ಗೋಮಯ, ಷಡ್ವ್ರತ, ಗಂಜಿ, ಯಾವಕಧಾನ್ಯ, ತರಗೆಲೆ, ಕ್ಷೀರ, ಅನ್ನದ ಅಗುಳು ಅಥವಾ ಜಲ ಇವುಗಳನ್ನು ಸಪ್ತಮಿಯಲ್ಲಿ ಸೇವನಮಾಡುತ್ತಾ ಸೂರ್ಯನನ್ನು ಪೂಜಿಸಬೇಕು.

೪೭. ಈ ವ್ರತದಲ್ಲಿ ತಾವರೆ, ಸೌಗಂಧಿಕ, ನೈದಿಲೆ ಎಂಬ ಬಗೆಬಗೆಯ ಪುಷ್ಪೋಪಹಾರಗಳನ್ನೂ ಗುಗ್ಗುಳು ಚಂದನ ಇವುಗಳ ಧೂಪಗಳನ್ನೂ ಸಮರ್ಪಿಸಬೇಕು.

೪೮. ಎಳ್ಳುಹುಡಿಯನ್ನ, ಹಾಲುಅನ್ನ, ನಾನಾವಿಧವಾದ ಭಕ್ಷ್ಯಗಳು ಇವುಗಳನ್ನು ನಿವೇದಿಸಿ ರಮ್ಯವಾದ ವಸ್ತ್ರಗಳು, ಆಭರಣಗಳು ಇವುಗಳಿಂದ ಪೂಜಿಸಿದರೆ, ಸರ್ವಪಕ್ಷಗಳಲ್ಲಿಯೂ ಪೂಜೆಮಾಡಿದ ಫಲವನ್ನು ಪಡೆದು ಸೂರ್ಯಲೋಕಕ್ಕೆ ಹೋಗುತ್ತಾನೆ.

೪೯-೫೧. ಅಯ್ಯಾ ವೀರನೇ ! ಕೇಳು ; ಅಲ್ಲಿ ಬಹುಕಾಲ ತಪಸ್ಸನ್ನಾಚರಿಸಿದ ಮೇಲೆ ಶ್ರೇಷ್ಠವಾದ ವಂಶದಲ್ಲಿ ಜನ್ಮವೆತ್ತುತ್ತಾನೆ. ಆ ವಂಶದಲ್ಲಿ ಹುಟ್ಟಿದಾಗಲೂ

ವೈಶಾಖೇತ್ವಥ ಜ್ಯೇಷ್ಠೇ ತು ಆಷಾಢೇ ಶ್ರಾವಣೇ ತಥಾ ।
ಮಾಸಿ ಭಾದ್ರಪದೇ ವೀರ ತಥಾಚಾಶ್ವಯುಜೇ ಖಗ ॥ ೫೦ ॥

ಮಾರ್ಗಶೀರ್ಷೇ ತಥಾ ಪೌಷ್ಯೇ ಪೂಜಯೇತ್ಸತತಂ ರವಿಂ ।
ವಿಭಾವಸುಂ ವಿವಸ್ವಂತಂ ಭಾಸ್ಕರಂ ಪಕ್ಷಿಸತ್ತಮ ॥ ೫೨ ॥

ವಿಕರ್ತನಂ ಪತಂಗಂ ಚ ಸಹಸ್ರಾಂಶುಂ ಖಗಾಧಿಪ ।
ಏತಾನಿ ದೇವನಾಮಾನಿ ಮಾಸೇಷ್ವೇತೇಷು ಕೀರ್ತಯೇತ್ ॥ ೫೩ ॥

ಪೂಜಯೇದ್ದೇವದೇವೇಶಂ ದೇವಾನಾಮಪಿ ದುರ್ಲಭಂ ।
ಏವಂ ಕ್ರಮೇಣ ತೀಕ್ಷ್ಣಾಂಶುಂ ನಾಮಭಿಃ ಪರಿಪೂಜಯೇತ್ ॥ ೫೪ ॥

ಇತ್ಯೇವಂ ತೇ ಸಮಾಖ್ಯಾತಂ ಮಯಾ ಗುಹ್ಯಮಿದಂ ಖಗ ।
ಅಭಕ್ತಾಯ ನ ದಾತವ್ಯಂ ನಾಶಿಷ್ಯಾಯ ಕಥಂಚನ ॥ ೫೫ ॥

ನ ಚ ಪಾಪಾದ್ವೃತೇ ವೀರ ದಾತವ್ಯಂ ವಿನತಾತ್ಮಜ ।
ವ್ಯಾಧೇಸ್ತು ನಾಶನಾರ್ಥಾಯ ದೇಯಂ ವಿಪ್ರಾಯ ಸುವ್ರತ ॥ ೫೬ ॥

---

ಅವನು ಪ್ರಯತ್ನದಿಂದ ಕ್ರಮವನ್ನು ಅನುಸರಿಸಿ ಸೂರ್ಯನಾಮವನ್ನು ಕೀರ್ತಿಸಬೇಕು. ಅಯ್ಯಾ ಗರುಡನ ಸಹೋದರನೇ ! ಕೇಳು ; ಮಾಘ, ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಮಾರ್ಗಶಿರ, ಪುಷ್ಯ ಈ ತಿಂಗಳುಗಳಲ್ಲಿಯೂ ಪ್ರಯತ್ನಪಟ್ಟು ಜ್ಞಾಪಕವಿಟ್ಟುಕೊಂಡು

೫೨–೫೫. ದೇವತೆಗಳಿಗೆ ದುರ್ಲಭನೂ, ದೇವದೇವೇಶನೂ ಆದ ಸೂರ್ಯನನ್ನು ವಿಭಾವಸು, ವಿವಸ್ವಾನ್, ಮೊದಲಿನ ಆರುತಿಂಗಳುಗಳಲ್ಲಿ ಅನುಕ್ರಮವಾಗಿ ಭಾಸ್ಕರ, ವಿಕರ್ತನ, ಪತಂಗ, ಸಹಸ್ರಾಂಶು ಈ ಹೆಸರುಗಳಿಂದ ಪೂಜಿಸಬೇಕು. ಉಳಿದ ಆರುತಿಂಗಳಲ್ಲಿ ತೀಕ್ಷ್ಣಾಂಶುವಾದ ಸೂರ್ಯನನ್ನು ಇದೇ ನಾಮದಿಂದ ಇದೇ ಕ್ರಮದಲ್ಲಿ ಪೂಜಿಸಬೇಕು. ಅಯ್ಯಾ ಖಗನೇ ! ರಹಸ್ಯವಾದ ಈ ವಿಚಾರವನ್ನು ನಾನು ನಿನಗೆ ಹೇಳಿದ್ದೇನೆ. ಇದನ್ನು ಭಕ್ತನಲ್ಲದವನಿಗೂ, ಶಿಷ್ಯನಲ್ಲದವನಿಗೂ ಯಾವ ಕಾರಣದಿಂದ ತಿಳಿಸಬಾರದು.

೫೬–೫೭. ಎಲೈ ಸುವ್ರತನಾದ ವೈನತೇಯನೇ ! ಕೇಳು ; ಪಾಪಮಾಡಿದವನಿಗೂ ಇದನ್ನು ತಿಳಿಸಬಾರದು. ವ್ಯಾಧಿಪರಿಹಾರವಾಗುವ ಉದ್ದೇಶಾರ್ಥವಾಗಿ ಇದನ್ನು

**ದತ್ವಾ ಸ್ವರ್ಗಮವಾಪ್ನೋತಿ ಶ್ರುತ್ವಾ ಚ ವಿಧಿವತ್ಖಗ　　　　॥ ೫೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ನಾಮ ಪೂಜಾವಿಧಿವರ್ಣನಂ ನಾಮ ಷಣ್ಣವತ್ಯಧಿಕ ಶತತಮೋsಧ್ಯಾಯಃ.**



---

ಬ್ರಾಹ್ಮಣನಾದವನಿಗೆ ತಿಳಿಸಿಕೊಡಬಹುದು. ವಿಧಿಪ್ರಕಾರ ಈ ವ್ರತೋಪದೇಶ ಮಾಡಿದರೆ ಸ್ವರ್ಗವನ್ನು ಹೊಂದುತ್ತಾರೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ನಾಮಪೂಜಾವಿಧಿ ವರ್ಣನೆಯೆಂಬ ನೂರತೊಂಭತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತನವತ್ಯಧಿಕಶತತಮೋಽಧ್ಯಾಯಃ

॥ ಸಪ್ತಾಶ್ವತಿಲಕ ಉವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ಪುಷ್ಪಧೂಪೇಷು ಕಾಮದಂ ।
ಯೇನ ಯೇನ ತು ದಾನೇನ ಯದ್ಯತ್ಫಲಮವಾಪ್ನುಯಾತ್ ॥ ೧ ॥

ಮಾಲತೀಕುಸುಮೈಃ ಪೂಜಾ ಭವೇತ್ಸಾನ್ನಿಧ್ಯಕಾರಿಕಾ ।
ಆರೋಗ್ಯಂ ಕರವೀರೈಸ್ತು ಭವತ್ಯರ್ಥಶ್ಚ ಶಾಶ್ವತಃ ॥ ೨ ॥

ಐಶ್ವರ್ಯಮತುಲಂ ಚೈವ ಯಶಶ್ಚ ವಿಪುಲಂ ತಥಾ ।
ಮಲ್ಲಿಕಾಯಾಶ್ಚ ಕುಸುಮೈರ್ಭಗವನ್ಮುಖತಾ ಭವೇತ್ ॥ ೩ ॥

---

## ನೂರತೊಂಭತ್ತೇಳನೆಯ ಅಧ್ಯಾಯ

೧. ಸಪ್ತಾಶ್ವತಿಲಕನು ಅರುಣನಿಗೆ ಹೇಳುತ್ತಾನೆ–ಪುಷ್ಪಧೂಪಾದಿಗಳಲ್ಲಿಯೂ ನಾನಾ ಇಷ್ಟಾರ್ಥಪ್ರದವಾದುವುಗಳಿವೆಯಷ್ಟೆ. ಅವುಗಳಲ್ಲಿ ಯಾವುಯಾವುದನ್ನು ರ್ಪಿಸಿ ಪೂಜೆಮಾಡುವುದರಿಂದ ಏನೇನು ಫಲವನ್ನು ಹೊಂದುವನೆಂಬುದನ್ನು ಇನ್ನು ಸಮ ಮುಂದೆ ಹೇಳುತ್ತೇನೆ.

೨. ಮಾಲತೀಪುಷ್ಪವನ್ನು ಪೂಜೆಮಾಡುವುದರಿಂದ ಆವಾಹಿತಮೂರ್ತಿಯಲ್ಲಿ ಸೂರ್ಯಸಾನ್ನಿಧ್ಯವುಂಟಾಗುವುದು. ಕಣಿಗಲೆಯ ಹೂವನ್ನು ಅರ್ಚಿಸುವುದರಿಂದ ಪ್ರತಿಗೆ ಆರೋಗ್ಯಲಾಭವೂ, ಶಾಶ್ವತವಾದ ದ್ರವ್ಯಲಾಭವೂ ಉಂಟಾಗುತ್ತದೆ.

೩. ಮಲ್ಲಿಗೆಯಹೂವನ್ನು ಪೂಜಿಸುವುದರಿಂದ ಅಸದೃಶವಾದ ಐಶ್ವರ್ಯ ಲಭಿಸುವುದು, ಅಲ್ಲದೆ ಸಮೃದ್ಧವಾದ ಯಶಸ್ಸೂ. ಭಗವಂತನ ಪ್ರಸನ್ನತೆಯೂ ಉಂಟಾಗುವುದು.

ಸೌಭಾಗ್ಯಂ ಪುಂಡರೀಕೈಸ್ತು ಪರಮೈಶ್ವರ್ಯಮಾಪ್ನುಯಾತ್ ।
ಕಮಲೋತ್ಪಲಕುಂದೈಸ್ತು ಯಶೋವಿದ್ಯಾಬಲಂ ಭವೇತ್ ॥ ೪ ॥

ನಾನಾವಿಧೈಃ ಸುಕುಸುಮೈಃ ಕ್ಷಿಪ್ರಂ ರೋಗಾತ್ಪ್ರಮುಚ್ಯತೇ ।
ಭವತ್ಯಕ್ಷಯಮನ್ನಂ ಚ ನಿತ್ಯಮರ್ಚಯತೋ ರವಿಂ ॥ ೫ ॥

ಮಂದಾರಕುಸುಮೈಃ ಪೂಜಾ ಸರ್ವಕುಷ್ಠನಿವಾರಿಣೀ ।
ಬಿಲ್ವಸ್ಯಪತ್ರಕುಸುಮೈರ್ಮಹತೀಂ ಶ್ರಿಯಮಾಪ್ನುಯಾತ್ ॥ ೬ ॥

ಅರ್ಕಸ್ರಜಾ ಭವತ್ಸರ್ಕಃ ಸರ್ವದಾ ವರದಃ ಪ್ರಭುಃ ।
ಪ್ರದದ್ಯಾದ್ರೂಪಿಣೀಂ ಕನ್ಯಾಮರ್ಚಿತೋ ಬಕುಲಸ್ರಜಾ ॥ ೭ ॥

ಕಿಂಶುಕೈಃ ಪೂಜಿತೋ ದೇವೋ ನ ಪೀಡಯತಿ ಭಾಸ್ಕರಃ ।
ಅಗಸ್ತ್ಯಕುಸುಮೈಃ ಸಿದ್ಧಿಂ ಸಾನುಕೂಲಾಂ ಪ್ರಯಚ್ಛತಿ ॥ ೮ ॥

---

೪. ಬಿಳಿದಾವರೆಯ ಪುಷ್ಪಗಳ ಅರ್ಚನೆಯಿಂದ ಶುಭಪರಂಪರೆಯನ್ನೂ, ಮಹದೈಶ್ವರ್ಯವನ್ನೂ ಹೊಂದುವನು. ಕಮಲ, ನೈದಿಲೆ, ಮಲ್ಲಿ ಈ ಹೂವುಗಳಿಂದ ಪೂಜಿಸಿದರೆ ಯಶಸ್ಸು, ವಿದ್ಯಾ, ಬಲ ಇವು ಉಂಟಾಗುವುವು.

೫. ವ್ಯಾಧಿಪೀಡಿತನು ಬಗೆಬಗೆಯಾದ ಒಳ್ಳೆಯ ಹೂಗಳನ್ನು ಪೂಜಿಸಿದರೆ ಜಾಗ್ರತೆಯಾಗಿ ರೋಗದಿಂದ ಮುಕ್ತನಾಗುತ್ತಾನೆ. ನಿತ್ಯವೂ ತಪ್ಪದೆ ಸೂರ್ಯನನ್ನು ಪೂಜಿಸುವವನಿಗೆ ಎಂದೂ ಮುಗಿಯದಷ್ಟು ಅನ್ನಸಮೃದ್ಧಿಯುಂಟಾಗುವುದು.

೬. ಮಂದಾರಪುಷ್ಪದಿಂದ ಪೂಜಿಸಿದರೆ ಸಮಸ್ತ ಕುಷ್ಠರೋಗಗಳೂ ನಿವಾರಣವಾಗುವುವು ಬಿಲ್ವಪತ್ರಗಳಿಂದಲೂ, ಬಿಲ್ವಪುಷ್ಪಗಳಿಂದಲೂ ಪೂಜಿಸಿದರೆ ಹೆಚ್ಚಾದ ಸಂಪತ್ತು ಲಭಿಸುವುದು.

೭. ಎಕ್ಕದಹೂವಿನ ಮಾಲಿಕೆಯನ್ನು ಸಮರ್ಪಿಸುವುದರಿಂದ ಪ್ರಭುವಾದ ಸೂರ್ಯನು ಸರ್ವದಾ ವರಪ್ರದನಾಗಿರುತ್ತಾನೆ. ಬಕುಳಪುಷ್ಪಮಾಲಿಕೆಯಿಂದ ಪೂಜೆ ಮಾಡಿದವನಿಗೆ ದೇವರು ರೂಪವತಿಯಾದ ಕನ್ಯೆಯನ್ನು ದೊರಕಿಸುತ್ತಾನೆ.

೮. ಕಿಂಶುಕ (ಮುಳ್ಳುಮುತ್ತಗ) ಪುಷ್ಪದಿಂದ ಪೂಜಿಸಿದವನಿಗೆ ಸೂರ್ಯನಿಂದ ಉಂಟಾಗಬಹುದಾದ ಯಾವ ಪೀಡೆಯೂ ಸಂಭವಿಸುವುದಿಲ್ಲ. ಅಗಸೆಯ ಹೂವಿನಿಂದ ಪೂಜೆಮಾಡಿದವನಿಗೆ ಅನುಕೂಲಸಹಿತವಾಗಿ ಕಾರ್ಯಸಿದ್ಧಿಯಾಗುವುದು.

ಭಾರ್ಯಾಂ ರೂಪವತೀಂ ದದ್ಯಾತ್ಪೂಜಿತಃ ಪುಷ್ಪಮಾಲಯಾ ।
ನಿರುದ್ವೇಗೋ ಭವೇನ್ನಿತ್ಯಂ ಪೂಜಿತಶ್ಚಂಪಕಸ್ರಜಾ ॥ ೯ ॥

ಅಶೋಕಕುಸುಮೈರ್ದೇವಮರ್ಚಯೇದ್ಯೋ ದಿವಾಕರಂ ।
ಆಮ್ರಾತಕಸ್ಯ ಕುಸುಮಂ ನಿರ್ಮಾಲ್ಯಮಿವ ದೃಶ್ಯತೇ ॥ ೧೦ ॥

ಅಪ್ರತ್ಯಗ್ರಂ ಬಹಿರ್ಯಸ್ಮಾತ್ತಸ್ಮಾತ್ತತ್ಪರಿವರ್ಜಯೇತ್ ।
ನವಭಿಸ್ತ್ವಚಲಾಂ ಕೀರ್ತಿಂ ದಶಭಿಃ ಸುಖಮುತ್ತಮಂ ॥ ೧೧ ॥

ಭೋಗಾಂಸ್ತಥೈಕಾದಶಭಿಃ ಪ್ರಾಪ್ನುಯಾನ್ನಾತ್ರ ಸಂಶಯಃ ।
ರಾಜ್ಯಂ ಸ್ಥಿರಂ ದ್ವಾದಶಭಿಃ ದ್ವಾದಶಾಖ್ಯಮವಾಪ್ನುಯಾತ್ ॥ ೧೨ ॥

ಪ್ರಥಮಂ ಪೂಜಯೇದ್ಭಕ್ತ್ಯಾ ಭೂರೂಪಂ ಪ್ರಣಮೇತ್ಸದಾ ।
ಭುವರ್ನಾಮೋ ದ್ವಿತೀಯಂ ಚ ತೃತೀಯಂ ಸ್ವರ್ನಾಮೋನ್ನರಃ ॥ ೧೩ ॥

---

೯. ಸಂಪಗೆಯ ಹೂವಿನ ಮಾಲಿಕೆಯನ್ನು ಪೂಜೆಮಾಡಿದವನಿಗೆ ರೂಪವತಿಯಾದ ಹೆಂಡತಿಯು ಲಭಿಸುತ್ತಾಳೆ. ಅಶೋಕಪುಷ್ಪಗಳ ಮಾಲಿಕೆಯಿಂದ ಸೂರ್ಯದೇವನನ್ನು ಪೂಜೆಮಾಡಿದವನು ಯಾವಾಗಲೂ ಮನಸ್ಸಿಗೆ ಗಾಬರಿಯಿಲ್ಲದೆ ಶಾಂತನಾಗಿರುತ್ತಾನೆ.

೧೦. ಅಮಟೆಯಹೂವು, ಹೊಸ ಹೂವಾದರೂ, ನಿರ್ಮಾಲ್ಯಪುಷ್ಪದಂತೆ ನೋಡುವುದಕ್ಕೆ ಹಳಸಲಾಗಿ ಕಾಣುವುದು. ಆದುದರಿಂದ ಅದನ್ನು ಪೂಜೆಗೆ ವರ್ಜ್ಯ ಮಾಡಬೇಕು.

೧೧-೧೨. ಒಂಭತ್ತು ಹೂಗಳನ್ನು ಕಟ್ಟಿದ ಗೊಂಚಲನ್ನು ಪೂಜಿಸಿದರೆ ಸ್ಥಿರವಾದ ಕೀರ್ತಿಯನ್ನು ಪಡೆಯುವನು. ಹತ್ತುಹೂಗಳ ಗೊಂಚಲನ್ನು ಪೂಜಿಸಿದರೆ ಉತ್ತಮವಾದ ಸುಖವುಂಟಾಗುವುದು. ಹನ್ನೊಂದುಹೂಗಳ ಗೊಂಚಲನ್ನು ಪೂಜಿಸಿದವನಿಗೆ ಅನೇಕ ಸೌಖ್ಯಗಳು ಲಭಿಸುವುವು. ಹನ್ನೆರಡುಹೆಸರುಗಳುಳ್ಳ ಸೂರ್ಯನನ್ನು ಹನ್ನೆರಡು ಹೂಗಳಿಂದ ಪೂಜಿಸಿದರೆ ಸ್ಥಿರವಾದ ರಾಜ್ಯಪದವಿಯನ್ನು ಹೊಂದುವನು.

೧೩. ಮಾನವನು ಹೀಗೆ ಭೂ ಎಂಬ ಸೂರ್ಯನ ಪ್ರಥಮರೂಪವನ್ನು ಭಕ್ತಿಯಿಂದ ಪೂಜಿಸಿ ನಮಸ್ಕಾರಮಾಡಬೇಕು. ಭುವಃ ಎಂಬುದು ಎರಡ

**ಮಹೋನಮಶ್ಚತುರ್ಥಂ ತು ಪಂಚಮಂ ತು ಜನೋನಮಃ ।**
**ತಪೋ ನಮಸ್ತಥಾ ಷಷ್ಠಂ ನಮಃ ಸತ್ಯಂ ತು ಸಪ್ತಮಂ ॥ ೧೪ ॥**

**ಅಷ್ಟಮಂ ಭೂರ್ಭುವಶ್ಚೇತಿ ನವಮಂ ಖಗಸತ್ತಮ ।**
**ದಶಮಂ ಸ್ವರತೋ ವೀರ ನಮೋಲ್ಕಾಯ ತಥಾ ಪರಂ ॥ ೧೫ ॥**

**ದ್ವಾದಶಂ ತು ಖಷೋಲ್ಕೇತಿ ಓಂ ನಮಃ ಪೂಜಯೇತ್ಖಗ ।**
**ಏವಂ ಮಂಡಲಕಾರೀ ತು ಕ್ರಮಾದೇವಂ ಫಲಂ ಲಭೇತ್ ॥ ೧೬ ॥**

**ಘೃತದೀಪಪ್ರದಾನೇನ ಚಕ್ಷುಷ್ಮಾನ್ ಜಾಯತೇ ನರಃ ।**
**ಕಟುತ್ತೈಲಸ್ಯ ದೀಪೇನ ಶತ್ರೂಣಾಂ ಸಂಕ್ಷಯೋ ಭವೇತ್ ॥**
**ಮಧೂಕಾನಾಂ ತು ತೈಲೇನ ಸೌಭಾಗ್ಯಂ ಪರಮಂ ಲಭೇತ್ ॥ ೧೭ ॥**

---

ನೆಯರೂಪ ಎಂಬದಾಗಿ ನಮಿಸಬೇಕು. ಮೂರನೆಯದನ್ನು ಸ್ವರ್ನಮಃ ಎಂದೂ ಹೇಳಿ ನಮಸ್ಕಾರಮಾಡಬೇಕು.

೧೪. ನಾಲ್ಕನೆಯದನ್ನು ಮಹೋನಮಃ ಎಂದೂ, ಐದನೆಯದನ್ನು ಜನೋ ನಮಃ ಎಂದೂ, ಆರನೆಯದನ್ನು ತಪೋನಮಃ ಎಂದೂ, ಏಳನೆಯದನ್ನು ಸತ್ಯಂ ನಮಃ ಎಂದೂ ಹೇಳಿ ನಮಿಸಬೇಕು.

೧೫. ಎಂಟನೆಯದನ್ನು ಭೂರ್ಭುವೋ ನಮಃ ಎಂದೂ, ಒಂಭತ್ತನೆಯದನ್ನು ಭುವಸ್ಸುವರ್ನಮಃ ಎಂದೂ, ಹತ್ತನೆಯದನ್ನು ಭೂರ್ಭುವಸ್ಸುವರ್ನಮಃ ಎಂದೂ, ಹನ್ನೊಂದನೆಯದನ್ನು ನಮೋಲ್ಕಾಯ ಎಂದೂ ಹೇಳಿ ನಮಿಸಬೇಕು.

೧೬. ಹನ್ನೆರಡನೆಯದನ್ನು ಓಂ ಖಷೋಲ್ಕಾಯನಮಃ ಎಂದೂ, ಈಪ್ರಕಾರ ಹನ್ನೆರಡು ನಾಮಗಳಿಂದ ಪೂಜಿಸಿ ನಮಸ್ಕರಿಸಬೇಕು. ಹೀಗೆ ಕ್ರಮವಾಗಿ ಒಂದು ಮಂಡಲಕಾಲ ಈ ವ್ರತವನ್ನು ಕ್ರಮವಾಗಿ ಮಾಡಿದವನು ಯಥೋಕ್ತವಾದ ಫಲ ವನ್ನು ಹೊಂದುವನು.

೧೭-೧೮. ಮನುಷ್ಯನು ದೇವರಸಾನ್ನಿಧ್ಯದಲ್ಲಿ ತುಪ್ಪದದೀಪವನ್ನು ಹಚ್ಚು ವುದರಿಂದ ಆತನ ನೇತ್ರಶಕ್ತಿ ವೃದ್ಧಿಯಾಗುವುದು. ಕಹಿಎಣ್ಣೆಯ ದೀಪವನ್ನು ಹಚ್ಚಿ ಸುವುದರಿಂದ ಶತ್ರುನಾಶವುಂಟಾಗುತ್ತದೆ. ಹಿಪ್ಪೆಎಣ್ಣೆಯ ದೀಪಹಚ್ಚಿಸಿದರೆ ಮಹಾ ಸೌಭಾಗ್ಯಪ್ರಾಪ್ತಿಯಾಗುತ್ತದೆ. ಪುಷ್ಪ, ಧೂಪ ಮೊದಲಾದುವುಗಳಿಂದ ವಿಧಿಪ್ರಕಾರ

ಸಂಪೂಜ್ಯ ವಿಧಿವದ್ದೇವಂ ಪುಷ್ಪಧೂಪಾದಿಭಿರ್ನರಃ ।
ಯಥಾಶಕ್ತಿ ತತಃ ಪಶ್ಚಾನ್ನೈವೇದ್ಯಂ ತು ಪ್ರಕಲ್ಪಯೇತ್ ॥ ೧೮ ॥

ಪುಷ್ಪಾಣಾಂ ಪ್ರವರಾ ಜಾತೀ ಧೂಪಾನಾಂ ಚೈವ ಚಂದನಂ ।
ಗಂಧಾನಾಂ ಕುಂಕುಮಂ ಶ್ರೇಷ್ಠಂ ಮೋದಕಾಶ್ಚ ನಿವೇದನೇ ॥ ೧೯ ॥

ಏತೈಸ್ತುಷ್ಯತಿ ದೇವೇಶಃ ಸಾನ್ನಿಧ್ಯಂ ಚಾಧಿಗಚ್ಛತಿ ।
ದದಾತಿ ಪ್ರವರಾನಿಷ್ಟಾರ್ಥ ದಾತುಶ್ಚ ಸ್ವರ್ಗತಿಂ ತಥಾ ॥ ೨೦ ॥

ಏವಂ ಸಂಪೂಜ್ಯ ವಿಧಿವತ್ಕೃತ್ವಾ ಚಾಪಿ ಪ್ರದಕ್ಷಿಣಂ ।
ಪ್ರಣಮ್ಯ ಶಿರಸಾ ದೇವಂ ಭಾಸ್ಕರಂ ತಿಮಿರಾಪಹಂ ॥
ಆರುಹ್ಯ ಸುವಿಮಾನಂ ಸ ಯಾತಿ ಭಾನೋಃ ಸಲೋಕತಾಂ ॥ ೨೧ ॥

ಪುನಃ ಸಂಪೂಜ್ಯ ದೇವೇಶಂ ಜಪಂ ಕುರ್ಯಾದ್ಯಥೇಷ್ಟಕಂ ।
ಹುತಾಶನೇ ಚ ಜುಹುಯಾದ್ವಿಧಿದೃಷ್ಟೇನ ಕರ್ಮಣಾ ॥
ಏವಮೇಕೈಕಶಃ ಕಾರ್ಯಾಃ ಸಪ್ತಮ್ಯಃ ಸಪ್ತ ಸರ್ವದಾ ॥ ೨೨ ॥

---

ದೇವನನ್ನು ಪೂಜಿಸಿ ಅನಂತರ ತನ್ನ ಶಕ್ತ್ಯನುಸಾರ ನೈವೇದ್ಯವಸ್ತುಗಳನ್ನು ಸಮರ್ಪಿಸಬೇಕು.

೧೯. ಜಾಜಿಯುಹೂ, ಮಿಕ್ಕ ಪುಷ್ಪಗಳಿಗಿಂತ ಶ್ರೇಷ್ಠವಾದುದು. ಧೂಪಗಳಲ್ಲಿ ಚಂದನಧೂಪವು ಶ್ರೇಷ್ಠ. ವಿಲೇಪನಗಳಲ್ಲಿ ಕೇಸರಿಯ ವಿಲೇಪನವು ಶ್ರೇಷ್ಠ. ನೈವೇದ್ಯವಸ್ತುಗಳಲ್ಲಿ ಮೋದಕವು ಉತ್ತಮವಾದುದು.

೨೦. ಇವುಗಳಿಂದ ದೇವೇಶನಾದ ಸೂರ್ಯನು ತೃಪ್ತನಾಗಿ ಮೂರ್ತಿಯಲ್ಲಿ ಸನ್ನಿಹಿತನಾಗುತ್ತಾನೆ. ಸೂರ್ಯಪ್ರೀತ್ಯರ್ಥವಾಗಿ ದಾನಮಾಡಿದವನಿಗೆ ಶ್ರೇಷ್ಠವಾದ ಇಷ್ಟಾರ್ಥಗಳನ್ನೂ, ಸ್ವರ್ಗಲೋಕವಾಸವನ್ನೂ ಕರುಣಿಸುತ್ತಾನೆ.

೨೧-೨೨. ಹೀಗೆ ಅಂಧಕಾರನಾಶಕನಾದ ಸೂರ್ಯನನ್ನು ಶಾಸ್ತ್ರಾನುಸಾರ ಪೂಜಿಸಿ, ಪ್ರದಕ್ಷಿಣೆಯನ್ನುಮಾಡಿ ನಮಸ್ಕಾರಮಾಡಿದರೆ, ಹಾಗೆ ಆಚರಿಸಿದವನು ಒಳ್ಳೆಯ ವಿಮಾನವನ್ನೇರಿ ಸೂರ್ಯಲೋಕಕ್ಕೆ ಹೋಗುತ್ತಾನೆ. ಆದುದರಿಂದ ದೇವೇಶನನ್ನು ಚೆನ್ನಾಗಿ ಪೂಜಿಸಿ ಇಚ್ಛಾನುಸಾರ ಜಪಮಾಡಬೇಕು. ಈ ಕರ್ಮಗಳನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಆಚರಿಸಿ ಅಗ್ನಿಯಲ್ಲಿ ಹೋಮಮಾಡಬೇಕು.

**ಉದಕಪ್ರಸೃತಿಂ ಪೀತ್ವಾ ಕ್ರಿಯತೇ ಯಾ ತು ಸಪ್ತಮೀ ।**
**ಸಾ ಜ್ಞೇಯಾ ಸುಖದಾ ವೀರ ಸದೈವೋದಕಸಪ್ತಮೀ ॥ ೨೩ ॥**

**ಯಾ ಕಾಚಿತ್ಸಪ್ತಮೀ ನೋಕ್ತಾ ತಾಂ ತೇ ವಕ್ಷ್ಯಾಮಿ ಖೇಚರ ।**
**ವರಾಟಿಕಾ ಕ್ರಮೇಣಾಪ್ತಂ ಯತ್ಕಿಂಚಿತ್ಪ್ರತಿಭಕ್ಷಯೇತ್ ॥ ೨೪ ॥**

**ಅನೇನ ದೇಯಮೂಲ್ಯೇನ ಯಲ್ಲಬ್ಧಂ ತತ್ಪ್ರಭಕ್ಷಯೇತ್ ।**
**ಅಭಕ್ಷ್ಯಂ ಚಾಪಿ ಭಕ್ಷ್ಯಂ ವಾ ನಾತ್ರ ಕಾರ್ಯಾ ವಿಚಾರಣಾ ॥ ೨೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇಷು ವರಾಟಿಕಾ ವರ್ಣನಂ ನಾಮ ಸಪ್ತನವತ್ಯಧಿಕ ಶತತಮೋಽಧ್ಯಾಯಃ.**



---

೨೩-೨೫. ಹೀಗೆ ಏಳು ಸಪ್ತಮಿಗಳನ್ನೂ ಕ್ರಮವಾಗಿ ಒಂದೊಂದರಂತೆ ಸರ್ವದಾ ಆಚರಿಸಬೇಕು. ಒಂದು ಶೇರೆ ನೀರನ್ನು ಮಾತ್ರ ಕುಡಿದು ಸಪ್ತಮೀವ್ರತಾ ಚರಣಮಾಡಿದರೆ ಅದನ್ನು ಉದಕಸಪ್ತಮೀ ಎಂದು ಹೇಳುವರು. ಈ ವ್ರತವು ಸುಖ ಪ್ರದವಾದುದು. ಇದುವರೆಗೂ ನಿನಗೆ ಹೇಳದೆ ಇರುವ ಇನ್ನೊಂದು ಸಪ್ತಮೀವ್ರತ ವನ್ನು ಈಗ ಹೇಳುತ್ತೇನೆ. ಒಂದೊಂದು ಕವಡೆಯ ಪ್ರಕಾರವಾದರೂ (ಎಂದರೆ ಪುಡಿ ಕಾಸುಗಳೆಂದು ಅಲಕ್ಷ್ಯಮಾಡದೆ) ದೊರೆತದ್ದಷ್ಟನ್ನೇ ಕೂಡಿಹಾಕಿ ಆ ಮೂಲ್ಯದಿಂದ ಅಭಕ್ಷ್ಯವೋ, ಭಕ್ಷ್ಯವೋ ಯಾವುದು ದೊರೆಯುತ್ತದೋ ಅದನ್ನು ಸಪ್ತಮೀದಿನ ಸೇವಿಸಬೇಕು. ಈ ಸಂದರ್ಭದಲ್ಲಿ ವಿಚಾರಮಾಡಬೇಕಾದುದೇ ಇಲ್ಲ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೌರಧರ್ಮದಲ್ಲಿ ವರಾಟಿಕಾ (ಕವಡೆಯ) ವರ್ಣನವೆಂಬ ನೂರತೊಂಭತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಅಷ್ಟನವತ್ಯಧಿಕಶತತಮೋಽಧ್ಯಾಯಃ

॥ ಶತಾನೀಕ ಉವಾಚ ॥

**ಕಿಮೇಕಂ ದೈವತಂ ಲೋಕೇ ಕಿಂವಾಪ್ಯೇಕಂ ಪರಾಯಣಂ ।**
**ಸ್ತುವಂತಃ ಕಂ ಕಮರ್ಚಂತಃ ಪ್ರಾಪ್ನುಯುರ್ಮಾನವಾಃ ಶುಭಂ ॥ ೧ ॥**

**ಕೋ ಧರ್ಮಃ ಸರ್ವಧರ್ಮಾಣಾಂ ಕಶ್ಚ ಪೂಜ್ಯೋ ಮತಸ್ತವ ।**
**ಬ್ರಹ್ಮಾದಯಃ ಕಮರ್ಚಂತಿ ಕಶ್ಚಾದಿಸ್ತ್ರಿದಿವೌಕಸಾಂ ॥ ೨ ॥**

---

## ನೂರತೊಂಭತ್ತೆಂಟನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು ಸ್ವಾಮೀ ! ಲೋಕದಲ್ಲಿ ಮುಖ್ಯನಾದ ದೇವರು ಯಾರು? ಮತ್ತು ನಾವು ಹೊಂದಬೇಕಾದ ಉತ್ತಮವಾದ ಗತಿ ಯಾವುದು ? ಯಾರನ್ನು ಪೂಜಿಸಿ ಸ್ತುತಿಸಿದರೆ ಮನುಷ್ಯರಿಗೆ ಶುಭ ಪ್ರಾಪ್ತಿಯಾಗುವುದು.

೨. ಸರ್ವಧರ್ಮಗಳಲ್ಲಿ ಯಾವ ಧರ್ಮವು ಉತ್ತಮ ? ಯಾವುದು ಪೂಜ್ಯವೆಂದು ನಿನ್ನ ಮತ ? ಬ್ರಹ್ಮಾದಿಗಳೂ ಯಾರನ್ನು ಪೂಜಿಸುತ್ತಾರೆ ? ದೇವತೆಗಳಲ್ಲಿ ಮೊದಲಿಗನು ಯಾರು ? ಎಂದು ಕೇಳಿದನು.

॥ ಸುಮಂತುರುವಾಚ ॥

ಅತ್ರಾಹಂ ತೇ ಪ್ರವಕ್ಷ್ಯಾಮಿ ಸಂವಾದಂ ಪಾಪನಾಶನಂ ।
ಭೀಷ್ಮಸ್ಯ ನರಶಾರ್ದೂಲ ವ್ಯಾಸಸ್ಯ ಚ ಮಹಾತ್ಮನಃ ॥ ೩ ॥

ಸುಖಾಸೀನಂ ಮಹಾವ್ಯಾಸಂ ಗಂಗಾಕೂಲೇ ದ್ವಿಜೋತ್ತಮಂ ।
ತಂ ದೃಷ್ಟ್ವಾ ಸುಮಹಾತೇಜಂ ಜ್ವಲಂತಮಿವ ಪಾವಕಂ ॥ ೪ ॥

ಸಾಕ್ಷಾನ್ನಾರಾಯಣಂ ದೇವಂ ತೇಜಸಾದಿತ್ಯಸನ್ನಿಭಂ ।
ಪ್ರಣಮ್ಯ ಶಿರಸಾ ವೀರ ಸರ್ವಶಾಸ್ತ್ರಾಲಯಂ ಪರಂ ॥ ೫ ॥

ಮಹಾಭಾರತಕರ್ತಾರಂ ವೇದಾರ್ಥನಿಕಷಂ ಪರಂ ।
ಆಚಾರ್ಯಂ ಪರಮರ್ಷೀಣಾಂ ರಾಜರ್ಷೀಣಾಂ ಚ ಭಾರತ ॥ ೬ ॥

ಕರ್ತಾರಂ ಕುರುವಂಶಸ್ಯ ದೈವತಂ ಪರಮಂ ಮಮ ।
ಪಪ್ರಚ್ಛ ಕುರುಶಾರ್ದೂಲೋ ದ್ವಿಜಭಕ್ತ್ಯಾ ಸಮನ್ವಿತಃ ॥ ೭ ॥

---

೩. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಮಾನವಾಧಿಪನೇ ! ಕೇಳು ; ಈ ವಿಚಾರದಲ್ಲಿ ಭೀಷ್ಮರಿಗೂ, ಮಹಾತ್ಮರಾದ ವೇದವ್ಯಾಸರಿಗೂ ನಡೆದ ಸಂವಾದವನ್ನು ನಿನಗೆ ವಿವರಿಸುತ್ತೇನೆ. ಇದು ಪಾಪನಾಶಕವಾದುದು ಆದುದರಿಂದ ಲಾಲಿಸು.

೪. ಅಯ್ಯಾ ಭರತಕುಲಸಂಭೂತನೇ ! ಕೇಳು ; ಗಂಗಾತೀರದಲ್ಲಿ ಬ್ರಾಹ್ಮಣ ಶ್ರೇಷ್ಠನಾದ ವ್ಯಾಸಮುನಿಯು ಸುಖವಾಗಿ ಕುಳಿತಿದ್ದನು. ಆತನು ಜ್ವಲಿಸುವ ಅಗ್ನಿಯಂತೆ ಮಹಾತೇಜಸ್ವಿಯಾಗಿದ್ದನು.

೫. ಪ್ರತ್ಯಕ್ಷನಾರಾಯಣರೂಪಿಯಾದ ಆತನು ಕಾಂತಿಯಲ್ಲಿ ಸೂರ್ಯನಿಗೆ ಸಮಾನವೆನಿಸಿದುದಲ್ಲದೆ ಆಸರ್ವಶಾಸ್ತ್ರಗಳಿಗೂ ವಾಸಸ್ಥಾನವೆನಿಸಿದ್ದನು.

೬. ಮಹಾಭಾರತವನ್ನು ರಚಿಸಿದವನಾಗಿ, ವೇದಾರ್ಥವೆಂಬ ಸ್ವರ್ಣಪರೀಕ್ಷೆಗೆ ಶ್ರೇಷ್ಠವಾದ ಒರೆಗಲ್ಲಿನಂತಿದ್ದ ಆತನು, ಪರಮರ್ಷಿಗಳಿಗೂ, ರಾಜರ್ಷಿಗಳಿಗೂ ಆಚಾರ್ಯನಾಗಿದ್ದನು.

೭. ಕುರುವಂಶಕ್ಕೆ ಆತನೇ ಆದಿಕರ್ತೃವಾಗಿದ್ದನು. ನನ್ನ ಭಾಗಕ್ಕೆ ಶ್ರೇಷ್ಠವಾದ ದೇವಸ್ವರೂಪನಾಗಿದ್ದನು. ಸಾಕ್ಷಾನ್ನಾರಾಯಣಸ್ವರೂಪನಾದ ಆ ವ್ಯಾಸನಿಗೆ

ದೇವದೇವಸ್ಯ ಮಹಾತ್ಮ್ಯಂ ಚಿತ್ತಸ್ಥಂ ಭಾಸ್ಕರಸ್ಯ ತು ।
ಸ ಮಹಾತ್ಮಾ ಮಹಾತೇಜಾ ಭೀಷ್ಮಃ ಪೂರ್ವಂ ಮುನಿಂ ತಥಾ ॥ ೮ ॥

॥ ಭೀಷ್ಮ ಉವಾಚ ॥

ಭಗವನ್ ದ್ವಿಜಶಾರ್ದೂಲ ಪಾರಾಶರ್ಯ ಮಹಾಮತೇ ।
ಸಮಾಖ್ಯಾತಂ ತ್ವಯಾ ಸರ್ವಂ ವಾಙ್ಮಯ ಸಚರಾಚರಂ ॥ ೯ ॥

ಭಾಸ್ಕರಸ್ಯ ಮುನಿಶ್ರೇಷ್ಠ ಸಂಶಯೋಽದ್ಯಾಪಿ ವರ್ತತೇ ।
ಆದೌ ತಸ್ಯ ನಮಸ್ಕಾರಮನ್ಯೇಷಾಂ ತದನಂತರಂ ॥ ೧೦ ॥

ಬ್ರಹ್ಮಾದೀನಾಂ ತು ರುದ್ರಾದ್ಯೈರ್ಬ್ರೂಹಿ ತತ್ಕೇನ ಹೇತುನಾ ।
ಕ ಏಷ ಭಾಸ್ಕರೋ ಬ್ರಹ್ಮನ್ ಕುತೋ ಜಾತ ಸಃ ಉಚ್ಯತೇ ॥ ೧೧ ॥

---

ಕುರುಕುಲಶ್ರೇಷ್ಠನೆನಿಸಿದ ಮಹಾತ್ಮನೂ, ಮಹಾತೇಜಸ್ವಿಯೂ ಆದ ಭೀಷ್ಮನು ಭಕ್ತಿಯಿಂದ ಕೂಡಿದವನಾಗಿ ತಲೆವಾಗಿ ನಮಸ್ಕರಿಸಿದನು.

೮. ಬಳಿಕ, ದೇವದೇವನಾದ ಭಾಸ್ಕರನ ಮಾಹಾತ್ಮ್ಯವನ್ನು ಸಮಗ್ರವಾಗಿ ತಿಳಿದುಕೊಳ್ಳಬೇಕೆಂಬ ಅಭಿಪ್ರಾಯವುಳ್ಳವನಾಗಿ ಆ ವ್ಯಾಸನನ್ನು ಈ ರೀತಿ ಪ್ರಶ್ನಿಸಿದನು.

೯. ಭೀಷ್ಮನು ವ್ಯಾಸನನ್ನು ಕೇಳುತ್ತಾನೆ:—ದ್ವಿಜಶ್ರೇಷ್ಠನೂ, ಬುದ್ಧಿಶಾಲಿಯೂ ಪರಾಶರಪುತ್ರನೂ ಆದ ವ್ಯಾಸನೇ! ಚರಾಚರವಸ್ತುಗಳ ಸೃಷ್ಟಿಯ ಸಂಬಂಧವಾಗಿ ಭಾಸ್ಕರನು ನಡೆಯಿಸಿದ ವಿಚಾರವನ್ನು ನೀನು ನನಗೆ ಹೇಳಿದ್ದೀಯೆ.

೧೦-೧೧. ಅದರಲ್ಲಿ ಸ್ವಲ್ಪಮಟ್ಟಿಗೆ ಸಂಶಯವು ಈಗಲೂ ಇದೆ. ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ರುದ್ರಾದಿಗಳು ಇರುವಲ್ಲಿ ಮೊದಲು ಸೂರ್ಯನಿಗೆ ನಮಸ್ಕಾರವೂ ಅನಂತರ ಬ್ರಹ್ಮಾದಿಗಳಿಗೆ ನಮಸ್ಕಾರಮಾಡುವುದೂ ರೂಢಿಯಾಗಿದೆ. ಇದಕ್ಕೆ ಕಾರಣವೇನು ? ಎಂಬುವನ್ನು ಆಧಾರಸಹಿತ ನಿಷ್ಕರ್ಷೆಯಾಗಿ ಹೇಳು. ಅಯ್ಯಾ ಬ್ರಹ್ಮಜ್ಞಾನಿಯೇ! ಈ ಸೂರ್ಯನೆಂಬುವನು ಯಾರು ? ಇವನು ಯಾರ ಪುತ್ರ ಎಂದು ಪ್ರಸಿದ್ಧವಾಗಿದೆ ?

**ಕೀರ್ತಯಸ್ವ ಯಥಾನ್ಯಾಯಂ ಕೌತುಕಂ ಹಿ ಪರಂ ಮಮ ।**
**ಕುಶಲೋ ಹಿ ಭವಾಲ್ಲೋಕೇ ತಸ್ಮಾತ್ತ್ವಂ ವಕ್ತುಮರ್ಹಸಿ ॥ ೧೨ ॥**

**॥ ವ್ಯಾಸ ಉವಾಚ ॥**

**ಅಹೋ ತವ ಮಹತ್ಕಷ್ಟಂ ಪ್ರಮೂಢೋಽಸಿ ನ ಸಂಶಯಃ ।**
**ಸ್ತುವಂತಿ ಚ ತಮರ್ಚಾಭಿಃ ಸಿದ್ಧಾ ಬ್ರಹ್ಮಾದಯಃ ಸುರಾಃ ॥ ೧೩ ॥**

**ಸರ್ವೇಷಾಮೇವ ದೇವಾನಾಮಾದಿರಾದಿತ್ಯ ಉಚ್ಯತೇ ।**
**ಸ ಹಂತಿ ತಿಮಿರಂ ಸರ್ವಂ ದಿಗ್ವಿದಿಕ್ಷು ವ್ಯವಸ್ಥಿತಂ ॥ ೧೪ ॥**

**ಸ ಧರ್ಮಃ ಸರ್ವಧರ್ಮಾಣಾಂ ಸ ಚ ಪೂಜ್ಯತಮೋ ಮತಃ ।**
**ಬ್ರಹ್ಮಾದಯಸ್ತಮರ್ಚಂತಿ ಸಚಾದಿಸ್ತ್ರಿದಿವೌಕಸಾಂ ॥ ೧೫ ॥**

**ಅದಿತಿಃ ಕಶ್ಯಪಸತೀ ಆದಿತ್ಯಸ್ತೇನ ಚೋಚ್ಯತೇ ।**
**ಆದಿಕರ್ತಾಥ ವಾ ಯಸ್ಮಾತ್ತಸ್ಮಾದಾದಿತ್ಯ ಉಚ್ಯತೇ ॥ ೧೬ ॥**

---

೧೨. ಪ್ರಪಂಚ ವಿಷಯಗಳನ್ನರಿತ ನೀನು ಕುತೂಹಲವಿಶಿಷ್ಟನಾದ ನನಗೆ ಇವುಗಳನ್ನು ಕ್ರಮವಾಗಿ ತಿಳಿಸೆಂದು ಪ್ರಾರ್ಥಿಸಿದನು.

೧೩. ಆಗ ವ್ಯಾಸನು ಭೀಷ್ಮನನ್ನು ಕುರಿತು ಹೇಳುತ್ತಾನೆ "ಓ ಭೀಷ್ಮ! ಆಹಾ ನಿನಗೆ ಈ ಸಂದೇಹವುಂಟಾಗಿ ಮಹಾ ತಾಪತ್ರಯವಾಗಿದೆಯಲ್ಲವೇ ? ನಿಜ. ನೀನು ಬಹು ಭ್ರಾಂತಿಗೊಂಡಿದ್ದೀಯೆ. ಸಿದ್ಧರೂ, ಬ್ರಹ್ಮಾದಿ ದೇವತೆಗಳೂ ಆ ಸೂರ್ಯನನ್ನು ಪೂಜೆಮಾಡಿ ಸ್ತುತಿಸುತ್ತಾರೆ.

೧೪. ಆದಿತ್ಯನು ಎಲ್ಲ ದೇವತೆಗಳಿಗೂ ಆದಿಯೆಂದು ಹೇಳಿಸಿಕೊಳ್ಳುತ್ತಾನೆ. ಅವನು ಎಲ್ಲ ದಿಕ್ಕುಗಳ ಕತ್ತಲೆಯನ್ನೂ ನಾಶಮಾಡುತ್ತಾನೆ.

೧೫. ಅವನು ಧರ್ಮಗಳಲ್ಲಿ ಧರ್ಮಸ್ವರೂಪನು, ಮತ್ತು ಅತ್ಯಂತ ಪೂಜ್ಯನು. ಬ್ರಹ್ಮಾದಿಗಳೂ ಅವನನ್ನು ಪೂಜಿಸುತ್ತಾರೆ, ಅವನು ದೇವತೆಗಳಿಗೆಲ್ಲ ಮೊದಲನೆಯವನು.

೧೬. ಅದಿತಿಯು ಕಶ್ಯಪನ ಹೆಂಡತಿ. ಸೂರ್ಯನು ಆಕೆಯ ಮಗನಾದುದರಿಂದ ಅವನನ್ನು ಆದಿತ್ಯನೆನ್ನುತ್ತಾರೆ. ಆದಿಯಲ್ಲೇ ಸೃಷ್ಟನಾದುದರಿಂದ ಅವನನ್ನು ಆದಿತ್ಯನೆಂದೂ ಹೇಳುತ್ತಾರೆ.

ತಸ್ಮಾದೇತಜ್ಜಗತ್ಸರ್ವಮಾದಿತ್ಯಾತ್ಸಂಪ್ರವರ್ತತೇ ।
ಸದೇವಾಸುರಗಂಧರ್ವಂ ಸಯಕ್ಷೋರಗರಾಕ್ಷಸಂ ॥ ೧೭ ॥

ರುದ್ರೋಪೇಂದ್ರೌ ತಥೇಂದ್ರಶ್ಚ ಬ್ರಹ್ಮಾ ದಕ್ಷೋಥ ಕಶ್ಯಪಃ ।
ಆದಿತ್ಯದೇವತಾಃ ಸರ್ವೇ ಯಥಾನ್ಯೇ ದೇವದಾನವಾಃ ॥ ೧೮ ॥

ಮುಖಾದ್ಭೂತೋ ವಿರಂಚಿಸ್ತು ರುದ್ರೋ ವಕ್ಷಸ್ಥಲಾತ್ತತಃ ।
ಉಪೇಂದ್ರೋ ದಕ್ಷಿಣಾದ್ಧಸ್ತಾದ್ಧಾತಾ ವಾಮಕರಾತ್ತಥಾ ॥ ೧೯ ॥

ವಾಮಪಾದತಲಾದ್ದಕ್ಷೋ ದಕ್ಷಿಣಾತ್ಕಶ್ಯಪಸ್ತಥಾ ।
ಇತ್ಯುತ್ಪನ್ನಾಸ್ತಥಾ ಚಾನ್ಯೇ ದೇವಾಸುರನರಾಃ ಖಗಾಃ ॥
ತೇನಾಸೌ ದೇವ ಆದಿತ್ಯಃ ಸರ್ವದೇವೇಷು ಪೂಜಿತಃ ॥ ೨೦ ॥

॥ ಭೀಷ್ಮ ಉವಾಚ ॥

ಯದೀತ್ಥಂ ಗೀಯತೇ ವೀರ ದಿಗ್ವಿದಿಕ್ಷು ಸ ಭಾಸ್ಕರಃ ।
ಯದಿ ತಸ್ಯ ಪ್ರಭಾವೋಽಯಂ ಪಾರಾಶರ್ಯ ಜಗತ್ಪತೇಃ ॥ ೨೧ ॥

---

೧೭. ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು ಇವರ ಲೋಕಗಳ ಕಾರ್ಯಗಳೆಲ್ಲವೂ ಆದಿತ್ಯನಿಂದಲೇ ಸಾಗುತ್ತವೆ.

೧೮. ರುದ್ರ, ಉಪೇಂದ್ರ, ಇಂದ್ರ, ಬ್ರಹ್ಮ, ಕಶ್ಯಪ ಇವರೆಲ್ಲರೂ ಇತರ ದೇವ ದಾನವರಂತೆಯೇ ಆದಿತ್ಯನಿಂದಲೇ ತಮ್ಮ ನಿತ್ಯ ವ್ಯವಹಾರಗಳನ್ನು ನೆರವೇರಿಸುವರು.

೧೯. ಈ ಆದಿತ್ಯನ ಮುಖದಿಂದ ಬ್ರಹ್ಮನೂ, ವಕ್ಷಸ್ಥಲದಿಂದ ರುದ್ರನೂ, ಬಲಗೈಯಿಂದ ಉಪೇಂದ್ರನೂ, ಎಡಗೈಯಿಂದ ಧಾತೃವೂ ಉತ್ಪನ್ನರಾದರು.

೨೦. ಈ ಆದಿತ್ಯನ ಎಡಅಂಗಾಲಿನಿಂದ ದಕ್ಷನೂ, ಬಲಅಂಗಾಲಿನಿಂದ ಕಶ್ಯಪನೂ ಹುಟ್ಟಿದರು. ಹೀಗೆಯೇ ಇತರ ಅವಯುವಗಳಿಂದ ದೇವತೆಗಳು, ಅಸುರರು, ನರರು, ಖಗರು, ಎಲ್ಲರೂ ಹುಟ್ಟಿದರು. ಅದರಿಂದ ಆದಿತ್ಯನು ಸರ್ವದೇವತೆಗಳಲ್ಲಿ ಪೂಜಾರ್ಹನೆನಿಸಿದನು" ಎಂದು ಹೇಳಿದನು.

೨೧–೨೨. ಆಗ ಭೀಷ್ಮನು ಪುನಃ ತನಗೆ ಉಂಟಾದ ಸಂಶಯವನ್ನು ಹೇಳುತ್ತಾನೆ ಎಲೈ ಮಹಾತ್ಮನಾದ ಪಾರಾಶರ್ಯನೇ! ಜಗತ್ಪತಿಯಾದ ಅವನ ಪ್ರಭಾವವು

ಸ ಕಿಮರ್ಥಂ ತ್ರಿಸಂಧ್ಯಂ ತು ರಾಕ್ಷಸೈಃ ಪರಿಭೂಯತೇ ।
ದ್ವಿಜೈಃ ಸಂರಕ್ಷ್ಯತೇ ಭೂಯಶ್ಚಕ್ರವದ್ಭ್ರಮತೇ ಪುನಃ ॥
ರಾಹುಣಾ ಗೃಹ್ಯತೇಽಗ್ರಾಹ್ಯಸ್ತತ್ಕಿಮರ್ಥಂ ದ್ವಿಜೋತ್ತಮ ॥ ೨೨ ॥

॥ ವ್ಯಾಸ ಉವಾಚ ॥
ಪಿಶಾಚೋರಗರಕ್ಷಾಂಸಿ ಡಾಕಿನೀದಾನವಾಂಸ್ತಥಾ ।
ದಕ್ಷಿಣಾಗ್ನಿರ್ದಹೇತ್ಕ್ರೋಧಾತ್ತಮಾಕ್ರಾಮತಿ ಭಾಸ್ಕರಃ ॥ ೨೩ ॥

ತ್ರಿಸಂಧ್ಯಂ ತು ತ್ರಯೋ ದೇವಾಃ ಸಾನ್ನಿಧ್ಯಂ ರವಿಮಂಡಲೇ ।
ಮುಹೂರ್ತಸ್ಯ ಪ್ರಭಾವೋಯಮಸಾಧ್ಯೋ ದೃಶ್ಯತೇ ತಥಾ ॥ ೨೪ ॥

ತಮೇಕಮೇವಮುದ್ದಿಶ್ಯ ಲೋಕೇ ಧರ್ಮಃ ಪ್ರವರ್ತತೇ ।
ನಮಸ್ಕೃತೇ ಸ್ತುತೇ ತಸ್ಮಿನ್ ಸರ್ವೇ ದೇವಾ ನಮಸ್ಕೃತಾಃ ॥ ೨೫ ॥

---

ಇಷ್ಟು ಮಟ್ಟಿಗಿದ್ದ ಅವನು ಮೂರು ಸಂಧ್ಯೆಗಳಲ್ಲೂ ಮಂದೇಹರೆಂಬ ರಾಕ್ಷಸರಿಂದ ಏಕೆ ತಿರಸ್ಕೃತನಾಗುತ್ತಾನೆ ? ಪುನಃ ಪುನಃ ಬ್ರಾಹ್ಮಣರು ಕೊಡುವ ಅರ್ಘ್ಯಪ್ರಭಾವದಿಂದ ಏಕೆ ಸಂರಕ್ಷಿತನಾಗುತ್ತಾನೆ? ಇಂಥ ಮಹಾತ್ಮನು ಚಕ್ರದಂತೆ ಏಕೆ ಸರ್ವದಾ ತಿರುಗುತ್ತಾನೆ? ಎಲೈ ಬ್ರಾಹ್ಮಣೋತ್ತಮನೇ! ಅನ್ಯರಿಂದ ಆಕ್ರಮಿಸಲಸಾಧ್ಯನಾಗಿರಬೇಕಾದ ಇವನು ಏಕೆ ರಾಹುವಿಗೆ ಗ್ರಾಸವಾಗುತ್ತಾನೆ ? ಎಂದು ಪ್ರಶ್ನಿಸಿದನು.

೨೩. ವ್ಯಾಸರು ಹೇಳುತ್ತಾರೆ—ಪಿಶಾಚರು, ಉರಗರು, ರಾಕ್ಷಸರು, ಡಾಕಿನಿ, ದಾನವರು ಇವರನ್ನೆಲ್ಲಾ ದಕ್ಷಿಣಾಗ್ನಿಯು ಕ್ರೋಧದಿಂದ ದಹಿಸುವುದು. ಅಂಥಾ ದಕ್ಷಿಣಾಗ್ನಿಯನ್ನು ಇವನು ಆಕ್ರಮಿಸಿರುತ್ತಾನೆ.

೨೪. ಮೂರುಸಂಧ್ಯೆಗಳಲ್ಲೂ ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ದೇವತೆಗಳೂ ಸೂರ್ಯಮಂಡಲದಲ್ಲಿ ಸಾನ್ನಿಧ್ಯಮಾಡಿರುತ್ತಾರೆ. ಆದುದರಿಂದ ತ್ರಿಸಂಧ್ಯೆಯ ಮಹಿಮೆಯು ಅಸಾಧ್ಯವಾಗಿ ಕಾಣುವುದು.

೨೫. ಹೀಗೆ ಲೋಕದಲ್ಲಿ ಅವನೊಬ್ಬನ ತುಷ್ಟಿಗನುಸಾರವಾಗಿ ಧರ್ಮವು ಪ್ರವರ್ತಿಸುತ್ತದೆ. ಅವನನ್ನು ನಮಸ್ಕರಿಸಿದರೆ ಎಲ್ಲಾ ದೇವರನ್ನೂ ನಮಸ್ಕರಿಸಿದಂತೆಯೇ ಆಗುವುದು.

ತ್ರಿಸಂಧ್ಯಂ ವಸುಧಾದೇವ್ಯೈಃ ಭಾಸ್ಕರಸ್ತ್ರಿಃ ಪ್ರಣಮ್ಯತೆ ।
ರಾಹುರಾದಿತ್ಯಬಿಂಬಸ್ಯ ಸ್ಥಿತೋಽಧಸ್ತಾನ್ನ ಸಂಶಯಃ ॥ ೨೬ ॥

ಅಮೃತಾರ್ಥೀ ವಿಮಾನಸ್ಥೋ ಯಾವತ್ಸಂಸ್ರವತೇಽಮೃತಂ ।
ವಿಮಾನಾಂತರಿತಂ ಬಿಂಬಮಾವಿಶೇದ್ಗ್ರಹಣಂ ತತಃ ॥ ೨೭ ॥

ನ ಕಶ್ಚಿದ್ಧರ್ಷಿತುಂ ಶಕ್ತ ಆದಿತ್ಯೋ ದಹತೇ ಧ್ರುವಂ ।
ದಿವಾರಾತ್ರಿಮುಹೂರ್ತಾನಾಂ ಜ್ಞಾನಾಯ ಕ್ರಮತೇ ರವಿಃ ॥ ೨೮ ॥

ನಾದಿತ್ಯೇನ ವಿನಾ ರಾತ್ರಿರ್ನದಿನಂ ನ ಚ ತರ್ಪಣಂ ।
ನಾಧರ್ಮೋ ನಾಥವಾಧರ್ಮಸ್ತೇನ ದೃಷ್ಟಂ ಚರಾಚರಂ ॥ ೨೯ ॥

---

೨೬. ಬ್ರಾಹ್ಮಣರು ಮೂರು ಸಂಧ್ಯಾಕಾಲಗಳಲ್ಲೂ ಸೂರ್ಯನನ್ನು ಮೂರು ಸಲ ನಮುಸ್ಕರಿಸುತ್ತಾರೆ. ರಾಹುವು ಸೂರ್ಯಬಿಂಬದ ಕೆಳಭಾಗದಲ್ಲಿ ಕಾದು ಇರುವವನು

೨೭. ಸೂರ್ಯನಿಂದ ಅಮೃತವು ಸ್ರವಿಸು ವುದಷ್ಟೆ. ಆ ಅಮೃತಕ್ಕೆ ಆಶೆಪಟ್ಟು ಕೊಂಡು ರಾಹುವು ಅವನ ಕೆಳಗೆ ವಿಮಾನದಲ್ಲಿರುತ್ತಾನೆ. ವಿಮಾನದಿಂದ ಮಂಡಲವು ಮರೆಯಾದಾಗ ಗ್ರಹಣವಾಯಿತೆಂದು ಹೇಳುವರು.

೨೮. ಸೂರ್‍ಯನನ್ನು ಅಲಕ್ಷಿಸಿ ಆಕ್ರಮಿಸಲು ಯಾವನೂ ಶಕ್ತನಲ್ಲ. ಆದಿತ್ಯನು ಸುಡುತ್ತಾನೆಂಬ ವಿಚಾರ ಸಿದ್ಧಾಂತವಾದುದು. ದಿವಾ, ರಾತ್ರಿ, ಮುಹೂರ್ತ ಇವುಗಳು ಇವು ನಮಗೆ ಗೋಚರಕ್ಕೆ ಬರಲಿ ಎಂದು ಸೂರ್‍ಯನು •ಸರ್ವದಾ ಸಂಚರಿಸುತ್ತಾ ಮಾರ್ಗವನ್ನು ಕ್ರಮಿಸುತ್ತಾನೆ.

೨೯. ಸೂರ್ಯನಿಲ್ಲದಿದ್ದರೆ ರಾತ್ರಿ, ಹಗಲುಗಳಾಗುತ್ತಿರಲಿಲ್ಲ. ದಿನಗಳ ತಿಥಿಗಳ ಗಣನೆಯಿಲ್ಲದಿದ್ದರೆ ತರ್ಪಣಮಾಡಲು ಅವಕಾಶವೇ ಇಲ್ಲ. ಒಟ್ಟಿನಲ್ಲಿ ಇದು ಧರ್ಮ ಅಥವಾ ಇದು ಅಧರ್ಮ ಎಂಬ ನಿಷ್ಕರ್ಷೆಯೇ ಇರುತ್ತಿರಲಿಲ್ಲ. ಅವನು ಚರಾಚರಾತ್ಮಕವಾದ ಜಗತ್ತಿಗೆ ಸಾಕ್ಷಿಯಾಗಿದ್ದಾನೆ.

**ಆದಿತ್ಯಃ ಪಾತಿ ವೈ ಸರ್ವಮಾದಿತ್ಯಃ ಸೃಜತೇ ಸದಾ ।**
**ಏತತ್ಸರ್ವಂ ಸಮಾಖ್ಯಾತಂ ಯತ್ಪೃಷ್ಟಂ ಭವತಾ ಮಮ ॥ ೩೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ವ್ಯಾಸಭೀಷ್ಮಸಂವಾದೋ ನಾಮ ಅಷ್ಟನವತ್ಯಧಿಕ ಶತತಮೋಽಧ್ಯಾಯಃ.**



---

೩೦. ಹೀಗೆ ಆದಿತ್ಯನು ಸದಾ ಸರ್ವವನ್ನೂ ರಕ್ಷಿಸುತ್ತಾನೆ. ಆದಿತ್ಯನು ಯಾವಾಗಲೂ ಸರ್ವವನ್ನೂ ಸೃಷ್ಟಿಮಾಡುತ್ತಾನೆ. ನೀನು ನನ್ನನ್ನು ಕೇಳಿದ ಪ್ರಶ್ನೆಗಳಿಗೆಲ್ಲಕ್ಕೂ ಉತ್ತರವನ್ನು ಹೇಳಿದುದಾಯಿತು ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸಪ್ತಮೀಕಲ್ಪದಲ್ಲಿ ಸೌರಧರ್ಮದಲ್ಲಿ ವ್ಯಾಸ ಭೀಷ್ಮ ಸಂವಾದವೆಂಬ ನೂರತೊಂಭತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕೋನದ್ವಿಶತತಮೋಽಧ್ಯಾಯಃ

---

॥ ಭೀಷ್ಮ ಉವಾಚ ॥

ಸ ಆದಿತ್ಯೋ ಭವೇದ್ಯೇನ ಅಚಿರಾತ್ತು ವರಪ್ರದಃ ।
ತದಹಂ ಶ್ರೋತುಮಿಚ್ಛಾಮಿ ವಿಪ್ರ ಮಾಂ ಬ್ರೂಹಿ ತತ್ವತಃ ॥ ೧ ॥

॥ ವ್ಯಾಸ ಉವಾಚ ॥

ಪೂಜಯಾ ಜಪಹೋಮೇನ ಧ್ಯಾನಧಾರಣಯಾ ಸಹ ।
ಸಕಲಂ ಮಂಡಲಂ ಕೃತ್ವಾ ತದ್ದೀಕ್ಷಾಂ ಸಮಯಂ ತಥಾ ॥ ೨ ॥

ಲಬ್ಧ್ವಾರಾಧಯತೇ ಯಸ್ತು ಭಕ್ತ್ಯಾ ತದ್ಗತಮಾನಸಃ ।
ತಸ್ಯ ಭಾನುರ್ಭವೇದ್ವೀರ ಅಚಿರಾತ್ತು ವರಪ್ರದಃ ॥ ೩ ॥

---

### ನೂರತೊಂಭತ್ತೊಂಭತ್ತನೆಯ ಅಧ್ಯಾಯ

೧. ಭೀಷ್ಮನು ವ್ಯಾಸನನ್ನು ಕುರಿತು ಪುನಃ ಪ್ರಶ್ನೆಮಾಡುತ್ತಾನೆ—"ವಿಪ್ರಶ್ರೇಷ್ಠನೇ! ಆ ಆದಿತ್ಯನು ಶೀಘ್ರವಾಗಿ ವರಪ್ರದನಾಗಬೇಕಾದರೆ ಮಾಡಬೇಕಾದ ಕರ್ಮವಾವುದೆಂಬುದನ್ನು ತಿಳಿದುಕೊಳ್ಳಲು ಆಶಿಸುತ್ತೇನೆ. ಅದರ ವಸ್ತುಸ್ಥಿತಿಯನ್ನು ಹೇಳು" ಎಂದನು.

೨-೩. ಆಗ ವ್ಯಾಸನು ಹೇಳುತ್ತಾನೆ—ಅಯ್ಯಾ ಶೂರನಾದ ಭೀಷ್ಮನೇ! ಪೂಜಾ ನಿಮಿತ್ತವಾದ ದೀಕ್ಷೆಯನ್ನೂ, ಆಚಾರಸಂಪ್ರದಾಯಗಳನ್ನೂ, ಪೂಜೆ, ಜಪ, ಹೋಮ, ಧ್ಯಾನ, ಧಾರಣ ಇವುಗಳನ್ನೂ, ಸೂರ್ಯಮಂಡಲದ ಕಲಾಕರ್ಷಣೆ ಮಾಡುವುದನ್ನೂ ತಿಳಿದು ಯಾವನು ಭಕ್ತಿಯಿಂದ ಅವನಲ್ಲೇ ಮನಸ್ಸನ್ನಿಟ್ಟು ಆರಾಧನೆ ಮಾಡುತ್ತಾನೋ ಅವನಿಗೆ ಅತಿಶೀಘ್ರವಾಗಿ ಸೂರ್ಯನು ವರಪ್ರದನಾಗುವನು.

ಬಲಸಿದ್ಧಿಂ ಮಹದ್ವೀರ್ಯಂ ಪ್ರತಾಪಂ ಚ ಸ್ವಕಾಯನಂ ।
ಧನಂ ಧಾನ್ಯಂ ಸುವರ್ಣಂ ಚ ರೂಪಂ ಸೌಭಾಗ್ಯಸಂಪದಂ ॥ ೪ ॥

ಆರೋಗ್ಯಮಾಯುಃ ಕೀರ್ತಿಂ ಚ ಯಶಃ ಪುತ್ರಾಂಶ್ಚ ಮಾನದ ।
ದದಾತಿ ನಾತ್ರ ಸಂದೇಹೋ ಯತ್ರ ತುಷ್ಟೋ ದಿವಾಕರಃ ॥ ೫ ॥

ಧರ್ಮಮರ್ಥಂ ತಥಾ ಕಾಮಂ ವಿದ್ಯಾಂ ಮೋಕ್ಷಶ್ರಿಯಂ ತಥಾ ।
ದದತೇ ಭಾಸ್ಕರಸ್ತುಷ್ಟೋ ನರಾಣಾಂ ನಾತ್ರ ಸಂಶಯಃ ॥ ೬ ॥

ಸೌರೇಣ ವಿಧಿನಾ ತಾತ ಪೂಜಯಿತ್ವಾ ದಿವಾಕರಂ ।
ಸರ್ವಾನ್ಕಾಮಾನವಾಪ್ನೋತಿ ತಥಾದಿತ್ಯಾಲಯಂ ನೃಪ ॥ ೭ ॥

॥ ಭೀಷ್ಮ ಉವಾಚ ॥
ಸೌರಸ್ನಾನವಿಧಿಂ ಬ್ರೂಹಿ ಸರಹಸ್ಯಂ ಮಹಾಮತೇ ।
ಯೇನ ಸ್ನಾತೋಽಮಲೋ ಯಾತಿ ನರಃ ಪೂಜಯಿತುಂ ರವಿಂ ॥ ೮ ॥

---

೪-೫. ಅಯ್ಯಾ ಮಾನದನೇ! ಸೂರ್ಯನು ಯಾರಿಗೆ ಪ್ರಸನ್ನನಾಗುವನೋ ಅಂಥವನಿಗೆ ಬಲಸಿದ್ಧಿ, ಮಹಾಪರಾಕ್ರಮ ಪ್ರತಾಪ ಇವುಗಳನ್ನೂ, ಸ್ವಕೀಯವಾದ ಗೃಹವನ್ನೂ, ಧನ, ಧಾನ್ಯ, ಸುವರ್ಣ. ರೂಪ, ಸೌಭಾಗ್ಯ, ಸಂಪತ್ತು, ಆರೋಗ್ಯ. ಆಯುಸ್ಸು, ಕೀರ್ತಿ, ಯಶಸ್ಸು. ಪುತ್ರರು ಮುಂತಾದುವೆಲ್ಲವನ್ನೂ ಕೊಡುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

೬. ಸೂರ್ಯನು ತುಷ್ಟನಾದರೆ ಮನುಷ್ಯರಿಗೆ ಧರ್ಮ, ಅರ್ಥ, ಕಾಮ, ಜ್ಞಾನ, ಮೋಕ್ಷ, ಸಂಪತ್ತು ಇವೆಲ್ಲವನ್ನೂ ಕೊಡುತ್ತಾನೆ. ಇದರಲ್ಲಿ ಸಂಶಯವಿಲ್ಲ.

೭. ಅಪ್ಪಾ ಕ್ಷತ್ರಿಯೋತ್ತಮನೇ! ಕೇಳು; ಸೌರವಿಧಿಯಿಂದ ಸೂರ್ಯನನ್ನು ಪೂಜಿಸಿದವನು ತನ್ನ ಸರ್ವಇಷ್ಟಾರ್ಥಗಳನ್ನೂ ಪಡೆದು, ಆದಿತ್ಯಲೋಕವನ್ನು ಸೇರುತ್ತಾನೆ.

೮. ಭೀಷ್ಮನು ವ್ಯಾಸನನ್ನು ಪುನಃ ಕೇಳುತ್ತಾನೆ—"ಎಲೈ ಮಹಾಬುದ್ಧಿಶಾಲಿಯೆನಿಸಿದ ವ್ಯಾಸನೇ! ಯಾವ ವಿಧಿಯಿಂದ ಸ್ನಾನಮಾಡಿದರೆ ಮನುಷ್ಯನು ಪರಿಶುದ್ಧನೆನಿಸಿ ಸೂರ್ಯನನ್ನು ಪೂಜಿಸಲು ಅರ್ಹನೆನಿಸುವನೋ ಅಂಥ ರಹಸ್ಯಯುಕ್ತವಾದ ಸೌರಸ್ನಾನವಿಧಿಯನ್ನು ಹೇಳು" ಎಂದನು.

॥ ವ್ಯಾಸ ಉವಾಚ ॥

ಹಂತ ತೇ ಸಂಪ್ರವಕ್ಷ್ಯಾಮಿ ಸ್ನಾನಂ ಪಾಪಪ್ರಣಾಶನಂ ।
ಶುಚೌ ಮನೋರಮೇ ಸ್ಥಾನೇ ಸಂಗೃಹ್ಯಾಸ್ತ್ರೇಣ ಮೃತ್ತಿಕಾಂ ॥ ೯ ॥

ಸಂಧಿಸಂಘೋ ಹಕಾರಸ್ತು ಟರೇಫೋಥ ಸಮನ್ವಿತೇ ।
ಅನೇನಾಸ್ತ್ರೇಣ ಸಂಗೃಹ್ಯ ತತಃ ಸ್ನಾನಂ ಸಮಾಚರೇತ್ ॥ ೧೦ ॥

ಮಲಸ್ನಾನಂ ತತಃ ಪಶ್ಚಾಚ್ಛೇಷಾರ್ಧೇನ ತು ಕಾರಯೇತ್ ।
ಭಾಗತ್ರಯಂ ತು ಸಾರ್ಧಂ ತು ತೃಣಪಾಷಾಣವರ್ಜಿತಂ ॥ ೧೧ ॥

ಏಕಮಸ್ತ್ರೇಣ ಚಾಲಭ್ಯ ತಥಾನ್ಯಂ ಭಾಸ್ಕರೇಣ ತು ।
ಅಂಗಂ ಚೈವ ತೃತೀಯೇನ ಅಭಿಮಂತ್ರ್ಯ ಸಕೃತ್ಸಕೃತ್ ॥ ೧೨ ॥

ಜಪ್ತ್ವಾಸ್ತ್ರೇಣ ಕ್ಷಿಪೇದ್ದಿಕ್ಷು ನಿರ್ವಿಘ್ನಂ ತು ಜಲಂ ಭವೇತ್ ।
ಸೂರ್ಯತೀರ್ಥೇ ದ್ವಿತೀಯೇನ ಅಭಿಮಂತ್ರ್ಯ ಸಕೃತ್ಸಕೃತ್ ॥ ೧೩ ॥

---

೯–೧೧ ಆಗ ವ್ಯಾಸನು ಹೇಳುತ್ತಾನೆ "ಅಯ್ಯಾ ಭೀಷ್ಮಾ! ಪಾಪನಾಶಕವಾದ ಸ್ನಾನವಿಧಿಯನ್ನು ಸಂತೋಷದಿಂದ ಹೇಳುತ್ತೇನೆ. ಕೇಳು ; ಶುಚಿಕರವೂ, ಮನೋಹರವೂ ಆಗಿರುವ ಜಾಗದಲ್ಲಿ ಮಂತ್ರಪಠನಪೂರ್ವಕ, ಮೃತ್ತಿಕೆಯನ್ನು ಸಂಗ್ರಹಮಾಡುವುದು ವಿಹಿತವಾದುದು. ಹಕಾರವನ್ನು ಟಕಾರರೇಫದೊಡನೆ ಸೇರಿಸಿ ಸಂಧಿಮಾಡಿ, ಟಕಾರರೇಫಗಳಿಂದ ಯುಕ್ತವಾದ ಹಕಾರದ ಅಸ್ತ್ರದಿಂದ ಎಂದರೆ ಅಸ್ತ್ರರೂಪವಾದ ಈ ಮಂತ್ರೋಚ್ಚಾರಣದಿಂದ ಮೃತ್ತಿಕೆಯನ್ನು ಸಂಗ್ರಹಮಾಡಿ. ಅದರ ಅರ್ಧಭಾಗವನ್ನು ಪಯೋಗಿಸಿ ದೇಹದ ಮಲನಿವೃತ್ತಿಗಾಗಿ ಸ್ನಾನಮಾಡಬೇಕು. ಅನಂತರ ಮಿಕ್ಕ ಅರ್ಧಭಾಗದಲ್ಲಿ ಹುಲ್ಲು, ಬೇರು, ಕಲ್ಲು ಇವನ್ನು ಕಳೆದುಹಾಕಿ ಉಳಿದುದನ್ನು ಮೂರುಭಾಗ ಮಾಡಬೇಕು.

೧೨–೧೩. ಅವುಗಳಲ್ಲಿ ಒಂದು ಭಾಗವನ್ನು ಅಸ್ತ್ರಮಂತ್ರದಿಂದ ಅಭಿಮಂತ್ರಿಸಬೇಕು. ಸ್ವಲ್ಪಸ್ವಲ್ಪವನ್ನು ಎಲ್ಲ ದಿಕ್ಕಿಗೂ ಎಸೆಯಬೇಕು. ಇನ್ನೊಂದು ಭಾಗವನ್ನು ಸೂರ್ಯತೀರ್ಥದಿಂದ ಕಾಯಿಸಿ (ಎಂದರೆ ಬಿಸಿಲಿಗೆ ತೋರಿಸಿ ಚೂರುಚೂರು ಮಾಡಿ) ಸ್ವಲ್ಪಸ್ವಲ್ಪವನ್ನು ಸ್ನಾನಮಾಡುವ ಪ್ರದೇಶದ ಜಲದಲ್ಲಿ ಕದರಬೇಕು. ಮತ್ತೊಂದು ಭಾಗವನ್ನು ಅಭಿಮಂತ್ರಣಮಾಡಿ ತನ್ನ ಅಂಗಕ್ಕೆ ಸ್ವಲ್ಪ ಸ್ವಲ್ಪ ಲೇಪನಮಾಡಿಕೊಂಡು ಸ್ನಾನಮಾಡಬೇಕು. ಆಗ ಜಲವಿಘ್ನಗಳೆಲ್ಲವೂ ನಾಶವಾಗುವುವು.

ಗುಂಡಯಿತ್ವಾ ತತಃ ಸ್ನಾಯಾದಿತಿ ತೀರ್ಥೇಷು ಮಾನವಃ ।
ತೂರ್ಯಶಂಖನಿನಾದೇನ ಧ್ಯಾತ್ವಾ ದೇವಂ ದಿವಾಕರಂ ॥ ೧೪ ॥

ಸ್ನಾತ್ವಾ ರಾಜೋಪಚಾರೇಣ ಪುನರಾಚಮ್ಯ ಯತ್ನತಃ ।
ಸ್ನಾನಂ ಕೃತ್ವಾ ತತೋ ಭೀಷ್ಮ ಮಂತ್ರರಾಜೇನ ಸಂಯುತಂ ॥ ೧೫ ॥

ಹರೇಫೌ ಬಿಂದುಯುಕ್ತಶ್ಚ ತಥಾನ್ಯೋ ದೀರ್ಘಯಾ ಸಹ ।
ಮಾತ್ರಯಾ ರೇಫಸಂಯುಕ್ತೋ ಹಕಾರೋ ಬಿಂದುನಾ ಸಹ ॥ ೧೬ ॥

ಸಕಾರಃ ಸವಿಸರ್ಗಸ್ತು ಮಂತ್ರರಾಜೋಽಯಮುಚ್ಯತೇ ।
ತತಸ್ತು ತರ್ಪಯೇನ್ಮಂತ್ರೈಃ ಸರ್ವೈಸ್ತಾಂಸ್ತು ಕರಾಗ್ರಜೈಃ ॥ ೧೭ ॥

ಪರ್ವಣಾಮೂರ್ಧ್ವತೋ ದೇವಾನ್ ಸವ್ಯೇನ ಮುನಿಬೃಂದಕಂ ।
ಪಿತ್ರಾಂಶ್ಚಾಪ್ಯಪಸವ್ಯೇನ ತದ್ದ್ವಿಜೇನ ಪ್ರತರ್ಪಯೇತ್ ॥ ೧೮ ॥

---

೧೪–೧೬. ಸೂರ್ಯಭಕ್ತನು ಈ ರೀತಿ ಕ್ರಮವನ್ನು ಬಿಡದೆ ಅನುಸರಿಸಿ ಸ್ನಾನ ಮಾಡಬೇಕು. ಮತ್ತು ಆ ಕಾಲದಲ್ಲಿ ಓಲಗ, ಶಂಖ ಇವುಗಳ ಧ್ವನಿಯಾಗುತ್ತಿರುವಲ್ಲಿ, ಸೂರ್ಯದೇವನನ್ನು ಧ್ಯಾನಿಸಿ ರಾಜೋಪಚಾರ ಪೂಜೆಯನ್ನು ಮನಸಾ ಕಲ್ಪಿಸಿ ನೆರವೇರಿಸಿ, ಪುನಃ ಸ್ನಾನಮಾಡಿ ಪ್ರಯತ್ನದಿಂದ ಆಚಮನಮಾಡಿ, ಅನಂತರ ಮಂತ್ರರಾಜವನ್ನುಚ್ಚರಿಸುತ್ತಾ ಮತ್ತೆ ಸ್ನಾನಮಾಡಬೇಕು. ಅಯ್ಯಾ ಭೀಷ್ಮನೇ! ಕೇಳು; ಹಕಾರ ರೇಫ ಬಿಂದು ಸಂಯುಕ್ತವಾದ 'ಹ್ರಂ' ಎಂಬುದೂ, ಮತ್ತು ಹಕಾರ ರೇಫ ದೀರ್ಘ ಮಾತ್ರೆ ಇವುಗಳಿಂದ ಯುಕ್ತವಾಗಿ ಏರ್ಪಟ್ಟ 'ಹ್ರಾಂ' ಎಂಬುದೂ, ಬಿಂದುಸಹಿತವಾದ ಹಕಾರವೂ, ವಿಸರ್ಗಸಹಿತವಾದ ಸಕಾರವೂ ಸೇರಿ ಏರ್ಪಟ್ಟ "ಹಂಸಃ" ಎಂಬುದೂ ಮಂತ್ರರಾಜವೆನಿಸುತ್ತವೆ.

೧೭. ಆ ಮೇಲೆ ಹ್ರಾಂ, ಹ್ರೀಂ, ಹ್ರೂಂ ಮೊದಲಾದ ಆ ಎಲ್ಲ ಬೀಜಾಕ್ಷರಗಳಿಂದಲೂ ಮಿತ್ರಾದಿ ದ್ವಾದಶಾದಿತ್ಯರಿಗೆ ಬೆರಳಿನ ತುದಿಯಿಂದ ನೀರು ಇಳಿಯುವಂತೆ ತರ್ಪಣ ಕೊಡಬೇಕು.

೧೮. ದೇವತರ್ಪಣ ಮಾಡುವಾಗ ಬಲಗೈ ಬೆರಳಿನ ಗಿಣ್ಣಿನ ಮೇಲ್ಭಾಗದಿಂದ ಹಿಡಿದು ಬೆರಳು ತುದಿಯಿಂದ ನೀರುಇಳಿಯುವಂತೆ ಕೊಡಬೇಕು. ಬಲಗೈಬೆರಳಿನ ಗಿಣ್ಣಿನ ಎಡಭಾಗದಿಂದ ನೀರುಇಳಿಯುವಂತೆ ಋಷಿತರ್ಪಣವನ್ನೂ, ಬೆರಳಿನ ಗಿಣ್ಣಿನ

**ಯದ್ಗೀತಂ ಪ್ರವರಂ ಲೋಕೇ ಅಕ್ಷರಾಣಾಂ ಮನೀಷಿಭಿಃ ।**
**ತದ್ಬಿಂದುಸಹಿತಂ ಪ್ರೋಕ್ತಂ ಹೃದ್ಬೀಜಂ ನಾತ್ರ ಸಂಶಯಃ ॥ ೧೯ ॥**

**ಕೃತ್ವಾ ವಾಮಕರೇ ಹಸ್ತಾದ್ಧ್ಯಾತ್ವಾ ಪ್ರಾಜ್ಞೋ ವಿಧಾನವಿತ್ ।**
**ಏವಂ ಸ್ನಾತ್ವಾ ವಿಧಾನೇನ ಸಂಧ್ಯಾಂ ವಂದೇದ್ವಿಧಾನತಃ ॥ ೨೦ ॥**

**ತತೋ ವಿದ್ವಾನ್ ಕ್ಷಿಪೇತ್ಪಶ್ಚಾದ್ಭಾಸ್ಕರಾಯೋದಕಾಂಜಲಿಂ ।**
**ಜಪೇಚ್ಚ ತ್ರ್ಯಕ್ಷರಂ ಮಂತ್ರಂ ಷಣ್ಮುಖಂ ವಾ ಯದಿಚ್ಛಯಾ ॥ ೨೧ ॥**

**ಮಂತ್ರರಾಜೇತಿ ಯಃ ಪೂರ್ವಂ ತವಾಖ್ಯಾತೋ ಮಯಾ ನೃಪ ।**
**ಪಶ್ಚಾತ್ತೀರ್ಥೇ ತು ಮಂತ್ರಾಂಸ್ತು ಸಂಹೃತ್ಯ ಹೃದಯಂ ನ್ಯಸೇತ್ ॥ ೨೨ ॥**

---

ಬಲಭಾಗದಿಂದ ನೀರುಇಳಿಯುವಂತೆ ಪಿತೃತರ್ಪಣವನ್ನೂ ಕೊಡಬೇಕು. ಸೂರ್ಯನಿಗೆ ಅರ್ಘ್ಯವನ್ನು ಬೀಜಮಂತ್ರಪೂರ್ವಕವಾಗಿಯೇ ಕೊಡಬೇಕು.

೧೯. ಲೋಕದಲ್ಲಿ ವಿದ್ವಾಂಸರು ಅಕ್ಷರಗಳಲ್ಲಿ ಶ್ರೇಷ್ಠವೆಂದು ಯಾವುದನ್ನು ಹೇಳಿದಾರೆಯೋ ಅದು ಬಿಂದುಸಹಿತವಾದರೆ ಅದೇ ಹೃದ್ಬೀಜವೆನಿಸಿಕೊಳ್ಳುವುದು. ಇದಕ್ಕೆ ಸಂಶಯವಿಲ್ಲ

೨೦. ಸ್ನಾನವಿಧಾನವನ್ನು ತಿಳಿದ ಪ್ರಾಜ್ಞನು ಎಡ ಅಂಗೈಮೇಲೆ ದಕ್ಷಿಣಹಸ್ತವನ್ನು ಮುಚ್ಚಿಟ್ಟುಕೊಂಡು ಧ್ಯಾನಮಾಡಿ ಬಳಿಕ ಈ ವಿಧಾನದಿಂದ ಸ್ನಾನಮಾಡಿ ವಿಧಿಪ್ರಕಾರ ಸಂಧ್ಯಾವಂದನಮಾಡಬೇಕು.

೨೧. ವಿದ್ವಾಂಸನಾದವನು ಅನಂತರ ಸೂರ್ಯನಿಗೆ ಅರ್ಘ್ಯಪ್ರದಾನಾರ್ಥವಾಗಿ ಬೊಗಸೆಯಲ್ಲಿ ಉದಕವನ್ನು ಎರಚಬೇಕು. ಅನಂತರ ಮೂರಕ್ಷರದ ಆದಿತ್ಯಮಂತ್ರವನ್ನೋ, ಖಷೋಲ್ಕಾಯನಮಃ ಎಂಬ ಆರು ಅಕ್ಷರದ ಮಂತ್ರವನ್ನೋ ಇವುಗಳಲ್ಲಿ ತನಗೆ ಇಷ್ಟವಾದುದನ್ನು ಜಪಮಾಡಬೇಕು.

೨೨. ಎಲೈ ರಾಜನೇ ! ನಾನು ನಿನಗೆ ಯಾವುದನ್ನು ಮಂತ್ರರಾಜ ಎಂದು ಮೊದಲು ಹೇಳಿದ್ದೆನೋ ಅದನ್ನೂ ಆ ಮೇಲೆ ತೀರ್ಥಸ್ನಾನದಲ್ಲಿ ಯಾವ ಮಂತ್ರಗಳನ್ನು ಹೇಳಿದ್ದೆನೋ ಅವುಗಳನ್ನು ಕೂಡಿಸಿ ಹೃದಯದಲ್ಲಿ ನ್ಯಾಸಮಾಡಿಕೊಳ್ಳಬೇಕು

ಮಂತ್ರೈರಾತ್ಮಾನಮೇಕತ್ರ ಕೃತ್ವಾ ಹ್ಯರ್ಘ್ಯಂ ಪ್ರದಾಪಯೇತ್ ।
ರಕ್ತಚಂದನಗಂಧೈಸ್ತು ಶುಚಿಃ ಸ್ನಾತೋ ಮಹೀತಲೇ ॥ ೨೩ ॥

ಕೃತ್ವಾ ಮಂಡಲಕಂ ವಿತ್ತಮೇಕಚಿತ್ತೋ ವ್ಯವಸ್ಥಿತಃ ।
ಗೃಹೀತ್ವಾ ಕರವೀರಾಣಿ ಸಂಸ್ಥಾಪ್ಯ ತಾಮ್ರಭಾಜನೇ ॥ ೨೪ ॥

ತಿಲತಂಡುಲಸಂಯುಕ್ತಂ ಕುಶಗಂಧೋದಕೇನ ತು ।
ರಕ್ತಚಂದನಧೂಪೇನ ಯುಕ್ತಮರ್ಘ್ಯಂ ಪ್ರಸಾಧ್ಯ ತತ್ ॥ ೨೫ ॥

ಕೃತ್ವಾ ಶಿರಸಿ ತತ್ಪಾತ್ರಂ ಜಾನುಭ್ಯಾಮವನಿಂ ಗತಃ ।
ಪೂರ್ವಮಂತ್ರೇಣ ಸಂಯುಕ್ತಮರ್ಘ್ಯಂ ದದ್ಯಾತ್ತು ಭಾನವೇ ॥ ೨೬ ॥

ಮುಚ್ಯತೇ ಸರ್ವಪಾಪೈಸ್ತು ಯೋಹ್ಯೇವಂ ವಿನಿವೇದಯೇತ್ ।
ಯದ್ಯುಗಾದಿಸಹಸ್ರೇಣ ವ್ಯತೀಪಾತಶತೇನ ಚ ॥ ೨೭ ॥

---

೨೩. ಸ್ನಾನಮಾಡಿ ಶುಚಿರ್ಭೂತನಾಗಿ ಮನಸ್ಸನ್ನು ಒಂದೇಕಡೆ ನಿಲ್ಲಿಸಿ, (ಎಂದರೆ ಏಕಾಗ್ರಚಿತ್ತವುಳ್ಳವನಾಗಿ) ಆ ಮಂತ್ರೋಚ್ಚಾರಪೂರ್ವಕವಾಗಿ ರಕ್ತಚಂದನ ಗಂಧೋದಕದಿಂದ ಅರ್ಘ್ಯಪ್ರದಾನಮಾಡಬೇಕು.

೨೪. ನೆಲದಮೇಲೆ ಪ್ರಸಿದ್ಧವಾದ ಸೂರ್ಯಮಂಡಲವನ್ನು ಬರೆದು ಒಂದೇ ಮನಸ್ಸುಳ್ಳವನಾಗಿ ತಾಮ್ರಪಾತ್ರೆಯಲ್ಲಿ ಕಣಿಗಲೆಹೂವನ್ನು ಇಡಬೇಕು.

೨೫-೨೬. ಬಳಿಕ ತಿಲಾಕ್ಷತೆ, ಯವಾಕ್ಷತೆಗಳನ್ನೂ, ಕುಶೋದಕ ಗಂಧೋದಕ ಗಳನ್ನೂ, ಆ ಪಾತ್ರೆಯಲ್ಲಿ ಹಾಕಿ ಅರ್ಘ್ಯೋದಕವನ್ನು ಸಿದ್ಧಪಡಿಸಿ; ರಕ್ತಚಂದನ, ಧೂಪ ಇವುಗಳನ್ನು ಸಮರ್ಪಿಸಿ ಪೂಜಿಸಿ, ಆ ಪಾತ್ರೆಯನ್ನು ತಲೆಯ ಮೇಲೆ ಇಟ್ಟು ಕೊಂಡು ಎರಡು ಮಂಡಿಯನ್ನೂ ನೆಲದ ಮೇಲೆ ಊರಿಕೊಂಡು ಕುಳಿತು ಹಿಂದೆ ಹೇಳಿದ "ಹ್ರಾಂ, ಹ್ರೀಂ" ಮುಂತಾದ ತ್ರಿಚಮಂತ್ರಗಳಿಂದ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

೨೭-೨೮. ಅಯ್ಯಾ ಕುರುವಂಶಶ್ರೇಷ್ಠನೇ! ಕೇಳು; ಈ ರೀತಿಯಾಗಿ ಸೂರ್ಯ ನಿಗೆ ಅರ್ಘ್ಯಸಮರ್ಪಣೆ ಮಾಡಿದವನು ಸರ್ವಪಾಪಗಳಿಂದಲೂ ಮುಕ್ತನಾಗುತ್ತಾನೆ.

ಅಯನಾನಾಂ ಸಹಸ್ರೇಣ ಚಂದ್ರಸ್ಯ ಗ್ರಹಣೇ ತಥಾ ।
ಗವಾಂ ಶತ ಸಹಸ್ರೇಣ ಯತ್ಫಲಂ ಜ್ಯೇಷ್ಠಪುಷ್ಕರೇ ॥
ದತ್ತೇ ಕುರುಕುಲಶ್ರೇಷ್ಠ ತದರ್ಘೇಣ ಫಲಂ ಲಭೇತ್ ॥ ೨೮ ॥

ದೀಕ್ಷಾಮಂತ್ರಾವಿಹೀನೋಽಪಿ ಭಕ್ತ್ಯಾ ಸಂವತ್ಸರೇಣ ತು ।
ಫಲಮರ್ಘ್ಯೇಣ ವೈ ವೀರ ಲಭತೇ ನಾತ್ರ ಸಂಶಯಃ ॥ ೨೯ ॥

ಯಃ ಪುನರ್ದೀಕ್ಷಿತೋ ವಿದ್ವಾನ್ ವಿಧಿನಾರ್ಘ್ಯಂ ನಿವೇದಯೇತ್ ।
ನಾಸಾವುತ್ಪದ್ಯತೇ ಭೂಮೌ ಸ ಲಯಂ ಯಾತಿ ಭಾಸ್ಕರೇ ॥ ೩೦ ॥

ಇಹಜನ್ಮನಿ ಸೌಭಾಗ್ಯಮಾಯುರಾರೋಗ್ಯಸಂಪದಃ ।
ಅಚಿರಾಲ್ಲಭತೇ ವೀರ ಸಭಾರ್ಯಾಸುಖಭಾಜನಂ ॥ ೩೧ ॥

---

ಸಹಸ್ರಾರು ಯುಗಾದಿಗಳಲ್ಲಿಯೂ, ನೂರಾರು ವ್ಯತೀಪಾತಯೋಗಗಳಲ್ಲಿಯೂ, ಸಾವಿರ ದಕ್ಷಿಣಾಯನ ಉತ್ತರಾಯಣ ಪುಣ್ಯಕಾಲಗಳಲ್ಲಿಯೂ, ಮತ್ತು ಚಂದ್ರಗ್ರಹಣ ಕಾಲದಲ್ಲಿಯೂ, ಲಕ್ಷಗೋದಾನವನ್ನು ಮಾಡಿದರೆ ಬರುವಂಥಾ ಫಲವು ಜ್ಯೇಷ್ಠಪುಷ್ಕರ ಕ್ಷೇತ್ರದಲ್ಲಿ ಈ ರೀತಿ ವಿಧಿಪ್ರಕಾರ ಅರ್ಘ್ಯಪ್ರದಾನ ಮಾಡಿದಮಾತ್ರದಿಂದ ಬರುವುದು.

೨೯. ಅಯ್ಯಾ ವೀರನೇ! ಕೇಳು; ದೀಕ್ಷಾವಿಹೀನನೇ ಆಗಲಿ, ಮಂತ್ರಹೀನನೇ ಆಗಲಿ ಭಕ್ತಿಯಿಂದ ಸಂವತ್ಸರದ ಪರ್ಯಂತ ಈ ರೀತಿ ಅರ್ಘ್ಯಪ್ರದಾನ ಮಾಡಿದರೆ ಆ ಅರ್ಘ್ಯದಾನದಿಂದುಂಟಾಗುವ ಸಮಗ್ರಫಲವನ್ನೂ ಹೊಂದುತ್ತಾನೆ. ಸಂಶಯವಿಲ್ಲ.

೩೦. ಹೀಗೆಂದಮೇಲೆ ವಿದ್ವಾಂಸನಾದವನು ದೀಕ್ಷಾಬದ್ಧನೂ ಆಗಿ ವಿಧಿಪ್ರಕಾರ ಅರ್ಘ್ಯವನ್ನು ಸಮರ್ಪಣೆಮಾಡಿದರೆ ಅವನಿಗೆ ಭೂಲೋಕದಲ್ಲಿ ಪುನರ್ಜನ್ಮವಿಲ್ಲ. ಅವನು ಸೂರ್ಯನಲ್ಲಿ ಐಕ್ಯಹೊಂದುತ್ತಾನೆ.

೩೧. ಈ ಜನ್ಮದಲ್ಲಿ ಸೌಭಾಗ್ಯವನ್ನೂ, ಆಯುಸ್ಸು, ಆರೋಗ್ಯ, ಸಂಪತ್ತು ಇವುಗಳನ್ನೂ ಅನುಕೂಲೆಯಾದ ಹೆಂಡತಿಯನ್ನೂ ಪಡೆದು ಶೀಘ್ರವಾಗಿ ಸರ್ವಸುಖಗಳಿಗೂ ಭಾಗಿಯಾಗುವನು.

**ಏಷ ಸ್ನಾನವಿಧಿಃ ಪ್ರೋಕ್ತೋ ಮಯಾ ಸಂಕ್ಷೇಪತಸ್ತವ ।**
**ಹಿತಾಯ ಮಾನವೇಂದ್ರಾಣಾಂ ಸರ್ವಪಾಪಪ್ರಣಾಶನಃ ॥ ೩೨ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ ಭೀಷ್ಮ ವ್ಯಾಸಸಂವಾದೋ ನಾಮ ಏಕೋನದ್ವಿಶತತಮೋಽಧ್ಯಾಯಃ.**



---

೩೨. ರಾಜರುಗಳ ಹಿತಕ್ಕಾಗಿಯೂ, ಮತ್ತು ಇತರರ ಸಮಸ್ತಪಾಪಗಳು ನಾಶವಾಗುವುದಕ್ಕೂ ಈ ಸ್ನಾನವಿಧಿಯನ್ನು ನಾನು ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ಭೀಷ್ಮವ್ಯಾಸ ಸಂವಾದವೆಂಬ ನೂರತೊಂಭತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವಿಶತತಮೋಽಧ್ಯಾಯಃ

---

॥ ಭೀಷ್ಮ ಉವಾಚ ॥

ಕಥಿತಸ್ತೇ ಸ್ನಾನವಿಧಿರ್ಬ್ರಹ್ಮನ್ಸ್ವೈ ಪಾಪಹಾರಕಃ ।
ಸಮ್ಯಗ್ಬ್ರೂಹ್ಯರ್ಚನವಿಧಿಂ ಪೂಜಯಿಷ್ಯಾಮಿ ಯೇನ ವೈ ॥ ೧ ॥

॥ ವ್ಯಾಸ ಉವಾಚ ॥

ಹಂತ ತೇ ಸಂಪ್ರವಕ್ಷ್ಯಾಮಿ ವಿಧಿಮಾದಿತ್ಯಪೂಜನೇ ।
ವಿವಿಕ್ತೇ ವಿಜನಸ್ಥಾನೇ ಸುಪ್ರಸನ್ನೇ ಸುಶೋಭನೇ ॥ ೨ ॥

---

### ಇನ್ನೂರನೆಯ ಅಧ್ಯಾಯ

೧. ಭೀಷ್ಮನು ವ್ಯಾಸನನ್ನು ಕುರಿತು ಎಲೈ "ಬ್ರಾಹ್ಮಣೋತ್ತಮನಾದ ವ್ಯಾಸನೇ! ಪಾಪನಾಶಕವಾದ ಸ್ನಾನವಿಧಿಯನ್ನು ನನಗೆ ಹೇಳಿದುದಾಯಿತು. ನಾನು ಪೂಜಿಸುವುದಕ್ಕನುಕೂಲವಾದ ಪೂಜಾವಿಧಿಯನ್ನು ಚೆನ್ನಾಗಿ ಹೇಳು" ಎಂದು ಕೇಳಿ ಕೊಂಡನು,

೨. ಅದಕ್ಕೆ ವ್ಯಾಸನು ಉತ್ತರ ಹೇಳುತ್ತಾನೆ—ಅಯ್ಯಾ! ಸೂರ್ಯಪೂಜನದಲ್ಲಿ ಅನುಸರಿಸಬೇಕಾದ ವಿಧಿಯನ್ನು ನಿನಗೆ ಹೇಳುವೆನು. ವಿಜನವಾಗಿಯೂ, ಶ್ರೇಷ್ಠವಾಗಿ ಪವಿತ್ರವಾಗಿಯೂ, ನಿರ್ಮಲವಾಗಿಯೂ ಇರುವ ಸ್ಥಳದಲ್ಲಿ ಸಾರಿಸಿ ರಂಗವಲ್ಲಿಹಾಕಿ, ಬಹುಮಂಗಳಕರವಾಗಿಮಾಡಿದರೆ ಸೂರ್ಯಪೂಜೆಗೆ ಅರ್ಹವಾದುದಾಗುವುದು.

ಪೂಜಯೇದ್ಭಾಸ್ಕರಂ ಮಂತ್ರೀ ಸರಲೀಕೃತವಿಗ್ರಹಃ ।
ಭದ್ರಾಸನಮಾರೂಢಃ ಪ್ರಾಙ್ಮುಖಃ ಸಾಧಕೋತ್ತಮಃ ॥ ೩ ॥

ಅಸ್ತ್ರಬೀಜೇನ ಮಂತ್ರೇಣ ನರಃ ಸ್ವಾಂಗಾನಿ ವಿನ್ಯಸೇತ್ ।
ಅಂಗುಷ್ಠಮಾದಿತಃ ಕೃತ್ವಾ ಕನಿಷ್ಠಾಂತಂ ಸುವಿನ್ಯಸೇತ್ ॥ ೪ ॥

ಹೃದಯಾದೀನ್ಷಡಂತಾಂಸ್ತಾನ್ವಿನ್ಯಸೇತ್ಕ್ರಮತಃ ಸದಾ ।
ನೇತ್ರಪಾಣಿತಲೇ ವಾರಿ ನ್ಯಸ್ಯ ಅರ್ಘ್ಯಾದಿ ಮಂತ್ರವಿತ್ ॥ ೫ ॥

ಯವರ್ಗೇ ಯಚತುರ್ಥಂ ತು ಕರ್ಣಬಿಂದುಸಮನ್ವಿತಂ ।
ನೇತ್ರಬೀಜಮಿತಿ ಪ್ರೋಕ್ತಂ ಜ್ಯೋತೀರೂಪಂ ನ ಸಂಶಯಃ ॥ ೬ ॥

ಪಶ್ಚಾತ್ತು ತ್ರ್ಯಕ್ಷರಂ ಸೂರ್ಯಂ ಕವಚಂ ವಿನ್ಯಸೇದ್ಬುಧಃ ।
ಕಥಿತಂ ತನ್ಮಯಾ ವೀರ ಮಂತ್ರರಾಜೇತಿ ಪೃಚ್ಛತಃ ॥ ೭ ॥

---

೩. ಮಂತ್ರಜ್ಞನಾದ ಸಾಧಕಶ್ರೇಷ್ಠನು ಪೂರ್ವೋಕ್ತ ಸ್ಥಳದಲ್ಲಿ ಶರೀರವನ್ನು ಸ್ಥಿಮಿತವಾಗಿಯೂ, ಚಲಿಸಲು ಸರಳವಾಗಿಯೂ ಇರುವ ರೀತಿ ಭದ್ರಾಸನವನ್ನೇರಿ ಪೂರ್ವಾಭಿಮುಖವಾಗಿ ಕುಳಿತುಕೊಂಡು ಪೂಜಿಸಬೇಕು.

೪–೬. ಆ ಮನುಷ್ಯನು ಆಂ, ಹ್ರೀಂ. ಹ್ರೂಂ, ಹ್ರಾಂ ಇತ್ಯಾದಿ ಅಸ್ತ್ರಬೀಜಾಕ್ಷರ ಮಂತ್ರಪೂರ್ವಕವಾಗಿ ತನ್ನ ಅಂಗಗಳಲ್ಲಿ ವಿನ್ಯಾಸಮಾಡಿಕೊಳ್ಳಬೇಕು. ಈ ವಿನ್ಯಾಸ ಕ್ರಮದಲ್ಲಿ ಅಂಗುಷ್ಠಾಭ್ಯಾಂನಮಃ ಮೊದಲುಗೊಂಡು ಕನಿಷ್ಠಿಕಾಭ್ಯಾಂನಮಃ ಎಂಬ ವರೆಗೆ ಕರನ್ಯಾಸಮಾಡಿಕೊಳ್ಳಬೇಕು. ಹೃದಯಾಯನಮಃ ಮೊದಲುಗೊಂಡು ಅಸ್ತ್ರಾಯಫಟ್ ಎಂಬವರೆಗೆ ಕ್ರಮವಾಗಿ ಅಂಗನ್ಯಾಸಮಾಡಿಕೊಳ್ಳಬೇಕು. ಮಂತ್ರಜ್ಞನಾದವನು ಅಂಗೈಯಲ್ಲಿ ಅರ್ಘ್ಯದ ಜಲವನ್ನು ಇಟ್ಟುಕೊಂಡು ಯಕಾರದಿಂದ ಪ್ರಾರಂಭವಾಗುವ ಅಂತಸ್ಥವರ್ಗದಲ್ಲಿ ಯಕಾರದಿಂದ ನಾಲ್ಕನೆಯ ಅಕ್ಷರವಾದ ವಕಾರವು ಕರ್ಣಿಬಿಂದುವಿನಿಂದ ಕೂಡಿದರೆ ನೇತ್ರಬೀಜವೆನಿಸುವುದು. ಅದು ಜ್ಯೋತಿಃಸ್ವರೂಪವೆಂದು ಹೇಳುವರು. ಸಂಶಯವಿಲ್ಲ.

೭. ಅನಂತರ ವಿದ್ವಾಂಸನಾದವನು ಅಕ್ಷರತ್ರಯಾತ್ಮಕವಾದ ಸೂರ್ಯಕವಚವನ್ನು ವಿನ್ಯಾಸಮಾಡಿಕೊಳ್ಳಬೇಕು. ಹಿಂದೆ ಪ್ರಶ್ನೆಮಾಡಿದಾಗ ಇದನ್ನೇ ನಿನಗೆ 'ಮಂತ್ರರಾಜ' ಎಂದು ಹೇಳಿದ್ದೆನು.

ಪ್ರಾಣಾಯಾಮಂ ತತಃ ಕುರ್ಯಾತ್ಪ್ರಥಮಂ ಬೀಜಮುದ್ಗಿರನ್ ।
ಶೇಷಂ ಕ್ರಮೇಣ ಧೃತ್ವಾಯಂ ವಿಸೃಜೇತ್ ಭೀಷ್ಮ ಶಕ್ತಿತಃ ॥ ೮ ॥

ತ್ರಿಭಿರೇವ ತತೋ ಘೋರೈರಾತ್ಮಶುದ್ಧಿಃ ಕೃತಾ ಭವೇತ್ ।
ಇತಿ ಸಂಶೋಧ್ಯ ಚಾತ್ಮಾನಂ ಸೂರ್ಯಂ ಸರ್ವಾಂತಿಕಂ ನ್ಯಸೇತ್ ॥ ೯ ॥

ಹೃದಯೇ ಹೃದಯಂ ನ್ಯಸ್ಯ ಶಿರಃ ಶಿರಸಿ ವಿನ್ಯಸೇತ್ ।
ಏಕವಿಂಶತಿಮಾತ್ರಕಾಯಾ ಅಕ್ಷರಂ ಯತ್ಪ್ರಕೀರ್ತಿತಂ ॥ ೧೦ ॥

ಹೃದ್ಬೀಜಮಿತಿ ವಿಖ್ಯಾತಂ ಬ್ರಹ್ಮಸಾನಮನೂಪಮಂ ।
ಶಿರಸಾರ್ಕಸ್ಯ ಪೂಜಾ ತು ಲೋಕೇರ್ಕಃ ಪ್ರತಿಕಥ್ಯತೇ ॥ ೧೧ ॥

ನ್ಯಸೇಚ್ಛಿಖಾಂ ಶಿಖಾಯಾಂ ತು ಶರೀರೇ ಕವಚಂ ನ್ಯಸೇತ್ ।
ನೇತ್ರಯೋರ್ವಿನ್ಯಸೇನ್ನೇತ್ರಂ ಕರಯೋರಸ್ತ್ರಮೇವ ಚ ॥ ೧೨ ॥

---

೮. ಪ್ರಥಮ ಬೀಜಾಕ್ಷರವನ್ನು ಉಚ್ಚರಿಸುತ್ತಾ ಪ್ರಾಣಾಯಾಮಮಾಡಬೇಕು. ಅಯ್ಯಾ ಭೀಷ್ಮನೇ! ಹಾಗೆ ಮಾಡುವಾಗ ಶಕ್ತ್ಯನುಸಾರ ಶ್ವಾಸವನ್ನು ಸೆಳೆದು ಧರಿಸಿ ಕ್ರಮದಿಂದ ಈಚೆಗೆ ಬಿಡಬೇಕು.

೯. ಶ್ರಮಸಾಧ್ಯವಾದ ಈ ಪೂರಕ, ಕುಂಭಕ, ರೇಚಕಗಳ ಮೂರರಿಂದ ಆತ್ಮಶುದ್ಧಿಯಾದಂತಾಗುವುದು. ಈ ರೀತಿ ಆತ್ಮಶುದ್ಧಿಕರವಾದ ಪ್ರಾಣಾಯಾಮಾದಿ ವಿನ್ಯಾಸವೆಲ್ಲವೂ ಆದಮೇಲೆ ಅವರವರಿಗೆ ಉಪದೇಶವಾಗಿರುವ ರೀತಿ "ಓಂಘೃಣಿ ಸ್ಸೂರ್ಯಆದಿತ್ಯೋಂ" ಎಂದು ಮುಂತಾದ ಸೂರ್ಯಮಂತ್ರವನ್ನು ಜಪಮಾಡಬೇಕು.

೧೦-೧೧. ಜಪದ ಕೊನೆಯಲ್ಲಿ ಹೃದಯಾಯನಮಃ ಎಂಬ ಮಂತ್ರದಿಂದ ಹೃದಯದಲ್ಲಿ ನ್ಯಾಸಮಾಡಿಕೊಳ್ಳಬೇಕು. ಶಿರಸೇಸ್ವಾಹಾ ಎಂಬ ಮಂತ್ರದಿಂದ ಶಿರಸ್ಸಿನಲ್ಲಿ ನ್ಯಾಸಮಾಡಿಕೊಳ್ಳಬೇಕು. ಈ ಶಿರೋನ್ಯಾಸೋಪಯೋಗಿಯಾದ ಅರ್ಕ ಮಂತ್ರವು ಇಪ್ಪತ್ತೊಂದು ಮಾತ್ರೆಗಳುಳ್ಳದಾಗಿ ಹೃದ್ಬೀಜವೆಂದು ಪ್ರಸಿದ್ಧಹೊಂದಿ ಇದು ಅಸದೃಶವಾದ ಬ್ರಹ್ಮರಂಧ್ರ ಸ್ಥಾನಿಯಾಗಿದೆ. ಆ ಅರ್ಕಮಂತ್ರದಿಂದ ಶಿರಸ್ಸಿನಲ್ಲಿ ಪೂಜಾರ್ಥವಾಗಿ ನ್ಯಾಸಮಾಡುವುದರಿಂದ ಲೋಕದಲ್ಲಿ ಸ್ವಾಮಿಗೆ 'ಅರ್ಕ' ಎಂದು ಹೆಸರಾಗಿದೆ.

೧೨. ಶಿಖಾಯೈ ವಷಟ್ ಎಂಬ ಮಂತ್ರದಿಂದ ಶಿಖೆಯಲ್ಲಿ ನ್ಯಾಸಮಾಡಿಕೊಳ್ಳಬೇಕು. ಹೀಗೆ ಮಾಡಿಕೊಳ್ಳುವಾಗ ಚಕ್ರದ ಅರೆಕಾಲು ಸುತ್ತಲೂ ಬಳಸಿರುವಂತೆ

ಮಹಾವ್ಯಾಹೃತಯೋ ರಾಜಂಸ್ತಥಾರಜ್ವಾಲಿನೀ ಶಿಖಾ ।
ಹಕಾರಶ್ಚ ರಕಾರಶ್ಚ ಕುಕಾರೋ ಬಿಂದುನಾಸಹ ॥ ೧೩ ॥

ಏತೇಷಾಂ ಸಮಯೋಶ್ಚೈವ ಕವಚಂ ಪರಿಕಥ್ಯತೇ ।
ನೇತ್ರಯೋರ್ವಿನಸೇನ್ನೇತ್ರಂ ಕರಯೋರಸ್ತ್ರಮೇವ ಚ ॥ ೧೪ ॥

ಏವಮಂಗಾನಿ ವಿನ್ಯಸ್ಯ ನಾಸೌ ಕೇನಾಪಿ ಬಾಧ್ಯತೇ ।
ಶತ್ರವೋ ಮಿತ್ರತಾಂ ಯಾಂತಿ ಅಲಾಭೇ ಲಾಭಮಾಪ್ನುಯಾತ್ ॥ ೧೫ ॥

ಆತ್ಮಾನಂ ಭಾಸ್ಕರಂ ಜ್ಞಾತ್ವಾ ಯಥೋಕ್ತಂ ತತ್ವದರ್ಶಿಭಿಃ ।
ತತಸ್ತು ಪೂಜಯೇದ್ಭಾನುಂ ಸ್ಥಂಡಿಲೇ ವಿಧಿವತ್ಪುನಃ ॥ ೧೬ ॥

ಕೃತ್ವಾ ತು ದಕ್ಷಿಣೇ ಪಾರ್ಶ್ವೇ ದಿವ್ಯಪುಷ್ಪಕರಂಡಕಂ ।
ಕೃತ್ವಾ ಸುಶೋಭಿತೇ ವಾಮೇ ತಾಮ್ರಪೂರ್ಣೇನ ವಾರಿಣಾ ॥ ೧೭ ॥

ಅಸ್ತ್ರೇಣ ಕ್ಷಾಲಿತಾಂ ಪೂರ್ಣಾಂ ಶೇಷಂ ಮಂತ್ರೈರ್ಜಲೈಸ್ತಥಾ ।
ಅಭಿಮಂತ್ರ್ಯ ತತಃ ಸ್ಥಾಪ್ಯ ಕವಚೇನಾವಗುಂಠಿತಾಂ ॥ ೧೮ ॥

---

ಕೈಯನ್ನು ಶಿಖೆಯಸುತ್ತಲೂ ಬಳಸಿ ತರಬೇಕು. ಕವಚಾಯಹ್ರುಂ ಎಂಬ ಮಂತ್ರ ದಿಂದ ಶರೀರದಲ್ಲಿ ನ್ಯಾಸಮಾಡಿಕೊಳ್ಳಬೇಕು. ನೇತ್ರತ್ರಯಾಯವೌಷಟ್ ಎಂಬ ಮಂತ್ರದಿಂದ ಎರಡು ಕಣ್ಣುಗಳಲ್ಲಿ ನ್ಯಾಸಮಾಡಿಕೊಳ್ಳಬೇಕು. ಅಸ್ತ್ರಾಯಫಟ್ ಎಂಬು ದರಿಂದ ಎರಡು ಅಂಗೈಗಳನ್ನು ಅಭಿಮುಖವಾಗಿ ಮುಚ್ಚಿ ನ್ಯಾಸಮಾಡಿಕೊಳ್ಳಬೇಕು.

೧೩-೧೪. ಎಲೈ ರಾಜನೇ! ಮಹಾವ್ಯಾಹೃತಿಗಳಿಂದ ಯುಕ್ತವಾಗಿರಬೇಕು, ಮತ್ತು ಹಕಾರ, ರಕಾರ, ಕುಕಾರ, ಬಿಂದು ಸೇರಿ ಆಗುವ ಹ್ಕ್ರುಂ ಎಂಬುದು, ಕವಚ ಮಂತ್ರವೆಂದು ಹೇಳಿದೆ. ನೇತ್ರತ್ರಯಾಯ ವೌಷಟ್ ಎಂಬುದನ್ನು ನೇತ್ರಗಳೆರಡ ರಲ್ಲೂ ನ್ಯಾಸಮಾಡಬೇಕೆಂದೂ ಅಸ್ತ್ರಾಯಃಫಟ್ ಎಂಬುದರಿಂದ ಎರಡು ಕೈಯನ್ನೂ ಕೂಡಿಸಿ ಚಪ್ಪಾಳೆತಟ್ಟಬೇಕೆಂದೂ ಹೇಳಿದೆ.

೧೫. ಹೀಗೆ ಅಂಗಗಳಲ್ಲಿ ಕವಚ ಅಸ್ತ್ರಾದಿಗಳನ್ನು ನ್ಯಾಸಮಾಡಿಕೊಂಡರೆ ಯಾರಿಂದಲೂ ಯಾವ ಬಾಧೆಯೂ ಸಂಭವಿಸುವುದಿಲ್ಲ. ಶತ್ರುಗಳು ಮಿತ್ರರಾಗುತ್ತಾರೆ ಅದುವರೆಗೂ ಲಭಿಸದೆ ಇದ್ದ ವಸ್ತುಗಳು ಲಭಿಸುವುವು.

೧೬-೧೯. ತತ್ವದರ್ಶಿಗಳು ತನ್ನಲ್ಲಿಯೇ ಸೂರ್ಯನಿರುವನೆಂದು ಭಾವಿಸಿರಬೇ ವರು ಹಾಗೆ ಭಾವಿಸಿ ಪೂಜೆಗಾಗಿ ನಿರ್ಮಿಸಿದ ಚೌಕನಾದ ಜಗಲಿಯಲ್ಲಿ ವಿಧಿಪ್ರಕಾರ

ಸ್ಥಂಡಿಲೇಚೈವ ದ್ರವ್ಯಾಣಿ ಪೂಜಾರ್ಥಂ ಕಲ್ಪಿತಾನಿ ತು ।
ಸರ್ವಾಣಿ ಪ್ರೋಕ್ಷಯೇದ್ವಿದ್ವಾನರ್ಘ್ಯಪಾತ್ರಂ ಜಲೇನ ತು ॥
ತತೋ ಮಂತ್ರಂ ಜಪೇತ್ಪಶ್ಚಾದೇಕಚಿತ್ತೇನ ಮಂತ್ರವಿತ್ ॥ ೧೯ ॥

॥ ಭೀಷ್ಮ ಉವಾಚ ॥

ಪುರಾಣವಿಹಿತೈರ್ಮಂತ್ರೈರ್ಯೋ ವಿಧಿಃ ಕಥಿತೋ ಬುಧೈಃ ॥ ೨೦ ॥

ಸ ಮಯಾ ವಿದಿತಃ ಕೃತ್ಸ್ನಃ ಕಥಿತೋ ನೈಕಶೋ ದ್ವಿಜೈಃ ।
ವೇದೋಕ್ತೈರ್ವಿವಿಧೈರ್ಮಂತ್ರೈರ್ಯಥಾ ಸಂಪೂಜ್ಯತೇ ರವಿಃ ॥ ೨೧ ॥

ತಥಾ ಮೇ ಬ್ರೂಹಿ ಸಕಲಂ ವೈದಿಕಂ ವಿಧಿಮುತ್ತಮಂ ॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿಸಪ್ತಮೀಕಲ್ಪೇ
ಸೌರಧರ್ಮೇ ದ್ವಿಶತತಮೋಽಧ್ಯಾಯಃ.

---

ಪುನಃ ಸೂರ್ಯನನ್ನು ಪೂಜಿಸಬೇಕು. ಶ್ರೇಷ್ಠವಾದ ಹೂಗಳುಳ್ಳ ಬುಟ್ಟಿಯನ್ನು ಅದರ ಮಗ್ಗುಲಲ್ಲಿಯೂ, ಉದಕಪೂರ್ಣವಾಗಿ ಮಂಗಳಕರವಾದ ತಾಮ್ರಕಲಶವನ್ನು ಅದರ ಎಡಗಡೆಯೂ ಇಡಬೇಕು, ವಿದ್ವಾಂಸನಾದವನು ಮೊದಡು ಅಸ್ತ್ರಮಂತ್ರೋಚ್ಚಾರಣ ಪೂರ್ವಕವಾಗಿ ತೊಳೆದು, ಜಲಪೂರ್ಣವಾದ ಆ ಕಲಶವನ್ನು ಅಭಿಮಂತ್ರಿಸಿ, ಅನಂತರ ಕವಚಮಂತ್ರ ಪೂರ್ವಕವಾಗಿ ಹಸ್ತದಿಂದ ಆಚ್ಛಾದಿಸಿ, ಪೂಜೆಗೋಸ್ಕರ ಸಿದ್ಧಪಡಿಸಿಟ್ಟಿರುವ ಪೂಜಾದ್ರವ್ಯಗಳೆಲ್ಲವನ್ನೂ ಆ ಕಲಶದ ಉದಕದಿಂದ ಪ್ರೋಕ್ಷಿಸಬೇಕು. ಅನಂತರ ಮಂತ್ರಜ್ಞನು ಒಂದೇ ಮನಸ್ಸಿನಿಂದ ಜಪಮಾಡಬೇಕು " ಎಂದನು.

೨೦–೨೨. ಆಗ ಭೀಷ್ಮನು ವ್ಯಾಸನನ್ನು ಕುರಿತು "ಸ್ವಾಮಿ! ವಿದ್ವಾಂಸರಾದ ಬ್ರಾಹ್ಮಣರು ಅನೇಕ ಪ್ರಕಾರವಾಗಿ ಪುರಾಣೋಕ್ತವಾದ ಮಂತ್ರಗಳಿಂದ ಸಮಗ್ರವಾಗಿ ಹೇಳಿದ ಪೂಜಾಕ್ರಮವನ್ನು ನಾನು ಶ್ರವಣಮಾಡಿದೆನು. ವೇದಮಂತ್ರಪೂರ್ವಕವಾಗಿ ವೈದಿಕವಿಧಾನದಿಂದ ಸೂರ್ಯನನ್ನು ಆರಾಧಿಸುವ ಉತ್ತಮವಾದ ಕ್ರಮವನ್ನು ಈಗ ನನಗೆ ಸಮಗ್ರವಾಗಿ ಹೇಳಬೇಕು " ಎಂದು ಕೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೌರಧರ್ಮದಲ್ಲಿ ಪೂಜಾವಿಧಾನವೆಂಬ ಇನ್ನೂರನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಏಕದ್ವಿಶತತಮೋಽಧ್ಯಾಯಃ

---

॥ ವ್ಯಾಸ ಉವಾಚ ॥

**ಅಥ ತ್ವಾಂ ಕಥಯಿಷ್ಯೇಽಹಂ ಸಂವಾದಂ ಧರ್ಮವರ್ಧನಂ ।**
**ಸುರಜ್ಯೇಷ್ಠಸ್ಯ ದೇವಸ್ಯ ಕೇಶವಸ್ಯ ಚ ಭಾರತ ॥ ೧ ॥**

**ಮನೋವತ್ಯಾಂ ಸುರಜ್ಯೇಷ್ಠಂ ಸುಖಾಸೀನಂ ಚತುರ್ಮುಖಂ ।**
**ಪ್ರಣಮ್ಯ ಶಿರಸಾ ವಿಷ್ಣುರಿದಂ ವಚನಮಬ್ರವೀತ್ ॥ ೨ ॥**

॥ ವಿಷ್ಣುರುವಾಚ ॥

**ಭಗವನ್ ದೇವದೇವೇಶ ಸುರಜ್ಯೇಷ್ಠ ಚತುರ್ಮುಖ ।**
**ಆರಾಧನವಿಧಿಂ ಬ್ರೂಹಿ ಭಾಸ್ಕರಸ್ಯ ಮಹಾತ್ಮನಃ ॥ ೩ ॥**

---

### ಇನ್ನೂರಒಂದನೆಯ ಅಧ್ಯಾಯ

೧. ವ್ಯಾಸನು ಭೀಷ್ಮನನ್ನು ಕುರಿತು ಅಯ್ಯಾ ಭೀಷ್ಮಾ—. ಈಗ ಧರ್ಮವೃದ್ಧಿಕರವಾದ ಬ್ರಹ್ಮ, ವಿಷ್ಣು ಇವರ ಸಂವಾದವನ್ನು ನಿನಗೆ ಹೇಳುವೆನು ಕೇಳು.

೨. ಪೂರ್ವಕಾಲದಲ್ಲಿ ಮನೋವತಿಯಲ್ಲಿ ಸುಖದಿಂದ ಕುಳಿತಿದ್ದ ಚತುರ್ಮುಖನಾದ ಬ್ರಹ್ಮನ ಬಳಿಗೆ ವಿಷ್ಣುವು ಬಂದು ತಲೆಬಾಗಿ ವಂದಿಸಿ ಈ ಮುಂದೆ ಹೇಳುವಂತೆ ಮಾತನಾಡುವವನಾಗಿ

೩. ವಿಷ್ಣುವು ಬ್ರಹ್ಮನನ್ನು ಕುರಿತು—" ಭಗವಂತನೂ, ದೇವದೇವೇಶನೂ, ಸುರಜ್ಯೇಷ್ಠನೂ ಆದ ಎಲೈ ಚತುರ್ಮುಖನೇ! ಮಹಾತ್ಮನಾದ ಸೂರ್ಯನನ್ನಾರಾಧಿಸುವ ವಿಧಾನವನ್ನು ಹೇಳು. "

ಕಥಮಾರಾಧಯೇದ್ಭಾನುಂ ಮಂಡಲಸ್ಥಂ ದಿವಸ್ಪತಿಂ ।
ಬ್ರೂಹಿ ಮೇಽತ್ರ ಗುಣಂ ದೇವಂ ಯೇನಾಹಂ ಪೂಜಯೇ ವಿಭುಂ ॥ ೪ ॥

ಸಾಧುಸಾಧು ಮಹಾಬಾಹೋ ಸಾಧುಪೃಷ್ಟೋಽಸ್ಮಿ ಭೂಧರ ।
ಶೃಣು ಚೈಕಮನಾ ದೇವ ಭಾಸ್ಕರಾರಾಧನೇ ವಿಧಿಂ ॥ ೫ ॥

ಖಷೋಲ್ಕಂ ನಿರ್ಮಲಂ ದೇವಂ ಪೂಜಯಿತ್ವಾ ವಿಭಾವಸುಂ ।
ಪೂರ್ವೇ ಮಧ್ಯೇ ತಥಾಗ್ನೇಯ್ಯಾಂ ವಿರೂಪಾಕ್ಷೇ ಪ್ರಭಂಜನೇ ॥ ೬ ॥

ಕ್ರಮೇಣ ಯಾವದೀಶಾನೀಂ ಹೃದಿ ಬೀಜೇನ ವಿನ್ಯಸೇತ್ ।
ಖಷೋಲ್ಕಾಸನಮೇತತ್ತು ವಿನ್ಯಸ್ತಂ ಮಾನವೋತ್ತಮೈಃ ॥ ೭ ॥

ತತಸ್ತಸ್ಯೋಪರಿಷ್ಟಾತ್ತು ಹೃದಯೇನ ತು ಕಂಚುಕಂ ।
ಸಪ್ತಾವರಣಸಂಯುಕ್ತಮಷ್ಟಪತ್ರಂ ಸಕರ್ಣಿಕಂ ॥ ೮ ॥

---

೪. ದಿವಸ್ಪತಿಯಾದ ಸೂರ್ಯನನ್ನು ಮಂಡಲಸ್ಥನನ್ನಾಗಿ ಹೇಗೆ ಆರಾಧಿಬೇಕು? ಈ ಮಂಡಲಪೂಜೆಯ ಗುಣವನ್ನು ನನಗೆ ಹೇಳು. ಅದನ್ನು ತಿಳಿದು ಸ್ವಾಮಿಯಾದ ಸೂರ್ಯನನ್ನು ನಾನೂ ಪೂಜಿಸುವೆನು" ಎಂದು ಕೇಳಿದನು.

೫. ಆಗ ಬ್ರಹ್ಮನು " ಎಲೈ ಮಹಾಬಾಹುವಾದ ವಿಷ್ಣುವೇ! ನೀನು ನನ್ನನ್ನು ಬೆನ್ನಾಗಿ ಕೇಳಿದೆ. ಆಗಲಿ ಅಗತ್ಯವಾಗಿ ಹೇಳುತ್ತೇನೆ.

೬. ಸೂರ್ಯಾರಾಧನ ವಿಧಿಯನ್ನು ಒಂದೇ ಮನಸ್ಸಿನಿಂದ ಕೇಳು. ನಿರ್ಮಲನೂ, ಖಷೋಲ್ಕನೂ ಆದ ಸೂರ್ಯನನ್ನು ಪೂಜಿಸುವಾಗ ಪೂರ್ವ, ಮಧ್ಯಭಾಗ ಆಗ್ನೇಯ, ನೈಋತ್ಯ, ವಾಯವ್ಯ ಮತ್ತು ಈಶಾನ್ಯ ಈ ದಿಕ್ಕುಗಳಲ್ಲಿ

೭. ಹೃದ್ಬೀಜಾಕ್ಷರದಿಂದ ನ್ಯಾಸಮಾಡಬೇಕು. ಮಾನವಶ್ರೇಷ್ಠರು ವಿನ್ಯಾಸ ಮಾಡ ಬೇಕಾದ ಖಷೋಲ್ಕಾಸನದ ಕ್ರಮವೇ ಇದು ಎನಿಸುವುದು.

೮. ಆಮೇಲೆ ಆದರ ಮೇಲ್ಭಾಗದಲ್ಲಿ ಹೃದಯದಿಂದ ಕಂಚುಕವನ್ನು ರಚಿಸ ಬೇಕು. ಅದು ಸಪ್ತಾವರಣಸಂಯುಕ್ತವಾಗಿಯೂ, ಅಷ್ಟದಳಯುಕ್ತವಾಗಿಯೂ, ಕರ್ಣಿಕಾಸಹಿತವಾಗಿಯೂ ಮತ್ತು,

ಕೇಸರಾಲಂಬಿ ದೇವತ್ವಂ ಪಂಚವರ್ಣಂ ಮಹಾದ್ಭುತಂ ।
ಪರೀಕ್ಷ್ಯಾ ಭೂಮಿವಿಧಿವಚ್ಛಾಸ್ತ್ರೋಕ್ತವಿಧಿನಾ ಕೃತಂ ॥ ೯ ॥

ದೀಪ್ತಾದಿ ಪೂರ್ವಾದಾರಭ್ಯ ಯಾವದೀಶಾನಗೋಚರಂ ।
ನ್ಯಸೇಚ್ಛಕ್ತ್ಯಷ್ಟಕಂ ಮಂತ್ರೀ ಮಧ್ಯತಃ ಸರ್ವತೋಮುಖೀಂ ॥ ೧೦ ॥

ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿರ್ವಿಮಲಾ ತಥಾ ।
ಅಮೋಘಾ ವಿದ್ಯುತಾ ಚೈವ ನವಮಾ ಸರ್ವತೋಮುಖೀ ॥ ೧೧ ॥

ತತ ಆವಾಹಯೇದ್ಭಾನುಂ ಸ್ಥಾಪಯೇತ್ಕರ್ಣಿಕೋಪರಿ ।
ಉಪಸ್ಥಾನಂ ತು ವೈ ಕೃತ್ವಾ ಮಂತ್ರೇಣಾನೇನ ಸುವ್ರತ ॥ ೧೨ ॥

ಉದುತ್ಯಂಜಾತವೇದಸಮಿತಿ ಮಂತ್ರಃ ಪ್ರಕೀರ್ತಿತಃ ।
ಅಗ್ನಿಂದೂತೇನ ಮಂತ್ರೇಣ ಅನೇನ ವಿಶ್ವಸುವ್ರತಃ ॥ ೧೩ ॥

---

೯. ಜೋಲುತ್ತಿರುವ ಕೇಸರಗಳಿಂದ ಕೂಡಿರುವಂತೆಯೂ, ಐದುವರ್ಣಗಳು ಳ್ಳುದಾಗಿ ಮಹಾದ್ಭುತವಾಗಿಯೂ ಇರಬೇಕು. ಭೂಮಿಪರೀಕ್ಷೆಯ ಶಾಸ್ತ್ರೋಕ್ತವಿಧಿ ಯಂತೆ ಭೂಶೋಧನೆ ಮಾಡಿದಮೇಲೆ;

೧೦. ಮಂತ್ರಜ್ಞನು ಪೂರ್ವದಿಕ್ಕು ಮೊದಲುಮಾಡಿ, ಈಶಾನ್ಯ ಪರ್ಯಂತವಾಗಿ ಎಂಟುದಿಕ್ಕುಗಳಲ್ಲಿ ದೀಪ್ತೆ ಮೊದಲಾದ ಅಷ್ಟಶಕ್ತಿಯರೂ, ಮಧ್ಯದಲ್ಲಿ ಸರ್ವತೋ ಮುಖಿದೇವಿಯೂ ಇರುವಂತೆ ಬರೆದು ಮೇಲೆ ಹೇಳಿದ ಕಂಚುಕವನ್ನು ಇರಿಸಿ ಪೂಜಿ ಸಬೇಕು.

೧೧. ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ ವಿದ್ಯುತಾ ಇವರು ಅಷ್ಟಶಕ್ತಿಯರು. ಮತ್ತು ಸರ್ವತೋಮುಖಿಯು ಒಂಭತ್ತ ನೆಯ ಶಕ್ತಿ.

೧೨. ಎಲೈ ಸುವ್ರತನೇ! ಆಮೇಲೆ ಉಪಸ್ಥಾನಮಾಡುವನಾಗಿ ಈ ಮುಂದಿನ ಮಂತ್ರದಿಂದ ಕರ್ಣಿಕೆಯ ಮೇಲ್ಭಾಗದಲ್ಲಿ ಸೂರ್ಯನನ್ನು ಆವಾಹನಮಾಡಬೇಕು.

೧೩–೧೪. ಉಪಸ್ಥಾನಾರ್ಥವಾಗಿ "ಉದುತ್ಯಂ ಜಾತವೇದಸಂ" ಎಂಬ ಮಂತ್ರ ವನ್ನು ಹೇಳಬೇಕು. ಅಯ್ಯಾ ಸಮಸ್ತ ವ್ರತಗಳನ್ನೂ ಆಚರಿಸುವವನೇ! "ಅಗ್ನಿಂದೂತಂ"

ಆಕೃಷ್ಣೇ ನರಜಸಾ ಮಂತ್ರೇಣಾನೇನ ಚಾರ್ಚಯೇತ್ ।
ಹಂಸಃಶುಚಿಷದಿತ್ಯೇತನ್ಮಂತ್ರೇಣಾರ್ಕಂ ಪ್ರಪೂಜಯೇತ್ ॥ ೧೪ ॥

ಆತಪ್ತೇತಾರಕಂ ದೇವೀಂ ದೀಪ್ತಾನೇನ ಪ್ರಪೂಜಯೇತ್ ।
ಅಪೃಶ್ರಮಸ್ಯಕೇತವಃ ಸೂಕ್ಷ್ಮಾಂ ದೇವೀಂ ಸಮರ್ಚಯೇತ್ ॥ ೧೫ ॥

ತರಣಿರ್ವಿಶ್ವದರ್ಶೇತಿ ಅನೇನ ಸತತಂ ಜಯಂ ।
ಪ್ರತ್ಯಙ್ದೇವಾನಾಂ ವಿಶೇತಿ ಭದ್ರಾ ದೇವೀಂ ಸಮರ್ಚಯೇತ್ ॥ ೧೬ ॥

ವಿಭೂತಿಮರ್ಚಯೇನ್ನಿತ್ಯಂ ಯೇನಾಪಾವಕಚಕ್ಷಸಾ ।
ವಿದ್ಯಾಮೇಷೀತಿ ಮಂತ್ರೇಣ ಹ್ಯನೇನ ವಿಮಲಾಂ ಸದಾ ॥ ೧೭ ॥

ಅಮೋಘಾಂ ವಿದ್ಯುತಾಂ ಚೈವ ಮಂತ್ರೇಣಾನೇನ ಪೂಜಯೇತ್ ।
ನವಮೀಂ ಪೂಜಯೇದ್ದೇವೀಂ ಸತತಂ ಸರ್ವತೋಮುಖೀಂ ॥ ೧೮ ॥

---

ಎಂಬ ಮಂತ್ರದಿಂದಲೂ, "ಆಕೃಷ್ಣೇನರಜಸಾ" ಎಂಬ ಮಂತ್ರದಿಂದಲೂ, "ಹಂಸಃ ಶುಚಿಷತ್" ಎಂಬ ಈ ಮಂತ್ರದಿಂದಲೂ ಸೂರ್ಯನನ್ನು ಆವಾಹನಮಾಡಬೇಕು.

೧೫. ಆತಪ್ತೇತಾರಕಂ ಎಂಬ ಮಂತ್ರದಿಂದ ದೀಪ್ತಾದೇವಿಯನ್ನು ಆವಾಹಿಸಬೇಕು. ಅಸದೃಶ್ಯಮಸ್ಯಕೇಕವಃ ಇದರಿಂದ ಸೂಕ್ಷ್ಮಾದೇವಿಯನ್ನು ಆವಾಹಿಸಬೇಕು

೧೬. "ತರಣಿರ್ವಿಶ್ವದರ್ಶತಃ" ಎಂಬ ಮಂತ್ರದಿಂದ ಜಯಾದೇವತೆಯನ್ನೂ, "ಪ್ರತ್ಯಙ್ದೇವಾನಾಂ" ಎಂಬ ಮಂತ್ರದಿಂದ ಭದ್ರಾದೇವಿಯನ್ನೂ ಆವಾಹಿಸಬೇಕು.

೧೭. "ಯೇನಾಪಾವಕಚಕ್ಷಸಾ" ಎಂಬ ಮಂತ್ರದಿಂದ ವಿಭೂತಿದೇವತೆಯನ್ನು ಪೂಜಿಸಬೇಕು. "ವಿದ್ಯಾಮೇಷಿ" ಎಂಬ ಮಂತ್ರದಿಂದ ವಿಮಲಾದೇವಿಯನ್ನು ಆವಾಹಿಸಬೇಕು.

೧೮. ಪುನಃ ಈ ಮಂತ್ರದಿಂದಲೇ ಅಮೋಘಾದೇವಿಯನ್ನೂ, ಮತ್ತು ವಿದ್ಯುತಾದೇವಿಯನ್ನೂ ಪೂಜಿಸಬೇಕು. ಒಂಭತ್ತನೆಯವಳಾದ ಸರ್ವತೋಮುಖೀದೇವಿಯನ್ನೂ ಸಹ ಈ ಮಂತ್ರದಿಂದಲೇ ಪೂಜಿಸಬೇಕು.

ಮಂತ್ರೇಣಾನೇನ ಕೃಷ್ಣಂ ಚ ಉದ್ವಯಂತಮಸೇತಿ ಚ ।
ಉದ್ಯನ್ನದ್ಯಮಿತ್ರಹೋಮಂ ಪ್ರಥಮಮುಕ್ಷರಂ ವ್ರಜೇತ್ ॥ ೧೯ ॥

ದ್ವಿತೀಯಂ ಪೂಜಯೇತ್ಕೃಷ್ಣಂ ಶುಕೇಷು ಹರಿಮಾಣಮೇ ।
ಉದಗಾದಯಮಾದಿತ್ಯೋ ಅನೇನಾಪಿ ತೃತೀಯಕಂ ॥ ೨೦ ॥

ತತ್ಸವಿತುರ್ವರೇಣ್ಯೇತಿ ಚತುರ್ಥಂ ಪರಿಕೀರ್ತಿತಂ ।
ಮಹಿತೋ ಮಹಿತೋಯೇತಿ ಋಚಾ ಪಂಚ ಪ್ರಕೀರ್ತಯೇತ್ ॥ ೨೧ ॥

ಹಿರಣ್ಯಗರ್ಭಃ ಸಮವರ್ತತಾಗ್ರೇ ಷಷ್ಠಂ ಬೀಜಂ ಪ್ರಕೀರ್ತಿತಂ ।
ಸವಿತಾ ಪಶ್ಚಾತ್ತಾತ್ಪುರಸ್ತಾತ್ಸಪ್ತಮಂ ದೇವಸತ್ತಮ ॥ ೨೨ ॥

ಏವಂ ಬೀಜಾನಿ ವಿನ್ಯಸ್ಯ ಆದಿತ್ಯಂ ಸ್ಥಾಪಯೇದ್ವಿಜಃ ।
ಆದಿತ್ಯಂ ಸ್ಥಾಪಯೇದ್ಧ್ಯಾನೇ ಸರ್ವೇಷಾಂ ಪೂಜಯೇದ್ಬುಧಃ ॥ ೨೩ ॥

---

೧೯. "ಉದ್ವಯಂತಮಸಃ" ಎಂಬ ಮಂತ್ರದಿಂದ ಕೃಷ್ಣ (ಸೂರ್ಯ)ನನ್ನು ಪೂಜಿಸಬೇಕು. "ಉದ್ಯನ್ನದ್ಯಮಿತ್ರಮಃ" ಎಂಬ ಮಂತ್ರದಿಂದ ಹ್ರಾಂ ಎಂಬ ಪ್ರಥಮಾಕ್ಷರಸಹಿತವಾಗಿ ಪೂಜಿಸಬೇಕು.

೨೦. ಶುಕೇಷುಮೇ ಹರಿಮಾಣಂ ಎಂಬ ಮಂತ್ರದೊಡನೆ ಹ್ರೀಂ, ಎಂಬ ದ್ವಿತೀಯಾಕ್ಷರವನ್ನು ಸೇರಿಸಿ ಉಚ್ಚರಿಸಿ ಪೂಜಿಸಬೇಕು. "ಉದಗಾದಯಮಾದಿತ್ಯಃ" ಈ ಮಂತ್ರದಿಂದ ಮೂರನೆಯ ಹ್ರೂಂ ಎಂಬ ಬೀಜಾಕ್ಷರವನ್ನು ಸೇರಿಸಿ ಹೇಳಬೇಕು.

೨೧. "ತತ್ಸವಿತುರ್ವರೇಣ್ಯಂ" ಎಂಬ ಮಂತ್ರದೊಡನೆ ಹ್ರೈಂ ನಾಲ್ಕನೆಯ ಬೀಜಾಕ್ಷರವನ್ನೂ, "ಮಹಿತೋ ಮಹಿತೋಯೇ" ಎಂಬ ಮಂತ್ರದೊಡನೆ ಹ್ರೌಂ ಎಂಬ ಐದನೆಯ ಬೀಜಾಕ್ಷರವನ್ನು ಸೇರಿಸಿ ಹೇಳಿ ಪೂಜಿಸಬೇಕು.

೨೨. "ಹಿರಣ್ಯಗರ್ಭಃ ಸಮವರ್ತತಾಗ್ರೇ" ಎಂಬ ಮಂತ್ರದೊಡನೆ ಹ್ರಃ ಎಂಬ ಆರನೆಯ ಬೀಜಾಕ್ಷರವನ್ನು ಸೇರಿಸಿ ಕೀರ್ತಿಸಬೇಕು. ಅಯ್ಯಾ ದೇವಶ್ರೇಷ್ಠನೇ! "ಸವಿತಾಪಶ್ಚಾತ್ತಾತ್ಸವಿತಾ ಪುರಸ್ತಾತ್" ಎಂಬುದರೊಡನೆ ಏಳನೆಯ ಬೀಜಾಕ್ಷರ ವನ್ನುಚ್ಚರಿಸಬೇಕು.

೨೩. ದ್ವಿಜನಾದವನು ಹೀಗೆ ಎಲ್ಲ ಬೀಜಾಕ್ಷರಗಳನ್ನೂ ವಿನ್ಯಾಸಮಾಡಿ ಸೂರ್ಯನನ್ನು ಆವಾಹಿಸಬೇಕು. ಎಲ್ಲಾ ದೇವತೆಗಳನ್ನೂ ಧ್ಯಾನಿಸುತ್ತಾ ಆದಿತ್ಯನನ್ನು ಸ್ಥಾಪಿಸಿ ಪೂಜಿಸಬೇಕು.

ಬಾಹ್ಯತೋ ದೇವಶಾರ್ದೂಲ ಇಂದ್ರಾದೀನಾಂ ಸಮಂತತಃ ।
ರಕ್ತವರ್ಣಂ ಮಹಾತೇಜಂ ಸಿತಪದ್ಮೋಪರಿ ಸ್ಥಿತಂ ॥ ೨೪ ॥

ಸರ್ವಲಕ್ಷಣಸಂಯುಕ್ತಂ ಸರ್ವಾಭರಣಭೂಷಿತಂ ।
ದ್ವಿಭುಜಂ ಚೈಕಚಕ್ರಂ ಚ ಸೌಮ್ಯಂ ಪದ್ಮಧನುಷ್ಕರಂ ॥ ೨೫ ॥

ವರ್ತುಲಂ ತೇನ ಬಿಂಬೇನ ಮಧ್ಯಸ್ಥಮತಿತೇಜಸಂ ।
ಆದಿತ್ಯಸ್ಯ ತ್ವಿದಂ ರೂಪಂ ಸರ್ವಲೋಕೇಷು ಪೂಜಿತಂ ॥ ೨೬ ॥

ಧ್ಯಾತ್ವಾ ಸಂಪೂಜಯೇನ್ನಿತ್ಯಂ ಸ್ಥಂಡಿಲಂ ಮಂಡಲಾಶ್ರಿತಂ ॥ ೨೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ ಸೌರಧರ್ಮೇ ಸೂರ್ಯಮಂಡಲ ದೇವತಾರ್ಚನ ವಿಧಿವರ್ಣನಂ ನಾಮ ಏಕಾಧಿಕ ದ್ವಿಶತತಮೋऽಧ್ಯಾಯಃ.

---

೨೪. ಎಲೈ ದೇವಶ್ರೇಷ್ಠನೇ! ಕೇಳು; ಅದರ ಹೊರಗಡೆಯ ಸುತ್ತಿನಲ್ಲಿ ಇಂದ್ರಾದಿ ದೇವತೆಗಳ ಹೆಸರನ್ನು ಬರೆಯಬೇಕು. ಸೂರ್ಯನು ಸದಾ ರಕ್ತವರ್ಣವುಳ್ಳವನೂ, ಮಹಾತೇಜಸ್ವಿಯೂ, ಬಿಳಿಯಕಮಲದ ಮೇಲೆ ಇರುವವನೂ,

೨೫. ಮತ್ತು ಸರ್ವಲಕ್ಷಣಸಂಯುಕ್ತನೂ, ಸರ್ವಾಭರಣಭೂಷಿತನೂ, ದ್ವಿಭುಜನೂ ಒಂದು ಚಕ್ರದ ರಥವುಳ್ಳವನೂ, ಸೌಮ್ಯನೂ, ಪದ್ಮ, ಧನುಸ್ಸು, ಇವುಗಳನ್ನು ಹಸ್ತದಲ್ಲಿ ಧರಿಸಿದವನೂ,

೨೬–೨೭. ಮತ್ತು ವರ್ತುಲಾಕಾರನೂ, ಬಿಂಬಮಧ್ಯಗತನೂ, ಅತಿತೇಜಸ್ವಿಯೂ ಸರ್ವಲೋಕಗಳಲ್ಲಿಯೂ ಪೂಜಿತನೂ ಆಗಿರುವನೆಂದು ಧ್ಯಾನಿಸಬೇಕು. ಈ ಪ್ರಕಾರ ಧ್ಯಾನಿಸಿ ಸ್ಥಂಡಿಲದಲ್ಲಿ ರಚಿಸಿದ ಮಂಡಲದಲ್ಲಿ ಆವಾಹಿಸಿ ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ ಸೂರ್ಯಮಂಡಲ ದೇವತಾರ್ಚನವಿಧಿಯೆಂಬ ಇನ್ನೂರೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ದ್ವ್ಯಧಿಕದ್ವಿಶತತಮೋಽಧ್ಯಾಯಃ

॥ ವಿಷ್ಣುರುವಾಚ ॥

ಮಂಡಲಸ್ಥಂ ಸುರಶ್ರೇಷ್ಠ ವಿಧಿನಾ ಯೇನ ಭಾಸ್ಕರಂ ।
ಪೂಜಯೇನ್ಮಾನವೋ ಭಕ್ತ್ಯಾ ಸ ವಿಧಿಃ ಕಥ್ಯತಾಂ ಮಮ ॥ ೧ ॥

ಪೂಜಯೇದ್ವಿಧಿನಾ ಯೇನ ಭಾಸ್ಕರಂ ಪದ್ಮಸಂಭವಂ ।
ಮೂರ್ತಿಸ್ಥಂ ಸರ್ವಗಂ ದೇವಂ ಪೂಜಿತಂ ಸ ಸುರಾಸುರೈಃ ॥ ೨ ॥

॥ ಬ್ರಹ್ಮೋವಾಚ ॥

ಸಾಧು ಕೃಷ್ಣ ಮಹಾಬಾಹೋ ಸಾಧುಪೃಷ್ಟೋಽಸ್ಮಿ ಸುವ್ರತ ।
ಶೃಣು ಚೈಕಮನಾಃ ಪೂರ್ವಂ ಮೂರ್ತಿಸ್ಥಂ ಯೇನ ಪೂಜಯೇತ್ ॥ ೩ ॥

---

### ಇನ್ನೂರ ಎರಡನೆಯ ಅಧ್ಯಾಯ

೧. ಕೃಷ್ಣನು ಬ್ರಹ್ಮನನ್ನು ಕೇಳುತ್ತಾನೆ—"ಎಲೈ ಸುರಜ್ಯೇಷ್ಠನೇ! ಮಂಡಲದಲ್ಲಿ ಆವಾಹಿತನಾದ ಸೂರ್ಯನನ್ನು ಮನುಷ್ಯನು ಯಾವ ವಿಧಿಯಿಂದ ಪೂಜಿಸಬೇಕೋ ಆ ವಿಧಿಯನ್ನು ನನಗೆ ಹೇಳು.

೨. ಮತ್ತು ಪದ್ಮಸಂಭವನೂ, ಸರ್ವವ್ಯಾಪಕನೂ, ದೇವಾಸುರರಿಂದ ಪೂಜಿತನೂ ಎನಿಸಿ ಮೂರ್ತಿಯಲ್ಲಿ ನೆಲಸಿರುವ ಭಾಸ್ಕರದೇವನನ್ನು ಯಾವ ವಿಧಿಯಿಂದ ಪೂಜಿಸಬೇಕೋ ಆ ವಿಧಿಯನ್ನೂ ನನಗೆ ಹೇಳು" ಎಂದನು.

೩. ಆಗ ಬ್ರಹ್ಮನು ಕೃಷ್ಣನಿಗೆ ಉತ್ತರ ಹೇಳತೊಡಗಿ "ಸುವ್ರತನೂ, ಮಹಾಬಾಹುವೂ ಆದ ಕೃಷ್ಣನೇ! ನನ್ನನ್ನು ನೀನು ಚೆನ್ನಾಗಿ ಕೇಳಿದೆ. ಮೂರ್ತಿಸ್ಥನಾದ ಸೂರ್ಯನನ್ನು

ಇಷೇತ್ವೇತಿ ಚ ಮಂತ್ರೇಣ ಉತ್ತಮಾಂಗಂ ಸದಾರ್ಚಯೇತ್ ।
ಅಗ್ನಿಮೀಳೇತಿ ಮಂತ್ರೇಣ ಪೂಜಯೇದ್ದಕ್ಷಿಣೇ ಕರೇ ॥ ೪ ॥

ಅಗ್ನ ಆಯಾಹಿ ಮಂತ್ರೇಣ ಪಾದೌ ದೇವಸ್ಯ ಪೂಜಯೇತ್ ।
ಆಜಿಘ್ರೇತಿ ಚ ಮಂತ್ರೇಣ ಪೂಜಯೇತ್ಪುಷ್ಪಮಾಲಯಾ ॥ ೫ ॥

ಯೋಗೇಯೋಗೇತಿ ಮಂತ್ರೇಣ ಯುಕ್ತಪುಷ್ಪಾಂಜಲಿಂ ಕ್ಷಿಪೇತ್ ।
ಸಮುದ್ರಂ ಗಚ್ಛ ಯತ್ಪ್ರೋಕ್ತಂ ಅನೇನ ಸ್ನಾಪಯೇದ್ರವಿಂ ॥ ೬ ॥

ಇಮಂ ಮೇ ಗಂಗೇತಿ ಯತ್ಪ್ರೋಕ್ತಂ ಅನೇನಾಪಿ ಚ ಭೂಧರ ।
ಸಮುದ್ರಜ್ಯೇತಿ ಮಂತ್ರೇಣ ಕಷಾಯೈಃ ಪರಿರೂಷಯೇತ್ ॥ ೭ ॥

---

ಯಾವ ವಿಧಾನದಿಂದ ಪೂಜಿಸಬೇಕೋ ಆ ವಿಧಾನವನ್ನು ಮೊದಲು ಹೇಳುವೆನು. ಒಂದೇ ಮನಸ್ಸಿನಿಂದ ಕೇಳು.

೪. "ಇಷೋತ್ವೋರ್ಜೇತ್ವಾ" ಎಂಬ ಮಂತ್ರದಿಂದ ಯಾವಾಗಲೂ ಶಿರಸ್ಸನ್ನು ಪೂಜಿಸಬೇಕು. "ಅಗ್ನಿಮೀಳೇ" ಎಂಬ ಮಂತ್ರದಿಂದ ಬಲಗೈಯ್ಯನ್ನು ಪೂಜಿಸಬೇಕು.

೫. "ಅಗ್ನಆಯಾಹಿ" ಎಂಬ ಮಂತ್ರದಿಂದ ದೇವನ ಪಾದಗಳನ್ನು ಪೂಜಿಸಬೇಕು. "ಆಜಿಘ್ರ" ಎಂಬ ಮಂತ್ರದಿಂದ ಸ್ವಾಮಿಗೆ ಪುಷ್ಪಹಾರವನ್ನು ಅರ್ಪಿಸಬೇಕು.

೬. "ಯೋಗೇಯೋಗೇ" ಎಂಬ ಮಂತ್ರದಿಂದ ಬೊಗಸೆಯ ತುಂಬ ಹೂವನ್ನು ಸಮರ್ಪಿಸಬೇಕು. "ಸಮುದ್ರಂಗಚ್ಛ" ಎಂಬ ಮಂತ್ರದಿಂದ ಸೂರ್ಯನಿಗೆ ಸ್ನಾನಮಾಡಿಸಬೇಕು.

೭. ಅಯ್ಯಾ ಭೂಧರನೇ! "ಇಮಂ ಮೇ ಗಂಗೇಯಮುನೆ" ಎಂಬ ಮಂತ್ರದಿಂದಲೂ ಸೂರ್ಯನಿಗೆ ಸ್ನಾನಮಾಡಿಸಬೇಕು. "ಸಮುದ್ರಜ್ಯೇಷ್ಠಾ" ಎಂಬ ಮಂತ್ರದಿಂದ ಸೂರ್ಯಮೂರ್ತಿಯನ್ನು ಕಾಷಾಯದ್ರವ್ಯಗಳಿಂದ ಉಜ್ಜಿ ತೊಳೆಯಬೇಕು.

ಸ್ನಾಪಯೇತ್ಪಯಸಾ ಕೃಷ್ಣ ಆಪ್ಯಾಯಸ್ವೇತಿ ಮಂತ್ರತಃ ।
ದಧಿಕ್ರಾವ್ಣೇತಿ ವೈ ದಧ್ನಾ ಸ್ನಾಪಯೇದ್ವಿಧಿವದ್ರವಿಂ ॥ ೮ ॥

ತೇಜೋಽಸಿ ಶುಕ್ರಮಿತಿ ಚ ಘೃತೇನ ಸ್ನಪನಂ ಪರಂ ।
ಯಾ ಔಷಧೀತಿ ಮಂತ್ರೇಣ ಸ್ನಾನಮೋಷಧಿಭಿಃ ಸ್ಮೃತಂ ॥ ೯ ॥

ಉದ್ವರ್ತಯೇತ್ತತೋ ಭಾನುಂ ದ್ರುಪದಾಭಿಃ ಸುರಾಧಿಪ ।
ಮಾನಸ್ತೋಕೇತಿ ಮಂತ್ರೇಣ ಯುಗಪತ್ಸ್ನಾನಮಾಚರೇತ್ ॥ ೧೦ ॥

ವಿಷ್ಣೋರರಾಟಮಂತ್ರೇಣ ಸ್ನಾಪಯೇದ್ಗಂಧವಾರಿಣಾ ।
ಸೌವರ್ಣೇನ ತು ಮಂತ್ರೇಣ ಅರ್ಘ್ಯಂ ಪಾದ್ಯಂ ನಿವೇದಯೇತ್ ॥ ೧೧ ॥

---

೮. ಎಲೈ ಕೃಷ್ಣನೇ! ಕೇಳು; "ಆಪ್ಯಾಯಸ್ವ" ಎಂಬ ಮಂತ್ರದಿಂದ ಕ್ಷೀರ ಸ್ನಾನ ಮಾಡಿಸಬೇಕು. "ದಧಿಕ್ರಾವ್ಣೋ" ಎಂಬ ಮಂತ್ರದಿಂದ ವಿಧಿವತ್ತಾಗಿ ದಧಿ (ಮೊಸರಿನಿಂದ) ಸ್ನಾನಮಾಡಿಸಬೇಕು.

೯. "ಶುಕ್ರಮಸಿ ಜ್ಯೋತಿರಸಿ" ಎಂಬ ಮಂತ್ರಪೂರ್ವಕವಾಗಿ ಘೃತಸ್ನಾನ ಮಾಡಿಸಬೇಕು. "ಯಾ ಔಷಧೀಃ" ಎಂಬ ಮಂತ್ರಪೂರ್ವಕವಾಗಿ ಔಷಧಿರಸಗಳಿಂದ ಸ್ನಾನಮಾಡಿಸಬೇಕು.

೧೦. ಅಯ್ಯಾ ಸುರಾಧಿಪನೇ! ಕೇಳು; ಅನಂತರ "ದ್ರುಪದಾದಿವಮುಂಚತ್" ಎಂಬ ಮಂತ್ರದಿಂದ ಸೂರ್ಯಪ್ರತಿಮೆಯನ್ನು ಉಜ್ಜಬೇಕು. "ಮಾನಸ್ತೋಕೇ" ಎಂಬ ಮಂತ್ರದಿಂದ ಒಂದೇಸಲ ಕಲಶದ ನೀರನ್ನೆಲ್ಲಾ ಸುರಿದು ಸ್ನಾನಮಾಡಿಸಬೇಕು.

೧೧. "ವಿಷ್ಣೋರರಾಟಮಸಿ" ಎಂಬ ಮಂತ್ರದಿಂದ ಗಂಧೋದಕದಿಂದ ಸ್ನಾನ ಮಾಡಿಸಬೇಕು. "ತತ್ಸುವರ್ಣಂ ಹಿರಣ್ಯಮಭವತ್" ಎಂಬ ಮಂತ್ರದಿಂದ ಪಾದ್ಯ ನಿವೇದನಮಾಡಬೇಕು. ("ಯನ್ಮಯಾ ದೂಷಿತಂ ತೋಯಂ ಶರೀರಮಲಸಂಕ್ರಮಾತ್ । ತಸ್ಯ ಪಾಪಸ್ಯ ಮುಕ್ತ್ಯರ್ಥಂ ಯಕ್ಷ್ಮಾಣಂ ತರ್ಪಯಾಮ್ಯಹಂ ॥" ಎಂದು ಸ್ನಾನಾಂಗ ಅರ್ಘ್ಯ ಕೊಡುವುದು ಸಂಪ್ರದಾಯ.)

ಇದಂ ವಿಷ್ಣುರ್ವಿಚಕ್ರಮೇ ಮಂತ್ರೇಣಾರ್ಘ್ಯಂ ಪ್ರದಾಪಯೇತ್ ।
ವೇದೋಽಸೀತಿ ಹಿ ಮಂತ್ರೇಣ ಉಪವೀತಂ ಪ್ರದಾಪಯೇತ್ ॥ ೧೨ ॥

ಬೃಹಸ್ಪತೇತಿ ಮಂತ್ರೇಣ ದದ್ಯಾದ್ವಸ್ತ್ರಾಣಿ ಭಾನವೇ ।
ಯೇನ ಶ್ರಿಯಂ ಪ್ರಕುರ್ವಾಣಾಂ ಪುಷ್ಪಮಾಲಾಂ ಪ್ರಯೋಜಯೇತ್
॥ ೧೩ ॥

ಧೂರಸೀತಿ ಚ ಮಂತ್ರೇಣ ಧೂಪಂ ದದ್ಯಾತ್ಸಗುಗ್ಗುಲಂ ।
ಸಮಿದ್ಧೋಽಂಽಜನಮಂತ್ರೇಣ ಅಂಜನಂ ತು ಪ್ರಯಚ್ಛತಿ ॥ ೧೪ ॥

ಯುಂಜಾನೀತಿ ಚ ಮಂತ್ರೇಣ ಭಾನುಂ ರೋಚನಯಾರ್ಚಯೇತ್ ।
ಆರಕ್ತಕಂ ಚ ವೈ ಕುರ್ಯಾದ್ದೀರ್ಘಾಯುಷ್ಟ್ವಾಯ ವೈ ಬುಧಃ ॥ ೧೫ ॥

ಸಹಸ್ರಶೀರ್ಷಾಪುರುಷೋ ರವಿಂ ಶಿರಸಿ ಪೂಜಯೇತ್ ।
ಸಂಭಾವಯೇತಿ ಮಂತ್ರೇಣ ಪದ್ಮನೇತ್ರೇ ಪರಾಮೃಶೇತ್ ॥ ೧೬ ॥

---

೧೨. "ಇದಂ ವಿಷ್ಣುರ್ವಿಚಕ್ರಮೇ" ಎಂಬ ಮಂತ್ರದಿಂದ ಸ್ನಾನಾಂಗಅರ್ಘ್ಯ ಕೊಡಬೇಕು. "ವೇದೋಸಿ" ಎಂಬ ಮಂತ್ರದಿಂದ ಯಜ್ಞೋಪವೀತವನ್ನು ಸಮರ್ಪಿಸಬೇಕು.

೧೩. "ಬೃಹಸ್ಪತೇ" ಎಂಬ ಮಂತ್ರಪೂರ್ವಕವಾಗಿ ಸೂರ್ಯನಿಗೆ ವಸ್ತ್ರಗಳನ್ನು ಸಮರ್ಪಿಸಬೇಕು. "ಯೇನಶ್ರಿಯಂ ಪ್ರಕುರ್ವಾಣ" ಎಂಬ ಮಂತ್ರದಿಂದ ಪುಷ್ಪ ಮಾಲೆಯನ್ನು ಸಮರ್ಪಣೆಮಾಡಬೇಕು.

೧೪. "ಧೂರಸಿ" ಎಂಬ ಮಂತ್ರವನ್ನುಚ್ಚರಿಸುತ್ತಾ ಗುಗ್ಗುಳಸಹಿತವಾದ ಧೂಪವನ್ನು ಕುಂಡದಲ್ಲಿ ಹಾಕಿ ಆಘ್ರಾಪನ ಮಾಡಿಸಬೇಕು. "ಸಮಿದ್ಧೋಂಜನ" ಎಂಬ ಮಂತ್ರದಿಂದ ಕಾಡಿಗೆಯನ್ನು ಹಚ್ಚಬೇಕು.

೧೫. ವಿದ್ವಾಂಸನು "ದೀರ್ಘಾಯುಷ್ಟ್ವಾಯ ವರ್ಚಸೇ" ಎಂಬ ಮಂತ್ರ ಪೂರ್ವಕವಾಗಿ ಸೂರ್ಯನಿಗೆ ಗೋರೋಚನವನ್ನು ತೆಯ್ದು ಹಚ್ಚಿಸಿ ಶರೀರವನ್ನು ರಕ್ತ ವರ್ಣವಾಗುವಂತೆ ಮಾಡಬೇಕು.

೧೬-೧೭. "ಸಹಸ್ರಶೀರ್ಷಾ ಪುರುಷಃ" ಎಂಬ ಮಂತ್ರದಿಂದ ಸೂರ್ಯನ ಶಿರಸ್ಸನ್ನು ಪೂಜಿಸಬೇಕು. ಸಂಭಾವಯ ಎಂಬ ಮಂತ್ರದಿಂದ ಕಮಲದಂತಿರುವ ಎರಡು ಕಣ್ಣನ್ನೂ

ವಿಶ್ವತಶ್ಚಕ್ಷುರಿತ್ಯೇವಂ ಭಾನೋರ್ದೇಹಂ ಸಮಾಲಭೇತ್ ।
ಹ್ರೀಶ್ಚತೇ ಲಕ್ಷ್ಮೀಶ್ಚೇತಿ ಮಂತ್ರೇಣಾನೇನ ಪೂಜಯೇತ್ ॥ ೧೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮಿಾಕಲ್ಪೇ
ಸೌರಧರ್ಮೆ ಪೂಜಾವಿಧಿವರ್ಣನಂ ನಾಮ ದ್ವ್ಯಧಿಕ
ದ್ವಿಶತತಮೋಽಧ್ಯಾಯಃ.



---

ಸ್ಪರ್ಶಮಾಡಬೇಕು. "ವಿಶ್ವತಶ್ಚಕ್ಷುರ್ವಿಶ್ವತೋಮುಖಃ" ಎಂಬ ಮಂತ್ರಪೂರ್ವಕವಾಗಿ ಸೂರ್ಯನದೇಹವನ್ನು ಸವರಿ ಬಳಿಕ "ಹ್ರೀಶ್ಚತೇ ಲಕ್ಷ್ಮೀಶ್ಚ" ಎಂಬ ಮಂತ್ರದಿಂದ ಆ ಅವಯವಗಳನ್ನು ಪೂಜಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮಿಾಕಲ್ಪದಲ್ಲಿ
ಆದಿತ್ಯಪೂಜಾ ವಿಧಿವರ್ಣನೆಯೆಂಬ ಇನ್ನೂರಎರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ತ್ರ್ಯಧಿಕದ್ವಿಶತತಮೋಽಧ್ಯಾಯಃ

---

॥ ವಿಷ್ಣುರುವಾಚ ॥

ವ್ಯೋಮಪೂಜಾವಿಧಿಂ ಬ್ರೂಹಿ ಸಮಾಸಾಚ್ಚತುರಾನನ ।
ಅಷ್ಟಶೃಂಗಂ ಕಥಂ ವ್ಯೋಮ ಪೂಜಯೇದ್ಭಾಸ್ಕರಸ್ಯ ತು ॥ ೧ ॥

॥ ಬ್ರಹ್ಮೋವಾಚ ॥

ವ್ಯೋಮಪೂಜಾವಿಧಿಂ ಕೃಷ್ಣ ನಿಬೋಧ ಗದತೋ ಮಮ ।
ಅಷ್ಟಶೃಂಗಂ ಯಥಾ ವ್ಯೋಮ ಪೂಜಯಂತಿ ಮನೀಷಿಣಃ ॥ ೨ ॥

---

### ಇನ್ನೂರಮೂರನೆಯ ಅಧ್ಯಾಯ

೧. ವಿಷ್ಣುವು ಬ್ರಹ್ಮನನ್ನು ಕುರಿತು "ಎಲೈ ಚತುರ್ಮುಖನೇ ! ಸೂರ್ಯನ ಅಷ್ಟಶೃಂಗಯುತವಾದ ವ್ಯೋಮವನ್ನು ಹೇಗೆ ಪೂಜಿಸಬೇಕು ? ಎಂಬುದನ್ನೂ, ಆ ವ್ಯೋಮಪೂಜೆಯ ವಿಧಿಯನ್ನೂ ಸಂಕ್ಷೇಪವಾಗಿ ನನಗೆ ಹೇಳು" ಎಂದನು.

೨. ಆಗ ಬ್ರಹ್ಮನು ಉತ್ತರ ಹೇಳುವವನಾಗಿ "ಎಲೈ ಕೃಷ್ಣನೇ! ವಿದ್ವಾಂಸರು ಅಷ್ಟಶೃಂಗಯುಕ್ತವಾದ ವ್ಯೋಮವನ್ನು ಹೇಗೆ ಪೂಜಿಸುತ್ತಾರೆ ಎಂಬುದನ್ನು ಹೇಳುತ್ತೇನೆ, ಕೇಳು.

**ಸೌವರ್ಣಂ ರಾಜತಂ ತಾಮ್ರಂ ಕೃತ್ವಾ ಚಾಶ್ಮಮಯಂ ತಥಾ ।**
**ಅಷ್ಟಶೃಂಗಂ ಮಹಾಬಾಹೋ ಅನೇನ ವಿಧಿನಾರ್ಚಯೇತ್ ॥ ೩ ॥**

**ಪ್ರಥಮಂ ಪೂಜಯೇದ್ಭಾನುಂ ಮಧ್ಯೇ ಮಂತ್ರೇಣ ಸುವ್ರತ ।**
**ಮಹಿಷಾವೋ ಮಹಾಯೇತಿ ನಾನಾಪುಷ್ಪಕದಂಬಕೈಃ ॥ ೪ ॥**

**ತ್ರಾತಾರಮಿಂದ್ರಂ ಮಂತ್ರೇಣ ಪೂರ್ವಶೃಂಗಂ ಸದಾರ್ಚಯೇತ್ ।**
**ಉದೀರತಾಮವರ ಇತಿ ಮಂತ್ರೇಣಾಗ್ನೇಯಮರ್ಚಯೇತ್ ॥ ೫ ॥**

**ರಕ್ಷೋಹಣಂ ವಾಜಿನೇತಿ ಪೂಜಯೇಚ್ಛೃಂಗಮಂತಕೇ ।**
**ಆಯಂಗೌರಿತಿ ಮಂತ್ರೇಣ ನೈಋತಂ ಶೃಂಗಮರ್ಚಯೇತ್ ॥**
**ತತ್ವಾಯಾಮೀತಿ ಮಂತ್ರೇಣ ವಾರುಣಂ ಶೃಂಗಮರ್ಚಯೇತ್ ॥ ೬ ॥**

**ಯೇನೇದಂ ಭೂತಮಿತಿ ವೈ ವಾಯವ್ಯಂ ಶೃಂಗಮರ್ಚಯೇತ್ ।**
**ಇಂದ್ರಸೋಮಾಂತ ಪತಯೇ ಹ್ಯುತ್ತರಂ ಶೃಂಗಮರ್ಚಯೇತ್ ॥ ೭ ॥**

---

೩. ಎಲೈ ಮಹಾಬಾಹುವೇ! ಚಿನ್ನ, ಬೆಳ್ಳಿ, ತಾಮ್ರ ಈ ಲೋಹಗಳಿಂದಲೋ, ಅಥವಾ ಶಿಲೆಯಲ್ಲಿಯೋ, ಅಷ್ಟಶೃಂಗಾತ್ಮಕವಾದ ವ್ಯೋಮವನ್ನು ಮಾಡಿ ಈ ಮುಂದೆ ಹೇಳುವ ವಿಧಿಯಿಂದ ಅರ್ಚನೆಮಾಡಬೇಕು.

೪. ಅಯ್ಯಾ ಸುವ್ರತನೇ! "ಮಹಿಷಾವೋ ಮಹಾಯ" ಎಂಬ ಮಂತ್ರದಿಂದ ಮಧ್ಯದಲ್ಲಿ ಭಾನುಪ್ರತಿಮೆಯನ್ನು ಇಟ್ಟು ನಾನಾವಿಧವಾದ ಅನೇಕ ಪುಷ್ಪಗಳನ್ನು ಸಮರ್ಪಿಸಬೇಕು.

೫. "ತ್ರಾತಾರಮಿದ್ರಂ" ಎಂಬ ಮಂತ್ರದಿಂದ ಪೂರ್ವದಿಕ್ಕಿನ ಶೃಂಗವನ್ನು ಪೂಜಿಸಬೇಕು. "ಉದೀರತಾಮವರ" ಎಂಬ ಮಂತ್ರದಿಂದ ಆಗ್ನೇಯಶೃಂಗವನ್ನು ಅರ್ಚಿಸಬೇಕು.

೬. "ರಕ್ಷೋಹಣಂ ವಾಜಿನಂವಾ" ಎಂಬ ಮಂತ್ರದಿಂದ ದಕ್ಷಿಣಶೃಂಗವನ್ನು ಪೂಜಸಬೇಕು. "ಆಯಂಗೌಃ" ಎಂಬ ಮಂತ್ರದಿಂದ ನೈಋತ್ಯದಿಕ್ಕಿನ ಶೃಂಗವನ್ನು ಪೂಜಿಸಬೇಕು.

೭. "ತತ್ವಾಯಾಮಿ ಬ್ರಹ್ಮಣಾ" ಎಂಬ ಮಂತ್ರದಿಂದ ಪಶ್ಚಿಮಶೃಂಗವನ್ನೂ, "ಇಂದ್ರಸೋಮಾಂತಪತಯೇ" ಎಂಬ ಮಂತ್ರದಿಂದ ಉತ್ತರಶೃಂಗವನ್ನೂ ಪೂಜಿಸಬೇಕು.

**ಅಭಿತ್ವಾ ಶೂರ ನೋ ನುಮ ಐಶಾನಂ ಶೃಂಗಮರ್ಚಯೇತ್ ।**
**ಏವಂ ಭಾನುಂ ಚ ಪರಿತಃ ಪೂಜಯಂತಿ ಸದಾಚ್ಯುತ ॥ ೮ ॥**

**ನಮೋಽಸ್ತು ಸರ್ಪಮಂತ್ರೇಣ ವ್ಯೋಮಪೀಠಂ ಸದಾರ್ಚಯೇತ್ ।**
**ತೇ ನರಾ ಸತತಂ ಕಾಮಾನ್ ಪ್ರಾಪ್ನುವಂತಿ ನ ಸಂಶಯಃ ॥ ೯ ॥**

**ತ್ವಮೇಕೋ ರುದ್ರಾಣಾಂ ವಸೂನಾಂ ಪೂರ್ವಾಹ್ಣೇ ತೇನ ಪೂಜಯೇತ್ ।**
**ತದ್ವಿಷ್ಣೋ ಪರಮಂಪದಂ ಹಂಸಃ ಶುಚಿಷದಿತಿ ವೈ ಅಪರಾಹ್ಣೇ ಸದಾರ್ಚಯೇತ್ ॥ ೧೦ ॥**

**ಏವಂ ಭಾನುಂ ಗ್ರಹೈಃ ಸಾರ್ಧಂ ಪೂಜಯಂತಿ ಸದಸ್ಪತಿಂ ।**
**ತೇ ಸರ್ವಾನ್ನಿಖಿಲಾನ್ ಕಾಮಾನ್ ಪ್ರಾಪ್ನುವಂತಿ ನ ಸಂಶಯಃ ॥ ೧೧ ॥**

**ವಿಮಲೇ ವಾಸಸೀ ದತ್ವಾ ಗುರವೇ ಸಪವಿತ್ರಕೇ ।**
**ಉಪಾನಹೌ ತಥಾ ಕೃಷ್ಣ ಸೌವರ್ಣಮಂಗುಲೀಯಕಂ ॥ ೧೨ ॥**

---

೮. "ಅಭಿತ್ವಾ ಶೂರನೋನುಮಃ" ಎಂಬ ಮಂತ್ರದಿಂದ ಈಶಾನ್ಯಶೃಂಗವನ್ನೂ ಪೂಜಿಸಬೇಕು. ಎಲೈ ಅಚ್ಯುತನೇ! ಹೀಗೆ ಸೂರ್ಯನ ಸುತ್ತ ಎಲ್ಲ ದಿಕ್ಕುಗಳಲ್ಲಿಯೂ ಶೃಂಗವನ್ನು ಪೂಜಿಸಬೇಕು.

೯. "ನಮೋಸ್ತು ಸರ್ಪೇಭ್ಯಃ" ಎಂಬ ಮಂತ್ರದಿಂದ ಯಾವಾಗಲೂ ವ್ಯೋಮ ಪೀಠವನ್ನು ಅರ್ಚಿಸಬೇಕು. ಹೀಗೆ ಅರ್ಚಿಸಿದ ಮನುಷ್ಯರು ಯಾವಾಗಲೂ ತಮ್ಮ ಇಷ್ಟಾರ್ಥವನ್ನು ಹೊಂದುವುದರಲ್ಲಿ ಸಂಶಯವಿಲ್ಲ.

೧೦. "ತ್ವಮೇಕೋ ರುದ್ರಾಣಾಂ ವಸೂನಾಂ" ಎಂಬ ಮಂತ್ರದಿಂದ ಪೂರ್ವಾಹ್ಣದಲ್ಲಿ ಪೂಜಿಸಬೇಕು. "ತದ್ವಿಷ್ಣೋಃ ಪರಮಂಪದಂ" ಎಂಬ ಮಂತ್ರದಿಂದಲೋ, "ಹಂಸಃಶುಚಿಷತ್" ಎಂಬ ಮಂತ್ರದಿಂದಲೋ, ಅಪರಾಹ್ಣದಲ್ಲಿ ದೇವನನ್ನು ಪೂಜಿಸಬೇಕು.

೧೧. ಹೀಗೆ ಸದಸ್ಪತಿಯಾದ ಸೂರ್ಯನನ್ನು ಗ್ರಹಗಳ ಸಮೇತ ಪೂಜಿಸುವವರು ತಮ್ಮ ಸರ್ವ ಇಷ್ಟಾರ್ಥಗಳನ್ನೂ ಹೊಂದುವರೆಂಬುದರಲ್ಲಿ ಸಂಶಯವಿಲ್ಲ.

೧೨. ಹೀಗೆ ಪೂಜೆ ಮಾಡಿದಮೇಲೆ ಗುರುವಿಗೆ ಪವಿತ್ರಕರವಾದ ಶುಭ್ರವಸ್ತ್ರಗಳು, ಪಾದರಕ್ಷೆಗಳು, ಚಿನ್ನದ ಉಂಗುರ, ಅನೇಕ ಬಗೆಯ ವಿಚಿತ್ರಗಳಾದ ಗಂಧಪುಷ್ಪಗಳು, ಭಕ್ಷ್ಯಭೋಜ್ಯಗಳು ಇವುಗಳನ್ನೆಲ್ಲಾ ಸಮರ್ಪಿಸಬೇಕು.

**ಗಂಧಪುಷ್ಪಾಣಿ ಚಿತ್ರಾಣಿ ಭಕ್ಷ್ಯಭೋಜ್ಯಾನನೇಕಶಃ ।**
**ಅನೇನ ವಿಧಿನಾ ಯಸ್ತು ಸೋಪವಾಸೋಽರ್ಚಯೇದ್ರವಿಂ ॥ ೧೩ ॥**

**ಬಹುಪುತ್ರೋ ಬಹುಧನಃ ಸ ನರೋ ಭವ್ಯವಾನ್ ಭವೇತ್ ।**
**ಉತ್ತರೇಚಾಯನೇ ಯಸ್ತು ಸೋಪವಾಸೋಽರ್ಚಯೇದ್ರವಿಂ ॥**
**ಸೋಽಶ್ವಮೇಧಫಲಂ ಲಬ್ಧ್ವಾ ಬಹುಪುತ್ರಶ್ಚ ಜಾಯತೆ ॥ ೧೪ ॥**

**ಕೃತ್ವೋಪವಾಸಂ ವಿಷುವೇ ಯಸ್ತು ಪೂಜಯತೆ ರವಿಂ ।**
**ಬಹುಪುತ್ರೋ ಬಹುಧನಃ ಕೀರ್ತಿಮಾಂಶ್ಚಾಪಿ ಜಾಯತೆ ॥ ೧೫ ॥**

**ಕೃತ್ವೋಪವಾಸಂ ಗ್ರಹಣೇ ವಿಧಿವಚ್ಚಂದ್ರಸೂರ್ಯಯೋಃ ।**
**ಪೂಜಯೇದ್ಭಾಸ್ಕರಂ ಭಕ್ತ್ಯಾ ಬ್ರಹ್ಮಲೋಕಂ ಸ ಗಚ್ಛತಿ ॥ ೧೬ ॥**

**ಇತಿ ತೇ ಕಥಿತೋ ವಿಷ್ಣೋ ಭಾಸ್ಕರಾರಾಧನೇ ವಿಧಿಃ ।**
**ಯಂ ಶ್ರುತ್ವಾ ಪುರುಷೋ ಭಕ್ತ್ಯಾಮನು ಲೋಕೇ ಮಹೀಯತೇ ॥ ೧೭ ॥**

---

೧೩. ಈ ರೀತಿ ಉಪವಾಸಮಾಡಿ ಈ ವಿಧಿಯಿಂದ ಸೂರ್ಯನನ್ನು ಪೂಜಿಸುವವನು, ಬಹುಪುತ್ರವಂತನೂ, ಬಹುಧನಿಕನೂ ಆಗಿ ಕ್ಷೇಮವಾಗಿರುತ್ತಾನೆ.

೧೪. ಉತ್ತರಾಯಣಪುಣ್ಯಕಾಲದಲ್ಲಿ ಉಪವಾಸವಿದ್ದು ಸೂರ್ಯನನ್ನು ಪೂಜಿಸುವವನು ಅಶ್ವಮೇಧಯಜ್ಞ ಮಾಡಿದಷ್ಟು ಫಲವನ್ನು ಹೊಂದಿ ಬಹುಪುತ್ರವಂತನೂ ಆಗುತ್ತಾನೆ.

೧೫. ವಿಷುವ ಪುಣ್ಯಕಾಲದಲ್ಲಿ ಉಪವಾಸಮಾಡಿ ನಿಯಮದಿಂದ ಸೂರ್ಯನನ್ನು ಪೂಜಿಸುವವನು ಬಹುಪುತ್ರವಂತನೂ, ಬಹುಧನಿಕನೂ ಆಗುತ್ತಾನೆ.

೧೬. ಸೂರ್ಯಗ್ರಹಣ ಚಂದ್ರಗ್ರಹಣಕಾಲಗಳಲ್ಲಿ ವಿಧಿಪ್ರಕಾರ ಉಪವಾಸಮಾಡಿ ಭಕ್ತಿಯಿಂದ ಸೂರ್ಯನನ್ನು ಪೂಜಿಸುವವನು ಬ್ರಹ್ಮಲೋಕವನ್ನು ಪಡೆಯುತ್ತಾನೆ.

೧೭. ಎಲೈ ಕೃಷ್ಣನೇ! ಕೇಳು; ನಿನಗೆ ಸೂರ್ಯಾರಾಧನವಿಧಾನವನ್ನು ಈ ಪ್ರಕಾರ ಹೇಳಿದುದಾಯಿತು. ಅದನ್ನು ಭಕ್ತಿಯಿಂದ ಕೇಳಿದ ಪುರುಷನು ಬ್ರಹ್ಮಲೋಕದಲ್ಲಿ ಪೂಜಿತನಾಗುತ್ತಾನೆ.

ಪುನರೇತ್ಯ ಮಹೀಂ ಕೃಷ್ಣ ರಾಜಾ ಭವತಿ ಭೂತಲೇ ।
ಬಹುಪುತ್ರೋ ಬಹುಧನಃ ಸಮರೇಷ್ವಪರಾಜಿತಃ ॥ ೧೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ
ಭಾಸ್ಕರಾರಾಧನವಿಧಿವರ್ಣನಂ ನಾಮ ತ್ರ್ಯಧಿಕ
ದ್ವಿಶತತಮೋಽಧ್ಯಾಯಃ



---

೧೮. ಅಯ್ಯಾ ಕೃಷ್ಣಾ ! ಹೀಗೆ ಸೂರ್ಯಪೂಜೆ ಮಾಡಿದವನು ಬ್ರಹ್ಮಲೋಕದಲ್ಲಿ ಪೂಜಿತನಾಗಿದ್ದು ಅನಂತರ ಭೂಲೋಕದಲ್ಲಿ ಜನಿಸಿ ರಾಜನಾಗುತ್ತಾನೆ. ಅಲ್ಲದೆ ಬಹುಪುತ್ರವಂತನೂ, ಬಹುಧನಿಕನೂ ಆಗಿ, ಯುದ್ಧದಲ್ಲಿ ಯಾರಿಗೂ ಸೋಲದೆ, ಜಯಶಾಲಿಯಾಗಿ ಇರುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಭಾಸ್ಕರಾರಾಧನವಿಧಿವರ್ಣನವೆಂಬ ಇನ್ನೂರಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಚತುರಧಿಕದ್ವಿಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಅತಃ ಪರಂ ಪ್ರವಕ್ಷ್ಯಾಮಿ ವಿಧಿಂ ಪರಮಪೂಜಿತಂ ।
ರತ್ನವ್ಯೋಮಪ್ರತಿಷ್ಠಾಯಾಂ ಯಥಾ ಭಾನುಂ ಪ್ರಪೂಜಯೇತ್ ॥ ೧ ॥

ಅರ್ಚಯಿತ್ವಾ ಪ್ರತಿಕೃತಿಂ ಗಂಧಪುಷ್ಪಾಕ್ಷತೈರ್ವಿಭೋ ।
ಸಹೋದಕೇನಾಂಜಲಿನಾ ಸಹಪುಷ್ಪಾಕ್ಷತೇನ ವಾ ॥ ೨ ॥

ಆವಾಹಯೇನ್ಮಹಾದೇವಂ ಖಷೋಲ್ಕಂ ಭಾಸ್ಕರಂ ವಿಭುಂ ।
ಮಂತ್ರೇಣ ಕುರುಶಾರ್ದೂಲ ಪ್ರತ್ಯಕ್ಷಕಿರಣಂ ರವಿಂ ॥ ೩ ॥

---

## ಇನ್ನೂರನಾಲ್ಕನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳುತ್ತಾರೆ—ಶ್ರೇಷ್ಠವಾದ ವ್ಯೋಮದೇವತಾ ಪ್ರತಿಷ್ಠೆಯಲ್ಲಿ ಅನುಸರಿಸಬೇಕಾದ ಪರಮಪೂಜ್ಯವಾದ ವಿಧಿಯನ್ನು ಇನ್ನು ಹೇಳುತ್ತೇನೆ.

೨–೩. ಕುರುಶ್ರೇಷ್ಠನಾದ ವಿಭುವೇ! ಕೇಳು; ಗಂಧಪುಷ್ಪ ಅಕ್ಷತೆಗಳಿಂದ ಮಂತ್ರವತ್ತಾಗಿ ಸಹಸ್ರಕಿರಣನಾದ ಸೂರ್ಯನನ್ನು ಅರ್ಚಿಸಬೇಕು. ಬೊಗಸೆಯಲ್ಲಿ ಜಲವನ್ನಾಗಲಿ, ಹೂವು ಮಂತ್ರಾಕ್ಷತೆಗಗನ್ನಾಗಲಿ, ಹಿಡಿದುಕೊಂಡು ಪ್ರತ್ಯಕ್ಷಕಿರಣನೂ, ಖಷೋಲ್ಕಸಂಜ್ಞಕನೂ, ವಿಭುವೂ, ಆದ ಸೂರ್ಯನನ್ನು ಆವಾಹನಮಾಡಬೇಕು.

ಓಂ ಖಷೋಲ್ಕಮಾವಾಹಯಾಮಿ ।
ಓಂ ಭೂರ್ಭುವಃ ಸ್ವರೋಂ ಆದಿತ್ಯಾರಾಧನೇ ಮಂತ್ರಃ ॥ ೪ ॥

ಅಭಿಮಂತ್ರ್ಯ ಭುವೋ ಮಾತ್ರಾ ಸಾವಿತ್ರ್ಯಾಚ ಋಚಾ ವಿಭೋ ।
ಅಪೋಹಿಷ್ಠೇತಿ ಯಾ ಪ್ರೋಕ್ತಾ ತಥಾ ಸೂರ್ಯಸ್ಯ ಸರ್ವದಾ ॥ ೫ ॥

ಯಥಾನ್ಯಾಯಂ ತು ಸಂಕ್ಷಾಲ್ಯ ಪೂರಯೇಚ್ಚಾನ್ಯ ತೋಯತಃ ।
ಹಿರಣ್ಯಗರ್ಭಃ ಸಮವರ್ತತೇತ್ಯನಯಾ ಕ್ಷಾಲಯೇದ್ಬುಧಃ ॥ ೬ ॥

ಸವಿತಾ ಪಶ್ಚಾತ್ತಾತ್ಸವಿತಾ ಹ್ಯನಯಾ ಪೂರಯೇದ್ಬುಧಃ ।
ಇತ್ಯೇವಂ ಪೂರಯಿತ್ವಾ ತು ವಾರಿಪುಷ್ಪಾಕ್ಷತೈರ್ಬುಧಃ ॥ ೭ ॥

ಪಾತ್ರಮೌದುಂಬರಂ ಗೃಹ್ಯ ಕೃತ್ಸ್ನಂ ಸೂರ್ಯಸ್ಯ ದರ್ಶಯೇತ್ ।
ಉದುತ್ಯಂ ಜಾತವೇದಸಮನಯಾ ವ್ಯೋಮ್ನಿ ನಿಕ್ಷಿಪೇತ್ ॥ ೮ ॥

---

೪. "ಓಂ ಭೂರ್ಭುವಃಸ್ವರೋಂ ಓಂ ಖಷೋಲ್ಕಮಾವಾಹಯಾಮಿ" ಎಂಬ ಮಂತ್ರವನ್ನು ಆದಿತ್ಯಾರಾಧನೆಯಲ್ಲಿ ಆವಾಹನ ಮಾಡುವಾಗ ಹೇಳಬೇಕು.

೫. ಅಯ್ಯಾ ವಿಭುವೇ! ವಿದ್ವಾಂಸನಾದ ಮನುಷ್ಯನು ಲೋಕಕ್ಕೆ ತಾಯಿಯೆನಿಸಿದ ಗಾಯಿತ್ರೀ ಋಕ್ಕಿನಿಂದ ಜಲವನ್ನು ಅಭಿಮಂತ್ರಿಸಿ ಬಳಿಕ ಅತ್ತಿಯಮರದ ಪಾತ್ರೆಯನ್ನು ಚೆನ್ನಾಗಿ ತೊಳೆದು ಬೇರೆ ಉದಕವನ್ನು ಆ ಕಲಶದಲ್ಲಿ ತುಂಬಬೇಕು.

೬. "ಹಿರಣ್ಯಗರ್ಭಃ ಸಮವರ್ತತಾಗ್ರೇ" ಎಂಬ ಮಂತ್ರದಿಂದ ಮತ್ತೊಂದನ್ನು ತೊಳೆಯಬೇಕು. "ಸವಿತಾ ಪಶ್ಚಾತ್ತಾತ್" ಎಂಬ ಮಂತ್ರದಿಂದ ಅನ್ಯೋದಕವನ್ನು ಕಲಶದಲ್ಲಿ ತುಂಬಬೇಕು.

೭. ಈ ರೀತಿ ನೀರು ತುಂಬಿ; ಪುಷ್ಪ, ಅಕ್ಷತೆ ಇವುಗಳಿಂದ ಪೂಜಿಸಿ ಆ ಅತ್ತಿಯ ಮರದ ಪಾತ್ರೆಯನ್ನು ತೆಗೆದುಕೊಂಡು ಸೂರ್ಯನಿಗಿದಿರಾಗಿ ಹಿಡಿಯಬೇಕು. (ತೋರಿಸಬೇಕು.)

೮. ಆ ಮೇಲೆ "ಉದುತ್ಯಂ ಜಾತವೇದಸಂ" ಎಂಬ ಮಂತ್ರಪೂರ್ವಕವಾಗಿ ವ್ಯೋಮದ ಸನ್ನಿಧಿಯಲ್ಲಿಡಬೇಕು.

**ಹಂಸಃ ಶುಚಿಷದೇತೇನ ಪಾದ್ಯಂ ದದ್ಯಾದ್ವಿಚಕ್ಷಣಃ ।**
**ನಿರ್ವಾಪಯೇಚ್ಚ ಪಯಸಾ ಋಷೋಲ್ಕಂ ಸ್ನಾಪಯೇತ್ತತಃ ॥ ೯ ॥**

**ಅಗ್ನಿಸ್ತು ಸಪ್ತಭಿರ್ವೀರ ಕೀರ್ತಿತಾಸ್ತೈಶ್ಚ ಕೃತ್ಸ್ನಶಃ ।**
**ಆಪೋಹಿಷ್ಠೇತಿ ಚ ಕ್ರಮಾತ್ತಿಸೃಭಿಃ ಕುರುನಂದನ ॥ ೧೦ ॥**

**ಹಿರಣ್ಯವರ್ಣೇತಿ ಕ್ರಮಾಚ್ಚತುರ್ಭಿಶ್ಚ ನರಾಧಿಪ ।**
**ಅಭಿಮಂತ್ರ್ಯೋದಕಮೃಗ್ಭಿಸ್ತಿಸೃಭಿರ್ನಿಕ್ಷಿಪೇನ್ನೃಪ ॥ ೧೧ ॥**

**ಭಾನೋಃ ಪ್ರದಕ್ಷಿಣಂ ಕೃತ್ವಾ ಕೃಣುಷ್ವಪಾಜ ಇತ್ಯತಃ ।**
**ಇತ್ಯಮೂಷು ವಾಜಿನಂ ಗಿರಃ ಪ್ರಥಮಾ ಪರಿಕೀರ್ತಿತಾ ॥ ೧೨ ॥**

**ಪತಿಮಿಂದ್ರಸ್ತವಾಮೇತಿ ದ್ವಿತೀಯಾ ಪರಿಕೀರ್ತಿತಾ ।**
**ಪತಿಮಿಂದ್ರಸ್ತು ಶುದ್ಧೋನಆಗಹಿ ತೃತೀಯಾ ಪರಿಕೀರ್ತಿತಾ ॥ ೧೩ ॥**

---

೯. ಕ್ರಮ "ತಿಳಿದವನು ಹಂಸಃ ಶುಚಿಷತ್" ಎಂಬ ಮಂತ್ರದಿಂದ ಪಾದ್ಯವನ್ನು ಸಮರ್ಪಿಸಬೇಕು. ಅನಂತರ ಋಷೋಲ್ಕನಿಗೆ ಹಾಲಿನಿಂದ ಸ್ನಾನಮಾಡಿಸಬೇಕು.

೧೦ ಕುರುನಂದನನಾದ ವೀರನೇ! ಕೇಳು; "ಅಗ್ನಿಸ್ತು ವಿಶ್ರವಸ್ತಮಂ" ಇತ್ಯಾದಿಯಾಗಿ ಉಕ್ತವಾಗಿರುವ ಸಮಗ್ರವಾದ ಏಳು ಮಂತ್ರಗಳಿಂದಲೂ "ಆಪೋಹಿಷ್ಠಾ" ಎಂಬ ಮೂರು ಋಕ್ಕುಗಳಿಂದಲೂ,

೧೧. ಮತ್ತು "ಹಿರಣ್ಯವರ್ಣಾಃಶುಚಯಃ" ಎಂಬ ನಾಲ್ಕು ಋಕ್ಕುಗಳಿಂದಲೂ ಉದಕ ವನ್ನು ಅಭಿಮಂತ್ರಿಸಿ ಮುಂದೆ ಹೇಳುವ ಮೂರು ಋಕ್ಕುಗಳಿಂದ ಕ್ಷೇಪಣಮಾಡಬೇಕು.

೧೨. "ಕೃಣುಷ್ವಪಾಜ" ಎಂಬ ಮಂತ್ರದಿಂದ ಸೂರ್ಯನನ್ನು ಪ್ರದಕ್ಷಿಣೆಮಾಡಬೇಕು. "ತ್ಯಮೂಷುವಾಜಿನಂ ದೇವದೂತಂ" ಎಂಬ ಮಂತ್ರವು ಕ್ಷೇಪಣದ ಮೊದಲನೆಯ ಋಕ್ಕು.

೧೩. "ಪತಿಮಿಂದ್ರಸ್ತವಾಮ" ಎಂಬುದು ಎರಡನೆಯ ಋಕ್ಕು. "ಪತಿಮಿಂದ್ರಸ್ತು ಶುದ್ಧೋನ ಆಗಹಿ ಎಂಬುದು ಮೂರನೆಯ ಋಕ್ಕು. ಹೀಗೆ ಮೂರುಋಕ್ಕುಗಳಿಂದ ಶುದ್ಧೋದಕ ಸ್ನಾನಮಾಡಿಸಬೇಕು.

ಗೌರೀರ್ಮಿಮಾಯೇತಿ ದದ್ಯಾತ್ತಥಾ ಶುಕ್ಲೇ ಚ ವಾಸಸೀ ।
ತಸ್ಯಾಃ ಸಮುದ್ರೇತ್ಯನಯಾ ಉಪವೀತಂ ನಿವೇದಯೇತ್ ॥ ೧೪ ॥

ಶುದ್ಧೋವೃತ್ರಾಣಿ ಜಘ್ನೇತಿ ಗಂಧೈರ್ಭಾನುಂ ಪ್ರಪೂಜಯೇತ್ ।
ಅಸ್ಯ ವಾಮಸ್ಯೇತ್ಯನಯಾ ಅಕ್ಷತೈಃ ಪೂಜಯೇದ್ರವಿಂ ॥ ೧೫ ॥

ಸಪ್ತಯುಂಜಂತಿ ರಥಮನಯಾ ಪೂಜಯೇದ್ರವಿಂ ।
ಪುಷ್ಪೈರ್ಭರತಶಾರ್ದೂಲ ಸತತಂ ತಮನಾಶನಂ ॥ ೧೬ ॥

ಕೋದದರ್ಶ ಪ್ರಥಮಮನಯಾ ಧೂಪಮಾದಿಶೇತ್ ।
ಪಾಕಃ ಪೃಚ್ಛಾಮ್ಯನಯಾ ಚಂದನಂ ಪ್ರತಿಪಾದಯೇತ್ ॥ ೧೭ ॥

ಉದ್ದೀಪ್ಯ ಸ್ಯೇತ್ಯನಯಾ ದೀಪಂ ದದ್ಯಾದ್ವಿಭಾವಸೋಃ ।
ಅರ್ಪಿತ್ವಾ ಕುಂಕುಮಂ ಚೈವ ಕ್ಷೀರಂ ಶೀರ್ಷೇ ತು ಮಂಡಲೇ ॥ ೧೮ ॥

---

೧೪. ಬಳಿಕ "ಗೌರೀರ್ಮಿಮಾಯ" ಎಂಬ ಮಂತ್ರದಿಂದ ಎರಡು ಶ್ವೇತವಸ್ತ್ರಗಳನ್ನು ಸಮರ್ಪಿಸಬೇಕು. "ತಸ್ಯಾಃ ಸಮುದ್ರಃ" ಎಂಬ ಮಂತ್ರದಿಂದ ಉಪವೀತವನ್ನು ಸಮರ್ಪಿಸಬೇಕು.

೧೫. "ಶುದ್ಧೋವೃತ್ರಾಣಿ ಜಘ್ನೇತಿ" ಎಂಬ ಮಂತ್ರದಿಂದ ಗಂಧವನ್ನು ಸಮರ್ಪಿಸಬೇಕು. "ಅಸ್ಯ ವಾಮಸ್ಯ" ಎಂಬ ಮಂತ್ರದಿಂದ ಸೂರ್ಯನನ್ನು ಅಕ್ಷತೆಗಳಿಂದ ಪೂಜಿಸಬೇಕು.

೧೬. ಅಯ್ಯಾ ಭರತವಂಶಜನೇ! "ಸಪ್ತಯುಂಜಂತಿ ರಥಂ" ಎಂಬ ಋಕ್ಕಿನಿಂದ ಅಂಧಕಾರನಾಶಕನಾದ ಸೂರ್ಯನನ್ನು ಪುಷ್ಪಗಳಿಂದ ಅರ್ಚಿಸಬೇಕು.

೧೭. "ಕೋ ದದರ್ಶಪ್ರಥಮಂ" ಎಂಬ ಮಂತ್ರದಿಂದ ಧೂಪಕುಂಡದಲ್ಲಿ ಧೂಪವನ್ನು ಹಾಕಬೇಕು. "ಪಾಕಃಪೃಚ್ಛಾಮಿ" ಎಂಬ ಮಂತ್ರದಿಂದ ಚಂದನಧೂಪವನ್ನು ಸಮರ್ಪಿಸಬೇಕು.

೧೮. "ಉದ್ದೀಪ್ಯಸ್ಯ ಜಾತವೇದೋ" ಎಂಬ ಮಂತ್ರದಿಂದ ಸೂರ್ಯನಿಗೆ ದೀಪವನ್ನು ಬೆಳಗಬೇಕು. ಮಂಡಲದ ಮೇಲ್ತುದಿಯಲ್ಲಿ (ಶಿರಸ್ಸಿನಲ್ಲಿ) ಕುಂಕುಮಕೇಸರಿಯನ್ನೂ, ಕ್ಷೀರವನ್ನೂ ಅರ್ಪಿಸಿ "ಯುಕ್ತಾ ಮಾತಾಸಿ" ಎಂಬ ಮಂತ್ರದಿಂದ ನೈವೇದ್ಯ ಸಮರ್ಪಣೆಮಾಡಬೇಕು.

ಯುಕ್ತ್ವಾ ಮಾತಾಸೀತ್ಯನಯಾ ನೈವೇದ್ಯಂ ಪ್ರತಿಪಾದಯೇತ್ ।
ಇತಿ ಸಂಪೂಜ್ಯ ದೇವೇಶಂ ತತಃ ಕುರ್ಯಾತ್ಪರಾಂ ಸ್ತುತಿಂ ॥ ೧೯ ॥

ಋಗ್ಭಿರ್ನೈ ಪಂಚಭಿಸ್ತಾತ ಶೃಣುಚೈಕಮನಾದೃತಃ ।
ಉಕ್ಷಾಣಂ ಪೃಶ್ನಿರಿತಿ ಚ ಪ್ರಥಮಾ ಪರಿಕೀರ್ತಿತಾ ॥ ೨೦ ॥

ಚತ್ವಾರಿವಾಗಿತಿ ಭವೇದ್ದ್ವಿತೀಯಾ ಪರಿಕೀರ್ತಿತಾ ।
ಇಂದ್ರಂ ಮಿತ್ರಂ ತೃತೀಯಾ ತು ವರಾಧಿಕ್ಯೇ ಪ್ರಕೀರ್ತಿತಾ ॥ ೨೧ ॥

ಕೃಷ್ಣಂ ನಿಯಾನಂ ಹಿ ತಥಾ ಚತುರ್ಥೀ ಪರಿಕೀರ್ತಿತಾ ।
ಯೋ ರತ್ನವಾಹೀತ್ಯನಯಾ ಕಿರೀಟಂ ಯೋಜಯೇದ್ರವೌ ॥ ೨೨ ॥

ಗತೇಹನಾಮಿತ್ಯನಯಾ ಅವ್ಯಂಗಂ ಭಾಸ್ಕರೇ ನ್ಯಸೇತ್ ।
ಇಯಮದದಾದ್ರಭಸಮೃಣಚ್ಯುತಮಿತಿ ಋಗಾದಿತಃ ॥ ೨೩ ॥

---

೧೯. ದೇವದೇವೇಶನಾದ ಸೂರ್ಯನನ್ನು ಈ ರೀತಿ ಪೂಜಿಸಿ ಅನಂತರ ಶ್ರೇಷ್ಠವಾದ ಐದು ಋಕ್ಕುಗಳಿಂದ ಸ್ತೋತ್ರಮಾಡಬೇಕು.

೨೦. ಆ ಪಂಚ ಋಕ್ಕುಗಳು ಯಾವುವು ಎಂಬುದನ್ನು ಈಗ ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. "ಉಕ್ಷಾಣಂಪೃಶ್ನಿ" ಎಂಬುದು ಮೊದಲನೆಯ ಋಕ್ಕು.

೨೧. "ಚತ್ವಾರಿ ವಾಕ್ಪರಿಮಿತಾನಿ "ಪದಾನಿ" ಎಂಬುದು ಎರಡನೆಯಋಕ್ಕು, "ಇಂದ್ರಂ ಮಿತ್ರಂ" ಎಂಬುದು ಅಧಿಕವರಪ್ರದವಾದ ಮೂರನೆಯಋಕ್ಕು.

೨೨. "ಕೃಷ್ಣಂ ನಿಯಾನಂ" ಎಂಬುದು ನಾಲ್ಕನೆಯಋಕ್ಕು, "ಯೋರತ್ನವಾಹಿ" ಎಂಬುದು ಐದನೆಯಋಕ್ಕು ಎಂದು ಹೇಳಿದೆ. ಈ ಐದು ಋಕ್ಕುಗಳಿಂದ ಸೂರ್ಯನಿಗೆ ಕಿರೀಟಧಾರಣೆ ಮಾಡಬೇಕು.

೨೩. "ಗತೇಹನಾಮ್" ಎಂಬ ಋಕ್ಕಿನಿಂದ ಸೂರ್ಯನಿಗೆ ಅವ್ಯಂಗಾಭರಣವನ್ನು ಧರಿಸಬೇಕು. ಅಯ್ಯಾ ಅಚ್ಯುತನೇ! "ಇಯಮದದಾದ್ರಭಸ ಮೃಣಚ್ಯುತಂ ದಿವೋದಾಸ" ಎಂಬ ಋಕ್ಕಿನ ಆದಿಭಾಗದಿಂದ ಕ್ರಮವಾಗಿ ಪೂಜೆಯನ್ನು ಮಾಡಿ.

ಕೃತ್ವಾ ಪೂಜಾಂ ತತಶ್ಚಾಗ್ರ್ಯೈರಷ್ಟಾಭಿರಿತಿ ಚಾಚ್ಯುತ ।
ದೇವಸ್ಯ ಶಕ್ತಯೋऽಷ್ಟೌ ಚ ಪೂಜಯೇದ್ವಿಧಿವತ್ಕ್ರಮಾತ್ ॥ ೨೪ ॥

ಇತ್ಯೇಷ ತೇ ಮಯಾಖ್ಯಾತಃ ಪ್ರತಿಮಾಪೂಜನೇ ವಿಧಿಃ ।
ಯಃ ಪುರೋಕ್ತೋ ಮಹಾಬಾಹೋ ಬ್ರಹ್ಮಣಾ ವಿಷ್ಣವೇ ತಥಾ ॥ ೨೫ ॥

ಅನೇನ ವಿಧಿನಾ ಯಸ್ತು ಸತತಂ ಪೂಜಯೇದ್ರವಿಂ ।
ಸ ಪ್ರಾಪ್ನೋತ್ಯಖಿಲಾನ್ಕಾಮಾನಿಹಲೋಕೇ ಪರತ್ರ ಚ ॥ ೨೬ ॥

ಪುತ್ರಾರ್ಥೀ ಲಭತೇ ಪುತ್ರಾನ್ಧನಾರ್ಥೀ ಲಭತೇ ಧನಂ ।
ಕನ್ಯಾರ್ಥೀ ಲಭತೇ ಕನ್ಯಾಂ ವೇದಾರ್ಥೀ ವೇದವಿದ್ಭವೇತ್ ॥ ೨೭ ॥

ನಿಷ್ಕಾಮಃ ಪೂಜಯೇದ್ಯಸ್ತು ಸ ಮೋಕ್ಷಂ ಪ್ರಾಪ್ನುಯಾನ್ನರಃ ।
ಅನೇನ ವಿಧಿನಾ ಪೂಜ್ಯ ನರಃ ಸಿದ್ಧಿಮವಾಪ್ನುಯಾತ್ ॥ ೨೮ ॥

---

೨೪. ಅನಂತರ ದೇವನ ಅಷ್ಟಶಕ್ತಿದೇವತೆಗಳನ್ನೂ ಎಂಟು ಮುಖ್ಯಮಂತ್ರಗಳಿಂದ ವಿಧಿಯಂತೆ ಕ್ರಮವಾಗಿ ಪೂಜಿಸಬೇಕು.

೨೫. ಎಲೈ ಮಹಾಬಾಹುವೇ! ಪೂರ್ವದಲ್ಲಿ ಬ್ರಹ್ಮನು ಈ ಪ್ರತಿಮಾಪೂಜೆಯ ವಿಧಾನವನ್ನು ವಿಷ್ಣುವಿಗೆ ಈ ರೀತಿ ಹೇಳಿದ್ದನು. ಅವನು ಹೇಳಿದ್ದ ರೀತಿಯಲ್ಲಿಯೇ ನಾನೂ ನಿನಗೆ ಹೇಳಿದ್ದೇನೆ.

೨೬-೨೭. ಈ ವಿಧಾನದಿಂದ ಯಾವನು ಸೂರ್ಯನನ್ನು ಯಾವಾಗಲೂ ಪೂಜಿಸುವನೋ ಅವನು ಇಹಪರಗಳಲ್ಲಿ ತನ್ನ ಸಮಸ್ತ ಇಷ್ಟಾರ್ಥಗಳನ್ನೂ ಹೊಂದುತ್ತಾನೆ. ಗಂಡುಮಕ್ಕಳನ್ನು ಅಪೇಕ್ಷಿಸುವವನು ಗಂಡುಮಕ್ಕಳನ್ನೂ, ಧನಾಪೇಕ್ಷೆಯುಳ್ಳವನು ಧನವನ್ನೂ, ಹೆಣ್ಣುಮಕ್ಕಳನ್ನು ಅಪೇಕ್ಷಿಸುವವನು ಕನ್ಯೆಯರನ್ನೂ ಪಡೆಯುವನು. ವೇದಾಧ್ಯಯನವನ್ನು ಅಪೇಕ್ಷಿಸುವವನು ವೇದಜ್ಞನಾಗುತ್ತಾನೆ.

೨೮. ಯಾವ ಮನುಷ್ಯನು ನಿಷ್ಕಾಮನಾಗಿ ಪೂಜೆ ಮಾಡುತ್ತಾನೆಯೋ ಅವನು ಮೋಕ್ಷವನ್ನೇ ಹೊಂದುತ್ತಾನೆ. ಈ ವಿಧಿಯಿಂದ ಚೆನ್ನಾಗಿ ಪೂಜಿಸಿದ ಮನುಷ್ಯನು ತನ್ನ ಸಮಸ್ತ ಇಷ್ಟಾರ್ಥಸಿದ್ಧಿಯನ್ನೂ ಹೊಂದುವನು.

ಬ್ರಹ್ಮಾದಯಸ್ತಥಾದೇವಂ ಪೂಜಯಿತ್ವಾ ವಿಭಾವಸುಂ ।
ಅನೇನ ವಿಧಿನಾ ಪೂಜ್ಯ ಸಂತಃ ಸಿದ್ಧಿಂ ಪರಾಂ ಗತಾಃ ॥ ೨೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ವ್ಯೋಮಾರ್ಚನ ವಿಧಿವರ್ಣನಂ ನಾಮ ಚತುರಧಿಕ
ದ್ವಿಶತತಮೋಽಧ್ಯಾಯಃ



---

೨೯. ಬ್ರಹ್ಮನೇ ಮುಂತಾದ ಮಹಾನುಭಾವರು ಆ ಸೂರ್ಯದೇವನನ್ನು ಈ ವಿಧಿಯಿಂದಲೇ ಪೂಜಿಸಿ ಉತ್ತಮವಾದ ಸಿದ್ಧಿಯನ್ನು ಹೊಂದಿದರು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ವ್ಯೋಮಾರ್ಚನ ವಿಧಿವರ್ಣನೆಯೆಂಬ ಇನ್ನೂರನಾಲ್ಕನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚಾಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಪುನರ್ನಿಬೋಧ ಮೇ ಭೀಷ್ಮ ಗದತಃ ಪರಮಂ ವಿಧಿಂ ।
ಯೇನ ಪೂಜಯತೇ ನಿತ್ಯಂ ಮಹಾದೇವೋ ದಿವಾಕರಂ ॥ ೧ ॥

ಪ್ರಭೂತಂ ನಿರ್ಮಲಂ ತೇಜ ಆರಾಧ್ಯ ಪರಮಂ ಸುಖಂ ।
ಪೂರ್ವಮಂತಸ್ತಥಾಗ್ನೇಯ್ಯಾಂ ನೈಋತ್ಯಾಂ ಪವನಾಲಯೇ ॥ ೨ ॥

ಕ್ರಮೇಣ ಯಾವದೀಶಾನಂ ಹೃದಿ ಬೀಜಂ ಚ ವಿನ್ಯಸೇತ್ ।
ಭಾಸ್ಕರಾಸನಮೇತತ್ತು ಸ್ಮೃತಂ ತತ್ವದರ್ಶಿಭಿಃ ॥ ೩ ॥

---

## ಇನ್ನೂರಐದನೆಯ ಅಧ್ಯಾಯ

೧. ವ್ಯಾಸರು ಭೀಷ್ಮನನ್ನು ಕುರಿತು ಮುಂದುವರಿಸಿ ಹೇಳುತ್ತಾ—"ಎಲೈ ಭೀಷ್ಮನೇ! ಕೇಳು; ಮಹಾದೇವನಾದ ದಿವಾಕರನನ್ನು ಯಾವಾಗಲೂ ಪೂಜಿಸತಕ್ಕ ಉತ್ತಮ ವಿಧಿಯನ್ನು ನಾನು ಇನ್ನು ಸ್ವಲ್ಪ ಹೇಳುತ್ತೇನೆ. ಆ ವಿಧಾನವನ್ನು ಕೇಳು.

೨. ಅಪಾರವಾದ ನಿರ್ಮಲ ತೇಜಸ್ಸುಳ್ಳ ಆ ಸ್ವಾಮಿಯನ್ನು ವಿಧಿಪ್ರಕಾರ ಆರಾಧಿಸಿದವನು ಪರಮಸುಖವನ್ನು ಹೊಂದುತ್ತಾನೆ.

೩. ಆಸನದ ಪೂರ್ವದಿಕ್ಕಿನಲ್ಲಿ ಅಂತವಾಗುವಂತೆ ಆಗ್ನೇಯದಿಕ್ಕು, ನೈಋತ್ಯ ದಿಕ್ಕು, ವಾಯುವ್ಯದಿಕ್ಕು, ಈಶಾನ್ಯದಿಕ್ಕು, ಇವುಗಳಲ್ಲಿ ಕ್ರಮದಿಂದ ಹೃದ್ಬೀಜನ್ಯಾಸ ಮಾಡಬೇಕು. ತತ್ವಜ್ಞಾನಿಗಳು ಈ ಪ್ರಕಾರವಾಗಿಯೇ ಭಾಸ್ಕರಾಸನವನ್ನು ನ್ಯಾಸ ಮಾಡುವರು.

**ಉಪರಿಷ್ಟಾತ್ತತಸ್ತಸ್ಯ ಹೃದಯೇನ ತು ಪಂಕಜಂ ।**
**ಅಷ್ಟಪತ್ರಂ ಕೇಶರಾಲಂ ಪಂಚವರ್ಣಂ ಸಕೇಶರಂ ॥ ೪ ॥**

**ದೀಪ್ತಾದಿ ಪೂರ್ವಮಾರಭ್ಯ ಆಮಹಾದೇವಗೋಚರಂ ।**
**ಶಕ್ತ್ಯಷ್ಟಕಂ ನ್ಯಸೇನ್ಮಂತ್ರೈರಾದಿತಃ ಸರ್ವತೋಮುಖೀಂ ॥ ೫ ॥**

**ಅಬೀಜೈಃ ಕೇಸರಾಗ್ರೇಷು ಕ್ರಮೇಣೈವ ಚ ಪೂಜಯೇತ್ ।**
**ತತಸ್ತ್ವಾವಾಹಯೇದ್ಭಾನುಂ ಸ್ಥಾಪಯೇತ್ಕರ್ಣಿಕೋಪರಿ ॥ ೬ ॥**

**ತಸ್ಯೋಪಹೃತ್ಯ ತಂ ಚಾನ್ಯಂ ವೇದಿತವ್ಯಂ ಖಪುಷ್ಕರಂ ।**
**ತೇನೈವಾವಾಹನಂ ಚಾರ್ಚ್ಯ ಸ್ಥಾಪನಂ ಚಾರ್ಘ್ಯಮೇವ ಚ ॥ ೭ ॥**

**ಪಾದ್ಯಮಾಚಮನಂ ಸ್ನಾನಂ ವಸ್ತ್ರಗಂಧಾದಿಭೂಷಣಂ ।**
**ವಿಧಿನಾ ವೀರ ಪುಷ್ಪಾಣಿ ಧೂಪಂ ನೈವೇದ್ಯಮೇವ ಚ ॥ ೮ ॥**

---

೪. ಅನಂತರ ಅದರ ಮೇಲ್ಭಾಗದಲ್ಲಿ ಅಷ್ಟದಲಗಳಿಂದಲೂ, ಪಂಚವರ್ಣಗಳುಳ್ಳ ಕೇಶರಸಹಿತವಾದ ಕೇಶರಾಲಗಳಿಂದಲೂ ಕೂಡಿದ ಪಂಕಜವನ್ನು ಹೃದಯದಿಂದ ನ್ಯಾಸಮಾಡಬೇಕು.

೫. ಮಧ್ಯದಲ್ಲಿ ಮೊದಲು ಸರ್ವತೋಮುಖೀದೇವಿಯನ್ನು ನ್ಯಾಸಮಾಡಿ, ಬಳಿಕ ಪೂರ್ವದಿಕ್ಕಿನಿಂದ ಆರಂಭಿಸಿ ಮಹಾದೇವನ ಸಂಬಂಧವಾದ ಈಶಾನ್ಯದವರೆಗೆ ದೀಪ್ತಾ ಮೊದಲಾದ ಅಷ್ಟಶಕ್ತಿಗಳನ್ನು ಪೂರ್ವೋಕ್ತವಾದ ಮಂತ್ರಗಳ ಮೂಲಕ ಕ್ರಮವಾಗಿ ನ್ಯಾಸಮಾಡಬೇಕು.

೬. ಸರ್ವತೋಮುಖೀದೇವಿಯನ್ನು ಬೀಜಾಕ್ಷರಗಳಿಲ್ಲದೆ ಕೇಸರಾಗ್ರದಲ್ಲಿ ಪೂಜಿಸಬೇಕು. ಅನಂತರ ಭಾನುವನ್ನು ಕರ್ಣಿಕೆಯ ಮೇಲ್ಗಡೆ ಆವಾಹನಮಾಡಿ ಸ್ಥಾಪಿಸಬೇಕು.

೭. ಈ ಖಪುಷ್ಕರವನ್ನು ಅವನ ಸಂಬಂಧವಾದ ಮತ್ತೊಂದು ರೂಪವೆಂದು ತಿಳಿಯಬೇಕು. ಆದುದರಿಂದಲೇ ಅದರಲ್ಲಿ ಆವಾಹನ ಸ್ಥಾಪನವನ್ನೂ, ಅರ್ಚನವನ್ನೂ, ಮಾಡಬೇಕು.

೮. ಅಯ್ಯಾ ವೀರನೇ! ವಿಧಿಪ್ರಕಾರ ಅರ್ಘ್ಯಪಾದ್ಯ, ಆಚಮನ, ವಸ್ತ್ರ, ಗಂಧ, ಆಭರಣಗಳು, ಪುಷ್ಪಗಳು, ಧೂಪ, ನೈವೇದ್ಯ ಇವನ್ನೂ ಸಮರ್ಪಿಸಬೇಕು.

ಕರ್ತವ್ಯಂ ಶ್ರದ್ಧಯಾ ಭಕ್ತ್ಯಾ ಏವಂ ತುಷ್ಯತಿ ಭಾಸ್ಕರಃ ।
ಮಹಾಪಾತಕಿನೋಽಪ್ಯಾಶು ಲಭಂತೇ ಚಿಂತಿತಂ ಫಲಂ ॥ ೯ ॥

ಆದಿತ್ಯಂ ಪೂಜಯಿತ್ವಾ ತು ಪಶ್ಚಾದಂಗಾನಿ ಪೂಜಯೇತ್ ।
ದೀಪ್ತಾಯಾಂ ಹೃದಯಂ ನ್ಯಸ್ಯ ಭವಾನ್ಯಾಂ ಶಿರಸೋನ್ಯಸೇತ್ ॥ ೧೦ ॥

ದಿಗ್ವಿದಿಕ್ಷು ನ್ಯಸೇದಸ್ತ್ರಮಿಂದ್ರಾದೀಶೋತ್ತರಾಂತಿಕಂ ।
ಕರ್ಣಿಕಾಯಾಂ ನ್ಯಸೇನ್ನೇತ್ರಂ ಸ್ವಬೀಜೇನ ತು ವಾರ್ಚಯೇತ್ ॥ ೧೧ ॥

ಪುಷ್ಪೈರ್ಗಂಧೈಶ್ಚ ಧೂಪೈಶ್ಚ ಹೃದಯಾನಿ ಕ್ರಮೇಣ ತು ।
ಪೂಜಯಿತ್ವಾ ತು ವಿಧಿವದ್ಗರ್ಭಂ ಪಶ್ಚಾತ್ತು ಮಂತ್ರವಿತ್ ॥ ೧೨ ॥

ಬಾಹ್ಯತಃ ಪೂರ್ವತೋ ಚಂದ್ರಂ ದಕ್ಷಿಣೇನ ಬುಧಂ ತಥಾ ।
ಧಿಷಣಂ ಪಶ್ಚಿಮೇ ಪೂಜ್ಯ ಉತ್ತರೇಣ ತು ಭಾರ್ಗವಂ ॥ ೧೩ ॥

---

೯. ಇವನ್ನು ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಸಮರ್ಪಿಸಬೇಕು. ಹೀಗೆ ಪೂಜಿಸಿದರೆ ಸೂರ್ಯನು ಸಂತುಷ್ಟನಾಗುತ್ತಾನೆ. ಭಕ್ತನು ಮಹಾಪಾತಕಗಳನ್ನು ಮಾಡಿದ್ದರೂ ಕೂಡ ಪರಿಹಾರವಾಗಿ ಶೀಘ್ರವಾಗಿ ಚಿಂತಿತಫಲವನ್ನು ಹೊಂದುತ್ತಾರೆ.

೧೦ ಆದಿತ್ಯನನ್ನು ಪೂಜಿಸಿದ ಮೇಲೆ ಅಂಗದೇವತೆಗಳನ್ನೂ ಪೂಜಿಸಬೇಕು. ದೀಪ್ತೆಯಲ್ಲಿ ಹೃದಯವನ್ನೂ, ಭವಾನಿಯಲ್ಲಿ ಶಿರಸ್ಸನ್ನೂ ನ್ಯಾಸಮಾಡಬೇಕು.

೧೧ ಪೂರ್ವದಿಕ್ಕು ಮೊದಲುಗೊಂಡು ಉತ್ತರದ ಸಮೀಪದ ಈಶಾನ್ಯದವರೆಗೆ ದಿಕ್ಕು ವಿದಿಕ್ಕುಗಳಲ್ಲಿ ಅಸ್ತ್ರವನ್ನೂ ನ್ಯಾಸಮಾಡಬೇಕು. ಕರ್ಣಿಕೆಯಲ್ಲಿ ನೇತ್ರವನ್ನು ನ್ಯಾಸಮಾಡಬೇಕು. ಅಥವಾ ಸ್ವಬೀಜಾಕ್ಷರದಿಂದಲಾದರೂ ಅರ್ಚಿಸಬೇಕು.

೧೨. ಮಂತ್ರಜ್ಞನು ವಿಧಿಪ್ರಕಾರ ಪೂಜಿಸುವಾಗ ಕ್ರಮವಾಗಿ ಹೃದಯವನ್ನೂ ಅನಂತರ ಗರ್ಭವನ್ನೂ ಪುಷ್ಪಧೂಪಗಳಿಂದ ಪೂಜಿಸಬೇಕು.

೧೩. ಗ್ರಹಾರ್ಚನೆಯಲ್ಲಿ ಹೊರಗಡೆ ಪೂರ್ವದಿಕ್ಕಿನ ಸಮೀಪದ ಆಗ್ನೇಯದಲ್ಲಿ ಚಂದ್ರನನ್ನೂ, ದಕ್ಷಿಣದಿಕ್ಕಿನಲ್ಲಿ ಬುಧನನ್ನೂ, ಪಶ್ಚಿಮದಲ್ಲಿ ಗುರುವನ್ನೂ, ಉತ್ತರದಲ್ಲಿ ಶುಕ್ರನನ್ನೂ ಸ್ಥಾಪಿಸಬೇಕು.

ಆಗ್ನೇಯ್ಯಾಂ ಚ ಕುಜಂ ಪೂಜ್ಯ ನೈಋತ್ಯಾಂ ಭಾನುದೇಹಜಂ ।
ವಾಯವ್ಯಾಂ ಪೂಜಯೇತ್ಕೃಷ್ಣಮೈಶಾನ್ಯಾಂ ವಿಕಚಂ ನೃಪ ॥ ೧೪ ॥

ಇಂದ್ರಾದಿ ಲೋಕಪಾಲಾಂಶ್ಚ ತತೋsಷ್ಟೌ ಪೂಜಯೇದ್ಬುಧಃ ।
ಸುಗಂಧೈರ್ವಿವಿಧೈಃ ಪುಷ್ಪೈರ್ಧೂಪೈಶ್ಚೈವ ಮನೋರಮೈಃ ॥ ೧೫ ॥

ಕ್ರಮೇಣ ಪೂಜಯೇದ್ಭಾನುಂ ಲೋಕಪಾಲೈರ್ಗ್ರಹೈಃ ಸಹ ।
ಮಂತ್ರೈಃ ಕುರುಕುಲಶ್ರೇಷ್ಠ ಯ ಇಚ್ಛೇಚ್ಛ್ರೇಯ ಆತ್ಮನಃ ॥ ೧೬ ॥

ಅನೇನ ವಿಧಿನಾ ಯತ್ರ ದೇವಃ ಸಂಪೂಜ್ಯತೇ ರವಿಃ ।
ನ ಚೋರಾಗ್ನಿಭಯಂ ತತ್ರ ನ ಚಾಪಿ ನರಕಾದ್ಭಯಂ ॥ ೧೭ ॥

ವರ್ಷೋಪಲವಿಷಾದಿಭ್ಯೋ ಭಯಂ ತತ್ರ ನ ವಿದ್ಯತೇ ।
ಸುಖಮಾರೋಗ್ಯಮಾನಂದಂ ಸುಭಿಕ್ಷಮಚಲಾಂ ಶ್ರಿಯಮ್ ॥ ೧೮ ॥

---

೧೪. ಮತ್ತು ಆಗ್ನೇಯದಲ್ಲಿ ಕುಜನನ್ನೂ, ನೈಋತ್ಯದಲ್ಲಿ ಶನೈಶ್ಚರನನ್ನೂ, ವಾಯವ್ಯದಲ್ಲಿ ರಾಹುವನ್ನೂ, ಈಶಾನ್ಯದಲ್ಲಿ ವಿಕಚನ (ಕೇತು) ವನ್ನೂ ಪೂಜಿಸಬೇಕು.

೧೫. ಆ ಮೇಲೆ ಇಂದ್ರಾದ್ಯಷ್ಟ ದಿಕ್ಪಾಲಕರನ್ನೂ ಬಗೆಬಗೆಯಾದ ಸುಗಂಧಗಳಿಂದಲೂ, ಪುಷ್ಪಗಳಿಂದಲೂ, ಮನೋಹರಗಳಾದ ಧೂಪಗಳಿಂದಲೂ ಪೂಜಿಸಬೇಕು.

೧೬. ಇಂದ್ರಾದಿ ಅಷ್ಟಲೋಕಪಾಲಕರ, ಕುಜಸೋಮಾದಿ ನವಗ್ರಹಗಳ, ಸಹಿತವಾಗಿ ಸೂರ್ಯನನ್ನು ಕ್ರಮವಾಗಿ ಪೂಜಿಸಬೇಕು. ಎಲೈ ಕುರುಕುಲಶ್ರೇಷ್ಠನೇ! ತನಗೆ ಶ್ರೇಯಸ್ಸು ಆಗಬೇಕೆಂದು ಇಚ್ಛಿಸುವವನು ಈ ಮಂತ್ರಗಳಿಂದ ಪೂಜಿಸಬೇಕು.

೧೭. ಈ ವಿಧಿಯಿಂದ ಸೂರ್ಯದೇವನ ಪೂಜೆಯು ತಪ್ಪದೆ ನಡೆಯುವ ಸ್ಥಳದಲ್ಲಿರುವವರಿಗೆ ಚೋರಭಯ, ಅಗ್ನಿಭಯ, ನರಕಭಯ ಇವುಗಳು ಯಾವುವೂ ಇಲ್ಲ.

೧೮. ಆಲಿಕಲ್ಲುಮಳೆ ಸುರಿವ ಭಯವೂ ಇರುವುದಿಲ್ಲ. ಅಲ್ಲದೆ ಅವರು ಸರ್ವದಾ ಸುಖವನ್ನೂ, ಆರೋಗ್ಯವನ್ನೂ, ಆನಂದವನ್ನೂ, ಸುಭಿಕ್ಷವನ್ನೂ, ಸ್ಥಿರವಾದ ಸಂಪತ್ತನ್ನೂ ಹೊಂದುವರು.

ತೇಜೋಬಿಂಬಾಂತಮಧ್ಯಸ್ಥ ಆದಿತ್ಯಃ ಪರಮಾರ್ಥತಃ ।
ಯಷ್ಟವ್ಯಃ ಸಾಧಕೈರ್ನಿತ್ಯಂ ನ ರಥೋ ನ ಚ ವಾಜಿನಃ ॥ ೧೯ ॥

ಇತ್ಯೇಷ ವಿಧಿರಾಖ್ಯಾತೋ ಮಯಾ ಭೀಷ್ಮ ತವಾಖಿಲಃ ।
ಯೇನ ಪೂಜಯತೇ ನಿತ್ಯಂ ಮಹಾದೇವೋ ದಿವಾಕರಂ ॥ ೨೦ ॥

ಇತ್ಥಂ ಪೂಜ್ಯ ವಿವಸ್ವಂತಂ ಹೃದ್ಬೀಜೇನ ವಿಸರ್ಜಯೇತ್ ।
ಯ ಏವಂ ಪೂಜಯೇದ್ಭಾನುಂ ಸ ಯಾತಿ ಪರಮಾಂ ಗತಿಂ ॥ ೨೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ
ಭೀಷ್ಮವ್ಯಾಸಸಂವಾದೇ ಮಹಾದೇವಾರ್ಚನವಿಧಿವರ್ಣನಂ
ನಾಮ ಪಂಚಾಧಿಕ ದ್ವಿಶತತಮೋऽಧ್ಯಾಯಃ.



೧೯. ಸಾಧಕರು ತೇಜೋಬಿಂಬದ ಮಧ್ಯದಲ್ಲಿರುವ ಆದಿತ್ಯನನ್ನೇ ವಾಸ್ತವವಾಗಿ ನಿತ್ಯವೂ ಪೂಜಿಸಬೇಕು. ಅವನ ರಥವನ್ನಾಗಲಿ, ಕುದುರೆಗಳನ್ನಾಗಲಿ, ಪೂಜಿಸತಕ್ಕದ್ದಲ್ಲ.

೨೦–೨೧. ಎಲೈ ಭೀಷ್ಮನೇ! ಈ ಪ್ರಕಾರ ಸಮಗ್ರವಾದ ಸೂರ್ಯಪೂಜಾವಿಧಿಯನ್ನು ನಾನು ನಿನಗೆ ಹೇಳಿದೆನು. ಈ ವಿಧಿಪ್ರಕಾರವೇ ಮಹಾದೇವನು ಸೂರ್ಯನನ್ನು ಯಾವಾಗಲೂ ಪೂಜಿಸುತ್ತಾನೆ. ಈ ರೀತಿಯಾಗಿ ಸೂರ್ಯನನ್ನು ಪೂಜಿಸಿ ಹೃದ್ಬೀಜ ಮಂತ್ರದಿಂದ ವಿಸರ್ಜನೆ ಮಾಡಬೇಕು. ಈ ಪ್ರಕಾರ ಸೂರ್ಯನನ್ನು ಪೂಜಿಸುವವನು ಪರಮ ಸದ್ಗತಿಯನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀಕಲ್ಪವಲ್ಲಿ
ಭೀಷ್ಮವ್ಯಾಸರ ಸಂವಾದದಲ್ಲಿ ಮಹಾದೇವನು ಸೂರ್ಯನನ್ನು ಅರ್ಚಿಸಿದ
ವಿಧಾನವೆಂಬ ಇನ್ನೂರೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಷಡುತ್ತರದ್ವಿಶತತಮೋಽಧ್ಯಾಯಃ

॥ ಭೀಷ್ಮ ಉವಾಚ ॥

ಮಂತ್ರೋದ್ಧಾರಂ ಪರಂ ಬ್ರೂಹಿ ಮುದ್ರಾಶಕ್ತಿಸಮನ್ವಿತಂ ।
ರೂಪವರ್ಣಸಮಂ ಚೈವ ಪೌರಾಣಿಕಮನುತ್ತಮಂ ॥ ೧ ॥

॥ ವ್ಯಾಸ ಉವಾಚ ॥

ಶೃಣು ಭೀಷ್ಮ ಮಹಾಬಾಹೋ ಯಥಾ ವಕ್ಷ್ಯಾಮಿ ತೇಽನಘ ।
ಪೌರಾಣಿಕಾನಾಂ ಮಂತ್ರಾಣಾಮುದ್ಧಾರಂ ವೈದಿಕಾದೃತೇ ॥ ೨ ॥

---

### ಇನ್ನೂರಆರನೆಯ ಅಧ್ಯಾಯ

೧. ಆಗ ಭೀಷ್ಮನು ವ್ಯಾಸನನ್ನು ಕುರಿತು ಹೇಳುತ್ತಾನೆ—"ಪುರಾಣೋಕ್ತ ವಾದುದೂ, ಮುದ್ರಾಶಕ್ತಿಗಳಿಂದ್ಕೂಡಿದುದೂ, ರೂಪ ವರ್ಣ ಇವುಗಳಲ್ಲಿ ಸಮವೂ, (ಅನುರೂಪ್ಯ) ಸರ್ವೋತ್ತಮವೂ, ಶ್ರೇಷ್ಠವೂ ಆದ ಮಂತ್ರೋದ್ಧಾರವನ್ನು ಹೇಳು" ಎಂದನು.

೨. ಆಗ ವ್ಯಾಸನು ಹೇಳುತ್ತಾನೆ—"ಮಹಾಬಾಹುವೂ, ನಿರ್ದೋಷಿಯೂ ಆದ ಎಲೈ ಭೀಷ್ಮನೇ! ವೇದಮಂತ್ರಗಳು ವಿನಾ ಪೌರಾಣಿಕ ಮಂತ್ರಗಳ ಉದ್ಧಾರ ವನ್ನು ಹೇಳುತ್ತೇನೆ ಕೇಳು.

ವರ್ಣರೇಫಸಮಾಯುಕ್ತಂ ವಿದ್ರುಮೇಣೈವ ಭೂಷಿತಂ ।
ಅಂತಸ್ಥಾನಾಂ ಹಿ ಅಂತ್ಯಂ ವೈ ಬ್ರಹ್ಮದೈವತ್ಯಮುಚ್ಯತೇ ॥ ೩ ॥

ಬಿಂದುರೇಫಸಮಾಯುಕ್ತಂ ದೀರ್ಘಯಾ ಮಾತ್ರಯಾ ತಥಾ ।
ದೀಕ್ಷಾಕ್ಷರಂ ಸಮುದ್ದಿಷ್ಟಂ ದ್ವಿತೀಯಂ ವಿಷ್ಣುದೈವತಂ ॥ ೪ ॥

ತೃತೀಯಂ ತು ತಥಾ ಪ್ರೋಕ್ತಂ ಸವಿಸರ್ಗಂ ಜನಾಧಿಪ ।
ಸ ತೃತೀಯೋ ಬುಧೈಃ ಪ್ರೋಕ್ತೋ ರುದ್ರದೈವತ ಏವ ಹಿ ॥ ೫ ॥

ಭಾಸ್ಕರೋಯಂ ಮಹಾನ್ಸಾಕ್ಷಾನ್ಮಂತ್ರಮೂರ್ತಿಸ್ತ್ರಿರಕ್ಷರಃ ।
ದುರ್ಲಭಃ ಪರಮೋ ಗುಹ್ಯಸ್ತ್ರಿವೇದೋ ದೇವಪೂಜಿತಃ ॥ ೬ ॥

ಯಸ್ತ್ವಿದಂ ಜಪತೇ ಭಕ್ತ್ಯಾ ಸ ಯಾತಿ ಪರಮಾಂ ಗತಿಂ।
ತತಶ್ಚ ಮುದ್ರಾಂ ವಕ್ಷ್ಯಾಮಿ ಸಾನ್ನಿಧ್ಯೇ ಕಾರಣಂ ಪರಂ ॥ ೭ ॥

---

೩. ರೇಫವರ್ಣದಿಂದ ಕೂಡಿರುವ ಬಿಂದುವೂ, ಅಂತಸ್ಥವರ್ಣಗಳಾದ ಯ, ರ, ಲ, ವ, ಇವುಗಳಲ್ಲಿ ಕೊನೆಯದಾದ ವಕಾರವೂ (ಓಂ, ರಂ, ವಂ) ಬ್ರಹ್ಮ ದೇವತಾಕವೆನಿಸುವುದು.

೪. ರೇಫಬಿಂದುಗಳಿಂದ ಕೂಡಿದುದೂ (ರಂ) ದೀರ್ಘ ಆಕಾರಸಹಿತವಾದುದೂ ಆದ (ಆಂ) (ಓಂ, ಆಂ, ರಂ) ಎಂಬುದು ವಿಷ್ಣುದೇವತಾಸಂಬಂಧವಾದ ದೀಕ್ಷಾಕರ ಎಂದು ಉದ್ದಿಷ್ಟವಾಗಿದೆ. ಇದು ದ್ವಿತೀಯ ಮಂತ್ರ.

೫. ಅಯ್ಯಾ ನರಪತಿಯೇ! ಮೂರನೆಯದು ಹಿಂದಿನಂತೆ ಬಿಂದುಸಹಿತವಾದ ರೇಫದಿಂದಲೂ, ವಿಸರ್ಗದಿಂದಲೂ ಕೂಡಿರಬೇಕು. ಈ ಮೂರನೆಯ ಮಂತ್ರವನ್ನು ರುದ್ರದೈವತಾಕವಾದ ಮಂತ್ರವೆಂದು ವಿದ್ವಾಂಸರು ಹೇಳಿದಾರೆ.

೬. ಮಹಾತ್ಮನೂ, ಸಾಕ್ಷಾನ್ಮಂತ್ರಮೂರ್ತಿಯೂ, ಅಕ್ಷರತ್ರಯಾತ್ಮಕನೂ ಆದ ಈ ಭಾಸ್ಕರನು ದುರ್ಲಭನೂ, ಪರಮನೂ, ಗುಹ್ಯನೂ, ತ್ರಿಮೂರ್ತಿಸ್ವರೂಪನೂ ವೇದತ್ರಯಸ್ವರೂಪನೂ, ದೇವಪೂಜಿತನೂ ಆಗಿದ್ದಾನೆ.

೭ ಈ ಬೀಜಮಂತ್ರವನ್ನು ಭಕ್ತಿಯಿಂದ ಜಪಿಸಿದಾತನು ಉತ್ತಮವಾದ ಗತಿಯನ್ನು ಹೊಂದುತ್ತಾನೆ. ಇನ್ನು ದೇವತಾಸಾನ್ನಿಧ್ಯಕ್ಕೆ ಉತ್ತಮಕಾರಣವಾದ ಮುದ್ರೆಯನ್ನು ಹೇಳುವೆನು ಕೇಳು.

ಪದ್ಮಾಕಾರೌ ಕರೌ ಕೃತ್ವಾ ಮಧ್ಯೇ ಶ್ಲಿಷ್ಟೇ ತು ಮಧ್ಯಮೇ ।
ಅಂಗುಲಿಂ ಕ್ಷಾಲಯೇತ್ತಸ್ಮಿನ್ವಿಮುದ್ರೇತಿ ಚ ಸೋಚ್ಯತೆ ॥ ೮ ॥

ಅನಯಾ ಬದ್ಧಯಾ ರಾಜನ್ ಭಾಸ್ಕರಸ್ಯ ಪ್ರಿಯೋ ಭವೇತ್ ।
ಮಹಾಭಯೇಷು ಸರ್ವೇಷು ಮಾತೃವತ್ಪರಿರಕ್ಷತಿ ॥ ೯ ॥

ಹೃದಯಂ ತಸ್ಯ ವಿಜ್ಞೇಯಂ ಯದಕ್ಷರವರಂ ಸ್ಮೃತಂ ।
ವಿದ್ರುಮೋಪರಿ ಸಂಭಿನ್ನಂ ಹೃದ್ಗತಂ ತದ್ಗತಂ ಸದಾ ॥ ೧೦ ॥

ಶಿರಸ್ಯರ್ಕಮಿತಿ ಪ್ರೋಕ್ತಂ ದೇವದೇವಸ್ಯ ಭಾರತ ।
ಮಹಾವ್ಯಾಹೃತಯಸ್ತಿಸ್ರಸ್ತಥಾರಜ್ವಾಲಿನೀ ಶಿಖಾ ॥ ೧೧ ॥

ಅಷ್ಟಾಕ್ಷರಾ ತು ವಿದ್ಯೇಯಮಾದಿತ್ಯಸ್ಯ ಮಹಾತ್ಮನಃ ।
ಯಃ ಸ್ಮರೇತ್ಸಾಧಕಸ್ತ್ವೇನಾಂ ನಾಸೌ ಕೇನಾಪಿ ಬಾಧ್ಯತೆ ॥ ೧೨ ॥

---

೮. ಎರಡು ಕೈಗಳ ಮಧ್ಯಮಾಂಗುಳಿಗಳು ಮಧ್ಯಭಾಗದಲ್ಲಿ ಸೇರಿಕೊಂಡಿರುವಂತೆ ಕರಗಳನ್ನು ಪದ್ಮಾಕಾರವಾಗಿ ಮುದ್ರಾರಚನೆ ಮಾಡಿಕೊಂಡಿದ್ದು ಜಪದ ಅನಂತರದಲ್ಲಿ ಆ ಅಂಗುಳಿ (ಬೆರಳು) ಗಳನ್ನು ಜಾರಿಸಿಬಿಡಬೇಕು. ಆಗ ವಿಮುದ್ರೆ ಎನಿಸುವುದು.

೯. ಈ ಮುದ್ರಾದರ್ಶಕನು ಭಾಸ್ಕರನಿಗೆ ಪ್ರಿಯನಾಗುವನು. ಮಹಾಭಯಗಳು ಪ್ರಾಪ್ತವಾದಾಗಲೆಲ್ಲಾ ಈ ಮುದ್ರೆಯು ತಾಯಿಯಂತೆ ರಕ್ಷಿಸುವುದು.

೧೦. ಅಕ್ಷರಗಳಲ್ಲಿ ಯಾವುದು ಶ್ರೇಷ್ಠವೆಂದು ಚಿಂತಿತವಾಗಿದೆಯೋ ಅದೇ ಇದರ ಹೃದಯವೆಂದು ತಿಳಿಯಬೇಕು.

೧೧. ಎಲೈ ಭರತಕುಲಶ್ರೇಷ್ಠನೇ! ವಿದ್ರುಮದ ಮೇಲೆ ಚಿಪ್ಪು ಮುಚ್ಚಿಕೊಂಡು ಇರುವ ಹಾಗೆಯೇ ಮನಸ್ಸಿನಲ್ಲಿ ಸೇರಿಕೊಂಡು, ಸದಾ ಅದರಲ್ಲಿ ಗತವಾಗಿರುತ್ತಾ ದೇವದೇವನ ಶಿರಃಪೂಜೆಯಲ್ಲಿ. ಇದು ಉಪಯುಕ್ತವಾಗಿ ಅರ್ಕ ಎಂದು ಹೆಸರುಳ್ಳದ್ದಾಗಿದೆ. ಮಹಾವ್ಯಾಹೃತಿಗಳು ಮೂರೂ ಚಿತ್ರದ ಆರೆಕಾಲ್ಗಳಂತೆ ಸುತ್ತಲೂ ಪ್ರಸರಿಸುವ ಶಿಖೆಯಿಂದ ಕೂಡಿದೆ.

೧೨. ಇವು ಮಹಾತ್ಮನಾದ ಆದಿತ್ಯನ ಸಂಬಂಧವಾದ ಅಷ್ಟಾಕ್ಷರಮಂತ್ರವಾಗಿದೆ. ಈ ಅಷ್ಟಾಕ್ಷರೀ ವಿದ್ಯೆಯನ್ನು ಸ್ಮರಣೆಮಾಡುವ ಸಾಧಕನಿಗೆ ಯಾವುದರಿಂದಲೂ ಬಾಧೆಯಿಲ್ಲ.

ಆಕಾರೇಣ ಸಮಾಯುಕ್ತಂ ಬಿಂದುರೇಫಸಮನ್ವಿತಂ ।
ಹಕಾರಮಗ್ನಿದೈವತ್ಯಂ ಕವಚಂ ಭಾಸ್ಕರಪ್ರಿಯಂ ॥ ೧೩ ॥

ಏಕಾಕ್ಷರಮಿದಂ ಪ್ರೋಕ್ತಮಭೇದ್ಯಂ ಯಃ ಸ್ಮರೇದಿದಂ ।
ದುಷ್ಟಾನಾಂ ಚೈವ ವಿಘ್ನಾನಾಂ ನಾಶನಂ ನಾತ್ರ ಸಂಶಯಃ ॥ ೧೪ ॥

ಸ ವಿಸರ್ಗೋ ರೇಫ ಇತಿ ಅಸ್ತ್ರಮೇಕಾಕ್ಷರಂ ಸ್ಮೃತಂ ।
ನಾಶಯೇದ್ದುಷ್ಟಕರ್ಮಾಣಿ ಸಾಧಕಸ್ಯ ನ ಸಂಶಯಃ ॥ ೧೫ ॥

ಸಂಮುಖೌ ತೌ ಕರೌ ಕೃತ್ವಾ ಶ್ಲಿಷ್ಟೌ ತು ಗ್ರಥಿತಾಂಗುಲೀ ।
ಕನಿಷ್ಠೇನಾಮಿಕೇ ಯೋಜ್ಯೇ ತರ್ಜಿನ್ಯೌ ಮಧ್ಯಮೇ ತಥಾ ॥ ೧೬ ॥

---

೧೩. ಆ ಎಂಬ ವರ್ಣದಿಂದಲೂ, ರೇಫದಿಂದಲೂ, ಬಿಂದುವಿನಿಂದಲೂ ಕೂಡಿದ ಹಕಾರ ಎಂದರೆ 'ಹ್ರಾಂ' ಎಂಬುದು ಅಗ್ನಿದೇವತಾಕವಾದ ಕವಚ.

೧೪. ಇದು ಭಾಸ್ಕರನಿಗೆ ಪ್ರಿಯವಾದುದು. ಈ ಕವಚವು ಏಕಾಕ್ಷರಾತ್ಮಕವೆನಿಸಿಕೊಳ್ಳುವುದು. ಅಭೇದ್ಯವಾದ ಇದನ್ನು ಯಾವನು ಸ್ಮರಿಸುವನೋ ಅವನಿಗೆ ದುಷ್ಟಅರಿಷ್ಟಗಳೆಲ್ಲಾ ನಾಶವಾಗುತ್ತವೆ. ಇದರಲ್ಲಿ ಸಂಶಯವಿಲ್ಲ.

೧೫. ರೇಫ ವಿಸರ್ಗಯುಕ್ತವಾದ ಹಕಾರವು ಎಂದರೆ 'ಹ್ರಃ' ಎಂಬುದು ಶ್ರೇಷ್ಠವಾದ ಅಸ್ತ್ರವೆಂದು ಚಿಂತಿತವಾಗಿದೆ. ಇದು ಸಾಧಕನಿಗೆ ಉಂಟಾಗಬಹುದಾದ ದುಷ್ಟಕರ್ಮಗಳನ್ನು ನಾಶಮಾಡುತ್ತದೆ. ಇದಕ್ಕೆ ಸಂಶಯವಿಲ್ಲ.

೧೬. ಎರಡು ಕೈಗಳನ್ನೂ ಪರಸ್ಪರ ಅಭಿಮುಖವಾಗಿ, ಹೆಣೆದುಕೊಂಡ ಬೆರಳುಳ್ಳಹಾಗೆ ಮಾಡಿ (ಎಂದರೆ ಆ ಕೈಬೆರಳ ಸಂದಿಯಲ್ಲಿ ಈ ಕೈಬೆರಳನ್ನು ಸೇರಿಸಿ ಕನಿಷ್ಠಾ ಅನಾಮಿಕೆಗಳನ್ನು ಮಧ್ಯಮತರ್ಜನಿಗಳ ಸಂದಿನಲ್ಲಿ ಸೇರಿಸಿ) ಹೃದಯಾಯ, ಶಿರಸೇ, ಶಿಖಾಯೈ, ಕವಚಾಯ ಎಂದು ತೋರಿಸಿ ನ್ಯಾಸಮಾಡುವುದಕ್ಕೆ ವ್ಯೋಮಮುದ್ರೆಯೆಂದು ಹೆಸರು.

ಹೃಚ್ಛಿರಃ ಸಶಿಖಾ ವರ್ಮಾ ಮುದ್ರೇಯಂ ವ್ಯೋಮಸಂಜ್ಞಿತಾ ।
ಮುಷ್ಟಿವಕ್ರೋಚ್ಛ್ರಿತಂ ಕುರ್ಯಾತ್ಸವ್ಯಹಸ್ತಸ್ಯ ತರ್ಜನೀಂ ॥ ೧೭ ॥

ಏವಂ ಕೃತಾಕೃತಿರ್ಯಾ ತು ಮುದ್ರಾಸ್ತ್ರಸ್ಯ ಕೀರ್ತಿತಾ ।
ತ್ರಾಸನೀನಾಮ ವಿಖ್ಯಾತಾ ಸರ್ವವಿಘ್ನಭಯಂಕರೀ ॥ ೧೮ ॥

ಕರ್ಣಬಿಂದುಸಮಾಯುಕ್ತಂ ಯಂ ಚತುರ್ಥಂ ಮಹಾಮತೇ ।
ಭಾಸ್ಕರಸ್ಯಾಗ್ನಿದಂ ನೇತ್ರಮಗ್ನಿದೈವತಮುಚ್ಯತೇ ॥ ೧೯ ॥

ಸ್ಮರಃ ಸ್ಯಾತ್ಸಾಧಕೇಂದ್ರಾಣಾಂ ದುರಂತೋ ನಾಶನೇ ಧ್ರುವಂ ।
ಮಧ್ಯಮಾ ತರ್ಜನೀಚೈವ ಸವ್ಯಹಸ್ತಸ್ಯ ಚೋಚ್ಛ್ರಿತಂ ॥ ೨೦ ॥

ಕನಿಷ್ಠಾನಾಮಿಕೇ ಕುಂಚ್ಯ ಅಂಗುಷ್ಠೇನ ತತಃ ಕ್ರಮೇತ್ ।
ನೇತ್ರಾಭ್ಯಾಂ ಸ್ಪರ್ಶಯೇದೇನಾಂ ನೇತ್ರಮುದ್ರಾ ಪ್ರಕೀರ್ತಿತಾ ॥ ೨೧ ॥

ಗೋವೃಷಾ ನಾಮ ವಿಖ್ಯಾತಾ ದರ್ಶಯೇದ್ದಿವ್ಯಗೋಚರಂ ।
ರಾಂ ದೀಪ್ತಾ ರಿಂ ತತಃ ಸೂಕ್ಷ್ಮಾ ರೀಂ ಜಯಾ ಭದ್ರಮುಚ್ಯತೇ ॥ ೨೨ ॥

---

೧೭. ಮುಷ್ಟಿಯನ್ನು ವಕ್ರವಾಗಿ ಮಾಡಿಕೊಂಡು ಮೇಲಕ್ಕೆತ್ತಿ ಎಡಗೈಯ್ಯಿನ ತರ್ಜನೀಬೆರಳನ್ನು ನೀಡಿತೋರಿಸಿದಂತೆ ಮುದ್ರಾಕ್ರಮದಿಂದ ಮಾಡುವುದು ತ್ರಾಸನೀ ಮುದ್ರೆಯೆಂದು ಪ್ರಸಿದ್ಧವಾಗಿದೆ.

೧೮-೧೯. ಇದು ಸರ್ವವಿಘ್ನಗಳಿಗೂ ಭಯವನ್ನುಂಟುಮಾಡುವುದು. ಅಯ್ಯಾ ಮಹಾಬುದ್ಧಿಶಾಲಿಯೇ! ಕರ್ಣಬಿಂದುವಿನಿಂದ ಕೂಡಿದ ಯಕಾರವೂ, ಅದರಿಂದ ನಾಲ್ಕನೆಯ ವರ್ಣವಾದ ವಕಾರವೂ, ಅಗ್ನಿದೇವತಾಕವಾದುದಾಗಿ ಭಾಸ್ಕರನ ನೇತ್ರವೆಂದು ಉಕ್ತವಾಗಿದೆ.

೨೦-೨೨. ಈ ಮುದ್ರಾದರ್ಶನ ಪೂರ್ವಕವಾಗಿ ಮಂತ್ರಸಾಧನ ಮಾಡುವ ಸಾಧಕೇಂದ್ರರಿದುರಿಗೆ ಸ್ಮರನು (ಮನ್ಮಥನು) ನಿಜವಾಗಿ ದುರ್ಮರಣ ಹೊಂದಿ ನಾಶವಾಗುವನು. ಎಡಗೈಯ ಮಧ್ಯಮತರ್ಜನಿಗಳನ್ನು ಎತ್ತರಮಾಡಿಕೊಂಡು ಕನಿಷ್ಠಿಕ ಅನಾಮಿಕೆಗಳನ್ನು ಬಗ್ಗಿಸಿ (ಕುಂಚನಮಾಡಿ) ಅಂಗುಷ್ಠದಿಂದ ಅದನ್ನು ಕ್ರಮವಾಗಿ ಒತ್ತಿ ನೇತ್ರಗಳನ್ನು ಸ್ಪರ್ಶಮಾಡಿದರೆ ನೇತ್ರಮುದ್ರೆಯೆನಿಸುವುದು.

**ಉಭಾಹ್ವಾ ರೂಂ ವಿಭೂತಿಶ್ಚ ವಿಮಲಾ ರೈಂ ಪ್ರಕೀರ್ತಿತಾ ।**
**ಅಮೋಘಾ ರೋಂ ಮಹಾಬಾಹೋ ವಿದ್ಯುತಾ ರೌಂ ಪ್ರಕೀರ್ತಿತಾ ॥ ೨೩ ॥**

**ಗೋವೃಷಾ ನಾಮಕಂ ಚಾಪಿ ವೀರ ಭದ್ರಕರೀ ತಥಾ ।**
**ಇತ್ಯೇತಾ ಬೀಜರೂಪಾಸ್ತು ಕಥಿತಾಶ್ಚೈವ ಶಕ್ತಯಃ ॥ ೨೪ ॥**

**ಉತ್ತಾನೌ ತು ಕರೌ ಕೃತ್ವಾ ಸವ್ಯಾಕುಂಚ್ಯ ತತೋಂಗುಲೀಃ ।**
**ಕುರ್ಯಾದುಪರಿ ಚಾಂಗುಷ್ಠೌ ಚಾಲಯೇತ ಪುನಃ ಪುನಃ ॥ ೨೫ ॥**

**ಸರ್ವಾಸಾಂ ಚೈವ ಶಕ್ತೀನಾಮೇತಾ ಮುದ್ರಾಃ ಪ್ರದರ್ಶಯೇತ್ ।**
**ದೀಪ್ತಾ ಸೂಕ್ಷ್ಮಾ ಜಯಾ ಭದ್ರಾ ವಿಭೂತಿರ್ವಿಮಲಾ ತಥಾ ॥**
**ಅಮೋಘಾ ವಿದ್ಯುತಾ ಚೈವ ನವಮೀ ಸರ್ವತೋಮುಖೀ ॥ ೨೬ ॥**

---

೨೩. ಗೋವೃಷಾ ಎಂಬ ಹೆಸರಿನಿಂದ ಪ್ರಸಿದ್ಧವಾದ ಮುದ್ರೆಯನ್ನು ಆಕಾಶದಲ್ಲಿ ಅಗೋಚರವಾಗಿ ತೋರಿಸಬೇಕು. ಅಯ್ಯಾ ಭೀಷ್ಮಾ! ರಾಂ ಎಂಬುದು ದೀಪ್ತಾ ಎಂದೂ, ರಿಂ ಎಂಬುದು ಸೂಕ್ಷ್ಮಾ ಎಂದೂ, ರೀಂ ಎಂಬುದು ಜಯಾ ಎಂದೂ, ರುಂ ಎಂಬುದು ಭದ್ರಾ ಎಂದೂ, ರೂಂ ಎಂಬುದು ವಿಭೂತಿ ಎಂದೂ, ರೈಂ ಎಂಬುದು ವಿಮಲಾ ಎಂದೂ, ರೋಂ ಎಂಬುದು ಅಮೋಘಾ ಎಂದೂ, ರೌಂ ಎಂಬುದು ವಿದ್ಯುತಾ ಎಂದೂ ಹೇಳಬೇಕು.

೨೪. ಎಲೈ ವೀರನೇ! ಗೋವೃಷಾ ನಾಮಕವಾದುದೂ, ಮತ್ತು ಭದ್ರಕರಿಯೆಂಬ ಹೆಸರಿನಿಂದ ಪ್ರಸಿದ್ಧವೂ ಆದ ಶಕ್ತಿಗಳೂ ಉಂಟು. ಹೀಗೆ ಬೀಜಾಕ್ಷರರೂಪಗಳಾದ ಈ ಶಕ್ತಿಗನ್ನೆಲ್ಲಾ ಹೇಳಿದುದಾಯಿತು.

೨೫. ಅಂಗೈಗಳನ್ನು ಮೇಲ್ಮುಖಮಾಡಿ ಆಮೇಲೆ ಎಡಗಡೆಯ ಬೆರಳುಗಳನ್ನು ಮುದುರಿಕೊಂಡು ಅದರ ಮೇಲೆ ಎರಡು ಹೆಬ್ಬೆರಳುಗಳನ್ನೂ ಇಡಬೇಕು. ಆಮೇಲೆ ಆ ರೀತಿ ಜೋಡಿಸಿದ ಕೈಯನ್ನು ಅಲ್ಲಾಡಿಸಬೇಕು.

೨೬. ಎಂಟುಶಕ್ತಿ ದೇವತೆಗಳಿಗೂ ಈ ಮುದ್ರೆಗಳನ್ನೇ ತೋರಿಸಬೇಕು. ದೀಪ್ತಾ, ಸೂಕ್ಷ್ಮಾ, ಜಯಾ, ಭದ್ರಾ, ವಿಭೂತಿ, ವಿಮಲಾ, ಅಮೋಘಾ, ವಿದ್ಯುತಾ, ಸರ್ವತೋಮುಖೀ ಎಂಬಿವೇ ಈ ಶಕ್ತಿದೇವತೆಗಳ ಹೆಸರು.

ನಾಮಾನ್ಯೇತಾನಿ ಶಕ್ತೀನಾಂ ಸಮಾಸಾತ್ಕಥಿತಾನಿ ತು ।
ಸಬೀಜಾನಿ ಮಹಾಬಾಹೋ ಮಾಯಾ ಸ್ನೇಹೇನ ಭಾರತ ॥ ೨೭ ॥

ಗ್ರಹಾಣಾಂ ಶೃಣು ಬೀಜಾನಿ ರೂಪಂ ಚ ಗದತೋ ಮಮ ।
ಸರ್ವತ್ರ ಭಂ ತಥಾ ಖಂ ಚ ಕಂಜಕೌತೂಹಲೋದ್ವಹ ॥ ೨೮ ॥

ಓಂಕಾರಾ ದೀಪಿತಾಃ ಸರ್ವೇ ನಮಸ್ಕಾರಾಂತಯೋಜಿತಾಃ ।
ಪೂಜಾಕಾಲೇ ಪ್ರಯೋಕ್ತವ್ಯಾ ಜಪಕಾಲೇ ತಥೈವ ಚ ॥ ೨೯ ॥

ಹೋಮಕಾಲೇ ತು ಸ್ವಾಹಾಂತಂ ಮಂತ್ರಂ ಷಟ್ಕಾರಸಂಯುತಂ ।
ಸರ್ವೇ ಬಿಂದುಯುತಾ ಭೀಷ್ಮ ಶಿಖಾ ಬಿಂದುವಿಭೂಷಿತಾಃ ॥ ೩೦ ॥

ಸೋಮಾದ್ಯಾಃ ಕೇತುಪರ್ಯಂತಾ ಗ್ರಹಾಹ್ಯೇವಂ ಪ್ರಕೀರ್ತಿತಾಃ ।
ಏತಾ ಮುದ್ರಾಃ ಪ್ರವಕ್ಷ್ಯಾಮಿ ಸರ್ವಸಿದ್ಧಿಪ್ರದಾಯಿಕಾಃ ॥ ೩೧ ॥

---

೨೭. ಅಯ್ಯಾ ಮಹಾಬಾಹುವಾದ ಭಾರತನೇ! ನಿನ್ನಲ್ಲಿರುವ ಸ್ನೇಹದಿಂದ ಈ ಶಕ್ತಿಗಳ ಹೆಸರುಗಳನ್ನು ಬೀಜಾಕ್ಷರಗಳೊಡನೆ ಸಂಕ್ಷೇಪವಾಗಿ ಹೇಳಿದ್ದೇನೆ.

೨೮. ಬ್ರಹ್ಮಸೃಷ್ಟಿಯಲ್ಲಿ ಕುತೂಹಲಗೊಂಡಿರುವ ಭೀಷ್ಮನೇ! ಕೇಳು; ಗ್ರಹಗಳ ಬೀಜಾಕ್ಷರಗಳನ್ನೂ, ರೂಪವನ್ನೂ ಹೇಳುತ್ತೇನೆ. ಆ ಮಂತ್ರಗಳಲ್ಲೂ ಭಂ, ಕಂ ಎಂಬ ಅಕ್ಷರಗಳು ಸಾಮಾನ್ಯವಾದುವು.

೨೯. ಎಲ್ಲಾ ಮಂತ್ರಗಳೂ ಆದಿಯಲ್ಲಿ ಓಕಾರದಿಂದ ಯುಕ್ತವಾಗಿ ಪ್ರಕಾಶವಾದುವೂ, ಅಂತ್ಯದಲ್ಲಿ ನಮಸ್ಕಾರಾರ್ಥಕವಾದ ನಮಃ ಎಂಬ ಶಬ್ದವುಳ್ಳವೂ ಆಗಿರುವಂತೆ 'ಓಂ ದೀಪ್ತಾಯನಮಃ' ಎಂಬ ರೀತಿ ಪೂಜಾಕಾಲದಲ್ಲೂ ಜಪಕಾಲದಲ್ಲೂ ಪ್ರಯೋಗಿಸಬೇಕು.

೩೦. ಹೋಮಕಾಲದಲ್ಲಾದರೋ ವಷಟ್ಕಾರಯುಕ್ತವಾದ ಸ್ವಾಹಾ ಮಂತ್ರವನ್ನು ಅಂತ್ಯದಲ್ಲಿ ಹೇಳಬೇಕು. ಎಲೈ ಭೀಷ್ಮನೇ! ಎಲ್ಲವೂ ಬಿಂದುಯುಕ್ತಗಳೂ, ಶಿಖಾಬಿಂದುವಿನಿಂದ ಅಲಂಕೃತಗಳೂ ಆಗಿರಬೇಕು.

೩೧. ಹೀಗೆ ಚಂದ್ರ ಮೊದಲಾಗಿ ಕೇತುವಿನವರೆಗಿನ ಗ್ರಹಗಳಿಗೆ ಬೀಜಾಕ್ಷರ ಮಂತ್ರಗಳನ್ನು ಹೇಳಿ ಆಯಿತು. ಸರ್ವಸಿದ್ಧಿಪ್ರದಗಳಾದ ಅವುಗಳ ಮುದ್ರೆಗಳನ್ನು ಹೇಳುವೆನು.

ಸು ಮುಖೌ ತು ಕರೌ ಕೃತ್ವಾ ಶ್ಲಿಷ್ಟೌಚೈವ ಪ್ರಸಾರಿತೌ ।
ಇಯಂ ಮುದ್ರಾ ನಮಸ್ಕಾರೇ ಗ್ರಹಸಾನ್ನಿಧ್ಯಕಾರಿಕಾ ॥ ೩೨ ॥

ಮಂತ್ರೋದ್ಧಾರಸ್ತವಾಖ್ಯಾತೋ ರಹಸ್ಯೋ ದುರ್ಲಭೋ ನೃಪ ।
ಶೃಣುಷ್ವ ರೂಪಂ ದೇವಾನಾಂ ಧ್ಯಾನಕಾಲೇ ಹ್ಯುಪಸ್ಥಿತೇ ॥ ೩೩ ॥

ಜಪಾವರ್ಣಂ ಮಹಾತೇಜಂ ಶ್ವೇತಪದ್ಮೋಪರಿಸ್ಥಿತಂ ।
ಸರ್ವಲಕ್ಷಣಸಂಪನ್ನಂ ಸರ್ವಾಭರಣಭೂಷಿತಂ ॥ ೩೪ ॥

ತಥೈಕವಕ್ತ್ರಂ ದ್ವಿಭುಜಂ ಸೋಮಪಂಕಜಕಂಧರಂ ।
ಮಂಡಲೇನ ಚ ರೂಪಂ ತು ಮಧ್ಯಸ್ಥಂ ರಕ್ತವಾಸಸಂ ॥ ೩೫ ॥

ಮಾರ್ತಂಡಸ್ಯ ಇದಂ ರೂಪಂ ಶುಚಿಃ ಸ್ನಾತೋ ಜಿತೇಂದ್ರಿಯಃ ।
ತ್ರಿಕಾಲಂ ಯಃ ಸ್ಮರೇದ್ಧೀಮ ಏಕಚಿತ್ತೋ ವ್ಯವಸ್ಥಿತಃ ॥ ೩೬ ॥

---

೩೨. ನಮಸ್ಕಾರಕಾಲದಲ್ಲಿ ಹಸ್ತಗಳ ಬೆರಳುಗಳನ್ನು ನೀಡಿಕೊಂಡು ಎರಡು ಅಂಗೈಗಳನ್ನು ಎದುರುಬದರಾಗಿ ಜೋಡಿಸಿ ನೀಡಿದರೆ ಪ್ರಣಾಮಮುದ್ರೆಯು ಏರ್ಪಡುವುದು. ಈ ನಮಸ್ಕಾರಮುದ್ರೆಯು ಗ್ರಹಸಾನ್ನಿಧ್ಯವನ್ನು ಉಂಟುಮಾಡುವುದು.

೩೩. ಎಲೈ ರಾಜನೇ! ರಹಸ್ಯವೂ, ದುರ್ಲಭವೂ ಆದ ಮಂತ್ರೋದ್ಧಾರವನ್ನು ನಿನಗೆ ಹೇಳಿದುದಾಯಿತು. ಧ್ಯಾನಕಾಲದಲ್ಲಿ ದೇವರ ರೂಪವನ್ನು ಹೇಗೆ ಧ್ಯಾನಿಸಬೇಕೆಂಬುದನ್ನು ಹೇಳುವೆನು ಕೇಳು.

೩೪. ದಾಸವಾಳದ ಪುಷ್ಪದ ವರ್ಣವುಳ್ಳವನೂ, ಮಹಾತೇಜೋಯುಕ್ತನೂ, ಬಿಳಿಯ ಕಮಲದಮೇಲೆ ಮಂಡಿಸಿ ಇರುವವನೂ, ಸರ್ವಲಕ್ಷಣ ಸಂಪನ್ನನೂ, ಸರ್ವಾಭರಣಭೂಷಿತನೂ ಆಗಿರುವನೆಂದು ಧ್ಯಾನಿಸಬೇಕು.

೩೫. ಮತ್ತು ಒಂದು ಮುಖ, ಎರಡು ಭುಜಗಳು, ಇವುಗಳಿಂದ ಕೂಡಿ ಕಂಠದಲ್ಲಿ ಚಂದ್ರನಂತೆ ಇರುವ ಬಿಳಿಯ ಕಮಲವನ್ನು ಧರಿಸಿ, ಮಂಡಲಮಧ್ಯಗತವಾದ ರೂಪವುಳ್ಳವನೂ, ರಕ್ತವಸ್ತ್ರಧಾರಿಯೂ, ಆಗಿರುವನೆಂದು ಸೂರ್ಯನನ್ನು ಧ್ಯಾನಿಸಬೇಕು.

೩೬. ಸ್ನಾನಮಾಡಿ ಶುದ್ಧನಾಗಿ ಜಿತೇಂದ್ರಿಯನಾಗಿ, ಸೂರ್ಯನ ರೂಪವನ್ನು ತ್ರಿಕಾಲದಲ್ಲೂ ಮಾನವನು (ವ್ಯವಸ್ಥಿತವಾದ) ಮನಸ್ಸಿನಿಂದ ಸ್ಮರಿಸಬೇಕು.

**ಸೋऽಚಿರಾದ್ಭವತೇ ಲೋಕೇ ವಿತ್ತೇನ ಧನದೋಪಮಃ ।**
**ಯುಜ್ಯತೇ ಸರ್ವಭೋಗೈಸ್ತು ತೇಜಸ್ವೀ ಬಲವಾನ್ಭವೇತ್ ॥ ೩೭ ॥**

**ಹೃದಯಂ ಚೋತ್ತಮಾಂಗಂ ಚ ಶಿಖಾ ವೈ ವಕ್ತ್ರಮೇವ ಚ ।**
**ರಕ್ತವರ್ಣಾ ಇಮೇ ಶ್ಯಾಮಾಃ ಸರ್ವಾಭರಣಭೂಷಿತಾಃ ॥ ೩೮ ॥**

**ವರದಾऽಭಯಹಸ್ತಾಶ್ಚ ಧ್ಯಾತವ್ಯಾಃ ಸಾಧಕೇನ ತು ।**
**ತಟಿತ್ಪುಂಜನಿಭಂ ಶಸ್ತ್ರಂ ರೌದ್ರಂ ಚಂಡಕರಾಲಿನಂ ॥ ೩೯ ॥**

**ವಿಶೇಷಃ ಕಥಿತೋ ಹ್ಯೇಷ ಕಾಮರೂಪಃ ಸ್ವಭಾವತಃ ।**
**ದೀಪ್ತಾ ದೀಪ್ತಶಿಖಾಕಾರಾ ಧ್ಯಾತವ್ಯಾ ನವಶಕ್ತಯಃ ॥ ೪೦ ॥**

**ಶ್ವೇತವರ್ಣಂ ಸ್ಮರೇತ್ಸೋಮಂ ರಕ್ತವರ್ಣಂ ಕುಜಂ ಸ್ಮರೇತ್ ।**
**ಸೌಮ್ಯಮಷ್ಟಾಪದಾಭಂ ಚ ಗುರುಂ ಚ ಪೀತವರ್ಣಕಂ ॥ ೪೧ ॥**

---

೩೭. ಹಾಗೆ ಸ್ಮರಿಸಿದವನು ಶೀಘ್ರವಾಗಿ ಈ ಲೋಕದಲ್ಲಿ ಸಂಪತ್ತಿನಿಂದ ಕುಬೇರನಿಗೆ ಸದೃಶನಾಗುತ್ತಾನೆ. ಮತ್ತು ಸರ್ವಭೋಗಯುಕ್ತನೂ, ತೇಜಸ್ವಿಯೂ, ಬಲಶಾಲಿಯೂ-ಆಗುತ್ತಾನೆ.

೩೮. ಶಕ್ತಿದೇವತೆಗಳಿಗೆ ಹೃದಯ, ಶಿರಸ್ಸು, ಶಿಖಾ ಮತ್ತು ಮುಖ ಇವು ರಕ್ತ ವರ್ಣಗಳಾಗಿರುವುವು. ಅವರು ಶ್ಯಾಮವರ್ಣ ಉಳ್ಳವರೂ, ಸರ್ವಾಭರಣಭೂಷಿತೆಯರೂ ಆಗಿರುವರು.

೩೯. ಮತ್ತು ವರದಹಸ್ತ ಅಭಯ ಹಸ್ತಗಳುಳ್ಳವರಾಗಿರುವರೆಂದೂ, ಮಿಂಚಿನ ಗೊಂಚಲಿಗೆ ಸದೃಶವಾಗಿ ರೌದ್ರವೂ, ಚಂಡವೂ, ಕರಾಳವೂ ಆದ ಶಸ್ತ್ರಸಹಿತವಾಗಿರು ಸಾಧಕನು ನವಶಕ್ತಿ ದೇವತೆಗಳನ್ನು ಧ್ಯಾನಮಾಡಬೇಕು.

೪೦. ಸ್ವಭಾವತಃ ಕಾಮರೂಪರಾಗಿರತಕ್ಕ ಅವರಿಗೆ ಈ ವಿಶೇಷ ಸ್ಥಿತಿಯನ್ನು ಹೇಳಿದುದಾಯಿತು. ನವಶಕ್ತಿಗಳು ದೀಪ್ತಶಿಖಾಕಾರರೂ, ಅದೀಪ್ತಾಶಿಖಾಕಾರರೂ ಆದವರೆಂದು ಧ್ಯಾನಮಾಡಬೇಕು.

೪೧-೪೨. ಗ್ರಹಗಳಲ್ಲಿ ಚಂದ್ರನನ್ನು ಬಿಳಿಯ ಬಣ್ಣವುಳ್ಳವನೆಂದೂ, ಕುಜನನ್ನು ರಕ್ತವರ್ಣನೆಂದೂ, ಬುಧನನ್ನು ಚಿನ್ನದ ಬಣ್ಣವುಳ್ಳವನೆಂದೂ ಧ್ಯಾನಿಸಬೇಕು.

ಶಂಖಕ್ಷೀರನಿಭಂ ಶ್ವೇತಂ ಕೋಣಂ ಚಾಂಜನಸನ್ನಿಭಂ ।
ರಜಾವರ್ತನಿಭಂ ರಾಹುಂ ಧೂಮ್ರಂ ಚ ವಿಕಚಂ ಸ್ಮರೇತ್ ॥ ೪೨ ॥

ವಾಮಹಸ್ತೌ ಕಟಿನ್ಯಸ್ತೌ ದಕ್ಷಿಣೌ ಚಾಭಯಪ್ರದೌ ।
ರಕ್ತಭ್ರೂರಕ್ತನೇತ್ರಾಸ್ಯ ಅರ್ಧಕಾಯಕೃತಾಂಜಲಿಃ ॥ ೪೩ ॥

ಇತಿ ಭಾನುಂ ಗ್ರಹೈಃ ಸಾರ್ಧಂ ಯೇ ಧ್ಯಾಯಂತಿ ನೃಪೋತ್ತಮ ।
ಲಭಂತೇ ತೇ ಮಹಾಸಿದ್ಧಿಮಚಿರಾನ್ನಾತ್ರ ಸಂಶಯಃ ॥ ೪೪ ॥

ತವಾಖ್ಯಾತಮಿದಂ ವರ್ಣಂ ಗ್ರಹಾಣಾಂ ಭೀಷ್ಮ ಕೃತ್ಸ್ನಶಃ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯಂತೆ ಭುವಿ ಮಾನವಾಃ ॥ ೪೫ ॥

---

ಗುರುವನ್ನು ಹಳದಿಯ ಬಣ್ಣವುಳ್ಳವನೆಂದೂ, ಶುಕ್ರನನ್ನು ಶಂಖ, ಹಾಲು ಇವುಗಳಂತೆ ಬಿಳಿಯ ವರ್ಣವುಳ್ಳವನೆಂದೂ, ಕಾಡಿಗೆಯಂತೆ ಕಪ್ಪುಬಣ್ಣವುಳ್ಳವನೆಂದು ಶನಿಯನ್ನೂ ಸುಂಟರಗಾಳಿಯಲ್ಲಿನ ಧೂಳಿಗಳಂತೆ ಬಣ್ಣವುಳ್ಳವನೆಂದು ರಾಹುವನ್ನೂ, ಧೂಮ್ರ ವರ್ಣವುಳ್ಳವನು ಮತ್ತು ಶಿರಸ್ಸು ಇಲ್ಲದವನೆಂದು ಕೇತುವನ್ನೂ ನವಗ್ರಹಗಳನ್ನು ಈ ರೀತಿ ಬಣ್ಣವುಳ್ಳವರನ್ನಾಗಿ ಸ್ಮರಿಸಬೇಕು.

೪೩. ಆ ಕೇತುವು ಎಡಭಾಗದ ಎರಡು ಕೈಗಳನ್ನೂ ಸೊಂಟದ ಮೇಲೆ ಇಟ್ಟುಕೊಂಡವನೂ, ಬಲಗಡೆ ಎರಡು ಅಭಯಹಸ್ತಗಳನ್ನುಳ್ಳವನೂ, ಕೆಂಪುಬಣ್ಣದ ಹುಬ್ಬು, ಕಣ್ಣು, ಮುಖ ಇವು ಉಳ್ಳವನೂ, ಅರ್ಧಶರೀರವುಳ್ಳವನೂ, ಬೊಗಸೆ ಒಡ್ಡಿ ಕೊಂಡಿರುವವನೂ ಆಗಿರುವನೆಂದು ಧ್ಯಾನಿಸಬೇಕು.

೪೪. ಎಲೈ ರಾಜಶ್ರೇಷ್ಠನೇ! ಹೀಗೆ ಇತರ ಗ್ರಹಗಳ ಸಮೇತ ಸೂರ್ಯನನ್ನು ಧ್ಯಾನಿಸುವವರು ಶೀಘ್ರವಾಗಿ ಮಹಾಸಿದ್ಧಿಯನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ.

೪೫. ಅಯ್ಯಾ ಭೀಷ್ಮನೇ! ಗ್ರಹಗಳ ಬಣ್ಣದ ವಿಚಾರವನ್ನು ನಿನಗೆ ಸಮಗ್ರವಾಗಿ ಹೇಳಿದುದಾಯಿತು. ಮಹಿಮಾವಿಶಿಷ್ಟವಾದ ಇದನ್ನು ಭೂಲೋಕದಲ್ಲಿ ಶ್ರವಣ ಮಾಡಿದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

**ಅನೇನ ವಿಧಿನಾ ಭೀಷ್ಮ ಸದಾ ದೇವಂ ದಿವಾಕರಂ ।**
**ತ್ರಿಕಾಲಂ ಪೂಜಯೇದ್ಭಕ್ತ್ಯಾ ವೀರ ಶ್ರದ್ಧಾಸಮನ್ವಿತಃ ॥ ೪೬ ॥**

**ಇತ್ಥಂ ಪೂಜಯಮಾನಸ್ತು ಸರ್ವದೇವಂ ದಿವಾಕರಂ ।**
**ಬ್ರಹ್ಮಹತ್ಯಾವಿನಿರ್ಮುಕ್ತೋ ಮಹಾದೇವತ್ವಮಾಪ್ನುಯಾತ್ ॥ ೪೭ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇಷು ಸೂರ್ಯಪೂಜಾಮಾಹಾತ್ಮ್ಯ ವರ್ಣನಂ ನಾಮ ಷಡುತ್ತರ ದ್ವಿಶತತಮೋಽಧ್ಯಾಯಃ.**



---

೪೬. ಅಯ್ಯಾ ವೀರನಾದ ಭೀಷ್ಮನೇ! ಈ ವಿಧಿಯಿಂದ ಯಾವಾಗಲೂ ಸೂರ್ಯ ದೇವನನ್ನು ತ್ರಿಕಾಲಗಳಲ್ಲಿಯೂ ಶ್ರದ್ಧಾಯುಕ್ತನಾಗಿ ಭಕ್ತಿಯಿಂದ ಪೂಜಿಸಬೇಕು.

೪೭. ಹೀಗೆ ಸರ್ವದೇವಸ್ವರೂಪನಾದ ಸೂರ್ಯನನ್ನು ಪೂಜಿಸುವಾತನು ಬ್ರಹ್ಮ ಹತ್ಯೆಯಿಂದ ವಿಮುಕ್ತನಾಗಿ ಮಹಾದೇವತ್ವವನ್ನು ಹೊಂದುವನು" ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೂರ್ಯಪೂಜಾ ಮಹಾತ್ಮೆಯೆಂಬ ಇನ್ನೂರ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಸಪ್ತಾಧಿಕದ್ವಿಶತತಮೋಽಧ್ಯಾಯಃ

---

॥ ಭೀಷ್ಮ ಉವಾಚ ॥

**ಅಹೋ ದೇವಸ್ಯ ಮಾಹಾತ್ಮ್ಯಂ ಭಾಸ್ಕರಸ್ಯ ತ್ವಯೋದಿತಂ ।**
**ಪೂಜಯಂತಿ ಸದಾ ಹ್ಯೇನಂ ಬ್ರಹ್ಮವಿಷ್ಣುಶಿವಾದಯಃ** ॥ ೧ ॥

॥ ವ್ಯಾಸ ಉವಾಚ ॥

**ಏವಮೇತನ್ನ ಸಂದೇಹೋ ಯಥಾ ವದಸಿ ಭಾರತ ।**
**ನಾಸ್ತಿ ಸೂರ್ಯಸಮೋ ದೇವೋ ನಾಸ್ತಿಸೂರ್ಯಸಮಾ ಗತಿಃ** ॥ ೨ ॥

---

## ಇನ್ನೂರಏಳನೆಯ ಅಧ್ಯಾಯ

೧. ಭೀಷ್ಮನು ವ್ಯಾಸನನ್ನು ಕುರಿತು ವಿಷಯವನ್ನು ತಿಳಿದುಕೊಳ್ಳುವ ಕುತೂಹಲದಿಂದ ಪುನಃ ಕೇಳುತ್ತಾನೆ—ಆಹಾ! ನೀನೇನೋ ಸೂರ್ಯಮಾಹಾತ್ಮ್ಯೆಯನ್ನು ಹೇಳಿದೆ. ಈ ಸೂರ್ಯನನ್ನು ಬ್ರಹ್ಮ, ವಿಷ್ಣು, ಶಿವ ಮೊದಲಾದವರೂ ಪೂಜಿಸುತ್ತಾರೆಯಲ್ಲವೇ ? ಎಂದನು.

೨. ಆಗ ವ್ಯಾಸನು ಭೀಷ್ಮನಿಗೆ ಹೇಳುತ್ತಾನೆ—ಎಲೈ ಭರತವಂಶೀಯನೇ ! ನೀನು ಹೇಳಿದುದು ಸರಿ. ಆ ವಿಷಯದಲ್ಲಿ ಸಂಶಯವಿಲ್ಲ. ಸೂರ್ಯನಿಗೆ ಸಮನಾದ ದೇವರಿಲ್ಲ, ಸೂರ್ಯಲೋಕಸದೃಶವಾದ ಪ್ರಾಪ್ಯಸ್ಥಾನವೂ ಇಲ್ಲ.

ನಾಸ್ತಿ ಸೂರ್ಯಸಮಂ ಬ್ರಹ್ಮ ನಾಸ್ತಿ ಸೂರ್ಯಸಮಂ ಹುತಂ ।
ನಾಸ್ತಿ ಸೂರ್ಯಸಮೋ ಧರ್ಮೋ ನಾಸ್ತಿ ಸೂರ್ಯಸಮಂ ಧನಂ ॥ ೩ ॥

ನಾಸ್ತಿ ಸೂರ್ಯಾದೃತೇ ಕಾಮೋ ನಾಸ್ತಿ ಸೂರ್ಯಾದೃತೇ ಪದಂ ।
ನಾಸ್ತಿ ಸೂರ್ಯಸಮೋ ಬಂಧುರ್ನಾಸ್ತಿ ಸೂರ್ಯಸಮಃ ಸುಹೃತ್ ॥ ೪ ॥

ನಾಸ್ತಿ ಸೂರ್ಯಸಮಾ ಮಾತಾ ನಾಸ್ತಿಸೂರ್ಯಸಮಾ ಗುರುಃ ।
ನಾಸ್ತಿ ಸೂರ್ಯಸಮಂ ತೀರ್ಥಂ ನ ಪವಿತ್ರಂ ತತಃ ಪರಂ ॥ ೫ ॥

ತಮೇಕಂ ದೈವತಂ ವಿದ್ಯಾನ್ಮನುಷ್ಯೋರ್ಕಪರಾಯಣಃ ।
ಲೋಕಾನಾಂ ದೇವತಾನಾಂ ಚ ಪಿತೄಣಾಂ ಚಾಪಿ ಭಾರತ ॥ ೬ ॥

॥ ಭೀಷ್ಮ ಉವಾಚ ॥

ತಮರ್ಚಂತಃ ಸ್ತುವಂತಶ್ಚ ಪ್ರಾಪ್ನುವಂತಿ ಪರಾಂ ಗತಿಂ ।
ತೇ ಪ್ರಪನ್ನಾಸ್ತು ಯೇ ಭಕ್ತ್ಯಾ ಮುಕ್ತಾಸ್ತೇ ಭವಸಾಗರಾತ್ ॥ ೭ ॥

---

೩. "ಸೂರ್ಯನಿಗೆ ಸಮವಾದ ಬ್ರಹ್ಮವೂ ಇಲ್ಲ, ಸೂರ್ಯನಿಗೆ ಸಮನಾದ (ಹುತ) ಹೋಮದ್ರವ್ಯವೂ ಇಲ್ಲ, ಸೂರ್ಯಸಮವಾದ ಧರ್ಮವೂ ಇಲ್ಲ, ಸೂರ್ಯಸಮವಾದ ಧನವೂ ಇಲ್ಲ.

೪. ಸೂರ್ಯನನ್ನು ಬಿಟ್ಟು ಬೇರೆ ಕಾಮವೂ ಇಲ್ಲ, ಸೂರ್ಯನನ್ನು ಬಿಟ್ಟರೆ ಬೇರೆ ಗಮ್ಯಸ್ಥಾನವೂ ಇಲ್ಲ, ಸೂರ್ಯಸಮನಾದ ಬಂಧುಮಿತ್ರರೂ ಇಲ್ಲ.

೫. ಸೂರ್ಯನಿಗೆ ಸಮನಾದ ತೀರ್ಥವಿಲ್ಲ, ಸೂರ್ಯನಿಗೆ ಸಮನಾದ ಮಾತೃವೂ ಇಲ್ಲ, ಸೂರ್ಯನಿಗೆ ಸಮನಾದ ಗುರುವೂ ಇಲ್ಲ, ಸೂರ್ಯನನ್ನು ಬಿಟ್ಟರೆ ಬೇರೆ ಪವಿತ್ರ ವಸ್ತುವೇ ಇಲ್ಲ.

೬. ಅಯ್ಯಾ ಭರತವಂಶಜನೇ! ಕೇಳು; ಎಲ್ಲ ಲೋಕಗಳಿಗೂ, ದೇವತೆಗಳಿಗೂ, ಪಿತೃಗಳಿಗೂ ಸೂರ್ಯನೊಬ್ಬನೇ ದೇವರು ಎಂದು ಸೂರ್ಯಭಕ್ತನಾದ ಮನುಷ್ಯನು ತಿಳಿಯಬೇಕು" ಎಂದು ಹೇಳಿದನು.

೭. ಆಗ ಭೀಷ್ಮನು ವ್ಯಾಸನನ್ನು ಪ್ರಶ್ನೆಮಾಡುತ್ತಾನೆ— ಹಾಗೆ ಸೂರ್ಯನನ್ನು ಅರ್ಚಿಸುತ್ತಲೂ, ಸ್ತೋತ್ರಮಾಡುತ್ತಲೂ ಸೂರ್ಯನಲ್ಲಿ ಭಕ್ತಿಯಿಂದ ಕೂಡಿ ಇರುವವರು ಸಂಸಾರಸಾಗರದಿಂದ ಪಾರಾಗಿ ಉತ್ತಮಗತಿಯನ್ನು ಹೊಂದುತ್ತಾರೆಯಲ್ಲವೇ ?

ರಾಜಾ ಚೋರಾ ಗ್ರಹಾಃ ಸರ್ಪಾ ದಾರಿದ್ರ್ಯಂ ದುಃಖಸಂತತಿಃ ।
ನೈತೇ ಪೀಡಯಿತುಂ ಶಕ್ತಾಃ ಪ್ರಸನ್ನೇ ಭಾಸ್ಕರೇ ಸತಿ ॥ ೮ ॥

॥ ವ್ಯಾಸ ಉವಾಚ ॥

ಏವಂ ತಾತ ಮಹಾಬಾಹೋ ಯೋ ಯೋ ಬಾಸ್ಕರತತ್ಪರಃ ।
ಸ ಪೂಜ್ಯಃ ಸ ನಮಸ್ಕಾರ್ಯಃ ಸ ಹಿ ಧ್ಯಾತವ್ಯ ಏವ ಚ ॥ ೯ ॥

ಪ್ರತ್ಯಕ್ಷದೇವತಾ ಹ್ಯೇಷಾ ದೇವದೇವೋಽಯಮಾದೃತಃ ।
ಅಥ ಕಿಂ ಬಹುನೋಕ್ತೇನ ಯದ್ವಕ್ಷ್ಯಾಮಿ ನಿಬೋಧ ಮೇ ॥ ೧೦ ॥

ಪೂಜಯೇತ್ತು ನ ಯಃ ಪಾಪೀ ತಥಾದಿತ್ಯದಿನೈರಪಿ ।
ಪೂಜಯಂತಿ ನರಾ ಯೇ ವೈ ತೇ ಯಾಂತಿ ಪರಮಾಂ ಗತಿಂ ॥ ೧೧ ॥

ಪ್ರಾಪ್ತೇ ಸೂರ್ಯದಿನೇ ಭಕ್ತ್ಯಾ ಭಾನುಂ ಸಂಪೂಜ್ಯ ಶ್ರದ್ಧಯಾ ।
ನಕ್ತಂ ಕರೋತಿ ಪುರುಷೋ ಯಾತಿ ದೇವಸಲೋಕತಾಂ ॥ ೧೨ ॥

---

೮. ಮಾನವನಿಗೆ ಸೂರ್ಯನು ಪ್ರಸನ್ನನಾಗಿದ್ದಾಗ ರಾಜರು, ಚೋರರು, ಗ್ರಹಗಳು, ಸರ್ಪಗಳು, ದಾರಿದ್ರ್ಯ, ದುಃಖಗಳು ಇವು ಯಾವುವೂ ಅವನಿಗೆ ಪೀಡೆಯನ್ನುಂಟುಮಾಡುವುದಕ್ಕೆ ಶಕ್ತಗಳಲ್ಲವಷ್ಟೆ ? ಎಂದು ಕೇಳಿದನು.

೯. ಆಗ ವ್ಯಾಸನು ಉತ್ತರ ಹೇಳುತ್ತಾನೆ—ಅಪ್ಪಾ ಮಹಾಬಲಶಾಲಿಯೇ ! ಕೇಳು ; ಸೂರ್ಯನನ್ನೇ ಪೂಜಿಸಬೇಕೆಂಬುದು ಹಾಗಿರಲಿ, ಹೀಗೆ ಯಾವ ಮಾನವನು ಸೂರ್ಯನಲ್ಲಿ ಆಸಕ್ತನಾಗಿರುತ್ತಾನೋ ಆ ಭಕ್ತನೂ ಸಹ ಪೂಜಾಯೋಗ್ಯನು, ಮತ್ತು ನಮಸ್ಕಾರಯೋಗ್ಯನು, ಅಲ್ಲದೆ ನಮ್ಮ ಧ್ಯಾನಕ್ಕೂ ಪಾತ್ರನು.

೧೦. ಈ ದೇವದೇವನು ನಮ್ಮ ಭಕ್ತಿಗೆ ಅಧೀನನಾದ ಪ್ರತ್ಯಕ್ಷ ದೇವತೆಯಲ್ಲವೇ ? ಹೆಚ್ಚು ಮಾತಿನಿಂದ ಏನು ? ನಾನು ಹೇಳುವುದನ್ನು ತಿಳಿದುಕೊ. ಭಾನುವಾರದ ದಿವಸವೂ ಕೂಡ ಸೂರ್ಯನನ್ನು ಯಾವನು ಪೂಜಿಸುವುದಿಲ್ಲವೋ ಅವನುಷ್ಟಮಹಾ ಪಾಪಿಯೆನಿಸುವನು.

೧೧-೧೨. ಯಾವ ಮನುಷ್ಯರು ಸೂರ್ಯನನ್ನು ಪೂಜಿಸುವರೋ, ಅವರು ಪರಮಗತಿಯನ್ನು ಹೊಂದುವರು. ಅದರಲ್ಲಿ ಭಾನುವಾರದ ದಿನಗಳಲ್ಲಿ ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಸೂರ್ಯನನ್ನು ಚೆನ್ನಾಗಿ ಪೂಜಿಸಿ ನಕ್ತಭೋಜನ ಮಾಡಿದ ಪುರುಷನು ಸೂರ್ಯಸಾಲೋಕ್ಯವನ್ನು ಪಡೆಯುತ್ತಾನೆ.

ಯಸ್ತು ಸ್ವರ್ಣಂ ರವೇರ್ಭಕ್ತ್ಯಾ ಪಂಚರತ್ನಸಮನ್ವಿತಂ ।
ನಿವೇದಯತಿ ಮಂತ್ರೇಣ ಸ ಯಾತ್ಯಮರಲೋಕತಾಂ ॥ ೧೩ ॥

ಮಾರ್ತಂಡಪ್ರೀತಯೇ ಯಸ್ತು ಕುರ್ಯಾಚ್ಛ್ರಾದ್ಧಂ ವಿಧಾನತಃ ।
ಸಂಕ್ರಾಂತಾವಯನೇ ವೀರ ಸೂರ್ಯಲೋಕಂ ಸ ಗಚ್ಛತಿ ॥ ೧೪ ॥

ಕೃತ್ವೋಪವಾಸಂ ಷಷ್ಠ್ಯಾಂ ತು ಸಪ್ತಮ್ಯಾಂ ಯಸ್ತು ಮಾನವಃ ।
ಕರೋತಿ ವಿಧಿವಚ್ಛ್ರಾದ್ಧಂ ಭಾಸ್ಕರಃ ಪ್ರೀಯತಾಮಿತಿ ॥ ೧೫ ॥

ಸರ್ವದೋಷವಿನಿರ್ಮುಕ್ತಃ ಸೂರ್ಯಲೋಕೇ ಮಹೀಯತೇ ।
ಮಾನವೋ ಯಸ್ತು ಸಪ್ತಮ್ಯಾಂ ಯೋಷಿದ್ವಾಪಿ ದಿವಾಕರಂ ॥ ೧೬ ॥

ಪೂಜಯೇದ್ವಿಧಿವದ್ಭಾನುಂ ಸ ವೈ ಕಾಮಾನವಾಪ್ನುಯಾತ್ ।
ವಿಶೇಷತಸ್ತಸ್ಯ ದಿನೇ ಗ್ರಹಣೇ ಚ ನರಾಧಿಪ ॥ ೧೭ ॥

---

೧೩. ಸ್ವರ್ಣಸಹಿತವಾದ ಪಂಚರತ್ನಗಳನ್ನು ಭಕ್ತಿಯಿಂದ ಸೂರ್ಯನಿಗೆ ಸಮರ್ಪಿಸುವವನು ಅಮರಲೋಕಕ್ಕೆ ಹೋಗುತ್ತಾನೆ.

೧೪. ಸಂಕ್ರಾಂತಿಯಲ್ಲಾಗಲಿ, ದಕ್ಷಿಣಾಯನ ಪುಣ್ಯಕಾಲದಲ್ಲಿಯಾಗಲಿ, ಸೂರ್ಯ ಪ್ರೀತ್ಯರ್ಥವಾಗಿ ಶ್ರಾದ್ಧವನ್ನು ಮಾಡುವವನು ಸೂರ್ಯಲೋಕಕ್ಕೆ ಹೋಗುತ್ತಾನೆ.

೧೫-೧೬. ಷಷ್ಠಿಯಲ್ಲಿ ಉಪವಾಸಮಾಡಿ ಸಪ್ತಮಿಯಲ್ಲಿ "ಭಾಸ್ಕರಃ ಪ್ರೀಯತಾಂ" (ಭಾಸ್ಕರ ಪ್ರೀತಿಯಾಗಲಿ) ಎಂದು ಹೇಳಿ ವಿಧಿಪ್ರಕಾರ ಶ್ರಾದ್ಧವನ್ನು ಮಾಡುವವನು ಸರ್ವದೋಷಗಳಿಂದ ವಿಮುಕ್ತನಾಗಿ ಸೂರ್ಯಲೋಕದಲ್ಲಿ ಪೂಜಿತನಾಗುತ್ತಾನೆ. ಪುರುಷನಾಗಲಿ, ಸ್ತ್ರೀಯಾಗಲಿ ಸಪ್ತಮಿಯದಿನ ಸೂರ್ಯದೇವನನ್ನು ವಿಧಿಯಿಂದ ಪೂಜಿಸಿದರೆ ಅವರು ತಮ್ಮ ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವರು.

೧೭. ಹೀಗೆ ಅವರು ತಮ್ಮ ಸಮಸ್ತ ಇಷ್ಟಾರ್ಥಗಳನ್ನೂ ಹೊಂದುವುದಲ್ಲದೆ ಎಲೈ ರಾಜನೇ! ಕೇಳು; ವಿಶೇಷತಃ ಆದಿತ್ಯವಾರದಲ್ಲಿಯೂ, ಗ್ರಹಣಕಾಲಗಳಲ್ಲಿಯೂ ಸೂರ್ಯನನ್ನು ಪೂಜಿಸಿದರೆ ವಿಶೇಷವಾಗಿ ಈ ಫಲವಾಗುವುದೆಂದು ದೃಢವಾಗಿ ತಿಳಿ.

ಇತಿ ಭೀಷ್ಮ ವಿಜಾನೀಹಿ ನ ದೇವೋ ಭಾಸ್ಕರಾತ್ಪರಃ ।
ಆದಿತ್ಯಮೇಕಂ ಪರಮಂ ದೇವದೇವೇಷು ಪೂಜಿತಂ ॥ ೧೮ ॥

ರತ್ನಪರ್ವತಮಾರುಹ್ಯ ಯಥಾ ಭುವಿ ನರಾಧಿಪಾಃ ।
ಸತ್ತ್ವಾನುರೂಪಂ ಗಚ್ಛಂತಿ ರತ್ನಭಾಗಾನಶೇಷತಃ ॥ ೧೯ ॥

ತಥಾ ಭಾನುಂ ಸಮಾರಾಧ್ಯ ಪ್ರಾಪ್ನುವಂತಿ ನರಾಃ ಫಲಂ ।
ಧನಾರ್ಥೀ ಪ್ರಾಪ್ನುಯಾದರ್ಥಂ ಪುತ್ರಾರ್ಥೀ ಪ್ರಾಪ್ನುಯಾತ್ಸುತಂ ॥ ೨೦ ॥

ಮೋಕ್ಷಾರ್ಥೀ ಮೋಕ್ಷಮಾಪ್ನೋತಿ ಚಾಥ ವಾಸ್ಯಮರತಾಂ ವ್ರಜೇತ್ ।
ಅಥ ಕಿಂ ಬಹುನೋಕ್ತೇನ ಶೃಣು ತ್ವಂ ವಚನಂ ಮಮ ॥ ೨೧ ॥

ಬ್ರಹ್ಮಾದಯೋ ದೇವಗಣಾ ಭಾನುಮಾರಾಧ್ಯ ಭಾರತ ।
ಮನೋಹರಾಣಿ ದಿವ್ಯಾನಿ ದಿವಿ ಸ್ಥಾನಾನ್ಯವಾಪ್ನುವನ್ ॥ ೨೨ ॥

ಅಚಲಾನಿ ಮಹಾಭಾಗಾಃ ಸರ್ವಪಾಪಹರಾಣಿ ಚ ॥ ೨೩ ॥

---

೧೮. ಭೂಲೋಕದಲ್ಲಿ ಸೂರ್ಯನಿಗಿಂತ ಉತ್ಕೃಷ್ಟನಾದ ದೇವರು ಯಾರೂ ಇಲ್ಲ. ದೇವದೇವರುಗಳಿಂದ ಪೂಜಿತನಾದ ಆದಿತ್ಯನೊಬ್ಬನೇ ಶ್ರೇಷ್ಠನೂ, ಮುಖ್ಯನೂ ಆದವನು.

೧೯-೨೦. ಭೂಲೋಕದಲ್ಲಿ ರಾಜರು ರತ್ನದೊರೆಯುವ ಪರ್ವತಕ್ಕೆ ಹೋಗಿ ರತ್ನಸಿಕ್ಕುವ ಭಾಗಗಳಲ್ಲೆಲ್ಲಾ ಸಂಚರಿಸಿ ಹೇಗೆ ತಮ್ಮ ಶಕ್ತಿಯಿದ್ದಷ್ಟುಮಟ್ಟಿಗೆ ಸಂಪಾದಿಸುತ್ತಾರೆಯೋ ಹಾಗೆಯೇ ಸೂರ್ಯಭಕ್ತರು ತಮಗೆ ಸಾಧ್ಯವಾದಷ್ಟು ಸೂರ್ಯಾರಾಧನೆ ಮಾಡಿ ಪುಣ್ಯವನ್ನು ಹೊಂದುತ್ತಾರೆ. ಧನ ಬೇಕೆನ್ನುವವನು ಧನವನ್ನೂ, ಪುತ್ರರನ್ನು ಅಪೇಕ್ಷಿಸುವವನು ಪುತ್ರರನ್ನೂ ಪಡೆಯುವನು.

೨೧. ಮೋಕ್ಷವನ್ನು ಅಪೇಕ್ಷಿಸುವವನು ಮೋಕ್ಷವನ್ನೋ ಅಥವಾ ದೇವತ್ವವನ್ನೋ ಹೊಂದುವನು. ಹೆಚ್ಚು ಮಾತುಗಳಿಂದೇನು? ನಾನು ಈಗ ಹೇಳುವುದನ್ನು ನೀನು ಕೇಳು.

೨೨-೨೩. "ಅಯ್ಯಾ ಭರತಕುಲಶ್ರೇಷ್ಠನೇ! ಮಹಾಭಾಗರಾದ ಬ್ರಹ್ಮಾದಿ ದೇವತೆಗಳು ಸೂರ್ಯನನ್ನು ಆರಾಧಿಸಿ, ಮನೋಹರವೂ, ಸ್ಥಿರವೂ, ಸರ್ವಪಾಪಹರವೂ ಆದ ಸ್ವರ್ಗಲೋಕ ಮೊದಲಾದ ಶ್ರೇಷ್ಠಸ್ಥಾನಗಳನ್ನು ಪಡೆದರು ಎಂದು ಹೇಳಿದನು."

॥ ಸುಮಂತುರುವಾಚ ॥

ಇತ್ಯುಕ್ತ್ವಾ ಭಗವಾನ್ವ್ಯಾಸಸ್ತತ್ರೈವಾಂತರಧೀಯತ ।
ಭೀಷ್ಮೋಽಪಿ ಪೂಜಯಾಮಾಸ ಭಕ್ತ್ಯಾ ಭಾನುಂ ವಿಧಾನತಃ ॥ ೨೪ ॥

ತಥಾ ತ್ವಮಪಿ ರಾಜೇಂದ್ರ ಪೂಜಯೇಮಂ ದಿವಾಕರಂ ।
ಪೂಜಯಿತ್ವಾ ರವಿಂ ಭಕ್ತ್ಯಾ ಸ್ಥಾನಂ ಯಾಸ್ಯಸಿ ಶಾಶ್ವತಂ ॥ ೨೫ ॥

ಯಥಾ ಗತಃ ಸ ಭಗವಾನ್ ವ್ಯಾಸೋ ಭೀಷ್ಮಶ್ಚ ಮಾನದ ।
ಸಕೃತ್ಪ್ರಪೂಜ್ಯ ಸಪ್ತಮ್ಯಾಂ ಭಕ್ತ್ಯಾ ದೇವಂ ದಿವಾಕರಂ ॥ ೨೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ವ್ಯಾಸ ಭೀಷ್ಮ ಸಂವಾದೇ ಆದಿತ್ಯಪೂಜಾ ಮಾಹಾತ್ಮ್ಯ ವರ್ಣನಂ
ನಾಮ ಸಪ್ತಾಧಿಕ ದ್ವಿಶತತಮೋಽಧ್ಯಾಯಃ.

---

೨೪. ಆಗ ಸುಮಂತುಮುನಿವರ್ಯರು ಮುಂದುವರಿಸಿ ಹೇಳುತ್ತಾರೆ— ಪೂಜ್ಯರಾದ ವ್ಯಾಸರು ಇಷ್ಟುಮಾತುಗಳನ್ನು ಹೇಳಿ ಅಲ್ಲಿಯೇ ಅಂತರ್ಧಾನವಾದರು ಭೀಷ್ಮನೂ ಕೂಡ ಸೂರ್ಯನನ್ನು ವಿಧಿಪ್ರಕಾರ ಪೂಜಿಸಿದನು. " ಎಲೈ ರಾಜಶ್ರೇಷ್ಠನೇ ! ನೀನೂ ಹೀಗೆಯೇ ಸೂರ್ಯನನ್ನು ಪೂಜಿಸು.

೨೫-೨೬. ಹೀಗೆ ಭಕ್ತಿಯಿಂದ ಸೂರ್ಯಾರಾಧನೆ ಮಾಡಿದರೆ ಶಾಶ್ವತವಾದ ಸ್ಥಾನವನ್ನು ಹೊಂದುವೆ. ಎಲೈ ಮಾನದನಾದ ರಾಜನೇ ! ಪೂಜ್ಯರಾದ ವ್ಯಾಸರೂ ಭೀಷ್ಮನೂ ಸಪ್ತಮಿಯಲ್ಲಿ ಒಂದಾವೃತ್ತಿ ಭಕ್ತಿಯಿಂದ ಸೂರ್ಯನನ್ನು ಪೂಜಿಸಿದ ಮಾತ್ರಕ್ಕೆ ಹೇಗೆ ಸ್ವರ್ಗಕ್ಕೆ ಹೋದರೋ ಹಾಗೆಯೇ ನೀನೂ ಸಪ್ತಮಿಯಲ್ಲಿ ಒಂದಾವೃತ್ತಿ ಸೂರ್ಯನನ್ನು ಪೂಜಿಸಿದರೆ ಆ ಫಲವನ್ನೇ ಹೊಂದುವೆ " ಎಂದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ - ಬ್ರಾಹ್ಮಪರ್ವದ ಸಪ್ತಮೀಕಲ್ಪದಲ್ಲಿ
ವ್ಯಾಸ ಭೀಷ್ಮರ ಸಂವಾದದಲ್ಲಿ ಆದಿತ್ಯಪೂಜಾ ಮಾಹಾತ್ಮ್ಯವರ್ಣನೆ
ಯೆಂಬ ಇನ್ನೂರೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ಅಷ್ಟಾಧಿಕದ್ವಿಶತತಮೋಽಧ್ಯಾಯಃ

---

॥ ಶತಾನೀಕ ಉವಾಚ ॥

ಪುನರ್ಮೇ ಬ್ರೂಹಿ ಸಪ್ತಮ್ಯಾಂ ಪ್ರೀತಯೇ ಭಾಸ್ಕರಸ್ಯ ತು ।
ಉಪೋಷಿತೋ ಭವತೀಹ ನರೋ ಯಸ್ತು ದ್ವಿಜೋತ್ತಮ ॥ ೧ ॥

॥ ಸುಮಂತುರುವಾಚ ॥

ಕಥಿತಾಃ ಸಪ್ತ ಸಪ್ತಮ್ಯಃ ಪುನರಸ್ಮಿನ್ಮಹಾಮತೇ ।
ಬಹುಭಿಃ ಕುರುಶಾರ್ದೂಲ ಭೂಯಸ್ತ್ವೇತಾಃ ಶೃಣುಷ್ವ ಮೇ ॥ ೨ ॥

ಸ್ವಯಂ ಯಾಃ ಕಥಿತಾಃ ಪೂರ್ವಮಾದಿತ್ಯೇನ ಖಗಾಧಿಪ ।
ಅರುಣಸ್ಯ ಮಹಾಬಾಹೋ ಸಪ್ತಮ್ಯಃ ಸಪ್ತಪೂಜಿತಾಃ ॥ ೩ ॥

---

### ಇನ್ನೂರಎಂಟನೆಯ ಅಧ್ಯಾಯ

೧. ಶತಾನೀಕರಾಜನು ಸುಮಂತುಮುನಿವರ್ಯರನ್ನು ಪುನಃ ಕೇಳಲು ಇಚ್ಛಿಸಿ "ಅಯ್ಯಾ ಮುನಿವರ್ಯರೇ! ಸೂರ್ಯನ ಪ್ರೀತಿಗಾಗಿ ಸಪ್ತಮಿಯಲ್ಲಿ ಉಪವಾಸ ಮಾಡಿದವನಿಗೆ ಲಭಿಸುವ ಫಲವಾವುದೆಂಬುದನ್ನು ಪುನಃ ನನಗೆ ವಿವರವಾಗಿ ಹೇಳಿ" ಎಂದನು.

೨. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ಮಹಾಬುದ್ಧಿಯುಳ್ಳ ಕುರುವಂಶಶ್ರೇಷ್ಠನೇ! ಈ ಸಪ್ತಮಿಗಳಲ್ಲಿ ಏಳುಬಗೆಗಳು ಇವೆ ಎಂದು ಅನೇಕರು ಹೇಳಿದ್ದಾರೆ. ಇವುಗಳನ್ನು ನಾನು ಪುನಃ ವಿವರಿಸಿ ಹೇಳುವೆನು ಕೇಳು.

೩. ಹಿಂದೆ ಈ ಸಪ್ತಮೀ ವ್ರತಗಳ ವಿಚಾರವನ್ನು ಕುರಿತು ಅರುಣನಿಗೆ ಆದಿತ್ಯನು ಹೇಳಿದ್ದನು. ಲೋಕಪೂಜಿತಗಳಾದ ಆ ಏಳು ಸಪ್ತಮಿಗಳನ್ನೂ ಈಗ ಹೇಳುವೆನು ಕೇಳು.

ಅರ್ಕಸಂಪುಟಕೈರೇಕಾ ದ್ವಿತೀಯಾ ಮರಿಚೈಸ್ತಥಾ ।
ತೃತೀಯಾ ನಿಂಬಪತ್ರೈಶ್ಚ ಚತುರ್ಥೀ ಫಲಸಪ್ತಮೀ ॥ ೪ ॥

ಅನೋದನಾ ಪಂಚಮೀ ಸ್ಯಾತ್ ಷಷ್ಠೀ ವಿಜಯಸಪ್ತಮೀ ।
ಸಪ್ತಮೀ ಕಾಮಿಕಾ ಜ್ಞೇಯಾ ವಿಧಿಂ ತಾಸಾಂ ನಿಬೋಧ ಮೇ ॥ ೫ ॥

ಶುಕ್ಲಪಕ್ಷೇ ರವಿದಿನೇ ದಕ್ಷಿಣೇಚೋತ್ತರಾಯಣೇ ।
ಗ್ರಹಣೇ ಸೂರ್ಯನಕ್ಷತ್ರೇ ಗೃಹ್ಣೀಯಾತ್ಸಪ್ತ ಸಪ್ತಮೀಃ ॥ ೬ ॥

ಸ ತಾಂ ಸು ಬ್ರಹ್ಮಚಾರೀ ಸ್ಯಾಚ್ಛೌಚಯುಕ್ತೋ ಜಿತೇಂದ್ರಿಯಃ ।
ಸೂರ್ಯಾರ್ಚನರತೋ ದಾಂತೋ ಜಪಹೋಮಪರಸ್ತಥಾ ॥ ೭ ॥

ಪಂಚಮ್ಯಾಮೇವ ಪುರುಷಃ ಕುರ್ಯಾನ್ನಿತ್ಯಮನಾತ್ಮಕಂ ।
ಷಷ್ಠ್ಯಾಂ ನ ಮೈಥುನಂ ಗಚ್ಛೇನ್ಮಧುಮಾಂಸಂ ಚ ವರ್ಜಯೇತ್ ॥ ೮ ॥

---

೪. ಒಂದನೆಯದನ್ನು ಎಕ್ಕದ ಎಲೆಯ ದೊನ್ನೆಗಳ ಉಪಯೋಗದಿಂದಲೂ, ಎರಡನೆಯದನ್ನು ಮೆಣಸಿನಕಾಳುಗಳ ಸೇವನದಿಂದಲೂ, ಮೂರನೆಯದನ್ನು ಬೇವಿನ ಎಲೆಗಳ ಸೇವನದಿಂದಲೂ ನಡೆಯಿಸಬೇಕು. ನಾಲ್ಕನೆಯದು ಫಲಸಪ್ತಮಿ.

೫. ಐದನೆಯದು ಅನ್ನರಹಿತವಾದ ಅನೋದನಸಪ್ತಮಿ, ವಿಜಯಸಪ್ತಮಿಯು ಆರನೆಯದು, ಕಾಮಿಕಾಸಪ್ತಮಿಯು ಏಳನೆಯದು.

೬. ಶುಕ್ಲಪಕ್ಷದಲ್ಲಿ ಬರುವ ಭಾನುವಾರ, ದಕ್ಷಿಣಾಯನ ಉತ್ತರಾಯಣ ಸಂಕ್ರಮಣಗಳ ದಿನ, ಗ್ರಹಣದದಿನ, ಹಸ್ತನಕ್ಷತ್ರವಿರುವ ದಿನ, ಇಂಥ ಯಾವ ದಿನದಲ್ಲಾದರೂ ಈ ಸಪ್ತಮೀವ್ರತಗಳನ್ನು ಗ್ರಹಣಮಾಡಬೇಕು.

೭. ಹೀಗೆ ವ್ರತ ಗ್ರಹಣಮಾಡಿದ ಪಕ್ಷದಲ್ಲಿ ಆ ಪುರುಷನು ಒಳ್ಳೆಯ ಬ್ರಹ್ಮಚಾರಿಯೆನಿಸಿ ಪರಿಶುದ್ಧನೂ, ಜಿತೇಂದ್ರಿಯನೂ, ಸೂರ್ಯಪೂಜಾಸಕ್ತನೂ, ಬಹಿರಿಂದ್ರಿಯ ದಮನಶಕ್ತಿಯುಕ್ತನೂ, ಜಪಹೋಮಪರನೂ ಆಗುವನು.

೮. ಈ ವ್ರತಮಾಡುವವನು ಪಂಚಮೀದಿನವೇ ನಿಯಮದಿಂದಿರುತ್ತಾ ದೇಹಕ್ಕೆ ಅಲಂಕಾರಾದಿಗಳನ್ನು ಮಾಡಿಕೊಳ್ಳದೆ ಈ ವ್ರತಮಾಡಬೇಕು. ಷಷ್ಠಿಯಲ್ಲಿ ಮೈಥುನವನ್ನೂ, ಮದ್ಯಮಾಂಸಗಳನ್ನೂ ತ್ಯಾಜ್ಯಮಾಡಿಬಿಡಬೇಕು.

ಅರ್ಕಸಂಪುಟಕೈರೇಕಾಂ ತಥಾನ್ಯಾಂ ಮರಿಚೈರ್ನಯೇತ್ ।
ತಥಾಪರಾಂ ನಿಂಬಪತ್ರೈಃ ಫಲಾಖ್ಯಾಯಾಂ ಫಲಂ ಚರೇತ್ ॥ ೯ ॥

ಅನೋದನಾಮನ್ನರಹಿತ ಉಪಾಸೀತ ಯಥಾವಿಧಿ ।
ಅಹೋರಾತ್ರಂ ವಾಯುಭಕ್ಷಃ ಕುರ್ಯಾದ್ವಿಜಯಸಪ್ತಮಿಮಾ ॥ ೧೦ ॥

ತಥೈಕಾಂ ಸಪ್ತಮೀಂ ಕೃತ್ವಾ ಪ್ರತಿಮಾಸಂ ವಿಚಕ್ಷಣಃ ।
ಕುರ್ಯಾದ್ಯಥಾವಿಧಿ ಮುದಾ ತತಃ ಕುರ್ವೀತ ಕಾಮಿಕಾಂ ॥ ೧೧ ॥

ಆಸಾಂ ಲಿಖಿತ್ವಾ ನಾಮಾನಿ ಪತ್ರಕೇಷು ಪೃಥಕ್ ಪೃಥಕ್ ।
ತಾನಿ ಸರ್ವಾಣಿ ಪತ್ರಾಣಿ ಕ್ಷಿಪೇದಭಿನವೇ ಘಟೇ ॥ ೧೨ ॥

ತಸ್ಯಾರ್ಥಂ ಯೋ ನ ಜಾನಾತಿ ಲೋಕಬಾಹ್ಯೋಽಪಿ ವಾ ನರಃ ।
ತೇನ ಹ್ಯುದ್ಧಾರಯೇದೇಕಂ ನ ಕುರ್ಯಾಚ್ಚ ವಿಚಾರಣಾಂ ॥ ೧೩ ॥

---

೯. ಎಕ್ಕದೆಲೆಗಳ ದೊನ್ನೆಗಳಿಂದ ಒಂದನೆಯ ಸಪ್ತಮಿಯನ್ನೂ, ಮೆಣಸಿನ ಕಾಳು ಸೇವಿಸಿ ಮತ್ತೊಂದು ಸಪ್ತಮಿಯನ್ನೂ ನಡೆಯಿಸಬೇಕು. ಇನ್ನೊಂದು ಸಪ್ತಮಿಯಲ್ಲಿ ಬೇವಿನಸೊಪ್ಪನ್ನು ಸೇವನೆಮಾಡಬೇಕು. ಫಲಸಪ್ತಮಿಯಲ್ಲಿ ಫಲಭಕ್ಷಣ ಮಾಡಬೇಕು.

೧೦. ಅನೋದನಸಪ್ತಮಿಯಲ್ಲಿ ಅನ್ನವನ್ನು ಮುಟ್ಟದೆ ವಿಧಿಯಂತೆ ಉಪವಾಸ ಮಾಡಬೇಕು. ವಿಜಯಸಪ್ತಮಿಯಲ್ಲಿ ಹಗಲೂ ರಾತ್ರಿಯೂ ವಾಯುಭಕ್ಷಣ ಮಾಡಿಕೊಂಡು ವ್ರತವನ್ನು ಆಚರಿಸಬೇಕು.

೧೧. ಬುದ್ಧಿವಂತನು ಪ್ರತಿತಿಂಗಳಲ್ಲಿಯೂ ಒಂದೊಂದು ಶುಕ್ಲ ಸಪ್ತಮಿಯನ್ನೂ ವಿಧಿಯಂತೆ ನಡೆಯಿಸಿ ಅನಂತರದಲ್ಲಿ ಕಾಮಿಕಾಸಪ್ತಮಿಯನ್ನಾಚರಿಸಬೇಕು.

೧೨. ಇವುಗಳ ಹೆಸರುಗಳನ್ನು ಸಣ್ಣ ಎಲೆಗಳಲ್ಲಿ ಬೇರೆ ಬೇರೆ ಬರೆದು ಆ ಎಲ್ಲಾ ಎಲೆಗಳನ್ನೂ ಹೊಸದಾದ ಗಡಿಗೆಯಲ್ಲಿ ಹಾಕಿ ಕುಲುಕಬೇಕು.

೧೩. ಬರವಣಿಗೆಯ ಅರ್ಥವನ್ನು ತಿಳಿಯದವನಿಂದಲೋ, ಅಥವಾ ಲೋಕವ್ಯವಹಾರ ತಿಳಿಯದ ಬೇರೆ ಯಾವನಿಂದಲೋ, ಆ ಗಡಿಗೆಯಿಂದ ಒಂದು ಎಲೆಯನ್ನು ಎತ್ತಿಸಿ ಅದರಲ್ಲಿ ಕಂಡರೀತಿ ವಸ್ತುಸೇವನೆಯಿಂದ ವ್ರತಾರಂಭಮಾಡಬೇಕು. ಇದರಲ್ಲಿ ವಿಚಾರಮಾಡಬಾರದು.

ತೇನೈವ ವಿಧಿನಾ ಯಸ್ತು ಪ್ರತಿಮಾಸಂ ಚ ತತ್ತ್ವಪಃ ।
ಸಪ್ತೈವ ಯಾವತ್ಸಪ್ತಮ್ಯೋ ವಿಜ್ಞೇಯಾ ಸಾ ತು ಕಾಮಿಕಾ　　|| ೧೪ ||

ಇತ್ಯೇತಾಃ ಸಪ್ತಸಪ್ತಮ್ಯಃ ಸ್ವಯಂ ಪ್ರೋಕ್ತಾ ವಿವಸ್ವತಾ ।
ಕುರ್ವೀತ ಯೋ ನರೋ ಭಕ್ತ್ಯಾ ಸ ಯಾತ್ಯರ್ಕಸದೋ ನೃಪ　　|| ೧೫ ||

ಅರ್ಕಸಂಪುಟಕೈರ್ವಿತ್ತಮಚಲಂ ಸಪ್ತಪೌರುಷಂ ।
ಮರಿಚೈಃ ಸಂಗಮಃ ಸ್ಯಾದ್ವೈ ಪ್ರಿಯೈಃ ಪುತ್ರಾದಿಭಿಃ ಸದಾ　　|| ೧೬ ||

ಸರ್ವರೋಗಾಃ ಪ್ರಣಶ್ಯಂತಿ ನಿಂಬಪತ್ರೈರ್ನ ಸಂಶಯಃ ।
ಫಲೈಸ್ತು ಪುತ್ರಪೌತ್ರಾಶ್ಚ ದೌಹಿತ್ರಾಶ್ಚಾಪಿ ಪುಷ್ಕಲಃ　　|| ೧೭ ||

---

೧೪. ಆ ವಿಧಿಪ್ರಕಾರವಾಗಿಯೇ ಪ್ರತಿತಿಂಗಳಲ್ಲೂ ಮಾಡಬೇಕು. ಅದೇ ಒಂದು ತಪಸ್ಸು, ಏಳುಸಪ್ತಮಿಗಳು ಮುಗಿಯುವವರೆಗೆ ಹೀಗೆ ನಡೆಸಬೇಕು, ಇದೇ ಕಾಮಿಕಾ ಸಪ್ತಮಿಯು.

೧೫. ಹೀಗೆ ಈ ಏಳುಸಪ್ತಮಿಗಳೂ ಪುಣ್ಯಪ್ರದವಾದುವು ಎಂದು ಸೂರ್ಯನು ತಾನೇ ಹೇಳಿರುವನು. ಎಲೈ ರಾಜನೇ ! ಕೇಳು ; ಯಾವ ಮನುಷ್ಯನು ಈ ಏಳು ಸಪ್ತಮಿಗಳನ್ನೂ ಭಕ್ತಿಯಿಂದ ಆಚರಿಸುವನೋ ಅವನು ಸೂರ್ಯಲೋಕಕ್ಕೆ ಹೋಗುತ್ತಾನೆ.

೧೬. ಎಕ್ಕದೆಲೆಗಳ ದೊನ್ನೆಗಳನ್ನುಪಯೋಗಿಸಿ ವ್ರತವನ್ನು ಆಚರಿಸಿದರೆ ತನ್ನ ಕುಲದಲ್ಲಿ ಏಳು ತಲೆಮಾರುಗಳವರೆಗೆ ಅನುಭವಿಸುವಷ್ಟು ಸ್ಥಿರವಾದ ದ್ರವ್ಯ ಪ್ರಾಪ್ತಿಯಾಗುವುದು. ಮೆಣಸಿನಕಾಳುಗಳನ್ನು ಸೇವನೆಮಾಡಿ ವ್ರತವನ್ನು ಮಾಡಿದರೆ ಪ್ರಿಯರಾದ ಪುತ್ರ ಮೊದಲಾದವರೊಡನೆ ತನ್ನ ಜೀವಮಾನದಲ್ಲಿ ಸದಾ ಕೂಡಿರುತ್ತಾನೆ.

೧೭. ಬೇವಿನ ಎಲೆಗಳ ಸೇವನೆಯಮೂಲಕ ಆಚರಿಸುವ ವ್ರತಮಾಡಿದರೆ ಆತನ ಸರ್ವರೋಗಗಳೂ ನಾಶವಾಗುವುದರಲ್ಲಿ ಸಂಶಯವಿಲ್ಲ. ಫಲಸೇವನೆ ಮಾಡುವ ಫಲಸಪ್ತಮಿಯ ವ್ರತಾಚರಣದಿಂದ ಪುತ್ರಪೌತ್ರಾಭಿವೃದ್ಧಿಯೂ ಮಗಳು, ಮಗಳ ಮಕ್ಕಳು ಮುಂತಾದವರ ಸಮೃದ್ಧಿಯೂ ಉಂಟಾಗುವುದು.

ಅತೋ ಘನಂ ಧನಂ ಧಾನ್ಯಂ ಸುವರ್ಣಂ ರಜತಂ ತಥಾ ।
ತಥಾ ಪಶುರ್ಹಿರಣ್ಯಂ ಚ ಆರೋಗ್ಯಂ ಸತತಂ ನೃಪ ॥ ೧೮ ॥

ಉಪೋಷ್ಯ ವಿಜಯಾಂ ಶತ್ರೂನ್ರಾಜನ್ನಯತಿ ನಿತ್ಯಶಃ ।
ಸಾಧಯೇತ್ಕಾಮದಾ ಕಾಮಾನ್ವಿಧಿವತ್ಸಮುಪಾಸಿತಾ ॥ ೧೯ ॥

ಪುತ್ರಕಾಮೋ ಲಭೇತ್ಪುತ್ರಮರ್ಥಕಾಮೋಽರ್ಥಮಕ್ಷಯಂ ।
ವಿದ್ಯಾಕಾಮೋ ಲಭೇದ್ವಿದ್ಯಾಂ ರಾಜ್ಯಾರ್ಥೀ ರಾಜ್ಯಮಾಪ್ನುಯಾತ್ ॥
ಕೃತ್ಸ್ನಾನ್ ಕಾಮಾನ್ ದದಾತ್ಯೇಷಾ ಕಾಮದಾ ಕುರುನಂದನ ॥ ೨೦ ॥

ನರೋ ವಾ ಯದಿ ವಾ ನಾರೀ ಯಥೋಕ್ತಂ ಸಪ್ತಮೀವ್ರತಂ ।
ಕರೋತಿ ನಿಯತಾತ್ಮಾ ವೈ ಸ ಯಾತಿ ಪರಮಾಂ ಗತಿಂ ॥ ೨೧ ॥

---

೧೮. ಅಲ್ಲದೆ ಇದರಿಂದ ಧನಧಾನ್ಯಸಮೃದ್ಧಿಯೂ; ಸುವರ್ಣರಜತಗಳು, ದನಕರುಗಳು, ಬಂಗಾರದ ಒಡವೆ, ವಸ್ತುಗಳು ಇವುಗಳ ಸಮೃದ್ಧಿಯೂ; ಮತ್ತು ಸದಾ ಆರೋಗ್ಯವೂ ಉಂಟಾಗುವುವು.

೧೯. ಅಯ್ಯಾ ರಾಜನೇ! ಕೇಳು; ವಿಜಯಸಪ್ತಮಿಯಲ್ಲಿ ಉಪೋಷಣ ಮಾಡಿದವನು ಯಾವಾಗಲೂ ಶತ್ರುಗಳನ್ನು ಗೆಲ್ಲುತ್ತಾನೆ. ವಿಧಿಪ್ರಕಾರ ಕಾಮದಾ ಸಪ್ತಮಿಯನ್ನು ಆಚರಿಸಿದರೆ ಅದು ಅವನ ಇಷ್ಟಾರ್ಥಗಳನ್ನೆಲ್ಲಾ ಸಾಧನಮಾಡಿಕೊಡು ವುದು.

೨೦. ಪುತ್ರರು ಬೇಕೆಂದು ಅಪೇಕ್ಷಿಸುವವನು ಪುತ್ರರನ್ನೂ, ದ್ರವ್ಯವನ್ನು ಅಪೇಕ್ಷಿಸುವವನು ಅಕ್ಷಯವಾದ ದ್ರವ್ಯವನ್ನೂ, ವಿದ್ಯಾಪೇಕ್ಷೆಯುಳ್ಳವನು ವಿದ್ಯೆ ಯನ್ನೂ, ರಾಜ್ಯಾಪೇಕ್ಷೆಯುಳ್ಳವನು ರಾಜ್ಯವನ್ನೂ ಹೊಂದುವನು.

೨೧. ಅಯ್ಯಾ ಕುರುನಂದನನೇ! ಕೇಳು; ಕಾಮದಾಸಪ್ತಮೀ ವ್ರತಾಚರ ಣವು ಅವನ ಇಷ್ಟಗಳನ್ನು ಸಮಗ್ರವಾಗಿ ನೆರವೇರಿಸಿಕೊಡುವುದು. ಹೆಂಗಸಾಗಲಿ, ಗಂಡಸಾಗಲಿ ವಿಧಿಯಲ್ಲಿ ಹೇಳಿರುವಂತೆ ಮನಸ್ಸನ್ನು ನಿಗ್ರಹಿಸಿ ಸಪ್ತಮೀವ್ರತವನ್ನು ಆಚರಿಸಿದರೆ ಅವರು ಶ್ರೇಷ್ಠವಾದ ಸದ್ಗತಿಯನ್ನು ಹೊಂದುವರು.

ನ ತೇಷಾಂ ತ್ರಿಷು ಲೋಕೇಷು ಕಿಂಚಿದಸ್ತೀತಿ ದುರ್ಲಭಂ ।
ಯೇ ಭಕ್ತ್ಯಾ ಲೋಕನಾಥಸ್ಯ ವ್ರತಿನಃ ಸಂಶಿತವ್ರತಾಃ ॥ ೨೨ ॥

ವ್ರತೈಸ್ತು ವಿವಿಧೈರ್ವೀರ ತಪೋಭಿರ್ವಾ ಸುದುಷ್ಕರೈಃ ।
ನ ತತ್ಫಲಮವಾಪ್ನೋತಿ ಯಜ್ಞೈರ್ವಾ ಬಹುದಕ್ಷಿಣೈಃ ॥ ೨೩ ॥

ತೀರ್ಥಾಭಿಷೇಚನೈರ್ವಾಪಿ ದಾನಹೋಮಾರ್ಚನೈಸ್ತಥಾ ।
ತತ್ಫಲಂ ಪೂಜನೇ ದತ್ತೇ ಸಪ್ತಮ್ಯಾಂ ಮೋಕ್ಷರೂಪಕಂ ॥
ಮೋಕ್ಷಾರ್ಥೀ ಪಾರ್ಥಿವಶ್ರೇಷ್ಠ ಯಥಾಹ ಭಗವಾನ್ರವಿಃ ॥ ೨೪ ॥

ಕೃತ್ವಾದಿತ್ಯದಿನೇ ನಕ್ತಂ ಭಕ್ತ್ಯಾ ಸಂಪೂಜಯೇದ್ರವಿಂ ।
ಅಚಲಂ ಸ್ಥಾನಮಾಪ್ನೋತಿ ಮಾನವಃ ಶ್ರದ್ಧಯಾನ್ವಿತಃ ॥
ಸೂರ್ಯಲೋಕೇ ಚ ನಿಯತಂ ತಸ್ಯ ವಾಸೋ ನ ಸಂಶಯಃ ॥ ೨೫ ॥

---

೨೨. ಅವರಿಗೆ ಮೂರುಲೋಕಗಳಲ್ಲಿಯೂ ದುರ್ಲಭವಾದುದು ಯಾವುದೂ ಇಲ್ಲ. ಲೋಕನಾಥನಾದ ಸೂರ್ಯನಿಗೆ ಪ್ರೀತಿಕರವಾದ ಈ ಸಪ್ತಮೀವ್ರತವನ್ನು ಭಕ್ತಿಯಿಂದಲೂ, ಕಠಿಣವಾದ ವಾದನಿಯಮದಿಂದಲೂ, ಮಾಡುವ ಜನರು ಅಮೋಘವಾದ ಫಲವನ್ನು ಹೊಂದಬಹುದು.

೨೩. ನಾನಾಬಗೆಯಾದ ಇತರ ವ್ರತಾಚರಣದಿಂದಲೂ, ಕಷ್ಟಸಾಧ್ಯವಾದ ಘೋರತಪಸ್ಸುಗಳಿಂದಲೂ, ಬಹಳ ದಕ್ಷಿಣೆಗಳನ್ನು ಕೊಟ್ಟು ನೆರವೇರಿಸಿದ ಯಜ್ಞಗಳಿಂದಲೂ ಕೂಡ ಅಂಥ ಫಲಗಳನ್ನು ಹೊಂದುವುದು ಕಷ್ಟ.

೨೪. ಅಯ್ಯಾ ರಾಜನೇ! ಕೇಳು; ಮೋಕ್ಷಾರ್ಥಿಯು ಸಪ್ತಮಿಯಲ್ಲಿ ಪೂಜೆ ಮಾಡುವುದರಿಂದ ಅವನಿಗೆ ಲಭಿಸುವ ಮೋಕ್ಷರೂಪವಾದ ಫಲವು; ಪುಣ್ಯತೀರ್ಥಸ್ನಾನಗಳಿಂದಾಗಲಿ, ದಾನ; ಹೋಮ, ಪೂಜೆ ಮೊದಲಾದುವನ್ನು ಮಾಡುವುದರಿಂದಾಗಲಿ; ಎಂದಿಗೂ ಲಭಿಸಲಾರದು ಎಂದು ಸೂರ್ಯನೇ ಹೇಳಿದಾನೆ.

೨೫. ಶ್ರದ್ಧಾಯುಕ್ತನಾದ ಮನುಷ್ಯನು ಭಾನುವಾರದ ದಿನ ಭಕ್ತಿಯಿಂದ ಸೂರ್ಯನನ್ನು ಪೂಜಿಸಿ ನಕ್ತಭೋಜನ ಮಾಡಿದರೆ ಅವನು ಸ್ಥಿರವಾದ ಸ್ಥಾನವನ್ನು ಪಡೆಯುವನು. ಅಲ್ಲದೆ ಅವನಿಗೆ ಸೂರ್ಯಲೋಕವಾಸವು ನಿಶ್ಚಯವಾಗಿ ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

ಯಸ್ತು ಪೂಜಯತೇ ಭಕ್ತ್ಯಾ ಸಪ್ತಮ್ಯಾಂ ಭಾಸ್ಕರಂ ನರಃ ।
ಬ್ರಹ್ಮೇಂದ್ರರುದ್ರಲೋಕೇಷು ತಸ್ಯಾಪ್ರತಿಹತಾ ಗತಿಃ ॥ ೨೬ ॥

ನಾಂಧೋ ನ ಕುಷ್ಠೀ ನ ಕ್ಲೀಬೋ ನ ವ್ಯಂಗೋ ನ ಚ ನಿರ್ಧನಃ ।
ಕುಲೇ ತಸ್ಯ ಭವೇದ್ವೀರ ಯಶ್ಚರೇತ್ಸಪ್ತಮೀವ್ರತಂ ॥ ೨೭ ॥

ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಧನಮಾಪ್ನುಯಾತ್ ।
ಭಾರ್ಯಾರ್ಥೀ ರೂಪಸಂಪನ್ನಾಂ ಸ್ತ್ರಿಯಂ ಪುತ್ರಾಂಶ್ಚ ಭಾರತ ॥ ೨೮ ॥

ಲೋಭಾತ್ಪ್ರಮಾದಾನ್ಮೋಹಾಚ್ಚ ವ್ರತಭಂಗೋ ಯದಾ ಭವೇತ್ ।
ತದಾ ತ್ರಿರಾತ್ರಂ ನಾಶ್ನೀಯಾತ್ಕುರ್ಯಾದ್ವಾ ಕೇಶಮುಂಡನಂ ॥ ೨೯ ॥

ಪ್ರಾಯಶ್ಚಿತ್ತಮಿದಂ ಕೃತ್ವಾ ಪುನರೇವ ವ್ರತೀ ಭವೇತ್ ।
ಸಪ್ತೈವ ಯಾವತ್ಸಪ್ತಮ್ಯೋ ಭವಂತಿ ಚ ಖಗೇಶ್ವರ ॥ ೩೦ ॥

---

೨೬. ಸಪ್ತಮಿಯಲ್ಲಿ ಭಾಸ್ಕರನನ್ನು ಭಕ್ತಿಯಿಂದ ಪೂಜಿಸುವವನಿಗೆ ಬ್ರಹ್ಮ, ಇಂದ್ರ, ರುದ್ರ ಇವರ ಲೋಕಗಳಲ್ಲಿ ಎಲ್ಲ ಕಡೆಯಲ್ಲಿಯೂ ತಡೆಯಿಲ್ಲದೆ ಸಂಚರಿಸುವಂತಹ ಮಹಿಮೆಯುಂಟಾಗುತ್ತದೆ.

೨೭. ಅಯ್ಯಾ ವೀರನೇ! ಸಪ್ತಮೀ ವ್ರತವನ್ನು ಆಚರಿಸುವ ಮನುಷ್ಯನ ಕುಲದಲ್ಲಿ ಕುರುಡ, ಕುಷ್ಠರೋಗಿ, ನಪುಂಸಕ, ಅಂಗಹೀನ, ದ್ರವ್ಯಶೂನ್ಯನಾದ ದರಿದ್ರ ಇವರು ಎಂದೂ ಇರುವುದಿಲ್ಲ.

೨೮. ಅಯ್ಯಾ ಭಾರತವಂಶಜನೇ! ಕೇಳು; ಈ ವ್ರತವನ್ನು ಆಚರಿಸಿದರೆ ವಿದ್ಯೆ ಬೇಕಾದವನು ವಿದ್ಯೆಯನ್ನೂ, ಧನ ಬೇಕಾದವನು ಧನವನ್ನೂ, ಜ್ಞಾನಾರ್ಥಿಯು ಜ್ಞಾನವನ್ನೂ, ಭಾರ್ಯಾರ್ಥಿಯಾದವನು ರೂಪಸಂಪನ್ನೆಯಾದ ಸ್ತ್ರೀಯನ್ನೂ, ಪುತ್ರರನ್ನೂ ಪಡೆಯುವನು.

೨೯. ಅತ್ಯಾಶೆಯಿಂದಲೋ, ಮರವೆಯಿಂದಲೋ, ತಿಳಿಯದೆಯೋ, ವ್ರತಭಂಗವಾದರೆ ಆಗ ಪ್ರಾಯಶ್ಚಿತ್ತಾರ್ಥವಾಗಿ ಮೂರುದಿನ ಭೋಜನ ಮಾಡದೆ ಉಪವಾಸವಿದ್ದು ಆ ಮೇಲೆ ತಲೆಯನ್ನು ಕ್ಷೌರಮಾಡಿಸಿಕೊಳ್ಳಬೇಕು.

೩೦. ಈ ರೀತಿ ಪ್ರಾಯಶ್ಚಿತ್ತಮಾಡಿಕೊಂಡಮೇಲೆ ಪುನಃ ವ್ರತವನ್ನು ಮುಂದುವರಿಸಬೇಕು. ಅಯ್ಯಾ ಖಗೇಶ್ವರನೇ! ಅಲ್ಲಿಂದ ಮುಂದೆ ಏಳು ಸಪ್ತಮಿಗಳಾಗುವವರೆಗೂ ಬಿಡದೆ ಈ ವ್ರತವನ್ನು ಮಾಡಬೇಕು.

ಅಭ್ಯರ್ಚ್ಯ ಸೂರ್ಯಂ ಸಪ್ತಮ್ಯಾಂ ಮಾಲ್ಯಧೂಪಾದಿಭಿರ್ನರಃ ।
ಭೋಜಯಿತ್ವಾ ದ್ವಿಜಾನ್ ಶಕ್ತ್ಯಾ ಪ್ರಾಪ್ನುಯಾತ್ಸ್ವರ್ಗಮಕ್ಷಯಂ ॥ ೩೧ ॥

ಸಪ್ತಮ್ಯಾಂ ವಿಪ್ರಮುಖ್ಯೇಭ್ಯೋ ಹಿರಣ್ಯಂ ಯಃ ಪ್ರಯಚ್ಛತಿ ।
ಸ ತದಕ್ಷಯ್ಯಮಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥ ೩೨ ॥

ಇತೀದಂ ಕೀರ್ತಿತಂ ವೀರ ಸಪ್ತಮೀವ್ರತಮುತ್ತಮಂ ।
ಭೂಯ ಏವಾಭಿಧಾಸ್ಯಾಮಿ ಶೃಣುಷ್ವೈಕಮನಾ ನೃಪ ॥ ೩೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀಕಲ್ಪೇ
ಸೂರ್ಯಾರುಣಸಂವಾದೇ ಸಪ್ತಸಪ್ತಮೀ ನಾಮಅಷ್ಟಾಧಿಕ
ದ್ವಿಶತತಮೋಽಧ್ಯಾಯಃ

---

೩೧. ವ್ರತಮಾಡುವ ಮನುಷ್ಯನು ಪುಷ್ಪಧೂಪ ಮೊದಲಾದುವುಗಳಿಂದ ಸಪ್ತಮಿಯಲ್ಲಿ ಸೂರ್ಯನನ್ನು ಪೂಜಿಸಿ; ಶಕ್ತ್ಯನುಸಾರ ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನಮಾಡಿಸಿದರೆ ಅಕ್ಷಯವಾದ ಸ್ವರ್ಗವನ್ನು ಹೊಂದುವನು

೩೨. ಸಪ್ತಮಿಯಲ್ಲಿ ಬ್ರಾಹ್ಮಣಶ್ರೇಷ್ಠರಿಗೆ ಹಿರಣ್ಯದಾನಮಾಡುವವನು ಅಕ್ಷಯವಾದ ಹಿರಣ್ಯವನ್ನು ಹೊಂದುತ್ತಾನೆ. ಅಲ್ಲದೆ ಸೂರ್ಯಲೋಕಕ್ಕೆ ಹೋಗುತ್ತಾನೆ.

೩೩. ಅಯ್ಯಾ ವೀರನಾದ ರಾಜನೇ! ಉತ್ತಮವಾದ ಈ ಸಪ್ತಮೀವ್ರತದಲ್ಲಿ ಕೆಲವನ್ನು ಹೇಳಿದುದಾಯಿತು. ಮುಂದೆಯೂ ಅದನ್ನೇ ಹೇಳುವೆನು ಒಂದೇ ಮನಸ್ಸುಳ್ಳವನಾಗಿ ಕೇಳು " ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೂರ್ಯಾರುಣರ ಸಂವಾದದಲ್ಲಿ ಸಪ್ತಸಪ್ತಮೀ ವ್ರತವರ್ಣನೆಯೆಂಬ
ಇನ್ನೂರೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ

## ಬ್ರಾಹ್ಮೇ ಪರ್ವಣಿ

## ನವಾದಿಕದ್ವಿಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಕಾಲಂ ಕ್ಷಪೇದ್ಗೋಮಯಾಶೀ ಶುಕ್ಲಾ ದ್ವಾದಶ ಸಪ್ತಮೀಃ ।
ಅಥವಾ ಯಾವಕಾಹಾರಃ ಶೀರ್ಣಪರ್ಣಾಶನೋಽಪಿ ವಾ ॥ ೧ ॥

ಕ್ಷೀರಾಶೀ ಚೈಕಭಕ್ತೋ ವಾ ಭಿಕ್ಷಾಹಾರೋಥ ವಾ ಪುನಃ ।
ಜಲಾಹಾರೋಽಪಿ ವಾ ವಿದ್ವಾನ್ ಪೂಜಯಿತ್ವಾ ದಿವಾಕರಂ ॥ ೨ ॥

---

### ಇನ್ನೂರಒಂಭತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಮುಂದುವರಿಸಿ ಹೇಳುತ್ತಾರೆ—ವರ್ಷದ ಹನ್ನೆರಡು ಶುಕ್ಲಪಕ್ಷಗಳಲ್ಲಿ ಬರುವ ಹನ್ನೆರಡು ಸಪ್ತಮಿಗಳಲ್ಲಿಯೂ ಗೋಮಯವನ್ನು ಸೇವಿಸಿ ಕಾಲಕಳೆಯಬೇಕು. ಅಥವಾ ಯಾವಕಧಾನ್ಯದಿಂದ ಪಾಕಮಾಡಿದ ಆಹಾರವನ್ನಾಗಲಿ, ಅಥವಾ ತರಗಲೆಗಳನ್ನಾಗಲಿ ತಿಂದುಕೊಂಡು ಇರಬೇಕು.

೨. ಅಷ್ಟು ಮಾಡಲು ಸಾಗದಿದ್ದರೆ ಕ್ಷೀರವನ್ನು ಸೇವಿಸಬಹುದು, ಹಾಗೂ ಸಾಧ್ಯವಾಗದಿದ್ದರೆ ಒಪ್ಪೊತ್ತು ಭೋಜನವನ್ನಾಗಲಿ, ಇಲ್ಲವೇ ಭಿಕ್ಷಾನ್ನ ಸೇವನೆಯನ್ನಾಗಲಿ ಮಾಡಬಹುದು, ಅಥವಾ ಜಲಾಹಾರದಿಂದ ಕಾಲಕಳೆಯಬೇಕು.

ಪುಷ್ಪೋಪಹಾರೈರ್ವಿವಿಧೈಃ ಪದ್ಮಸೌಗಂಧಿಕೋತ್ಪಲೈಃ ।
ನಾನಾಪ್ರಕಾರೈರ್ಗಂಧೈಶ್ಚ ಧೂಪೈರ್ಗುಗ್ಗುಲುಚಂದನೈಃ　　॥ ೩ ॥

ದಿವ್ಯಗಂಧಪಾಯಸಾದ್ಯೈರ್ವಿಚಿತ್ರೈಃ ಸುವಿಭೂಷಣೈಃ ।
ಅರ್ಚಯಿತ್ವಾ ದ್ವಿಜಾನ್ ಶ್ರೇಷ್ಠಾನ್ ಹಿರಣ್ಯಾನ್ನಾದಿಭಿರ್ನರಃ　　॥ ೪ ॥

ನ ಸ ತತ್ಫಲಮಾಪ್ನೋತಿ ಕ್ರತುಭಿರ್ಭೂರಿದಕ್ಷಿಣೈಃ ।
ಯದೇವ ತಪ್ಯತೇ ವೀರ ಪ್ರಾಪ್ಯತೇ ಕೇವಲಂ ರವೇಃ　　॥ ೫ ॥

ವಿಮಾನವರಮಾರೂಢಃ ಸೂರ್ಯಲೋಕೇ ಮಹೀಯತೇ ।
ತತಃ ಪುಣ್ಯಕ್ಷಯಾದ್ರಾಜನ್ ಕುಲೇ ಮಹತಿ ಜಾಯತೇ　　॥ ೬ ॥

ಏವಂ ಭಕ್ತ್ಯಾ ವಿವಸ್ವಂತಂ ಪ್ರತಿಮಾಸಂ ಸಮಾಹಿತಃ ।
ಪೂಜಯೇದ್ವಿಧಿವದ್ಭಕ್ತ್ಯಾ ನಾಮಾನಿ ಪರಿಕೀರ್ತಯೇತ್　　॥ ೭ ॥

---

೩–೪. ತಿಳಿದವನು ಪದ್ಮ, ಸೌಗಂಧಿಕ, ನೈದಿಲೆ ಮೊದಲಾದ ಬಗೆಬಗೆಯ ಪುಷ್ಪೋಪಹಾರಗಳಿಂದಲೂ, ನಾನಾಪ್ರಕಾರವಾದ ಸುಗಂಧದ್ರವ್ಯಗಳಿಂದಲೂ, ಗುಗ್ಗುಳ, ಚಂದನ ಇವುಗಳ ಧೂಪದಿಂದಲೂ, ನಾನಾಪುಷ್ಪಗಳು, ದಿವ್ಯವಾದ ಗಂಧ, ವಿಚಿತ್ರವಾದ ಆಭರಣಗಳು, ಇವುಗಳಿಂದ ಪೂಜಿಸಿ ಧೂಪದೀಪಗಳ ಸಮರ್ಪಣೆಯಿಂದಲೂ, ಪಾಯಸ ಅನ್ನ ಇವುಗಳ ನಿವೇದನದಿಂದಲೂ ಸೂರ್ಯನನ್ನು ಆರಾಧಿಸಿ ಅವನ ಪ್ರೀತ್ಯರ್ಥವಾಗಿ ದ್ವಿಜರನ್ನು ಸತ್ಕರಿಸಬೇಕು.

೫. ಹೀಗೆ ಆರಾಧಿಸುವುದರಿಂದ ಹೊಂದುವಂತಹ ಫಲವನ್ನು; ಸಮೃದ್ಧಿಯಾದ ಹಿರಣ್ಯದಾನ ಅನ್ನದಾನಗಳಿಂದ ಬಹುದಕ್ಷಿಣೆಗಳುಳ್ಳ ಯಜ್ಞಮಾಡುವುದರಿಂದಲೂ ಕೂಡ ಹೊಂದಲಾಗುವುದಿಲ್ಲ. ಈ ಲೋಕವಲ್ಲಿ ಅವನು ಮಾಡಿದ ಪೂಜೆಯೇ ಒಂದು ಬಗೆಯ ತಪಸ್ಸಿನಂತಾಗಿ ಸೂರ್ಯನಿಂದಲೇ ಈ ಫಲವನ್ನೆಲ್ಲಾ ಹೊಂದುತ್ತಾನೆ.

೬. ಅಲ್ಲದೆ ಶ್ರೇಷ್ಠವಾದ ವಿಮಾನವನ್ನೇರಿ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ. ಎಲೈ ರಾಜನೇ ! ಕೇಳು ; ಆ ಸೂರ್ಯಲೋಕವಾಸರೂಪವಾದ ಪುಣ್ಯಫಲವು ಮುಗಿದ ಮೇಲೆ ಭೂಲೋಕಕ್ಕೆ ಬಂದು ಉತ್ತಮವಾದ ಕುಲದಲ್ಲಿ ಜನಿಸುತ್ತಾನೆ.

೭. ಈ ರೀತಿ ಏಕಾಗ್ರಚಿತ್ತನಾಗಿ ಭಕ್ತಿಯಿಂದ ಸೂರ್ಯನನ್ನು ಪ್ರತಿತಿಂಗಳೂ ವಿಧಿಪ್ರಕಾರ ಪೂಜಿಸಬೇಕು. ಹಾಗೆ ಪೂಜಿಸುವಾಗ ಕ್ರಮವಾಗಿ ಇಲ್ಲಿ ಸೂಚಿಸುವ ನಾಮಗಳನ್ನು ಕೀರ್ತನಮಾಡಬೇಕು.

ಚೈತ್ರಿಕೇ ಮಾಸಿ ವಿಷ್ಣುಶ್ಚ ಮಾಧವೇ ಹ್ಯರ್ಯಮೇತಿ ವೈ ।
ಶುಕ್ರೇ ವಿವಸ್ವಾನ್ಮಾಸೇತು ಶುಚೌ ಮಾಸೇ ದಿವಾಕರ ॥ ೮ ॥

ಪರ್ಜನ್ಯಃ ಶ್ರಾವಣೇ ಮಾಸಿ ನಭಸ್ಯೇ ವರುಣಸ್ತಥಾ ।
ಮಾರ್ತಂಡೇತಿ ಇಷೇ ಜ್ಞೇಯಃ ಕಾರ್ತಿಕೇ ಭಾರ್ಗವ ಪುನಃ ॥ ೯ ॥

ಮಾರ್ಗಶೀರ್ಷೇಽಪಿ ಮಿತ್ರಸ್ತು ಕೀರ್ತಿತಃ ಸತತಂ ಬುಧೈಃ ।
ಪೂಷಾ ಪೌಷೇ ತು ವೈ ಮಾಸೇ ಪೂಜನೀಯಃ ಪ್ರಯತ್ನತಃ ॥ ೧೦ ॥

ಮಾಘೇ ಭಗೇತಿ ವಿಜ್ಞೇಯಸ್ತ್ವಷ್ಟಾ ಚೈವಾಥ ಫಾಲ್ಗುನೇ ।
ಏವಂ ಕ್ರಮೇಣ ನಾಮಾನಿ ಕೀರ್ತಯೇತ್ಪ್ರೀತಯೇ ರವೇಃ ॥ ೧೧ ॥

ಧೂಪಾರ್ಚನವಿಧಿಮಿಮಂ ಸಪ್ತಮ್ಯಾಂ ಸು ಸಮಾಹಿತಃ ।
ಯಃ ಕರೋತಿ ನರೋ ಭಕ್ತ್ಯಾ ಸ ಯಾತಿ ಪರಮಾಂ ಗತಿಂ ॥ ೧೨ ॥

---

೮. ಚೈತ್ರಮಾಸದಲ್ಲಿ ವಿಷ್ಣು ಎಂತಲೂ, ವೈಶಾಖದಲ್ಲಿ ಅರ್ಯಮಾ ಎಂತಲೂ ಜ್ಯೇಷ್ಠದಲ್ಲಿ ವಿವಸ್ವಂತ ಎಂತಲೂ, ಆಷಾಢಮಾಸದಲ್ಲಿ ದಿವಾಕರ ಎಂಬದಾಗಿಯೂ ಕೀರ್ತಿಸಬೇಕು.

೯. ಬಳಿಕ ಶ್ರಾವಣಮಾಸದಲ್ಲಿ ಪರ್ಜನ್ಯನೆಂದೂ, ಭಾದ್ರಪದದಲ್ಲಿ ವರುಣನೆಂದೂ, ಆಶ್ವಯುಜಮಾಸದಲ್ಲಿ ಮಾರ್ತಂಡನೆಂದೂ, ಕಾರ್ತಿಕಮಾಸದಲ್ಲಿ ಭಾರ್ಗವನೆಂದೂ ಕೀರ್ತಿಸಬೇಕು.

೧೦. ಮಾರ್ಗಶಿರಮಾಸದಲ್ಲಿ ಮಿತ್ರನೆಂದೂ, ಪೌಷಮಾಸದಲ್ಲಿ ಪೂಷಾ ಎಂದೂ ಬುಧನು ಪೂಜಿಸಬೇಕು.

೧೧-೧೨. ಮಾಘಮಾಸದಲ್ಲಿ ಭಗನೆಂದೂ, ಫಾಲ್ಗುಣದಲ್ಲಿ ತ್ವಷ್ಟನೆಂದೂ ಕೀರ್ತಿಸಿ ಪ್ರಯತ್ನದಿಂದ ಪೂಜಿಸಬೇಕು. ಸೂರ್ಯಪ್ರೀತ್ಯರ್ಥವಾಗಿ ಆ ಹೆಸರುಗಳನ್ನು ಈ ಕ್ರಮದಿಂದ ಹೇಳಬೇಕು. ಯಾವ ಮನುಷ್ಯನು ಹನ್ನೆರಡು ಶುಕ್ಲಸಪ್ತಮಿಯಲ್ಲಿಯೂ ಭಕ್ತಿಯಿಂದ ಏಕಾಗ್ರಚಿತ್ತನಾಗಿ ಯಥೋಕ್ತವಾದ ಈ ನಾಮಸಂಕೀರ್ತನಪೂರ್ವಕ ಈ ಧೂಪಾರ್ಚನೆಯ ವಿಧಿಯನ್ನು ಆಚರಿಸುವನೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

**ಏತತ್ತೇ ಸರ್ವಮಾಖ್ಯಾತಂ ಯತೋ ಗುಹ್ಯತಮಂ ವಿಭೋಃ ।**
**ನೈವ ದೇಯಮಶಿಷ್ಯಾಯ ನಾಭಕ್ತಾಯ ಕದಾಚನ ॥ ೧೩ ॥**

**ನ ಚ ಪಾಪಕೃತೇ ದೇಯಂ ನ ದೇಯಂ ನಾಸ್ತಿಕಾಯ ವಾ ।**
**ಕೃತಘ್ನೇ ನಾಸ್ತಿಕೇ ವೀರ ನ ದೇಯಂ ಕ್ರೂರಕರ್ಮಣಿ ॥ ೧೪ ॥**

**ಯ ಇದಂ ಶೃಣುಯಾನ್ನಿತ್ಯಂ ಸಪ್ತಮೀವ್ರತಮುತ್ತಮಂ ।**
**ಪಠೇದ್ಯಶ್ಚಾಪಿ ನಿರತಃ ಶ್ರದ್ಧಯಾ ಪರಯಾನ್ವಿತಃ ॥ ೧೫ ॥**

**ಇಹಲೋಕೇ ಸುಖಂ ಪ್ರಾಪ್ಯ ಸೂರ್ಯಲೋಕೇ ಮಹೀಯತೇ ।**
**ಪುಣ್ಯಕ್ಷಯಾದಿಹಾಗತ್ಯ ರಾಜಾ ಭವತಿ ಭೂತಲೇ ॥ ೧೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಬ್ರಾಹ್ಮೇಪರ್ವಣಿ ಸೂರ್ಯಾರುಣ ಸಂವಾದೇ ಪ್ರತಿಮಾಸ ಸಪ್ತಮೀವ್ರತ ವರ್ಣನಂ ನಾಮ ನವಾಧಿಕ ದ್ವಿಶತತಮೋಽಧ್ಯಾಯಃ**

---

೧೩. ಸೂರ್ಯನಿಗೆ ಸಂಬಂಧಿಸಿದ ಅತ್ಯಂತ ಗೋಪ್ಯವಾದ ಈ ವಿಷಯವನ್ನು ನಿನಗೆ ಹೇಳಿದ್ದೇನೆ. ಇದನ್ನು ಶಿಷ್ಯನಲ್ಲದವನಿಗೂ ಮತ್ತು ಸೂರ್ಯಭಕ್ತನಲ್ಲದವನಿಗೂ ಯಾವಾಗಲೂ ಉಪದೇಶಿಸಬಾರದು.

೧೪. ಮತ್ತು ಪಾಪಿಷ್ಠನಾದವನಿಗೂ, ನಾಸ್ತಿಕನಾದವನಿಗೂ ಹೇಳಿಕೊಡ ಬಾರದು. ಎಲೈ ವೀರನೇ! ಕೃತಘ್ನನೂ, ನಾಸ್ತಿಕನೂ, ಕ್ರೂರಕರ್ಮಿಯೂ ಆದವನಿಗೆ ಎಂದಿಗೂ ತಿಳಿಸಬಾರದು.

೧೫. ಈ ಉತ್ತಮವಾದ ಸಪ್ತಮೀವ್ರತವಿಚಾರವನ್ನು ಶ್ರವಣಮಾಡುವವನೂ, ಅಧಿಕ ಶ್ರದ್ಧಾಯುಕ್ತನಾಗಿ ಪಠನಮಾಡುವುದರಲ್ಲಿ ನಿರತನಾದವನೂ, ಹೊಂದುವ ಫಲವನ್ನು ಹೇಳುವೆನು ಕೇಳು.

೧೬. ಹಾಗೆ ಮಾಡುವ ಪ್ರತಿಯೊಬ್ಬನೂ ಅವೆಲ್ಲಕ್ಕೂ ಫಲವಾಗಿ ಈ ಲೋಕ ದಲ್ಲಿ ಸುಖಹೊಂದುವುದಲ್ಲದೆ ಸೂರ್ಯಲೋಕಕ್ಕೆ ಹೋಗಿ ಅಲ್ಲಿ ಪೂಜಿತನಾಗುತ್ತಾನೆ. ಸೂರ್ಯಲೋಕವಾಸದ ಪುಣ್ಯಕ್ಷಯವಾದ ಮೇಲೆ ಭೂಲೋಕದಲ್ಲಿ ಜನಿಸಿ ರಾಜ ನಾಗುತ್ತಾನೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೂರ್ಯಾರುಣರ ಸಂವಾದದಲ್ಲಿ ಪ್ರತಿಮಾಸ ಸಪ್ತಮೀ ವರ್ಣನೆಯೆಂಬ ಇನ್ನೂರೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದಶಾಧಿಕದ್ವಿಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಇತ್ಯೇಷ ಸಪ್ತಮಿಾಕಲ್ಪಃ ಸಮಾಸಾತ್ಕಥಿತಸ್ತವ ।
ವಿಸ್ತರಾತ್ತೇ ಪುನರ್ವಚ್ಮಿ ಶೃಣು ಚೈಕಮನಾ ವಿಭೋ ॥ ೧ ॥

ಫಾಲ್ಗುನಾಮಲಪಕ್ಷಸ್ಯ ಷಷ್ಠ್ಯಾಂ ಚ ಸಮುಪೋಷಿತಃ ।
ಪೂಜಯೇದ್ಭಾಸ್ಕರಂ ಸ್ನಾತ್ವಾ ಗಂಧಪುಷ್ಪವಿಲೇಪನೈಃ ॥ ೨ ॥

ಅರ್ಕಪುಷ್ಪೈರ್ಮಹಾಬಾಹೋ ಗುಗ್ಗುಲೇನ ಸುಗಂಧಿನಾಂ ।
ಶ್ವೇತೇನ ಕರವೀರೇಣ ಚಂದನೇನ ದಿವಾಕರಂ ॥ ೩ ॥

---

## ಇನ್ನೂರಹತ್ತನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಮುಂದುವರಿಸಿ ಹೇಳುವವರಾಗಿ ಅಯ್ಯಾ ತತ್ವಾವಧಾರಣ ಸಮರ್ಥನಾದ ವಿಭುವೇ! ಕೇಳು ; ಹೀಗೆ ಸಪ್ತಮಿಗಳ ಕಲ್ಪವನ್ನು ನಿನಗೆ ಸಂಕ್ಷೇಪವಾಗಿ ಹೇಳಿದುದಾಯಿತು. ಪುನಃ ಅದನ್ನು ವಿಸ್ತರಿಸಿ ಹೇಳುತ್ತೇನೆ. ಅವಧಾನಪೂರ್ವಕವಾಗಿ ಕೇಳು.

೨-೩. ಫಾಲ್ಗುನಮಾಸದ ಶುಕ್ಲಪಕ್ಷದ ಷಷ್ಠಿಯಲ್ಲಿ ಉಪವಾಸ ಮಾಡುವುದು ಈ ವ್ರತದ ಸಾರ ಈ ವ್ರತಿಯು ಷಷ್ಠಿಯಲ್ಲಿ ಸ್ನಾನಮಾಡಿ ಭಾಸ್ಕರನನ್ನು ಚಂದನಗಂಧದ ವಿಲೇಪನದಿಂದಲೂ, ಎಕ್ಕ, ಬಿಳಿಯಕಣಿಗಲೆ ಮುಂತಾದ ಪುಷ್ಪ ಸಮರ್ಪಣದಿಂದಲೂ, ಗುಗ್ಗುಳಧೂಪದಿಂದಲೂ ಆರಾಧಿಸಿ, ಸೂರ್ಯನಿಗೆ ಪ್ರಿಯವಾದ ಗುಡೋದಕವನ್ನು ನಿವೇದನಮಾಡಬೇಕು.

**ಗುಡೋದಕೇನ ನೈವೇದ್ಯಂ ನಿವೇದ್ಯಂ ಪ್ರೀತಯೇ ರವೇಃ ।**
**ಇತಿ ಸಂಪೂಜ್ಯಾಹ್ನಿ ಭಾನುಂ ರಾತ್ರೌ ತಸ್ಯಾಗ್ರತಃ ಸ್ವಪೇತ್ ॥**
**ಜಪೇನ್ಮಂತ್ರಂ ಪರಂ ಜಾಪ್ಯಂ ವಿನಿದ್ರಃ ಸಂತತಂ ಬುಧಃ ॥ ४ ॥**

**॥ ಶತಾನೀಕ ಉವಾಚ ॥**

**ಕಿಂ ತತ್ಪರಂ ಭಗವತಃ ಪ್ರಿಯಂ ಜಾಪ್ಯಮನುತ್ತಮಂ ।**
**ಜಪ್ತವ್ಯಂ ಯತ್ಪರೈರ್ಭಾನೋಃ ಭಕ್ತ್ಯಾ ತಸ್ಯಾಗ್ರತೋ ನರಃ ॥ ೫ ॥**

**ತನ್ಮೇ ಬ್ರೂಹಿ ತಥಾ ಮಂತ್ರಾನ್ ಧೂಪದೀಪಾನ್ವಿಶೇಷತಃ ।**
**ಯೇನಾಹಂ ತಂ ಜಪನ್ನಿಷ್ಯಂ ಪೂಜಯಾಮಿ ದಿವಾಕರಂ ॥ ೬ ॥**

**॥ ಸುಮಂತುರುವಾಚ ॥**

**ವಚ್ಮಿ ತೇ ಭರತಶ್ರೇಷ್ಠ ಸಮಾಸಾನ್ನ ತು ವಿಸ್ತರಾತ್ ॥ ೭ ॥**

---

೪. ಹಗಲು ಈ ಪ್ರಕಾರ ರವಿಯನ್ನು ಪೂಜಿಸಿ, ಆ ರಾತ್ರಿ ತಾನು ಪೂಜಿಸಿದ ಸೂರ್ಯಪ್ರತಿಮೆಯ ಸಮ್ಮುಖದಲ್ಲಿ ಶಯನಮಾಡಬೇಕು. ವಿದ್ವಾಂಸನಾದವನು ಪ್ರತಿಮೆಯ ಮುಂದೆ ಹಾಗೆ ಶಯನಮಾಡಿದಾಗ ನಿದ್ದೆಮಾಡದೆ ಎಚ್ಚರವಾಗಿರುತ್ತಾ ಶ್ರೇಷ್ಠವೂ, ಜಪಿಸಲು ಯೋಗ್ಯವೂ ಆದ ಮಂತ್ರವನ್ನು ಯಾವಾಗಲೂ ಜಪಿಸಬೇಕು" ಎಂದನು.

೫-೬. ಆಗ ಶತಾನೀಕನು ಸುಮಂತುಮುನಿವರ್ಯರನ್ನು ಪ್ರಶ್ನಿಸುವವನಾಗಿ " ಸ್ವಾಮಿ! ಮನುಷ್ಯರು ಭಾನುಪ್ರತಿಮೆಯ ಎದುರಿಗೆ ಮಲಗಿಕೊಂಡು ಹೆಚ್ಚಾದ ಭಕ್ತಿಯಿಂದ ಯಾವ ಜಪಮಾಡಬೇಕು? ಎಂಬುದನ್ನೂ ಮತ್ತು ಆ ಮಂತ್ರಗಳನ್ನೂ ಆ ದಿವಸದ ಪೂಜೆಗೆ ವಿಶೇಷವೆನಿಸಿವ ಧೂಪದೀಪಾದಿಗಳನ್ನೂ ನನಗೆ ದಯವಿಟ್ಟು ಹೇಳಿ. ಜಪಾರ್ಹವಾದ ಆ ಮಂತ್ರವನ್ನು ನಾನೂ ಜಪಿಸುತ್ತೇನೆ, ಮತ್ತು ದಿವಾಕರನನ್ನು ಆ ಪ್ರಕಾರ ಪೂಜಿಸುತ್ತೇನೆ " ಎಂದನು.

೭. ಬಳಿಕ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳುತ್ತಾರೆ—ಎಲೈ ಭರತಕುಲಶ್ರೇಷ್ಠನೇ! ಆ ವಿಚಾರವನ್ನು ವಿಸ್ತಾರಮಾಡದೆ ಸಂಕ್ಷೇಪವಾಗಿ ನಿನಗೆ ಹೇಳುವುದಾದರೆ ಮುಖ್ಯವಾಗಿ ಏಕಾಗ್ರಚಿತ್ತತೆಯುಳ್ಳವನಾಗಿ ಷಡಕ್ಷರ ಮಂತ್ರದಿಂದ ಎಲ್ಲವನ್ನೂ ಮಾಡಬೇಕು ಎನ್ನಬಹುದು..

ಷಡಕ್ಷರೇಣ ಮಂತ್ರೇಣ ಕುರ್ಯಾತ್ಸರ್ವಂ ಸಮಾಹಿತಃ ।
ಜಪಂ ಹೋಮಂ ತಥಾ ಪೂಜಾಂ ಶತಜಪ್ಯೇನ ಸರ್ವದಾ ॥ ೮ ॥

ಸಾವಿತ್ರ್ಯಾ ಚ ಜಪಂ ಪೂರ್ವಂ ಕೃತ್ವಾ ಶತಸಹಸ್ರಶಃ ।
ಪಶ್ಚಾತ್ಸರ್ವಂ ಪ್ರಕುರ್ವೀತ ಜಪಾದಿಕಮನಾಕುಲಂ ॥ ೯ ॥

ಓಂ ಭೋಃ ಸಾವಿತ್ರೀ ಭಾಸ್ಕರಾಯ ಸಹಸ್ರರಶ್ಮಿಂ ಧೀಮಹೀ ।
ತೇ ನ ಸೂರ್ಯಃಪ್ರಬೋದಯಾತ್ ॥ ೧೦ ॥

ಮಂತ್ರ ಏಷ ಪರಃ ಪ್ರೋಕ್ತಃ ಸಪ್ತಮ್ಯಾಂ ಭಾನುನಾ ಸ್ವಯಂ ।
ಜಪ್ತ್ವಾ ಸಕೃದ್ಭವೇತ್ಪೂತೋ ಮಾನವೋ ನಾತ್ರ ಸಂಶಯಃ ॥ ೧೧ ॥

ಪ್ರಭಾತೇ ತ್ವಥ ಸಪ್ತಮ್ಯಾಂ ಜಪನ್ನಿಯತಮಾನಸಃ ।
ಪೂಜಯೇದ್ಭಾಸ್ಕರಂ ಭಕ್ತ್ಯಾ ಪೂರ್ವೋಕ್ತವಿಧಿನಾ ನೃಪ ॥ ೧೨ ॥

---

೮–೯. ಮೊದಲು ಲಕ್ಷಸಂಖ್ಯೆಯಲ್ಲಿ ಸೂರ್ಯಗಾಯತ್ರೀ ಜಪಮಾಡಿ ಶತಜಪ್ಯವಾದ ಮಂತ್ರದಿಂದ ಜಪವನ್ನೂ, ಅನಂತರ ಹೋಮವನ್ನೂ, ಪೂಜೆಯನ್ನೂ ಮಾಡಬೇಕು. ಮೊದಲು ಆ ಗಾಯತ್ರೀಜಪ ಮಾಡುವ ಕಾಲದಲ್ಲಿ ಮನಸ್ಸಿನಲ್ಲಿ ವ್ಯಾಕುಲತೆಯಿಲ್ಲದೆ ಶಾಂತತೆಯಿಂದ ಇರಬೇಕು.

೧೦ " ಓಂ ಭೋಃ ಸಾವಿತ್ರೀ ಭಾಸ್ಕರಾಯ ವಿದ್ಮಹೇ ಸಹಸ್ರರಶ್ಮಯೇ ಚ ಧೀಮಹಿತೇನ ಸೂರ್ಯಃ ಪ್ರಚೋದಯಾತ್'' ಇದು ಸಪ್ತಮಿಯದಿನ ಮಾಡತಕ್ಕ ಶ್ರೇಷ್ಠವಾದ ಜಪಮಂತ್ರವೆಂದು ಭಾನುವು ತಾನೇ ಸಾಕ್ಷಾತ್ತಾಗಿ ಹೇಳಿದ್ದಾನೆ.

೧೧. ಮನುಷ್ಯನು ಈ ಮಂತ್ರವನ್ನು ಒಂದುಸಾರಿ ಜಪಮಾಡಿದರೂ ಶುದ್ಧನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೧೨. " ಅಯ್ಯಾ ರಾಜನೇ! ಕೇಳು; ಈರೀತಿ ಸಪ್ತಮೀ ಪ್ರಾತಃಕಾಲ ಮನೋನಿಗ್ರಹಮಾಡಿಕೊಂಡು ಜಪಮಾಡಿ, ಬಳಿಕ ಪೂರ್ವೋಕ್ತವಿಧಾನದಿಂದ ಸೂರ್ಯನನ್ನು ಭಕ್ತಿಯಿಂದ ಪೂಜಿಸಬೇಕು. ಅನಂತರ ತನ್ನ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಭಕ್ತಿಯಿಂದ ಭೋಜನಮಾಡಿಸಬೇಕು.

ಶ್ರದ್ಧಯಾ ಭೋಜಯೇಚ್ಚಾಪಿ ಬ್ರಾಹ್ಮಣಾನ್ ಶಕ್ತಿತೋ ನೃಪ ।
ದಿವ್ಯಾನ್ ಭೌಮಾಂಶ್ಚ ವಿಧಿವದ್ಭಕ್ಷ್ಯಭೋಜ್ಯೈರನೇಕಶಃ ॥ ೧೩ ॥

ವಿತ್ತಶಾಠ್ಯಂ ನ ಕುರ್ವೀತ ಭೋಜಕಾಂಶ್ಚ ಪ್ರಭೋಜಯೇತ್ ।
ನ ಭೋಜಯೇತ್ತಥಾSಸೌರಾನ್ ಸೌರಾನ್ಯತ್ನೇನ ಭೋಜಯೇತ್ ॥ ೧೪ ॥

॥ ಶತಾನೀಕ ಉವಾಚ ॥

ಕೇ ಭೋಜ್ಯಾ ಕೇ ನ ವಾ ಭೋಜ್ಯಾ ಬ್ರಾಹ್ಮಣಾ ಬ್ರಹ್ಮವಿತ್ತಮ ।
ಕೇಷು ಚಿತ್ತೇಷು ಸಪ್ತಮ್ಯಾಂ ದೇವದೇವೋ ದಿವಾಕರಃ ॥ ೧೫ ॥

॥ ಸುಮಂತುರುವಾಚ ॥

ಘಟೀ ಭೋಜ್ಯೋ ಭವೇದ್ವಿಪ್ರಃ ಸಪ್ತಮೀಂ ಕುರುತೇ ಚ ಯಃ ।
ಸೌರಭಿನ್ನೇಷ್ವಭೋಕ್ತಾ ಯಃ ಯಶ್ಚ ಭುಕ್ತೇ ದಿವಾಕರೇ ॥ ೧೬ ॥

---

೧೩. ಬ್ರಾಹ್ಮಣರು ಎಂದರೆ ವಿಧಿಯಂತೆ ದಿವ್ಯಬ್ರಾಹ್ಮಣರು, ಭೌಮಬ್ರಾಹ್ಮಣರು ಇವರುಗಳನ್ನು ಆಹ್ವಾನಮಾಡಿ ಅನೇಕ ಬಗೆಯ ಭಕ್ಷ್ಯಭೋಜ್ಯಗಳಿಂದ ಭೋಜನಮಾಡಿಸಬೇಕು.

೧೪. ದ್ರವ್ಯಾನುಕೂಲವಿದ್ದರೂ ವೆಚ್ಚಮಾಡಲು ಕೃಪಣತೆ ಮಾಡಬಾರದು. ದಿವ್ಯರೂ, ಭೌಮರೂ ಅಲ್ಲದ ಭೋಜಕರಿಗೂ ಭೋಜನಮಾಡಿಸಬಹುದು. ಸೌರರಲ್ಲದವರನ್ನು ಭೋಜನಕ್ಕೆ ಕರೆಯಬಾರದು. ಪ್ರಯತ್ನಪಟ್ಟು ಸೌರರಿಗೇ ಭೋಜನಮಾಡಿಸಬೇಕು ” ಎಂದನು.

೧೫. ಆಗ ಶತಾನೀಕರಾಜನು ಸುಮಂತುಮುನಿವರ್ಯರನ್ನು ಕೇಳುತ್ತಾನೆ— “ ಎಲೈ ಬ್ರಹ್ಮಜ್ಞನಾದ ವಿಪ್ರೋತ್ತಮನೇ! ಭೋಜನಕ್ಕೆ ಕರೆಯಲು ಯಾವ ಬ್ರಾಹ್ಮಣರು ಅರ್ಹರು ? ಯಾವ ಬ್ರಾಹ್ಮಣರು ಭೋಜನಕ್ಕೆ ಕರೆಯಲು ಅರ್ಹರಲ್ಲ ? ಸಪ್ತಮಿಯಲ್ಲಿ ಯಾರ ಚಿತ್ತದಲ್ಲಿ ದೇವದೇವನಾದ ದಿವಾಕರನು ಸನ್ನಿಹಿತನಾಗಿರುತ್ತಾನೆ ಎಂಬುದನ್ನು ಹೇಳು ” ಎಂದನು.

೧೬. ಆಗ ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳುತ್ತಾರೆ—ಸಪ್ತಮೀ ವ್ರತವನ್ನು ಆಚರಿಸುವವನಾಗಿಯೂ ತ್ರಯೀ ವಿದ್ಯಾಭ್ಯಾಸಮಾಡುವವರಾದ ಘಟಾ ಎಂಬ ಶಿಷ್ಯವೃಂದವುಳ್ಳವನಾಗಿ ಆ ಕಾರಣ ಘಟೀ ಎನಿಸಿಕೊಂಡವ

ಏತೇ ಭೋಜ್ಯಾ ದ್ವಿಜಾ ರಾಜನ್ನಾದಿತ್ಯೇನ ಸಮಾಸತಃ ।
ಪ್ರೋಕ್ತಾಃ ಕುರುಕುಲಶ್ರೇಷ್ಠ ತಥಾಽಭೋಜ್ಯಾನ್ ಶೃಣುಷ್ವ ವೈ ॥ ೧೭ ॥

ಸಭಾರ್ಯಃ ಸಪತಿರ್ಯಸ್ತು ಕುಷ್ಠರೋಗೈರ್ಹತಶ್ಚ ಯಃ ।
ಯಶ್ಚಾನ್ಯದೇವತಾಭಕ್ತಸ್ತಥಾ ನಕ್ಷತ್ರಸೂಚಕಃ ॥ ೧೮ ॥

ಪರಾಪವಾದನಿರತೋ ಯಶ್ಚ ದೇವಲಕಶ್ಚ ಸ್ತಥಾ ।
ಏತೇಽ ಭೋಜ್ಯಾಃ ಸವಿತ್ರಾ ತು ಸ್ವಯಂ ದೇವೇನ ಚಿಂತಿತಾಃ ॥ ೧೯ ॥

॥ ಶತಾನೀಕ ಉವಾಚ ॥

ಯೇ ಭೋಜ್ಯಾ ಬ್ರಾಹ್ಮಣಾಃ ಪ್ರೋಕ್ತಾಃ ಯೇ ಚಾಭೋಜ್ಯಾ ದ್ವಿಜೋತ್ತಮ ।
ಏತೇಷಾಂ ಲಕ್ಷಣಂ ಬ್ರೂಹಿ ಸರ್ವೇಷಾಂ ವೈ ಸಮಾಹಿತಃ ॥ ೨೦ ॥

---

ನಾಗಿಯೂ ಇರುವ ಬ್ರಾಹ್ಮಣನಿಗೆ ಭೋಜನಮಾಡಿಸಬೇಕು. ಮತ್ತು ಅವರು ಸೌರರಲ್ಲದವರ ಮನೆಯಲ್ಲಿ ಭೋಜನಮಾಡದೆ ದಿವಾಕರ ಭಕ್ತರಾದಸೌರರ ಮನೆಯಲ್ಲಿ ಮಾತ್ರ ಭೋಜನಮಾಡುವ ನಿಯಮವನ್ನು ಅನುಸರಿಸುವಂಥವರಾಗಿರಬೇಕು.

೧೭. ಅಂತಹ ಬ್ರಾಹ್ಮಣರನ್ನು ಆಹ್ವಾನಿಸಿ ಸೂರ್ಯಪ್ರತಿಮೆಗೆ ನಿವೇದನ ಮಾಡುವಾಗಲೇ ಅವರಿಗೂ ಬಡಿಸಿ ಭೋಜನಮಾಡಿಸಬೇಕು. ಭೋಜನಮಾಡಿಸಲು ಅರ್ಹರು ಯಾರೆಂಬುದನ್ನು ಸಂಕ್ಷೇಪವಾಗಿ ಹೇಳಿಯಾಯಿತು. ಅಯ್ಯಾ ಕುರುಕುಲಶ್ರೇಷ್ಠನೇ! ಭೋಜನಕ್ಕೆ ಕರೆಯಲು ಅನರ್ಹರು ಯಾರೆಂಬುದನ್ನು ಈಗ ಹೇಳುತ್ತೇನೆ ಕೇಳು.

೧೮ ೧೯. ಕುಷ್ಠರೋಗಪೀಡಿತರಾದ ಭಾರ್ಯಾಪತಿಗಳು, ಸೂರ್ಯಭಕ್ತರಲ್ಲದ ಅನ್ಯದೇವತಾಭಕ್ತರು, ನಕ್ಷತ್ರಸೂಚಕರು, ಮತ್ತೊಬ್ಬರ ಮೇಲೆ ದೂರುಹೊರಿಸುವುದರಲ್ಲಿ ಆಸಕ್ತರು, ಪರಾರ್ಥವಾಗಿ ದೇವರ ಪೂಜೆಮಾಡತಕ್ಕವರು ಇಂಥವರುಗಳನ್ನು ಸೂರ್ಯನಿಗೆ ನೈವೇದ್ಯವಾಗುವ ವೇಳೆಯ ಮೃಷ್ಟಾನ್ನ ಭೋಜನಕ್ಕೆ ಕರೆಯಬಾರದೆಂದು ಸೂರ್ಯದೇವನೇ ಹೇಳಿದಾನೆ ಎಂದನು.

೨೦. ಆಗ ಶತಾನೀಕನು ಸುಮಂತುಮುನಿವರ್ಯರನ್ನು ಕುರಿತು—“ವಿಪ್ರೋತ್ತಮರೇ! ಯಾವ ಬ್ರಾಹ್ಮಣಶ್ರೇಷ್ಠರು ಭೋಜನಕ್ಕೆ ಕರೆಯಲು ಅರ್ಹರು? ಎಂತಹ ಬ್ರಾಹ್ಮಣರಿಗೆ ಭೋಜನಮಾಡಿಸತಕ್ಕದ್ದಲ್ಲ? ಎಂಬುದನ್ನೂ ಇವರುಗಳ ಲಕ್ಷಣವನ್ನೂ ಸಾವಧಾನವಾಗಿ ಹೇಳಿ” ಎಂದನು.

॥ ಸುಮಂತುರುವಾಚ ॥

ಸಾಧು ಪೃಷ್ಟೋಽಸ್ಮಿ ರಾಜೇಂದ್ರ ಕೀರ್ತಯಾಮ್ಯೇಷ ಕೃತ್ಸ್ನಶಃ ।
ಪಠತಾಂ ತು ತ್ರಯೀವಿದ್ಯಾಂ ಬ್ರಾಹ್ಮಣಾನಾಂ ಕದಂಬಕಂ ॥ ೨೧ ॥

ಘಟೇತ್ಯುಕ್ತಾ ತು ಸಾ ರಾಜನ್ ಸ್ವಯಂ ದೇವೇನ ಭಾನುನಾ ।
ಸಾ ಘಟಾ ವಿದ್ಯತೇ ಯಸ್ಯ ಸ ಘಟೇತ್ಯುಚ್ಯತೆ ದ್ವಿಜಃ ॥ ೨೨ ॥

ಬ್ರಹ್ಮಕ್ಷತ್ರವಿಶಾಂ ವೀರ ಶೂದ್ರಾಣಾಂ ಚ ಕದಂಬಕಃ ।
ಶೃಣ್ವತಾಂ ವಿಧಿವತ್ಪುಣ್ಯಂ ಭಕ್ತ್ಯಾ ಪುಸ್ತಕವಾಚನಂ ॥ ೨೩ ॥

ಇತಿ ಮಾಸೇ ನಿಬಂಧಶ್ಚ ಹೋಮಸ್ಯೇತಿ ಚ ಭಾನುನಾ ।
ಕಥಿತಃ ಕುರುಶಾರ್ದೂಲ ಸ್ವಯಮಾಕಾಶಗಾಮಿನಾ ॥ ೨೪ ॥

---

೨೧. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಹೇಳುತ್ತಾರೆ—ಅಯ್ಯಾ ರಾಜೇಂದ್ರನೇ! ನೀನು ಕೇಳಿದುದು ಸಾಧುವಾಗಿದೆ. ಅದನ್ನು ಸಮಗ್ರವಾಗಿ ಹೇಳುತ್ತೇನೆ ಕೇಳು. ತ್ರಯೀವಿಸ್ಯೆಯನ್ನು ಅಧ್ಯಯನಮಾಡುವ ಬ್ರಾಹ್ಮಣರ ಗುಂಪಿಗೆ ಘಟಾ ಎಂದು ಹೆಸರು.

೨೨-೨೩. ಹೀಗೆಂದು ಸೂರ್ಯನೇ ಸಾಕ್ಷಾತ್ತಾಗಿ ಹೇಳಿದ್ದಾನೆ. ಅಯ್ಯಾ ವೀರನೇ! ಅಂತಹ ತ್ರಯೀವಿದ್ಯೆಯನ್ನು ಅಭ್ಯಾಸಿಸುವ ಶಿಷ್ಯರ ಗುಂಪುಳ್ಳ ಬ್ರಾಹ್ಮಣೋತ್ತಮರಿಗೆ ಘಟೀ ಎಂದೂ, ಘಟಾನುಘಟೀವಿಪ್ರರು ಎಂದೂ ಹೆಸರು. ಭಕ್ತಿಯಿಂದ ವಿಧಿಯನ್ನನುಸರಿಸಿ ಶ್ರವಣಮಾಡುತ್ತಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರುಗಳ ಗುಂಪಿಗೆ ಪುಣ್ಯಕರವಾದ ಪುರಾಣವಾಚನವನ್ನು ಮಾಡಿಸುವ ವಾಚಕವಿಪ್ರ ಮತ್ತು ಘಟೀವಿಪ್ರರು ಇವರುಗಳನ್ನು ಸೂರ್ಯನಿವೇದನ ಕಾಲದ ಭೋಜನಕ್ಕೆ ಕರೆಯಬೇಕು.

೨೪. ಅಯ್ಯಾ ಕುರುಶಾರ್ದೂಲನೇ! ಇಂಥ ತಿಂಗಳಿನಲ್ಲಿ ಇಂಥ ಹೋಮ ಮಾಡಬೇಕೆಂಬ ಕ್ಲುಪ್ತಿಯನ್ನೂ ಸಹ ಆಕಾಶಗಾಮಿಯಾದ ಸೂರ್ಯನೇ ಸಾಕ್ಷಾತ್ತಾಗಿ ಹೇಳಿದ್ದಾನೆ.

ತಸ್ಯಾಃ ಕರ್ತಾ ಭವೇದ್ಯಸ್ತು ಮಮ ಸ್ಯಾತ್ಕರಕೋ ಮತಃ ।
ಸ ವಿಪ್ರೋ ರಾಜಶಾರ್ದೂಲ ಸದೇಷ್ಟೋ ಭಾಸ್ಕರಸ್ಯ ತು ॥ ೨೫ ॥

ಜಯೋಪಜೀವೀ ವ್ಯಾಸಶ್ಚ ಸಮಃ ಸ್ಯಾಜ್ಜೀವಕಸ್ತಥಾ ।
ಯಾನ್ಯೇತಾನಿ ಪುರಾಣಾನಿ ಸೇತಿಹಾಸಾನಿ ಭಾರತ ॥
ಜಯೇತಿ ತಥಿತಾನೀಹ ಸ್ವಯಂ ದೇವೇನ ಭಾಸ್ವತಾ ॥ ೨೬ ॥

ಏಕಂ ನಿವಾಸಯನ್ಯಸ್ತು ಬ್ರಾಹ್ಮಣಂ ತೂಪಜೀವಿತಂ ।
ಜಯೋಪಜೀವೀ ಸ ಜ್ಞೇಯೋ ವಾಚಕಶ್ಚ ತಥಾ ನೃಪ ॥ ೨೭ ॥

ಅರುಣೇಯಾದಿಶಾಸ್ತ್ರಾಣಿ ಸಪ್ತಾತ್ಸ್ವತಿಲಕಂ ತಥಾ ।
ಯಸ್ತು ಜಾನಾತಿ ಸೌರಾಣಿ ವಿಪ್ರಃ ಸೌರಃ ಸ ತತ್ತ್ವವಿತ್ ॥ ೨೮ ॥

ಪೂಜಯೇತ್ಸತತಂ ಯಸ್ತು ಭಾಸ್ಕರಂ ನೃಪಸತ್ತಮ ।
ಭೋಜಕಾಂಶ್ಚ ತಥಾ ರಾಜನ್ಯಥಾ ದೇವಂ ದಿವಾಕರಂ ॥ ೨೯ ॥

---

೨೫. ಅದರಂತೆ ಆಚರಿಸುವವನು ಸೂರ್ಯನಿಗೆ ಸ್ವಕೀಯನಾಗುವನೆಂದು ನನ್ನ ಅಭಿಪ್ರಾಯ. ಅಯ್ಯಾ ರಾಜಶ್ರೇಷ್ಠನೇ! ಆ ರೀತಿ ಆಚರಿಸುವ ಬ್ರಾಹ್ಮಣನು ಯಾವಾಗಲೂ ಸೂರ್ಯನಿಗೆ ಇಷ್ಟನಾದವನೆನಿಸುವನು.

೨೬. ಜಯೋಪಜೀವಿಯಾದ ವಾಚಕನೂ, ವ್ಯಾಸನೂ, ಸಮಾನರು. ಎಲೈ ಭಾರತವಂಶೋತ್ಪನ್ನನೇ! ಇತಿಹಾಸ ಈ ಪುರಾಣ ಇವಕ್ಕೆಲ್ಲಾ ಜಯ ಎಂಬ ಹೆಸರೆಂದು ಸೂರ್ಯದೇವನೇ ಹೇಳಿದ್ದಾನೆ.

೨೭. ಅಯ್ಯಾ ರಾಜನೇ! ಬ್ರಾಹ್ಮಣರಿರುವ ಕಡೆ ವಾಸಿಸುತ್ತಾ ಪುರಾಣವಾಚನದಿಂದ ಉಪಜೀವನ ಮಾಡುವ ವಿಪ್ರನನ್ನು ಜಯೋಪಜೀವಿ ಅಥವಾ ವಾಚಕ ಎಂಬದಾಗಿ ಹೇಳುತ್ತಾರೆ.

೨೮. ಅರುಣಸಂಬಂಧವಾದ ಆರುಣೇಯ ಮೊದಲಾದ ಶಾಸ್ತ್ರಗಳನ್ನೂ, ಸೌರಮಂತ್ರಗಳನ್ನೂ, ಬಲ್ಲವನು, ತತ್ವಜ್ಞನಾದ ಸೌರಬ್ರಾಹ್ಮಣನೆನಿಸುವನು.

೨೯. ಎಲೈ ರಾಜಶ್ರೇಷ್ಠನೇ! ಕೇಳು; ಯಾವಾಗಲೂ ಸೂರ್ಯನನ್ನು ಪೂಜಿಸುವವನನ್ನೂ, ಮತ್ತು ಸೂರ್ಯದೇವನನ್ನು ಪೂಜಿಸುವಂತೆಯೇ ಭೋಜಕರನ್ನೂ ಪೂಜಿಸುವವನನ್ನೂ ಸೂರ್ಯಭಕ್ತನೆಂದು ತಿಳಿಯಬೇಕು.

ಸ ಜ್ಞೇಯೋ ಭಾಸ್ಕರೇ ಭಕ್ತೋ ಭೋಜನೀಯಃ ಪ್ರಯತ್ನತಃ ।
ಭೋಜ್ಯಾನಾಂ ಲಕ್ಷಣಂ ಹ್ಯೇತದಭೋಜ್ಯಾನಾಂ ಶೃಣುಷ್ವ ಮೇ ॥ ೩೦ ॥

ವೃಷಲೀ ಯಸ್ಯ ವೈ ಭಾರ್ಯಾ ಬ್ರಾಹ್ಮಣಸ್ಯ ವಿಶೇಷತಃ ।
ಪರಭಾರ್ಯಾಪತಿರಸೌ ಬ್ರಾಹ್ಮಣೋ ಬ್ರಾಹ್ಮಣಾಧಮಃ ॥ ೩೧ ॥

ದೈವೇನ ನಿಹತಃ ಕುಷ್ಠೀ ಬ್ರಾಹ್ಮಣೋ ಬ್ರಹ್ಮಘಾತಕಃ ।
ಭೋಜಕೋ ನಿಂದತೇ ಯಸ್ತು ನ ಚ ತಂ ಪೂಜಯೇತ್ತಥಾ ॥ ೩೨ ॥

ಜ್ಞೇಯೋಽನ್ಯದೇವಭಕ್ತೋಽಸೌ ಸ ವಿಪ್ರಃ ಕುರುನಂದನ ।
ಆದಿತ್ಯಂ ಭೋಜಕಂ ವಿದ್ಯಾದ್ಭಾನೋರ್ದೇಹಸಮುದ್ಭವಂ ॥ ೩೩ ॥

ನಾದಿತ್ಯಂ ಪೂಜಯೇದ್ಯಸ್ತು ಸ ಭೋಜ್ಯೋ ನ ಕದಾಚನ ।
ಮುಂಡೋಽವ್ಯಂಗಧರೋ ಗೌರಃ ಶಂಖಪುಷ್ಪಧರಸ್ತಥಾ ॥ ೩೪ ॥

---

೩೦. ಮತ್ತು ಅವನಿಗೆ ಪ್ರಯತ್ನಪಟ್ಟಾದರೂ ಭೋಜನಮಾಡಿಸಬೇಕು. ಹೀಗೆ ಭೋಜನಕ್ಕೆ ಕರೆಯತಕ್ಕವರ ಲಕ್ಷಣವನ್ನು ತಿಳಿಸಿ ಆಯಿತು. ಭೋಜನಕ್ಕೆ ಕರೆಯಲು ಅನರ್ಹರ ಲಕ್ಷಣವನ್ನು ಹೇಳುವೆನು ಕೇಳು.

೩೧. ವೃಷಲೀಪತಿಯಾದ ಬ್ರಾಹ್ಮಣ, ಪರಭಾರ್ಯಾಪತಿಯಾದ ಬ್ರಾಹ್ಮಣಾಧಮ ಇವರು ಎಂದೂ ಭೋಜ್ಯಾರ್ಹರಲ್ಲ.

೩೨. ದುರದೃಷ್ಟವಶದಿಂದ ಕುಷ್ಠರೋಗಪೀಡಿತನಾದ ಬ್ರಾಹ್ಮಣ, ಬ್ರಹ್ಮಹತ್ಯೆ ಮಾಡಿದವನು, ಸರ್ವದಾ ಭೋಜಕರನ್ನು ನಿಂದಿಸುವ ಸ್ವಭಾವವುಳ್ಳವನು ಇಂಥ ವಿಪ್ರರೂ ಭೋಜ್ಯಾರ್ಹರಲ್ಲ.

೩೩. ಅಯ್ಯಾ ಕುರುನಂದನನೇ! ಅನ್ಯದೇವಭಕ್ತನಾದ ಭೋಜಕನನ್ನು ಬ್ರಾಹ್ಮಣನೇ ಅಲ್ಲವೆಂದು ತಿಳಿಯಬೇಕು. ನಿಷ್ಠನಾದ ಭೋಜಕನು ಸೂರ್ಯದೇಹದಿಂದ ಉತ್ಪನ್ನನಾದವನೆಂದು ತಿಳಿಯಬೇಕು.

೩೪-೩೫. ಸೂರ್ಯನನ್ನು ಪೂಜಿಸದೆ ಇರುವ ವಿಪ್ರನನ್ನು ಯಾವಾಗಲೂ ಅಂತಹ ವ್ಯಕ್ತಿಯನ್ನ ಭೋಜನಕ್ಕೆ ಕರೆಯಬಾರದು. ಎಲೈ ರಾಜನೇ! ಮುಂಡನೂ, ಅವ್ಯಂಗ ಧರನೂ, ಗೌರವರ್ಣನೂ, ಶಂಖಪುಷ್ಪಧರನೂ ಆಗಿರುವ ಭೋಜಕನು ಯಾವನ

ಯಸ್ಯ ಯಾತಿ ಗೃಹೇ ರಾಜನ್ ಭೋಜಕೋ ಮಾನವಸ್ಯ ತು ।
ತಸ್ಯ ಯಾಂತಿ ಗೃಹೇ ದೇವಾಃ ಪಿತರೋ ಭಾಸ್ಕರಸ್ಯ ತು ॥ ೩೫ ॥

ರಕ್ಷೋ ಭೂತಪಿಶಾಚಾಶ್ಚ ಯೋಗಿನ್ಯೋಽಪಿ ಪಲಾಯಿತಾಃ ।
ಸಕೃದ್ಭುಂಕ್ತೇ ಗೃಹೇ ಯಸ್ಯ ಭೋಜಕೋ ಗೃಹಧರ್ಮಿಣಃ ॥ ೩೬ ॥

ಸಪ್ತಸಂವತ್ಸರಂ ಯಾವತ್ತೃಪ್ತೋ ಭವತಿ ಭಾಸ್ಕರಃ ।
ತಸ್ಮಾತ್ತಾನ್ಭೋಜಯೇದ್ವಿದ್ವಾನ್ ಭೋಜಕಾನ್ಸತತಂ ಬುಧಃ ॥
ಯಸ್ತು ತಾನ್ ನಿಂದತೇ ವಿಪ್ರಃ ಸ ನ ಭೋಜ್ಯಃ ಕದಾಚನ ॥ ೩೭ ॥

ನಿಜಂ ಭರ್ತಾರಮುತ್ಸೃಜ್ಯ ಸ್ವೈರಂ ಯಾನ್ಯತ್ರ ಗಚ್ಛತಿ ।
ಸ್ವೈರಿಣೀ ಸಾ ತು ವೈ ಪ್ರೋಕ್ತಾ ಪಾಪಿಷ್ಠಾ ಕುಲದೂಷಿಣೀ ॥ ೩೮ ॥

ಪ್ರಚ್ಛನ್ನಂ ರೋಚತೇ ರಾಜನ್ ಯಾ ನಾರೀ ಭವದೋಷತಃ ।
ಜ್ಞೇಯಾ ಸಾ ಸ್ವೈರಿಣೀ ರಾಜನ್ ಕುಲೇ ಭವತಿ ನಾಶಿನೀ ॥ ೩೯ ॥

---

ಮನೆಗೆ ಭೋಜನಕ್ಕೆ ಬರುತ್ತಾನೋ ಅವನ ಮನೆಗೆ ದೇವತೆಗಳೂ, ಭಾಸ್ಕರಪ್ರಿಯರಾದ ಪಿತೃಗಳೂ, ಎಲ್ಲರೂ ಬಂದಂತಾಗುವುದು.

೩೬. ಭೋಜಕನು ಗೃಹಸ್ಥನ ಮನೆಯಲ್ಲಿ ಒಂದಾವೃತ್ತಿ ಭೋಜನಮಾಡಿದರೆ ಅವನ ನಿವಾಸದಲ್ಲಿ ಸೇರಿಕೊಂಡಿದ್ದ ರಾಕ್ಷಸರೂ, ಭೂತಪಿಶಾಚಗಳೂ, ಯೋಗಿನಿಗಳೂ ಎಲ್ಲರೂ, ಗೃಹಧರ್ಮವುಳ್ಳ ಅವನ ಮನೆಯನ್ನು ಬಿಟ್ಟು ಓಡುವರು. ಮತ್ತು ಆ ಭೋಜಕಸತ್ಕಾರದಿಂದ ಭಾಸ್ಕರನು ಏಳು ಸಂವತ್ಸರಗಳವರೆಗೆ ತೃಪ್ತಿಹೊಂದುವನು.

೩೭. ಆದ್ದರಿಂದ ತಿಳಿದವನು ಯಾವಾಗಲೂ ಶ್ರೇಷ್ಠರಾದ ಆ ಭೋಜಕರಿಗೆ ಭೋಜನಮಾಡಿಸಬೇಕು. ಭೋಜಕನನ್ನು ನಿಂದಿಸುವಂಥ ವಿಪ್ರನಿಗೆ ಪ್ರಾಜ್ಞನಾದವನು ಯಾವಾಗಲೂ ಭೋಜನಕ್ಕೆ ಹೇಳಬಾರದು.

೩೮. ತನ್ನ ಪತಿಯನ್ನು ಬಿಟ್ಟು ಬೇರೊಬ್ಬನನ್ನು ಕೂಡಿಕೊಳ್ಳುವ ಪಾಪಿಷ್ಠೆಯು ಕುಲಕ್ಕೇ ಕಳಂಕವನ್ನುಂಟುಮಾಡತಕ್ಕ ಸ್ವೈರಿಣಿ ಎಂದು ಹೇಳಿಸಿಕೊಳ್ಳುವಳು.

೩೯. ಅಯ್ಯಾ ರಾಜನೇ ! ತನ್ನ ವಂಶಪರಂಪರೆಯಾಗಿ ಬಂದ ಚಾಳಿಯಿಂದ ಗುಟ್ಟಾಗಿ ಅನ್ಯರಲ್ಲಿ ಅನುರಕ್ತೆಯಾಗಿ ತಾನಾಗಿ ಒಲಿದುಬಂದವಳನ್ನು ಕುಲನಾಶಿನಿಯಾದ ಸ್ವೈರಿಣಿ ಎಂದು ತಿಳಿಯಬೇಕು.

ಯೋಽಸ್ಯಾಂ ರತೋ ಭವೇದ್ವಿಪ್ರಃ ಸ ಜ್ಞೇಯಃ ಸ್ವೈರಿಣೀ ರತಃ ।
ರಂಗೋಪಜೀವೀ ಕಥಕೋ ಯಶ್ಚ ಪ್ರಾಕೃತನರ್ತಕಃ ॥ ೪೦ ॥

ರಂಗೋಪಜೀವೀ ರಾಜೇಂದ್ರ ತಥಾ ಚ ಬಹುಯಾಚಕಃ ।
ದ್ವೇ ಏತೇ ನಾಮನೀ ರಾಜನ್ ಕಥಕಸ್ಯ ಪ್ರಕೀರ್ತಿತೇ ॥
ಕೃತೇನಾನೇನ ಯಾದೃಕ್ಷ ಉದ್ವೃತ್ತಃ ಕುರುನಂದನ ॥ ೪೧ ॥

ಯಃ ಸ್ತುತಿಂ ಗಾಯತೆ ವಿಪ್ರಃ ಪ್ರೋಚ್ಚೈಸ್ತು ಜನಸಂಸದಿ ।
ರಂಗೋಪಜೀವೀ ಪ್ರೋಕ್ತೋಽಯಂ ದ್ವಿತೀಯಃ ಪರಿಕೀರ್ತಿತಃ ॥ ೪೨ ॥

ಸೂಚನಂ ಕಥನಂ ಪ್ರೋಕ್ತಂ ಸರ್ವಶಾಸ್ತ್ರೇಷು ಭಾರತ ।
ಸೂಚಯೇದ್ಯಸ್ತು ಋಕ್ಷಾಣಿ ಸ ವೈ ನಕ್ಷತ್ರಸೂಚಕಃ ॥ ೪೩ ॥

---

೪೦. ಆಕೆಯ ನಿಜವಾದ ಗಂಡನು ಇವಳು ಅನ್ಯಾಸಕ್ತೆಯಾಗಿರುವ ವಿಚಾರವನ್ನು ತಿಳಿದು ತಿಳಿದೂ ಅವಳಲ್ಲಿ ಆಸಕ್ತನಾದರೆ ಆ ವಿಪ್ರನು ಸ್ವೈರಿಣೀ ಆಸಕ್ತನೆಂದು ತಿಳಿಯಬೇಕು. ವೇಷಧಾರಿಗಳಾದ ಪ್ರಾಕೃತರನ್ನು ನರ್ತನಮಾಡಿಸುವನಿಗೆ ರಂಗೋಪಜೀವಿಯಾದ ಕಥಕನೆಂದು ಹೆಸರು.

೪೧. ಎಲೈ ರಾಜೇಂದ್ರನೇ! ಕೇಳು; ರಂಗೋಪಜೀವಿ ಬಹುಯಾಚಕ ಎಂಬದಾಗಿ ಕಥಕನಿಗೆ ಈ ಎರಡು ಹೆಸರುಗಳೂ ಉಂಟು ಎಂದು ಹೇಳಿದೆ.

೪೨. ಎಲೈ ಕುರುನಂದನನೇ ! ಕೇಳು ; ಎಂಥ ಸತ್ಕುಲಪ್ರಸೂತನಾದರೂ ಈ ಕಾರ್ಯಕ್ಕೆ ತೊಡಗುವುದರಿಂದ ಉದ್ವೃತ್ತನೆನಿಸುವನು. ಜನರ ಸಭೆಯಲ್ಲಿ ಸ್ತೋತ್ರವನ್ನು ಗಟ್ಟಿಯಾಗಿ ಹಾಡುವ ಬ್ರಾಹ್ಮಣನು ಎರಡನೆಯ ರಂಗೋಪಜೀವಿ ಎನ್ನಬೇಕೆಂದು ಹೇಳಿದೆ.

೪೩. ಅಯ್ಯಾ ಭರತವಂಶಜನೇ ! ಕೇಳು ; ಸೂಚನವೆಂದರೆ ಎಲ್ಲಾ ಶಾಸ್ತ್ರಗಳಲ್ಲೂ ಇರುವ ವಿಷಯವನ್ನು ಹೇಳತಕ್ಕದ್ದು. ಯಾವನು ನಕ್ಷತ್ರಗಳನ್ನು ಸೂಚಿಸುವನೋ ಅವನಿಗೆ ನಕ್ಷತ್ರಸೂಚಕ ಎಂದು ಹೆಸರು " ಎಂದನು.

॥ ಶತಾನೀಕ ಉವಾಚ ॥
ಅಹೋ ಬತ ಮಹತ್ಕಷ್ಟಂ ಭವತೋ ಯದ್ದ್ವಿಜಾನ್ಪ್ರತಿ ।
ವೇದಾಂಗಂ ಜ್ಯೋತಿಃಶಾಸ್ತ್ರಂ ತು ಷಷ್ಠಂ ಪ್ರೋಕ್ತಂ ಮನೀಷಿಭಿಃ ॥ ೪೪ ॥

ಷಡಂಗೋ ನ ಭವೇತ್ತೇನ ರಹಿತೇನ ದ್ವಿಜೇನ ಚ ।
ಅಭೋಜ್ಯೋ ಪಠನಾತ್ತಸ್ಯ ಕಥಂ ನಾ ಬ್ರಾಹ್ಮಣೋ ದ್ವಿಜ ॥ ೪೫ ॥

ಭೋಜ್ಯೋಽಖಂಡಂ ಯಯೌ ವಿಪ್ರೋಽನರ್ಥಕೇನ ತ್ವನರ್ಥಕಂ ।
ವಿಮೃಶ್ಯ ಕಥ್ಯತಾಂ ವಿಪ್ರ ಅತ್ರ ಮೇ ಸಂಶಯೋ ಮಹಾನ್ ॥ ೪೬ ॥

॥ ಸುಮಂತುರುವಾಚ ॥
ಸಾಧು ಪೃಷ್ಟೋಽಸ್ಮಿ ಭವತಾ ಶ್ರೂಯತಾಮತ್ರ ನಿರ್ಣಯಃ ।
ಯಸ್ಯ ಜೀವ್ಯಮಿದಂ ಜ್ಞೇಯಮಂಗಂ ವಿಪ್ರಸ್ಯ ವೈ ಭವೇತ್ ॥ ೪೭ ॥

---

೪೪. ಆಗ ಶತಾನೀಕರಾಜನು ಕೇಳುತ್ತಾನೆ—"ಭೋಜ್ಯಾರ್ಹರಾದ ದ್ವಿಜರು ಯಾರೆಂಬುದನ್ನು ತಿಳಿಸುವಾಗ ನಕ್ಷತ್ರಸೂಚಕನು ಅಭೋಜ್ಯನೆಂದು ನೀವು ಹೇಳಿದ ವಿಚಾರವು ನನ್ನ ಮನಸ್ಸಿಗೆ ಏಕೋ ಆತಂಕವಾಗಿದೆ. ವಿದ್ವಾಂಸರು ಜ್ಯೋತಿಃಶಾಸ್ತ್ರವನ್ನು ಆರನೆಯ ವೇದಾಂಗವೆಂದು ಹೇಳುವರು.

೪೫. ಅಯ್ಯಾ ದ್ವಿಜಶ್ರೇಷ್ಠನೇ ! ಆ ಶಾಸ್ತ್ರ ತಿಳಿಯದೇ ಹೋದರೆ ಬ್ರಾಹ್ಮಣನು ಷಡಂಗವೇತ್ತನೇ ಆಗುವುದಿಲ್ಲ. ಹೀಗಿರುವಲ್ಲಿ ಆ ಜ್ಯೋತಿಷ ಶಾಸ್ತ್ರಪಠನದಿಂದ ಆತನು ಅಭೋಜ್ಯನಾಗುವಪಕ್ಷದಲ್ಲಿ ಬ್ರಾಹ್ಮಣನು ಷಡಂಗ ವೇತ್ತನಾಗುವುದು ಹೇಗೆ?

೪೬. ಅಂಥ ವಿಪ್ರನಿಗೆ ಭೋಜನಮಾಡಿಸಿದರೆ ನೀನು ಪ್ರಕೃತದಲ್ಲಿ ಹೇಳಿದ ರೀತಿ ಅನರ್ಥ ಸಂಭವಿಸುವುದರಿಂದ ಅಖಂಡವಾದ ಅನರ್ಥವನ್ನು ಹೊಂದಿದಂತಾಗುತ್ತದೆ. ಅಯ್ಯಾ ಸುಮಂತುಮುನಿವರ್ಯರೇ! ಈ ವಿಚಾರದಲ್ಲಿ ನನಗೆ ದೊಡ್ಡ ಸಂದೇಹ ಉತ್ಪನ್ನವಾಗಿದೆ ವಿಮರ್ಶೆಮಾಡಿ ಹೇಳಿ ?" ಎಂದನು.

೪೭–೪೮. ಆಗ ಸುಮಂತುಮುನಿವರ್ಯರು ಹೇಳುತ್ತಾರೆ—ಅಯ್ಯಾ ರಾಜನೇ! ನೀನು ನನ್ನನ್ನು ಚೆನ್ನಾಗಿ ಪ್ರಶ್ನಿಸಿದೆ. ಈ ವಿಚಾರದಲ್ಲಿ ನಿರ್ಣಯ ಕ್ರಮವನ್ನು ಹೇಳುವೆನು ಕೇಳು. ಯಾವ ದ್ವಿಜನಿಗೆ ಇದೇ ಉಪಜೀವ್ಯವಾದ ಅಂಗವಾಗಿರುತ್ತದೋ

ಸಾಂವತ್ಸರೇಣ ಜ್ಯೋತಿಷಾ ಜ್ಞಾನನಕ್ಷತ್ರಸೂಚಕಃ ।
ನ ಸ ಭೋಜ್ಯೋ ಭವೇದ್ರಾಜನ್ ಯಸ್ಯೇಯಂ ಜೀವಿಕಾ ಭವೇತ್ ॥೪೮॥

ನಿಷ್ಕಾರಣಂ ಪರಾಣಾಂ ಚ ಪರೋಕ್ಷಂ ದೋಷಕೀರ್ತನಂ ।
ಗುಣಾನಾಂ ಚ ಯಥಾ ಗುಪ್ತಿಃ ಪರಿವಾದಪರಸ್ತು ಸಃ ॥ ೪೯ ॥

ಬ್ರಾಹ್ಮಣೋ ಯಸ್ತು ರಾಜೇಂದ್ರ ವೃತ್ತ್ಯಾ ಕರ್ಮ ಕರೋತಿ ವೈ ।
ದೇವತಾಯತನೇ ಚೈವ ದೇವಾನಾಂ ಪೂಜನಂ ತಥಾ ॥ ೫೦ ॥

ಆಧಿಪತ್ಯಂ ಭಕ್ಷಣಂ ಚ ನೈವೇದ್ಯಸ್ಯ ಪರಂತಪ ।
ಸ ಜ್ಞೇಯೋ ದೇವಲೋ ರಾಜನ್ ಬ್ರಾಹ್ಮಣೋ ಬ್ರಾಹ್ಮಣಾಧಮಃ ॥೫೧॥

ನಾಧಿಕಾರಸ್ತು ವಿಪ್ರಾಣಾಂ ಭೌಮಾನಾಂ ದೇವಪೂಜನೇ ।
ವೃತ್ತ್ಯಾ ಭರತಶಾರ್ದೂಲ ಆಧಿಪತ್ಯೇ ವಿಶೇಷತಃ ॥ ೫೨ ॥

---

(ಎಂದರೆ ಸಂವತ್ಸರವೆಲ್ಲಾ ಜ್ಯೋತಿಃಶಾಸ್ತ್ರದ ನಕ್ಷತ್ರಜ್ಞಾನ ಸೂಚಕನಾಗಿ ಹೀಗೆ ಇದೇ ಅವನಿಗೆ ಜೀವಿಕೆಯಾಗಿರುವುದೋ) ಅಂಥವನಿಗೆ ಭೋಜನಮಾಡಿಸಬಾರದು.

೪೯. ನಿಷ್ಕಾರಣವಾಗಿ ಪರೋಕ್ಷದಲ್ಲಿ ಪರರನ್ನು ದೂಷಿಸುವುದು, ಅವರಲ್ಲಿರುವ ಗುಣವನ್ನು ಮರೆಮಾಚುವುದು ಹೀಗೆಲ್ಲಾ ಮಾಡುವವನೂ ತಿರಸ್ಕಾರಾರ್ಹನು.

೫೦. ಅಯ್ಯಾ ರಾಜೇಂದ್ರನೇ ! ಯಾವ ಬ್ರಾಹ್ಮಣನು (ವೃತ್ತಿ–ಜೀವನ) ಸಂಬಳ ತೆಗೆದುಕೊಂಡು ದೇವಾಲಯದಲ್ಲಿ ಕೆಲಸಮಾಡುವನೋ, ಮತ್ತು ಸಂಬಳಕ್ಕಾಗಿ ದೇವರಪೂಜೆ ಮಾಡುವನೋ ಅವನನ್ನೂ ದೇವಲನೆನ್ನಬೇಕು.

೫೧. ಯಾವನು ದೇವಸ್ಥಾನದ ಅಧಿಪತಿಯಾಗಿ ದೇವಾಲಯದ ಸ್ವತ್ತನ್ನೇ ಭಕ್ಷಣೆಮಾಡುವನೋ ಆ ಬ್ರಾಹ್ಮಣನನ್ನೂ ದೇವಲನೆನ್ನಬೇಕು. ಅವನು ಬ್ರಾಹ್ಮಣಾಧಮನೆನಿಸುವನು.

೫೨–೫೩. ದಿವ್ಯಬ್ರಾಹ್ಮಣರಿಗೇ ಹೊರತು ಭೌಮಬ್ರಾಹ್ಮಣರಿಗೆ ಸಹ ದೇವಾಲಯದಲ್ಲಿ ದೇವರನ್ನು ಪೂಜಿಸುವ ಅಧಿಕಾರವಿಲ್ಲ. ಅಯ್ಯಾ ಭರತಕುಲಶ್ರೇಷ್ಠನೇ! ದೇವಾಲಯದ ಆಧಿಪತ್ಯವಿರುವಾಗ ಅದನ್ನೇ ಜೀವನವೃತ್ತಿಯನ್ನಾಗಿ ಯಾವನು ಮಾಡಿ

ಯಸ್ತು ಪೂಜಯತೆ ದೇವಂ ಬ್ರಾಹ್ಮಣೋ ದ್ರವ್ಯಲೋಭತಃ ।
ವೃತ್ತ್ಯರ್ಥಂ ಕುರುಕುಲಶ್ರೇಷ್ಠ ಸ ಯಾತಿ ನರಕಂ ಧ್ರುವಂ ॥ ೫೩ ॥

ದೇವಾಲಯೇಷು ಸರ್ವೇಷು ಅಗ್ನಿಕಾರ್ಯಂ ಚ ಸುವ್ರತ ।
ಯಃ ಕುರ್ಯಾದ್ದ್ರವ್ಯಲೋಭೇನ ಅಧೋಗತಿಮವಾಪ್ನುಯಾತ್ ॥ ೫೪ ॥

ದೇವಾಲಯೇಷು ಸರ್ವೇಷು ವರ್ಜಯಿತ್ವಾ ಶಿವಾಲಯಂ ।
ದೇವಾನಾಂ ಪೂಜನೇ ರಾಜನ್ನಗ್ನಿಕಾರ್ಯೇಷು ವಾ ವಿಭೋ ॥ ೫೫ ॥

ಅಧಿಕಾರಃ ಸ್ಮೃತೋ ರಾಜನ್ ಭೋಜಕಾನಾಂ ನ ಸಂಶಯಃ ।
ಪೂಜಯಂತಸ್ತು ತೇ ದೇವಾನ್ ಪ್ರಾಪ್ನುವಂತಿ ಪರಾಂ ಗತಿಂ ॥ ೫೬ ॥

ನೈವೇದ್ಯಂ ಭುಂಜತೇ ಯಸ್ಮಾದ್ಭೋಜಯಂತಿ ಚ ಭಾಸ್ಕರಂ ।
ಪೂಜಯಂತಿ ಚ ದೇವಾನಾಂ ದಿವ್ಯಮಂತ್ರೇಣ ತೇ ಗತಾಃ ॥ ೫೭ ॥

---

ಕೊಳ್ಳುವನೋ ಅವನೂ, ಮತ್ತು ದ್ರವ್ಯಲೋಭದಿಂದ ಸಂಬಳಕ್ಕಾಗಿ ದೇವರನ್ನು ಪೂಜಿಸುವ ಬ್ರಾಹ್ಮಣನೂ ಶಾಶ್ವತವಾದ ನರಕವನ್ನು ಹೊಂದುತ್ತಾರೆ.

೫೪. ಅಯ್ಯಾ ಸುವ್ರತನೇ! ದ್ರವ್ಯಲೋಭದಿಂದ ಎಲ್ಲಾ ದೇವಾಲಯಗಳಲ್ಲಿಯೂ ಅಗ್ನಿಕಾರ್ಯ (ಪರ್ಯಗ್ನಿಕರಣ) ಮಾಡುವವನು ಅಧೋಗತಿಯನ್ನು ಹೊಂದುತ್ತಾನೆ.

೫೫–೫೬. ಅಯ್ಯಾ ರಾಜನೇ! ಶಿವಾಲಯವನ್ನು ಬಿಟ್ಟು ಮಿಕ್ಕ ಎಲ್ಲಾ ದೇವಾಲಯಗಳಲ್ಲಿಯೂ ಅಗ್ನಿಕಾರ್ಯಗಳ ಅಧಿಕಾರವೂ, ದೇವರನ್ನು ಪೂಜಿಸುವ ಅಧಿಕಾರವೂ ಭೋಜಕರಿಗೇ ಸೇರಿದುದಾಗಿದೆ ಎಂದು ಹೇಳಬೇಕು. ಇದರಲ್ಲಿ ಸಂಶಯವಿಲ್ಲ. ಅವರು ಆ ರೀತಿ ದೇವರನ್ನು ಪೂಜಿಸುತ್ತಿದ್ದರೆ ಉತ್ತಮಗತಿಯನ್ನು ಹೊಂದುತ್ತಾರೆ.

೫೭. ಅವರು ಸೂರ್ಯನಿಗೆ ನಿವೇದನಮಾಡುವುದು, ದ್ವಿಜರಿಗೆ ಭೋಜನ ಮಾಡಿಸುವುದು, ಆ ನಿವೇದನವಾದ ಅನ್ನವನ್ನು ತಾವೂ ಭೋಜನಮಾಡುವುದು. ಮತ್ತು ದಿವ್ಯತಂತ್ರದಿಂದ ದೇವರನ್ನು ಪೂಜಿಸುವುದು ಈ ಕೆಲಸಗಳನ್ನು ಮಾಡುವ ಕಾರಣದಿಂದ ಅವರು ಉತ್ತಮಗತಿಯನ್ನು ಹೊಂದುವರು.

ಪೂಜಯಿತ್ವಾ ತು ವೈ ದೇವಾನ್ ನೈವೇದ್ಯಂ ಭಕ್ಷ್ಯ ಚ ಪ್ರಭೋಃ ।
ಯಾಂತಿ ತೇ ಪರಮಂ ಸ್ಥಾನಂ ಯತ್ರ ದೇವೋ ದಿವಾಕರಃ ॥ ೫೮ ॥

ಬ್ರಾಹ್ಮಣಶ್ಚಾಪಿ ತಂ ಬ್ರೂಯಾತ್ತೀಕ್ಷ್ಣೋಽಸತಿ ಮಹಾಮತೇ ।
ಏವಂ ಕರಿಷ್ಯೇ ಶ್ರೇಯೋರ್ಥಂ ನಾತ್ಮನಸ್ತವ ವಾ ವಿಭೋ ॥ ೫೯ ॥

ಇತ್ಯಾಮಂತ್ರ್ಯ ತತೋ ಗಚ್ಛೇತ್ ಸ್ವಗೃಹಂ ಕುರುನಂದನ ।
ತಥಾಪರೇಽಹ್ನಿ ಸಂಪೂಜ್ಯ ದೇವಂ ಭಕ್ತ್ಯಾ ದಿವಾಕರಂ ॥ ೬೦ ॥

ಹುತ್ವಾ ಚ ಪಾವಕಂ ರಾಜನ್ ಬ್ರಾಹ್ಮಣಾನ್ ಭೋಜಯೇತ್ತತಃ ।
ಶಾಲ್ಯೋದನಂ ತಥಾ ಮುದ್ಗಂ ಸುಗಂಧಂ ಮುದ್ಗಮೇವ ಹಿ ॥ ೬೧ ॥

ಅಪೂಪಾನ್ಗುಡಪೂಪಾಂಶ್ಚ ಪಯೋ ದಧಿ ತಥಾ ನೃಪ ।
ಏತೈಸ್ತು ತೃಪ್ತಿಮಾಯಾತಿ ಭಾಸ್ಕರೋ ನರಸತ್ತಮ ॥ ೬೨ ॥

---

೫೮. ದೇವರನ್ನು ಪೂಜಿಸಿದ ನೈವೇದ್ಯಾನ್ನವನ್ನು ಸದಾ ಭಕ್ಷಣಮಾಡುವುದರಿಂದ ಅವರು ಸೂರ್ಯಲೋಕಕ್ಕೆ ಹೋಗುವರು.

೫೯. "ಮಹಾಬುದ್ಧಿಶಾಲಿಯಾದ ವಿಭುವೇ! ಕೇಳು ; ಆಹ್ವಾನಕಾಲದಲ್ಲಿ ಆ ವಿಪ್ರನು ತೀಕ್ಷ್ಣನಾಗಿ (ಕುಪಿತನಾಗಿ) ಇದ್ದಪಕ್ಷದಲ್ಲಿ ಅವನನ್ನು ಕುರಿತು ಈ ಬ್ರಾಹ್ಮಣನು "ಸ್ವಾಮಿಾ! ಲೋಕದ ಶ್ರೇಯಸ್ಸಿಗಾಗಿ ನಾನು ಹೀಗೆ ಮಾಡುತ್ತೇನೆ ಕೇವಲ ನನ್ನ ಶ್ರೇಯಸ್ಸಿಗೆ ಮಾತ್ರವಾಗಲಿ, ನಿನ್ನ ಶ್ರೇಯಸ್ಸಿಗೆ ಮಾತ್ರವಾಗಲಿ ಅಲ್ಲ" ಎಂಬದಾಗಿ ಆತನಿಗೆ ಹೇಳಬೇಕು.

೬೦. ಎಲೈ ಕುರುನಂದನನೇ! ಹೀಗೆ ಆತನನ್ನು ಸಂತೈಸಿ ಆ ಮಂತ್ರಣಮಾಡಿ ತನ್ನ ಮನೆಗೆ ಬಂದು ಎಲ್ಲವನ್ನೂ ಸಿದ್ಧಪಡಿಸಿ ಮಾರನೆಯದಿನ ಭಕ್ತಿಯಿಂದ ಸೂರ್ಯದೇವನನ್ನು ಪೂಜಿಸಬೇಕು.

೬೧–೬೨. ಅನಂತರ ಅಗ್ನಿಯಲ್ಲಿ ಹೋಮಮಾಡಿ ಬಳಿಕ ಆಹೂತರಾದ ಬ್ರಾಹ್ಮಣರಿಗೆ ಭತ್ತದ ಅಕ್ಕಿಯ ಅನ್ನ, ಹೆಸರುಬೇಳೆ, ಕೇಸರಿ, ಏಲಕ್ಕಿ ಮುಂತಾದ ಸುವಾಸನಾ ದ್ರವ್ಯಗಳಿಂದ ಸಹಿತವಾದ ಅಪೂಪಗಳು, ಚೂರುಭಕ್ಷ್ಯಗಳು, ಮಿಠಾಯಿ ಹಾಲು, ಮೊಸರು ಇವುಗಳಿಂದ ಪುಷ್ಕಳವಾಗಿ ಭೋಜನಮಾಡಿಸಬೇಕು. ಹೀಗೆ ಮಾಡಿದರೆ ಸೂರ್ಯನು ತೃಪ್ತನಾಗುವನು.

ವರ್ಜ್ಯಾನಿ ಭರತಶ್ರೇಷ್ಠ ಶೃಣು ತ್ವಂ ಗದತೋ ಮಮ ।
ಕುಲಿತ್ಥಕಾನ್ಮಸೂರಾಂಶ್ಚ ನಿಷ್ಪಾವಾದೀಂಸ್ತಥೈವ ಚ ॥ ೬೩ ॥

ಸಿಸ್ತ್ರಿಕಂ ಚ ತಥಾನ್ಯಚ್ಚ ರಾಜಮೋಷಾಂಸ್ತಥೈವ ಚ ।
ನೈತಾನಿ ಭಾಸ್ಕರೇ ದದ್ಯಾದ್ಯ ಇಚ್ಛೇಚ್ಛ್ರೇಯ ಆತ್ಮನಃ ॥ ೬೪ ॥

ದುರ್ಗಂಧಂ ಯಚ್ಚ ಕಟುಕಮತ್ಯಲ್ಪಂ ಭಾಸ್ಕರಸ್ಯ ತು ।
ವಿಮಿಶ್ರಾಂಸ್ತಂಡುಲಾಂಶ್ಚಾಪಿ ನ ದದ್ಯಾದ್ಭಾಸ್ಕರಾಯ ವೈ ॥ ೬೫ ॥

ಇತ್ಥಂ ಭೋಜ್ಯ ದ್ವಿಜಂ ರಾಜನ್ ಪ್ರಾಶಯೇದರ್ಕಸಂಪುಟಂ ।
ಪ್ರಣಮ್ಯ ಶಿರಸಾ ದೇವಮುದಕೇನ ಸಮನ್ವಿತಂ ॥ ೬೬ ॥

ಗೃಹೀತ್ವಾ ಕೇತನಂ ಯಸ್ತು ಭಜತೇಽನ್ಯತ್ರ ಲೋಕತಃ ।
ನಾಶ್ನಂತಿ ಪಿತರಸ್ತಸ್ಯ ನ ದೇವಾ ನ ಚ ಮಾನವಾಃ ॥ ೬೭ ॥

---

೬೩-೬೪. ಅಯ್ಯಾ ಭರತಕುಲಶ್ರೇಷ್ಠನೇ! ಸೂರ್ಯಪ್ರೀತ್ಯರ್ಥವಾಗಿ ಹಾಗೆ ಮಾಡಿಸುವ ವಿಪ್ರಭೋಜನದಲ್ಲಿ ವರ್ಜ್ಯವಸ್ತುಗಳಾವುವೆಂಬುದನ್ನು ಹೇಳುತ್ತೇನೆ ಕೇಳು. ತನಗೆ ಶ್ರೇಯಸ್ಸಾಗಬೇಕೆನ್ನುವವನು ಹುರುಳಿ, ಚನ್ನಂಗಿಬೇಳೆ, ಅವರೆ, ಸಿಸ್ತ್ರಿಕ, ಅಲಸಂದೆ ಮುಂತಾದುವುಗಳನ್ನು ಉಪಯೋಗಿಸಬಾರದು.

೬೫. ಇದಲ್ಲದೆ ದುರ್ವಾಸನೆಯುಳ್ಳ ಈರುಳ್ಳಿ ಮುಂತಾದುವು, ಕಹಿಯಾಗಿರುವ ವಸ್ತುಗಳು, ಅತಿಸ್ವಲ್ಪವೇ ಅಡಿಗೆಮಾಡಿ ಇರುವ ವಸ್ತುಗಳು ಸಣ್ಣಅಕ್ಕಿ ದಪ್ಪ ಅಕ್ಕಿ ಬೆರಕೆಯಾದುದು, ಇಂಥವನ್ನು ಸೂರ್ಯಪ್ರೀತ್ಯರ್ಥವಾಗಿ ಮಾಡಿಸುವ ಬ್ರಾಹ್ಮಣ ಭೋಜನವಲ್ಲಿ ಉಪಯೋಗಿಸಬಾರದು.

೬೬. ಅಯ್ಯಾ ರಾಜನೇ! ಕೇಳು; ಹೀಗೆ ಬ್ರಾಹ್ಮಣರಿಗೆ ಭೋಜನಮಾಡಿಸಿ ಅನಂತರ ಸೂರ್ಯನಿಗೆ ನಮಸ್ಕರಿಸಿ ಎಕ್ಕದಎಲೆಯ ದೊನ್ನೆಯನ್ನು ಉದಕಸಮೇತ ಪ್ರಾಶನಮಾಡಬೇಕು.

೬೭. ಹೀಗೆ ವ್ರತಿಯಾದವನು ಆಗ ಇತರ ದೇವತಾಚಿಹ್ನವನ್ನು ಧರಿಸಿ ಲೋಕದಲ್ಲಿ ಅನ್ಯತ್ರ ದೇವಾಲಯದಲ್ಲಿ ಸೇವಿಸಿದರೆ, ಅವನ ಪಿತೃಗಳು, ದೇವತೆಗಳು, ಪೂಜ್ಯ ಮಾನವರು ಸಹ ಇವನು ದಾನಮಾಡುವ ಯಜ್ಞರೂಪವಾದ ಅನ್ನವನ್ನು ಸೇವಿಸುವುದಿಲ್ಲ. (ಎಂದರೆ ಅವನು ಮಾಡುವ ಪಂಚಯಜ್ಞಗಳು ವ್ಯರ್ಥವಾಗುವುವು)

ನಿಷ್ಕ್ರಮ್ಯ ನಗರಾದ್ರಾಜನ್ ಗತ್ವಾ ಪೂರ್ವೋತ್ತರಾಂ ದಿಶಂ ।
ನಾತ್ಯುಚ್ಚೇ ನಾತಿನೀಚೇ ಚ ಶುಚೌ ದೇಶೇಽರ್ಕಮುತ್ತಮಂ ॥ ೬೮ ॥

ಜಾತಂ ದೃಷ್ಟ್ವಾ ಮಹಾಬಾಹೋ ಪೂಜಯಿತ್ವಾ ಖಗೋತ್ತಮ ।
ಪೂರ್ವೋತ್ತರಗತಾಶ್ಚೈವ ತಸ್ಯ ಶಾಖಾ ದಿಶೇನ್ನೃಪ ॥ ೬೯ ॥

ಶಾಖಾಯಾ ಅಗ್ರತಃ ಪಾತ್ರೇ ಸುಸೂಕ್ಷ್ಮೈ ಪಲ್ಲವಾಶ್ರಿತೇ ।
ಸುಶ್ಲಿಷ್ಟೇ ನ ಪೃಥಗ್ಭೂತೇ ಸಂಪೂಜ್ಯ ಗೃಹಮಾವ್ರಜೇತ್ ॥ ೭೦ ॥

ಸ್ನಾತಃ ಪೂಜ್ಯ ವಿವಸ್ವಂತಮರ್ಕಪುಷ್ಪೈಃ ಖಗೋತ್ತಮ ।
ಬ್ರಾಹ್ಮಣಾನ್ ಭೋಜಯಿತ್ವಾ ತು ಅರ್ಕೋ ಮೇ ಪ್ರೀಯತಾಮಿತಿ ॥೭೧॥

ಪ್ರಾಶ್ಯಮಂತ್ರೇಣಾರ್ಕಪುಟಂ ತತೋ ಭುಂಜೀತ ವಾಗ್ಯತಃ ।
ದೇವಸ್ಯ ಪುರತೋ ವೀರ ತ್ವಸ್ಪೃಶನ್ ದಶನೈಃ ಪುಟಂ ॥ ೭೨ ॥

---

೬೮-೬೯. ಮಹಾಬಾಹುವಾದ ಎಲೈ ರಾಜನೇ! ಊರಿನಿಂದ ಹೊರಟು ಪೂರ್ವ ದಿಕ್ಕಿಗಾಗಲಿ, ಉತ್ತರದಿಕ್ಕಿಗಾಗಲಿ ಹೋಗಿ; ಬಹಳ ಎತ್ತರವೂ, ಅಥವಾ ಬಹಳ ತಗ್ಗೂ ಇಲ್ಲದೆ ಪರಿಶುದ್ಧವಾದ ಸ್ಥಳದಲ್ಲಿ ಹುಟ್ಟಿದ ಉತ್ತಮವಾದ ಅರ್ಕವೃಕ್ಷವನ್ನು ಚುನಾಯಿಸಿ ಆ ಗಿಡದಲ್ಲಿ ಈಶಾನ್ಯದಿಕ್ಕಿಗೆ ಬೆಳೆದಿರುವ ಶಾಖೆಯನ್ನು ನಿರ್ದೇಶಮಾಡಿ ಅದರಲ್ಲಿ ಶ್ರೇಷ್ಠನಾದ ಸೂರ್ಯನನ್ನು ಆವಾಹಿಸಬೇಕು.

೭೦. ಆ ಶಾಖೆಯ ಮುಂಭಾಗದಲ್ಲಿ ಬಿಟ್ಟಿರುವ ಸಣ್ಣದಾದ ಚಿಗುರೆಲೆಗಳಿಂದ ಒಂದಕ್ಕೊಂದು ಕೂಡಿಕೊಂಡು ಚೆನ್ನಾಗಿ ಸೇರಿರುವಂತೆಯೂ, ಬೇರೆಬೇರೆಯಾಗದಿರುವಂತೆಯೂ ಚೆನ್ನಾಗಿ ನಿರ್ಮಿಸಿರುವ ದೊನ್ನೆಯಲ್ಲಿ ಪ್ರಾಶನದ್ರವ್ಯವನ್ನು ತುಂಬಿಟ್ಟು ಪೂಜಿಸಿ ಮನೆಗೆ ಬರಬೇಕು.

೭೧. ಎಲೈ ಖಗೋತ್ತಮನೇ ! ಮಾರನೆಯದಿನ ಸ್ನಾನಾದಿಗಳನ್ನು ನೆರವೇರಿಸಿ, ಎಕ್ಕದ ಹೂಗಳಿಂದ ಸೂರ್ಯನನ್ನು ಪೂಜಿಸಿ, ಸೂರ್ಯನಿಗೆ "ಪ್ರೀತಿಯಾಗಲಿ, ನನಗೆ ಸೂರ್ಯನು ಸುಪ್ರಸನ್ನನಾಗಲಿ" ಎಂದು ಹೇಳಿ ಬಳಿಕ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

೭೨. ಅನಂತರ ಎಕ್ಕದೆಲೆಯ ದೊನ್ನೆಯಲ್ಲಿ ಪೂಜಿಸಿದ್ದ ಪ್ರಾಶನದ್ರವ್ಯವನ್ನು ಮುಂದೆ ಹೇಳುವ ಮಂತ್ರಪೂರ್ವಕವಾಗಿ ಉಕ್ತವಿಧಾನದಿಂದ ಪ್ರಾಶನಮಾಡಬೇಕು.

ಓಂ ಅರ್ಕಸಂಪುಟ ಭದ್ರಂ ತೇ ಭದ್ರಂ ತೇಽರ್ಕ ಸದಾಸ್ತು ವೈ ।
ಮಮಾಪಿ ಕುರು ಭದ್ರಂ ಚ ಪ್ರಾಯಶ್ಚಿತ್ತಪ್ರದೋ ಭವ ॥ ೭೩ ॥

ಇಮಂ ಮಂತ್ರಂ ಜಪನ್ ರಾಜನ್ ಸ್ಮರನ್ನರ್ಕಂ ಮಹಾಮತೇ ।
ಸ್ಥಿತ್ವಾ ಪೂರ್ವಮುಖೋ ಬ್ರಹ್ಮವಾರಿಣಾ ಸಹಿತಂ ನೃಪ ॥ ೭೪ ॥

ಪ್ರಾಶ್ಯ ಭುಂಕ್ತೇ ಚ ಯೋ ರಾಜನ್ ಸ ಯಾತಿ ಪರಮಾಂ ಗತಿಂ ।
ದಂತೈರಸ್ಪೃಶ್ಯ ಹೇ ವೀರ ತತ್ಪುಟಂ ಚಾರ್ಕಸಂಜ್ಞಿತಂ ॥ ೭೫ ॥

ಅನೇನ ವಿಧಿನಾ ಭಕ್ತ್ಯಾ ಕರ್ತವ್ಯಾ ಸಪ್ತಮೀ ಸದಾ ।
ಯಾವದ್ವರ್ಷಂ ಮಹಾಬಾಹೋ ಪ್ರೀತಯೇಽರ್ಕಸ್ಯ ಶ್ರದ್ಧಯಾ ॥ ೭೬ ॥

---

ಅನಂತರ ತಾನೂ ಮೌನದಿಂದ ಭೋಜನಮಾಡಬೇಕು. ಪ್ರಾಶನ ಮಾಡುವಾಗ ದೇವರ ಸನ್ಮುಖದಲ್ಲಿ ಕುಳಿತು ದೊನ್ನೆಯು ತುಟಿಗೂ, ಹಲ್ಲುಗಳಿಗೂ ಸೋಕದಂತೆ ಪ್ರಾಶನಮಾಡಬೇಕು.

೭೩. ಆ ಸಮಯದಲ್ಲಿ “ ಎಲೈ ಅರ್ಕಸಂಪುಟವೇ! ನಿನಗೆ ಒಳ್ಳೆಯದಾಗಲಿ ಓ ಸೂರ್ಯನೇ! ನಿನಗೆ ಸದಾ ಶುಭವಾಗಲಿ. ನನಗೆ ಪ್ರಾಯಶ್ಚಿತ್ತಪ್ರದನಾಗಿ ಮಂಗಳ ವನ್ನು ಕೊಡು ” ಎಂಬ ಅರ್ಥವುಳ್ಳ “ ಓಂ ಅರ್ಕಸಂಪುಟ ” ಎಂಬ ಮಂತ್ರವನ್ನು ಹೇಳಬೇಕು.

೭೪. ಅಯ್ಯಾ ಮಹಾಮತಿಯಾದ ರಾಜನೇ! ಸೂರ್ಯನನ್ನು ಸ್ಮರಣೆಮಾಡುತ್ತಾ ಪೂರ್ವಾಭಿಮುಖವಾಗಿ ಕುಳಿತು ಈ ಮಂತ್ರ ಜಪಮಾಡಿ ಬ್ರಹ್ಮೋದಕಸಹಿತವಾದ ಆ ಅರ್ಕಪುಟಪತ್ರ (ದೊನ್ನೆ) ವನ್ನು ಹಿಡಿದು ಮೇಲೆ ಹೇಳಿದಂತೆ ತುಟಿ ಹಲ್ಲುಗಳಿಗೆ ಸೋಕದಂತೆ ಪ್ರಾಶನಮಾಡಬೇಕು.

೭೫. ಅಯ್ಯಾ ವೀರನೇ! ಅರ್ಕಸಂಜ್ಞಕವಾದ ಈ ಪತ್ರಸಂಪುಟವನ್ನು ಹಲ್ಲಿಗೆ ಸೋಕದಂತೆ ಪ್ರಾಶನಮಾಡಿದವನು ಪರಮಗತಿಯನ್ನು ಹೊಂದುತ್ತಾನೆ.

೭೬. ಅರ್ಕಸಂಪುಟ ಸಪ್ತಮಿಯನ್ನು ಸದಾ ಈ ವಿಧಿಯಿಂದ ಆಚರಿಸ ಬೇಕು. ಭಕ್ತಿಯಿಂದ ಇದನ್ನು ಒಂದುವರ್ಷ ಪರ್ಯಂತ ಮಾಡಿದರೆ ಸೂರ್ಯನು ಪ್ರೀತನಾಗವನು.

ಯಶ್ಚೇಮಾಂ ಸಪ್ತಮೀಂ ಕುರ್ಯಾದ್ಭಾಸ್ಕರಂ ಪ್ರೀಣಯನ್ನರಃ ।
ತಸ್ಯಾಕ್ಷಯಂ ಭವೇದ್ವಿತ್ತಮಚಲಂ ಪ್ರಾಪ್ತಪೌರುಷಂ ॥ ೭೭ ॥

ಸುವರ್ಣಂ ರಜತಂ ತಾಮ್ರಂ ಹಿರಣ್ಯಂ ಚ ತಥಾಕ್ಷಯಂ ।
ಕೃತ್ವೇಮಾಂ ಸಿದ್ಧಿಮಾಯಾತಃ ಕೌಥುಮಿಃ ಸಹಸಾ ಗತಃ ॥ ೭೮ ॥

ಕುಷ್ಠರೋಗಾಚ್ಚ ವೈ ಮುಕ್ತೋ ಜಯಸ್ತೋಮೋ ಮಹೀಪತೇ ।
ಬೃಹದ್ಬಲಧ್ವಜಃ ಕೋಪೀ ಯಾಜ್ಞವಲ್ಕ್ಯೋಽಶ್ವಕೃಷ್ಣಜಃ ॥ ೭೯ ॥

ಅರ್ಕಂ ಚೈವ ಸಮಾರಾಧ್ಯ ತತೋಽಗುಸ್ತೇಽರ್ಕರೂಪತಾಂ ।
ಇಯಂ ಧನ್ಯತಮಾ ಪುಣ್ಯಾ ಸಪ್ತಮೀ ಪಾಪನಾಶಿನೀ ॥ ೮೦ ॥

ಪಠತಾಂ ಶೃಣ್ವತಾಂ ರಾಜನ್ ಕುರ್ವತಾಂ ಚ ವಿಶೇಷತಃ ।
ತಸ್ಮಾದೇಷಾ ಸದಾ ಕಾರ್ಯಾ ವಿಧಿವಚ್ಛ್ರೇಯಸೇಽನಘ ॥ ೮೧ ॥

---

೭೭. ಸೂರ್ಯನಿಗೆ ಪ್ರೀತಿಕರವಾದ ಈ ವ್ರತವನ್ನು ಮಾಡುವವನಿಗೆ ಅಕ್ಷಯವಾದ ಧನವೂ, ಅಚಲವಾದ ಪೌರುಷವೂ ಉಂಟಾಗುವುವು.

೭೮. ಈ ಅರ್ಕಸಂಪುಟ ಸಪ್ತಮಿಯನ್ನು ಆಚರಿಸಿದ ಕೌಥುಮಿಗೆ ಥಟ್ಟನೆ ಸಿದ್ಧಿಯುಂಟಾಯಿತು. ಮತ್ತು ಚಿನ್ನ, ಬೆಳ್ಳಿ, ತಾಮ್ರ, ಅಕ್ಷಯವಾದ ಧನ ಇವೆಲ್ಲವೂ ಲಭಿಸಿದುವು.

೭೯. ಅವನು ಕುಷ್ಠರೋಗದಿಂದ ಬಿಡುಗಡೆ ಹೊಂದಿದುದಲ್ಲದೆ ಜಯಸ್ತೋಮವನ್ನೂ ಸಹ ಹೊಂದಿದನು. ಮತ್ತು ಬೃಹದ್ಬಲಧ್ವಜನೆಂಬವನೂ, ಅಶ್ವಕೃಷ್ಣಜನಾದ ಯಾಜ್ಞವಲ್ಕ್ಯ ಎಂಬುವನೂ ಸೂರ್ಯನನ್ನು ಪೂಜಿಸಿ ಅರ್ಕಸಾಮ್ಯವನ್ನೇ ಪಡೆದರು.

೮೦. " ಎಲೈ ನಿರ್ದೋಷಿಯೇ ! ಈ ಅರ್ಕಸಂಪುಟ ಸಪ್ತಮಿಯು ಪುಣ್ಯದಾಯಕವೂ, ಪಾಪನಾಶಕವೂ ಆಗಿದೆ.

೮೧. ಇದರ ವಿಚಾರವನ್ನು ಪಠಿಸುವವರಿಗೂ, ಕೇಳುವವರಿಗೂ ವಿಶೇಷವಾಗಿ ಆಚರಿಸುವವರಿಗೂ ತುಂಬ ಪುಣ್ಯಕರವಾಗಿದೆ. ಆದುದರಿಂದ ಅವರವರ ಶ್ರೇಯಸ್ಸಿಗಾಗಿ ವಿಧಿಪ್ರಕಾರವಾಗಿ ಇದನ್ನು ಆಚರಿಸಬೇಕು " ಎಂದನು.

॥ ಶತಾನೀಕ ಉವಾಚ ॥

ಜನಕಾದಯೋ ಯಥಾ ಸಿದ್ಧಿಂ ಗತಾ ಭಾನುಂ ಪ್ರಪೂಜ್ಯ ಚ ।
ಶ್ರುತಂ ಮಯಾ ತು ಬಹುಶೋ ನ ಶ್ರುತಂ ಕೌಥುಮಿರ್ಯಥಾ ॥ ೮೨ ॥

ಸಿದ್ಧಿಂ ಗತೋಽರ್ಕಮಾರಾಧ್ಯ ಕುಷ್ಠಾನ್ಮುಕ್ತಶ್ಚ ಸುವ್ರತ ।
ಕಶ್ಚಾಸೌ ಕೌಥುಮಿರ್ವಿಪ್ರಃ ಕಥಂ ಕುಷ್ಠಮವಾಪ್ತವಾನ್ ॥ ೮೩ ॥

ಕಥಮಾರಾಧಯಾಮಾಸ ಭಾನುಂ ದೇವಪತಿಂ ದ್ವಿಜ ।
ಏತನ್ಮೇ ವಿಪ್ರ ನಿಖಿಲಂ ಕೀರ್ತಯಸ್ವ ಸಮಾಸತಃ ॥ ೮೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಧರ್ಮೇ
ಸೂರ್ಯಪೂಜಾವಿಧಿವರ್ಣನಂ ನಾಮ ದಶಾಧಿಕ
ದ್ವಿಶತತಮೋಽಧ್ಯಾಯಃ.

---

೮೨. ಶತಾನೀಕರಾಜನು ಸುಮಂತುಮುನಿವರ್ಯರನ್ನು ಕುರಿತು ಹೇಳುತ್ತಾನೆ—"ಜನಕಾದಿಗಳು ಭಾನುವನ್ನು ಪೂಜಿಸಿ ಸಿದ್ಧಿಯನ್ನು ಹೊಂದಿದರೆಂದು ನಾನು ಅನೇಕ ಪ್ರಕಾರವಾಗಿ ಕೇಳಿದ್ದೇನೆ. ಆದರೆ ಕೌಥುಮಿಯು ಸಿದ್ಧಿ ಹೊಂದಿದ ವಿಚಾರವನ್ನು ನಾನು ಕೇಳಿಲ್ಲ.

೮೩. "ಅವನು ಸೂರ್ಯನನ್ನು ಆರಾಧಿಸಿ ಕುಷ್ಠರೋಗದಿಂದ ಬಿಡುಗಡೆಹೊಂದಿದುದನ್ನೂ ಕೇಳಲಿಲ್ಲ. ಅಯ್ಯಾ ಸುವ್ರತನಾದ ದ್ವಿಜನೇ! ಕೌಥುಮಿಯೆಂಬಾತನು ಯಾರು ? ಅವನಿಗೆ ಕುಷ್ಠರೋಕವೇಕೆ ಬಂದಿತು ?

೮೪. " ದೇವಪತಿಯಾದ ಸೂರ್ಯನನ್ನು ಆತನು ಹೇಗೆ ಆರಾಧಿಸಿದನು ? ಎಲೈ ಬ್ರಾಹ್ಮಣೋತ್ತಮನೇ! ಇವೆಲ್ಲವನ್ನೂ ನನಗೆ ಸಂಕ್ಷೇಪವಾಗಿ ತಿಳಿಸು " ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ
ಸೂರ್ಯಪೂಜಾವಿಧಿವರ್ಣನೆಯೆಂಬ ಇನ್ನೂರಹತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಏಕಾದಶಾಧಿಕದ್ವಿಶತತಮೋಽಧ್ಯಾಯಃ

॥ ಸುಮಂತುರುವಾಚ ॥

**ಸಾಧು ಪೃಷ್ಟೋಽಸ್ಮಿ ರಾಜೇಂದ್ರ ಶೃಣುಷ್ವ ಗದತೋ ಮಮ ।**
**ಆಸೀತ್ಪುರಾ ಮಹಾವಿದ್ವಾನ್ ಬ್ರಾಹ್ಮಣಃ ಸ್ಥಾನಗೋತ್ತಮಃ ॥ ೧ ॥**

**ಸ ಗತಃ ಪುತ್ರಸಹಿತೋ ಜನಕಸ್ಯಾಶ್ರಮಂ ದ್ವಿಜಃ ।**
**ತತ್ರ ವಾದೋಽಭವತ್ತೇಷಾಂ ವಿಪ್ರೈರನ್ಯೈರ್ನೃಪೋತ್ತಮ ॥ ೨ ॥**

---

### ಇನ್ನೂರಹನ್ನೊಂದನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಹೇಳುತ್ತಾರೆ—ಎಲೈ ರಾಜೇಂದ್ರನೇ! ನೀನು ಕೌಥುಮಿಯ ವಿಚಾರವಾಗಿ ನನ್ನನ್ನು ಕೇಳಿದ್ದು ಸಹಜವಾಗಿದೆ. ಆ ವಿಚಾರವನ್ನು ಹೇಳುತ್ತೇನೆ ಕೇಳು. ಪೂರ್ವಕಾಲದಲ್ಲಿ ಗಣ್ಯಸ್ಥಾನ ಹೊಂದಿದವರಲ್ಲಿ ಉತ್ತಮ ನೆನಿಸಿದ ಹಿರಣ್ಯನಾಭನೆಂಬ ಮಹಾವಿದ್ವಾಂಸನಾದ ಬ್ರಾಹ್ಮಣನಿದ್ದನು.

೨. ಅವನು ತನ್ನ ಮಗ ಕೌಥುಮಿಯೆಂಬವನೊಡನೆ ಜನಕನ ಆಶ್ರಮಕ್ಕೆ ಹೋದನು. ಅಲ್ಲಿ ಇತರ ಬ್ರಾಹ್ಮಣರೊಡನೆ ವಾಕ್ಯಾರ್ಥಮಾಡಬೇಕಾದ ಸಂದರ್ಭ ಪೊದಗಿತು.

ಕ್ರೋಧಾವಿಷ್ಟೇನ ವೈ ತತ್ರ ಹತಃ ಕೌಥುಮಿನಾ ದ್ವಿಜಃ ।
ತೇನ ದೃಷ್ಟ್ವಾ ಹತಂ ವಿಪ್ರಂ ತ್ಯಕ್ತಃ ಪಿತ್ರಾ ಸ ಕೌಥುಮಿಃ ॥ ೩ ॥

ಭ್ರಾತೃಭಿಶ್ಚ ಮಹಾಬಾಹೋ ತಥಾ ಶಿಷ್ಟೈಶ್ಚ ಕೃತ್ಸ್ನಶಃ ।
ಪ್ರಮುಕ್ತಃ ಸ ಚ ಸರ್ವೈಸ್ತು ಶೋಕದುಃಖಸಮನ್ವಿತಃ ॥ ೪ ॥

ತೀರ್ಥಾನಿ ಸ ಜಗಾಮಾಥ ದಿವ್ಯಾನ್ಯಾಯತನಾನಿ ಚ ।
ನ ಚ ಮುಕ್ತಸ್ತ್ವಸೌ ವಿಪ್ರಃ ಸಹಸಾ ಬ್ರಹ್ಮಹತ್ಯಯಾ ॥ ೫ ॥

ಅಮುಕ್ತೇಽಥ ತಥಾ ವಿಪ್ರೇ ಪರೋ ವ್ಯಾಧಿರಜಾಯತ ।
ಕರ್ಣನಾಸಾವಿಹೀನಸ್ತು ಪೂಯಶೋಣಿತವಿಸ್ರವಃ ॥ ೬ ॥

---

೩. ವಾದಮಾಡುತ್ತಾ ಮಾಡುತ್ತಾ ಕೌಥುಮಿಗೆ ಬಹಳ ಕೋಪ ಬಂದಿತು. ಆ ಕೌಥುಮಿಯು ತನ್ನೊಡನೆ ವಾದಮಾಡುತ್ತಿದ್ದ ಬ್ರಾಹ್ಮಣನನ್ನು ಹೊಡೆದು ಕೊಂದು ಹಾಕಿಬಿಟ್ಟನು. ಹೀಗೆ ಅವನು ಬ್ರಾಹ್ಮಣನನ್ನು ಕೊಂದುಹಾಕಿದುದನ್ನು ನೋಡಿ, ಕೌಥುಮಿಯ ತಂದೆಯು ಮಗನೆಂದು ದಯೆತೋರಿಸದೆ ಅವನನ್ನು ವರ್ಜ್ಯಮಾಡಿಯೇ ಬಿಟ್ಟನು.

೪. ಎಲೈ ಮಹಾಬಾಹುವೇ! ಅವನ ಸಹೋದರರೂ ಅವನನ್ನು ಕೈಬಿಟ್ಟರು. ಶಿಷ್ಟಾಚಾರಸಂಪನ್ನರಾದವರೆಲ್ಲರೂ ಪೂರ್ಣವಾಗಿ ಅವನನ್ನು ವರ್ಜ್ಯಮಾಡಿಬಿಟ್ಟರು. ಹೀಗೆ ಅವನನ್ನು ಎಲ್ಲರೂ ತ್ಯಜಿಸಿದುದರಿಂದ ಆ ಕೌಥುಮಿಗೆ ಅತಿಶಯವಾದ ಶೋಕದುಃಖಗಳುಂಟಾದುವು.

೫. ಬಳಿಕ ಅವನು ಅಲ್ಲಿಂದ ಹೊರಟು ನಾನಾ ತೀರ್ಥಕ್ಷೇತ್ರಗಳಲ್ಲಿ ಸಂಚಾರ ಮಾಡಿದನು. ಅನೇಕ ಶ್ರೇಷ್ಠದೇವಾಲಯಗಳಿಗೂ ಹೋಗಿ ಸೇವೆಮಾಡಿದನು. ಆದರೂ ಆ ಬ್ರಾಹ್ಮಣನಿಗೆ ಬ್ರಹ್ಮಹತ್ಯೆಯಿಂದ ಬಿಡುಗಡೆಯಾಗಲಿಲ್ಲ.

೬. ಹೀಗೆ ಬ್ರಹ್ಮಹತ್ಯಾಪಾಪಯುತನಾಗಿರುವಾಗಲೇ ಆ ಬ್ರಾಹ್ಮಣನಿಗೆ ಮತ್ತೊಂದು ರೋಗವು ಕಾಣಿಸಿಕೊಂಡು ಕಿವಿ ಕೇಳದಂತಾಯ್ತು, ಮೂಗು ಕ್ರಿಮಿ ತಿಂದು ಹೋಗಿ ಆ ರಂಧ್ರದಲ್ಲಿ ಕೀವುರಕ್ತಗಳು ಸೋರುವಂತಾಯ್ತು.

ಪೃಥಿವೀಂ ಪರ್ಯಟ್ಯ ಸರ್ವಾಂ ಪುನರಾಗಾತ್ಪಿತುರ್ಗೃಹಂ ।
ದುಃಖೋಪಹತಚಿತ್ತಸ್ತು ಪಿತರಂ ವಾಕ್ಯಮಬ್ರವೀತ್ ॥ ೭ ॥

ಪಿತರ್ಗತಸ್ತು ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಮುಕ್ತೋಽಸ್ಮಿ ನಾನಯಾ ತಾತ ಕ್ರೂರಯಾ ಬ್ರಹ್ಮಹತ್ಯಯಾ ॥ ೮ ॥

ಕೃತೇಽಪಿ ಹಿ ಪರೇ ತಾತ ಪ್ರಾಯಶ್ಚಿತ್ತೇತು ಮೇಽನಘ ।
ಕಿಂ ಕರೋಮಿ ಕ್ವ ಗಚ್ಛಾಮಿ ತಾತಾತೀವ ರುಜೋ ಮಮ ॥ ೯ ॥

ಕೃತೇನ ಕರ್ಮಣಾ ಯೇನ ಅಲ್ಪಾಯಾಸೇನ ಮೇ ವಿಭೋ ।
ನಶ್ಯೇತ್ತು ಬ್ರಹ್ಮಹತ್ಯೇಯಂ ವ್ಯಾಧಿಶ್ಚಾಯಂ ಪರಂತಪ ॥ ೧೦ ॥

ಕಥ್ಯತಾಂ ಮಾ ಚಿರಂ ತಾತ ಕುರು ನಿಃಶ್ರೇಯಸಂ ಮಮ ।
ಹಿರಣ್ಯನಾಭೋ ವಿಪ್ರಸ್ತು ಶ್ರುತ್ವಾ ವಾಕ್ಯಂ ಸುತಸ್ಯ ತು
ಶೋಕದುಃಖಾ ಭಿ ಭೂತಸ್ತು ವಾಕ್ಯಂ ಪುತ್ರಮುವಾಚ ಹ ॥ ೧೧ ॥

---

೭. ಆತನು ನಾನಾದೇಶವನ್ನೆಲ್ಲಾ ಸುತ್ತಿ ಬೇಸತ್ತು ಪುನಃ ತಂದೆಯ ಮನೆಗೇ ಬಂದನು. ಬಳಿಕ ಅವನು ದುಃಖದಿಂದ ಮುಂದುಗೆಟ್ಟವನಾಗಿ ತಂದೆಯನ್ನು ಕುರಿತು ಇಂತೆಂದನು.

೮. " ಓ ತಂದೆಯೇ ! ಬೇಕಾದಷ್ಟು ತೀರ್ಥಯಾತ್ರೆಯನ್ನು ಮಾಡಿದೆನು. ಪುಣ್ಯಕರಗಳಾದ ದೇವಾಲಯಗಳಲ್ಲಿ ದೇವರ ದರ್ಶನಮಾಡಿದೆನು. ಆದರೂ ಈ ಕ್ರೂರವಾದ ಬ್ರಹ್ಮಹತ್ಯೆಯಿಂದ ನನಗೆ ಬಿಡುಗಡೆಯಾಗಲಿಲ್ಲ. "

೯. " ಇನ್ನಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿ ? ಏನುಮಾಡಲಿ ? ಎಲ್ಲಿಹೋಗಲಿ ? ನನ್ನ ಈ ಮಹಾವ್ಯಾಧಿಯು ಹೇಗೆ ಪರಿಹಾರವಾಗುವುದು ? "

೧೦. " ಅಲ್ಪಾಯಾಸದಿಂದಲೇ ಸಾಧ್ಯವಾಗುವ ಯಾವ ಪ್ರಾಯಶ್ಚಿತ್ತಕರ್ಮವನ್ನು ಮಾಡುವುದರಿಂದ ನನ್ನ ಈ ಬ್ರಹ್ಮಹತ್ಯೆಯು ನಾಶವಾದೀತು? ಮತ್ತು ಈ ರೋಗವೂ ನಿವೃತ್ತಿಯಾದೀತು ? "

೧೧. "ಓ ತಂದೆಯೇ! ಸಾವಕಾಶಮಾಡಬೇಡ. ಹೇಳು; ನನಗೆ ಬೇಗ ಗುಣವಾಗುವಂತೆ ಮಾಡು" ಎಂದು ಪ್ರಾರ್ಥಿಸಲಾಗಿ ಆ ಹಿರಣ್ಯನಾಭ ಬ್ರಾಹ್ಮಣನು ಮಗನ ಈ ಮಾತನ್ನು ಕೇಳಿ ಶೋಕದುಃಖಗಳಿಂದ ಖಿನ್ನನಾಗಿ ಮಗನನ್ನು ಕುರಿತು ಈ ಮಾತನ್ನು ಹೇಳಿದನು.

॥ ಹಿರಣ್ಯನಾಭ ಉವಾಚ ॥

ಜ್ಞಾತಃ ಪುತ್ರ ತವ ಕ್ಲೇಶಃ ಪ್ರಾಪ್ತೋ ಯಸ್ತ್ವಟತಾ ಮಹೀಂ ॥ ೧೨ ॥

ತೀರ್ಥಾನಿ ಚ ತ್ವಯಾ ವತ್ಸ ಪ್ರಾಯಶ್ಚಿತ್ತಾನಿ ಕುರ್ವತಾ ।
ನ ಚಾಪಿ ಬ್ರಹ್ಮಹತ್ಯಾ ತ್ವಾಂ ಮುಂಚತೆ ಮತ್ಕುಲೋದ್ವಹ ॥ ೧೩ ॥

ಉಪಾಯಮೇಕಂ ವಕ್ಷ್ಯಾಮಿ ಯೇನ ತ್ವಂ ಮೋಕ್ಷಮಾಪ್ಸ್ಯಸಿ ।
ಅಲ್ಪಾಯಾಸೇನ ವೈ ಪುತ್ರ ಶೃಣುಷ್ವ ಗದತೋ ಮಮ ॥ ೧೪ ॥

॥ ಕೌಥುಮಿರುವಾಚ ॥

ಆರಾಧಯಾಮಿ ಕಂ ದೇವಂ ಬ್ರಹ್ಮಾದೀನಾಂ ಕಥಂ ವಿಭೋ ।
ಶರೀರೇಣ ವಿಹೀನೋಽಸ್ಮಿ ಹೇತುನಾ ಸರ್ವಕರ್ಮಣಾಂ ॥ ೧೫ ॥

---

೧೨. ಹಿರಣ್ಯನಾಭನು ತನ್ನ ಮಗ ಕೌಥುಮಿಗೆ ಹೇಳುತ್ತಾನೆ—"ವತ್ಸಾ! ನೀನು ದೇಶಸಂಚಾರ ಮಾಡುವಾಗ ಅನುಭವಿಸಿದ ತೊಂದರೆಯು ತಿಳಿಯಿತು ಪ್ರಾಯಶ್ಚಿತ್ತಾರ್ಥವಾಗಿ ನೀನು ಪುಣ್ಯತೀರ್ಥಗಳ ಯಾತ್ರೆ ಮಾಡಿದುದನ್ನೂ ತಿಳಿದೆನು.

೧೩. ಎಲೈ ಕುಲೋದ್ಧಾರಕನಂದ ಪುತ್ರಾ! ಬ್ರಹ್ಮಹತ್ಯೆಯಾದರೋ ನಿನ್ನನ್ನು ಬಿಡಲೇಇಲ್ಲ. ಅದು ನಿನ್ನನ್ನು ಬಿಡುವುದಕ್ಕೆ ತಕ್ಕುದೊಂದು ಉಪಾಯವುಂಟು.

೧೪. ಅಲ್ಪಾಯಾಸದ ಕಾರ್ಯದಿಂದಲೇ ನಿನ್ನ ಈ ಇಷ್ಟವು ನೆರವೇರುವಂಥ ಒಂದು ಕಾರ್ಯವನ್ನು ಹೇಳುವೆನು ಕೇಳು" ಎನ್ನಲಾಗಿ

೧೫. ಆಗ ಪುತ್ರನಾದ ಕೌಥುಮಿಯು ಹೇಳತೊಡಗಿದನು—"ಓ ವಿಭುವೇ! ನಾನು ಶರೀರಸ್ವಾಧೀನವಿಲ್ಲದವನಾಗಿದ್ದೇನೆ. ಹೀಗಿರುವಾಗ ಬ್ರಹ್ಮಾದಿದೇವತೆಗಳನ್ನು ಹೇಗೆ ಆರಾಧಿಸಲಿ? ಯಾವ ಕರ್ಮಾಚರಣೆ ಮಾಡುವುದಕ್ಕೂ ನಿಮಿತ್ತವಾದ ಶರೀರವೇ ನನಗೆ ಸ್ವಾಧೀನವಿಲ್ಲವಲ್ಲಾ" ಎಂದನು.

॥ ಹಿರಣ್ಯನಾಭ ಉವಾಚ ॥

ಸಿದ್ಧಿಸಂತತಿಯುಕ್ತೇನ ಕರ್ಮಣಾ ತುಷ್ಟಿಮಾಪ್ನುಯುಃ ।
ದೇವ್ಯೈರಪಿ ಸುಪೂಜ್ಯೋsಯಮುಪಲೇಪನಮಾರ್ಜನೈಃ ॥ ೧೬ ॥

ಭಾನುರೇಕೋ ದ್ವಿಜಶ್ರೇಷ್ಠ ಊಚುರೇವಂ ಮನೀಷಿಣಃ ।
ಬ್ರಹ್ಮಾವಿಷ್ಣುರ್ಮಹಾದೇವೋ ಜಲೇಶೋ ಧನದಸ್ತಥಾ ॥ ೧೭ ॥

ಭಾನುಮಾಶ್ರಿತ್ಯ ಸರ್ವೇ ತೇ ಮೋದಂತೆ ದಿವಿ ಪುತ್ರಕ ।
ತಸ್ಮಾದ್ಭಾನೋಃ ಸಮಂ ದೇವಂ ನಾಹಂ ಪಶ್ಯಾಮಿ ಕಂಚನ ॥ ೧೮ ॥

ಏವಂ ಭಾನುಂ ಸರ್ವಮಾನ್ಯಮಧುನಾಖಿಲಕಾಮದಂ ।
ಪಿತರಂ ಮಾತರಂ ತಾತ ನರಾಣಾಂ ನಾತ್ರ ಸಂಶಯಃ ॥ ೧೯ ॥

---

೧೬. ಹಿರಣ್ಯನಾಭನು ಮಗನಾದ ಕೌಥುಮಿಯನ್ನು ಕುರಿತು ಹೇಳುತ್ತಾನೆ— ಅಷ್ಟಸಿದ್ಧಿಗಳನ್ನೂ ಮತ್ತು ಸಂತಾನಗಳನ್ನೂ ಕೊಡುವ ಮಹಾಮಹಿಮನಾದ ಸೂರ್ಯನನ್ನು ಪೂಜೆಮಾಡಿದುದರಿಂದ ಎಷ್ಟೋ ಮಂದಿ ನೀರೋಗಿಗಳಾಗಿ ಸುಖವಾಗಿರುವರು. ದೇವತೆಗಳಿಗೂ ಸಹ ಸೂರ್ಯನು ಪೂಜಾರ್ಹನು. ಅಂತಹ ಅವನ ದೇವಾಲಯವನ್ನು ಗುಡಿಸಿ, ಸಾರಿಸಿ, ಸೇವಿಸಿಯಾದರೂ ಅವನನ್ನು ಪ್ರಸನ್ನನನ್ನಾಗಿ ಮಾಡಬಹುದು.

೧೭. " ಸೂರ್ಯನೊಬ್ಬನೇ ಬ್ರಹ್ಮ, ವಿಷ್ಣು, ಮಹಾದೇವ, ವರುಣ, ಕುಬೇರ ಇವರೆಲ್ಲರ ಸ್ವರೂಪನೂ ಆಗಿದ್ದಾನೆಂದು ವಿದ್ವಾಂಸರು ಹೇಳುವರು. "

೧೮ " ವತ್ಸಾ ! ಅಂತರಿಕ್ಷದಲ್ಲಿ ಗೋಚರನಾಗುವ ಸೂರ್ಯನನ್ನು ಅವರೆಲ್ಲರೂ ಆಶ್ರಯಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದು ಸಂತೋಷಪಟ್ಟಿದ್ದಾರೆ. ಆದಕಾರಣ ಸೂರ್ಯನಿಗೆ ಸಮನಾದ ಬೇರೆ ಯಾವ ದೇವನನ್ನೂ ನಾನು ಕಾಣೆನು. "

೧೯. " ಹೀಗೆ ಸರ್ವರಿಗೂ ಮಾನ್ಯನೂ, ಶೀಘ್ರವಾಗಿ ಸರ್ವಕಾಮಗಳನ್ನೂ ಕೊಡುವವನೂ, ಮನುಷ್ಯರಿಗೆ ತಂದೆಯೂ ತಾಯಿಯೂ, ಆಗಿರುವ ಸೂರ್ಯನಿಗೆ ಸಮನಾದ ದೇವರನ್ನು ನಾನು ಎಲ್ಲೂ ಕಾಣೆನು. ಇದರಲ್ಲಿ ಸಂಶಯವಿಲ್ಲ.

ತಮಾರಾಧಯ ವೈ ಭಕ್ತ್ಯಾ ಜಪನ್ಮಂತ್ರಮನುತ್ತಮಂ ।
ಇತಿಹಾಸಪುರಾಣಾನಿ ಶೃಣು ಶ್ರದ್ಧಾಸಮನ್ವಿತಃ ॥ ೨೦ ॥

ಆರಾಧಯನ್ ರವಿಂ ಭಕ್ತ್ಯಾ ಜಪನ್ಸಾಮ ಮಹಾಮತೇ ।
ಪುರಾಣಾನಿ ತತೋ ಲೋಕೇ ಮೋಕ್ಷಂ ಪ್ರಾಪ್ಸ್ಯಸಿ ಪುತ್ರಕ ॥ ೨೧ ॥

॥ ಕೌಥುಮಿರುವಾಚ ॥

ದಶ ಸಾಮಾನಿ ವೈ ತಾತ ಪ್ರವರಾಣಿ ಮಹಾಮತೇ ।
ಓಂಕಾರ ಪ್ರವರೋದ್ಗೀಥಂ ಪ್ರಸ್ತಾನಾಂ ಚ ಚತುಷ್ಟಯಂ ॥ ೨೨ ॥

ಪಂಚಮಃ ಪರಿಹಾರೋಽತ್ರ ಷಷ್ಠಮಾಹುಸ್ತಮದ್ಭುತಂ ।
ನಿಧನಂ ಸಪ್ತಮಂ ಸಾಮ್ನಾಂ ಸಾಪ್ತವಿಧ್ಯಮಿತಿ ಸ್ಮೃತಂ ॥ ೨೩ ॥

ಸಾಪ್ತವಿಧ್ಯಮಿತಿ ಪ್ರೋಕ್ತಂ ಹಿಂಕಾರಪ್ರಣವೇಷು ಚ ।
ಅಷ್ಟಮಂ ಚ ತವಶಾಲ್ಯಂ ನವಮಂ ವಾಮದೇವಿಕಂ ॥ ೨೪ ॥

---

೨೦. "ಸರ್ವಶ್ರೇಷ್ಠವಾದ ಮಂತ್ರಗಳನ್ನು ಜಪಿಸುತ್ತಾ ಆ ಸೂರ್ಯನನ್ನು ಭಕ್ತಿಯಿಂದ ಆರಾಧಿಸು, ಶ್ರದ್ಧಾಯುಕ್ತನಾಗಿ ಇತಿಹಾಸ ಪುರಾಣಾದಿಗಳನ್ನು ಕೇಳು."

೨೧. "ಎಲೈ ಮಹಾಬುದ್ಧಿಶಾಲಿಯೇ! ನಿತ್ಯವೂ ಭಕ್ತಿಯಿಂದ ಸಾಮವನ್ನು ಜಪಿಸುವುದು, ಅನಂತರ ಪುರಾಣಗಳನ್ನು ಶ್ರವಣಮಾಡುವುದು, ಈ ಪ್ರಕಾರ ಲೋಕದಲ್ಲಿ ಮಾಡುತ್ತಾ ಇದ್ದರೆ ನೀನು ಮೋಕ್ಷವನ್ನು ಹೊಂದುವೆ" ಎಂದನು.

೨೨. ಆಗ ಕೌಥುಮಿಯು ಹೇಳುತ್ತಾನೆ—ಮಹಾಮತಿಯಾದ ಎಲೈ ತಂದೆಯೇ! ಶ್ರೇಷ್ಠಗಳಾದ ಸಾಮಗಳನ್ನು ಎಂದರೆ ಓಂಕಾರವೆಂಬ ಶ್ರೇಷ್ಠವಾದ ಉದ್ಗೀಥಗಳುಳ್ಳ ನಾಲ್ಕುಪ್ರಸ್ಥಗಳನ್ನೂ, (ಸಾಮವೇದದಲ್ಲಿಯ ಗೇಯಭಾಗಕ್ಕೆ ಉದ್ಗೀಥವೆನ್ನುತ್ತಾರೆ. ಛಾಂದೊಗ್ಯೋಪನಿಷತ್ತಿನ ಆದಿಯನ್ನು ನೋಡಿ ತಿಳಿಯುವುದು.

೨೩. ಮತ್ತು ಐದನೆಯದಾದ ಪರಿಹಾರಕ, ಆರನೆಯದಾದ ಅದ್ಭುತ, ಏಳನೆಯದಾದ ನಿಧನ, ಎಂಬ ಈ ಏಳುಬಗೆಯ ಶ್ರೇಷ್ಠವಾದ ಸಾಮಗಳನ್ನೂ ತಿಳಿಸಿಕೊಡು.

೨೪. ಹಿಂಕಾರ ಓಂಕಾರಗಳಲ್ಲಿ ಏಳುಬಗೆಗಳುಂಟೆಂದು ಹೇಳಿದೆ. ಎಂಟನೆಯದಕ್ಕೆ ತವಶಾಲ್ಯವೆಂದೂ, ಒಂಭತ್ತನೆಯದಕ್ಕೆ ವಾಮದೇವ್ಯವೆಂದೂ ಹೆಸರು.

ಜ್ಯೇಷ್ಠಂ ತು ದಶಮಂ ಸಾಮ ವೇಧಸೇ ಪ್ರಿಯಮುತ್ತಮಂ ।
ಏತೇಷಾಂ ತಾತ ಸಾಮ್ನಾಂ ವೈ ಕಂಠೇ ಜಾಪ್ಯಂ ಪರಂ ಮತಂ ॥
ಜಪಿತ್ವಾ ತು ಅಹಂ ಶಕ್ತ್ಯಾ ಗಚ್ಛಾಮಿ ಪರಮಂ ಪದಂ ॥ ೨೫ ॥

॥ ಹಿರಣ್ಯನಾಭ ಉವಾಚ ॥
ಸಾಧು ಪುತ್ರ ಕುಲಂ ಪೂತಂ ತ್ವತ್ಪುತ್ರೇಣ ಸಮೇನ ಚ ॥ ೨೬ ॥

ಏವಂ ಗತಸ್ಯಾಪಿ ಹಿ ತೇ ಜಾತಾ ಪುತ್ರ ವಿಧೇಃ ಸ್ಮೃತಿಃ ।
ಏವಂ ತಾತ ನ ಸಂದೇಹಃ ಸಾಮಾನ್ಯೇತಾನಿ ಪುತ್ರಕ ॥ ೨೭ ॥

ಪ್ರವರಾಣಿ ಹಿ ಸಾಮಾನಿ ಬ್ರಹ್ಮಣಾ ಕಥಿತಾನಿ ಹ ।
ಏಷಾಮಪಿ ಪರಂ ಪ್ರೋಕ್ತಂ ಸಾಮದ್ವಯಮನುತ್ತಮಂ ॥
ತಸ್ಮಾದೇಕಂ ಪರಂ ಜಾಪ್ಯಂ ಸರ್ವಪಾಪಭಯಾಪಹಂ ॥ ೨೮ ॥

---

೨೫. ಹತ್ತನೆಯ ಸಾಮವನ್ನು ಜ್ಯೇಷ್ಠಸಾಮವೆನ್ನುತ್ತಾರೆ. ಇದು ಬ್ರಹ್ಮನಿಗೆ ಪ್ರಿಯವಾದುದು. ಈ ಸಾಮಗಳಿಗೆ ಕಂಠಜಪವೇ ಉತ್ತಮ ಎಂದು ನಿಶ್ಚಿತವಾಗಿದೆ. ಈ ಸಾಮವೇದದಲ್ಲಿ ಉಚ್ಚಾರಣೆಯೇ ಮುಖ್ಯ. ನಾನು ಶಕ್ತ್ಯನುಸಾರವಾಗಿ ಕಂಠಜಪವನ್ನಾಚರಿಸಿ ಪರಮಪದಕ್ಕೆ ಹೋಗುತ್ತೇನೆ" ಎಂದನು.

೨೬. ಆಗ ಹಿರಣ್ಯನಾಭನು ಮಗನನ್ನು ಕುರಿತು ಹೇಳುತ್ತಾನೆ—"ವತ್ಸಾ! ನಿನ್ನ ಮಾತು ಸಾಧುವಾಗಿದೆ. ನಿನ್ನಂತಹ ಪುತ್ರನ ಸಂಪ್ರಾಪ್ತಿಯಿಂದ ನನ್ನ ಕುಲವು ಪರಿಶುದ್ಧವಾಯಿತು."

೨೭. "ಈ ಅವಸ್ಥೆಯೊದಗಿದ್ದರೂ ನಿನಗೆ ವಿಧಿಯ ಸ್ಮೃತಿಯು ಉಂಟಾಗಿದೆ. ಅಪ್ಪಾ ಮಗು! ಈ ಸಾಮಗಳೇನೋ ಹೀಗೆ ಮಹಾತ್ಮ್ಯೆಯುಳ್ಳುವೇ ಸರಿ. ಸಂಶಯವಿಲ್ಲ"

೨೮. "ಬ್ರಹ್ಮನು ಹೇಳಿದ ಸಾಮಗಳೆಲ್ಲಾ ಶ್ರೇಷ್ಠಗಳೇ ಆದರೂ ಇವುಗಳಲ್ಲಿ ಸರ್ವಶ್ರೇಷ್ಠವಾದುವು ಎರಡು ಸಾಮಗಳೆಂದು ಹೇಳಿದೆ. ಅವುಗಳಲ್ಲೂ ಸರ್ವಪಾಪನಾಶಕವಾದುದು ಒಂದೆಂದೂ ಆದುದರಿಂದ ಅದನ್ನೇ ಜಪಿಸತಕ್ಕದ್ದೆಂದೂ ಹೇಳಿದೆ" ಎಂದನು.

॥ ಕೌಥುಮಿರುವಾಚ ॥
ಕಥ್ಯತಾಂ ತಾತ ತಚ್ಛ್ರೇಷ್ಠಂ ಯತ್ತು ಸಾಮದ್ವಯಂ ಪರಂ ।
ಏತೇಷಾಂ ತಾತ ಸಾಮ್ನಾಂ ತು ನಾನ್ಯಜ್ಜಾಪ್ಯಂ ಚ ಯದ್ಭವೇತ್ ॥ ೨೯ ॥

॥ ಹಿರಣ್ಯನಾಭ ಉವಾಚ ॥
ಜ್ಯೇಷ್ಠಸಾಮ ಪರಂ ಪೂರ್ವಂ ದ್ವಿತೀಯಂ ಗದತಃ ಶೃಣು ॥ ೩೦ ॥

ತತಃ ಶ್ರಾವ್ಯಂ ತೃತೀಯಂ ತು ಜಪ್ತವ್ಯಂ ಮುಕ್ತಿಮಿಚ್ಛತಾ ।
ತತಶ್ಚ ಪರಮಂ ಪ್ರೋಕ್ತಂ ಸ್ವಯಂ ದೇವೇನ ಭಾನುನಾ ॥ ೩೧ ॥

ಸ್ವಯಂ ದೈವತಮಾದಿಷ್ಟಂ ಛಂದಸಾಮುತ್ತಮಂ ವ್ರತಂ ।
ಪ್ರಿಯಂ ಹಿರಣ್ಯಗರ್ಭಸ್ಯ ಪ್ರಿಯಂ ಸೂರ್ಯಸ್ಯ ಸರ್ವದಾ ॥ ೩೨ ॥

ಜಪಶ್ಚ ವಿನಿಯೋಗೋಽಪಿ ಲಕ್ಷಣಂ ಚ ನಿಬೋಧ ಮೇ ।
ಸತ್ಯೇನ ಸ್ವರಲೀನಸ್ತು ಶೂಕರಾದಿ ಸ್ಮೃತಂ ಬುಧೈಃ ॥ ೩೩ ॥

---

೨೯. ಆಗ ಕೌಥುಮಿಯು ಕೇಳುತ್ತಾನೆ—"ಎಲೈ ತಂದೆಯೇ! ಉತ್ತಮವಾದ ಸಾಮದ್ವಯವೆಂದು ಯಾವ ಎರಡನ್ನು ಹೇಳಿದೆಯೋ ಅದಕ್ಕಿಂತ ಬೇರೆಯಾದುದನ್ನು ಯಾವಾಗಲೂ ಜಪಿಸಬಾರದಲ್ಲವೇ? ಈ ವಿಚಾರವನ್ನು ಶೀಘ್ರವಾಗಿ ತಿಳಿಸು" ಎಂದನು

೩೦. ಬಳಿಕ ಹಿರಣ್ಯನಾಭನು ಹೇಳುತ್ತಾನೆ—ಅಪ್ಪಾ! ಶ್ರೇಷ್ಠವಾದ ಈ ಸಾಮಗಳಲ್ಲಿ ಜ್ಯೇಷ್ಠಾಸಾಮವು ಮೊದಲನೆಯದು. ಎರಡನೆಯದನ್ನು ಹೇಳುವೆನು ಕೇಳು.

೩೧. ಶ್ರಾವ್ಯಸಾಮವೆಂಬುದು ಎರಡನೆಯದು, ಮೋಕ್ಷಾಪೇಕ್ಷಿಯಾದವನು ಹೇಳತಕ್ಕ ಜಪ್ಯ ಎಂಬುದು ಮೂರನೆಯಸಾಮವು. ಇದು ಅದಕ್ಕಿಂತ ಶ್ರೇಷ್ಠವಾದುದೆಂದು ಸೂರ್ಯನೇ ಹೇಳಿದ್ದಾನೆ.

೩೨. ಇದು ಸೂರ್ಯನಿಗೆ ಪ್ರಿಯವಾದುದು ಮತ್ತು ಹಿರಣ್ಯಗರ್ಭನಿಗೂ ಪ್ರಿಯವಾದುದು. ಅಲ್ಲದೆ ಛಾವಸ್ಸು (ವೇದ) ಗಳಲ್ಲೆಲ್ಲಾ ಶ್ರೇಷ್ಠವಾದುದು ವ್ರತಸದೃಶವು. ಎಂಬದಾಗಿ ದೇವನೇ ಸಾಕ್ಷಾತ್ತಾಗಿ ಹೇಳಿದ್ದಾನೆ.

೩೩. ಇದರ ಕಂಠಜಪವಿಧಾನ, ಈ ಜಪದ ವಿನಿಯೋಗ, ಮತ್ತು ಲಕ್ಷಣ ಇವನ್ನು ಹೇಳುತ್ತೇನೆ ಕೇಳು; ಸತ್ಯದಿಂದ ಸ್ವರವು ಲೀನವಾದರೆ (ಕುಗ್ಗಿದರೆ) ಅದನ್ನು ಶೂಕರಾದಿ ಸ್ವರವೆಂದು ತಿಳಿಯಬೇಕೆಂದು ಪ್ರಾಜ್ಞರು ಹೇಳುತ್ತಾರೆ.

ಋತುರ್ಭಾವಸ್ತಥಾ ಧರ್ಮೋ ವಿಧರ್ಮಃ ಸತ್ಯಕೃತ್ತಥಾ ।
ಧರ್ಮಾಧರ್ಮೌ ತಥಾ ಕಾರ್ಯೌ ಧರ್ಮವೇದನಮೇವ ಚ ॥ ೩೪ ॥

ಯದೇಭಿರ್ಗೀಯತೇ ಶಬ್ದೈ ರುಚಿರಂ ಸಮಯೈರ್ದ್ವಿಜೈಃ ।
ಜಾಪ್ಯಂ ತತ್ಪರಮಂ ಪ್ರೋಕ್ತಂ ಸ್ವಯಂ ದೇವೇನ ಭಾನುನಾ ॥ ೩೫ ॥

ಏತದ್ವೈ ಜಪಮಾನಸ್ತು ಪುನರಾವರ್ತತೇ ನ ತು ।
ಸರ್ವರೋಗವಿನಿರ್ಮುಕ್ತೋ ಮುಚ್ಯತೇ ಬ್ರಹ್ಮಹತ್ಯಯಾ ॥ ೩೬ ॥

ಏತಜ್ಜಾಪ್ಯಂ ತು ಸಂಜಪ್ಯಂ ಆರಾಧಯ ದಿವಾಕರಂ ।
ಗಾಯನ್ ಸಾಮ ತವ ಪ್ರೋಕ್ತಂ ಶೃಣು ಪೌರಾಣಿಕಂ ಸುತ ॥ ೩೭ ॥

ಜ್ಯೇಷ್ಠಸಾಮ್ನೋಽಪಿ ತೇ ಪುತ್ರ ಲಕ್ಷಣಂ ಕಥಯಾಮಿ ಹಿ ।
ಆದ್ಯಾಯಾದಾಜ್ಯ ದೋಹೇತಿ ಜ್ಯೇಷ್ಠಸಾಮ್ನೋಽಪಿ ಲಕ್ಷಣಂ ॥ ೩೮ ॥

---

೩೪. ಮತ್ತು ಇವು ಋತು, ಭಾವ, ಧರ್ಮ, ವಿಧರ್ಮ ಮತ್ತು ಸತ್ಯಕೃತ್, ಧರ್ಮಾಧರ್ಮಗಳು, ಮತ್ತು ಕರ್ತವ್ಯಕಾರ್ಯಗಳು, ಧರ್ಮವೇದನ ಇವುಗಳನ್ನು ಅನುಸರಿಸಿ ಹೇಳತಕ್ಕವು."

೩೫. ಬ್ರಾಹ್ಮಣರು ಈ ಮಂತ್ರವನ್ನು ಮನೋಹರಗಳಾದ ಶಬ್ದಗಳಿಂದಲೂ ಒಂದು ನಿಬಂಧನಾರೂಪವಾದ ಸಮಯಗಳಿಂದಲೂ ಗಾನಮಾಡುತ್ತಾರೆ. ಅದು ಶ್ರೇಷ್ಠಜಪ್ಯವೆಂದು ಸೂರ್ಯದೇವನೇ ಹೇಳಿದ್ದಾನೆ."

೩೬. "ಇದನ್ನು ಜಪಿಸಿದರೆ ಮನುಷ್ಯನು ಪುನರ್ಜನ್ಮವನ್ನು ಹೊಂದುವುದಿಲ್ಲ. ಅಲ್ಲದೆ ಸರ್ವಶೋಕಗಳಿಂದಲೂ ಬಿಡುಗಡೆಹೊಂದಿ ಬ್ರಹ್ಮಹತ್ಯಾದೋಷದಿಂದ ಮುಕ್ತನಾಗುತ್ತಾನೆ."

೩೭. "ಓ ವತ್ಸಾ! ಜಪಾರ್ಹವಾದ ಈ ಸಾಮವನ್ನು ಜಪಿಸಿ ಸೂರ್ಯನನ್ನು ಚೆನ್ನಾಗಿ ಆರಾಧಿಸು. ನಿನಗೆ ಹೇಳಿದ ಸಾಮವನ್ನು ನಿತ್ಯವೂ ಗಾನಮಾಡು. ಮತ್ತು ಪುರಾಣವನ್ನು ಶ್ರವಣಮಾಡು."

೩೮. "ಎಲೈ ಪುತ್ರ! ಈ ಶ್ರಾವ್ಯಸಾಮವು ನಿನಗೆ ಜಪಿಸುವುದಕ್ಕೆ ಯೋಗ್ಯವಾಗಿದೆ. ಅದನ್ನು ಜಪಮಾಡು. ಮತ್ತು ಈ ಜ್ಯೇಷ್ಠಸಾಮಗಾನದಿಂದ ಸೂರ್ಯನನ್ನು

ತವ ಶ್ರಾವ್ಯಂ ಜಪಂ ಪುತ್ರ ಜ್ಯೇಷ್ಠಗಾಯ ರವಿಂ ಸದಾ ।
ಸಮಾರಾಧಯ ಶೃಣ್ವನ್ ವೈ ಪುತ್ರಾಣಾಮಿವ ಪುತ್ರಕ ॥
ಏವಮಾರಾಧ್ಯ ದೇವೇಶಂ ತತೋ ದುಃಖಂ ಪ್ರಹಾಸ್ಯಸಿ ॥ ೩೯ ॥

॥ ಸುಮಂತುರುವಾಚ ॥

ತತಃ ಶ್ರುತ್ವಾ ಪಿತುರ್ವಾಕ್ಯಂ ಸಾಮಗಃ ಕೌಥುಮಿಸ್ತಥಾ ॥ ೪೦ ॥

ಆರಾಧಯಾಮಾಸ ರವಿಂ ಭಕ್ತಿಶ್ರದ್ಧಾಸಮನ್ವಿತಃ ।
ತತಃ ಶ್ರಾವ್ಯಂ ಜಪನ್ ರಾಜಂಸ್ತ್ರಿಕಾಲೇ ಪುರತೋ ರವೇಃ ॥ ೪೧ ॥

ಶೃಣ್ವತಸ್ತು ಪುರಾಣಾನಿ ಬ್ರಹ್ಮಹತ್ಯಾ ಗತಾ ತದಾ ।
ವ್ಯಾಧಿಶ್ಚ ಕುರುಶಾರ್ದೂಲ ಫಲಮೇತಚ್ಛ್ರುತಸ್ಯ ವೈ ॥ ೪೨ ॥

---

ಸರ್ವದಾ ಸ್ತುತಿಮಾಡು. ಅನೇಕ ಪುತ್ರರಲ್ಲಿ ಪ್ರಿಯಪುತ್ರನು ಪಿತೃವಾಕ್ಯವನ್ನು ಆಸಕ್ತಿಯಿಂದ ಶ್ರವಣಮಾಡುವಂತೆ ನೀನು ಪುರಾಣ ಶ್ರವಣಮಾಡುತ್ತಾ ದೇವೇಶನಾದ ಸೂರ್ಯನನ್ನು ಆರಾಧಿಸಿದರೆ ದುಃಖರಹಿತನಾಗುತ್ತೀಯೆ " ಎಂದನು.

೪೦. ಸುಮಂತುಮುನಿವರ್ಯರು ಮುಂದಕ್ಕೆ ಕಥೆಯನ್ನು ಹೇಳುತ್ತಾರೆ— " ಎಲೈ ಕುರುಶಾರ್ದೂಲನೇ ! ಅನಂತರ ಕೌಥುಮಿಯು ತಂದೆಯ ಮಾತಿನ ಪ್ರಕಾರ ಜ್ಯೇಷ್ಠಸಾಮವನ್ನು ಗಾನಮಾಡುತ್ತಾ ಭಕ್ತಿಶ್ರದ್ಧೆಯಿಂದ ಕೂಡಿ ರವಿಯನ್ನು ಆರಾಧಿಸತೊಡಗಿದನು.

೪೧. ತ್ರಿಕಾಲದಲ್ಲೂ ಸೂರ್ಯನ ಸಮ್ಮುಖದಲ್ಲಿ ಶ್ರಾವ್ಯಸಾಮವನ್ನು ಜಪಿಸಿ, ಜ್ಯೇಷ್ಠಸಾಮವನ್ನು ಗಾನಮಾಡುವನು. ಬಳಿಕ ಪುರಾಣಗಳನ್ನು ಕೇಳುವನು.

೪೨. ಕೆಲವುಕಾಲ ಹೀಗೆ ಮಾಡುತ್ತಿರುವಲ್ಲಿ ಆ ಕೌಥುಮಿಗೆ ಬ್ರಹ್ಮಹತ್ಯಾದೋಷವು ನಿವೃತ್ತಿಯಾಗಿ ವ್ಯಾಧಿಯೂ ಪರಿಹಾರವಾಯಿತು. ಆತನು ಪುರಾಣಶ್ರವಣ ಮಾಡಿದುದರಿಂದ ಈ ರೀತಿ ಫಲ ಹೊಂದಿದನು.

ಜಪತಾ ಯತ್ಫಲಂ ತೇನ ದೇವಂ ಪೂಜಯತಾ ನೃಪ ।
ಸೋಽಪಿ ಪ್ರಾಪ್ತೋ ರವಿಂ ರಾಜನ್ ಶೃಣುಷ್ವೈಕಮನಾ ನೃಪ ॥ ೪೩ ॥

ಸ ಗತೋ ಮೂರ್ತಿಮಾನ್ ವಿಪ್ರಃ ಪ್ರಸಾದಾದ್ಭಾಸ್ಕರಸ್ಯ ತು ।
ಪ್ರವಿಶ್ಯ ಮಂಡಲಂ ಭಾನೋಃ ಪದಂ ಯತ್ಪರಮಂ ವಿಭೋಃ ॥ ೪೪ ॥

ಆವರ್ತತೇ ನ ಚಾದ್ಯಾಪಿ ಗತೋಽಸೌ ಪರಮಂ ಪದಂ ।
ಇತಿ ತೇ ಕಥಿತಂ ರಾಜನ್ ಗತಃಸಿದ್ಧಿಂ ಮಹಾದ್ವಿಜಃ ॥ ೪೫ ॥

ಉಪೋಷ್ಯೇಮಾಂ ಭವೇದ್ವೀರ ಸಪ್ತಮೀಂ ಯಾತಿ ಭಾಸ್ಕರಂ ।
ಕೌಥುಮಿರ್ನರಶಾರ್ದೂಲ ಪ್ರಸಾದಾದ್ಭಾಸ್ಕರಸ್ಯ ತು ॥ ೪೬ ॥

ಜಪಮಾನಸ್ತು ವೈ ಸೋಽಪಿ ಪುರಾಣಶ್ರವಣಸ್ತಥಾ ।
ಇತ್ಯೇಷಾ ಕಥಿತಾ ರಾಜನ್ ಪ್ರಥಮಾ ಸಪ್ತಮೀ ತಥಾ ॥ ೪೭ ॥

---

೪೩. ಅಯ್ಯಾ ಮಹಾರಾಜನೆ! ಸೂರ್ಯದೇವನನ್ನು ಪೂಜೆಮಾಡಿದವನಿಗೂ, ಜಪವನ್ನು ಮಾಡಿದವನಿಗೂ ಲಭಿಸುವ ಫಲವನ್ನು ಹೇಳುತ್ತೇನೆ, ಒಂದೇ ಮನಸ್ಸಿನಿಂದ ಕೇಳು.

೪೪. ಈ ಪ್ರಕಾರ ಆರಾಧಿಸಿದ ಆ ಬ್ರಾಹ್ಮಣನು ಸೂರ್ಯಾನುಗ್ರಹದಿಂದ ಸಶರೀರನಾಗಿಯೇ ಸೂರ್ಯಮಂಡಲವನ್ನು ಪ್ರವೇಶಿಸಿ, ಸೂರ್ಯದೇವನ ಶ್ರೇಷ್ಠವಾದ ಸ್ಥಾನವನ್ನು ಹೊಂದಿದನು. ಹೀಗೆ ಪರಮಪದವನ್ನು ಹೊಂದಿದ ಅವನು ಆದ್ಯಾಪಿ ಹಿಂದಿರುಗಿ ಬರಲಿಲ್ಲ.

೪೫-೪೬. ಎಲೈ ನರಶ್ರೇಷ್ಠನಾದ ರಾಜನೇ! ಮಹಾಬ್ರಾಹ್ಮಣನಾದ ಆ ಕೌಥುಮಿಯು ಹೀಗೆ ಪುರಾಣಶ್ರವಣ ಮಾಡುತ್ತಲೂ, ಮಂತ್ರವನ್ನು ಜಪಿಸುತ್ತಲೂ, ಇದ್ದು; ಸೂರ್ಯನ ಅನುಗ್ರಹ ಪಡೆದು ಸಿದ್ಧಿಹೊಂದಿದ ಈ ವಿಷಯವನ್ನು ನಿನಗೆ ಹೇಳಿದ್ದೇನೆ. ಅಯ್ಯಾ ವೀರನೇ! ಈ ಸಪ್ತಮಿಯಲ್ಲಿ ಉಪವಾಸ ಮಾಡಿದವನು ಕೃತಾರ್ಥನಾಗುತ್ತಾನೆ. ಮತ್ತು ಸೂರ್ಯನನ್ನು ಸೇರುತ್ತಾನೆ.

೪೭-೪೮. ದ್ರವ್ಯಪ್ರದವೂ, ರವಿಪ್ರಿಯವೂ ಎನಿಸಿದುದೂ; ಸಪ್ತಮೀವ್ರತಗ

ಅರ್ಕಸ್ಯ ಪುಟಿಕಾ ಪುಣ್ಯಾ ವಿತ್ತದಾ ಯಾ ಪ್ರಿಯಾ ರವೇಃ ॥ ೪೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೌರಧರ್ಮೇಽರ್ಕಸಂಪುಟಿಕಾನಾಮ ಸಪ್ತಮೀವ್ರತ ವರ್ಣನಂ
ನಾಮೈಕಾದಶಾಧಿಕ ದ್ವಿಶತತಮೋಽಧ್ಯಾಯಃ.



---

ಇಲ್ಲಿ ಮೊದಲನೆಯದೂ ಆದ ಅರ್ಕಸಂಪುಟಸಪ್ತಮಿಯ ವಿಚಾರವನ್ನೆಲ್ಲಾ ನಿನಗೆ ಹೇಳಿದುದಾಯಿತು ಎಂದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ
ಸೌರಧರ್ಮದಲ್ಲಿ ಅರ್ಕಸಂಪುಟನಾಮಕವಾದ ಸಪ್ತಮೀ ವ್ರತವರ್ಣನೆ
ಯೆಂಬ ಇನ್ನೂರಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ದ್ವಾದಶಾಧಿಕದ್ವಿಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

**ಇತ್ಯೇಷಾ ಕಥಿತಾ ವೀರ ಅರ್ಕಸಂಪುಟಿಕಾ ತವ ।**
**ದ್ವಿತೀಯಾ ಮರಿಚ್ಯೆರ್ಯಾ ತು ಶೃಣುಷ್ವ ಗದತೋ ಮಮ ॥ ೧ ॥**

**ಶುಕ್ಲಪಕ್ಷೇ ತು ಚೈತ್ರಸ್ಯ ಷಷ್ಠ್ಯಾಂ ಸಮ್ಯಗುಪೋಷಿತಃ ।**
**ಪೂಜಯೇದ್ಭಾಸ್ಕರಂ ಭಕ್ತ್ಯಾ ಸೌರಧರ್ಮವಿಧಾನತಃ ॥ ೨ ॥**

---

## ಇನ್ನೂರಹನ್ನೆರಡನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನಿಗೆ ವಿಚಾರವನ್ನು ಮುಂದು ವರಿಸಿ ಹೇಳುತ್ತಾರೆ—"ಎಲೈ ವೀರನೇ! ಹೀಗೆ ಅರ್ಕಸಂಪುಟ ಸಪ್ತಮೀವ್ರತ ವಿಧಾನ ವನ್ನು ನಿನಗೆ ತಿಳಿಸಿ ಆಯಿತು. ಈಗ ನಾನು ಎರಡನೆಯದಾದ ಮರಿಚಸಪ್ತಮಿಯ ವಿಚಾರವನ್ನು ಹೇಳುತ್ತೇನೆ ಕೇಳು.

೨. ಸಂಗ್ರಹವಾಗಿ ಹೇಳುವುದಾದರೆ ಚೈತ್ರ ಶುಕ್ಲಷಷ್ಠಿಯಲ್ಲಿ ಸಂಪೂರ್ಣ ಉಪವಾಸಮಾಡಿ ಸೌರಧರ್ಮ ವಿಧಾನೋಕ್ತವಾಗಿ ಸೂರ್ಯನನ್ನು ಭಕ್ತಿಯಿಂದ ಪೂಜಿಸ ಬೇಕು" ಎಂದನು.

॥ ಶತಾನೀಕ ಉವಾಚ ॥
ಬ್ರೂಹಿ ಸರ್ವಾನ್ಮಮ ಬ್ರಹ್ಮನ್ಮಂತ್ರಾನ್ಪುಣ್ಯಾನ್ವಿಶೇಷತಃ ।
ಸೂರ್ಯಾದಿಹೃದಯಂ ಚಾಪಿ ಶಿರೋನ್ಯಾಸಯುತಾಂಸ್ತಥಾ ॥ ೩ ॥

॥ ಸುಮಂತುರುವಾಚ ॥
ಅಹಂ ತೇ ಕಥಯಿಷ್ಯಾಮಿ ರಹಸ್ಯಂ ಪರಮಂ ವಿಭೋ ।
ಯದುಕ್ತಂ ಬ್ರಹ್ಮಣಾ ಪೂರ್ವಂ ಭಕ್ತ್ಯಾ ಭಾನೋರ್ಮಹಾತ್ಮನಃ ॥ ೪ ॥

ಸರ್ವಪಾಪಕ್ಷಯಾರ್ಥಾಯ ತಚ್ಛೃಣುಷ್ವ ಮಹಾಮತೇ ।
ಸರ್ವಪಾಪಹರಂ ಪುಣ್ಯಮಾದಿತ್ಯಂ ಲೋಕಪೂಜಿತಂ ॥ ೫ ॥

ಶಿಖಾದಾಮಸಮಾಯುಕ್ತಂ ವಕಾರಾಮೃತಮುತ್ತಮಂ ।
ಓಂ ವಂ ಫಟ್ ॥
ಓಂ ವಿಷಸೂರ್ಯಃ ಸ್ವಯಂ ತಾತ ಮಂತ್ರಮೂರ್ತಿರ್ಮಹಾಬಲಃ ॥ ೬ ॥

---

೩. ಆಗ ಶತಾನೀಕರಾಜನು ಸುಮಂತುಮುನಿವರ್ಯರನ್ನು ಕೇಳುತ್ತಾನೆ— "ಎಲೈ ಬ್ರಾಹ್ಮಣಶ್ರೇಷ್ಠನೇ! ಹೃದಯ ಶಿರಸ್ಸು ಮುಂತಾದ ಅಂಗನ್ಯಾಸಸಹಿತವಾಗಿರುವಂತೆ ಪುಣ್ಯಕರಗಳಾದ ಸೂರ್ಯಹೃದಯ ಮುಂತಾದ ಎಲ್ಲ ಮಂತ್ರಗಳನ್ನೂ ನನಗೆ ವಿವರವಾಗಿ ಹೇಳು ಎಂದನು.

೪. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಮುಂದುವರಿಸಿ ಹೇಳುವವರಾಗಿ "ಅಯ್ಯಾ ವಿಭುವೇ! ಮಹಾತ್ಮನಾದ ಸೂರ್ಯನ ಭಕ್ತಿಯಿಂದ ಕೂಡಿದ ಬ್ರಹ್ಮನು ಪೂರ್ವದಲ್ಲಿ ಹೇಳಿದ ಪರಮರಹಸ್ಯವಾದ ಈ ವಿಷಯವನ್ನು ಈಗ ನಾನು ನಿನಗೆ ಹೇಳುತ್ತೇನೆ.

೫-೬. ಅಯ್ಯಾ ಮಹಾಬುದ್ಧಿಶಾಲಿಯೇ! ಸರ್ವಪಾಪಹರವೂ, ಪುಣ್ಯಕರವೂ, ಲೋಕಪೂಜಿತವೂ ಎನಿಸಿ ಶಿಖಾ ಎಂಬ ದಾಮದಿಂದ ಕೂಡಿ ಅಮೃತಸಮಾನವಾಗಿರುವ ಉತ್ತಮವಾದ ವಕಾರವುಳ್ಳುದಾದ, "ಓಂ ವಂ ಫಟ್" ಓಂ ಎಂಬ ಶ್ರೇಷ್ಠವಾದ ಆದಿತ್ಯಹೃದಯಮಂತ್ರವನ್ನು ಹೇಳುತ್ತೇನೆ ಕೇಳು. ಈ ಮಂತ್ರವು ಮಹಾಬಲಶಾಲಿಯೂ, ಮಂತ್ರಮೂರ್ತಿಯೂ ಆದ ಸೂರ್ಯನ ಸ್ವರೂಪವಾಗಿದೆ. ಇದು ನಿನ್ನ ಸಮಸ್ತ ಪಾಪಗಳನ್ನೂ ಪರಿಹಾರಮಾಡುತ್ತದೆ.

ಅಸ್ಯಾನುಸ್ಮರಣಾನ್ಮಂತ್ರೀ ನಿತ್ಯಂ ಮಧುರಭೋಜನಃ ।
ಸಂವತ್ಸರೇಣ ದೇವೇಶಂ ಸಾಕ್ಷಾದ್ಭಾನುಂ ಪ್ರಪಶ್ಯತಿ ॥ ೭ ॥

ವ್ಯಾಧಿಮೃತ್ಯ್ವೋಶ್ಚ ನಿರ್ಮುಕ್ತಃ ಸೂರ್ಯಲೋಕಂ ಸ ಗಚ್ಛತಿ ।
ಸತತಂ ಜಪಮಾನಸ್ತು ರಾಜರ್ಷೇ ಮಂತ್ರವಿದಾಂ ವರಃ ॥ ೮ ॥

ಮನಸಾ ಕರ್ಮಣಾ ವಾಚಾ ಶಾಪಾನುಗ್ರಹತೋಽಪಿ ವಾ ।
ಕ್ಷೀರಾಶೀ ಮೌನಮಾಶ್ರಿತ್ಯ ವಿವಿಕ್ತೇ ನಿಯತೇಂದ್ರಿಯಃ ॥ ೯ ॥

ಜಪಿತ್ವಾ ದ್ವಾದಶಲಕ್ಷಂ ಸಶರೀರೋ ದಿವಂ ವ್ರಜೇತ್ ।
ತ್ರೈಲೋಕ್ಯಂ ಚರತೇ ರಾಜಂಶ್ಚಿಂತಾಮಣಿರಿವೇಚ್ಛಯಾ ॥ ೧೦ ॥

---

೭. ಮಂತ್ರಜ್ಞನಾದ ಪುರುಷನು ಸೂರ್ಯನನ್ನು ಸ್ಮರಿಸಿ ನಿತ್ಯವೂ ಈ ಮಂತ್ರ ಜಪಮಾಡುತ್ತಾ, ಮಧುರವಸ್ತುಗಳನ್ನು ಆಹಾರವಾಗಿ ತೆಗೆದುಕೊಳ್ಳುತ್ತಾ, ಒಂದು ಸಂವತ್ಸರದವರೆಗೆ ಈ ವ್ರತವನ್ನಾಚರಿಸಿದರೆ, ಸೂರ್ಯಲೋಕಕ್ಕೆ ಹೋಗಿ ದೇವೇಶನಾದ ಸೂರ್ಯನನ್ನು ಸಾಕ್ಷಾತ್ತಾಗಿ ನೋಡುತ್ತಾನೆ.

೮. ಅಯ್ಯಾ ರಾಜನೇ! ಮಂತ್ರಜ್ಞರಲ್ಲಿ ಶ್ರೇಷ್ಠನಾದವನು ಮನಸ್ಸು, ವಾಕ್ಕು ಕರ್ಮ ಇವುಗಳ ಐಕ್ಯತೆಯಿಂದ ಯಾವಾಗಲೂ ಈ ಮಂತ್ರಜಪ ಮಾಡಿದರೆ ವ್ಯಾಧಿಗಳಿಂದಲೂ, ಅಪಮೃತ್ಯುಬಾಧೆಗಳಿಂದಲೂ ರಹಿತನಾಗಿ ಸೂರ್ಯಲೋಕಕ್ಕೆ ಹೋಗುತ್ತಾನೆ.

೯-೧೦. ತನಗೆ ಯಾವುದಾದರೂ ಶಾಪಗಳು ಪ್ರಾಪ್ತವಾಗಿದ್ದರೆ ಅವುಗಳು ನಿವೃತ್ತಿಯಾಗುವುದಕ್ಕಾಗಿಯೂ, ಪರಮಾತ್ಮನ ಅನುಗ್ರಹವನ್ನು ಪಡೆಯುವುದಕ್ಕಾಗಿಯೂ, ಪ್ರಯತ್ನಿಸುವವನು ವಿಜನವಾದ ಸ್ಥಳದಲ್ಲಿ ಕುಳಿತು ಇಂದ್ರಿಯಗಳನ್ನು ನಿಗ್ರಹಿಸಿ, ಕ್ಷೀರಾಹಾರವನ್ನು ಸೇವಿಸುತ್ತಾ ಮೌನವ್ರತವುಳ್ಳವನಾಗಿ, ಹನ್ನೆರಡು ಲಕ್ಷ ಜಪಮಾಡಬೇಕು. ಹೀಗೆ ಮಾಡಿದರೆ ಸಶರೀರವಾಗಿ ಸ್ವರ್ಗಕ್ಕೆ ಹೋಗುತ್ತಾನೆ. ಅಲ್ಲದೆ ಚಿಂತಾಮಣಿರತ್ನದಂತೆ ಮನೋರಥಪ್ರದನಾಗಿ ಸ್ವೇಚ್ಛೆಯಾಗಿ ಮೂರುಲೋಕಗಳಲ್ಲಿಯೂ ಸಂಚರಿಸುತ್ತಾನೆ.

ಅರ್ಥದಂ ಪರಮಂ ನಾಮಂ ಸೂರ್ಯಸ್ಯ ಹೃದಯಂ ಶೃಣು ।
ಸ್ಮರ್ತವ್ಯಂ ಶುಚಿನಾ ನಿತ್ಯಂ ಸರ್ವಪಾಪಭಯಾಪಹಂ ॥ ೧೧ ॥

ವಿಯುಕ್ತಂ ಚಂದ್ರಸಂಯುಕ್ತಮೃಕಾರೇಣ ಚ ಭಾರತ ।
ಓಂಕಾರದೀಪಿತಂ ಚೈವ ಹೃದಯಂ ಪರಿಕೀರ್ತಿತಂ ॥ ೧೨ ॥

ಯಕಾರಬಿಂದುಸಂಯುಕ್ತಂ ವೈ ಶಿಖಾ ಕಥಿತಾ ಬುಧೈಃ ।
ಯಕಾರಶ್ಚ ವಕಾರಶ್ಚ ಮಾತ್ರಾಬಿಂದುಸ್ತಥಾ ನೃಪ ॥ ೧೩ ॥

ಇಷ್ಟಂ ಕವಚಮಾದಿಷ್ಟಮಸ್ತ್ರಂ ವಕ್ಷ್ಯೇ ನಿಬೋಧ ಮೇ ।
ಪ್ರಣವಾದಿಂ ದುಕಾರಂ ಚ ಸಾನುಸ್ವಾರಂ ಕಟಿಸ್ತಥಾ ॥ ೧೪ ॥

ಇದಮಸ್ತ್ರಂ ಸ್ಮೃತಂ ರಾಜನ್ನಮೃತಂ ಚ ನಿಬೋಧ ಮೇ ।
ಬಿಂದುಚಂದ್ರಸಮಾಯುಕ್ತಂ ವಕಾರಮಮೃತಂ ಸ್ಮೃತಃ ॥ ೧೫ ॥

---

೧೧. ಪುರುಷಾರ್ಥಪ್ರದವೂ, ಶ್ರೇಷ್ಠವೂ; ಮನೋಹರವೂ ಆದ ಸೂರ್ಯಹೃದಯಮಂತ್ರವನ್ನು ಕೇಳು. ಇದನ್ನು ಶುಚಿಯಾಗಿ ಸರ್ವದಾ ಜಪಿಸಿದರೆ ಸರ್ವಪಾಪಗಳ ಭಯ ಪರಿಹಾರವಾಗುವುದು.

೧೨. ಅಯ್ಯಾ ಭರತಕುಲಜನೇ! 'ವಿ' ಎಂಬ ಅಕ್ಷರದಿಂದ ಯುಕ್ತವೂ ಚಂದ್ರಸಂಜ್ಞಕವಾದ ಬಿಂದುವಿನಿಂದಲೂ, ಋಕಾರದಿಂದಲೂ ಯುಕ್ತವೂ ಆಗಿ, ಓಂಕಾರಪೂರ್ವಕವಾಗಿ ಪ್ರಕಾಶಿತವಾದ ಭಾಗವೇ ಸೂರ್ಯಹೃದಯವೆಂದು ಉಕ್ತವಾಗಿದೆ.

೧೩. ಅಯ್ಯಾ ರಾಜನೇ! ಬಿಂದುಸಂಯುಕ್ತವಾದ 'ಯ'ಕಾರವೂ ಶಿಖಾ ಎಂಬದಾಗಿ ವಿದ್ವಾಂಸರು ಹೇಳುತ್ತಾರೆ. ಮತ್ತು ಬಿಂದುಸಂಯುಕ್ತವಾದ ಯಕಾರ ವಕಾರಗಳು ಸೂರ್ಯೇಷ್ಟವಾದ ಕವಚವೆಂದು ಹೇಳಿದೆ. ಈಗ ಅಸ್ತ್ರವಿಚಾರವನ್ನು ಹೇಳುವೆನು ಕೇಳು.

೧೪. ಓಂಕಾರವೇ ಆದಿಯಾಗಿ ಉಳ್ಳುದೂ ಅನುಸ್ವಾರಸಹಿತವಾದ 'ದು' ಕಾರವೂ, ಕಕಾರ, ಟಕಾರವೆಂಬುದೂ, ಸೇರಿದ 'ಓಂ ದುಂ ಕ ಟ' ವೆಂಬುದನ್ನು ಅಸ್ತ್ರವೆಂದು ತಿಳಿಯಬೇಕು.

೧೫. ಇನ್ನು ಅಮೃತದ ವಿಚಾರವನ್ನು ಹೇಳುತ್ತೇನೆ ಕೇಳು. ಚಂದ್ರಸಂಜ್ಞಕವಾದ ಬಿಂದುವಿನಿಂದ ಯುಕ್ತವಾದ ವಕಾರವು ಅಮೃತವೆಂದು ತಿಳಿಯಬೇಕು.

**ಓಂ ಬ್ರಹ್ಮನ್ನಸ್ತ್ರಮಮೃತಂ ಗಾಯತ್ರೀಂ ಚಾಪಿ ತೇರೋರಾಂ ಧೇನುರ್ವೈ**
**ಪರಿಕೀರ್ತಿತಂ**
**ಯಕಾರಶ್ಚ ವಕಾರಶ್ಚ ರಿರೋ ವೈ ನೇತ್ರಮಾದಿಶೇತ್ ॥ ೧೬ ॥**

**ವ್ಯನೇತ್ರ ಏತಾನ್ಯಂಗಾನಿ ಸೂರ್ಯಸ್ಯಾಮಿತತೇಜಸಃ ।**
**ಆದಿತ್ಯಂ ಮೂರ್ಧ್ನಿ ವಿನ್ಯಸ್ಯ ಹೃದಯೇ ಹೃದಯಂ ನ್ಯಸೇತ್ ॥ ೧೭ ॥**

**ಸಾವಿತ್ರೀಂ ಕಂಠದೇಶೇ ತು ಅಶೇಷಂ ಮೂರ್ಧ್ನಿ ಚಿಂತಯೇತ್ ।**
**ಅರ್ಕನ್ಯಾಸೋ ಮಯಾಖ್ಯಾತೋ ವಿದ್ವಾನ್ನ್ಯಾಸಂ ಪ್ರಕಲ್ಪಯೇತ್ ॥೧೮॥**

**ಏಕಾಕ್ಷರಸ್ಯ ಸೂರ್ಯಸ್ಯ ಶೃಣ್ವರ್ಚನವಿಧಿಂ ಪರಂ ।**
**ಪ್ರಥಮಂ ಕಿಂಕಿಣೀಮುದ್ರಾಂ ಬದ್ಧ್ವಾ ತು ಹೃದಯೇ ನೃಪ ॥ ೧೯ ॥**

**ಪ್ರಾಣಾಯಾಮೇ ಚ ತಥಾ ಪರಿವೀರಸಮನ್ವಿತಂ ।**
**ಏಕಾಕ್ಷರಂ ಸಮಾವೇತ್ತಿ ಆತ್ಮಶುದ್ಧ್ಯರ್ಥಮಾದರಾತ್ ॥ ೨೦ ॥**

---

೧೬ ಬ್ರಹ್ಮಸ್ವರೂಪವಾದ ಓಂ ಎಂಬುವನ್ನೂ ಅಸ್ತ್ರಮಂತ್ರವಾದ 'ದುಂಕಟ' ವನ್ನೂ ಅಮೃತಸಂಜ್ಞಕವಾದ 'ವಂ' ಎಂಬ ಅಕ್ಷರವನ್ನೂ, ಗಾಯತ್ರಿಯನ್ನೂ, "ತೇ ರೋ ರಾಂ'' ಎಂಬುದನ್ನೂ ಧೇನುವೆಂದು ಹೇಳಿದೆ. ಯಕಾರ ವಕಾರಗಳನ್ನೂ, "ರಿ ರೋ" ಎಂಬುದನ್ನೂ, ನೇತ್ರಗಳೆಂದು ತಿಳಿಯಬೇಕು.

೧೭. ಅಮಿತತೇಜಸ್ವಿಯಾದ ಸೂರ್ಯನ ಈ ಅಂಗಗಳು ವ್ಯನೇತ್ರಗಳೆನಿಸಿಕೊಳ್ಳುವುವು. ತನ್ನ ಶಿರಸ್ಸಿನಲ್ಲಿ ಆದಿತ್ಯನನ್ನೂ, ತನ್ನ ಹೃದಯದಲ್ಲಿ ಸೂರ್ಯಹೃದಯ ಮಂತ್ರವನ್ನೂ ನ್ಯಾಸಮಾಡಬೇಕು. ಕಂಠದೇಶದಲ್ಲಿ ಸಾವಿತ್ರಿ (ಗಾಯಿತ್ರಿ) ಯನ್ನೂ ಮಿಕ್ಕ ಸಮಸ್ತವನ್ನೂ ನೆತ್ತಿಯಲ್ಲಿಯೂ ನ್ಯಾಸಮಾಡಿ ಚಿಂತನಮಾಡಬೇಕು.

೧೮. ಸೂರ್ಯಹೃದಯಮಂತ್ರಕ್ಕೆ ನ್ಯಾಸಕ್ರಮವನ್ನು ಈ ರೀತಿಯಾಗಿ ಹೇಳಿಯಾಯಿತು. ವಿದ್ವಾಂಸನಾದವನು ತಪ್ಪದೆ ಈ ಕ್ರಮದಲ್ಲಿ ನ್ಯಾಸಮಾಡಿಕೊಳ್ಳಬೇಕು.

೧೯. ಅಯ್ಯಾ ರಾಜನೇ! ಏಕಾಕ್ಷರಾತ್ಮಕಸ್ವರೂಪನೂ, ನಾಶರಹಿತನೂ, ಆದ ಸೂರ್ಯನ ಶ್ರೇಷ್ಠವಾದ ಪೂಜಾವಿಧಾನವನ್ನು ಹೇಳುತ್ತೇನೆ ಕೇಳು. ಮೊದಲು ಕಿಂಕಿಣೀ ಮುದ್ರೆಯನ್ನು ಬಂಧನಮಾಡಿ ಹೃದಯದಲ್ಲಿ ನ್ಯಾಸಮಾಡಬೇಕು.

೨೦ ಹಾಗೆಯೇ ಪ್ರಾಣಾಯಾಮದಲ್ಲಿಯೂ ಕೂಡ ಪರಿವೀರಸಂಜ್ಞೆಯಿಂದ ಕೂಡಿದ (ಪ್ರಣವ) ಏಕಾಕ್ಷರವನ್ನು ಮನಶ್ಶುದ್ಧಿಗೋಸ್ಕರ ಚಿಂತಿಸಬೇಕು.

ಪುನಸ್ತ್ವಾಮೇವ ವಂದ್ಯಂ ತು ವಕಾರೇಣಾತ್ಮನಾ ಲಭೇತ್ ॥ ೨೧ ॥

ಏತತ್ಕೃತ್ವಾದಿತ್ಯಸಮೋ ಭವತೀತಿ ನ ಸಂಶಯಃ ।
ಕೃತ್ವಾ ಚ ಮುದ್ರಾಂ ಪ್ರಾಸಾದೇ ಅಸ್ತ್ರಂ ಯೋಜ್ಯ ಮಹೀಪತೇ ॥ ೨೨ ॥

ಪ್ರಾಸಾದಶೋಭನಂ ಸ್ಯಾದ್ವೈ ಕೃತ್ವಾ ತದ್ಭರತರ್ಷಭ ।
ಕವಚೇನಾರ್ಕವಾಂಛತ್ರುಂ ಕ್ಷಾಲಯೇದ್ವರ್ಧನಕ್ರಿಯಾಂ ॥ ೨೩ ॥

ತತೋಽರ್ಘ್ಯಪಾತ್ರಂ ಪುಷ್ಪೈಶ್ಚ ಪೂಜಯೇದ್ವಿಧಿವನ್ನೃಪ ।
ಹೃದಿ ನಾ ಸ್ನಾಪಯೇದ್ದೇವಂ ತತಃ ಪೂಜಾಂ ಸಮಾಚರೇತ್ ॥ ೨೪ ॥

ಪದ್ಮಮುದ್ರಾಂ ಪುಷ್ಪಗರ್ಭಾಂ ದೇವಸ್ಯ ಶಿರಸಿ ನ್ಯಸೇತ್ ।
ಆವಾಹಿತೋ ಭವೇದೇವಂ ದೇವದೇವೋ ದಿವಾಕರಃ ॥ ೨೫ ॥

---

೨೧ 'ಪುನಸ್ತ್ವಾದಿತ್ಯಾ' ಎಂಬ ಮಂತ್ರವನ್ನು ಅಮೃತಸಂಜ್ಞಕವಾದ ವಕಾರದೊಡನೆ ಉಚ್ಚರಿಸುತ್ತಾ ಜಗದ್ವಂದ್ಯನಾದ ಸೂರ್ಯನನ್ನು ತನ್ನ ಆತ್ಮದಲ್ಲಿ ಸ್ಥಾಪಿಸಿದಂತೆ ತಿಳಿಯಬೇಕು.

೨೨. ಅಯ್ಯಾ ಭರತಕುಲಶ್ರೇಷ್ಠನಾದ ಮಹೀಪತಿಯೇ! ಹೀಗೆ ನ್ಯಾಸಮಾಡಿಕೊಂಡು ಜಪಮಾಡಿದರೆ ಅವನು ಸೂರ್ಯನಿಗೆ ಸಮಾನನಾಗುವನೆಂಬುದರಲ್ಲಿ ಸಂಶಯವಿಲ್ಲ. ದೇವರ ಗರ್ಭಾಂಕಣದಲ್ಲಿ "ಪ್ರಾಸಾದದಲ್ಲಿ" ಕುಳಿತುಕೊಂಡು ಕಿಂಕಿಣೀ ಮುದ್ರೆಯನ್ನು ವಿನ್ಯಾಸಮಾಡಿ ಅದರೊಡನೆ ಅಸ್ತ್ರಮಂತ್ರಾಕ್ಷರವನ್ನು ಸಂಯೋಜನೆ ಮಾಡಿ ಜಪಮಾಡಿದರೆ ಆ ಪ್ರಾಸಾದವೆಲ್ಲವೂ ಪರಿಶುದ್ಧವಾಗಿ ಅಲಂಕೃತವಾಗುವುದು.

೨೩-೨೪. ಅರ್ಕಕವಚ ಮಂತ್ರವನ್ನು ತನ್ನ ದೇಹದ ಅವಯವಗಳಲ್ಲಿ ನ್ಯಾಸ ಮಾಡಿಕೊಂಡರೆ ತಾನು ಛೇದಿಸಬೇಕಾದ ಶತ್ರುವನ್ನು ಧ್ವಂಸಮಾಡಿಬಿಡಬಹುದು. ಅಯ್ಯಾ ನೃಪನೇ! ಕೇಳು! ಅನಂತರ ಅರ್ಘ್ಯಪಾತ್ರೆಯನ್ನು ತೊಳೆದು ವಿಧಿಪ್ರಕಾರ ಹೂಗಳಿಂದ ಪೂಜಿಸಬೇಕು. ಈ ಸಂದರ್ಭದಲ್ಲಿ ಸೂರ್ಯಭಕ್ತನಾದ ಮನುಷ್ಯನು ಮಾನಸಪೂಜಾಕ್ರಮವನ್ನೇ ಅನುಸರಿಸಿ ತನ್ನ ಹೃದಯದಲ್ಲಿಯೇ ದೇವನಿಗೆ ಸ್ನಾನ ಮಾಡಿಸಿದಂತೆ ಕಲ್ಪಿಸಿಕೊಂಡು ಅನಂತರ ಪೂಜೆಮಾಡಬೇಕು.

೨೪-೨೫. ಪದ್ಮಮುದ್ರಾಪ್ರದರ್ಶನಮಾಡಿ ದೇವರ ಶಿರಸ್ಸಿನಲ್ಲಿಟ್ಟ ಪದ್ಮಪುಷ್ಪ ಪೂಜೆಮಾಡಿದಂತೆ ಮನಸ್ಸಿನಲ್ಲಿ ಭಾವಿಸಬೇಕು. ದೇವದೇವನಾದ ದಿವಾಕರನನ್ನು

**ಹೃದಯೇನಾರ್ಘ್ಯಸಂಯುಕ್ತಾಂ ಪೂಜಾಂ ಬಧ್ನೀತ ಭಾರತ ।**
**ಹೃದಯೇನ ಚ ನೈವೇದ್ಯಂ ದಾತವ್ಯಂ ಶಕ್ತಿತೋ ವಿಭೋಃ ॥ ೨೬ ॥**

**ಯಥಾಶಕ್ತಿ ಜಪಂ ಕುರ್ಯಾತ್ಸುವ್ರತೀ ವಾಗ್ಯತೇಂದ್ರಿಯಃ ।**
**ಅನೇನ ವಿಧಿನಾ ರಾಜರ್ಷೇ ಸರ್ವಕಾರ್ಯಾಣಿ ಸಾಧಯೇತ್ ॥ ೨೭ ॥**

**ನ ಕ್ವಚಿತ್ಪ್ರತಿಘಾತಃ ಸ್ಯಾಸ್ಯಾನ್ನ ಚಾಪಿ ದುರಿತಂ ಭವೇತ್ ।**
**ವ್ಯೋಮಮುದ್ರಾಂ ಪರಾಂ ಬಧ್ವಾ ಕೃತ್ವಾ ಚಾಪಿ ಪ್ರದಕ್ಷಿಣಂ ॥ ೨೮ ॥**

**ದೇವಂ ವಿಸರ್ಜಯೇತ್ಪಶ್ಚಾದ್ಧೃದಯೇನ ಮಹೀಪತೇ ॥ ೨೯ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಾರ್ಚನ ವಿಧಿವರ್ಣನಂ ನಾಮ ದ್ವಾದಶಾಧಿಕ ದ್ವಿಶತತಮೋಽಧ್ಯಾಯಃ.**



ಮನಸ್ಸಿನಲ್ಲೇ ಆವಾಹನೆಮಾಡಬೇಕು. ಮನಸ್ಸಿನಲ್ಲೇ ಅರ್ಘ್ಯಪ್ರದಾನ ಮಾಡಿದಂತೆ ಕಲ್ಪಿಸಿ ಪೂಜೆಮಾಡಬೇಕು. ಶಕ್ತ್ಯನುಸಾರ ಸ್ವಾಮಿಗೆ ನೈವೇದ್ಯವನ್ನೂ ಮನಸ್ಸಿನಲ್ಲೇ ಕಲ್ಪಿಸಿ ಅರ್ಪಿಸಬೇಕು. ಚೆನ್ನಾಗಿ ವ್ರತಾಚರಣಮಾಡುವವನು ವಾಗಿಂದ್ರಿಯ ನಿಗ್ರಹಮಾಡಿಕೊಂಡು ಮೌನವಾಗಿ ಯಥಾಶಕ್ತಿ ಜಪಮಾಡಬೇಕು.

೨೮-೨೯. ಎಲೈ ರಾಜನೇ! ಈ ವಿಧಾನದಿಂದಲೇ ಸಮಸ್ತ ಪೂಜಾಕಾರ್ಯಗಳನ್ನೂ ಮಾನಸಿಕವಾಗಿ ಸಾಧಿಸಬಹುದು. ಹೀಗೆ ಮಾಡುವವನಿಗೆ ಎಲ್ಲಿಯೂ ಯಾವ ತಡೆಯೂ ಉಂಟಾಗುವುದಿಲ್ಲ. ಯಾವ ಪಾಪವೂ ಉಂಟಾಗುವುದಿಲ್ಲ. ಶ್ರೇಷ್ಠವಾದ ವ್ಯೋಮಮುದ್ರೆಯನ್ನು ತೋರಿಸಿ ಅನಂತರ ಮನಸ್ಸಿನಲ್ಲೇ ಪ್ರದಕ್ಷಿಣನಮಸ್ಕಾರವನ್ನೂ ಮಾಡಿ ಬಳಿಕ ಹೃದಯದಲ್ಲಿಯೇ ವಿಸರ್ಜನವನ್ನೂ ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೌರಾರ್ಚನ ವಿಧಿವರ್ಣನೆ ಯೆಂಬ ಇನ್ನೂರಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ

॥ ಸುಮಂತುರುವಾಚ ॥

ದೃಷ್ಟ್ವಾ ತು ಪಾವಕಂ ದೇವಂ ಪಾವಕಸ್ಥಂ ದಿವಾಕರಂ ।
ವಂದ್ಯಾತ್ತು ಸಪರೀವಾರಂ ಘುಕಾರಂ ಪರಿಕೀರ್ತಯೇತ್ ॥ ೧ ॥

ಏವಂ ಕೃತೇ ಶೋಧನಂ ಸ್ಯಾತ್ಪಾವಕಸ್ಯ ನ ಸಂಶಯಃ ।
ಪದ್ಮಗರ್ಭೇ ತತೋ ವಾಥ ಹೃದಯಾಗ್ನೌ ಸಮಾಕ್ಷಿಪೇತ್ ॥ ೨ ॥

---

## ಇನ್ನೂರಹದಿಮೂರನೆಯ ಅಧ್ಯಾಯ

೧. ಸುಮಂತುಮುನಿವರ್‍ಯರು ಪೂಜಾವಿಧಿಯನ್ನು ಹೇಳುತ್ತಾರೆ—ಬಳಿಕ ಯಜ್ಞೇಶ್ವರನನ್ನು ದರ್ಶನಮಾಡುವ ಮೂಲಕ ಅಗ್ನಿಯಲ್ಲಿ ಪರಿವಾರ ಸಮೇತನಾಗಿ ಅಂತರ್ಭೂತನಾಗಿರುವ ಸೂರ್‍ಯನನ್ನು ದರ್ಶನ ಮಾಡಿ ಅನಂತರ ನಮಿಸಬೇಕು. ಮತ್ತು ಆ ಕಾಲದಲ್ಲಿ 'ಘು'ಕಾರವನ್ನು ಚೆನ್ನಾಗಿ ಕೀರ್ತನಮಾಡಬೇಕು.

೨. ಹೀಗೆ ಮಾಡಿದರೆ ಅಗ್ನಿಯ ಶೋಧನವಾಗುವುದರಲ್ಲಿ ಸಂದೇಹವಿಲ್ಲ. ಆ ಮೇಲೆ ಪದ್ಮಗರ್ಭನ ಹೃದಯಾಗ್ನಿಯಲ್ಲಿ ಬಾಹ್ಯಾಗ್ನಿಯನ್ನು ನ್ಯಾಸಮಾಡಿಕೊಳ್ಳಬೇಕು.

**ಆವಾಹಿತೋ ಭವೇದ್ದೇವದೇವಃ ಸಾಕ್ಷಾನ್ನ ಸಂಶಯಃ ।**
**ಓಂಕಾರೇಣಾಹುತಿಶತಂ ನೇತ್ರಾಂಜನಸಮಾಧಿನಾ ॥ ३ ॥**

**ಪಂಚಾಹುತೀಸ್ತತೋ ದದ್ಯಾದಂಗಾನಾಂ ಪ್ರೀತಯೇ ನೃಪ ।**
**ವಿಸರ್ಜನಂ ತತಃ ಕುರ್ಯಾದ್ಧೃದಯೇನ ವಿಚಕ್ಷಣಃ ॥ ४ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸೌರಾರ್ಚನ ವಿಧಿವರ್ಣನಂ ನಾಮ ತ್ರಯೋದಶಾಧಿಕ ದ್ವಿಶತತಮೋಽಧ್ಯಾಯಃ.**



---

೩-೪. ಆಗ ದೇವದೇವನು ಸಾಕ್ಷಾತ್ತಾಗಿ ಆವಾಹಿತನಾಗುತ್ತಾನೆ. ಇದಕ್ಕೆ ಸಂಶಯವಿಲ್ಲ. ಬಳಿಕ ಕಣ್ಣುಮುಚ್ಚಿಕೊಂಡು ಧ್ಯಾನಯೋಗದಿಂದ ಕೂಡಿ ಓಂಕಾರ ದಿಂದ ಹೃದಯಾಗ್ನಿಗೆ ನೂರು ಆಹುತಿಗಳನ್ನೂ, ಆ ಮೇಲೆ ಅಂಗದೇವತಾಪ್ರೀತಿಗಾಗಿ ಐದಾಹುತಿಗಳನ್ನೂ ಕೊಡಬೇಕು. ವಿಚಕ್ಷಣನಾದವನು ಅನಂತರ ಹೃದಯದಿಂದ ಅಗ್ನಿಪುರುಷನನ್ನು ವಿಸರ್ಜನಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದಲ್ಲಿ ಸೌರಾರ್ಚನ ವಿಧಿವರ್ಣನ ವೆಂಬ ಇನ್ನೂರಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಚತುರ್ದಶಾಧಿಕದ್ವಿಶತತಮೋಽಧ್ಯಾಯಃ

॥ ಸುಮಂತುರುವಾಚ ॥

ಪದ್ಮಿನೀ ಚ ತಥಾ ವ್ಯೋಮ ಮಧ್ಯಮಾ ನಾಶಿನೀ ತಥಾ ।
ಅರ್ಕಿಣೀ ಜ್ವಾಲಿನೀ ಚೈವ ತೇಜನೀ ಚ ಗಭಸ್ತಿನೀ ॥ ೧ ॥

ಶಂಖಮುದ್ರಾ ಚ ದಶಮೀ ಸೂರ್ಯವಕ್ತ್ರಾ ತಥಾಪರಾ ।
ಸಹಸ್ರಕಿರಣಾಚ್ಚೈವ ಮುದ್ರಾ ದ್ವಾದಶ ಕೀರ್ತಿತಾಃ ॥ ೨ ॥

ದದ್ಯಾದರ್ಘ್ಯಂ ತು ಪದ್ಮಿನ್ಯಾ ವ್ಯೋಮ ಬದ್ಧ್ವಾ ಜಪೇದ್ಬುಧಃ ।
ಉದಾಶ್ರಯಾ ಮಧ್ಯಮಾ ತು ನಾಶಿನೀ ವ್ಯಾಧಿನಾಶಿನೀ ॥ ೩ ॥

---

## ಇನ್ನೂರಹನ್ನೊಂದನೆಯ ಅಧ್ಯಾಯ

೧-೨. ಸುಮಂತುಮುನಿವರ್ಯರು ಮುದ್ರಾಬಂಧನ ವಿಧಾನವನ್ನು ಕುರಿತು ಶತಾನೀಕರಾಜನಿಗೆ ಹೇಳುತ್ತಾರೆ—ಪದ್ಮಿನೀ, ವ್ಯೋಮ, ಮಧ್ಯಮಾ, ನಾಶಿನೀ, ಅರ್ಕಿಣೀ, ಜ್ವಾಲಿನೀ. ತೇಜಿನೀ, ಗಭಸ್ತಿನೀ, ಶಂಖ, ಸೂರ್ಯವಕ್ತ್ರಾ, ಸುಪ್ತ್ರಕೀರ್ಣಾ, ಸಹಸ್ರಕಿರಣಾ ಎಂಬ ಇವು ಹನ್ನೆರಡೂ ಮುದ್ರೆಗಳ ಹೆಸರುಗಳು.

೩. ಪದ್ಮಿನೀಮುದ್ರೆಯನ್ನು ಬಂಧಿಸಿ ತೋರಿಸಿ ಅರ್ಘ್ಯಪ್ರದಾನಮಾಡಬೇಕು. ವ್ಯೋಮಮುದ್ರೆಯನ್ನೂ ಬಂಧಿಸಿ ತೋರಿಸಿ ಜಪಮಾಡಬೇಕು. ಮಧ್ಯಮಾಮುದ್ರೆಯನ್ನು ಜಲಮಧ್ಯದಲ್ಲಿ ನಿಂತಾಗಮಾಡತಕ್ಕದ್ದು. ನಾಶಿನೀ ಮುದ್ರಾದರ್ಶನವು ಸಮಸ್ತ ವ್ಯಾಧಿಗಳ ಪರಿಹಾರಾರ್ಥವಾಗಿ ಮಾಡತಕ್ಕದ್ದಾಗಿದೆ.

ಅರ್ಕಿಣ್ಯಾ ಪಶ್ಯತೇ ಸೂರ್ಯಂ ವಿಧಿಸ್ಥಸ್ತು ಭವೇದ್ಯದಿ ।
ಜ್ವಾಲಿನೀಮುಪಸಂಗಂ ತು ಬದ್ಧ್ವಾ ಸೂರ್ಯಮುಖೋ ಜಪೇತ್ ॥ ೪ ॥

ಸಪ್ತಾಹಾದ್ವೀಕ್ಷತೇ ಸೂರ್ಯಂ ಸಿದ್ಧ್ಯತೇ ಚ ತತಃ ಸ್ವಯಂ ।
ಅವತೀರ್ಯ ಪದ್ಮಷಂಡೇ ಸೂರ್ಯಸ್ಯಾಭಿಮುಖೋ ನರಃ ॥ ೫ ॥

ಜಪಂ ಶತಸಹಸ್ರಂ ಹಿ ಅಕ್ಷಯಂ ಲಭತೇ ನಿಧಿಂ ।
ಶಂಖಮುದ್ರಾದಿಭಿರಿಮಂ ಸೂರ್ಯವಕ್ತ್ರವಿಧಿಂ ಶೃಣು ॥ ೬ ॥

ಅಹೋರಾತ್ರೋಷಿತೋ ಭಕ್ತ್ಯಾ ಭೂತ್ವಾ ಸೂರ್ಯಮುಖೋ ನರಃ ।
ಸ್ಥಿತಃ ಪದ್ಮಾಸನೇ ರಾಜನ್ ಜಪಂಶ್ಚಾಪ್ಯಯುತಂ ಮನುಂ ॥ ೭ ॥

ಪಶ್ಯತೇ ತು ತ್ರ್ಯಹಾತ್ಸೂರ್ಯಂ ಭವೇತ್ಸಿದ್ಧಿಶ್ಚ ಮಾನಸೀ ।
ಸಹಸ್ರಕಿರಣಂ ಬದ್ಧ್ವಾ ನಾಭಿಮಾತ್ರಜಲೇ ಸ್ಥಿತಃ ॥ ೮ ॥

---

೪–೫. ವಿಧಿಪ್ರಕಾರ ನಡೆಯತಕ್ಕವನು ಅರ್ಕಿಣೀ ಮುದ್ರಾಬಂಧನಮಾಡಿ ಸೂರ್ಯನನ್ನು ನೋಡಬೇಕು. ಜ್ವಾಲಿನೀ ಮುದ್ರಾಬಂಧನ ಮಾಡಿಕೊಂಡು ಸೂರ್ಯಾಭಿಮುಖವಾಗಿ ನಿಂತು ಜಪಮಾಡಬೇಕು. ಹೀಗೆ ಮಾಡಿದರೆ ಏಳುದಿನಗಳಲ್ಲಿ ಸೂರ್ಯನು ಪ್ರಸನ್ನನಾಗುವನು.

೬–೭. ಅಲ್ಲದೆ ತಾನೂ ಸಿದ್ಧಿ ಹೊಂದುತ್ತಾನೆ ಸರೋವರದಲ್ಲಿ ಇಳಿದು ನಿಂತು ಸೂರ್ಯಾಭಿಮುಖವಾಗಿ ನೋಡುತ್ತಾ ಶಂಖಮುದ್ರೆ ಮೊದಲಾದ ಮುದ್ರಾಬಂಧನವನ್ನು ಮಾಡಿ ಲಕ್ಷಜಪವನ್ನು ಮಾಡಿದರೆ ಅಕ್ಷಯವಾದ ಸಿದ್ಧಿಯನ್ನು ಹೊಂದುತ್ತಾನೆ. ಎಲೈ ರಾಜನೇ ! ಸೂರ್ಯವಕ್ತ್ರವೆಂಬ ಮುದ್ರೆಯ ಉಪಯೋಗಕ್ರಮವನ್ನು ಹೇಳುವೆನು ಕೇಳು. ಅಹೋರಾತ್ರಿ ಭಕ್ತಿಯಿಂದ ಉಪವಾಸಮಾಡಿ ಸೂರ್ಯಾಭಿಮುಖವಾಗಿ ಪದ್ಮಾಸನ ಹಾಕಿ ಕುಳಿತು ಈ ಮುದ್ರಾದರ್ಶನಪೂರ್ವಕವಾಗಿ ಮಂತ್ರವನ್ನು ಹತ್ತು ಸಾವಿರ ಸಲ ಜಪಿಸಬೇಕು.

೮-೯. ಹೀಗೆ ಮೂರು ದಿನಗಳವರೆಗೆ ಸೂರ್ಯದರ್ಶನ ಮಾಡುವವನಿಗೆ ಮನಸ್ಸಿನ ಅಭೀಷ್ಟಗಳೆಲ್ಲಾ ಸಿದ್ಧಿಯಾಗುವುದು. ಹೊಕ್ಕಳು ಮುಳುಗುವಷ್ಟು ಆಳದ ನೀರಿ

ಜಪೇದಯುತಮಾತ್ರಂ ತು ಭವೇತ್ತದ್ಗತಮಾನಸಃ ।
ಸಹಸ್ರಕಿರಣಂ ದೇವಂ ಪರಂ ರಶ್ಮಿಭಿರಾವೃತಂ ॥ ೯ ॥

ಸ ಪಶ್ಯತಿ ಪರಂ ಧಾಮ ಭವೇತ್ಸಿದ್ಧಿಶ್ಚ ಪುಷ್ಕಲಾ ।
ಶಾಪಾನುಗ್ರಹಕರ್ತಾಸೌ ಸರ್ವೇಷಾಂ ಪ್ರಾಣಿನಾಂ ಭವೇತ್ ॥ ೧೦ ॥

ಸರ್ವತಃ ಕಂಚುಕಂ ಮುಕ್ತ್ವಾ ಭವೇದ್ವೈ ವಿಗತಜ್ವರಃ ॥ ೧೧ ॥

ಪರೌ ಗುಲ್ಫೌ ಕರೌ ಕೃತ್ವಾ ಸಂಲಗ್ನೌ ಚ ಪರಸ್ಪರಂ ।
ವಾಮಾನಾಮಿಕಯಾಕ್ರಮ್ಯ ದಕ್ಷಿಣಾಂ ತು ಕನೀಯಸೀಂ ॥ ೧೨ ॥

ವಾಮಾ ದಕ್ಷಿಣಯಾ ಚೈವ ದಕ್ಷಿಣಾ ವಾಮಯಾ ತಥಾ ।
ಮುದ್ರೈಷಾ ಹಿ ಮಹಾಪುಣ್ಯಾ ವ್ಯೋಮಮುದ್ರಾ ಪ್ರಕೀರ್ತಿತಾ ॥ ೧೩ ॥

---

ನಲ್ಲಿ ನಿಂತುಕೊಂಡು ಸಹಸ್ರಕಿರಣ ಮುದ್ರಾಬಂಧನಮಾಡಬೇಕು. ಬಳಿಕ ಸೂರ್ಯನಲ್ಲೇ ಮನಸ್ಸಿಟ್ಟವನಾಗಿ ಹತ್ತುಸಾವಿರಸಲ ಜಪಮಾಡಬೇಕು.

೧೦-೧೧. ಹೀಗೆ ಜಪಮಾಡಿದರೆ ಅಧಿಕವಾದ ಕಿರಣಗಳಿಂದ ಆವೃತನೂ, ಸಹಸ್ರಕಿರಣನೂ, ಪರಂಜ್ಯೋತಿಯೂ ಆದ ಸೂರ್ಯನು ಪ್ರತ್ಯಕ್ಷನಾಗುತ್ತಾನೆ. ಇದರಿಂದ ಪುಷ್ಕಲವಾದ ಸಿದ್ಧಿಯಾಗುವುದು. ಹೀಗೆ ಸಿದ್ಧಿಪಡೆದವನು ಎಲ್ಲಾ ಪ್ರಾಣಿಗಳಿಗೂ, ಶಾಪಕೊಡುವುದಕ್ಕೂ, ಅನುಗ್ರಹ ಮಾಡುವುದಕ್ಕೂ ಸಮರ್ಥನಾಗುವನು. ಇವನು ಸರ್ವತಃ ಇರುವ ಮೋಹಾವರಣವನ್ನು ತ್ಯಜಿಸಿ ಸಂತಾಪರಹಿತನಾಗುತ್ತಾನೆ.

೧೨. ಹರಡುಗಳು ಹೊರಗಡೆಗೆ ಇರುವಂತೆ ಮಾಡಿಕೊಂಡು ಕೈಗಳನ್ನು ಒಂದಕ್ಕೊಂದು ಸೇರಿಸಿ ಇಟ್ಟುಕೊಳ್ಳಬೇಕು. ಬಳಿಕ ಎಡಗೈಯ ಅನಾಮಿಕೆಯಿಂದ ಬಲಗೈಯ ಕಿರುಬೆರಳನ್ನು ಊರಿಕೊಳ್ಳಬೇಕು.

೧೩. ಬಲಗೈಯ ಅನಾಮಿಕೆಯಿಂದ ಎಡಗೈಯ ಕಿರುಬೆರಳನ್ನು ಊರಿಕೊಳ್ಳಬೇಕು. ಇದೇ ಮಹಾಪುಣ್ಯಕರವಾದ ವ್ಯೋಮಮುದ್ರೆಯೆನಿಸುವುದು.

ಬದ್ಧಯಾ ಚಾನಯಾ ಸದ್ಯೋ ಹೀಯಂತೆ ವ್ಯಾಧಯೋ ನೃಣಾಂ ।
ನಾನಯಾ ರಹಿತಃ ಕಶ್ಚಿತ್ಸಿದ್ಧಿಂ ಪ್ರಾಪ್ನೋತಿ ಸಾಧಕಃ ॥ ೧೪ ॥

ಸರ್ವತ್ರೈವೋತ್ತಮಾ ಹ್ಯೇಷಾ ಮಂತ್ರಮುಷ್ಟಿರಿತಿ ಸ್ಮೃತಾ ।
ಸೂರ್ಯಸ್ಯ ಹೃದಯಂ ಸೇಯಮರ್ಕಮುದ್ರೇತಿ ವಿಶ್ರುತಾ ॥ ೧೫ ॥

ಬಧ್ನೀಯಾತ್ಸತತಂ ಮಂತ್ರೈರಾಯುರಾರೋಗ್ಯವೃದ್ಧಯೇ ।
ಸೂರ್ಯಮಂಡಲ ಅಭ್ಯಗ್ರೇ ಮಂತ್ರೀ ಸೂರ್ಯೋದಯೇ ಸ್ಥಿತಃ ॥ ೧೬ ॥

ಸ ಸೂರ್ಯಾಭಿಮುಖೋ ಭೂತ್ವಾ ಜಪೇನ್ಮಂತ್ರಂ ತು ಸಾಧಕಃ ।
ದಿನತ್ರಯೇಣ ವೀಕ್ಷೇತ ಧ್ಯಾನೀ ಜಪಪರಾಯಣಃ ॥ ೧೭ ॥

ತಂ ದೃಷ್ಟ್ವಾ ನಾಶ್ನುತೇ ಮೃತ್ಯುಂ ದುಃಖೀ ನ ಚ ನ ಸಂಶಯಃ ।
ಪ್ರಾಪ್ನೋತಿ ಚ ಪರಂ ಸ್ಥಾನಂ ಯತ್ರ ದೇವೋ ದಿವಾಕರಃ ॥ ೧೮ ॥

---

೧೪. ಈ ಮುದ್ರಾಬಂಧನ ಮಾಡಿದಕ್ಷಣದಲ್ಲಿ, ಆ ಮನುಷ್ಯನಲ್ಲಿರಬಹುದಾದ ವ್ಯಾಧಿಗಳೆಲ್ಲಾ ನಾಶವಾಗುತ್ತವೆ. ಈ ಮುದ್ರಾಬಂಧನ ಮಾಡದಿದ್ದರೆ ಯಾವ ಸಾಧಕನೂ ಸಿದ್ಧಿ ಹೊಂದಲಾರನು

೧೫. ಇದು ಎಲ್ಲಾ ಮುದ್ರೆಗಳಲ್ಲಿಯೂ ಉತ್ತಮವಾದುದೆನಿಸಿರುವುದಲ್ಲದೆ ಮಂತ್ರಮುಷ್ಟಿಯೆಂದು ಪ್ರಸಿದ್ಧವಾಗಿದೆ. ಇದು ಸೂರ್ಯನ ಹೃದಯವಾದುದರಿಂದ ಇದಕ್ಕೆ ಅರ್ಕಮುದ್ರೆ ಎಂಬ ಹೆಸರೂ ಪ್ರಸಿದ್ಧವಾಯಿತು.

೧೬. ಈ ಮುದ್ರಾಬಂಧನವು ಯಾವಾಗಲೂ ಆಯುಸ್ಸು ಆರೋಗ್ಯ ಇವುಗಳನ್ನು ವೃದ್ಧಿಮಾಡುವುದು. ಮಂತ್ರಾನುಷ್ಠಾನ ಮಾಡತಕ್ಕ ಸಾಧಕನು ಸೂರ್ಯೋದಯಕಾಲದಲ್ಲಿ ಪೂಜಿತವಾದ ಸೂರ್ಯಮಂಡಲದ ಎದುರಿಗೆ ನಿಂತು ಉದಯವಾದ ಸೂರ್ಯನನ್ನು ನೋಡಬೇಕು.

೧೭-೧೮. ಹಾಗೆ ಆ ಸಾಧಕನು ಉದಯವಾದ ಸೂರ್ಯನ ಅಭಿಮುಖವಾಗಿಯೇ ಇರುತ್ತಾ, ಯಥೋಕ್ತಸಂಖ್ಯೆಯಲ್ಲಿ ಮಂತ್ರವನ್ನು ಜಪಮಾಡಬೇಕು. ಈರೀತಿ ಮೂರುದಿನಗಳು ಉದಯಕಾಲಕ್ಕೆ ಸರಿಯಾಗಿ ಜಪಾಸಕ್ತನಾಗಿ ಧ್ಯಾನಮಾಡುತ್ತಾ ಸೂರ್ಯದರ್ಶನಮಾಡಬೇಕು. ಆ ರೀತಿ ದರ್ಶನ ಮಾಡಿದರೆ ಆತನಿಗೆ ಮೃತ್ಯುಪೀಡೆಯಾಗಲಿ, ದುಃಖಕ್ಲೇಶಾದಿಗಳಾಗಲಿ ಸಂಭವಿಸುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ. ಅಲ್ಲದೆ ದೇಹತ್ಯಾಗಾನಂತರ ಶ್ರೇಷ್ಠವಾದ ಸೂರ್ಯಲೋಕಕ್ಕೆ ಹೋಗುತ್ತಾನೆ.

ಉತ್ತಾನೌ ತು ಕರೌ ಕೃತ್ವಾ ಪೃಷ್ಠಲಗ್ನೌ ಪರಸ್ಪರಂ ।
ಬದ್ಧ್ವಾತ್ವಂಗುಲಯಃ ಸರ್ವಾಃ ಸುಪ್ರಕೀರ್ಣಾ ನ ಸಂಶಯಃ ॥ ೧೯ ॥

ಆಕ್ರಮ್ಯ ಚಾಂಗುಲೀಮೂಲಮಂಗುಷ್ಠಾಭ್ಯಾಂ ಯಥಾಕ್ರಮಂ ।
ಉದಯಾ ನಾಮ ಮುದ್ರೈಷಾ ಬಧ್ನೀಯಾದುದಯೇ ರವೇಃ ॥ ೨೦ ॥

ದ್ವಾದಶಾದ್ವೀಕ್ಷತೇ ಸೂರ್ಯಂ ದಿನಾತ್ಸ ಹಿ ನ ಸಂಶಯಃ ।
ಸರ್ವಪಾಪಹರಾ ಚೈವ ಸರ್ವಪಾಪವಿನಾಶಿನೀ ॥ ೨೧ ॥

ಉದಯಾ ಚ ವಿನಾ ವಾಮಂ ಮಧ್ಯತಶ್ಚೈವ ತಂ ಕ್ಷಿಪೇತ್ ।
ಮಧ್ಯಮಾ ನಾಮ ವಿಖ್ಯಾತಾ ಮಧ್ಯಸೂರ್ಯೇ ತು ಚಿಂತಯೇತ್ ॥ ೨೨ ॥

ಮಧ್ಯಮಾ ವಿಧಿನಾ ತೇನ ಬದ್ಧ್ವಾ ಮುದ್ರಾಂ ತು ಸಾಧಕಃ ।
ಅಂಗುಲ್ಯೋಃ ಪರಮಂಗುಷ್ಠೌ ವಿಧಿನಾ ತಾವುಭೌ ಗ್ರಥೇತ್ ॥ ೨೩ ॥

---

೧೯. ಎರಡು ಕೈಗಳನ್ನೂ ಮೇಲ್ಮುಖವಾಗಿ ಇಟ್ಟುಕೊಂಡು, ಒಂದರ ಹಿಂಭಾಗವು ಮತ್ತೊಂದರ ಹಿಂಭಾಗಕ್ಕೆ ತಗಲುವಂತೆ ಮಾಡಿ, ಎಲ್ಲಾ ಬೆರಳುಗಳನ್ನೂ ನೀಡಿ ಒಟ್ಟಿಗೆ ಸೇರಿಸಿದರೆ ಸುಪ್ರಕೀರ್ಣ ಮುದ್ರೆಯೆನಿಸುವುದು.

೨೦. ಎರಡು ಕೈಗಳ ಅಂಗುಷ್ಠದಿಂದಲೂ ಎರಡು ಅಂಗೈಯಲ್ಲಿನ ಬೆರಳುಗಳ ಬುಡವನ್ನು ಆಶ್ರಯಿಸಿದರೆ, ಉದಯಾ ಎಂಬ ಮುದ್ರೆಯಾಗುವುದು. ಸೂರ್ಯೋದಯಕಾಲದಲ್ಲಿ ಈ ಮುದ್ರಾಬಂಧನಮಾಡಬೇಕು.

೨೧. ಈ ಪ್ರಕಾರ ಮುದ್ರಾಬಂಧನ ಮಾಡಿದವನಿಗೆ ಹನ್ನೆರಡು ದಿನಗಳಲ್ಲಿ ಸೂರ್ಯಸಾಕ್ಷಾತ್ಕಾರವು ಲಭಿಸುವುದು. ಈ ಉದಯಮುದ್ರೆಯು ಸರ್ವಪಾಪಗಳನ್ನೂ ನಾಶಮಾಡುತ್ತದೆ. ಮತ್ತು ಪ್ರಾಪ್ತವಾಗುವ ಸಮಸ್ತ ಪಾಪಗಳನ್ನೂ ಪರಿಹರಿಸುವುದು.

೨೨. ಎಡಗೈಯ ಅಂಗುಷ್ಠವನ್ನು ಅಂಗೈಗೆ ಸೋಕಿಸದೆ ಅದನ್ನು ಮಧ್ಯದಲ್ಲಿ ಇಡಬೇಕು. ಇದಕ್ಕೆ ಮಧ್ಯಮಾಮುದ್ರೆಯೆಂದು ಹೆಸರು. ಸೂರ್ಯನು ಆಕಾಶ ಮಧ್ಯಕ್ಕೆ ಬಂದಾಗ ಸಾಧಕನು ಈ ಮುದ್ರೆಯನ್ನು ಬಂಧಿಸಿ ಜಪಮಾಡಬೇಕು.

೨೩–೨೪. ಸಾಧಕನಾದವನು ಮಧ್ಯಮಾ ಮುದ್ರಾಬಂಧನಮಾಡಿ ಕೈಯ ಅಂಗುಳಿಗಳಿಂದ ಹೊರಗೆ, ಎರಡು ಹೆಬ್ಬೆರಳುಗಳನ್ನೂ ವಿಧಿಪ್ರಕಾರ ಗಂಟುಹಾಕಿದಂತೆ

ಮುದ್ರಾ ಸಾಸ್ತಮನೀ ಹ್ಯೇಷಾ ಸರ್ವತಂತ್ರೇಶ್ವರೀ ಶುಭಾ ।
ಸೂರ್ಯಸ್ಯಾಸ್ತಮನೇ ಮುದ್ರಾಂ ಬದ್ಧ್ವಾ ಜಪ್ತಂ ಸಮಾಚರೇತ್ ॥ ೨೪ ॥

ಸಹಸ್ರಂ ಹಿ ಶತಂ ವಾಪಿ ಮುದ್ರಾಂ ಬದ್ಧ್ವಾ ಜಪೇದ್ಬುಧಃ ।
ಸರ್ವಪಾತಕಸಂಮುಕ್ತಃ ಸಪ್ತಾಹಾದನುಶೋಭನಂ ॥ ೨೫ ॥

ಕರೌ ಪರಸ್ಪರಂ ಲಗ್ನಾವಂಗುಷ್ಠೌ ಚೋರ್ಧ್ವಸಂಸ್ಥಿತೌ ।
ಉಭೌ ಚಾಂಗುಷ್ಠಕೌ ಚೋರ್ಧ್ವೌ ಸಂಲಗ್ನೌ ಮೂರ್ಧ್ನಿ ಸಂಸ್ಥಿತೌ ॥೨೬॥

ಮುದ್ರಾ ತು ಮಾಲಿನೀ ಚೈವ ನಿರ್ದಹೇತ್ಪಾಪಪಂಜರಂ ।
ಬ್ರಹ್ಮಹತ್ಯಾದಿ ಯತ್ಪಾಪಂ ಯೋಜಿರೌ ಸಾ ತು ಮೂರ್ಧನಿ ॥ ೨೭ ॥

ವಿದಧ್ಯಾಂಗುಲಯಃ ಸರ್ವಾ ಈಷನ್ಮಧ್ಯಸ್ತಥಾಗ್ರತಃ ।
ಊರ್ಧ್ವಸ್ಥಿತೌ ತಥಾಂಗುಷ್ಠೌ ಮುದ್ರೇಯಂ ತರ್ಜನೀಸ್ಮೃತಾ ॥ ೨೮ ॥

---

ಸೇರಿಸಬೇಕು. ಹೀಗೆ ಮಾಡಿದರೆ ಸರ್ವತಂತ್ರೇಶ್ವರಿಯೂ, ಶುಭಕರಿಯೂ ಆದ ಅಸ್ತಮನೀ ಎಂಬ ಹೆಸರುಳ್ಳ ಮುದ್ರೆಯಾಗುವುದು. ಸೂರ್ಯಾಸ್ತಕಾಲದಲ್ಲಿ ಈ ಮುದ್ರೆಯನ್ನು ರಚಿಸಿ ಆನಂತರ ಜಪಮಾಡಲು ಪ್ರಾರಂಭಿಸಬೇಕು

೨೫. ಈ ಮುದ್ರಾಬಂಧನ ಮಾಡಿ ಶತಸಂಖ್ಯೆಯಲ್ಲೋ, ಸಹಸ್ರಸಂಖ್ಯೆಯಲ್ಲೋ, ಮಂತ್ರಜಪಮಾಡಬೇಕು. ಹೀಗೆ ಮಾಡಿದವನು ಏಳುದಿನಗಳಲ್ಲಿ ಸರ್ವಪಾಪಗಳಿಂದಲೂ ಬಿಡುಗಡೆ ಹೊಂದಿ ಶುಭಹೊಂದುತ್ತಾನೆ.

೨೬. ಎರಡು ಕೈಗಳನ್ನೂ ಒಂದಕ್ಕೊಂದು ಸೇರಿಸಿ ಅಂಗುಷ್ಠಗಳನ್ನು ಮೇಲ್ಮುಖವಾಗಿ ಇಟ್ಟುಕೊಂಡು, ಈ ಎರಡು ಅಂಗುಷ್ಠಗಳನ್ನೂ ಊರ್ಧ್ವಮುಖವಾಗಿ ಜೋಡಿಸಿ ನೆತ್ತಿಯಮೇಲೆ ಇರಿಸಬೇಕು.

೨೭. ಇದಕ್ಕೆ ಮಾಲಿನೀ ಮುದ್ರೆಯೆಂಬ ಹೆಸರು ಪ್ರಸಿದ್ಧವಾಗಿದೆ. ಈ ಮುದ್ರೆಯು ಪಾಪವೆಂಬ ಪಂಜರವನ್ನು ನಾಶಮಾಡತಕ್ಕದ್ದಾಗಿದೆ. ಈ ಮುದ್ರೆಯನ್ನು ಶಿರಸ್ಸಿನಲ್ಲಿ ಇಟ್ಟುಕೊಂಡರೆ ಬ್ರಹ್ಮಹತ್ಯಾದಿ ಪಾಪಗಳು ಕೂಡ ನಿರ್ಮೂಲವಾಗುವುವು.

೨೮. ಕೈಯಿನ ಎಲ್ಲ ಬೆರಳುಗಳನ್ನೂ ವಿರಳವಾಗಿಮಾಡಿ ಮಧ್ಯದ ಬೆರಳು ಸ್ವಲ್ಪ ಮುಂದೆ ಬರುವಂತೆಯೂ ಎರಡು ಅಂಗುಷ್ಠಗಳು ಮೇಲ್ಮುಖವಾಗಿರುವಂತೆಯೂ ಜೋಡಿಸಿದರೆ ತರ್ಜನೀ ಮುದ್ರೆಯೆನಿಸುವುದು.

**ಸರ್ವವ್ಯಾಧಿಹರಾ ದೇವೀ ಸರ್ವಶತ್ರುವಿನಾಶಿನೀ ।**
**ಏತಾಂ ಬದ್ಧ್ವಾ ಮಹಾಪುಣ್ಯಾಂ ಸರ್ವಾನ್ ಸ್ತಂಭಯತೆ ರಿಪೂನ್ ॥ ೨೯ ॥**

**ಉಭೌ ಪ್ರಸಾರ್ಯ ವೈ ಹಸ್ತೌ ಮಧ್ಯೇ ಸಾರ್ಧೇನ ಸಂಸ್ಥಿರೌ ।**
**ಶೇಷಾನಾಮ್ಯಾ ತತಶ್ಚೈವ ಅಂಗುಷ್ಠಾಗ್ರಂ ತಥಾ ಕ್ರಮಾತ್ ॥ ೩೦ ॥**

**ಮುದ್ರಾ ಗಭಸ್ತಿನೀ ನಾಮ ಸೂರ್ಯಸ್ಯ ಹೃದಯಂ ಪರಂ ।**
**ಮೃತ್ಯುಂ ನಾಶಯತೇ ಹ್ಯೇಷಾ ಬಧ್ವಾ ಸೂರ್ಯೋದಯೇ ಶುಭಾ ॥ ೩೧ ॥**

**ಅರ್ಘ್ಯಕಾಲೇ ತು ಬಧ್ನೀಯಾದರ್ಚಯಾಗ್ನಿಂ ಪ್ರಪೂಜಯೇತ್ ।**
**ಜಪಕಾಲೇ ಚ ಬಧ್ನೀಯಾನ್ಮಂತ್ರಾಣಾಂ ನಾತ್ರ ಸಂಶಯಃ ॥ ೩೨ ॥**

---

೨೯. ಶ್ರೇಷ್ಠವಾದ ಈ ಮುದ್ರೆಯು ಸಮಸ್ತರೋಗ ಪರಿಹಾರಕವೂ, ಸರ್ವ ಶತ್ರು ವಿನಾಶಕವೂ ಆಗಿವೆ, ಮಹಾಪುಣ್ಯಕರವಾದ ಈ ಮುದ್ರಾಬಂಧನ ಮಾಡಿದರೆ ಶತ್ರುಗಳೆಲ್ಲಾ ಸ್ತಬ್ಧರಾಗಿ ಹೋಗುತ್ತಾರೆ.

೩೦. ಎರಡು ಹಸ್ತಗಳನ್ನೂ ನೀಡಿ ಅರ್ಧಹಸ್ತಗಳಲ್ಲಿ ಎಂದರೆ ಅನಾಮಿಕೆಗಳ ಬುತಕ್ಕೆ ಎರಡು ಅಂಗುಷ್ಟದ ತುದಿಗಳನ್ನೂ ಸೇರಿಸಿ ಹಿಡಿಯಬೇಕು.

೩೧. ಸೂರ್ಯನಿಗೆ ಹೃದಯಪ್ರಾಯವೂ, ಶ್ರೇಷ್ಠವೂ ಆದ ಇದಕ್ಕೆ ಗಭಸ್ತಿ ಮುದ್ರೆಯೆಂದು ಹೆಸರು. ಶುಭಕರವಾದ ಈ ಮುದ್ರೆಯನ್ನು ಸೂರ್ಯೋದಯಕಾಲ ದಲ್ಲಿ ಬಂಧನಮಾಡಿದರೆ ಮೃತ್ಯುವನ್ನು ಸಹ ನಾಶಮಾಡಿಬಿಡಬಹುದು.

೩೨. ಅರ್ಘ್ಯಕಾಲದಲ್ಲಿಯೂ, ಅಗ್ನಿಪ್ರತಿಷ್ಠಾಪನ ಕಾಲದಲ್ಲಿಯೂ ಆಯಾ ಮುದ್ರಾಬಂಧನಮಾಡಿ ಅನಂತರ ಅರ್ಘ್ಯಪೂಜಾದಿಗಳನ್ನು ನೆರವೇರಿಸಬೇಕು. ಮಂತ್ರ ಜಪಾನುಷ್ಠಾನಕಾಲದಲ್ಲಿ ಈ ಮುದ್ರಾಬಂಧನವನ್ನು ಅವಶ್ಯವಾಗಿ ಮಾಡ ಬೇಕು. ಇದರಲ್ಲಿ ಸಂಶಯವಿಲ್ಲ.

ವಿದಕ್ಷಿಣಕನಿಷ್ಠಿಕ್ಯಾಂ ತರ್ಜನೀಭ್ಯಾಂ ತಥಾ ಭವೇತ್ ।
ತರ್ಜನೀಭ್ಯಾಂ ತಥಾಂಗುಷ್ಠೌ ಸಂಲಗ್ನೌ ತು ಪರಸ್ಪರಂ ॥
ಜಪಂ ಯಃ ಕುರುತೇ ನಿತ್ಯಂ ತ್ರಿಭಿರ್ಮಾಸೈರ್ವಿಶುಧ್ಯತಿ ॥ ೩೩ ॥

ಕರೌ ತು ಸಂಪುಟೌ ಕೃತ್ವಾ ತರ್ಜನ್ಯೌ ದ್ವೇ ಚ ಕುಂಚಯೇತ್ ॥ ೩೪ ॥

ಸಹಸ್ರಕಿರಣಾ ಹ್ಯೇಷಾ ಸರ್ವಮುದ್ರೇಶ್ವರೇಶ್ವರೀ ।
ತ್ರಿಸಂಧ್ಯಮೇತಾಂ ಬಧ್ನೀಯಾತ್ಸಾಧಕೋ ಮಂತ್ರಮೂರ್ಧಗಃ ॥
ನಾಶಯೇತ್ಸರ್ವಪಾಪಾನಿ ತಮೋರಾಶಿಮಿವಾಂಶುಮಾನ್ ॥ ೩೫ ॥

ಮುದ್ರಾ ಮುದ್ರಕಕುಂಭೇತಿ ಬಧ್ವಾ ಪಶ್ಚಾತ್ತು ಮಂತ್ರಯೇತ್ ।
ಮಾಸೇನ ನಾಶಯೇತ್ಕುಷ್ಠಂ ತ್ರಿಭಿರ್ಮಾಸೈರ್ನ ಸಂಶಯಃ ॥
ಇತಿ ಮುದ್ರಾಂಗಸಹಿತಂ ಸೂರ್ಯಂ ಪೂಜಯತೇ ತು ಯಃ ॥ ೩೬ ॥

---

೩೩. ಎರಡುಕೈಗಳ ಕಿರುಬೆರಳುಗಳನ್ನು ಎರಡುಕೈಗಳ ತರ್ಜನೀ ಬೆರಳುಗಳ ತುದಿಯ ಅಂಗುಷ್ಠಗಳನ್ನೂ ನೀಡಿ, ಮಿಕ್ಕವುಗಳನ್ನು ಮಡಿಸಿ, ಪರಸ್ಪರ ಅಭಿಮುಖವಾಗಿ ಸೇರಿಸಿದರೆ ಶಂಖಮುದ್ರೆಯೆನಿಸುವುದು. ಈ ಮುದ್ರಾಬಂಧನಪೂರ್ವಕವಾಗಿ ಮೂರುತಿಂಗಳು ಬಿಡದೆ ನಿತ್ಯವೂ ಜಪಮಾಡಿದರೆ ಅವನು ಶುದ್ಧನಾಗುತ್ತಾನೆ.

೩೪. ಎರಡು ಕೈಗಳನ್ನೂ ಬೊಗಸೆಮಾಡಿ ಎರಡುಕೈಯ ತರ್ಜನಿಗಳನ್ನೂ ಸ್ವಲ್ಪ ಮುದುರಿಕೊಳ್ಳಬೇಕು. ಇದು ಸರ್ವಮುದ್ರೆಗಳಲ್ಲೂ ಶ್ರೇಷ್ಠವಾದ ಸಹಸ್ರಕಿರಣಾಮುದ್ರೆಯೆನಿಸುವುದು.

೩೫. ಸಾಧಕನು ತ್ರಿಸಂಧ್ಯಾಕಾಲಗಳಲ್ಲಿಯೂ ಮಂತ್ರಜಪದ ಕೊನೆಯಲ್ಲಿ ಈ ಮುದ್ರೆಯನ್ನು ಬಂಧನಮಾಡಿದರೆ ಸೂರ್ಯನು ಕತ್ತಲೆಯನ್ನು ನಾಶಮಾಡುವಂತೆ ಇದು ಸರ್ವಪಾಪಗಳನ್ನೂ ನಾಶಮಾಡುತ್ತದೆ. ಮುದ್ರಕಕುಂಭಾ ಎಂಬ ಮುದ್ರೆಯನ್ನು ಬಂಧಿಸಿ ಆ ಮೇಲೆ ಮಂತ್ರಜಪಮಾಡಬೇಕು.

೩೬. ಈ ಮುದ್ರಾಬಂಧನಪೂರ್ವಕವಾಗಿ ಜಪಮಾಡಿ ಹೀಗೆ ಅಂಗಮುದ್ರಾ ಸಹಿತವಾಗಿ ಸೂರ್ಯನನ್ನು ಪೂಜಿಸಿದರೆ ಒಂದು ತಿಂಗಳಲ್ಲೀ ಕುಷ್ಠರೋಗವು ನಾಶವಾಗುತ್ತದೆ. ಪರಮಾವಧಿ ಮೂರುತಿಂಗಳು ಮಾಡುವುದರೊಳಗೆ ಖಂಡಿತವಾಗಿ ನಿರ್ಮೂಲವಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

ಅನೇನ ವಿಧಿನಾ ರಾಜನ್ ಬ್ರಹ್ಮಾ ಪೂಜಯತೇ ರವಿಂ ।
ತಸ್ಮಾತ್ತ್ವಮಪಿ ರಾಜೇಂದ್ರ ಪೂಜಯಾನೇನ ಭಾಸ್ಕರಂ ॥ ೩೭ ॥

ತತಃ ಸೂರ್ಯಮವಾಪ್ಯೇಹ ಸೂರ್ಯಲೋಕಂ ಹಿ ಗಚ್ಛಸಿ ।
ಅನೇನ ವಿಧಿನಾ ಯಸ್ತು ಪೂಜಯೇತ್ಸತತಂ ರವಿಂ ॥ ೩೮ ॥

ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ದಿವಾಕರಃ ।
ಇತ್ಥಂ ಪೂಜ್ಯ ಚ ದೇವೇಶಮನೇನ ವಿಧಿನಾ ನೃಪ ॥ ೩೯ ॥

ಭೋಜಯಿತ್ವಾ ಯಥಾಶಕ್ತಿ ಬ್ರಾಹ್ಮಣಾಂಶ್ಚ ವಿಧಾನತಃ ।
ಸಪ್ತಮ್ಯಾಂ ಪ್ರಾಶಯೇದ್ವಾಪಿ ಮರಿಚಂ ಮಂತ್ರತಸ್ತಥಾ ॥ ೪೦ ॥

ಏಕಂ ಗೃಹೀತ್ವಾ ಮರಿಚಮವ್ರಣಂ ಚ ದೃಢಂ ಪರಂ ।
ಸಜಲಂ ಪ್ರಾಶಯೇದ್ರಾಜನ್ ಮಂತ್ರೇಣಾನೇನ ವಾ ಸ್ಮೃತಂ ॥ ೪೧ ॥

---

೩೭. ಬ್ರಹ್ಮನು ಈ ವಿಧಿಯಿಂದಲೇ ಸೂರ್ಯನನ್ನು ಪೂಜಿಸಿದ್ದಾನೆ. ಆದುದರಿಂದ ರಾಜೇಂದ್ರನೇ! ನೀನೂ ಈ ವಿಧಿಯಿಂದ ಸೂರ್ಯನನ್ನು ಪೂಜಿಸು. ಹೀಗೆ ಮಾಡಿದರೆ ಸೂರ್ಯಲೋಕಕ್ಕೆ ಹೋಗಿ ಸೂರ್ಯಸಾನ್ನಿಧ್ಯವನ್ನು ಹೊಂದುತ್ತೀಯೆ.

೩೮. ಈ ವಿಧಿಯಿಂದ ಸೂರ್ಯನನ್ನು ಪೂಜಿಸುವ ಸಾಧಕನು, ನಿರಂತರವೂ ಸೂರ್ಯದೇವನು ಸನ್ನಿಹಿತವಾಗಿರುವ ಶ್ರೇಷ್ಠವಾದ ಸ್ಥಾನಕ್ಕೆ ಹೋಗುತ್ತಾನೆ.

೩೯–೪೦. ಎಲೈ ರಾಜನೇ! ಶುಕ್ಲಸಪ್ತಮಿಯಲ್ಲಿ ಈ ವಿಧಿಪ್ರಕಾರವಾಗಿ ಪೂಜಿಸಿ ಶಕ್ತಿಯಿದ್ದಷ್ಟು ಮಂದಿ ಬ್ರಾಹ್ಮಣರಿಗೆ ಶಾಸ್ತ್ರವಿಧಿಗನುಸಾರವಾಗಿ ಭೋಜನಮಾಡಿಸಬೇಕು. ಅನಂತರ ಮೆಣಸಿನಕಾಳನ್ನು ಮಂತ್ರಪೂರ್ವಕವಾಗಿ ಪ್ರಾಶನಮಾಡಲು ಸಿದ್ಧನಾಗಬೇಕು.

೪೧. ಒಡೆದಿಲ್ಲದೆ ಗಟ್ಟಿಯಾದ ಒಂದು ಮೆಣಸಿನಕಾಳನ್ನು ತೆಗೆದುಕೊಂಡು ಯಥೋಕ್ತವಾದ ಮಂತ್ರವನ್ನು ಪಠಿಸುತ್ತಾ ಉದಕದೊಡನೆ ಆ ಮೆಣಸಿನಕಾಳನ್ನು ನುಂಗಬೇಕು.

**ಯಥೋಕ್ತೇನ ವಿಧಾನೇನ ಪೂಜಯಿತ್ವಾ ದಿವಾಕರಂ ।**
**ಇತಿ ಸಂಪ್ರಾಶ್ಯ ಮರಿಚಂ ತತೋ ಭುಂಜೀತ ವಾಗ್ಯತಃ ॥ ೪೨ ॥**

**ಪ್ರಿಯಸಂಗಮವಾಪ್ನೋತಿ ತತ್ಕ್ಷಣಾದೇವ ನಾನ್ಯಥಾ ।**
**ಇತೀಯಂ ಸಪ್ತಮೀ ಪುಣ್ಯಾ ಪ್ರಿಯಸಂಗಮದಾಯಿನೀ ॥ ೪೩ ॥**

**ಕುರ್ಯಾದೇಕೇನ ಕಾಮಾಂಸ್ತು ವತ್ಸರೇಣ ಸ ಗಚ್ಛತಿ ।**
**ಪುತ್ರಾದಿಭಿರ್ನರಶ್ರೇಷ್ಠ ಪುನಃ ಸಂಗಮಮೃಚ್ಛತಿ ॥ ೪೪ ॥**

**ಕುರು ತಸ್ಮಾನ್ಮಹಾಬಾಹೋ ತ್ವಮೇವ ಪ್ರಿಯದಾಯಿನೀಂ ।**
**ಉಪೋಷ್ಯ ಇಂದ್ರೋ ವಿಧಿವತ್ಸುರಾಮರಿಚಸಪ್ತಮೀಂ ॥ ೪೫ ॥**

**ಸಂಯೋಗಂ ಕೃತವಾನ್ವೀರ ಸಹ ಶಚ್ಯಾ ವಿಧಾನತಃ ।**
**ಉಪೋಷ್ಯೈನಾಂ ನಲಶ್ಚಾಪಿ ದಮಯಂತ್ಯಾ ಮಹಾಬಲಃ ॥ ೪೬ ॥**

---

೪೨. ಉಕ್ತವಾದ ವಿಧಾನದಿಂದ ಸೂರ್ಯನನ್ನು ಪೂಜೆಮಾಡಿ, ಮರಿಚವನ್ನು ಪ್ರಾಶನಮಾಡಿದ ಮೇಲೆ, ವ್ರತಿಯು ತಾನು ಮೌನದಿಂದ ಭೋಜನಮಾಡಬೇಕು. ಹೀಗೆ ಮಾಡಿದರೆ ತತ್ಕ್ಷಣವೇ ಪ್ರಿಯಜನರ ಸಮಾಗಮವನ್ನು ಹೊಂದುತ್ತಾನೆ.

೪೩. ಈ ವಿಚಾರದಲ್ಲಿ ಸಂದೇಹಪಡಬೇಕಾಗಿಯೇ ಇಲ್ಲ. ಈ ಮರಿಚಸಪ್ತಮಿಯು ಪ್ರಿಯಜನರ ಸಂಗಮವನ್ನುಂಟುಮಾಡತಕ್ಕುದೂ, ಪುಣ್ಯಕರವೂ ಆಗಿದೆ.

೪೪. ಒಂದುಸಂವತ್ಸರ ಕಾಲ ಈ ಮರಿಚಸಪ್ತಮಿ ವ್ರತವನ್ನು ಆಚರಿಸಿದರೆ ಅದು ಸಕಲ ಇಷ್ಟಾರ್ಥಗಳ ಸಿದ್ಧಿಯನ್ನೂ ಉಂಟುಮಾಡುವುದು. ಆ ಮನುಷ್ಯನು ಪುತ್ರಾದಿಗಳೊಡನೆ ಸೇರುತ್ತಾನೆ.

೪೫. ಅಯ್ಯಾ ಮಹಾಬಾಹುವೇ! ಪ್ರಿಯಜನರ ಸಮಾಗಮವುಂಟುಮಾಡುವ ಮರಿಚಸಪ್ತಮಿಯನ್ನು ನೀನೂ ಮಾಡು. ಇಂದ್ರಾದಿದೇವತೆಗಳೂ ಈ ಮರಿಚಸಪ್ತಮಿಯಲ್ಲಿ ವಿಧಿಪ್ರಕಾರ ಉಪವಾಸಮಾಡಿ ಇಷ್ಟಾರ್ಥಗಳನ್ನು ಪಡೆದರು.

೪೬. ಅಯ್ಯಾ ವೀರನೇ! ಇಂದ್ರನು ವಿಧಿವಿಹಿತವಾದ ಕ್ರಮದಲ್ಲಿ ಈ ವ್ರತವನ್ನು ಮಾಡಿದುದರಿಂದ ಶಚೀದೇವಿಯೊಡಗೂಡಿದನು. ಮಹಾಬಲಶಾಲಿಯಾದ ನಳನೂ ಉಪವಾಸಮಾಡಿ ಮರಿಚಸಪ್ತಮಿಯನ್ನು ಆಚರಿಸಿ ಅದರ ಫಲವಾಗಿ ದಮಯಂತಿಯೊಡಗೂಡಿದನು.

ರಾಮೋऽಗಾತ್ಸೀತಯಾ ಸಾರ್ಧಮುಪೋಷ್ಯೈನಾಂ ನರಾಧಿಪ ॥ ೪೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಮರಿಚ ಸಪ್ತಮೀವರ್ಣನಂ ನಾಮ ಚತುರ್ದಶಾಧಿಕ ದ್ವಿಶತತಮೋऽಧ್ಯಾಯಃ.



---

೪೭. ಅಯ್ಯಾ ನೃಪತಿಯೇ! ಶ್ರೀರಾಮನೂ ಈ ಸಪ್ತಮಿಯನ್ನು ಯಥೋಕ್ತರೀತಿ ಅನುಷ್ಠಾನಮಾಡಿ ಅದರ ಫಲವಾಗಿ ಸೀತಾದೇವಿಯೊಡಗೂಡಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮರಿಚಸಪ್ತಮೀ ವರ್ಣನೆಯೆಂಬ ಇನ್ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಪಂಚದಶಾಧಿಕದ್ವಿಶತತಮೋಽಧ್ಯಾಯಃ

॥ ಸುಮಂತುರುವಾಚ ॥

ತೃತೀಯಾಂ ಸಪ್ತಮೀಂ ವೀರ ಶೃಣುಷ್ವ ಗದತೋ ಮಮ ।
ನಿಂಬಪತ್ರೈಃ ಸ್ಮೃತಾ ಯಾ ತು ಪರಮಾ ರೋಗನಾಶಿನೀ ॥ ೧ ॥

ಯಥಾರ್ಚನವಿಧಿರ್ವಾರ್ಷ್ಣ್ಯೋ ಯೇನ ಪೂಜಯತೇ ರವಿಂ ।
ದೇವದೇವಃ ಶಾರ್ಙ್ಗಪಾಣಿಃ ಶಂಖಚಕ್ರಗದಾಧರಃ ॥ ೨ ॥

ಅಥಾರ್ಚನ ವಿಧಿಂ ವಚ್ಮಿ ಮಂತ್ರೋದ್ಧಾರಂ ನಿಬೋಧ ಮೇ ॥ ೩ ॥

---

## ಇನ್ನೂರಹದಿನೈದನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನನ್ನು ಕುರಿತು ಹೇಳುತ್ತಾರೆ— "ಅಯ್ಯಾ ವೀರನೇ! ಮೂರನೆಯದಾದ ನಿಂಬಸಪ್ತಮಿಯನ್ನು ಹೇಳುತ್ತೇನೆ ಕೇಳು. ಇದು ನಿಂಬಪತ್ರ ಸೇವನಾತ್ಮಕವೆನಿಸಿ ಮಹಾರೋಗಗಳನ್ನು ನಾಶಮಾಡತಕ್ಕುದಾಗಿದೆ.

೨-೩. ಇದರ ಪೂಜಾವಿಧಾನ ಹೇಗೆಂಬುದನ್ನೂ, ಈ ವಿಧಿಯಲ್ಲಿ ಏತರಿಂದ ಸೂರ್ಯನನ್ನು ಪೂಜಿಸಬೇಕೆಂಬುದನ್ನೂ ನಿನಗೆ ತಿಳಿಸುವುದಕ್ಕಾಗಿ, ಶಂಖ, ಚಕ್ರ, ಗದೆ, ಶಾರ್ಙ್ಗವೆಂಬ ಬಿಲ್ಲು, ಇವುಗಳನ್ನು ಧರಿಸಿರುವ ದೇವದೇವನಾದ ವಿಷ್ಣುವು ಸೂರ್ಯನನ್ನು ಹೇಗೆ ಪೂಜಿಸಿದನೆಂಬುದನ್ನೂ, ಆಗ ಹೇಳಿದ ಮಂತ್ರಗಳನ್ನೂ, ಪೂಜಾವಿಧಿಯನ್ನೂ ಹೇಳುವೆನು ಕೇಳು.

ಓಂ ಖಷೋಲ್ಕಾಯನಮಃ, ಮೂಲಮಂತ್ರಃ
ಓಂ ವಿಟವಿಟ ಶಿರಃ, ಓಂ ಸಹಸ್ರರಶ್ಮಯೇ ಅಸ್ತ್ರಂ
ಓಂ ಸಹಸ್ರಕಿರಣಾಯ ದ್ವಿಶತ ಊರ್ಧ್ವಬಂಧಃ
ಓಂ ಘನಾಯ ಭೂತಭಾವಿನೇ ನಮಃ ಇತಿಭೂತಬಂಧಃ
ಓಂ ಜ್ವಲಜ್ವಲ ಓಂ ಪ್ರಜ್ವಲ ಪ್ರಜ್ವಲ ಅಗ್ನಿಪ್ರಕರ ॥ ೪ ॥

ಓಂ ಆದಿತ್ಯಾಯ ವಿದ್ಮಹೇ ವಿಶ್ವಭಾಗಾಯ ಧೀಮಹಿ
ತನ್ನಃ ಸೂರ್ಯಃ ಪ್ರಚೋದಯಾತ್ ॥ ೫ ॥

ಗಾಯತ್ರೀ ಸಂಕಲೀಕರಣಮಿದಂ
ಓಂ ಧರ್ಮಾತ್ಮನೇ ನಮಃ ॥ ಐಶಾನ್ಯಾಂ
ಓಂ ದಕ್ಷಿಣಾಯನಮಃ ಆಗ್ನೇಯ್ಯಾಂ
ಓಂ ವಜ್ರಪಾಣಿಯೇಽನಂತಾಯನಮಃ ಉತ್ತರತಃ
ಓಂ ಶ್ಯಾಮಪಿಂಗಲಾಯನಮಃ ಐಶಾನ್ಯಾಂ
ಓಂ ಅಮೃತಾಯನಮಃ ಆಗ್ನೇಯ್ಯಾಂ
ಓಂ ಬುಧಾಯ ಸೋಮಸುತಾಯನಮೋ ದಕ್ಷಿಣತಃ
ಓಂ ವಾಗೀಶ್ವರಾಯ ಸರ್ವವಿದ್ಯಾಧಿಪತಯೇ ನೈಋತ್ಯಾಂ
ಓಂ ಶುಕ್ರಾಯ ಮಹರ್ಷಯೇ ಭೂತಾಯ ಪಶ್ಚಿಮತಃ
ಓಂ ಈಶ್ವರಾಯ ಸೂರ್ಯಾತ್ಮನೇ ನಮೋ ವಾಯವ್ಯಾಂ
ಓಂ ಕೃತವತೇ ನಮಃ ಉತ್ತರತಃ
ಓಂ ರಾಹವೇ ನಮಃ ಐಶಾನ್ಯಾಂ
ಓಂ ಅಂತರಾಯ ಸೂರ್ಯಾತ್ಮನೇ ನಮಃ ಪೂರ್ವತಃ
ಓಂ ಧ್ರುವಾಯ ನಮಃ ಐಶಾನ್ಯಾಂ

---

೪. ಖಷೋಲ್ಕಾಯನಮಃ ಎಂಬುದು ಮೂಲಮಂತ್ರ (ಸಾಂಬಪುರಾಣದಲ್ಲಿ ಖಖೋಲ್ಕ ಎಂದು ಪ್ರಯೋಗವಿದೆ) ಮುಂದಿನದು ಶಿರಸೇಸ್ವಾಹಾ ಇತ್ಯಾದಿಯಾಗಿ ಅಸ್ತ್ರಾಯಫಟ್ ಎಂಬವರೆಗಿನ ಅಂಗನ್ಯಾಸಮಂತ್ರ.

೫. “ ಓಂ ಆದಿತ್ಯಾಯ ವಿದ್ಮಹೇ ವಿಶ್ವಭಾಗಾಯ ಧೀಮಹಿ ತನ್ನಃ ಸೂರ್ಯಃ ಪ್ರಚೋದಯಾತ್” ಇದು ಈ ನಿಂಬಪತ್ರ ಸಪ್ತಮಿಯಲ್ಲಿ ಜಪಿಸಬೇಕಾದ ಗಾಯತ್ರೀ ಮಂತ್ರವಾಗಿದೆ,

**ಓಂ ಭಗವತೇ ಪೂಷನ್ಮಾಲಿನ್ಸಕಲ ಜಗತ್ಪತೇ ಸಪ್ತಾಶ್ವವಾಹನ ಭೂಭುಜ ಪರಮಸಿದ್ಧಿ ಶಿರಸಿ ಗತಂ ಗೃಹ್ಣ ತೇಜೋಽಗ್ನಿರೂಪ ಅನಂತಜ್ವಾಲ । ಅನಂತಜ್ವಾಲ । ॥ ಆವಾಹನ ಮಂತ್ರಃ ॥**

**ಓಂ ನಮೋ ಭಗವತೇ ಆದಿತ್ಯಾಯ ಸಹಸ್ರಕಿರಣಾಯ ಯಥಾ ಸುಖಂ ಪುನರಾಗಮನಾಯ ಇತಿ**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ ಸೌರಧರ್ಮೇ ಸೂರ್ಯಮಂತ್ರೋದ್ಧಾರವರ್ಣನಂನಾಮ ಪಂಚದಶಾಧಿಕ ದ್ವಿಶತತಮೋಽಧ್ಯಾಯಃ.**



---

೬. ಇವು ಎಂಟುದಿಕ್ಕುಗಳಲ್ಲಿಯೂ ಆವಾಹನಮಾಡಬೇಕಾದ ದಿಗ್ದೇವತೆಗಳು ಇವನ್ನು ಆಯಾದಿಕ್ಕುಗಳಲ್ಲಿ ಪೂಜಿಸಬೇಕು.

ಈ ಮಂತ್ರಪೂರ್ವಕವಾಗಿ ಮಧ್ಯದಲ್ಲಿ ಸೂರ್ಯನನ್ನು ಆವಾಹನಮಾಡಬೇಕು.

ಕೊನೆಯಲ್ಲಿ ಸೂರ್ಯನನ್ನು ವಿಸರ್ಜನಮಾಡುವಾಗ "ಓಂ ನಮೋ ಭಗವತೇ ಆದಿತ್ಯಾಯ ಸಹಸ್ರಕಿರಣಾಯ ಯದಾಸುಖಂ ಪುನರಾಗಮಾಯ" ಈ ಮಂತ್ರವನ್ನು ಹೇಳಬೇಕು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸೌರಧರ್ಮದಲ್ಲಿ ಸೂರ್ಯಮಂತ್ರೋದ್ಧಾರವರ್ಣನೆಯೆಂಬ ಇನ್ನೂರಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಶ್ರೀ ಭವಿಷ್ಯಮಹಾಪುರಾಣಂ
## ಬ್ರಾಹ್ಮೇ ಪರ್ವಣಿ
## ಷೋಡಶಾಧಿಕದ್ವಿಶತತಮೋಽಧ್ಯಾಯಃ

---

॥ ಸುಮಂತುರುವಾಚ ॥

ಶೃಣುಷ್ವಾರ್ಚಾವಿಧಿಂ ರಾಜನ್ ಮಂತ್ರಪೂತೇನ ವಾರಿಣಾ ।
ಪ್ರೋಕ್ಷಣೀಯಂ ಪ್ರಯತ್ನೇನ ಕಿಮರ್ಥಂ ಸುಸಮಾಹಿತಂ ॥ ೧ ॥

ಹೃದಯಾದಿಷ್ವಥಾಂಗೇಷು ಮಂತ್ರಂ ವಿನ್ಯಸ್ಯ ಮಂತ್ರವಿತ್ ।
ಆತ್ಮಾನಂ ಭಾಸ್ಕರಂ ಧ್ಯಾತ್ವಾ ಪರಿಚಾರಸಮನ್ವಿತಃ ॥ ೨ ॥

ಕುರ್ಯಾತ್ಸಮ್ಮಾರ್ಜನೀಂ ಮುದ್ರಾಂ ದಿಶಾಂ ಚ ಪ್ರತಿಬೋಧನಂ ।
ಪಾತಾಳಭೂಶೋಧನಂ ಚ ನಭಸಶ್ಚ ತಥಾ ಮತಂ ॥ ೩ ॥

---

## ಇನ್ನೂರಹದಿನಾರನೆಯ ಅಧ್ಯಾಯ

೧. ಸುಮಂತುಮುನಿವರ್ಯರು ಶತಾನೀಕರಾಜನಿಗೆ ಹೇಳುತ್ತಾರೆ—ಎಲೈ ರಾಜನೇ! ಅರ್ಚಾವಿಧಿಯನ್ನು ಹೇಳುತ್ತೇನೆ ಕೇಳು. ಪ್ರಯತ್ನಪಟ್ಟು ಒಂದೇ ಮನಸ್ಸುಳ್ಳವನಾಗಿ, ಮಂತ್ರಶುದ್ಧವಾದ ಜಲದಿಂದ ಪೂಜೋಪಕರಣವನ್ನು ಪ್ರೋಕ್ಷಿಸಬೇಕು.

೨. ಮಂತ್ರಜ್ಞನಾದವನು ಮಂತ್ರವತ್ತಾಗಿ ಹೃದಯ ಮೊದಲಾದ ಅಂಗನ್ಯಾಸ ಮಾಡಿಕೊಂಡು, ತನ್ನಲ್ಲೇ ಸೂರ್ಯನಿರುವನೆಂದು ಭಾವಿಸಿ, ಪ್ರೋಕ್ಷಿಸಿದ ಉಪಕರಣ ಸಮನ್ವಿತನಾಗಿ ಪೂಜಾರಂಭಮಾಡಬೇಕು.

೩. ಸಮ್ಮಾರ್ಜನೀ ಮುದ್ರೆಯನ್ನು ಬಂಧನಮಾಡಿ ಪ್ರೋಕ್ಷಿಸಿ, ದಿಕ್ಕುಗಳನ್ನೆಲ್ಲಾ ವೀಕ್ಷಿಸಿ ಪ್ರತಿಬೋಧನಮಾಡಬೇಕು. ಪಾತಾಳ, ಭೂಮಿ ಮತ್ತು ಆಕಾಶ ಇವುಗಳ ಶೋಧನವನ್ನು ಆಯಾಮಂತ್ರಪೂರ್ವಕವಾಗಿ ಮಾಡಬೇಕು.

**ಅರ್ಚನಸ್ಯ ಪ್ರಕಾರೋಽಯಂ ಸರ್ವೇಷಾಮೀಪ್ಸಿತಪ್ರದಃ ।**
**ಸರ್ವೈರಪಿ ಬುಧೈರ್ವೀರ ಪದ್ಮಮೇತತ್ಪ್ರಕೀರ್ತಿತಂ ॥ ೪ ॥**

**ಅಷ್ಟಪತ್ರಂ ಲಿಖೇತ್ಪದ್ಮಂ ಶುಚೌ ದೇಶೇ ಸಕರ್ಣಿಕಂ ।**
**ಆವಾಹನೀಂ ತತೋ ಬಧ್ವಾ ಮುದ್ರಾಮಾವಾಹಯೇದ್ರವಿಂ ॥ ೫ ॥**

**ಖಷೋಲ್ಕಂ ಸ್ನಾಪಯೇತ್ತತ್ರ ಸ್ವರೂಪಂ ಶೋಭದಾಯಕಂ ।**
**ಸ್ಥಾಪಯೇತ್ಸ್ನಾಪಯೇಚ್ಚೈವ ಮಂತ್ರೈರ್ಮಂತ್ರಶರೀರಿಣಂ ॥ ೬ ॥**

**ಆಗ್ನೇಯ್ಯಾಂ ದಿಶಿ ದೇವಸ್ಯ ಹೃದಯಂ ಸ್ಥಾಪಯೇನ್ನರಃ ।**
**ಐಶಾನ್ಯಾಂ ಚ ಶಿರಃ ಸ್ಥಾಪ್ಯ ನೈಋತ್ಯಾಂ ವಿನ್ಯಸೇಚ್ಛಿಖಾಂ ॥ ೭ ॥**

**ಪೌರಂದರ್ಯಾಂ ನ್ಯಸೇನ್ನೇತ್ರೇ ಏಕಾಗ್ರಹೃದಯೋ ಸ್ಥಿತಃ ।**
**ಆವಾಹ್ಯ ಚೈಕಂ ಕವಚಂ ವಾರುಣ್ಯಾಮಸ್ತ್ರಮೇವ ಚ ॥ ೮ ॥**

---

೪ ವಿಧಾನಪ್ರಕಾರಅರ್ಚನವು ಸರ್ವರಿಗೂ ಇಷ್ಟಾರ್ಥವನ್ನು ಕೊಡತಕ್ಕದ್ದಾಗಿದೆ. ಅಯ್ಯಾ ವೀರನೇ ! ಪೂಜಾಂಗವಾಗಿ ಪದ್ಮರಚನೆ ಮಾಡಬೇಕೆಂದು ಎಲ್ಲ ವಿದ್ವಾಂಸರೂ ಹೇಳಿದ್ದಾರೆ.

೫. ಗುಡಿಸಿ ಸಾರಿಸಿ ಪರಿಶುದ್ಧವಾದ ಸ್ಥಳದಲ್ಲಿ ಕರ್ಣಿಕಾಸಹಿತವಾದ ಅಷ್ಟದಲ ಪದ್ಮವನ್ನು ಬರೆಯಬೇಕು. ಆ ಮೇಲೆ ಆವಾಹನೀ ಮುದ್ರೆಯನ್ನು ಬಂಧಿಸಿ ತೋರಿಸಿ, ಆ ಪದ್ಮದಲ್ಲಿ ಸೂರ್ಯನನ್ನು ಆವಾಹನಮಾಡಬೇಕು.

೬. ಬಳಿಕ ಶೋಭದಾಯಕಸ್ವರೂಪನಾದ ಈ ಖಷೋಲ್ಕನಿಗೆ ಸ್ನಾನಮಾಡಿಸಬೇಕು. ಮಂತ್ರಶರೀರಿಯಾದ ಸೂರ್ಯನನ್ನು ಮಂತ್ರವತ್ತಾಗಿ ಆವಾಹನಮಾಡಿ ಮಂತ್ರಪೂರ್ವಕವಾಗಿ ಸ್ನಾನಮಾಡಿಸಬೇಕು. (ಸಾಂಬಪುರಾಣದಲ್ಲಿ ಖಖೋಲ್ಕ ಎಂದಿದೆ)

೭. ಆಗ್ನೇಯದಿಕ್ಕಿನಲ್ಲಿ ದೇವನ ಹೃದಯವನ್ನೂ, ಈಶಾನ್ಯದಿಕ್ಕಿನಲ್ಲಿ ಶಿರಸ್ಸನ್ನೂ, ನೈಋತ್ಯದಿಕ್ಕಿನಲ್ಲಿ ಶಿಖೆಯನ್ನೂ ಸ್ಥಾಪಿಸಬೇಕು.

೮. ಏಕಾಗ್ರಮನಸ್ಸುಳ್ಳವನಾಗಿ ಇಂದ್ರದಿಕ್ಕಿನಲ್ಲಿ ಎರಡು ನೇತ್ರಗಳನ್ನೂ ಪಶ್ಚಿಮದಲ್ಲಿ ಅಸ್ತ್ರವನ್ನೂ ಕವಚವನ್ನೂ ನ್ಯಾಸಮಾಡಬೇಕು. ಬಳಿಕ ಆವಾಹನಮಾಡಬೇಕು.

ಐಶಾನ್ಯಾಂ ಸ್ಥಾಪಯೇತ್ಸೋಮಂ ಪೌರಂದರ್ಯಾಂ ತು ಲೋಹಿತಂ ।
ಆಗ್ನೇಯ್ಯಾಂ ಸೋಮತನಯಂ ಯಾಮ್ಯಾಂ ಚೈವ ಬೃಹಸ್ಪತಿಂ ॥ ೯ ॥

ನೈಋತ್ಯಾಂ ದಾನವಂ ಶುಕ್ರಂ ವಾರುಣ್ಯಾಂ ಚ ಶನೈಶ್ಚರಂ ।
ವಾಯವ್ಯಾಂ ಚ ತಥಾ ಕೇತುಂ ಕೌಬೇರ್ಯಾಂ ರಾಹುಮೇವ ಚ ॥ ೧೦ ॥

ದ್ವಿತೀಯಾಯಾಂ ತು ಕಕ್ಷಾಯಾಂ ದೇವತೇಜಸ್ಸಮುದ್ಭವಾನ್ ।
ಸ್ಥಾಪಯೇದ್ದ್ವಾದಶಾದಿತ್ಯಾನ್ ಕಾಶ್ಯಪೇಯಾನ್ ಮಹಾಬಲಾನ್ ॥ ೧೧ ॥

ಭಗಃ ಸೂರ್ಯೋಽರ್ಯಮಾ ಚೈವ ಮಿತ್ರೋ ವರುಣ ಏವ ಚ ।
ಸವಿತಾ ಚೈವ ಧಾತಾ ಚ ವಿವಸ್ವಾಂಶ್ಚ ಮಹಾಬಲಃ ॥
ತ್ವಷ್ಟಾ ಪೂಷಾ ತಥಾ ಚೇಂದ್ರೋ ದ್ವಾದಶೋ ವಿಷ್ಣುರುಚ್ಯತೇ ॥ ೧೨ ॥

---

೯. ಸುತ್ತಲೂ ಒಂದನೆಯ ಕಕ್ಷೆಯಲ್ಲಿ ಈಶಾನ್ಯದಲ್ಲಿ ಸೋಮನನ್ನೂ, ಇಂದ್ರ ದಿಕ್ಕಿನಲ್ಲಿ ಅಂಗಾರಕನನ್ನೂ, ಸ್ಥಾಪಿಸಬೇಕು. ಆಗ್ನೇಯದಲ್ಲಿ ಬುಧನನ್ನೂ, ದಕ್ಷಿಣ ದಲ್ಲಿ ಬೃಹಸ್ಪತಿಯನ್ನೂ

೧೦. ನೈಋತ್ಯದಲ್ಲಿ ರಾಕ್ಷಸಗುರುವಾದ ಶುಕ್ರನನ್ನೂ, ಪಶ್ಚಿಮದಲ್ಲಿ ಶನೈಶ್ಚರ ನನ್ನೂ, ವಾಯವ್ಯದಲ್ಲಿ ಕೇತುವನ್ನೂ, ಉತ್ತರದಲ್ಲಿ ರಾಹುವನ್ನೂ ಆವಾಹಿಸಬೇಕು.

೧೧. ಎರಡನೆಯ ಕಕ್ಷೆಯಲ್ಲಿ ದೇವತೇಜಸ್ಸಿನಿಂದ ಜನಿಸಿದವರೂ, ಮಹಾಬಲ ಶಾಲಿಗಳೂ, ಕಶ್ಯಪಪುತ್ರರೂ ಆದ ದ್ವಾದಶಾದಿತ್ಯರನ್ನು ಆವಾಹಿಸಬೇಕು.

೧೨. ಭಗ, ಸೂರ್ಯ, ಅರ್ಯಮಾ, ಮಿತ್ರ, ವರುಣ, ಸವಿತಾ, ಧಾತಾ, ವಿವ ಸ್ವಾನ್, ತ್ವಷ್ಟಾ, ಪೂಷಾ, ಇಂದ್ರ, ವಿಷ್ಣು ಇವರೇ ದ್ವಾದಶಾದಿತ್ಯರು.

ಪೂರ್ವೇ ಇಂದ್ರಾಯನಮಃ ದಕ್ಷಿಣೇಯಾಮಾಯನಮ ।
ಪಶ್ಚಿಮೇ ವರುಣಾಯನಮಃ ಉತ್ತರೇ ಕುಬೇರಾಯನಮಃ ।
ಐಶಾನ್ಯಾಮೀಶ್ವರಾಯನಮಃ ಆಗ್ನೇಯ್ಯಾಮಗ್ನಿದೇವತಾಯೈನಮಃ ।
ನೈಋತ್ಯಾಂ ಪಿತೃದೇವೇಭ್ಯೋನಮಃ ವಾಯವ್ಯಾಂ ವಾಯವೇನಮಃ।

ಹೀಗೆ ದಿಕ್ಕು ವಿದಿಕ್ಕುಗಳಲ್ಲಿ ದಿಕ್ಪಾಲಕರನ್ನು ಪೂಜಿಸಬೇಕು.

ಪೂರ್ವೇ ಚೇಂದ್ರಾಯ ದಕ್ಷಿಣೇ ಯಮಾಯ
ಪಶ್ಚಿಮೇ ವರುಣಾಯ ಉತ್ತರೇ ಕುಬೇರಾಯ ॥
ಐಶಾನ್ಯಾಮಿಶ್ವರಾಯ ಆಗ್ನೇಯ್ಯಾಮಗ್ನಿದೇವತಾಯೈ ।
ನೈಋತ್ಯಾಂ ಪಿತೃದೇವೇಭ್ಯೋ ವಾಯವ್ಯಾಂ ವಾಯವೇ ॥
ಜಯಾ ಚ ವಿಜಯಾಚೈವ ಜಯಂತೀ ಚಾಪರಾಜಿತಾ ।
ಶೇಷಶ್ಚ ವಾಸುಕಿಶ್ಚೈವ ರೇವತೀ ಚ ವಿನಾಯಕಃ ॥
ಮಹಾಶ್ವೇತಾ ಮಹಾದೇವೀ ರಾಜ್ಞೀ ಚೈವ ಸುವರ್ಚಲಾ ॥ ೧೩ ॥

ತಥಾನ್ಯೇವಾಪಿ ದೇವಾನಾಂ ಸಮೂಹಸ್ತತ್ರ ತತ್ರ ಹ ।
ತಥಾನ್ಯೇ ಲೋಕವಿಖ್ಯಾತೋ ಯೋಗಃ ಪ್ರೋಕ್ತಶ್ಚ ದಕ್ಷಿಣೇ ॥ ೧೪ ॥

ಪುದಸ್ತಾದ್ವ್ಯಾಸುರಸ್ಥಾನೇ ಸ್ಥಾಪನೀಯಾ ವಿಜಾನತಾ ।
ಸಿದ್ಧಿರ್ವೃದ್ಧಿಃಸ್ಮೃತಿರ್ದೇವೀ ಶ್ರೀಶ್ಚೈವೋತ್ಪಲಮಾಲಿನೀ ॥ ೧೫ ॥

ಸ್ಥಾಪ್ಯಾ ಸ್ವದಕ್ಷಿಣೇ ಪಾರ್ಶ್ವೇ ಲೋಕಪೂಜ್ಯಾ ಸಮಂತತಃ ।
ಪ್ರಾಜ್ಞಾವತೀ ಕ್ಷುಧಾ ವೀರ ಹಾರೀತಾ ಬುದ್ಧಿರೇವ ಚ ॥ ೧೬ ॥

---

೧೩. ಜಯಾ, ವಿಜಯಾ, ಜಯಂತೀ, ಅಪರಾಜಿತಾ ಎಂಬುವರನ್ನೂ, ಶೇಷ ವಾಸುಕಿ, ರೇವತ, ವಿನಾಯಕ ಇವರುಗಳನ್ನೂ, ಮಹಾಶ್ವೇತಾ, ಮಹಾದೇವೀ, ರಾಜ್ಞೀ ಮತ್ತು ಸುವರ್ಚಲಾ ದೇವಿಯರನ್ನೂ ಅವರವರ ಸ್ಥಾನದಲ್ಲಿ ಆವಾಹಿಸಬೇಕು

೧೪. ಹಾಗೆಯೇ ತತ್ತತ್ ಸ್ಥಾನಗಳಲ್ಲಿ ಇತರ ದೇವತೆಗಳ ವೃಂದವನ್ನೂ ಸ್ಥಾಪಿಸಬೇಕು. ಅಲ್ಲದೆ ದಕ್ಷಿಣದಲ್ಲಿ ಲೋಕಪ್ರಸಿದ್ಧವಾದ ಯೋಗಶಕ್ತಿಯನ್ನೂ ಸ್ಥಾಪಿಸಬೇಕು.

೧೫. ಜ್ಞಾನಿಯಾದವನು ಮುಂಭಾಗದಲ್ಲಿ ಪ್ರಕಾಶಮಾನವಾದ ಸ್ಥಳದಲ್ಲಿ ಸಿದ್ಧಿ, ವೃದ್ಧಿ, ಸ್ಮೃತಿ, ಉತ್ಪಲಮಾಲಿನಿಯಾದ ಶ್ರೀದೇವಿ ಇವರುಗಳನ್ನು ಸ್ಥಾಪಿಸಬೇಕು.

೧೬. ಎಲೈ ವೀರನೇ! ಕೇಳು; ಸೂರ್ಯಶ್ರೀಕಾಮನಾದವನ್ನು ಪ್ರಜ್ಞಾವತೀ, ಕ್ಷುಧಾ, ಹಾರೀತಾ, ಬುದ್ಧಿ, ಬುದ್ಧಿಮತೀ ಈ ದೇವಿಯರನ್ನು ಸೂರ್ಯನ ದಕ್ಷಿಣ(ಬಲ) ಪಾರ್ಶ್ವದಲ್ಲಿ ಸ್ಥಾಪಿಸಬೇಕು.

ಸ್ಥಾಪ್ಯ ಬುದ್ಧಿಮತೀ ನಿತ್ಯಂ ಶ್ರೀಕಾಮ್ಯೈರ್ವಾ ವಿವಸ್ವತಃ ।
ಋದ್ಧಿಶ್ಚೈವ ವಿಸ್ಪಷ್ಟಿಶ್ಚ ಪೌರ್ಣಮಾಸೀ ವಿಭಾವರೀ ॥ ೧೭ ॥

ಸ್ಥಾಪ್ಯಾಶ್ಚ ಸ್ಯೋತ್ತರೇ ಪಾರ್ಶ್ವೇ ಇತ್ಯೇತಾ ನವಶಕ್ತಯಃ ।
ದೀಪಶ್ಚಾನ್ನಮಲಂಕಾರೋ ವಾಸಃ ಪುಷ್ಪಾಣಿ ಮಂತ್ರತಃ ॥
ದೇಯಾನಿ ದೇವದೇವಾಯ ಸಾನುಗಾಯ ಸಮೂರ್ತಯೇ ॥ ೧೮ ॥

ವಿಧಿನಾನೇನ ಸತತಂ ಸದಾ ಯೋಽರ್ಚತಿ ಭಾಸ್ಕರಂ ।
ಸಂಪ್ರಾಪ್ಯ ಪರಮಾನ್ ಕಾಮಾನ್ ತತೋ ಭಾನುಸದೋ ವ್ರಜೇತ್ ॥ ೧೯ ॥

ಅನೇನ ವಿಧಿನಾ ಯಸ್ತು ಭೋಜಯೇದ್ಭಾಸ್ಕರಂ ನೃಪ ।
ತ್ವಂ ನಿಂಬ ಕಟುಕಾತ್ಮಾಸಿ ಆದಿತ್ಯನಿಲಯಸ್ತಥಾ ॥
ಸರ್ವರೋಗಹರಃ ಶಾಂತೋ ಭವ ಮೇ ಪ್ರಾಶನಂ ಸದಾ ॥ ೨೦ ॥

---

೧೭. ಋದ್ಧಿ, ವಿಸ್ಪಷ್ಟಿ, ಪೌರ್ಣಮಾಸೀ. ವಿಭಾವರೀ ಎಂಬವರನ್ನು ಸೂರ್ಯದೇವನ ಎಡಗಡೆ ಎಂದರೆ ಉತ್ತರಪಾರ್ಶ್ವದಲ್ಲಿ ಸ್ಥಾಪಿಸಬೇಕು. ಈ ನವಶಕ್ತಿಗಳನ್ನು ಈ ಪ್ರಕಾರ ಸ್ಥಾಪಿಸತಕ್ಕದ್ದು.

೧೮. ಅನುಚರಸಹಿತನೂ, ಮೂರ್ತಿಸಹಿತನೂ ಆದ ದೇವದೇವನಿಗೆ ಮಂತ್ರಪೂರ್ವಕವಾಗಿ ವಸ್ತ್ರ, ಅಲಂಕಾರ, ಪುಷ್ಪ, ಧೂಪ, ದೀಪ, ನೈವೇದ್ಯ ಮಂತ್ರಪುಷ್ಪ ಇವುಗಳನ್ನು ಸಮರ್ಪಿಸಬೇಕು.

೧೯. ಯಾವನು ಸದಾ ಈ ವಿಧಿಯಿಂದ ಸೂರ್ಯನನ್ನು ಪೂಜಿಸಿ ನಿವೇದನ ಮಾಡುತ್ತಾನೆಯೋ, ಮತ್ತು ಸೂರ್ಯಪ್ರೀತ್ಯರ್ಥವಾಗಿ ಬ್ರಾಹ್ಮಣಭೋಜನ ಮಾಡಿಸುತ್ತಾನೆಯೋ, ಅವನು ಉತ್ಕೃಷ್ಟಗಳಾದ ಕಾಮ್ಯವಸ್ತುಗಳನ್ನು ಸಂಪೂರ್ಣವಾಗಿ ಹೊಂದಿ ಆ ಮೇಲೆ ಸೂರ್ಯಸಭೆಗೆ ಹೋಗುತ್ತಾನೆ.

೨೦. ನಿಂಬಪತ್ರ ಸಪ್ತಮಿಯಲ್ಲಿ ಹೀಗೆ ಪೂಜಿಸಿ " ಎಲೈ ನಿಂಬಪತ್ರವೇ ! ನೀನು ಕಟು (ಕಹಿ) ಸ್ವಭಾವವುಳ್ಳದಾಗಿದ್ದೀ. ಹಾಗೂ ಸೂರ್ಯನಿಗೆ ವಾಸಸ್ಥಾನವಾಗಿದ್ದೀ. ನೀನು ನನಗೆ ಸರ್ವರೋಗಪರಿಹಾರಕವೂ, ಶಾಂತವೂ, ಸದಾ ಭಕ್ಷ್ಯವಸ್ತುವೂ ಆಗು " ಎಂದು ಪ್ರಾರ್ಥಿಸಬೇಕು.

ಇತ್ಥಂ ಪ್ರಾಶ್ಯ ಜಪೇದ್ಭೂಮೌ ದೇವಸ್ಯ ಪುರತೋ ನೃಪ ।
ಬ್ರಾಹ್ಮಣಾನ್ ಭೋಜಯಿತ್ವಾ ತು ಶಕ್ತ್ಯಾ ದತ್ವಾ ತು ದಕ್ಷಿಣಾಂ ॥ ೨೧ ॥

ಭುಂಜೀತ ವಾಗ್ಯತಃ ಪಶ್ಚಾನ್ಮಧುರಂ ಕ್ಷಾರವರ್ಜಿತಂ ।
ಇತ್ಯೇಷಾ ವರ್ಷಪರ್ಯಂತಂ ಕರ್ತವ್ಯಾ ಚೈವ ಸಪ್ತಮೀ ॥ ೨೨ ॥

ಕುರ್ವಾಣಸ್ಸಪ್ತಮೀಮೇತಾಂ ಸರ್ವರೋಗೈಃ ಪ್ರಮುಚ್ಯತೇ ।
ಸರ್ವರೋಗವಿನಿರ್ಮುಕ್ತಃ ಸೂರ್ಯಲೋಕೇ ಸ ಗಚ್ಛತಿ ॥ ೨೩ ॥

॥ ಸುಮಂತುರುವಾಚ ॥

ಅಥ ಭಾದ್ರಪದೇ ಮಾಸಿ ಸಿತೇ ಪಕ್ಷೇ ಮಹೀಪತೇ ।
ಕೃತ್ವೋಪವಾಸಂ ಸಪ್ತಮ್ಯಾಂ ವಿಧಿವತ್ಪೂಜಯೇದ್ರವಿಂ ॥ ೨೪ ॥

ಮಾಹೇಶ್ವರೇಣ ವಿಧಿನಾ ಪೂಜಯೇದತ್ರ ಭಾಸ್ಕರಂ ।
ಅಷ್ಟಮ್ಯಾಂ ತು ಪುನಃ ಸ್ನಾತಃ ಪೂಜಯಿತ್ವಾ ದಿವಾಕರಂ ॥ ೨೫ ॥

---

೨೧. ಎಲೈ ರಾಜನೇ! ಕೇಳು; ಹೀಗೆ ದೇವನ ಸಮ್ಮುಖದಲ್ಲಿ ಪ್ರಾಶನಮಾಡಿ ಭೂಮಿಯಮೇಲೆ ಕುಳಿತು ಯಥಾಶಕ್ತಿ ಜಪಮಾಡಬೇಕು. ಬಳಿಕ ಶಕ್ತ್ಯನುಸಾರವಾಗಿ ಬ್ರಾಹ್ಮಣರಿಗೆ ಭೋಜನಮಾಡಿಸಿ ದಕ್ಷಿಣೆಯನ್ನು ಕೊಡಬೇಕು.

೨೨. ಅನಂತರದಲ್ಲಿ ತಾನು ಕಾರವನ್ನು ಸೇವಿಸಿಸದೆ ಮಧುರವಸ್ತುವನ್ನು ಮೌನದಿಂದ ಭುಜಿಸಬೇಕು. ಈ ರೀತಿಯಾಗಿ ಒಂದು ವರ್ಷದವರೆಗೆ ಈ ಸಪ್ತಮೀ ವ್ರತವನ್ನು ಮಾಡಬೇಕು.

೨೩. ಈ ಸಪ್ತಮೀವ್ರತವನ್ನು ಮಾಡಿದವನು ಸರ್ವರೋಗಗಳಿಂದಲೂ ಮುಕ್ತನಾಗುವನು. ಅಲ್ಲದೆ ಅವನು ಸೂರ್ಯಲೋಕವನ್ನು ಸೇರುತ್ತಾನೆ" ಎಂದನು.

೨೪. ಸುಮಂತುಮುನಿವರ್ಯರು ಮುಂದುವರಿಸಿ ಫಲಸಪ್ತಮೀ ವ್ರತವನ್ನು ಹೇಳುತ್ತಾರೆ—ಎಲೈ ರಾಜನೇ! ಭಾದ್ರಪದಮಾಸದ ಶುಕ್ಲಪಕ್ಷದ ಸಪ್ತಮೀದಿನ ಉಪವಾಸವನ್ನು ಮಾಡಿ ವಿಧಿಪ್ರಕಾರ ಸೂರ್ಯದೇವನನ್ನು ಪೂಜಿಸಬೇಕು.

೨೫. ಈ ಸಂದರ್ಭದಲ್ಲಿ ಮಹೇಶ್ವರನನ್ನು ಪೂಜೆಮಾಡುವ ವಿಧಿಯಿಂದಲೇ ಸೂರ್ಯನನ್ನು ಪೂಜಿಸಬೇಕು. ಅಲ್ಲದೆ ಅಷ್ಟಮಿಯ ದಿನವೂ ಸ್ನಾನಮಾಡಿ ಸೂರ್ಯನನ್ನು ಪೂಜಿಸಬೇಕು.

ದದ್ಯಾತ್ಫಲಾನಿ ವಿಪ್ರೇಭ್ಯೋ ಮಾರ್ತಂಡಃ ಪ್ರೀಯತಾಮಿತಿ ।
ಖರ್ಜೂರಂ ನಾಲಿಕೇರಂ ಚ ಮಾತುಲಿಂಗಫಲಾನಿ ಚ ॥ ೨೬ ॥

ದೇವಸ್ಯ ಪುರತೋ ದತ್ವಾ ತಥಾ ಚಾಮ್ರಫಲಾನಿ ಚ ।
ಇತಿ ತೇ ಕಥಿತಂ ರಾಜನ್ ಸಪ್ತಮೀಫಲವಾದಿತಃ ॥ ೨೭ ॥

ಮಹಾತಪೋ ಮಹಾಶ್ರೇಷ್ಠಂ ಭಾಸ್ಕರಸ್ಯ ವಿಶಾಂಪತೇ ।
ಯಚ್ಛ್ರುತ್ವಾ ಮಾನವೋ ರಾಜನ್ ಮುಚ್ಯತೇ ಬ್ರಹ್ಮಹತ್ಯಯಾ ॥ ೨೮ ॥

ತಥೇದಂ ಪರಮಂ ಪರ್ವ ಕಥಿತಂ ಬ್ರಹ್ಮಸಂಜ್ಞಿತಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯಂತೇ ಮಾನವಾ ನೃಪ ॥ ೨೯ ॥

ಅಶ್ವಮೇಧಸಹಸ್ರಸ್ಯ ವಾಜಪೇಯಶತಸ್ಯ ಚ ।
ಸರ್ವತೀರ್ಥಾಭಿಗಮನೇ ವೇದಾಭ್ಯಾಸೇ ಚ ಯತ್ಫಲಂ ॥ ೩೦ ॥

---

೨೬-೨೭. "ಮಾರ್ತಂಡಃ ಪ್ರೀಯತಾಂ" ಎಂದು ಹೇಳಿ ಬ್ರಾಹ್ಮಣರಿಗೆ ಫಲಗಳನ್ನು ದಾನಮಾಡಬೇಕು. ಖರ್ಜೂರ, ತೆಂಗಿನಕಾಯಿ, ಮಾದಲದಹಣ್ಣು, ಮಾವಿನಹಣ್ಣು ಇವುಗಳನ್ನು ದೇವರ ಸಮ್ಮುಖದಲ್ಲಿ ದಾನಮಾಡಬೇಕು. ಎಲೈ ರಾಜನೇ! ಹೀಗೆ ನಿನಗೆ ಫಲಸಪ್ತಮೀವ್ರತವನ್ನು ಸಮಗ್ರವಾಗಿ ಹೇಳಿದುದಾಯಿತು.

೨೮. ಎಲೈ ರಾಜನೇ! ಇದು ಸೂರ್ಯಪ್ರಿಯವೂ, ಮಹಾಶ್ರೇಷ್ಠವೂ ಆದ ಮಹಾತಪಸ್ಸು. ಇದನ್ನು ಶ್ರವಣಮಾಡಿದರೆ ಮನುಷ್ಯನು ಬ್ರಹ್ಮಹತ್ಯೆಯಿಂದ ಬಿಡುಗಡೆ ಹೊಂದುತ್ತಾನೆ.

೨೯. ಹೀಗೆ ಬ್ರಹ್ಮಸಂಜ್ಞೆಯುಳ್ಳ ಶ್ರೇಷ್ಠವಾದ ಪರ್ವವನ್ನು ಹೇಳಿದುದಾಯಿತು. ರಾಜನೇ! ಇದನ್ನು ಕೇಳಿದ ಮನುಷ್ಯರು ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ.

೩೦. ಸಹಸ್ರ ಅಶ್ವಮೇಧಯಜ್ಞಗಳು, ನೂರುವಾಜಪೇಯಯಜ್ಞಗಳು, ಇವನ್ನು ಮಾಡಿದುದರಿಂದಲಾಗಲಿ, ಅಥವಾ ಸರ್ವತೀರ್ಥಯಾತ್ರೆಗಳನ್ನು ಮಾಡಿದುದರಿಂದಲಾಗಲಿ, ಅಥವಾ ಸಾಂಗವಾಗಿ ವೇದಾಭ್ಯಾಸ ಮಾಡಿದುದರಿಂದಲಾಗಲಿ ಯಾವ ಫಲ ಲಭಿಸುವುದೋ ಅದೇ ಫಲ ಈ ವ್ರತಮಾಡುವುದರಿಂದ ಲಭಿಸುವುದು.

ಯತ್ಫಲಂ ಪೃಥಿವೀದಾನೇ ತತ್ಸರ್ವಂ ಪ್ರಾಪ್ನುಯಾನ್ನರಃ ।
ರಾಜಸೂಯಸಹಸ್ರಸ್ಯ ವಾಜಪೇಯಶತಸ್ಯ ಚ ॥ ೩೧ ॥

ಸಹಸ್ರಶತದಾನಸ್ಯ ಫಲಂ ವಿಂದತಿ ಮಾನವಃ ।
ಲೇಖತ್ವಂ ಬ್ರಾಹ್ಮಣೋ ಗಚ್ಛೇತ್ ಕ್ಷತ್ರಿಯೋ ವಿಪ್ರತಾಂ ವ್ರಜೇತ್ ॥೩೨॥

ವೈಶ್ಯೋಽಪಿ ಕ್ಷತ್ರತಾಂ ಯಾತಿ ಶೂದ್ರೋ ವೈಶ್ಯತ್ವಮೇವ ಚ ।
ಸೂತಮಾಗಧವಂದ್ಯಾದ್ಯಾಃ ಯೇಚಾನ್ಯೇ ಸಂಕರೋದ್ಭವಾಃ ॥
ತೇಽಪಿ ಯಾಂತ್ಯುತ್ತಮಂ ಸ್ಥಾನಂ ಪುರಾಣಶ್ರವಣಾದ್ವಿಭೋ ॥ ೩೩ ॥

ಇತಿಹಾಸಪುರಾಣಾಭ್ಯಾಂ ನತ್ವನ್ಯತ್ಪಾವನಂ ನೃಣಾಂ ।
ಯೇಷಾಂ ಶ್ರವಣಮಾತ್ರೇಣ ಮುಚ್ಯತೇ ಸರ್ವಕಿಲ್ಬಿಷೈಃ ॥ ೩೪ ॥

---

೩೧. ಮತ್ತು ಭೂದಾನ ಮಾಡಿದುದರಿಂದ ಬರುವ ಫಲವನ್ನು ಈ ವ್ರತ ಮಾಡಿದ ಮನುಷ್ಯನು ಹೊಂದುತ್ತಾನೆ. ಸಹಸ್ರ ರಾಜಸೂಯಯಾಗಗಳು, ನೂರು ವಾಜಪೇಯಯಾಗಗಳು, ಇವನ್ನು ಮಾಡಿದರೆ ಏನುಫಲ ಬರುವುದೋ

೩೨. ಮತ್ತು ಲಕ್ಷದಾನ ಮಾಡಿದರೆ ಏನುಫಲ ಬರುವುದೋ, ಅವೆಲ್ಲವನ್ನೂ ಈ ವ್ರತಮಾಡಿದ ಮನುಷ್ಯನು ಹೊಂದುತ್ತಾನೆ. ಈ ವ್ರತಮಾಡುವುದರಿಂದ ಬ್ರಾಹ್ಮಣನು ದೇವತಾಸದೃಶನಾಗುವನು

೩೩. ಕ್ಷತ್ರಿಯನು ಬ್ರಾಹ್ಮಣನಾಗುತ್ತಾನೆ. ವೈಶ್ಯನು ಕ್ಷತ್ರಿಯನಾಗುತ್ತಾನೆ. ಶೂದ್ರನು ವೈಶ್ಯತ್ವವನ್ನು ಹೊಂದುವನು ಸೂತ, ಮಾಗಧ, ವಂದಿ ಮೊದಲಾದವರು ವ್ರತನಿರೂಪಣಮಾಡುವ ಪುರಾಣಶ್ರವಣ ಮಾತ್ರದಿಂದ ತಮ್ಮ ತಮ್ಮ ಸ್ಥಿತಿಗಿಂತ ಉತ್ತಮಸ್ಥಾನವನ್ನು ಹೊಂದುತ್ತಾರೆ.

೩೧. ಮನುಷ್ಯರಿಗೆ ಇತಿಹಾಸ ಪುರಾಣಗಳಿಗಿಂತ ಪಾವನವಾದುದು ಮತ್ತಾವುದೂ ಇಲ್ಲ. ಅವನ್ನು ಶ್ರವಣಮಾಡಿದ ಮಾತ್ರಕ್ಕೆ ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ.

ವಿಧಿನಾ ರಾಜಶಾರ್ದೂಲ ಶೃಣ್ವತಾಂ ಯತ್ಫಲಂ ಕಿಲ ।
ಯಥೋಕ್ತಂ ನಾತ್ರ ಸಂದೇಹಃ ಪಠತಾಂ ಚ ವಿಶಾಂಪತೇ ॥ ೩೫ ॥

॥ ಶತಾನೀಕ ಉವಾಚ ॥

ಭಗವನ್ ಕೇನ ವಿಧಿನಾ ಶ್ರೋತವ್ಯಂ ಭಾರತಂ ನರೈಃ ।
ಚರಿತಂ ರಾಮಚಂದ್ರಸ್ಯ ಪುರಾಣಾನಿ ವಿಶೇಷತಃ ॥ ೩೬ ॥

ಕಥಂ ತು ವೈಷ್ಣವಾ ಧರ್ಮಾಃ ಶಿವಧರ್ಮಾ ವಿಶೇಷತಃ ।
ಸೌರಾಣಾಂ ವಾಪಿ ವಿಪ್ರೇಂದ್ರ ಉಚ್ಯತಾಂ ಶ್ರವಣೇ ವಿಧಿಃ ॥ ೩೭ ॥

ವಾಚನೀಯಂ ಕಥಂ ಚಾಪಿ ವಾಚಕೇನ ದ್ವಿಜೋತ್ತಮ ।
ಲಕ್ಷಣಂ ಚಾಸ್ಯ ಮೇ ಬ್ರೂಹಿ ವಾಚಕಸ್ಯ ಮಹಾತ್ಮನಃ ॥ ೩೮ ॥

---

೩೫. ಎಲೈ ರಾಜಶ್ರೇಷ್ಠನೇ ! ವಿಧಿಪ್ರಕಾರ ಶ್ರವಣಮಾಡುವವರಿಗೆ ಬರುವ ಯಥೋಕ್ತವಾದ ಫಲವೇ ಓದುವವರಿಗೂ ಬರುವುದು" ಎಂದು ಹೇಳಿದರು.

೩೬. ಆಗ ಶತಾನೀಕರಾಜನು ಕೇಳುತ್ತಾನೆ—" ಓ ಪೂಜ್ಯರೇ! ಮನುಷ್ಯರು ಭಾರತವನ್ನೂ, ರಾಮಾಯಣವನ್ನೂ ಯಾವ ವಿಧಿಯಿಂದ ಕೇಳಬೇಕು. ವಿಶೇಷತಃ ಪುರಾಣಗಳನ್ನು ಶ್ರವಣಮಾಡುವ ವಿಧಿ ಯಾವುದು ?

೩೭. ಅಯ್ಯಾ ವಿಪ್ರೇಂದ್ರನೇ ! ವೈಷ್ಣವ ಧರ್ಮಗಳನ್ನು ಬೋಧಿಸುವ ಪುರಾಣಶ್ರವಣ ವಿಧಾನಗಳನ್ನೂ ವಿಶೇಷವಾಗಿ ಶೈವಧರ್ಮಗಳನ್ನು ಬೋಧಿಸುವ ಪುರಾಣ ಶ್ರವಣಕ್ರಮಗಳನ್ನೂ, ಸೌರಪುರಾಣಗಳನ್ನು ಕೇಳುವ ವಿಧಾನವನ್ನೂ, ವಿವರವಾಗಿ ಹೇಳಬೇಕು."

೩೮. ಎಲೈ ಬ್ರಾಹ್ಮಣಶ್ರೇಷ್ಠನೇ! ವಾಚಕನು ಪುರಾಣವನ್ನು ಹೇಗೆ ವಾಚನ ಮಾಡಬೇಕು ? ಮಹಾತ್ಮನಾದ ವಾಚಕನ ಲಕ್ಷಣವೇನು ? ಎಂಬುದನ್ನೂ ನನಗೆ ಹೇಳಬೇಕು."

ಸ್ವರೂಪಂ ಚಾಸ್ಯ ಮೇ ಬ್ರೂಹಿ ಖಷೋಲ್ಕಸ್ಯ ಮಹಾತ್ಮನಃ
ಫಲಂ ಚ ಪೂಜಿತೇ ಕಿಂ ಸ್ಯಾತ್ ವಾಚಕೇ ವಿಧಿವದ್ದ್ವಿಜ ॥ ೩೯ ॥

ಪಾರಣೇಪಾರಣೇ ಪೂಜ್ಯೋ ವಾಚಕಃ ಶ್ರಾವಕೈಃ ಕಥಂ ।
ಸಮಾಪ್ತೇ ಭಗವನ್ ಕಿಂಕಿಂ ದೇಯಂ ಪರ್ವಣಿ ವಾಚಕೇ
ನ ಚ ಕಿಂ ಕಾರ್ಯಸಿದ್ಧಂ ಸ್ಯಾತ್ಸಿದ್ಧಂ ಪರ್ವಣಿ ಪರ್ವಣಿ । ॥ ೪೦ ॥

॥ ಸುಮಂತುರುವಾಚ ॥

ಸಮ್ಯಕ್ ಪೃಷ್ಟೋಽಸ್ಮಿ ರಾಜೇಂದ್ರ ಇತಿಹಾಸಪುರಾಣಯೋಃ ॥ ೪೧ ॥

ಶ್ರವಣೇ ತು ಮಹಾಬಾಹೋ ಶ್ರೂಯತಾಂ ಯನ್ಮಯಾ ಪುರಾ ।
ಪೃಷ್ಟೋವೋಚನ್ಮಹಾತೇಜಾ ವಿರಿಂಚೋ ಭಗವಾನ್ ಗುರುಃ ॥ ೪೨ ॥

---

೩೯. ಅಲ್ಲದೆ ಮಹಾತ್ಮನೂ, ಖಷೋಲ್ಕಸ್ವರೂಪನೂ ಆದ ಸೌರವಾಚಕನ ವಿಶೇಷ ಲಕ್ಷಣವನ್ನೂ, ವಿಧಿಪ್ರಕಾರ ಆ ವಾಚಕನನ್ನು ಪೂಜಿಸಿದರೆ ಏನು ಫಲ ಬರುವುದು ? ಎಂಬುದನ್ನೂ, ನನಗೆ ಹೇಳು.

೪೦. ಪ್ರತಿಯೊಂದು ಪಾರಣದ ದಿನದಲ್ಲೂ ಪುರಾಣಶ್ರವಣಮಾಡಿದವರು ವಾಚಕನನ್ನು ಹೇಗೆ ಪೂಜಿಸಬೇಕು ? ಸಮಾಪ್ತಿ ಮಂಗಳಾಚರಣದಲ್ಲಿ ವಾಚಕನಿಗೆ ಏನು ಸಂಭಾವನೆ ಕೊಡಬೇಕು ? ಪ್ರತಿ ಪುರಾಣಮಂಗಳವೂ ನಿರ್ವಿಘ್ನವಾಗಿ ಸಿದ್ಧಿಯಾದರೆ ಕಾರ್ಯಸಿದ್ಧಿಪ್ರದವಲ್ಲವೇ ? ಎಂದು ಕೇಳಿದನು.

೪೧. ಆಗ ಸುಮಂತುಮುನಿವರ್ಯರು ಶತಾನೀಕರಾಜನಿಗೆ ಹೇಳುತ್ತಾರೆ— ಅಯ್ಯಾ ರಾಜೇಂದ್ರನೇ ! ಇತಿಹಾಸ ಪುರಾಣಗಳ ವಿಷಯವಾಗಿ ನೀನು ಕೇಳಿದುದು ಸಮಂಜಸವಾಗಿದೆ.

೪೨. ಎಲೈ ಮಹಾಬಾಹುವೇ ! ಕೇಳು ; ಮಹಾತೇಜಸ್ವಿಯೂ, ಪೂಜ್ಯನೂ ಆದ ದೇವಗುರುವು, ಬ್ರಹ್ಮನನ್ನು ಪೂರ್ವದಲ್ಲಿ ಪುರಾಣಶ್ರವಣ ವಿಧಿಯೇನೆಂದು ಪ್ರಶ್ನಿಸಿದಾಗ ಅವನು ಆತನಿಗೆ ಏನು ಉತ್ತರ ಹೇಳಿದ್ದನೋ, ಅದನ್ನೇ ಈಗ ನಿನಗೆ ಹೇಳುತ್ತೇನೆ.

ಹಂತ ತೇ ಕಥಯಾಮ್ಯೇಷ ಪುರಾಣಶ್ರವಣೇ ವಿಧಿಂ ।
ಇತಿಹಾಸಪುರಾಣಾನಿ ಶ್ರುತ್ವಾ ಭಕ್ತ್ಯಾ ವಿಶೇಷತಃ ॥
ಮುಚ್ಯತೇ ಸರ್ವಪಾಪೇಭ್ಯೋ ಬ್ರಹ್ಮಹತಾದಿಭಿರ್ವಿಭೋ ॥ ೪೩ ॥

ಸಾಯಂ ಪ್ರಾತಸ್ತಥಾ ರಾತ್ರೌ ಶುಚಿರ್ಭೂತ್ವಾ ಶೃಣೋತಿ ಯಃ ।
ತಸ್ಯ ವಿಷ್ಣುಸ್ತಥಾ ಬ್ರಹ್ಮಾ ತುಷ್ಯತೆ ಶಂಕರಸ್ತಥಾ ॥ ೪೪ ॥

ಪ್ರತ್ಯೂಷೇ ಭಗವಾನ್ ಬ್ರಹ್ಮಾ ದಿನಾಂತೇ ತುಷ್ಯತೇ ಹರಿಃ ।
ಮಹಾದೇವಸ್ತಥಾ ರಾತ್ರೌ ಶೃಣ್ವತಾಂ ತುಷ್ಯತೇ ವಿಭುಃ
ಪಾರಣಾನಿ ದಶಾಹೇಷು ಏತೇ ಕುರ್ವಂತಿ ತಾನಿ ಭೋಃ । ॥ ೪೫ ॥

ಭವೇದ್ವೈ ರಾಜಶಾರ್ದೂಲ ಶೃಣು ಕೇಷಾಂ ಚ ಯತ್ಫಲಂ ॥
ವಿಧಾನಂ ವಾಚಕಸ್ಯೇಹ ಶೃಣ್ವತಾಂ ಚ ವಿಶಾಂಪತೇ ॥ ೪೬ ॥

---

೪೩. ವಿಭುವೇ! ಕೇಳು; ವಿಶೇಷ ಭಕ್ತಿಯಿಂದ ಇತಿಹಾಸ ಪುರಾಣಗಳನ್ನು ಕೇಳಿದವನು ಸರ್ವಪಾಪಗಳಿಂದಲೂ, ಬ್ರಹ್ಮಹತ್ಯಾದಿ ಮಹಾಪಾಪಗಳಿಂದಲೂ, ಬಿಡುಗಡೆಹೊಂದುತ್ತಾನೆ.

೪೪. ಸಾಯಂಕಾಲ, ಪ್ರಾತಃಕಾಲ, ರಾತ್ರಿ ಈ ಮೂರು ಕಾಲಗಳಲ್ಲೂ ಸಹ ಪರಿಶುದ್ಧನಾಗಿ ಪುರಾಣಶ್ರವಣ ಮಾಡುವವನ ವಿಷಯದಲ್ಲಿ ವಿಷ್ಣು, ಬ್ರಹ್ಮ, ಶಿವ ಇವರುಗಳು ಸಂತೋಷಗೊಳ್ಳುತ್ತಾರೆ.

೪೫. ಬೆಳಿಗ್ಯೆ ಹೊತ್ತಿಗೆ ಮುಂಚೆ ಪುರಾಣಶ್ರವಣ ಮಾಡುವುದರಿಂದ ವಿಷ್ಣುವು ಸಂತುಷ್ಟನಾಗುತ್ತಾನೆ. ರಾತ್ರಿಯ ವೇಳೆಯಲ್ಲಿ ಪುರಾಣ ಕೇಳುವುದರಿಂದ ವಿಭುವಾದ ಶಿವನು ಸಂತುಷ್ಟನಾಗುತ್ತಾನೆ.

೪೬. ಅಯ್ಯಾ ರಾಜಶ್ರೇಷ್ಠನೇ! ಕೇಳು; ಶ್ರೋತೃಗಳು ಹತ್ತು ದಿನಗಳಲ್ಲಿ ಒಂದು ಪಾರಣೆಮಾಡುವುದುಂಟು. ಪಾರಣೆಮಾಡಬೇಕಾದ ಕ್ರಮವನ್ನೂ ಹಾಗೆ ಪಾರಣೆ ಮಾಡುವುದರಿಂದ ಏನು ಫಲ ಪ್ರಾಪ್ತಿಯಾಗುವುದು ಎಂಬುದನ್ನೂ ಹೇಳುತ್ತೇನೆ ಕೇಳು.

ಶುದ್ಧವಾಸಾ ಗೃಹಾದೇತ್ಯ ಸ್ಥಾನಂ ಯತ್ನಮಯಾನ್ವಿತಂ ।
ಪ್ರದಕ್ಷಿಣಂ ತತೋ ಗತ್ವಾ ಯಸ್ತ್ವಸ್ಮಿನ್ ದೇವ ಏವ ಹಿ ॥ ೪೭ ॥

ನಾತ್ಯುಚ್ಚಂ ನಾತಿನೀಚಂ ಚ ಹ್ಯಾಸನಂ ಭಜತೇ ತತಃ ।
ಆಸನಂ ತಸ್ಯ ವೈ ರಾಜನ್ ಬೋಧಕಸ್ಯ ಸದಾ ಭವೇತ್ ॥ ೪೮ ॥

ವಂದನೀಯಂ ಪ್ರಪೂಜ್ಯಂ ಚ ಶ್ರೋತೃಭಿಃ ಕುರುನಂದನ ।
ವ್ಯಾಸಪೀಠಂ ತು ತತ್ಪ್ರೋಕ್ತಂ ಗುರೋರಾಸನಮಾದಿಶೇತ್ ॥ ೪೯ ॥

ನ ಸ್ಥೇಯಂ ಶ್ರಾವಕೈಸ್ತಸ್ಮಾದ್ವಾಚಕಸ್ಯಾಸನೇ ನೃಪ ।
ರಾಜಾಸನೇ ಯಥಾ ಭೃತ್ಯೈರ್ಯಥಾ ಪುತ್ರೈಃ ಪಿತುರ್ನೃಪ ॥ ೫೦ ॥

---

೪೭. ಮತ್ತು ವಾಚಕನು ಪುರಾಣವಾಚನ ಮಾಡಬೇಕಾದ ವಿಧಾನವನ್ನೂ, ಶ್ರೋತೃಗಳು ಪುರಾಣಶ್ರವಣಮಾಡಬೇಕಾದ ವಿಧಾನವನ್ನೂ ಹೇಳುತ್ತೇನೆ ಕೇಳು.

೪೮. ಶ್ರೋತೃವು ಶುದ್ಧವಾದ ಮಡಿವಸ್ತ್ರಗಳನ್ನು ಧರಿಸಿ ಮನೆಯಿಂದ ಹೊರಟು, ಗೊತ್ತಾದ ಕಾಲಕ್ಕೆ ಸರಿಯಾಗಿ ಪುರಾಣವಾಚನ ಸ್ಥಳಕ್ಕೆ ಬರಬೇಕು. ಹಾಗೆ ಬಂದು ವಾಚಕನ ಪೀಠದ ಮೇಲೆ ಸ್ವಾಮಿಯೇ ಇದ್ದಾನೆಂದು ಭಾವಿಸಿ, ಪ್ರದಕ್ಷಿಣೆ ಮಾಡಿ ಅನಂತರ ಬಹು ಎತ್ತರವೂ ಅಲ್ಲದ, ಅಥವಾ ಬಹು ತಗ್ಗಿನಲ್ಲೂ, ಇಲ್ಲದ ಪೀಠದಲ್ಲಿ ಕುಳಿತುಕೊಳ್ಳಬೇಕು.

೪೯. ಎಲೈ ಮಹಾರಾಜನೇ! ಕೇಳು; ಆ ವಾಚಕನ ಪೀಠವು ಆತನಿಗೇ ಮೀಸಲಾಗಿರಬೇಕು. ಆ ಆಸನವು ಶ್ರೋತೃಗಳು ನಮಸ್ಕರಿಸುವುದಕ್ಕೂ, ಪೂಜಿಸುವುದಕ್ಕೂ ಯೋಗ್ಯವಾದ ವ್ಯಾಸಪೀಠವೆಂದು ಉಕ್ತವಾಗಿದೆ.

೫೦. ಅಯ್ಯಾ ರಾಜನೇ ! ಕೇಳು ; ಭೃತ್ಯನು ಪ್ರಭುಪೀಠವನ್ನೂ, ಮಕ್ಕಳು ತಂದೆಯ ಪೀಠವನ್ನೂ, ಶಿಷ್ಯನು ಗುರುವಿನ ಪೀಠವನ್ನೂ ಹೇಗೆ ಆಕ್ರಮಿಸಬಾರದೋ ಹಾಗೆಯೇ ಶ್ರೋತೃಗಳು ಪುರಾಣವಾಚಕನ ಪೀಠವನ್ನು ಆಕ್ರಮಿಸಬಾರದು.

ಯಥಾ ಶಿಷ್ಯೋ ಗುರೋರ್ವೀರ ಸ ತೇಷಾಂ ಹಿ ಗುರುರ್ಮತಃ ।
ದೇವಾರ್ಚಾಮಗ್ರತಃ ಕೃತ್ವಾ ಬ್ರಾಹ್ಮಣಾರ್ಚಾಂ ವಿಶೇಷತಃ ॥ ೫೧ ॥

ಉಪವಿಶ್ಯ ತತಃ ಪಶ್ಚಾಚ್ಛ್ರಾವಕಃ ಶೃಣುಯಾನ್ನೃಪ ।
ಸಮಸ್ತಾನಾಗತಾನ್ ಕೃತ್ವಾ ತತಃ ಪುಸ್ತಕಮಾದದೇತ್ ॥ ೫೨ ॥

ಪ್ರಣಮ್ಯ ಶಿರಸಾ ತಸ್ಯ ಪುಸ್ತಕಸ್ಯ ವಿಶಾಂಪತೇ ।
ಗ್ರಂಥಿಂ ಚ ಶಿಥಿಲಾಂ ಕುರ್ಯಾದ್ವಾಚಕಃ ಕುರುನಂದನ ॥
ಪುನರ್ಬಧ್ನೀತ ತತ್ಸೂತ್ರಂ ತನ್ಮುಕ್ತ್ವಾ ವಾಚಯೇತ್ಕ್ವಚಿತ್ ॥ ೫೩ ॥

ತ್ರಿವಿಧಂ ಪುಸ್ತಕಂ ವಿದ್ಯಾತ್ಸೂತ್ರಂ ವಾಸುಕಿರುಚ್ಯತೇ ।
ಪತ್ರಾಣಿ ಭಗವಾನ್ ಬ್ರಹ್ಮಾ ಅಕ್ಷರಾಣಿ ಜನಾರ್ದನಃ ॥ ೫೪ ॥

ಶಂಕರಶ್ಚ ತಥಾ ಸೂತ್ರಂ ಪಂಕ್ತಯಃ ಸರ್ವದೇವತಾಃ ।
ಪಾವಕಶ್ಚ ತಥಾ ಸೂತ್ರೇ ಮಧ್ಯೇ ಭಾನುಃ ಸಮಾಶ್ರಿತಃ ॥ ೫೫ ॥

---

೫೧. ವಾಚಕನು ತಮ್ಮ ಗುರುವೆಂದೇ ಶ್ರೋತೃಗಳಿಗೆ ಭಾವನೆ ಇರಬೇಕು. ಓ ಪ್ರಭುವೇ! ಶ್ರೋತೃವು ಮೊದಲು ದೇವರ ಪೂಜೆಯನ್ನೂ, ಆಮೇಲೆ ಬ್ರಾಹ್ಮಣ ಪೂಜೆಯನ್ನೂ ಮಾಡಿ, ಬಳಿಕ ಕುಳಿತುಕೊಂಡು ಪುರಾಣಶ್ರವಣ ಮಾಡಬೇಕು.

೫೨-೫೩. ವಾಚಕನು ವಾಚನಾರಂಭಕ್ಕೆ ಮುಂಚೆ ಶ್ರೋತೃಗಳೆಲ್ಲರೂ ಬಂದಿರುವರೇ, ಎಂದು ನೋಡಿಕೊಂಡು ಅನಂತರ ಪುಸ್ತಕವನ್ನು ಕೈಗೆ ತೆಗೆದುಕೊಳ್ಳಬೇಕು. ಅಯ್ಯಾ ಕುರುನಂದನನಾದ ರಾಜನೇ! ಕೇಳು, ಆ ಪುಸ್ತಕಕ್ಕೆ ತಲೆವಾಗಿ ನಮಿಸಿ, ಅನಂತರ ಪುಸ್ತಕದ ದಾರದಗಂಟನ್ನು ಸಡಿಲಮಾಡಬೇಕು. ಆಮೇಲೆ ದಾರವನ್ನು ಬಿಚ್ಚಿ, ಅದನ್ನು ಬೇರೆ ಸುತ್ತಿಟ್ಟು ಪುಸ್ತಕವನ್ನು ಬಿಚ್ಚಿ ಎಲ್ಲೋ ಒಂದುಕಡೆ ಓದಬೇಕು.

೫೪. ಆ ಪುರಾಣಪುಸ್ತಕವನ್ನು ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳ ಸ್ವರೂಪವೆಂದೂ, ಪುಸ್ತಕಕ್ಕೆ ಸುತ್ತುವ ದಾರವನ್ನು ವಾಸುಕಿಸ್ವರೂಪವೆಂದೂ ಹೇಳುವರು.

೫೫. ಪುಸ್ತಕದ ಪತ್ರಗಳನ್ನು ಬ್ರಹ್ಮನೆಂದೂ, ಅಕ್ಷರಗಳನ್ನೇ ವಿಷ್ಣುವೆಂದೂ, ಸೂತ್ರವನ್ನು ಶಂಕರನೆಂದೂ, ಪಂಕ್ತಿಗಳನ್ನೇ ಸಮಸ್ತದೇವತೆಗಳೆಂದೂ ಹೇಳುವುದು ಕೆಲವರಮತ.

ಅಗ್ರೇ ಸ್ಥಿತಾ ಗ್ರಹಾಃ ಸರ್ವೇ ದಿಶೋ ವಾಪಿ ತಥಾ ವಿಭೋ ।
ಸ್ಮೃತೋ ಮೇರುಃ ಸದಾ ಶಂಕುಶ್ಛಿದ್ರಮಾಕಾಶಮುಚ್ಯತೇ ॥ ೫೬ ॥

ಯಂತ್ರದ್ವಯಂ ಕಾಷ್ಠಮಯಮಧೋರ್ಧ್ವಂ ಯದುದಾಹೃತಂ ।
ದ್ಯಾವಾಪೃಥಿವ್ಯೋಶ್ಚ ಶಂಖಸ್ತಥಾ ಚಂದ್ರ ಉದಾಹೃತಃ ॥ ೫೭ ॥

ಇತ್ಥಂ ದೇವಮಯಂ ಹ್ಯೇತತ್ಪುಸ್ತಕಂ ದೇವಪೂಜಿತಂ ।
ನಮಸ್ಯಂ ಪೂಜನೀಯಂ ಚ ಗೃಹೇ ಸ್ಥಾಪ್ಯಂ ವಿಭೂತಯೇ ॥ ೫೮ ॥

ಯೋಽಸ್ಯ ಸೂತ್ರಂ ಬೃಹತ್ಕೃತ್ವಾ ಪ್ರಯಚ್ಛತಿ ನರೋತ್ತಮಃ ।
ಸ ಯಾತಿ ಪರಮಂ ಸ್ಥಾನಂ ಯತ್ರ ದೇವೋ ದಿವಾಕರಃ ॥ ೫೯ ॥

---

೫೬. ಆ ಸೂತ್ರವೇ ಅಗ್ನಿಯೆಂದೂ, ಪತ್ರಾತ್ಮಕವಾದ ಒಟ್ಟುಗ್ರಂಥದ ಮಧ್ಯೆ ಸೂರ್ಯನು ಉಪಸ್ಥಿತನಾಗಿದ್ದಾನೆಂದೂ, ತುದಿಗಳಲ್ಲಿ ಸಮಸ್ತಗ್ರಹಗಳೋ ಅಥವಾ ದಿಗ್ದೇವತೆಗಳೋ ಇರುವರೆಂದು ತಿಳಿಯಬೇಕು.

೫೭. ಪುಸ್ತಕಕ್ಕೆ ಆವರಣವಾದ ಹಲಗೆಗಳಲ್ಲಿ ಸೇರಿಸುವ ಶಂಕುರೂಪವಾದ ಕಡ್ಡಿಯೇ ಮೇರು, ಪತ್ರಗಳಲ್ಲಿರುವ ರಂಧ್ರವೇ ಆಕಾಶ, ಮೇಲುಗಡೆ ಕೆಳಗಡೆ ಆವರಣಾರ್ಥವಾದ ಎರಡು ಹಲಗೆಗಳೇ ಭೂಮ್ಯಾಕಾಶಗಳು ಎಂದು ಭಾವಿಸಬೇಕು. ಆ ರಕ್ಷಾಫಲಕಗಳ ಎರಡು ತುದಿಯಲ್ಲಿ ಶಂಖದ ಆಕೃತಿಯೂ, ಮಧ್ಯೆ ಚಂದ್ರನ ಆಕೃತಿಯೂ ರಚಿತವಾಗಿರಬೇಕೆಂದು ಹೇಳಿದೆ.

೫೮. ಈ ರೀತಿಯಾಗಿ ಪುರಾಣಪುಸ್ತಕವು ದೇವಮಯವೂ, ದೇವತೆಗಳಿಂದ ಪೂಜಿತವೂ ಆಗಿದೆ. ಇಂಥ ಪುರಾಣಪುಸ್ತಕವನ್ನು ಪೂಜಿಸಿ, ವಂದಿಸಿ ಮನೆಯಲ್ಲಿಟ್ಟು ಕೊಂಡರೆ, ಸಂಪತ್ತು ಪ್ರಾಪ್ತಿಯಾಗುವುದು.

೫೯. ಈ ಓಲೆಯ ಪುಸ್ತಕಕ್ಕೆ ಸುತ್ತುವುದಕ್ಕೆ ಬೇಕಾಗುವಂತಹ ದೃಢವಾದ ದಾರವನ್ನು ನಿರ್ಮಿಸಿ ವಾಚಕನಿಗೆ ಕೊಡುವ ಮನುಷ್ಯನು ಸೂರ್ಯನು ಇರುವ ಶ್ರೇಷ್ಠವಾದ ಸ್ಥಾನಕ್ಕೆ ಹೋಗುತ್ತಾನೆ.

ನಿರೂಪ್ಯ ಪತ್ರಂ ರಾಜೇಂದ್ರ ಕರಾಭ್ಯಾಂ ಗೃಹ್ಯ ವಾಚಕಃ ।
ಪ್ರಣಮ್ಯ ಶಿರಸಾ ಸರ್ವಾನ್ ಬ್ರಹ್ಮಾದೀನ್ವ್ಯಾಸಮೇವ ಚ ॥
ವಾಲ್ಮೀಕಿಂ ಚ ತಥಾ ರಾಜನ್ ವಿಧಿಂ ವಿಷ್ಣುಂ ಶಿವಂ ರವಿಂ ॥ ೬೦ ॥

ನಮಸ್ಕಾರಮಥೈಷಾಂ ತು ಪಠಿತ್ವಾ ಕುರುನಂದನ ।
ತತೋಽಸೌ ವ್ಯಾಹರೇದ್ವಿಪ್ರಾನ್ ವಾಚಕಃ ಶ್ರದ್ಧಯಾನ್ವಿತಃ ॥ ೬೧ ॥

ಅಲಂಬಿತಮಥಸ್ತಬ್ಧಮದ್ಭುತಂ ವೀರಮೂರ್ಜಿತಂ ।
ಅಸಂಸಕ್ತಾಕ್ಷರಪದಂ ರಸಭಾವಸಮನ್ವಿತಂ ॥ ೬೨ ॥

ಸಪ್ತಸ್ವರಸಮಾಯುಕ್ತಂ ಕಾಲೇಕಾಲೇ ವಿಶಾಂಪತೇ ।
ಪ್ರದರ್ಶಯನ್ ರಸಾನ್ ಸರ್ವಾನ್ ವಾಚಕೋ ವ್ಯಾಹರೇನ್ನೃಪ ॥ ೬೩ ॥

ಈ ದೃಶಾದ್ವಾಚಕಾದ್ವಿಪ್ರಾಚ್ಛ್ರುತ್ವಾ ಶ್ರದ್ಧಾಸಮನ್ವಿತಃ ।
ಇತಿಹಾಸಪುರಾಣಾನಿ ರಾಮಸ್ಯ ಚರಿತಂ ತಥಾ ॥ ೬೪ ॥

---

೬೦-೬೧. ಅಯ್ಯಾ ರಾಜೇಂದ್ರನೇ! ಕೇಳು, ವಾಚಕನು ಎರಡು ಕೈಗಳಿಂದಲೂ ಪುಸ್ತಕದ ಪತ್ರವನ್ನು ತೆಗೆದುಕೊಂಡು ಅದಕ್ಕೆ ತಲೆಬಾಗಿ ವಂದಿಸಿ, ಅನಂತರ ಬ್ರಹ್ಮಾದಿದೇವತೆಗಳು, ವ್ಯಾಸರು, ವಾಲ್ಮೀಕಿ, ವಿಷ್ಣು, ಶಿವ, ರವಿ ಇವರುಗಳಿಗೆ ನಮಸ್ಕಾರೋಕ್ತಿರೂಪವಾದ ಶ್ಲೋಕವನ್ನು ಪಠಿಸಿ, ಅನಂತರ ಶ್ರದ್ಧಾಯುಕ್ತನಾಗಿ ಶ್ರೋತೃಗಳಾದ ಬ್ರಾಹ್ಮಣರನ್ನು ಕುರಿತು "ಸ್ವಸ್ತ್ಯಸ್ತುಸತಾಂ" ಇತ್ಯಾದಿ ಪ್ರಾರಂಭದ ವಚನಗಳನ್ನು ಉಚ್ಚರಿಸಬೇಕು.

೬೨. ಪ್ರಾರಂಭದಲ್ಲಿ ವಾಚನವು ಬಹಳ ದೀರ್ಘವಳೆಯದ ಹಾಗೆ ಸ್ತಬ್ಧವಾಗಿದ್ದು ಬರುತ್ತಾ ಬರುತ್ತಾ ಅದ್ಭುತವಾಗಿ ವೀರನಂತೆ ಉನ್ನತ ಧ್ವನಿಯಿಂದ ಯುಕ್ತವಾಗಬೇಕು. ಅಕ್ಷರಗಳು, ಪದಗಳು ವಿಂಗಡವಾಗಿರುವಂತೆ ಉಚ್ಚರಿಸಲ್ಪಡುತ್ತಾ, ರಸಭಾವಗಳಿಂದ ಕೂಡಿರುವಂತೆ ಆಗಾಗ್ಯೆ ಕಂಠಧ್ವನಿಯನ್ನು ಬದಲಾಯಿಸಬೇಕು.

೬೩. ಸಪ್ತಸ್ವರಗಳಲ್ಲಿ ಒಂದೊಂದೂ ಒಂದೊಂದುಸಲ ಸೇರುವಂತೆಯೂ, ಸಂದರ್ಭಕ್ಕೆ ತಕ್ಕಂತೆ ರಸಗಳು ಸ್ಫುರಿಸುವ ಹಾಗೆಯೂ, ಅಭಿನಯಪೂರ್ವಕವಾಗಿ ಪುರಾಣ ವಾಚನಮಾಡಬೇಕು.

೬೪. ಶ್ರೋತೃವು ನಿಯಮಯುಕ್ತನೂ, ಶುಚಿರ್ಭೂತನೂ ಆಗಿರುತ್ತಾ ಇಂಥ ವಾಚಕನಾದ ಬ್ರಾಹ್ಮಣೋತ್ತಮನು ವಾಚನಮಾಡುವ ಭಾರತ, ರಾಮಾಯಣ ಪುರಾ

**ನಿಯಮಸ್ಥಃ ಶುಚಿಃ ಶ್ರೋತಾ ಶೃಣು ಯತ್ಫಲಮಶ್ನುತೇ ।**
**ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚಾಪಿ ವಿಶೇಷತಃ ॥ ೬೫ ॥**

**ಅಶ್ವಮೇಧಫಲಂ ಪ್ರಾಪ್ಯ ಸರ್ವಾನ್ಕಾಮಾನವಾಪ್ನುತೇ ।**
**ರೋಗೈಶ್ಚ ಮುಚ್ಯತೇ ಸರ್ವೈರ್ಮಹತ್ಪುಣ್ಯಂ ಚ ವಿಂದತಿ ॥**
**ಗಚ್ಛೇದ್ವಾಪಿ ಪರಂ ಸ್ಥಾನಂ ದೇವಸ್ಯಾದ್ಭುತಮುತ್ತಮಂ ॥ ೬೬ ॥**

**ಸ್ನಾತೈರ್ಗೃಹಂ ಸಮಾಗತ್ಯ ಶ್ರೋತೃಭಿರ್ವಾಚಕಸ್ಯ ತು ।**
**ಪ್ರಣಮ್ಯ ಶಿರಸಾ ವಿಪ್ರಂ ವಾಚಕಂ ಶ್ರದ್ಧಯಾ ನೃಪ ॥ ೬೭ ॥**

**ಆಸನಂ ಚ ಸಮಾಶ್ರಿತ್ಯ ಸ್ಥಾತವ್ಯಂ ವಾಚಕಸ್ಯ ತು ।**
**ಸಮ್ಮುಖಂ ರಾಜಶಾರ್ದೂಲ ವಾಗ್ಯತೈಃ ಸುಸಮಾಹಿತೈಃ ॥ ೬೮ ॥**

---

ಣಗಳನ್ನೂ ಶ್ರದ್ಧಾನ್ವಿತನಾಗಿ ಶ್ರವಣಮಾಡಿದರೆ, ಪ್ರಾಪ್ತವಾಗುವ ಫಲವು ಎಂಥದೆಂಬುದನ್ನು ಹೇಳುತ್ತೇನೆ ಕೇಳು.

೬೫. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ವರ್ಣದ ಶ್ರೋತೃಗಳಲ್ಲಿ ಯಾರೇ ಆಗಲಿ ಶ್ರದ್ಧಾಯುಕ್ತರಾಗಿ ಪುರಾಣಶ್ರವಣಮಾಡಿದರೆ,

೬೬. ಹಾಗೆ ಶ್ರವಣಮಾಡಿದವರು ಅಶ್ವಮೇಧಯಜ್ಞ ಮಾಡಿದ ಫಲವನ್ನು ಹೊಂದುವುದಲ್ಲದೆ, ತನ್ನ ಇತರ ಇಷ್ಟಾರ್ಥಗಳನ್ನೆಲ್ಲಾ ಹೊಂದುತ್ತಾರೆ. ರೋಗಗ್ರಸ್ತನಾದ ಶ್ರೋತೃವು ತನ್ನ ಸರ್ವರೋಗಗಳನ್ನೂ ಪರಿಹರಿಸಿಕೊಂಡು, ಮಹಾಪುಣ್ಯವನ್ನು ಪಡೆಯುವನು. ಅಂಥ ಶ್ರೋತೃವರ್ಯರು ಆಶ್ಚರ್ಯಕರವೂ, ಉತ್ತಮವೂ ಆಗಿರುವ ದೇವಲೋಕಕ್ಕೆ ಹೋಗುತ್ತಾರೆ.

೬೭. ವಾಚನಕ್ಕೆ ಪ್ರತ್ಯೇಕವಾಗಿ ಸ್ಥಳವನ್ನು ಏರ್ಪಡಿಸಲು ಆಗದಿದ್ದರೆ, ಶ್ರೋತೃಜನರು ಸ್ನಾನಾದಿಗಳನ್ನು ಮಾಡಿಕೊಂಡು ವಾಚಕನ ಮನೆಗೇ ಬಂದು, ಶ್ರದ್ಧೆಯಿಂದ ವಾಚಕನಾದ ವಿಪ್ರನಿಗೆ ನಮಸ್ಕರಿಸಿ, ಸರಿಯಾದ ಸ್ಥಳದಲ್ಲಿ ಆಸನವನ್ನು ಏರ್ಪಡಿಸಿಕೊಳ್ಳಬೇಕು.

೬೮. ಅಯ್ಯಾ ರಾಜಶ್ರೇಷ್ಠನೇ! ಬಳಿಕ ವಾಚಕನ ಎದುರಿಗೆ ಮೌನವಾಗಿ ಸಮಾಹಿತವಾದ ಮನಸ್ಸಿನಿಂದ ಇತರ ಕೂಡಿ ಶ್ರೋತೃಗಳೊಡನೆ ಕುಳಿತಿರಬೇಕು,

ವಾಚಕೇನ ನಮಸ್ಕಾರೇ ಕೃತೇ ವ್ಯಾಸಸ್ಯ ಭೂಪತೇ ।
ನ ವಕ್ತವ್ಯಂ ಮಹಾಬಾಹೋ ಶ್ರಾವಕೈಃ ಸಂಶಯಾದೃತೇ ॥ ೬೯ ॥

ಸಂಶಯೇಽಸತಿ ಪ್ರಷ್ಟವ್ಯೋ ವಾಚಕಃ ಸಂಪ್ರಸಾದ್ಯ ತು ।
ಯತಶ್ಚ ಸ ಗುರುಸ್ತೇಷಾಂ ಧರ್ಮತೋ ಬಂಧುರುಚ್ಯತೇ ॥ ೭೦ ॥

ವಾಚಕೇನಾಪಿ ವಕ್ತವ್ಯಂ ಯತ್ಸ್ಯಾತ್ತೇಷಾಂ ನಿಬೋಧನಂ ।
ಅನುಗ್ರಹಾಯ ಸರ್ವೇಷಾಮಶೇಷಾ ಗುರವೋ ನೃಪ ॥ ೭೧ ॥

ನಮಸ್ಕಾರಾದಯಃ ಶ್ರಾವ್ಯಾಃ ಶಿವಮಸ್ತ್ವಿತಿ ವೋದ್ಯತೈಃ ।
ವಾಗ್ಯತೈರ್ನೃಪಶಾರ್ದೂಲ ವರ್ಣೈಃ ಸರ್ವೈರ್ಮಹೀಪತೇ ॥ ೭೨ ॥

---

೬೯. ಅಯ್ಯಾ ರಾಜನೇ! ವಾಚಕನು ವ್ಯಾಸಾದಿಗಳಿಗೆ ನಮಸ್ಕಾರಾತ್ಮಕವಾದ ಶ್ಲೋಕವನ್ನು ಹೇಳಿದ ಮೇಲೆ,' ಹಿಂದಿನ ದಿನದ ವಾಚನದ ದಿನ ಸಂಶಯ ಬಂದ ವಿಷಯ ಹೊರತು ತಾವು ಇನ್ನು ಯಾವ ಮಾತುಗಳನ್ನೂ ಆಡಬಾರದು.

೭೦. ಏನಾದರೂ ಪ್ರಬಲಸಂಶಯ ಬಂದರೆ ವಾಚಕನನ್ನು ಒಳ್ಳೆಯಮಾತುಗಳಿಂದ ಕೇಳಬೇಕು. ಎಕೆಂದರೆ ಆತನು ಶ್ರೋತೃಗಳಿಗೆ ಧರ್ಮತಃ ಗುರುವಾಗಿಯೂ ಬಂಧುವಾಗಿಯೂ ಇದ್ದಾನೆ.

೭೧. ವಾಚಕನೂ ಕೂಡ ಪ್ರಶ್ನೆಮಾಡಿದವರಿಗೆ ಯಾವ ವಿಚಾರವು ಅವರಿಗೆ ಸ್ಪಷ್ಟವಾಗಿಲ್ಲವೋ, ಅದನ್ನು ಸಮಂಜಸವಾಗಿ ತಿಳಿಯ ಹೇಳಬೇಕು. ಅಯ್ಯಾ ರಾಜನೇ! ಕೇಳು, ಗುರುಗಳೆನಿಸಿದವರೆಲ್ಲರೂ ಸರ್ವರಿಗೂ ಅನುಗ್ರಹಮಾಡುವುದಕ್ಕಾಗಿ ಹೀಗೆ ಸಂದೇಹ ಪರಿಹಾರವಾಗುವಂತೆ ವಿಷಯವನ್ನು ವಿವರಿಸಿ ಹೇಳಲೇಬೇಕು.

೭೨ ಅಯ್ಯಾ ರಾಜನೇ! ಸರ್ವವರ್ಣದ ಶ್ರೋತೃಗಳೂ, ನಿಯಮವುಳ್ಳವರಾಗಿ ಬಂದು, ವಾಚಕನಿಗೆ ನಮಸ್ಕಾರವನ್ನು ಹೇಳಿ ಮೌನವಾಗಿ ನಿಂತ,ರೆ ವಾಚಕನು ಅವರನ್ನು ಕುರಿತು 'ಶಿವಮಸ್ತು' ಎಂಬದಾಗಿ ಹೇಳಬೇಕು. ಅನಂತರ ಅವರು ತಮ್ಮ ಜಾಗದಲ್ಲಿ ಕುಳ್ಳಿರಬೇಕು.

ಶೂದ್ರಾಣಾಂ ಪುರತೋ ವೈಶ್ಯಾ ವೈಶ್ಯಾನಾಂ ಕ್ಷತ್ರಿಯಾಸ್ತಥಾ ।
ಮಧ್ಯಸ್ಥಿತೋಽಥ ಸರ್ವೇಷಾಂ ವಾಚಕೋ ವ್ಯಾಹರೇನ್ನೃಪ ॥
ಯೇ ಚ ಸಂಕರಜಾ ರಾಜನ್ನರಾಸ್ತೇ ಶೂದ್ರಪೃಷ್ಠತಃ ॥ ೭೩ ॥

ಬ್ರಾಹ್ಮಣಂ ವಾಚಕಂ ವಿದ್ಯಾನ್ನಾನ್ಯವರ್ಣಜಮಾದರೇತ್ ।
ಶ್ರುತ್ವಾನ್ಯವರ್ಣಜಾದ್ವಾಚಂ ವಾಚಕಾನ್ನರಕಂ ವ್ರಜೇತ್ ॥ ೭೪ ॥

ಇತ್ಥಂ ಹಿ ಶೃಣ್ವತಾಂ ತೇಷಾಂ ವರ್ಣಾನಾಮನುಪೂರ್ವಶಃ ।
ಮಾಸಿಮಾಸಿ ಭವೇದ್ರಾಜನ್ ಪಾರಣಂ ಕುರುನಂದನ ॥ ೭೫ ॥

ಶ್ರೇಯೋಽರ್ಥಮಾತ್ಮನೋ ರಾಜನ್ ಪೂಜಯೇದ್ವಾಚಕಂ ಬುಧಃ ।
ಮಾಸಿ ಪೂರ್ಣೇ ದ್ವಿಜಶ್ರೇಷ್ಠೇ ದಾತವ್ಯಂ ಸ್ವರ್ಣಮಾಷಕಂ ॥ ೭೬ ॥

---

೭೩. ಅಯ್ಯಾ ರಾಜನೇ! ಶ್ರೋತೃಗಳಾಗಿ ಬಂದಿರುವ ಶೂದ್ರರು, ಕುಳಿತ ಸಾಲಿನ ಮುಂದಿನಸಾಲಿನಲ್ಲಿ ವೈಶ್ಯಶ್ರೋತೃಗಳೂ, ವೈಶ್ಯರ ಮುಂದಿನಸಾಲಿನಲ್ಲಿ ಕ್ಷತ್ರಿಯರೂ, ಹೀಗೆ ಎಲ್ಲರೂ ಕುಳಿತುಕೊಂಡಮೇಲೆ ಎಲ್ಲರಿಗೂ ಮಧ್ಯದಲ್ಲಿ ತನ್ನ ಪೀಠವಿರುವಂತೆ ಮಾಡಿಕೊಂಡು ವಾಚಕನು ಪುರಾಣವಾಚನಮಾಡಬೇಕು. ಸಂಕರ ಜಾತಿಯ ಜನರು ಶೂದ್ರರಿಗಿಂತ ಹಿಂದೆ ಕುಳಿತುಕೊಳ್ಳಬೇಕು.

೭೪. ಸದಾ ಬ್ರಾಹ್ಮಣ ವಾಚಕನ ಮೂಲಕವೇ ಪುರಾಣಶ್ರವಣ ಮಾಡಬೇಕು. ಇತರ ವರ್ಣದವರಿಂದ ಶ್ರವಣಮಾಡಲಾಗದು. ಅನ್ಯವರ್ಣದ ವಾಚಕನಿಂದ ಪುರಾಣ ವಾಚನವನ್ನು ಕೇಳಿದವನು ನರಕಕ್ಕೆ ಹೋಗುವನು.

೭೫. ಹೀಗೆ ಕ್ರಮವಾಗಿ ಬೇರೆಬೇರೆ ಜಾತಿಯವರೆಲ್ಲ ಸೇರಿ, ಪುರಾಣ ಕೇಳುತ್ತಿರುವಾಗ, ಒಂದೊಂದು ಜಾತಿಯವರೂ ಒಂದೊಂದು ತಿಂಗಳು ನೆರವೇರಿಸುವುದೆಂದು ನಿಗದಿಮಾಡಿ, ಪ್ರತಿತಿಂಗಳಿನಲ್ಲೂ ಪಾರಣವನ್ನು ನಡೆಯಿಸಬೇಕು.

೭೬. ತಿಳಿದವನು ಪಾರಣದ ದಿನ ವಾಚಕನನ್ನು ಪೂಜಿಸುವುದರಿಂದ ತನಗೇ ಉಂಟಾಗುವುದು. ತಿಂಗಳು ತುಂಬಿದೊಡನೆ ವಾಚಕನಾದ ಬ್ರಾಹ್ಮಣಶ್ರೇಷ್ಠನಿಗೆ, ಶ್ರೇಯಸ್ಸು ಸಾಮಾನ್ಯವಾಗಿ ಒಂದು ಮಾಷಪ್ರಮಾಣ ಚಿನ್ನವನ್ನು ಕೊಡಬೇಕು.

ಬ್ರಾಹ್ಮಣೇನ ಮಹಾಬಾಹೋ ದ್ವೇ ದೇಯೇ ಕ್ಷತ್ರಿಯೇನ ತು ।
ವಾಚಕದ್ವಿಜವರ್ಯಾಯ ವೈಶ್ಯೇನಾಪಿ ತ್ರಯಂ ತಥಾ ॥ ೭೭ ॥

ಶೂದ್ರೇಣೈವ ಚ ಚತ್ವಾರೋ ದಾತವ್ಯಾಸ್ಸ್ವರ್ಣಮಾಷಕಾಃ ।
ಮಾಸಿಮಾಸಿ ದ್ವಿಜಶ್ರೇಷ್ಠಂ ಶ್ರದ್ಧಯಾ ವಾಚಕಂ ಯಜೇತ್ ॥ ೭೮ ॥

ಪ್ರಥಮೇ ಪಾರಣೇ ರಾಜನ್ ವಾಚಕಂ ಪೂಜ್ಯ ಶಕ್ತಿತಃ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ವಿಂದತಿ ಮಾನವಃ ॥ ೭೯ ॥

ಕಾರ್ತಿಕಾದೀನ್ ಸಮಾರಭ್ಯ ಯಾವತ್ಕಾರ್ತಿಕಮುಚ್ಯತೇ ।
ಅಗ್ನಿಷ್ಟೋಮಂ ಗೋಸವಂ ಚ ಜ್ಯೋತಿಷ್ಟೋಮಂ ತಥಾ ನೃಪ ॥ ೮೦ ॥

ಸೌತ್ರಾಮಣಿಂ ವಾಜಪೇಯಂ ವೈಷ್ಣವಂ ಚ ತಥಾ ವಿಭೋ ।
ಮಾಹೇಶ್ವರಂ ತಥಾ ಬ್ರಾಹ್ಮಂ ಪುಂಡರೀಕಂ ಯಜೇತ ಯಃ ॥
ಆದಿತ್ಯಯಜ್ಞಸ್ಯ ತಥಾ ರಾಜಸೂಯಾಶ್ವಮೇಧಯೋಃ ॥ ೮೧ ॥

---

೭೭. ಅಯ್ಯಾ ಮಹಾಬಾಹುವೇ! ಶ್ರೋತೃಗಳಲ್ಲಿ ಬ್ರಾಹ್ಮಣನು, ವಾಚಕನಿಗೆ ಒಂದು ಮಾಷಪ್ರಮಾಣ ಚಿನ್ನವನ್ನು ಕೊಡಬೇಕು. ಕ್ಷತ್ರಿಯನು ಎರಡು ಮಾಷ ಪ್ರಮಾಣ ಚಿನ್ನವನ್ನೂ, ವೈಶ್ಯನು ಮೂರುಮಾಷ ಪ್ರಮಾಣ ಚಿನ್ನವನ್ನೂ, ಕೊಡಬೇಕು.

೭೮. ಶೂದ್ರನು ನಾಲ್ಕು ಮಾಷಪ್ರಮಾಣವುಳ್ಳ ಚಿನ್ನವನ್ನು ಕೊಡಬೇಕು. ಪ್ರತಿತಿಂಗಳಲ್ಲಿಯೂ ಬ್ರಾಹ್ಮಣಶ್ರೇಷ್ಠನಾದ ವಾಚಕನನ್ನು ಈ ಪ್ರಕಾರ ಶ್ರದ್ಧೆಯಿಂದ ಪೂಜಿಸಬೇಕು.

೭೯. ಎಲೈ ರಾಜನೇ! ಕೇಳು, ಮೊದಲನೆಯ ಪಾರಣದಲ್ಲಿ ವಾಚಕನನ್ನು ಶಕ್ತ್ಯನುಸಾರವಾಗಿ ಪೂಜಿಸಿದರೆ ಆ ಮನುಷ್ಯನು ಅಗ್ನಿಷ್ಟೋಮ ಯಜ್ಞಮಾಡಿದ ಫಲವನ್ನು ಹೊಂದುತ್ತಾನೆ.

೮೦-೮೧. ಎಲೈ ವಿಭುವೇ! ಕೇಳು, ಕಾರ್ತಿಕಮಾಸದಿಂದ ಮೊದಲುಮಾಡಿ, ಪುನಃ ಕಾರ್ತಿಕದವರೆಗೆ ಹನ್ನೆರಡು ತಿಂಗಳು, ಎಲ್ಲಾ ಪಾರಣೆಗಳನ್ನೂ ಮಾಡಿದರೆ, ಕ್ರಮವಾಗಿ ಅಗ್ನಿಷ್ಟೋಮ, ಗವಾಲಂಭ, ಜ್ಯೋತಿಷ್ಟೋಮ; ಸೌತ್ರಾಮಣಿ, ವಾಜಪೇಯ, ಗರುಡಚಯನ, ಮಾಹೇಶ್ವರ, ಬ್ರಾಹ್ಮ, ಪೌಂಡರೀಕ, ಸೌರಯಾಗ, ರಾಜಸೂಯ, ಅಶ್ವಮೇಧ ಎಂಬ ಈ ಹನ್ನೆರಡು ಯಜ್ಞಗಳ ಫಲವನ್ನೂ ಕ್ರಮವಾಗಿ ಹನ್ನೆರಡು ತಿಂಗಳುಗಳಲ್ಲಿಯೂ ತಿಂಗಳಿಗೆ ಒಂದೊಂದರಂತೆ ಹೊಂದುವನು.

ಫಲಂ ಪ್ರಾಪ್ನೋತಿ ರಾಜೇಂದ್ರ ಮಾಸೈರ್ದ್ವಾದಶಭಿಃ ಕ್ರಮಾತ್ ।
ಇತ್ಥಂ ಯಜ್ಞಫಲಂ ಪ್ರಾಪ್ಯ ಯಾತಿ ಲೋಕಾಂಸ್ತಥೋತ್ತಮಾನ್ ॥ ೮೨ ॥

ವಜ್ರವೇದಿಕಸಂಪನ್ನಂ ಮಣಿರತ್ನವಿಭೂಷಿತಂ ।
ವಿಮಾನಮಾಸ್ಥಿತೋ ರಾಜನ್ ಮೋದತೆ ಶಕ್ರಮಂದಿರೇ ॥ ೮೩ ॥

ತತಶ್ಚಂದ್ರಸ್ಯ ಭವನೇ ವಾರುಣೇ ಭವನೇ ತತಃ ।
ಶೋಚಿಷ್ಕೇಶಗೃಹೇ ಗತ್ವಾ ಗಚ್ಛೇಚ್ಛೈಲಬಿಲೇ ಗೃಹೇ ॥ ೮೪ ॥

ಧಿಷಣಸ್ಯ ಗೃಹಂ ಗತ್ವಾ ತತಶ್ಚಿತ್ರಶಿಖಂಡಿನಃ ।
ವೃದ್ಧಶ್ರವಸಮಾಸಾದ್ಯ ಗಚ್ಛೇತ್ಕಂಜಜಮಂದಿರೇ ॥
ಏವಮೇವ ನೃಪಶ್ರೇಷ್ಠ ನಾತ್ರ ಕಾರ್ಯಾ ವಿಚಾರಣಾ ॥ ೮೫ ॥

ಫಲಮೇತತ್ಸಮುದ್ದಿಷ್ಟಂ ಶೃಣ್ವತಾಂ ಸತತಂ ನೃಣಾಂ ।
ಏತತ್ಫಲಂ ವತ್ಸರೇಣ ಶೃಣ್ವತೋ ವಿಧಿತೋ ನೃಪ ॥ ೮೬ ॥

---

೮೨. ಹೀಗೆ ಯಜ್ಞಫಲವನ್ನು ಹೊಂದಿ, ಬಳಿಕ ಉತ್ತಮ ಲೋಕಗಳನ್ನೂ ಹೊಂದುತ್ತಾನೆ. ಎಲೈ ರಾಜನೇ! ವಜ್ರದ ಜಗುಲಿಯಿಂದ ಕೂಡಿದುದೂ, ಮಣಿರತ್ನಗಳಿಂದ ಅಲಂಕೃತವೂ ಆಗಿರುವಂಥ

೮೩. ವಿಮಾನವನ್ನು ಹತ್ತಿಕೊಂಡು ಹೋಗಿ, ಅವನು ಇಂದ್ರಲೋಕದಲ್ಲಿ ಸಂತೋಷವಾಗಿರುತ್ತಾನೆ. ಆ ಮೇಲೆ ಚಂದ್ರನಲೋಕದಲ್ಲೂ, ಅಲ್ಲಿಂದ ವರುಣಲೋಕದಲ್ಲೂ ಸಂತೋಷವಾಗಿರುವನು.

೮೪. ಅಲ್ಲಿಂದ ಅಗ್ನಿಲೋಕಕ್ಕೆ ಹೋಗಿ, ಆಮೇಲೆ ಕುಬೇರಲೋಕಕ್ಕೆ ಹೋಗುವನು. ಅಲ್ಲಿಂದ ಬೃಹಸ್ಪತ್ಯಾಚಾರ್ಯರ ನಿವಾಸವನ್ನು ಸೇರುವನು. ಬಳಿಕ (ಚಿತ್ರಶಿಖಂಡಿ) ಸಪ್ತರ್ಷಿಲೋಕಕ್ಕೆ ಹೋಗುವನು.

೮೫. ಬಳಿಕ ಇಂದ್ರಲೋಕಕ್ಕೆ ಹೋಗಿ, ಆಮೇಲೆ ಬ್ರಹ್ಮಲೋಕಕ್ಕೂ ಹೋಗುವನು. ಎಲೈ ರಾಜಶ್ರೇಷ್ಠನೇ! ಇಷ್ಟು ಫಲವೂ ತಪ್ಪದೆ ಲಭಿಸುವುದು. ಇದರಲ್ಲಿ ಸಂಶಯಪಡಬೇಕಾದುದಿಲ್ಲ.

೮೬. ಅಯ್ಯಾ ರಾಜನೇ! ಯಾವಾಗಲೂ ಪುರಾಣಶ್ರವಣ ಮಾಡತಕ್ಕವರಿಗೆ ಈ ಫಲವುಂಟಾಗುವುದೆಂದು ಹೇಳಿದೆ. ವಿಧಿಪ್ರಕಾರ ಪುರಾಣಶ್ರವಣ ಮಾಡುವವರಿಗೆ ಈ ಫಲವು ಒಂದು ಸಂವತ್ಸರದೊಳಗೆ ಲಭಿಸುತ್ತದೆ.

ಏತಾನಿ ಪರಿಮಾಣಾನಿ ವತ್ಸರೇಣ ಭವಂತಿ ವೈ ।
ಶೃಣ್ವತಾಂ ನೃಪಶಾರ್ದೂಲ ದದತಾಂ ವಾಚಕಾಯ ವೈ ॥ ೮೭ ॥

ಏಕಂ ಚ ದ್ವೇ ತಥಾ ತ್ರೀಣಿ ಚತ್ವಾರಿ ಚ ವಿಶಾಂಪತೇ ।
ದೇಯಾನಿ ವಾಚಕಾಯೇಹ ಮಾಸಿಮಾಸಿ ನರಾಧಿಪ ॥ ೮೮ ॥

ಬ್ರಾಹ್ಮಣಾದ್ಯೈರ್ನೃಪಶ್ರೇಷ್ಠ ಸರ್ವವರ್ಣವಿಭಾಗಶಃ ।
ಸಮಾಪ್ತೇ ಪರ್ವಣಿ ತಥಾ ವಾಚಕಂ ಪೂಜಯೇತ್ಪುನಃ ॥ ೮೯ ॥

ವಾಚಕಂ ಬ್ರಾಹ್ಮಣಂ ಚೈವ ಸರ್ವಕಾಮ್ಯೈಃ ಪ್ರಪೂಜಯೇತ್ ।
ಗಂಧಮಾಲ್ಯಾದಿಭಿರ್ದಿವ್ಯೈರ್ವಾಸೋಭಿರ್ವಿವಿಧೈರಪಿ ॥ ೯೦ ॥

ವಾಚಕಾಯ ಪ್ರದತ್ವಾ ತು ತತೋ ವಿಪ್ರಾನ್ ಪ್ರಪೂಜಯೇತ್ ।
ಹಿರಣ್ಯಂ ರಜತಂ ರುಕ್ಮಂ ಗಾಶ್ಚ ಕಾಂಸ್ಯೋಪದೋಹನಾಃ ॥ ೯೧ ॥

---

೮೭. ಈ ಪರಿಮಾಣದ ಫಲಗಳೆಲ್ಲಾ ಒಂದುವರ್ಷದೊಳಗೇ ಉಂಟಾಗುವುವು. ಎಲೈ ರಾಜಶ್ರೇಷ್ಠನೇ! ಪುರಾಣ ಶ್ರವಣಮಾಡುವ ಜನರಿಗೂ, ವಾಚಕನಿಗೆ ದಾನ ಮಾಡುವವರಿಗೂ ತಪ್ಪದೆ ಮೇಲೆ ಹೇಳಿದ ಫಲವಾಗುವುದು.

೮೮-೮೯. ಎಲೈ ರಾಜನೇ! ವಾಚಕನಿಗೆ ತಿಂಗಳುತಿಂಗಳಿನಲ್ಲಿಯೂ ಶ್ರೋತೃಗಳಾದ ನಾಲ್ಕುವರ್ಣದವರಲ್ಲಿ ವರ್ಣಾಶ್ರಮಕ್ರಮಂತೆ ಬ್ರಾಹ್ಮಣ ಮೊದಲಾದ ಸರ್ವವರ್ಣದವರೂ ಕ್ರಮವಾಗಿ ಒಂದು, ಎರಡು, ಮೂರು, ನಾಲ್ಕು ಮಾಷಪ್ರಮಾಣ ಸುವರ್ಣವನ್ನು ಕೊಡಬೇಕು. ಮತ್ತು ಪ್ರತಿಯೊಂದು ಪರ್ವಸಮಾಪ್ತಿಕಾಲದಲ್ಲಿ ಪುನಃ ವಾಚಕನನ್ನು ಪೂಜಿಸುವ ಸಿದ್ಧತೆಮಾಡಬೇಕು.

೯೦-೯೧. ವಾಚಕನಾದ ಬ್ರಾಹ್ಮಣನಿಗೆ ಇಷ್ಟವಾದ ಸಮಸ್ತವಸ್ತುಗಳನ್ನೂ, ಬಗೆಬಗೆಯಾದ ವಸ್ತ್ರಗಳನ್ನೂ ಕೊಟ್ಟು, ಶ್ರೇಷ್ಠವಾದ ಗಂಧಮಾಲ್ಯಾದಿಗಳಿಂದ ಆತನನ್ನು ಪೂಜಿಸಬೇಕು. ವಾಚಕನನ್ನು ಸತ್ಕರಿಸಿದನಂತರ ಮಿಕ್ಕ ಬ್ರಾಹ್ಮಣರನ್ನೂ ಪೂಜಿಸಬೇಕು. ಚಿನ್ನದನಾಣ್ಯ, ಬೆಳ್ಳಿ, ಕನಕಾಭರಣ, ಹಾಲುಕರೆಯುವುದಕ್ಕೆ ಕಂಚಿನಪಾತ್ರೆಸಮೇತವಾಗಿ ಹಸುಗಳು, ಇವನ್ನು ವಾಚಕನಿಗೆ ದಾನಮಾಡಿದರೆ ಪುರಾಣಶ್ರವಣದ ಯಥೋಕ್ತವಾದ ಫಲವು ದೊರೆಯುತ್ತದೆ.

ದತ್ವಾ ಚ ವಾಚಕಾಯೇಹ ಶ್ರುತಸ್ಯ ಪ್ರಾಪ್ಯತೇ ಫಲಂ ।
ಯಥಾ ಸದಕ್ಷಿಣಂ ಚಾನ್ನಂ ಶ್ರಾದ್ಧಕಾಲೇ ಪ್ರಕೀರ್ತಿತಂ ।
ತಥಾ ಶ್ರುತಂ ನೃಪಶ್ರೇಷ್ಠ ಸದಕ್ಷಿಣಮುದಾಹೃತಂ ॥ ೯೨ ॥

ವಾಚಕಂ ಪೂಜಯೇದ್ಯಸ್ಮಾತ್ಪಶ್ಚಾಲ್ಲೇಖಕಪೂಜನಂ ।
ಸಮಾಪ್ತೇ ಪರ್ವಣಿ ವಿಭೋ ವಿಶೇಷೇಣೈವ ಚಾರ್ಚಯೇತ್ ॥ ೯೩ ॥

ವಾಚಕಃ ಪೂಜಿತೋ ಯೇನ ಪೂಜಿತಾಸ್ತೇನ ದೇವತಾಃ ।
ವಾಚಕೇ ಪರಿತುಷ್ಟೇ ಚ ಮಮ ಪ್ರೀತಿರನುತ್ತಮಾ ॥ ೯೪ ॥

ಇತಿ ವೇಧಾಃ ಸದಾ ಪ್ರಾಹ ದೇವಾನಾಂ ಪುರತಃ ಪುರಾ ।
ತಸ್ಮಿಂಸ್ತುಷ್ಟೇ ಜಗತ್ಸರ್ವಂ ತುಷ್ಟಂ ಭವತಿ ನಿತ್ಯಶಃ ॥ ೯೫ ॥

ತಸ್ಮಾತ್ಪ್ರಪೂಜಯೇದ್ವಿಪ್ರಂ ವಾಚಕಂ ನೃಪಸತ್ತಮ ।
ನ ತುಲ್ಯಂ ವಾಚಕೇನೇಹ ಪಾತ್ರಂ ದಾನಸ್ಯ ವಿದ್ಯತೇ ॥ ೯೬ ॥

---

೯೨. ಶ್ರಾದ್ಧಕಾಲದಲ್ಲಿ ದಕ್ಷಿಣಾಸಹಿತವಾಗಿ ಅನ್ನದಾನಮಾಡಬೇಕೆಂದು ಹೇಳಿರುವಂತೆ, ಪುರಾಣಶ್ರವಣ ಕಾಲದಲ್ಲೂ ದಕ್ಷಿಣಾಸಹಿತವಾಗಿ ದಾನಮಾಡಬೇಕೆಂದು ಹೇಳಿದೆ.

೯೩. ವಾಚಕನನ್ನು ಪೂಜಿಸಿ ಆದಮೇಲೆ ಲೇಖಕನನ್ನೂ ಪೂಜಿಸಬೇಕು. ಅದರಲ್ಲೂ ಪರ್ವಸಮಾಪ್ತಿಕಾಲದಲ್ಲಿ ವಿಶೇಷವಾಗಿ ಪೂಜಿಸಬೇಕು.

೯೪. ವಾಚಕನನ್ನು ಪೂಜಿಸಿದರೆ ಸರ್ವದೇವತೆಗಳನ್ನೂ ಪೂಜಿಸಿದಂತೆಯೇ ಆಗುವುದು. ವಾಚಕನು ಸುಪ್ರೀತನಾದರೆ ನನಗೆ ಸಂತೋಷವಾಗುತ್ತದೆ

೯೫. ಹೀಗೆಂದು ಬ್ರಹ್ಮನು ಪೂರ್ವದಲ್ಲಿ ದೇವತೆಗಳ ಎದುರಿಗೆ ಸದಾ ಹೇಳುತ್ತಿದ್ದನು. ವಾಚಕನು ತುಷ್ಟನಾದರೆ ಜಗತ್ತೆಲ್ಲವೂ ಸದಾ ಸಂತುಷ್ಟವಾದ ಹಾಗೆ ಆಗುವುದು.

೯೬. ಎಲೈ ರಾಜಶ್ರೇಷ್ಠನೇ! ಈ ಕಾರಣದಿಂದ ವಾಚಕನಾದ ವಿಪ್ರನನ್ನು ನಿತ್ಯವೂ ಪೂಜಿಸಬೇಕು. ವಾಚಕನಿಗೆ ಸಮಾನನಾದ ದಾನಪಾತ್ರವು ಬೇರೆ ಯಾವುದೂ ಇಲ್ಲ.

ತಿಷ್ಠಂತಿ ಯಸ್ಯ ಶಾಸ್ತ್ರಾಣಿ ಜಿಹ್ವಾಗ್ರೇ ಪೃಥಿವೀಪತೇ ।
ದೃಷ್ಟಶ್ಚ ಗೋಚರಸ್ತಾತ ಕಸ್ತೇನ ಸದೃಶೋ ದ್ವಿಜಃ ॥ ೯೭ ॥

ನ ತುಲ್ಯಂ ವಿದ್ಯತೇ ತೇನ ಭುವಿ ಪಾತ್ರಂ ನರೇಷು ವೈ ।
ತಸ್ಮಾದನ್ನಂ ಸದಾ ಪೂರ್ವಂ ತಸ್ಮೈ ದೇಯಂ ವಿದುರ್ಬುಧಾಃ ॥ ೯೮ ॥

ಶ್ರಾದ್ಧೇ ಯಸ್ಯ ದ್ವಿಜೋ ಭುಂಕ್ತೇ ವಾಚಕಃ ಶ್ರದ್ಧಯಾನ್ವಿತಃ ।
ಭವಂತಿ ಪಿತರಸ್ತಸ್ಯ ತೃಪ್ತಾ ವರ್ಷಶತಂ ನೃಪ ॥ ೯೮ ॥

ಯಥೇಹ ಸರ್ವದೇವಾನಾಂ ಭಾಸ್ಕರಃ ಪ್ರವರಃ ಸ್ಮೃತಃ ।
ವಿಸ್ಪಷ್ಟಮದ್ಭುತಂ ಶಾಂತಂ ಸ್ಪಷ್ಟಾಕ್ಷರಪದಂ ತಥಾ ॥
ಕಲಸ್ವರಸಮಾಯುಕ್ತಂ ರಸಭಾವಸಮನ್ವಿತಂ ॥ ೯೯ ॥

---

೯೭. ಎಲೈ ರಾಜನೇ! ಕೇಳು, ಎಲ್ಲ ಶಾಸ್ತ್ರಗಳೂ ವಾಚಕನ ನಾಲಗೆಯ ತುದಿಯಲ್ಲಿ ಇರುತ್ತವೆಯಾಗಿ, ಅವನಿಗೆ ಸಮಾನನಾದ ದ್ವಿಜನು ಬೇರೆ ಯಾವನು ತಾನೇ ಸಿಕ್ಕುತ್ತಾನೆ ?

೯೮. ಭೂಲೋಕದ ದ್ವಿಜರಲ್ಲಿ ವಾಚಕನಿಗೆ ಸಮಾನನಾದ ದಾನಪಾತ್ರವೇ ಇಲ್ಲ. ಆದುದರಿಂದ ಯಾವಾಗಲೂ ಅವನಿಗೇ ಮೊದಲು ಅನ್ನದಾನಮಾಡಬೇಕೆಂದು ವಿದ್ವಾಂಸರು ಭಾವಿಸಿದ್ದಾರೆ.

೯೮. ಎಲೈ ರಾಜನೇ ! ಯಾವ ಬ್ರಾಹ್ಮಣನ ಮನೆಯಲ್ಲಿ ಶ್ರದ್ಧಾಯುಕ್ತನಾಗಿ ನಡೆಸುವ ಶ್ರಾದ್ಧದಲ್ಲಿ, ವಾಚಕನು ಭೋಜನಮಾಡುತ್ತಾನೋ ಅವನ ಪಿತೃಗಳು ನೂರುವರ್ಷಗಳವರೆಗೂ ಸಂಪೂರ್ಣ ತೃಪ್ತರಾಗುತ್ತಾರೆ.

೯೯. ಲೋಕದಲ್ಲಿ ದೇವರುಗಳಲ್ಲೆಲ್ಲಾ ಭಾಸ್ಕರನು ಹೇಗೆ ಶ್ರೇಷ್ಠನೋ, ಹಾಗೆಯೇ ಬ್ರಾಹ್ಮಣರಲ್ಲಿ ವಾಚಕನು ಶ್ರೇಷ್ಠನು. ವಾಚಕನು ವಿಶೇಷ ಸ್ಪಷ್ಟವೂ, ಆಶ್ಚರ್ಯಕರವೂ, ಶಾಂತಿಯುಕ್ತವೂ ಆಗಿರುವಂತೆ ಸ್ಪಷ್ಟವಾಗಿ ಪದಗಳನ್ನೂ ಅಕ್ಷರಗಳನ್ನೂ ಉಚ್ಚಾರಣೆಮಾಡುತ್ತಾ, ಅವ್ಯಕ್ತಮಧುರವಾದ ಸ್ವರಯುಕ್ತನಾಗಿ, ರಸ, ಭಾವ ಇವು ಸ್ಫುರಿಸುವ ಧ್ವನಿಯುಳ್ಳವನಾಗಿ, ವಾಚನಮಾಡಬೇಕು.

**ಬುಧ್ಯಮಾನಃ ಸದಾತ್ಮಾರ್ಥಂ ಗ್ರಂಥಾರ್ಥಂ ಕೃತ್ಸ್ನಶೋ ನೃಪ ।**
**ಬ್ರಾಹ್ಮಣಾದಿಷು ವರ್ಣೇಷು ಗ್ರಂಥಾರ್ಥಂ ವಾಚಯೇನ್ನೃಪ　॥ ೧೦೦ ॥**

**ಯ ಏವಂ ವಾಚಯೇದ್ರಾಜನ್ ಸ ವಿಪ್ರೋ ವ್ಯಾಸ ಉಚ್ಯತೇ ।**
**ಅತೋಽನ್ಯಥಾ ಕಥಯಿತಾ ಜ್ಞೇಯೋಽಸೌ ವಕ್ತೃನಾಮಕಃ　॥ ೧೦೧ ॥**

**ಇತ್ಥಂ ಭೂತೋ ವಸೇದ್ಯಸ್ಮಿನ್ ವಾಚಕೋ ವ್ಯಾಸಸನ್ನಿಭಃ ।**
**ದೇಶೇಽಥ ಪತ್ತನೇ ರಾಜನ್ ಸ ದೇಶಃ ಪ್ರವರಃ ಸ್ಮೃತಃ　॥ ೧೦೨ ॥**

**ತೇ ಧನ್ಯಾಸ್ತೇ ಮಹಾತ್ಮನಸ್ತೇ ಕೃತಾರ್ಥಾ ನ ಸಂಶಯಃ ।**
**ವಸಂತಿ ಯತ್ನತೋ ಯೇಽಸ್ಮಿನ್ ಸದೇಶಃ ಪ್ರವರಃ ಸ್ಮೃತಃ　॥ ೧೦೩ ॥**

**ನ ಶೋಭತೇ ಪುರಂ ವೀರ ವ್ಯಾಸಹೀನಂ ಕದಾಚನ ।**
**ಯಥಾರ್ಕಹೀನಂ ಹಿ ದಿನಂ ಚಂದ್ರಹೀನಾ ಯಥಾ ನಿಶಾ　॥ ೧೦೪ ॥**

---

೧೦೦. ಸಮಗ್ರವಾದ ಗ್ರಂಥವನ್ನೆಲ್ಲಾ ಕೂಲಂಕಷವಾಗಿ ತಿಳಿದುಕೊಂಡು, ಬ್ರಾಹ್ಮಣಾದಿ ಸಮಸ್ತವರ್ಣಗಳವರಿಗೂ ಯಾವಾಗಲೂ ಗ್ರಂಥದ ಅರ್ಥವನ್ನು ವಿವರವಾಗಿ ಹೇಳಬೇಕು.

೧೦೧. ಎಲೈ ರಾಜನೇ! ಕೇಳು; ಹೀಗೆ ಸಲಕ್ಷಣವಾಗಿ ವಾಚನಮಾಡುವ ಬ್ರಾಹ್ಮಣನು ಸಾಕ್ಷಾತ್ ವ್ಯಾಸನೇ ಎನಿಸುತ್ತಾನೆ. ಹಾಗಿಲ್ಲದೆ ಬೇರೆ ವಿಧಾನದಿಂದ ಹೇಳುವವನು ಕೇವಲ ವಕ್ತೃವೆನಿಸಿಕೊಳ್ಳುವನು.

೧೦೨. ಅಯ್ಯಾ ರಾಜನೇ! ವ್ಯಾಸಸದೃಶನಾದ ಇಂಥ ವಾಚಕನು ಯಾವ ಪಟ್ಟಣದಲ್ಲಿ, ಅಥವಾ ಯಾವ ದೇಶದಲ್ಲಿರುತ್ತಾನೋ ಆ ಪಟ್ಟಣವು ಪವಿತ್ರವೂ ಆ ದೇಶವು ಶ್ರೇಷ್ಠವೆನಿಸುತ್ತದೆ.

೧೦೩. ಇಂತಹ ದೇಶದಲ್ಲಿ ಪ್ರಯತ್ನಪಟ್ಟಾದರೂ ವಾಸಿಸುವ ಜನರು, ಧನ್ಯರೂ ಮಹಾತ್ಮರೂ, ಕೃತಾರ್ಥರೂ ಎನಿಸುವರು. ಇಂಥವರ ವಾಸದಿಂದ ಆ ದೇಶಕ್ಕೂ ಶ್ರೇಷ್ಠತೆ ಲಭಿಸುವುದು.

೧೦೪-೧೦೫. ಅಯ್ಯಾ ರಾಜನೇ! ಕೇಳು, ವ್ಯಾಸಸದೃಶರಾದ ಪುರಾಣವಾಚಕರು ವಾಸವಾಗಿ ಇಲ್ಲದ ಊರು, ಸೂರ್ಯನಿಲ್ಲದ ಹಗಲಿನ ಹಾಗೂ, ಚಂದ್ರನಿಲ್ಲದ

ನ ರಾಜತೇ ಸರೋ ಯದ್ವತ್ಪದ್ಮಿನೀರಹಿತಂ ನೃಪ ।
ತಥಾ ವ್ಯಾಸವಿಹೀನಂ ತು ರಾಜತೆ ನ ಪುರಂ ಕ್ವಚಿತ್ ॥ ೧೦೫ ॥

ಪ್ರಣಮ್ಯ ವಾಚಕಂ ಭಕ್ತ್ಯಾ ಯತ್ಫಲಂ ಪ್ರಾಪ್ಯತೆ ನರೈಃ ।
ನ ತತ್ಕ್ರತುಸಹಸ್ರೇಣ ಪ್ರಾಪ್ಯತೆ ಕುರುನಂದನ ॥ ೧೦೬ ॥

ಯಥೈಕತೋ ಗ್ರಹಾಸ್ಸರ್ವೇ ಏಕತಸ್ತು ದಿವಾಕರಃ ।
ತಥೈಕತೋ ದ್ವಿಜಾಃ ಸರ್ವೇ ಏಕತಸ್ತು ಸ ವಾಚಕಃ ॥ ೧೦೭ ॥

ಯಥಾ ವೇದಸಮೋ ನಾಸ್ತಿ ಆಗಮೋ ಭುವಿ ಕಶ್ಚನ ।
ತಥಾ ವ್ಯಾಸಸಮೋ ನಾಸ್ತಿ ಬ್ರಾಹ್ಮಣೋ ಭುವಿ ಕಶ್ಚನ ॥ ೧೦೮ ॥

ಕುರುಕ್ಷೇತ್ರಸಮಂ ತೀರ್ಥಂ ನ ದ್ವಿತೀಯಂ ಪ್ರಚಕ್ಷತೆ ।
ನ ನದೀ ಗಂಗಯಾ ತುಲ್ಯಾ ನ ದೇವೋ ಭಾಸ್ಕರಾದ್ವರಃ ॥ ೧೦೯ ॥

---

ರಾತ್ರಿಯ ಹಾಗೂ, ಪದ್ಮಲತೆಯಿಲ್ಲದ ಸರೋವರದಂತೆಯೂ ಎಂದಿಗೂ ಶೋಭಿಸುವುದಿಲ್ಲ.

೧೦೬. ಅಯ್ಯಾ ಕುರುನಂದನನೇ! ಕೇಳು, ಮಾನವನು ವಾಚಕನನ್ನು ಭಕ್ತಿಯಿಂದ ನಮಸ್ಕರಿಸಿದರೆ ಹೊಂದುವಂಥ ಫಲಗಳನ್ನು, ಸಾವಿರ ಯಜ್ಞಗಳನ್ನು ನೆರವೇರಿಸುವುದರಿಂದಲೂ ಹೊಂದಲಾರರು.

೧೦೭. ತಕ್ಕಡಿಯಲ್ಲಿ ಗ್ರಹಗಳನ್ನೆಲ್ಲಾ ಒಂದುಕಡೆ, ಸೂರ್ಯನೊಬ್ಬನನ್ನೇ ಒಂದುಕಡೆ ಇಟ್ಟರೆ, ಎರಡೂ ಹೇಗೆ ಸಮತೂಕವೆನಿಸುವುದೋ, ಹಾಗೆ ಬ್ರಾಹ್ಮಣರೆಲ್ಲಾ ಒಂದುತೂಕವಾದರೆ ವಾಚಕನೊಬ್ಬನೇ ಅವರ ಸಮತೂಕವೆನಿಸುತ್ತಾನೆ.

೧೦೮. ವೇದಕ್ಕೆ ಸಮವಾದ ಆಗಮವು ಭೂಲೋಕದಲ್ಲಿ ಹೇಗೆ ಬೇರೆ ಯಾವುದೂ ಇಲ್ಲವೋ, ಹಾಗೆ ಭೂಲೋಕದಲ್ಲಿ ವ್ಯಾಸನಿಗೆ (ವಾಚಕನಿಗೆ) ಸಮನಾದ ಬ್ರಾಹ್ಮಣನೂ ಬೇರೆ ಯಾವನೂ ಇಲ್ಲ.

೧೦೯. ಕುರುಕ್ಷೇತ್ರಕ್ಕೆ ಸಮನಾದ ಪುಣ್ಯತೀರ್ಥವು ಮತ್ತೊಂದಿಲ್ಲ. ಗಂಗೆಗೆ ಸಮನಾದ ನದಿಯೂ ಬೇರೆ ಯಾವುದೂ ಇಲ್ಲ. ಸೂರ್ಯನಿಗಿಂತ ಶ್ರೇಷ್ಠನಾದ ದೇವನೂ ಬೇರೆ ಯಾರೂ ಇಲ್ಲ.

**ನಾಶ್ವಮೇಧಸಮಂ ಪುಣ್ಯಂ ನ ಪಾಪಂ ಬ್ರಹ್ಮಹತ್ಯಯಾ ।**
**ಪುತ್ರಜನ್ಮಸುಖೈಸ್ತುಲ್ಯಂ ನ ಸುಖಂ ವಿದ್ಯತೆ ಯಥಾ** ॥ ೧೧೦ ॥

**ತಥಾ ವ್ಯಾಸಸಮೋ ವಿಪ್ರೋ ನ ಕ್ವಚಿತ್ಪ್ರಾಪ್ಯತೇ ನೃಪ ।**
**ದೈವೇ ಕರ್ಮಣಿ ಪಿತ್ರ್ಯೇ ಚ ಪಾವನಃ ಪರಮೋ ನೃಣಾಂ** ॥ ೧೧೧ ॥

**ನಾಸ್ತಿ ವ್ಯಾಸಸಮಃ ಶ್ರೇಷ್ಠ ಇತೀಯಂ ವೈದಿಕೀ ಶ್ರುತಿಃ ।**
**ಅಥ ವಿಪ್ರಸಹಸ್ರಾಣಾಂ ವಿಪ್ರೋऽಯಂ ಶ್ರೇಷ್ಠ ಈರಿತಃ ॥**
**ಉಪವಿಷ್ಟೋ ಯದಾ ಭುಂಕ್ತೇ ವ್ಯಾಸೋ ವೈ ವಿಪ್ರಮಂಡಲೇ** ॥ ೧೧೨ ॥

**ಶ್ರಾದ್ಧೇ ತಾತ ಪವಿತ್ರಾಣಿ ಕಥಿತಾನಿ ಪುರಾ ಮಮ ।**
**ಬ್ರಹ್ಮಣಾ ರಾಜಶಾರ್ದೂಲ ಶೃಣು ತಾನಿ ಯಥಾವಿಧಿ** ॥ ೧೧೩ ॥

---

೧೧೦. ಅಯ್ಯಾ ರಾಜನೇ! ಕೇಳು, ಅಶ್ವಮೇಧಯಜ್ಞ ಮಾಡಿದುದರಿಂದ ಬರುವ ಪುಣ್ಯಕ್ಕೆ ಸಮನಾದ ಪುಣ್ಯವು ಮತ್ತೊಂದಿಲ್ಲ. ಬ್ರಹ್ಮಹತ್ಯೆಗೆ ಸಮನಾದ ಪಾಪವು ಮತ್ತೊಂದಿಲ್ಲ. ಪುತ್ರಪ್ರಾಪ್ತಿಗೆ ಸಮನಾದ ಸುಖವು ಮತ್ತೊಂದಿಲ್ಲ. ಹಾಗೆಯೇ ವ್ಯಾಸನಿಗೆ ಸಮನಾದ ಬ್ರಾಹ್ಮಣನೂ ಎಲ್ಲಿಯೂ ಸಿಕ್ಕುವುದಿಲ್ಲ.

೧೧೧. ಮನುಷ್ಯರು ಆಚರಿಸುವ ದೇವಕರ್ಮ ಪಿತೃಕರ್ಮಗಳಿಗೆ ಆಹ್ವಾನಿಸಲು ಪರಿಶುದ್ಧಕರನೂ, ಉತ್ಕೃಷ್ಟನೂ, ವ್ಯಾಸಸಮನೂ ಆದ ವಾಚಕಬ್ರಾಹ್ಮಣನು ಹೊರತು ಮತ್ತೆ ಯಾರೂ ಸಿಕ್ಕುವುದಿಲ್ಲ ಎಂದು ವೇದದಲ್ಲಿ ಉಕ್ತವಾಗಿದೆ.

೧೧೨. ಸಾವಿರಾರುಮಂದಿ ಸಾಮಾನ್ಯ ಬ್ರಾಹ್ಮಣರಿಗಿಂತ ಈ ಬ್ರಾಹ್ಮಣನ ಶ್ರೇಷ್ಠನೆಂದು ಹೇಳಿದೆ. ವ್ಯಾಸಸದೃಶನಾದ ಪುರಾಣವಾಚಕನು ಬ್ರಾಹ್ಮಣ ಸಮೂಹದಲ್ಲಿ ಕುಳಿತು ಭೋಜನಮಾಡಿದರೆ ವ್ಯಾಸರೇ ಭೋಜನಮಾಡಿದಂತೆ ಭಾವಿಸಬೇಕು.

೧೧೩. ಅಯ್ಯಾ ರಾಜಶ್ರೇಷ್ಠನೇ! ಶ್ರಾದ್ಧದಲ್ಲಿ ವಿಧಿಪ್ರಕಾರ ಪವಿತ್ರವಸ್ತುಗಳು ಯಾವುವೆಂಬುದನ್ನು ಬ್ರಹ್ಮನು ಹಿಂದೆಯೇ ನನಗೆ ಹೇಳಿದ್ದನು. ಅದನ್ನು ಹೇಳುತ್ತೇನೆ ಕೇಳು.

ಮಧುಪಾಯಸಂ ಕಾಲಶಾಕಸ್ತಿಲಾಶ್ಚ ಕುತಪಸ್ತಥಾ ।
ರಾಜತಂ ಚಾಪಿ ಪಾತ್ರೇಷು ಬ್ರಾಹ್ಮಣೇಷ್ವಥ ವಾಚಕಃ ॥ ೧೧೪ ॥

ದೈವೇ ಕರ್ಮಣಿ ಪಿತ್ರ್ಯೇ ಚ ಸ ಜ್ಞೇಯಃ ಪಂಕ್ತಿಪಾವನಃ ।
ವಾಚಕಶ್ಚ ಯತಿಶ್ಚೈವ ತಥಾ ಯಶ್ಚ ಷಡಂಗವಿತ್ ॥ ೧೧೫ ॥

ಏತೇ ಸರ್ವೇ ನೃಪಶ್ರೇಷ್ಠ ವಿಜ್ಞೇಯಾಃ ಪಂಕ್ತಿಪಾವನಾಃ ।
ನಾಮನೀ ವಾಚಕಸ್ಯೈತೇ ಶೃಣುಷ್ವಾರ್ಥಮಥೈತಯೋಃ ॥ ೧೧೬ ॥

ಇತಿಹಾಸಪುರಾಣಾನಿ ಜಯೇತಿ ವಿದಿತಾನಿ ವೈ ।
ಉಪಜೀವತಿ ಯಸ್ಮಾದ್ವೈ ವಾಚಯಾನೋ ದ್ವಿಜೋ ನೃಪ ॥
ಜಯೋಪಜೀವೀ ತೇನಾಸೌ ಗತಃ ಖ್ಯಾತಿಂ ತು ವಾಚಕಃ ॥ ೧೧೭ ॥

ವಿಸ್ಪಷ್ಟಮದ್ಭುತಂ ಶಾಂತಂ ಸ್ಪಷ್ಟಾಕ್ಷರಮಿದಂ ತಥಾ ।
ಕಲಸ್ವರಸಮಾಯುಕ್ತಂ ರಸಭಾವಸಮನ್ವಿತಂ ॥ ೧೧೮ ॥

---

೧೧೪. ಜೇನು, ಪಾಯಸ, ಆಯಾಕಾಲದಲ್ಲಿ ಸಿಕ್ಕುವ ತರಕಾರಿ, ಎಳ್ಳು, ಕುತಪಕಾಲ, ಬೆಳ್ಳಿಯಪಾತ್ರೆ, ವಾಚಕ ಬ್ರಾಹ್ಮಣ, ಇವರೆಲ್ಲ ಶ್ರಾದ್ಧದಲ್ಲಿ ಪವಿತ್ರವು.

೧೧೫. ಅಯ್ಯಾ ರಾಜನೇ! ಕೇಳು, ದೇವಕಾರ್ಯಗಳಲ್ಲಿಯೂ, ಪಿತೃಕರ್ಮಗಳಲ್ಲಿಯೂ ವಾಚಕನು ಪಂಕ್ತಿಪಾವನನೆನಿಸುವನು. ಪುರಾಣವಾಚಕ, ಯತಿ, ಷಡಂಗವನ್ನು ತಿಳಿದ ವಿಪ್ರ, ಇವರೆಲ್ಲ ಪಂಕ್ತಿಪಾವನರೆಂದು ತಿಳಿಯಬೇಕು.

೧೧೬. ವಾಚಕನಿಗಿರುವ ಎರಡು ಹೆಸರುಗಳನ್ನೂ ಅವುಗಳ ಅರ್ಥವನ್ನೂ ಹೇಳುತ್ತೇನೆ ತಿಳಿದುಕೊ.

೧೧೭. ಇತಿಹಾಸ, ಪುರಾಣ, ಇವುಗಳಿಗೆ "ಜಯ" ಎಂಬ ಹೆಸರು ಪ್ರಸಿದ್ಧವಾಗಿದೆ. ಈ ಜಯಸಂಜ್ಞಕವಾದ ಪುರಾಣವನ್ನು ವಾಚನಮಾಡಿ ಅದರ ಉತ್ಪತ್ತಿಯಿಂದ ವಾಚಕನು ಜೀವನಮಾಡುವನಾದುದರಿಂದ ವಾಚಕನಿಗೆ "ಜಯೋಪಜೀವಿ" ಎಂಬ ಹೆಸರು ಪ್ರಖ್ಯಾತವಾಗಿದೆ.

೧೧೮-೧೨೯. ವಿಶೇಷ ಸ್ಪಷ್ಟವಾಗಿಯೂ, ಆಶ್ಚರ್ಯಕರವಾಗುವಂತೆಯೂ ಶಬ್ದಗಳನ್ನು ಸ್ಪಷ್ಟವಾಗಿ ಉಚ್ಚರಿಸುತ್ತಾ, ಶಾಂತವಾಗಿ ಅವ್ಯಕ್ತಮಧುರವಾದ ಧ್ವನಿಯಿಂದ

**ಬುಧ್ಯಮಾನೋಥ ವಾತ್ಯರ್ಥಂ ಗ್ರಂಥಾರ್ಥಂ ಕೃತ್ಸ್ನಶೋ ನೃಪ ।**
**ಬ್ರಾಹ್ಮಣಾದಿಷು ವರ್ಣೇಷು ಗ್ರಂಥಾರ್ಥಂ ಚಾರ್ಪಯೇತ್ತಥಾ ॥ ೧೧೯ ॥**

**ಯ ಏವಂ ವಾಚಯೇದ್ರಾಜನ್ ಸ ವಿಪ್ರೋ ವ್ಯಾಸ ಉಚ್ಯತೇ ।**
**ಅತೋಽನ್ಯಥಾ ವಾಚಯಿತಾ ನ ಗಚ್ಛೇದ್ವ್ಯಾಸತಾಂ ಕ್ವಚಿತ್ ॥ ೧೨೦ ॥**

**ತ್ರಿವಿಧಂ ವಾಚಕಂ ವಿದ್ಯಾತ್ಸದಾ ಗುಣವಿಭೇದತಃ ।**
**ಶ್ರಾವಕಂ ಚ ಮಹಾಬಾಹೋ ತ್ರಿವಿಧಂ ಗುಣಭೇದತಃ ॥ ೧೨೧ ॥**

**ದ್ವಾವೇತೌ ಕಥ್ಯಮಾನೌ ತು ನಿಬೋಧ ಗದತೋ ಮಮ ।**
**ಅಭಿದ್ರುತಂ ತಥಾಸ್ಪಷ್ಟಂ ವಿಸ್ತರಂ ಸ್ವರವರ್ಜಿತಂ ॥ ೧೨೨ ॥**

**ಪದಚ್ಛೇದವಿಹೀನಂ ಚ ತಥಾ ಭಾವವಿವರ್ಜಿತಂ ।**
**ಅಬುಧ್ಯಮಾನೋ ಗ್ರಂಥಾರ್ಥಮಭೀಷ್ಟೋತ್ಸಾಹವರ್ಜಿತಃ ॥ ೧೨೩ ॥**

---

ರಸ, ಭಾವ ಯುಕ್ತಗಳಾಗಿರುವಂತೆ ತಾನು ಸಮಗ್ರವಾಗಿ ತಿಳಿದಿರುವ ಗ್ರಂಥಾರ್ಥವನ್ನು ಬ್ರಾಹ್ಮಣಾದಿ ವರ್ಣಗಳಿಗೆ ವಾಚನಮಾಡಬೇಕು.

೧೨೦. ಈ ಪ್ರಕಾರ ವಾಚನಮಾಡುವ ಬ್ರಾಹ್ಮಣನು ಸಾಕ್ಷಾದ್ವ್ಯಾಸನೆನಿಸುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ವಾಚನಮಾಡುವವನು ವ್ಯಾಸಸಮಾನತೆಯನ್ನು ಎಂದಿಗೂ ಹೊಂದಲಾರನು.

೧೨೧. ಅಯ್ಯಾ ಮಹಾಬಾಹುವೇ! ಕೇಳು, ಗುಣಗಳ ತಾರತಮ್ಯಕ್ಕನುಗುಣವಾಗಿ ವಾಚಕರನ್ನು ಮೂರುಬಗೆಯಾಗಿ ವಿಂಗಡಿಸಬಹುದು. ಹಾಗೆಯೇ ಗುಣಗಳಲ್ಲಿ ತೋರಿಬರುವ ಭೇದದಿಂದ ಶ್ರೋತೃಗಳಲ್ಲಿಯೂ ಮೂರುವಿಧವೆಂದು ಹೇಳಬೇಕು.

೧೨೨-೧೨೩. ಈಗ ವಾಚಕರ ಮತ್ತು ಶ್ರೋತೃಗಳ ಭೇದಗಳನ್ನು ಹೇಳುತ್ತೇನೆ ಕೇಳು. ಬಹು ವೇಗವಾಗಿ ವಾಚನಮಾಡುವುದು, ಸ್ಪಷ್ಟೋಚ್ಚಾರಣೆಯಿಲ್ಲದೆ ಓದುವುದು, ಬಹುವಿಸ್ತಾರವಾಗಿ ಹೇಳತೊಡಗುವುದು, ಸಭೆಗೆಲ್ಲಾ ಕೇಳಿಸುವಷ್ಟು ಧ್ವನಿ ಸಾಲದೆ ಇರುವುದು, ಪದಗಳನ್ನು ಬಿಡಿಸಿ ಹೇಳದಿರುವುದು, ಭಾವವು ಸ್ಫುರಿಸುವಂತೆ ಹೇಳಲು ಬರದೆ ಪೇಚಾಡುವುದು, ತಕ್ಕಷ್ಟು ಉತ್ಸಾಹ ತೋರಿಸದೆ ಇರುವುದು, ಗ್ರಂಥಾರ್ಥವನ್ನೇ ತಿಳಿದುಕೊಳ್ಳದೆ ಇರುವುದು. ಈ ಪ್ರಕಾರ ವಾಚನಮಾಡುವ ಮನುಷ್ಯನು ವಾಚಕರಲ್ಲಿ ಅಧಮನು.

ಈದೃಶಂ ವಾಚಯೇದ್ಯಸ್ತು ವಾಚಕಃ ಕ್ಷ್ಮಾಧಿಪೇಶ್ವರ ।
ಕ್ರೋಧನೋಽಪ್ರಿಯವಾದೀ ಚ ಅಜ್ಞಾನಾದ್ಗ್ರಂಥದೂಷಕಃ ॥ ೧೨೪ ॥

ಬುದ್ಧ್ಯತೇ ನ ಚ ಕಷ್ಟಾಚ್ಚ ಸ ಜ್ಞೇಯೋ ವಾಚಕಾಧಮಃ ।
ವಿಸ್ಪಷ್ಟಮದ್ಭುತಂ ಶಾಂತಂ ರಸಭಾವಸಮನ್ವಿತಂ ॥ ೧೨೫ ॥

ಅಬುಧ್ಯಮಾನೋ ಗ್ರಂಥಾರ್ಥಂ ವಾಚಯೇದ್ಯಸ್ತು ವಾಚಕಃ ।
ಸ ಜ್ಞೇಯೋ ರಾಜಸೋ ರಾಜನ್ನಿದಾನೀಂ ಸಾತ್ವಿಕಂ ಶೃಣು ॥ ೧೨೬ ॥

ವಿಸ್ಪಷ್ಟಮದ್ಭುತಂ ಶಾಂತಂ ಸ್ಪಷ್ಟಾಕ್ಷರಪದಂ ತಥಾ ।
ಕಲಸ್ವರಸಮಾಯುಕ್ತಂ ರಸಭಾವಸಮನ್ವಿತಂ ॥ ೧೨೭ ॥

ಅತ್ಯರ್ಥಂ ಬುಧ್ಯಮಾನಸ್ತು ಗ್ರಂಥಾರ್ಥಂ ಕೃತ್ಸ್ನಶೋ ನೃಪ ।
ಬ್ರಾಹ್ಮಣಾದಿಷು ವರ್ಣೇಷು ಆಚಾರ್ಯೋ ವಿಧಿವನ್ನೃಪ ॥ ೧೨೮ ॥

---

೧೨೪. ಕೋಪಿಷ್ಠ, ಪ್ರಿಯವಚನಗಳನ್ನು ಆಡಲು ತಿಳಿಯದವನು, ತನಗೆ ತಿಳುವಳಿಕೆ ಸಾಲದೆ ಗ್ರಂಥವನ್ನು ದೂಷಿಸತಕ್ಕವನು, ಕ್ಲೇಶಪಟ್ಟರೂ ಅರ್ಥವನ್ನು ಗ್ರಹಿಸಲಾರದವನು, ಈ ಗುಣಯುಕ್ತನಾಗಿ ವಾಚನಮಾಡುವ ಮನುಷ್ಯನನ್ನು ವಾಚಕರಲ್ಲಿ ಅಧಮನೆಂದು ತಿಳಿಯಬೇಕು.

೧೨೫. ವಿಶೇಷ ಸ್ಪಷ್ಟವಾಗಿಯೂ, ಆಶ್ಚರ್ಯತೋರುವಂತೆಯೂ, ಶಾಂತಿಯುಕ್ತವಾಗಿಯೂ, ರಸ ಭಾವ ಇವುಗಳಿಂದ ಕೂಡಿಯೂ, ಇರುವಂತೆ ವಾಚನಮಾಡುವವನು ಉತ್ತಮ ವಾಚಕನೆನಿಸುವನು.

೧೨೬. ಅಯ್ಯಾ ರಾಜನೇ! ಗ್ರಂಥಾರ್ಥವನ್ನು ಚೆನ್ನಾಗಿ ತಿಳಿದುಕೊಳ್ಳದೆ ವಾಚನಮಾಡುವ ವಾಚಕನನ್ನು ರಾಜಸವಾಚಕನೆಂದು ತಿಳಿಯಬೇಕು. ಇನ್ನು ಸಾತ್ವಿಕವಾಚಕನ ಲಕ್ಷಣವನ್ನು ಹೇಳುವೆನು ಕೇಳು.

೧೨೭–೧೨೮. ಗ್ರಂಥದ ಸ್ವಾರಸ್ಯಾರ್ಥವನ್ನು ಸಮಗ್ರವಾಗಿ ತಿಳಿದುಕೊಂಡು ಅದ್ಭುತವಾಗಿ ತೋರುವಂತೆ ಸ್ಪಷ್ಟವಾಗಿಯೂ, ಶಾಂತವಾಗಿಯೂ, ಅಕ್ಷರಗಳ ಮತ್ತು ಪದಗಳ ಸ್ಫುಟವಾದ ಉಚ್ಚಾರಣೆಯಿಂದ ಕೂಡಿಯೂ ಮಧುರಸ್ವರಯುಕ್ತವಾಗಿಯೂ, ರಸ ಭಾವ ಇವುಗಳಿಂದ ಕೂಡಿದುದಾಗಿಯೂ, ಇರುವಂತೆ ಬ್ರಾಹ್ಮಣರು ಮುಂತಾದ ವರ್ಣದವರಿಗೆ ವಿಧಿಪ್ರಕಾರ ವಾಚನಮಾಡುವವನನ್ನು ಸಾತ್ವಿಕವಾಚಕನೆಂದು ತಿಳಿಯಬೇಕು.

ಯ ಏವಂ ವಾಚಯೇದ್ರಾಜನ್ಸ ಜ್ಞೇಯಃ ಸಾತ್ವಿಕೋ ಬುಧೈಃ ।
ಶ್ರದ್ಧಾಭಕ್ತಿವಿಹೀನೋ ಯೋ ಲೋಭಿಷ್ಠಃ ಕಟುಕೋ ಯಥಾ ॥ ೧೨೯ ॥

ಹೇತುವಾದಪರೋ ರಾಜಂಸ್ತಥಾಸೂಯಾಸಮನ್ವಿತಃ ।
ನಿತ್ಯಾಂ ನೈಮಿತ್ತಿಕಾಂ ಕಾಮ್ಯಾಮಾದದದ್ದಕ್ಷಿಣಾಂ ನೃಪ ॥ ೧೩೦ ॥

ವಾಚಕೋ ಯೋ ಮಹಾಬಾಹೋ ಶೃಣುಯಾದ್ಯಸ್ತು ಮಾನವಃ ।
ಸ ಜ್ಞೇಯಸ್ತಾಮಸೋ ರಾಜನ್ ಶ್ರಾವಕೋ ಮಾನವೋಽಪಿ ಸಃ ॥ ೧೩೧ ॥

ನ ತಸ್ಯ ಪುರತೋ ವೀರ ವಾಚಯೇತ್ಪ್ರಾಜ್ಞ ಏವ ಹಿ ।
ಪ್ರಸಂಗಾಚ್ಛೃಣುಯಾದ್ಯಸ್ತು ಶ್ರದ್ಧಾಭಕ್ತಿವಿವರ್ಜಿತಃ ॥ ೧೩೨ ॥

ರಾಜನ್ಕೌತುಕಪಾತ್ರಂತು ಸಜ್ಞೇಯೋ ರಾಜಸೋ ಭವೇತ್ ।
ಸಂತಜ್ಯಸರ್ವಕಾರ್ಯಾಣಿ ಭಕ್ತಿಶ್ರದ್ಧಾಸಮನ್ವಿತಃ ॥ ೧೩೩ ॥

ಸತತಂ ಪೂಜಯೇದ್ಯಸ್ತು ವಾಚಕಂ ಶ್ರದ್ಧಯಾ ಮುದಾ ।
ನಿತ್ಯೇ ನೈಮಿತ್ತಿಕೇ ಕಾಮ್ಯೇ ಗುರೂನ್ವೈ ದೇವತಾಸ್ತಥಾ ॥ ೧೩೪ ॥

---

೧೨೯. ಅಯ್ಯಾ ಮಹಾಬಾಹುವೇ! ಶ್ರದ್ಧಾಭಕ್ತಿಯಿಲ್ಲದವನೂ, ಲೋಭಿಯೂ, ಕ್ರೂರಿಯೂ, ದುಷ್ಟಹೇತುಗಳನ್ನು ಕುರಿತು ವಾದಿಸುವವನೂ,

೧೩೦. ಅಸೂಯೆಯುಳ್ಳವನೂ ಆಗಿರುತ್ತಾ ನಿತ್ಯದಕ್ಷಿಣೆ, ನೈಮಿತ್ತಿಕದಕ್ಷಿಣೆ, ಕಾಮ್ಯದಕ್ಷಿಣೆಗಳು ಮುಂತಾದ್ದನ್ನೆಲ್ಲಾ ತೆಗೆದುಕೊಂಡು ವಾಚನಮಾಡತಕ್ಕವನು ತಾಮಸವಾಚಕನೆನಿಸುವನು.

೧೩೧–೧೩೪. ಅಂತಹ ವಾಚಕನ ವಾಚನವನ್ನು ಕೇಳುವವರು ತಾಮಸ ಶ್ರೋತೃಗಳೆನಿಸುವರು. ಓ ವೀರನೇ! ಅಂತಹ ತಾಮಸಶ್ರೋತೃವಿನೆದುರಿಗೆ ಪ್ರಾಜ್ಞನಾದ ವಾಚಕನು ವಾಚನಮಾಡಲೇಬಾರದು. ಶ್ರದ್ಧಾಭಕ್ತಿಪೂರ್ವಕವಾಗಿ ಆಮೂಲಾಗ್ರವಾಗಿ ಕೇಳಲು ಸಂದರ್ಭವಶದಿಂದ ಆಗದೆ ಇದ್ದರೂ, ನಿತ್ಯನೈಮಿತ್ತಿಕ ಕಾಮ್ಯಕರ್ಮಗಳಲ್ಲೆಲ್ಲಾ ವಾಚಕನನ್ನು ಭಕ್ತಿಯಿಂದಲೂ, ಸಂತೋಷದಿಂದಲೂ ಪೂಜಿಸುವನೂ, ನಿತ್ಯನೈಮಿತ್ತಿಕ ಕಾಮ್ಯಕರ್ಮಗಳಲ್ಲಿ ಗುರುಗಳನ್ನೂ ದೇವರುಗಳನ್ನೂ ಪೂಜಿಸುವವನೂ ಆಗಿರುತ್ತಾ

ಯ ಏವಂ ಶೃಣುಯಾದ್ವೀರ ಸ ಜ್ಞೇಯಸ್ಸಾತ್ವಿಕೋ ಬುಧೈಃ ।
ವ್ಯಾಸಃ ಪೂಜ್ಯಃ ಶ್ರಾವಕಾಣಾಂ ಯಥಾ ವ್ಯಾಸವಚೋ ನೃಪ ॥ ೧೩೫ ॥

ತಸ್ಮಾತ್ಪೂಜ್ಯತಮೋ ನಾನ್ಯಃ ಶ್ರಾವಕಾಣಾಂ ನೃಪೋತ್ತಮ ।
ಯತಃ ಸ ವೈ ಗುರುಸ್ತೇಷಾಂ ಜ್ಞಾನದಾತಾ ಸದಾ ನೃಪ ॥ ೧೩೬ ॥

ಚತುರ್ಣಾಮಿಹ ವರ್ಣಾನಾಂ ನಾನ್ಯೋ ಬಂಧುಃ ಪ್ರಚಕ್ಷ್ಯತೇ ।
ವ್ಯಾಸಾದೃತೇ ನೃಪಶ್ರೇಷ್ಠ ಇತೀಯಂ ವೈದಿಕೀಶ್ರುತಿಃ ॥ ೧೩೭ ॥

ತಸ್ಮಾತ್ಸರ್ವಪ್ರಯತ್ನೇನ ಪೂಜಯೇದ್ವಾಚಕಂ ಸದಾ ।
ಸ ಗುರುಃ ಸ ಪಿತಾ ಮಾತಾ ಸ ಬಂಧುಃ ಸ ಸುಹೃತ್ತಥಾ ॥ ೧೩೮ ॥

ವಾಚಕೋ ನೃಪಶಾರ್ದೂಲ ವಿಪ್ರಾದೀನಾಮಶೇಷತಃ ।
ಇತ್ಥಂ ವ್ಯಾಸೋ ಗುರುರ್ಜ್ಞೇಯಃ ಪೂಜ್ಯೋ ಮಾನ್ಯೋ ದ್ವಿಜಾತಿಭಿಃ ॥ ೧೩೯ ॥

---

೧೩೫. ಹಾಗೆಯೇ ಭಕ್ತಿಯಿಂದ ಪುರಾಣಶ್ರವಣ ಮಾಡುವವನು ಸಾತ್ವಿಕ ಶ್ರೋತೃವೆಂಬದಾಗಿ ತಿಳಿದವರು ಹೇಳುತ್ತಾರೆ ವ್ಯಾಸಸ್ವರೂಪಿಯಾದ ವಾಚಕನು ಶ್ರೋತೃಗಳಿಗೆ ಪರಮಪೂಜ್ಯನೆಂದು ವ್ಯಾಸರೇ ಹೇಳಿದ್ದಾರೆ.

೧೩೬. ಶ್ರೋತೃಗಳಲ್ಲಿ ಬೇರೆ ಯಾವನೂ ಅಂಥ ಪೂಜ್ಯನಲ್ಲ. ಏಕೆಂದರೆ ಇವರುಗಳು ಸ್ವಂತವಾಗಿ ಅಂಥ ಜ್ಞಾನಿಗಳಲ್ಲ. ಆವನು ಸದಾ ಜ್ಞಾನಪ್ರದನಾದುದರಿಂದ ನಿಜವಾದ ಗುರುವೆನಿಸಿರುತ್ತಾನೆ.

೧೩೭. ಅಯ್ಯಾ ರಾಜಶ್ರೇಷ್ಠನೇ ! ನಾಲ್ಕುವರ್ಣಗಳವರಿಗೂ ವ್ಯಾಸನಿಗಿಂತ ಬಂಧುವಾದವನು, ಬೇರೆ ಯಾರೂ ಇಲ್ಲ ಎಂದು ವೇದಗಳಲ್ಲಿ ಹೇಳಿದೆ.

೧೩೮. ಆದುದರಿಂದ ಯಾವಾಗಲೂ ಸರ್ವಪ್ರಯತ್ನಗಳಿಂದಲೂ ವಾಚಕನನ್ನು ಪೂಜಿಸಬೇಕು. ಬ್ರಾಹ್ಮಣರೇ ಮೊದಲಾದ ಸಮಸ್ತರಿಗೂ ವಾಚಕನೇ ತಂದೆ, ಆವನೇ ತಾಯಿ, ಅವನೇ ಗುರು, ಆವನೇ ಮಿತ್ರ ಎಂದು ತಿಳಿಯಬೇಕು.

೧೩೯. ಈ ಪ್ರಕಾರ ವ್ಯಾಸಸ್ವರೂಪನಾದ ವಾಚಕನು ಸಮಸ್ತವಿಪ್ರರಿಗೂ ಪೂಜ್ಯನೂ, ಗುರುವೂ, ಮಾನ್ಯನೂ ಎಂದು ತಿಳಿದು ಬ್ರಾಹ್ಮಣರೂ ಕೂಡ ಅವನನ್ನು ಪೂಜಿಸಬೇಕು.

ಶೃಣ್ವಂತಿ ಯೇ ನರಾ ರಾಜನ್ ಸ ತೇಷಾಂ ಗುರುರುಚ್ಯತೇ ।
ಪೂಜಾರ್ಥಂ ತಸ್ಯ ಸಮಯಃ ಶ್ರಾವಕಾಣಾಮುದಾಹೃತಃ ॥ ೧೪೦ ॥

ಯೇ ಶೃಣ್ವಂತಿ ನೃಪಶ್ರೇಷ್ಠ ಮಾಸಿಮಾಸಿ ದದಂತಿ ತೇ ।
ಸ್ವರ್ಣಮಾಷಕಮೇಕಸ್ಮೈ ವಾಚಕಾಯ ಪೃಥಕ್ ಪೃಥಕ್ ॥ ೧೪೧ ॥

ದ್ವಾದಶ್ಯಾಂ ಚಾಮವಾಸ್ಯಾಯಾಮಥ ವಾ ರವಿಸಂಕ್ರಮೇ ।
ಸಾ ನಿತ್ಯಾ ದಕ್ಷಿಣಾ ತಸ್ಯಾಂ ಯಾ ಚ ಶ್ರೇಯೋಽರ್ಥಮಾತ್ಮನಃ ॥ ೧೪೨ ॥

ಅಯನೇ ವಿಷುವೇ ಚೈವ ಚಂದ್ರಸೂರ್ಯಗ್ರಹೇ ತಥಾ ।
ಪ್ರಾಪ್ತೇ ವಾಪರಪಕ್ಷೇ ಚ ದಾನಂ ತಸ್ಮೈ ಸ್ವಶಕ್ತಿತಃ ॥ ೧೪೩ ॥

ದೇಯಂ ಸ್ಯಾಚ್ಛ್ರಾವಕೈಸ್ತಾತ ತಂ ಮುಕ್ತ್ವಾ ನಾನ್ಯತೋ ನೃಪ ।
ಪ್ರಥಮಂ ತಸ್ಯ ದಾತವ್ಯಂ ಶ್ರೇಯೋಽರ್ಥಂ ಶ್ರಾವಕೈಃ ಸದಾ ॥ ೧೪೪ ॥

---

೧೪೦. ಎಲೈ ರಾಜನೇ ! ಪುರಾಣಶ್ರವಣ ಮಾಡುವವರಿಗೆಲ್ಲಾ ಅವನು ಗುರುವೆನಿಸುತ್ತಾನೆ. ಶ್ರೋತೃಗಳು ಅವನನ್ನು ಪೂಜಿಸಬೇಕಾದ ಸಮಯ ಯಾವುದೆಂಬುದನು ತಿಳಿಸಿಯಾಯಿತು.

೧೪೧-೧೪೨. ಪುರಾಣಶ್ರವಣ ಮಾಡುವವರು ಪ್ರತಿತಿಂಗಳ ದ್ವಾದಶೀ ಅಮಾವಾಸ್ಯೆ, ಸಂಕ್ರಮಣ ಮೊದಲಾದ ದಿನಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ವಾಚಕನಿಗೆ ಉದ್ದಿನಕಾಳಿನ ಪ್ರಮಾಣ ಚಿನ್ನವನ್ನು ಕೊಡಬೇಕು. ತಮ್ಮ ಶ್ರೇಯಸ್ಸಿಗಾಗಿ ಹೀಗೆ ದಾನಕೊಟ್ಟದ್ದೂ ಸಹ ನಿತ್ಯದಕ್ಷಿಣೆಯೆನಿಸುವುದು.

೧೪೩. ಉತ್ತರಾಯಣಪುಣ್ಯಕಾಲ, ದಕ್ಷಿಣಾಯನಪುಣ್ಯಕಾಲ, ವಿಷುವಪುಣ್ಯಕಾಲ, (ಮೇಷಸಂಕ್ರಮಣ,) ಚಂದ್ರಗ್ರಹಣ, ಸೂರ್ಯಗ್ರಹಣ, ಅಪರಪಕ್ಷ ಇವುಗಳಲ್ಲಿ ಆ ವಾಚಕನಿಗೇ ಶಕ್ತ್ಯನುಸಾರ ದಾನಕೊಡಬೇಕು.

೧೪೪. ತಾವು ಯಾವ ವಾಚಕನಲ್ಲಿ ಪುರಾಣ ಕೇಳುವರೋ ಅವನನ್ನು ಬಿಟ್ಟು, ಬೇರೆ ವಾಚಕನಿಗೆ ದಾನ ಕೊಡಬಾರದು. ಎಲೈ ರಾಜನೇ ! ಶ್ರಾವಕರು ತಮ್ಮ ಶ್ರೇಯಸ್ಸಿಗೋಸ್ಕರವಾಗಿ ಅವನಿಗೇ ಕೊಡಬೇಕು

ಅದತ್ವಾ ತಸ್ಯ ಯೇನ್ಯಸ್ಮೈ ಸಂಪ್ರಯಚ್ಛಂತಿ ಶ್ರಾವಕಾಃ ।
ಅವಮಾನಃ ಕೃತಸ್ತೈಸ್ತು ವಾಚಕಸ್ಯ ಭವೇನ್ನೃಪ ॥ ೧೪೫ ॥

ಕೃತ್ವಾವಮಾನಮಥ ತೈಃ ಪ್ರಾಪ್ಯತೇ ಯತ್ಫಲಂ ನೃಪ ।
ಬ್ರಾಹ್ಮಣಾದ್ಯೈಸ್ಸಮಸ್ತೈಶ್ಚ ತಚ್ಛೃಣುಷ್ವ ವರಾನನ ॥ ೧೪೬ ॥

ಶೂದ್ರತ್ವಂ ಬ್ರಾಹ್ಮಣೋ ಯಾತಿ ಕ್ಷತ್ರಿಯೋ ಯಾತಿ ಕಾಕತಾಂ ।
ಜಾಯತೇ ಚ ತಥಾ ವೈಶ್ಯಃ ಶೂದ್ರಶ್ಚಾಂಡಾಲತಾಂ ವ್ರಜೇತ್ ॥ ೧೪೭ ॥

ತಸ್ಮಾತ್ಪೂಜ್ಯೋ ನೃಪಶ್ರೇಷ್ಠ ಪ್ರಥಮಂ ವಾಚಕೋ ಬುಧೈಃ ।
ಆಪತ್ಕಾಲೇ ಚ ವೃದ್ಧೌ ಚ ಯತಶ್ಚಾಸೌ ಗುರುಃ ಸ್ಮೃತಃ ॥ ೧೪೮ ॥

ವೈಶಾಖ್ಯಾಮಯನೇ ವೀರ ತೃತೀಯಾಯಾಂ ಚ ಸುವ್ರತ ।
ಕಾರ್ತಿಕ್ಯಾಮಥ ಮಾಘ್ಯಾಂ ಚ ಸಂಪೂಜ್ಯಃ ಪ್ರಥಮಂ ಭವೇತ್ ॥ ೧೪೯ ॥

---

೧೪೫. ಯಾವ ಶ್ರಾವಕರು ತಮ್ಮ ವಾಚಕನಿಗೆ ದಾನಕೊಡದೆ ಬೇರೆ ವಾಚಕನಿಗೆ ದಾನ ಕೊಡುತ್ತಾರೆಯೋ ಅವರು ತಮ್ಮ ವಾಚಕನಿಗೆ ಅವಮಾನಮಾಡಿದಂತಾಗುತ್ತದೆ.

೧೪೬. ಅಯ್ಯಾ ಸುಮುಖನೇ! ಹೀಗೆ ವಾಚಕನಿಗೆ ಅವಮಾನ ಮಾಡಿದುದರಿಂದ ಬ್ರಾಹ್ಮಣಾದಿ ಸಮಸ್ತವರ್ಣದವರಿಗೂ ಪ್ರಾಪ್ತವಾಗುವ ದುಷ್ಫಲವನ್ನು ಹೇಳುತ್ತೇನೆ ಕೇಳು.

೧೪೭. ವಾಚಕನಿಗೆ ಅವಮಾನ ಮಾಡಿದ ಬ್ರಾಹ್ಮಣನು ಶೂದ್ರತ್ವವನ್ನು ಹೊಂದುತ್ತಾನೆ. ಕ್ಷತ್ರಿಯನು ಅವಮಾನಮಾಡಿದರೆ ಕಾಕತ್ವವನ್ನು ಹೊಂದುತ್ತಾನೆ. ವೈಶ್ಯನೂ ಸಹ ಕಾಕಜನ್ಮವೆತ್ತುತ್ತಾನೆ. ಶೂದ್ರನು ಚಾಂಡಾಲನಾಗುತ್ತಾನೆ.

೧೪೮. ಎಲೈ ರಾಜಶ್ರೇಷ್ಠನೇ! ಆದಕಾರಣ ತಿಳಿದವರು ಮೊದಲು ತಮ್ಮ ವಾಚಕನನ್ನೇ ಪೂಜಿಸಬೇಕು. ವ್ಯಸನಕಾಲದಲ್ಲಿಯಾಗಲಿ, ಉತ್ಸವಕಾಲದಲ್ಲಿಯಾಗಲಿ ಇವನನ್ನೇ ಗುರುವೆಂದು ಭಾವಿಸಬೇಕು,

೧೪೯. ವೈಶಾಖಮಾಸದ ಪೂರ್ಣಿಮೆಯಲ್ಲೂ, ಮೇಷ, ಕರ್ಕಾಟಕ, ತುಲಾ, ಮಕರಗಳೆಂಬ ಸಂಕ್ರಮಣಗಳಲ್ಲೂ, ವೈಶಾಖ ಶುಕ್ಲ ತೃತೀಯೆಯಲ್ಲೂ, ಮತ್ತು

ಪರ್ವೇಷ್ವನ್ಯೇಷು ಚ ವಿಭೋ ಸಂಪೂಜ್ಯೋ ಧರ್ಮತಃ ಸ್ಮೃತಃ ।
ಹಿರಣ್ಯಂ ಚ ಸುವರ್ಣಂ ಚ ಧನಂ ಧಾನ್ಯಂ ತಥೈವ ಚ ॥ ೧೫೦ ॥

ಅನ್ನಂ ಚಾಪಿ ತಥಾ ಪಕ್ವಂ ಮಾಂಸಂ ಚ ಕುರುನಂದನ ।
ದಾತವ್ಯಂ ಪ್ರಥಮಂ ತಸ್ಮೈ ಶ್ರಾವಕೈರ್ನೃಪಸತ್ತಮ ॥ ೧೫೧ ॥

ವಾಚಕಸ್ತು ಯಥಾ ನಿತ್ಯಂ ಸುಖಮಾಸ್ತೇ ನರಾಧಿಪ ।
ನ ಪೀಡ್ಯತೇ ತಥಾ ದ್ವಂದ್ವೈಸ್ತಥಾ ಕಾರ್ಯಂ ವರಾನನ ॥ ೧೫೨ ॥

ಹೇಮಂತೇ ಲೋಮಶಾ ದೇಯಾಃ ಛತ್ರಂ ಪ್ರಾವೃಷಿ ಸತ್ತಮ ।
ಉಪಾನಹೌ ಕಾಲಯೋಗ್ಯೇ ಕಾಲೇಚೈವಾನುಲೋಮಶಃ ॥ ೧೫೩ ॥

---

ಮಾರ್ಗಶೀರ್ಷಮಾಸದ ಪೂರ್ಣಿಮೆಯಲ್ಲೂ ಸಹ ಎಲ್ಲರಿಗಿಂತಲೂ ಮೊದಲು ಆ ವಾಚಕನನ್ನೇ ಪೂಜಿಸಬೇಕು.

೧೫೦. ಎಲೈ ವಿಭುವೇ! ಆತನು ಇತರ ಕಾಲಗಳಲ್ಲೂ ಸಹ ಧರ್ಮಪ್ರಕಾರ ಪೂಜ್ಯನಾಗಿಯೇ ಇರುತ್ತಾನೆ. ಚಿನ್ನ ಮತ್ತು ಒಳ್ಳೆಯ ಬಣ್ಣದಿಂದ ಕೂಡಿದ ಇತರ ವಸ್ತುಗಳು, ಧನಧಾನ್ಯಗಳು ಇವುಗಳನ್ನು

೧೫೧. ಮತ್ತು ಅನ್ನ, ಪಕ್ವಾಹಾರ ಮುಂತಾದುವುಗಳನ್ನೂ ಶ್ರೋತೃಗಳು ಮೊದಲು ತಮ್ಮ ವಾಚಕನಿಗೇ ಕೊಡಬೇಕು.

೧೫೨. ಅಯ್ಯಾ ಸುಮುಖನೇ! ಒಟ್ಟಿನಲ್ಲಿ ವಾಚಕನು ದ್ವಂದ್ವ ದುಃಖಪೀಡಿತನಾಗದ ಹಾಗೂ, ಸದಾ ಸುಖಿಯಾಗಿ ಇರುವ ಹಾಗೂ, ಅನುಕೂಲಗಳನ್ನು ಮಾಡಿಕೊಡಬೇಕು.

೧೫೩. ಆತನಿಗೆ ಹಿಮಕಾಲದಲ್ಲಿ ಉಣ್ಣೆಯಿಂದ ನಿರ್ಮಿತವಾದ ಶಾಲು ಕಂಬಳಿ ಮೊದಲಾದುವನ್ನೂ, ಮಳೆಗಾಲದಲ್ಲಿ ಕೊಡೆಯನ್ನೂ, ಬಿಸಿಲುಕಾಲದಲ್ಲಿ ಪಾದರಕ್ಷೆಗಳನ್ನೂ, ಹೀಗೆ ತತ್ತತ್ಕಾಲಕ್ಕೆ ಉಪಯೋಗವಾಗುವ ವಸ್ತುಗಳನ್ನು ಕೊಡಬೇಕು.

ಇತ್ಥಂ ದ್ವಂದ್ವವಿನಿರ್ಮುಕ್ತಃ ಸ ಯೇಷಾಂ ವಾಚಕೋ ನೃಪ ।
ತೇ ಧನ್ಯಾ ಶ್ರಾವಕಾ ಲೋಕೇ ತೇ ಗತಾಃ ಪರಮಂ ಪದಂ ॥ ೧೫೪ ॥

ಆತ್ಮನಾ ತು ಕಥಂ ವೀರ ಸುಖಮಿಚ್ಛೇದ್ವಿಚಕ್ಷಣಃ ।
ವಿಷಮಸ್ಥೇ ಗುರೌ ರಾಜನ್ ಯತಶ್ಚ ಸ ಗುರುಃ ಸ್ಮೃತಃ ॥ ೧೫೫ ॥

ವಾಚಕಶ್ರಾವಕಾಣಾಂ ಚ ತಸ್ಮಾದ್ದ್ವಂದ್ವಂ ವಿಘಾತಯೇತ್ ।
ಯತ್ನಃ ಕಾರ್ಯಃ ಶ್ರಾವಕೈಶ್ಚ ವಾಚಕೈಶ್ಚ ಜನಾಧಿಪ ॥ ೧೫೬ ॥

ಇತ್ಥಂ ಪೂಜ್ಯಃ ಸದಾ ವ್ಯಾಸಃ ಶ್ರೇಯೋಽರ್ಥಂ ಪ್ರಥಮಂ ನೃಪ ।
ಭರ್ತಾ ಪೂಜ್ಯೋ ಯಥಾ ಸ್ತ್ರೀಣಾಂ ಸರ್ವಾಸಾಂ ವೈ ಮಹೀಪತೇ॥೧೫೭॥

ಶ್ರಾವಕಾಣಾಂ ತಥಾ ರಾಜನ್ ವಾಚಕಃ ಪೂಜ್ಯ ಉಚ್ಯತೇ ।
ಉಪಾಧ್ಯಾಯಸ್ತು ಶಿಷ್ಯಾಣಾಂ ಯಥಾ ಭಾಗವತೋ ಹರಿಃ ॥ ೧೫೮ ॥

---

೧೫೪. ಈ ರೀತಿಯಾಗಿ ಶ್ರೋತೃಗಳು ಮಾಡಿದ ದಾನದಿಂದ ವಾಚಕನು ದ್ವಂದ್ವ ದುಃಖವಿಮುಕ್ತನಾದರೆ, ಆ ಶ್ರೋತೃಗಳೇ ಲೋಕದಲ್ಲಿ ಪುಣ್ಯವಂತರು. ಅವರು ಪರಮಪದವನ್ನು ಹೊಂದುವರು.

೧೫೫. ಗುರುವು ವಿಷಮಸ್ಥಿತಿಯಲ್ಲಿರುವಾಗ ಶಿಷ್ಯನು ತಾನು ಸುಖವನ್ನು ಬಯಸುವುದು ಸಾಧುವಲ್ಲ. ಏಕೆಂದರೆ ಗುರುವಾದವನು ದುಃಸ್ಥಿತಿಯಲ್ಲಿರುವಾಗ ವಿಚಕ್ಷಣನಾದ ಶಿಷ್ಯನು ತಾನು ಸುಖಪಡಬಾರದು.

೧೫೬. ವಿಚಕ್ಷಣನಾದ ವಾಚಕನು ಶ್ರಾವಕರಿಗೂ ದ್ವಂದ್ವದುಃಖವುಂಟಾಗದಂತೆ ಪರಿಹಾರವನ್ನು ಕಲ್ಪಿಸಬೇಕು. ಎಲೈ ಜನಾಧಿಪನೇ! ಇದಕ್ಕಾಗಿ ಶ್ರಾವಕರೂ, ವಾಚಕನೂ ಇಬ್ಬರೂ ಯತ್ನಮಾಡಬೇಕು.

೧೫೭ ಶ್ರೋತೃಗಳೆಲ್ಲರೂ ತಮ್ಮ ಶ್ರೇಯಸ್ಸಿಗಾಗಿ ವ್ಯಾಸನನ್ನು ಸದಾ ಹೀಗೆ ಪ್ರಥಮತಃ ಪೂಜಿಸಬೇಕು. ಎಲೈ ರಾಜನೇ! ಕೇಳು; ಸ್ತ್ರೀಯರಿಗೆ ಪತಿಯು ಹೇಗೆ ಪೂಜ್ಯನೋ, ಹಾಗೆ ಶ್ರಾವಕರಿಗೆ ವಾಚಕನೂ ಪೂಜ್ಯನು.

೧೫೮. ಉಪಾಧ್ಯಾಯನು ಶಿಷ್ಯರಿಗೆ ಹೇಗೆ ಪೂಜ್ಯನೋ, ಭಾಗವತರಿಗೆ ಹರಿಯು ಹೇಗೆ ಪೂಜ್ಯನೋ, ಹಾಗೆಯೇ ಶ್ರಾವಕರಿಗೆ ವಾಚಕನು ಪೂಜ್ಯನೆನಿಸುವನು.

ಸೌರಾಣಾಂ ಚ ಯಥಾ ಭಾನುಃ ಶೈವಾನಾಂ ಶಂಕರೋ ಯಥಾ ।
ವಾಚಕಸ್ತು ತಥಾ ಪೂಜ್ಯಃ ಶ್ರಾವಕಾಣಾಂ ನರಾಧಿಪ ॥ ೧೫೯ ॥

ದಕ್ಷಿಣಾಂ ದದತಾ ನಿತ್ಯಂ ಶ್ರೋತವ್ಯಂ ಭೂತಿಮಿಚ್ಛತಾ ।
ಪೂರ್ವೋಕ್ತಮಾಷಕಂ ತಸ್ಮೈ ವಾಚಕಾಯ ಜನಾಧಿಪ ॥ ೧೬೦ ॥

ಯದಾ ದಾತುಂ ನ ಶಕ್ನೋತಿ ಮಾಷಕಂ ಕಾಂಚನಸ್ಯ ತು ।
ರಜತಸ್ಯ ತದಾ ದೇಯಂ ಮಾಷಕಂ ಶ್ರೇಯಸೇ ನೃಪ ॥ ೧೬೧ ॥

ತದಭಾವೇ ತು ತಾಮ್ರಂ ಚ ವಿತ್ತಶಾಠ್ಯವಿವರ್ಜಿತಃ ।
ಮೃತ್ತಿಕಾಪಿ ಹಿ ದಾತವ್ಯಾ ಸ್ರಾಪ್ನೋತಿ ಸುಫಲಂ ಶುಭಂ ॥ ೧೬೨ ॥

ಇತ್ಯೇಷಾ ದಕ್ಷಿಣಾ ನಿತ್ಯಾ ಮಾಸಿಮಾಸಿ ಭವೇನ್ನೃಪ ।
ನೈಮಿತ್ತಿಕಾ ಭವೇದ್ರಾಜನ್ ಗ್ರಹಣಾದಿಷು ಪರ್ವಸು ॥ ೧೬೩ ॥

---

೧೫೯. ಅಯ್ಯಾ ನರಾಧಿಪನೇ! ಸೌರರಿಗೆ ಸೂರ್ಯನು ಹೇಗೆ ಪೂಜ್ಯನೋ, ಶೈವರಿಗೆ ಶಿವನು ಹೇಗೆ ಪೂಜ್ಯನೋ, ಹಾಗೆಯೇ ಶ್ರೋತೃಗಳಿಗೆ ವಾಚಕನು ಪೂಜ್ಯನು.

೧೬೦ ಶಾಶ್ವತವಾದ ಸಂಪತ್ತಿಯನ್ನು ಅಪೇಕ್ಷಿಸುವವನು, ಹಿಂದೆ ಹೇಳಿದಂತೆ ಯಥೋಕ್ತವಾದ ಸ್ವರ್ಣಮಾಷದ ರೂಪವಾದ ದಕ್ಷಿಣೆಯನ್ನು ವಾಚಕನಿಗೆ ಕೊಡುತ್ತಾ ಪುರಾಣಶ್ರವಣ ಮಾಡಬೇಕು.

೧೬೧-೧೬೨. ಚಿನ್ನದಮಾಷವನ್ನು ಕೊಡಲು ಶಕ್ತಿಯಿಲ್ಲದಿದ್ದರೆ ಬೆಳ್ಳಿಯ ಮಾಷವನ್ನಾದರೂ ಕೊಡಬೇಕು. ಅದೂ ಇಲ್ಲದಿದ್ದರೆ ತಾಮ್ರದ ಮಾಷವನ್ನಾದರೂ ಕೊಡಬೇಕು. ದ್ರವ್ಯಾನುಕೂಲವಿದ್ದೂ ಆ ರೀತಿ ಕೊಡುವುದಕ್ಕೆ ಹಿಂಜರಿಯಬಾರದು. ವಾಚಕನಿಗೆ ದಾನ ಕೊಡುವುದರಿಂದ ತನಗೇ ಶ್ರೇಯಸ್ಸುಂಟಾಗುವುದು. ಕೊನೆಯ ಪಕ್ಷ ಮಣ್ಣಿನಮಾಷವನ್ನಾದರೂ ಕೊಡಬೇಕು. ಇದರಿಂದ ಶುಭವಾದ ಸುಫಲವನ್ನು ಹೊಂದುತ್ತಾನೆ.

೧೬೩. ಎಲೈ ರಾಜನೇ! ಇದು ಪ್ರತಿಮಾಸದಲ್ಲಿಯೂ ಕೊಡಬೇಕಾದ ನಿತ್ಯ ದಕ್ಷಿಣೆಯೆನಿಸುವುದು. ಗ್ರಹಣ ಮೊದಲಾದ ಪರ್ವಕಾಲಗಳಲ್ಲಿ ಕೊಡುವುದು ನೈಮಿತ್ತಿಕದಕ್ಷಿಣೆಯೆನಿಸುವುದು.

ಅಮಲೇ ವಾಸಸೀ ರಾಜನ್ ಗಂಧಮಾಲ್ಯವಿಭೂಷಣೇ ।
ಸಮಾಪ್ತೇ ಪರ್ವಣಿ ವಿಭೋ ದಾತವ್ಯೇ ಭೂತಿಮಿಚ್ಛತಾ ॥ ೧೬೪ ॥

ಜ್ಞಾತ್ವಾ ಪರ್ವಸಮಾಪ್ತಿಂ ತು ಪೂಜಯೇಚ್ಛ್ರಾವಕೋ ಧ್ರುವಂ ।
ಆತ್ಮಾನಮಪಿ ವಿಕ್ರೀಯ ಯ ಇಚ್ಛೇತ್ಸಫಲಂ ಶ್ರುತಂ ॥ ೧೬೫ ॥

ನೈಮಿತ್ತಿಕಾಂ ಚ ನಿತ್ಯಾಂ ಚ ದಕ್ಷಿಣಾ ಮಪ್ರದಾಯ ಚ ।
ಶೃಣೋತಿ ಚ ಸದಾ ಯಸ್ತು ತಸ್ಯ ತನ್ನಿಷ್ಫಲಂ ಶ್ರುತಂ ॥ ೧೬೬ ॥

ಯಥಾ ಚ ದಕ್ಷಿಣಾ ಹೀನಾದ್ಯಜ್ಞಾನ್ನ ಫಲಮಶ್ನುತೇ ।
ತಥಾ ಶ್ರುತಂ ಚ ರಾಜೇಂದ್ರ ದಕ್ಷಿಣಾರಹಿತಂ ಸ್ಮೃತಂ ॥ ೧೬೭ ॥

ಚತುರ್ಗುಣಾ ಭವೇದ್ರಾಜನ್ ಯಾ ನಿತ್ಯಾ ದಕ್ಷಿಣಾ ವಿಭೋ ।
ಸಮಾಪ್ತೇ ಪರ್ವಣಿ ವಿಭೋ ಇತ್ಯಾಹ ಭಗವಾನ್ ಶಿವಃ ॥ ೧೬೮ ॥

---

೧೬೪. ಅಯ್ಯಾ ರಾಜನೇ! ಸಂಪತ್ತನ್ನಪೇಕ್ಷಿಸುವ ಮನುಷ್ಯನು, ಪುರಾಣ ವಾಚನದಲ್ಲಿ ಒಂದುಪರ್ವ ಮುಗಿದು ಮಂಗಳಾಚರಣೆ ಮಾಡುವಕಾಲದಲ್ಲಿ ಶುಭ್ರ ವಾದ ಒಂದು ಜೊತೆ ಪಂಚೆ, ಗಂಧ, ಪುಷ್ಪ, ಉಂಗುರ, ಆಭರಣಗಳು ಮುಂತಾದು ವನ್ನು ವಾಚಕನಿಗೆ ಕೊಡಬೇಕು.

೧೬೫. ಪುರಾಣದಲ್ಲಿ ಪರ್ವವು ಯಾವಾಗ ಸಮಾಪ್ತವಾಗುವುದೆಂಬುದನ್ನು ಮುಂಚಿತವಾಗಿಯೇ ತಿಳಿದುಕೊಂಡು, ಶ್ರಾವಕನು ವಾಚಕನನ್ನು ಆ ದಿನ ತಪ್ಪದೆ ಪೂಜಿಸಬೇಕು. ತಾನು ಮಾಡಿದ ಪುರಾಣಶ್ರವಣವು ಸಫಲವಾಗಬೇಕೆನ್ನುವುದಾದರೆ ತನ್ನ ಶರೀರಶ್ರಮದಿಂದ ಕೂಲಿಮಾಡಿಯಾದರೂ, ದ್ರವ್ಯವನ್ನು ತಂದು ವಾಚಕಪೂಜೆ ಯನ್ನು ಮಾಡಬೇಕು.

೧೬೬-೧೬೭. ನೈಮಿತ್ತಿಕದಕ್ಷಿಣೆಯನ್ನೂ, ನಿತ್ಯದಕ್ಷಿಣೆಯನ್ನೂ ಕೊಡದೆ ಯಾವಾಗಲೂ ಪುಕ್ಕಟ್ಟೆಯಾಗಿ ಪುರಾಣಶ್ರವಣ ಮಾಡಿದರೆ, ದಕ್ಷಿಣಾಹೀನವಾದ ಯಜ್ಞವು ನಿಷ್ಫಲವಾಗುವಂತೆ ದಕ್ಷಿಣಾರಹಿತವಾಗಿ ಪುರಾಣಶ್ರವಣ ಮಾಡಿದರೂ ನಿಷ್ಫ ಲವೆಂದು ತಿಳಿಯಬೇಕು.

೧೬೮. ಎಲೈ ವಿಭುವೇ! ಪರ್ವಮುಗಿದ ದಿವಸ ನಿತ್ಯದಕ್ಷಿಣೆಯ ನಾಲ್ಕರಷ್ಟು ದಕ್ಷಿಣೆಯನ್ನು ಕೊಡಬೇಕೆಂದು ಭಗವಂತನಾದ ಶಿವನು ಹೇಳಿದ್ದಾನೆ.

ಇತ್ಯೇಷ ಕಥಿತೋ ರಾಜನ್ ಪುರಾಣಶ್ರವಣೇ ವಿಧಿಃ ।
ಯತಶ್ಚ ವಿಧಿಹೀನಂ ತು ನ ಕರ್ಮಫಲಮಶ್ನುತೇ ॥ ೧೬೯ ॥

ಸ್ನಾನಂ ದಾನಂ ಜಪೋ ಹೋಮಃ ಪಿತೃದೇವಾಭಿಪೂಜನಂ ।
ವಿಧಿಪೂರ್ವಂ ಸ್ಮೃತಂ ಜ್ಞೇಯಂ ಯಥೇಹ ಕುರುನಂದನ ॥ ೧೭೦ ॥

ಫಲದಂ ನೃಪಶಾರ್ದೂಲ ಪುರಾಣಶ್ರವಣಂ ತಥಾ ।
ಯಥಾರ್ಥಂ ಕಥಿತಂ ತುಭ್ಯಂ ವಿಧಿನಾ ಶ್ರವಣಂ ಮಯಾ ॥ ೧೭೧ ॥

ಯಥೋಕ್ತಂ ತು ಯಥಾ ಜೀವಂ ಯಥೋಕ್ತಂ ಬ್ರಹ್ಮವಾದಿನಾ ।
ಸ ಬ್ರಾಹ್ಮಣೋ ಮಹಾರಾಜ ಸರ್ವಲೋಕೇಷು ಪೂಜಿತಃ ॥ ೧೭೨ ॥

ಯಥಾಶ್ರುತಂ ಮಹಾಬಾಹೋ ತಥೇದಂ ಕಥಿತಂ ತವ ।
ಭಾಸ್ಕರಸ್ಯ ತು ಮಾಹಾತ್ಮ್ಯಂ ಮಾಹಾತ್ಮ್ಯಂ ವಾಚಕಸ್ಯ ತು ॥ ೧೭೩ ॥

---

೧೬೯. ಈ ಪುರಾಣಶ್ರವಣದ ವಿಧಿಯನ್ನು ನಿನಗೆ ಹೇಳಿದುದಾಯಿತು. ವಿಧಿರಹಿತವಾದ ಕರ್ಮವು ಫಲಪ್ರದವಲ್ಲವೆಂಬುದನ್ನು ಹಿಂದೆಯೇ ಹೇಳಿದ್ದೇನೆ.

೧೭೦. ಆದುದರಿಂದ ಸ್ನಾನ, ದಾನ, ಜಪ, ಹೋಮ, ದೇವಪೂಜಾ, ಪಿತೃಪೂಜಾದಿ ಕರ್ಮಗಳೆಲ್ಲವನ್ನೂ ವಿಧಿಪೂರ್ವಕವಾಗಿಯೇ ನಡೆಯಿಸತಕ್ಕುದೆಂದು ತಿಳಿಯಬೇಕು.

೧೭೧. ಅಯ್ಯಾ ರಾಜಶ್ರೇಷ್ಠನೇ ! ಪುರಾಣಶ್ರವಣವನ್ನು ಹೀಗೆ ವಿಧಿಪ್ರಕಾರ ಆಚರಿಸಿದರೆ ಸಂಪೂರ್ಣಫಲಪ್ರದವಾಗುವುದು. ವಿಧಿಪ್ರಕಾರ ಶ್ರವಣಮಾಡುವುದು ಹೇಗೆಂಬುದನ್ನು ನಾನು ನಿನಗೆ ಸಂಪೂರ್ಣವಾಗಿ ಹೇಳಿದ್ದೇನೆ.

೧೭೨. ಎಲ್ಲ ಕರ್ಮವನ್ನೂ ಉಕ್ತವಿಧಿಗನುಸಾರವಾಗಿಯೇ ಮಾಡಬೇಕು. ಈ ವಿಧಿಯ ಅನುಸರಣವಿಚಾರದಲ್ಲಿ ತನ್ನ ಶಕ್ತಿಗನುಗುಣವಾಗಿ ಕಾರ್ಯವನ್ನು ಆಚರಿಸಬೇಕೆಂದು ಬ್ರಹ್ಮವಾದಿಯಿಂದ ಉಕ್ತವಾಗಿದೆ. ಅಯ್ಯಾ ರಾಜನೇ ! ವಿಧ್ಯುಕ್ತರೀತಿ ಕರ್ಮಮಾಡಿದ ಬ್ರಾಹ್ಮಣನು ಸರ್ವಲೋಕಪೂಜಿತನಾಗುತ್ತಾನೆ.

೧೭೩. ಅಯ್ಯಾ ಮಹಾಬಾಹುವೇ ! ಭಾಸ್ಕರನ ಮಹಾತ್ಮೆಯನ್ನೂ, ವಾಚಕನ ಮಹಾತ್ಮೆಯನ್ನೂ ತಿಳಿಸಿದೆ. ಸರ್ವಪಾಪಭಯವನ್ನೂ ಹೋಗಲಾಡಿಸುವ ಸಪ್ತ

ತಥಾ ಚ ಸಪ್ತಮೀಕಲ್ಪಃ ಸರ್ವಪಾಪಭಯಾಪಹಃ ।
ಅನೇನ ವಿಧಿನಾ ಯಸ್ತು ಪೂಜಯೇತ್ಸತತಂ ನರಃ ॥ ೧೭೪ ॥

ಭಗಲೋಕಂ ಸಮಾಸಾದ್ಯ ತ್ರಿಷು ಲೋಕೇಷು ಗೀಯತೆ ।
ತತೋಽರ್ಕಲೋಕಮಾಸಾದ್ಯ ಗಚ್ಛೇಚ್ಚಿತ್ರಶಿಖಂಡಿನಃ ॥ ೧೭೫ ॥

ತಸ್ಮಾದಪಿ ಮಹಾಬಾಹೋ ಗಚ್ಛೇಲ್ಲೋಕಂ ದಿವಾಕರಂ ।
ಅರ್ಕಲೋಕೇ ತತೋ ಯಾತಸ್ತತೋ ಗೋಲೋಕಮಶ್ನುತೆ ॥ ೧೭೬ ॥

ಋತಸ್ಯ ಚ ತತೋ ಗಚ್ಛೇತ್ಕಂಜಜಸ್ಯ ತತಃ ಪರಂ ।
ದಶಾನಾಂ ರಾಜಸೂಯಾನಾಮಗ್ನಿಷ್ಟೋಮಶತಸ್ಯ ಚ ॥ ೧೭೭ ॥

---

ಮೀಕಲ್ಪವನ್ನು ನಾನು ಬೇರೆಯವರಿಂದ ಯಾವಪ್ರಕಾರ ಕೇಳಿದ್ದೆನೋ ಅದೇಪ್ರಕಾರ ನಿನಗೆ ಹೇಳಿದ್ದೇನೆ.

೧೭೪-೧೭೫. ಈ ವಿಧಿಯಂತೆ ಯಾವಾಗಲೂ ಪೂಜಿಸುವ ಮನುಷ್ಯನು, ಭಗ ಲೋಕವನ್ನು ಸೇರಿ, ಮೂರುಲೋಕದವರಿಂದಲೂ ಹೊಗಳಿಸಿಕೊಳ್ಳುತ್ತಾನೆ. ಆ ಮೇಲೆ ಅರ್ಕಲೋಕವನ್ನು ಸೇರಿ ಅಲ್ಲಿಂದ ಸಪ್ತರ್ಷಿಲೋಕಕ್ಕೆ ಹೋಗುತ್ತಾನೆ.

೧೭೬. ಎಲೈ ಮಹಾಬಾಹುವೇ ! ಆ ಮೇಲೆ ಆ ಲೋಕದಿಂದ ದಿವಾಕರನ ಲೋಕಕ್ಕೆ ಹೋಗುವನು. ಅನಂತರ ಅಲ್ಲಿಂದ ಅರ್ಕಲೋಕವನ್ನು ಸೇರಿ ಅಲ್ಲಿಂದ ಗೋಲೋಕವನ್ನು ಸೇರುತ್ತಾನೆ.

೧೭೭. ಅಲ್ಲಿಂದ ಋತ (ಸತ್ಯ) ಲೋಕಕ್ಕೂ, ಅಲ್ಲಿಂದ ಬ್ರಹ್ಮಲೋಕಕ್ಕೂ ಹೋಗುತ್ತಾನೆ. ಹತ್ತು ರಾಜಸೂಯಯಾಗಗಳು, ಮತ್ತು ನೂರು ಅಗ್ನಿಷ್ಟೋಮ ಯಾಗಗಳು ಇವನ್ನು ಮಾಡಿದರೆ ಎಷ್ಟುಫಲ ಪ್ರಾಪ್ತಿಯಾಗುವುದೋ

ಶ್ರವಣಾತ್ಫಲಮಾಪ್ನೋತಿ ಪಿತಾಮಹವಚೋ ಯಥಾ ॥ ೧೭೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಬ್ರಾಹ್ಮೇಪರ್ವಣಿ ಸಪ್ತಮೀ ಕಲ್ಪೇ
ಸೌರಧರ್ಮೇ ಆದಿತ್ಯಮಾಹಾತ್ಮ್ಯ ವಾಚಕ ಮಾಹಾತ್ಮ್ಯ ಪುರಾಣ
ಶ್ರವಣ ವಿಧಿವರ್ಣನಂ ನಾಮ ಷೋಡಶಾಧಿಕ ದ್ವಿಶತತಮೋಽಧ್ಯಾಯಃ.

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರಥಮಂ ಬ್ರಾಹ್ಮಪರ್ವ ಸಮಾಪ್ತಂ.



---

೧೭೮. ಅಷ್ಟೇ ಫಲವನ್ನು ಪುರಾಣಶ್ರವಣದಿಂದ ಹೊಂದುತ್ತಾನೆ. ಎಂಬ ದಾಗಿ ಬ್ರಹ್ಮನೇ ಹೇಳಿದ್ದಾನೆ.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಬ್ರಾಹ್ಮಪರ್ವದ ಸಪ್ತಮೀ ಕಲ್ಪದಲ್ಲಿ ಸೌರಧರ್ಮ ದಲ್ಲಿ ಆದಿತ್ಯಮಾಹಾತ್ಮ್ಯ ವಾಚಕಮಾಹಾತ್ಮ್ಯ ಪುರಾಣಶ್ರವಣ ವಿಧಾನ ವರ್ಣನೆ ಯೆಂಬ ಇನ್ನೂರಹದಿನಾರನೆಯ ಅಧ್ಯಾಯವು ಮುಗಿದುದು.

ಬ್ರಾಹ್ಮಪರ್ವ ಸಮಾಪ್ತಿ.